# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಭೀಷ್ಮಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೩

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 13**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*
**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*
**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*
**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*
**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಭಗವತ್ಕೃಪೆಯಿಂದಲೂ, ಗುರುಭಗವಂತನ ಅನುಗ್ರಹದಿಂದಲೂ, ಸಹೃದಯರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ ಹದಿ ಮೂರನೆಯ ಪುಷ್ಪವನ್ನು ಭಗವಂತನ ಪಾದಾರವಿಂದಗಳಲ್ಲಿ ಸಮರ್ಪಿಸಿ ಅನಂತರ ಅವನ ಪ್ರಸಾದರೂಪವಾದ ಈ ಪುಷ್ಪವನ್ನು ನಮ್ಮ ಪ್ರಿಯ ವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಸೆಪ್ಟೆಂಬರ್ ಮಾಹೆಯಲ್ಲಿಯೇ ಹೊರಬೀಳಬೇಕಾಗಿದ್ದ ಈ ಸಂಪುಟವು ಸ್ವಲ್ಪ ತಡವಾಗಿ ಹೊರಬಿದ್ದಿದೆ. ಕಾರಣ ನಮ್ಮ ಅಲಸಿಕೆಯಲ್ಲ ; ಭಗವಂತನ ಇಚ್ಛೆ. ಆದರೂ ಸಹ ತಡವಾದುದಕ್ಕಾಗಿ ವಾಚಕರ ಕ್ಷಮೆಯನ್ನು ಬೇಡುತ್ತೇವೆ.

ಈ ಸಂಪುಟದಲ್ಲಿ ಗೀತೆಯು ಮುಗಿಯಬಹುದೆಂಬ ಭಾವನೆಯಿದ್ದಿತು. ಆದರೆ ಹನ್ನೆರಡನೆಯ ಸಂಪುಟದಲ್ಲಿ ಕೊಟ್ಟಂತೆ ವಿವರಣೆಯನ್ನು ಕೊಡುತ್ತಾ ಬಂದುದರಿಂದ ಈ ಸಂಪುಟದಲ್ಲಿ ಗೀತೆಯು ಮುಗಿಯದೇ ಇರುವುದು ಸ್ವಾಭಾವಿಕವೇ ಆಗಿದೆ. ಎಂಟು ಅಧ್ಯಾಯಗಳು ಈ ಸಂಪುಟದಲ್ಲಿ ಅಡಕ ವಾಗಿವೆ. ಹದಿನಾಲ್ಕನೆಯ ಸಂಪುಟದಲ್ಲಿ ಉಳಿದ ನಾಲ್ಕು ಅಧ್ಯಾಯಗಳು ಮುಂದುವರಿದು ಗೀತೆಯು ಪೂರ್ಣಗೊಳ್ಳುವುದು. ಗೀತೆಯನ್ನು ಇಷ್ಟು ವಿವರವಾಗಿ ಕೊಟ್ಟಿರುವುದಕ್ಕೆ ಹೊಗಳಿಕೆಗಳೂ ಇವೆ ; ಇಷ್ಟು ಬೇಕಾಗಿರಲಿಲ್ಲ– ಎಂಬ ಅಭಿಪ್ರಾಯಗಳೂ ಇವೆ. ಇನ್ನೂ ಹೆಚ್ಚು ವಿವರಣೆಯು ಬೇಕು ಎನ್ನುವವರೂ ಇದ್ದಾರೆ. ಆದರೂ ಸಹ ಹೇಗೆ ಪ್ರಾರಂಭಿಸಿರುವೆವೋ ಹಾಗೆಯೇ ಮುಗಿಸುವುದು ನಮ್ಮ ಕರ್ತವ್ಯವಾಗಿರುತ್ತದೆ.

ಗ್ರಂಥಸಂಗ್ರಹದಲ್ಲಿ ನಮ್ಮ ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಹೆಚ್ಚಿನ ಶ್ರಮವಹಿಸಿ ದ್ದಾರೆ. ಅವರ ಹೆಚ್ಚಿನ ಕಾಲವು ಇದಕ್ಕೇ ವಿನಿಯೋಗವಾಗುತ್ತಿದೆ. ಅವ ರಂತೆಯೇ ನಮ್ಮ ಸಂಪಾದಕಮಂಡಲಿಯವರೂ ಸಹ ವಿಶೇಷ ಶ್ರಮವಹಿಸಿ ಮುದ್ರಣಕ್ಕೆ ಸಿದ್ಧಗೊಳಿಸಿಕೊಡುತ್ತಿದ್ದಾರೆ. ಇದಕ್ಕೇ ದೈವೇಚ್ಛೆ ಎಂದು

ಹೇಳಬೇಕಾಗಿದೆ. ಯಾವ ವಿಧವಾದ ಆರ್ಥಿಕಲಾಭವೂ ಇಲ್ಲದೇ ಕೇವಲ ನಿಸ್ಪೃಹತೆಯಿಂದ ಈ ಎಲ್ಲ ವಿದ್ವಾಂಸರೂ ಸೇರಿ ಒಮ್ಮತದಿಂದ ಈ ಮಹಾ ಕಾರ್ಯವನ್ನು ಮಾಡುತ್ತಿರುವುದಕ್ಕೆ 'ದೈವೇಚ್ಛೆ' ಎಂದಲ್ಲದೇ ಮತ್ತೇನು ತಾನೇ ಹೇಳಲು ಸಾಧ್ಯವಿದೆ? ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತದ ಪ್ರಾಧ್ಯಾಪಕರಾಗಿರುವ ಡಾ|| ಕೆ. ಕೃಷ್ಣಮೂರ್ತಿಯವರು ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಈ ಸಂಪುಟಕ್ಕೆ ಅವತರಣಿಕೆಯನ್ನು ಬರೆದುಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಕಳೆದ ಸಂಪುಟದ ಪ್ರಕಾಶನವು ಕೃಷ್ಣರಾಜೇಂದ್ರ ರಸ್ತೆಯಲ್ಲಿರುವ ದ್ವಾರಕಾನಾಥಭವನದಲ್ಲಿ ನಡೆಯಿತು. ಕರ್ನಾಟಕದ ಉಚ್ಚನ್ಯಾಯಾಲಯದ ಮುಖ್ಯನ್ಯಾಯಮೂರ್ತಿ ಶ್ರೀ ಜಿ. ಕೆ. ಗೋವಿಂದಭಟ್‌ರವರು ಶ್ರೀಸಾಯಿ ಪಾದಾನಂದ ಶ್ರೀ ಶ್ರೀ ರಾಧಾಕೃಷ್ಣಸ್ವಾಮೀಜೀಯವರ ಘನ ಅಧ್ಯಕ್ಷತೆಯಲ್ಲಿ ಹನ್ನೆರಡನೆಯ ಸಂಪುಟವನ್ನು ಪ್ರಕಾಶನಗೊಳಿಸಿದರು. ಹಿರಿಯ ಸಂಪಾದಕ ರಾದ ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಸ್ವಾಗತ ಭಾಷಣ ಮಾಡಿದರು. ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯ ರಂಗಪ್ರಿಯರು ಹನ್ನೆರಡನೆಯ ಸಂಪುಟದ ಪರಿಚಯ ಮಾಡಿಕೊಟ್ಟರು. ಶ್ರೀ ಜಿ. ಕೆ. ಗೋವಿಂದಭಟ್‌ರವರು ಪ್ರಕಾಶನವನ್ನು ಮುಕ್ತಕಂಠದಿಂದ ಪ್ರಶಂಸಿಸಿ ಕನ್ನಡ ಜನರೆಲ್ಲರೂ ಈ ಮಹಾಭಾರತವನ್ನು ಕೊಂಡು ಪ್ರೋತ್ಸಾಹಿಸಬೇಕೆಂದು ಕಳಕಳಿಯಿಂದ ಬಿನ್ನವಿಸಿದರು. ಶ್ರೀ ಶ್ರೀ ರಾಧಾಕೃಷ್ಣ ಸ್ವಾಮಿಗಳ ಅನುಗ್ರಹಭಾಷಣವಾದನಂತರ ರಾಮಚಂದ್ರಾಪುರಮಠದ ಶ್ರೀ ಶ್ರೀ ರಾಘವೇಂದ್ರಭಾರತೀಸ್ವಾಮಿಗಳು ಕಳುಹಿಸಿದ ಸುವರ್ಣಮಂತ್ರಾಕ್ಷತೆ ಯನ್ನು ಸಂಪಾದಕಮಂಡಲಿಯವರಿಗೆ ಶ್ರೀ ಶ್ರೀಯವರು ಆಶೀರ್ವದಿಸಿ ಕೊಟ್ಟರು. ವಿದ್ವಾನ್ ರಾಮೇಶ್ವರಾವಧಾನಿಗಳ ವಂದನಾರ್ಪಣೆಯೊಡನೆ ಸಮಾರಂಭವು ಮುಕ್ತಾಯವಾಯಿತು.

ಕೆನರಾಬ್ಯಾಂಕ್, ಸಿಂಡಿಕೇಟ್‌ಬ್ಯಾಂಕ್, ಕರ್ನಾಟಕಬ್ಯಾಂಕ್ ಮತ್ತು

ಕಾರ್ಪೊರೇಷನ್ ಬ್ಯಾಂಕುಗಳು ಮಹಾಭಾರತದ ಪೂರ್ಣಮಾಲೆಗೆ ಗ್ರಾಹಕರಾಗಲು ಸುಲಭ ಕಂತಿನ ಮೂಲಕ ಸಾಲವೊದಗಿಸುವುದನ್ನು ಮುಂದುವರಿಸುತ್ತಿರುವುದು ಸಂತಸದ ಸಂಗತಿ. ಈ ಬ್ಯಾಂಕುಗಳ ಮೂಲಕ ಸಾವಿರಕ್ಕೂ ಮೀರಿ ಗ್ರಾಹಕರಾಗಿರುತ್ತಾರೆ. ಆದರೆ ಕೆಲವು ಶಾಖೆಗಳಲ್ಲಿ ಸಾಲಕೊಡುತ್ತಿಲ್ಲವೆಂಬ ದೂರುಗಳೂ ಬರುತ್ತಿವೆ. ಕಾರಣವೇನೆಂಬುದು ನಮಗೆ ತಿಳಿಯದು. ಶಾಖೆಯ ಮ್ಯಾನೇಜರುಗಳು ಇಂತಹ ಉತ್ತಮ ಕಾರ್ಯಕ್ಕೆ ತಮ್ಮ ಸಹಕಾರವನ್ನು ನೀಡಬೇಕೆಂದು ಪ್ರಾರ್ಥಿಸುತ್ತೇವೆ. ಮುಖ್ಯಕಛೇರಿಯ ಮುಖ್ಯಾಧಿಕಾರಿಗಳು ಈ ಪ್ರಕಾಶನದ ವಿಷಯದಲ್ಲಿ ವಿಶೇಷವಾದ ಅಭಿಮಾನವನ್ನು ಹೊಂದಿದ್ದಾರೆ. ಆದರೆ ಅದು ಕಾರ್ಯಗತ ವಾಗಬೇಕಾದರೆ ಬ್ರಾಂಚ್ ಮ್ಯಾನೇಜರ್‌ರವರ ಮೂಲಕವೇ. ಅವರೇ ಸಹಕರಿಸದಿದ್ದರೆ ಕೇಂದ್ರ ಕಛೇರಿಯವರು ಏನೂ ಮಾಡಲಾರರು. ಒಂದೊಂದು ಬ್ರಾಂಚಿನವರೂ ತಮಗೆ ಗೊತ್ತುಮಾಡಿರುವಷ್ಟು ಜನಕ್ಕಾದರೂ ಸಾಲಕೊಟ್ಟು ಮಹಾಭಾರತದ ಪ್ರಚಾರಕ್ಕೆ ನೆರವು ನೀಡಬೇಕಾಗಿ ಬ್ರಾಂಚುಗಳ ಮುಖ್ಯಾಧಿಕಾರಿಗಳನ್ನು ಪುನಃ ಪುನಃ ವಿನಂತಿಸಿಕೊಳ್ಳುತ್ತೇವೆ.

ನಗರದಲ್ಲಿರುವ ದಿ ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕ್ ಲಿ. ಇವರೂ ಸಹ ಮಹಾಭಾರತದ ಪೂರ್ಣಮಾಲೆಗೆ ಸಾಲಕೊಡಲು ನಿರ್ಧರಿ ಸಿರುವುದು ಅಭಿನಂದನೀಯವಾಗಿದೆ. ಅದರ ಸದಸ್ಯರೆಲ್ಲರೂ ಈ ಸದವ ಕಾಶವನ್ನು ಉಪಯೋಗಪಡಿಸಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ. ಇದಕ್ಕೆ ಅನುಕೂಲಮಾಡಿಕೊಟ್ಟ ಆ ಬ್ಯಾಂಕಿನ ಅಧ್ಯಕ್ಷರಿಗೂ, ಕಾರ್ಯದರ್ಶಿಗಳಿಗೂ ಮತ್ತು ಕಾರ್ಯಕಾರಿಸಮಿತಿಯವರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಗ್ರಾಹಕರ ಸಂಖ್ಯೆಯು ದಿನ-ದಿನಕ್ಕೂ ಬೆಳೆಯುತ್ತಿದೆ. ಇದಕ್ಕೆ ನಮ್ಮ ಪ್ರತಿನಿಧಿಗಳೇ ಕಾರಣ. ಅನೇಕರು ಕೇವಲ ನಿಸ್ಪೃಹತೆಯಿಂದ ಊರೂರು ತಿರುಗಿ ಇದರ ಪ್ರಚಾರಮಾಡುತ್ತಿದ್ದಾರೆ. ಇವರೆಲ್ಲರಿಗೂ ಭಗವಂತನು ಆಯುರಾರೋಗ್ಯೈಶ್ವರ್ಯಾದಿಗಳನ್ನಿತ್ತು ಕಾಪಾಡಲೆಂದು ಪ್ರಾರ್ಥಿಸಿ ವಿರಮಿಸುವೆವು.

—ಪ್ರಕಾಶಕರು.

## ಅವತರಣಿಕೆ

ಶ್ರೀಮನ್ಮಹಾಭಾರತವು ಮೇಲ್ನೋಟಕ್ಕೆ ಒಂದು ಕಥೆ. ಅದೂ ದಾಯಾದಿಮತ್ಸರದ ಪರಾಕಾಷ್ಠೆಯ ದುಷ್ಪರಿಣಾಮವನ್ನು ಎತ್ತಿ ತೋರಿಸುವ ಯುದ್ಧಕಥೆ. ಒಂದು ಯುಗ ಮುಗಿದು ಇನ್ನೊಂದರ ಉದಯಕ್ಕೆ ನಾಂದಿಯಾಗುವ ರೋಮಾಂಚಕ ಕ್ಷತ್ರಿಯಪ್ರಳಯದ ಹೃದಯವಿದ್ರಾವಕ ಕಥೆ. ಹೀಗೆ ಇದನ್ನು ಕಥೆ ಅಥವಾ ಇತಿಹಾಸ ಎನ್ನುವ ದೃಷ್ಟಿಯಲ್ಲದೇ ಕರುಣ-ವೀರ-ರೌದ್ರಾದಿ ನಾನಾರಸಗಳಿಗೆ ಆಕರವಾದ ಕಾವ್ಯವೆನ್ನುವ ಪರಂಪರೆಯೂ ಉಂಟು. ಎಲ್ಲಕ್ಕಿಂತ ಹೆಚ್ಚಾಗಿ ಗ್ರಂಥಕ್ಕೆ ಪರಮಪೂಜ್ಯತೆಯು, ಶತಮಾನಗಳಿಂದಲೂ ಸಂದಿರುವುದಕ್ಕೆ ಕಾರಣ-ಅದೊಂದು ಅಧ್ಯಾತ್ಮಶಾಸ್ತ್ರ ಎಂಬ ದೃಷ್ಟಿಯಿಂದಲೇ ಎಂದೆನ್ನಬಹುದು. ಕ್ರಿ. ಶ. ಒಂಬತ್ತನೆಯ ಶತಮಾನದಷ್ಟು ಹಿಂದೆಯೇ ಕಾವ್ಯಶಾಸ್ತ್ರಮೂರ್ಧನ್ಯನಾದ ಆನಂದವರ್ಧನನು ಮಹಾಭಾರತವನ್ನು 'ಕಾವ್ಯಚ್ಛಾಯಾನ್ವಯಿಶಾಸ್ತ್ರ' ಎಂದು ಕರೆದುದಲ್ಲದೇ ವ್ಯಾಸರ ಉದ್ದೇಶವನ್ನು ಈ ರೀತಿ ವರ್ಣಿಸಿದ್ದಾನೆ :

**ಮಹಾಮುನಿನಾ ವೈರಾಗ್ಯಜನನತಾತ್ಪರ್ಯಂ ಪ್ರಾಧಾನ್ಯೇನ ಸ್ವಪ್ರಬಂಧಸ್ಯ ದರ್ಶಯತಾ ಮೋಕ್ಷಲಕ್ಷಣಃ ಪುರುಷಾರ್ಥಃ ಶಾಂತೋರಸಶ್ಚ ಮುಖ್ಯತಯಾ ವಿವಕ್ಷಾವಿಷಯತ್ವೇನ ಸೂಚಿತಃ। ಏತಚ್ಚ ಅಂಶೇನ ವಿವೃತಮೇವ ಅನ್ಯೈರ್ವ್ಯಾಖ್ಯಾವಿಧಾಯಿಭಿಃ। ಸ್ವಯಮೇವ ಚ ಏತದುದ್ಗೀರ್ಣಂ ತೇನ ಉದೀರ್ಣಮಹಾಮೋಹಮಗ್ನಮುಜ್ಜಿಹೀರ್ಷತಾ ಲೋಕಮತಿವಿಮಲಜ್ಞಾನಾಲೋಕದಾಯಿನಾ ಲೋಕನಾಥೇನ.......**

ಲೋಗರಿಗೆ ವಿಮಲಜ್ಞಾನದ ಬೆಳಕನ್ನು ನೀಡಲೆಂದೇ ಹೊರಟ ಮಹಾಮುನಿ, ಆಳವಾದ ಮಹಾಮೋಹವೆಂಬ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಜನತೆಯನ್ನು ಮೇಲೆತ್ತುವ ಲೋಕನಾಥ–ಎಂದು ವ್ಯಾಸರನ್ನು ಆತನು ಹೊಗಳಲು ಕಾರಣವೇನೆಂದರೆ : ಅವನಿಗಿಂತ ಮುಂಚೆ ವ್ಯಾಖ್ಯಾನಗಳನ್ನು ಬರೆದ ಮಹನೀಯರೆಲ್ಲರೂ ಮೋಕ್ಷವೊಂದೇ ಪರಮಪುರುಷಾರ್ಥ, ಅದರ ಸಾಧನೆಯೇ ಮಾನವನ ಜನ್ಮಸಾರ್ಥಕ್ಯ–ಎಂಬ ಅಭಿಪ್ರಾಯವನ್ನು ಭಾರತಸಾರವೆಂದು ಒಮ್ಮತದಿಂದ ವಿವರಿಸಿದ್ದರು. ಆದ್ದರಿಂದಲೇ ಕಾವ್ಯಚಿಂತಕರು

ಕೂಡ ವೀರ-ರೌದ್ರಾದಿ ರಸಗಳ ವಿಸ್ತಾರವಿದ್ದರೂ ಮಹಾಭಾರತದ ಮುಖ್ಯ ರಸ ಶಾಂತವೆಂದೇ ನಿರ್ಣಯಿಸಬೇಕಾಯಿತು.

ಎಂತಹ ಬೃಹತ್ಕಾವ್ಯವೇ ಇರಲಿ, ಅದರಲ್ಲಿ ಒಂದು ಕಾರ್ಯೈಕ್ಯವಿರುವಂತೆ ಒಂದು ರಸೈಕ್ಯವೂ ಇರಬೇಕಾಗುತ್ತದೆ. ಅದನ್ನು ಹೀಗೆಂದು ನಿರ್ಣಯಿಸಲು ಗ್ರಂಥದ ಆದಿ-ಮಧ್ಯ-ಅಂತ್ಯಗಳನ್ನು ಮುಖ್ಯವಾಗಿ ಪರಿಶೀಲಿಸಬೇಕಾಗುತ್ತದೆ. ಮಹಾಭಾರತದ ಆದಿಯಲ್ಲಿ '**ಭಗವಾನ್ ವಾಸುದೇವಶ್ಚ ಕೀರ್ತ್ಯತೇಽತ್ರ ಸನಾತನಃ** ' ಎಂಬ ವ್ಯಾಸವಚನವಿದೆ. ಅಂತ್ಯದಲ್ಲಿ ಕೌರವರು ಸೋತು ಸತ್ತರು. ಪಾಂಡವರು ಗೆದ್ದೂ ಸುಖಪಡಲಿಲ್ಲ. ಸಾಕ್ಷಾತ್ ಭಗವಂತನಾದ ಶ್ರೀಕೃಷ್ಣನೇ ಬೇಡನ ಆಕಸ್ಮಿಕಬಾಣಕ್ಕೆ ಗುರಿಯಾಗಿ ತನ್ನ ಅವತಾರ ಸಮಾಪ್ತಿಮಾಡಿದನು. ಅನಂತಸಂಖ್ಯೆಯ ಯಾದವರು ಪರಸ್ಪರ ಕಾದಾಡಿ ಮಡಿದರು. ಕುಂತಿ-ಗಾಂಧಾರಿ ಮುಂತಾದವರು ಕಾಳ್ಗಿಚ್ಚಿನಲ್ಲಿ ಜೀವಬಿಟ್ಟರು. ಹೀಗೆ ಸರ್ವನಾಶದಿಂದ ದ್ವಾಪರಯುಗ ಮುಗಿಯುವುದನ್ನೂ, ಕಲಿಯುಗ ಆರಂಭವಾಗುವುದನ್ನೂ ವ್ಯಾಸರು ಕರುಳು ಕೂಗುವಂತೆ ಚಿತ್ರಿಸಿದ್ದಾರೆ. ಈ ಸಂಸಾರದ ಈ ಮಹಾದುಃಖದಿಂದ ಪಾರಾಗುವ ಅಗತ್ಯವನ್ನೂ, ಉಪಾಯಗಳನ್ನೂ ಇಡಿಯ ಮಹಾಭಾರತದಲ್ಲೆಲ್ಲ ಪ್ರಾಸಂಗಿಕವಾಗಿ ತಂದಿರುವುದೇನೋ ನಿಜ. ಆದರೆ ಮಧ್ಯವರ್ತಿಯಾಗಿ ಅದಕ್ಕೇ ಮೀಸಲಾಗಿರುವ ಭಾಗವೆಂದರೆ ಭಗವದ್ಗೀತೆಯೇ ಸರಿ.

ಭಗವದ್ಗೀತೆಯ ಮಹತ್ತ್ವವನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ಒಂದು ಬೃಹತ್ಕಾವ್ಯದ ಭಾಗವನ್ನು ವೇದಾಂತಪ್ರಸ್ಥಾನದ ಮುಖ್ಯಗ್ರಂಥಗಳಲ್ಲಿ ಒಂದೆನ್ನುವ ಪ್ರತಿಷ್ಠೆ ಮತ್ತಾವ ಕಾವ್ಯರಚನೆಗೂ ದೊರೆತಿಲ್ಲ. ಎಲ್ಲ ವೇದಾಂತಾಚಾರ್ಯರೂ ಏಕಕಂಠದಿಂದ ಶ್ರೀಮದ್ಭಗವದ್ಗೀತೆಯ ಮಹಿಮೆಯನ್ನು ಉದ್ಘೋಷಿಸಿದ್ದಾರೆ. ತಮ್ಮ-ತಮ್ಮ ಶಾಸ್ತ್ರಸಂಪ್ರದಾಯಾನುಸಾರ ಭಗವದ್ಗೀತೆಯನ್ನು ವಿವರಿಸಿದ್ದಾರೆ. ಒಂದೆರಡು ಶ್ಲೋಕಗಳ ಚಿಂತನೆಯಿಂದಲೂ ಮನುಷ್ಯನು ಪಾವನನಾಗಬಹುದು ಎಂಬ ಭಾವನೆ ಭಾರತೀಯರಲ್ಲಿ ಬೇರೂರಿದೆ :

**"ಭಗವದ್ಗೀತಾ ಕಿಂಚಿದಧೀತಾ ಗಂಗಾಜಲಲವಕಣಿಕಾ ಪೀತಾ ।"** ಎಂಬ ಸೂಕ್ತಿ ಇರುವಂತೆ,

“ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥”

ಎಂಬ ಅಪೂರ್ವಪ್ರಶಸ್ತಿಯೂ ಗೀತೆಗೆ ಲಭಿಸಿದೆ. ಇದು ನಮ್ಮ ಪ್ರಾಚೀನಪರಂಪರೆ.

ಕಳೆದೆರಡು ಶತಮಾನಗಳಲ್ಲಿ ಸಂಶೋಧಕದೃಷ್ಟಿಯಿಂದ ಮಹಾಭಾರತ ಹಾಗೂ ಭಗವದ್ಗೀತೆಗಳ ಅಧ್ಯಯನವನ್ನು ಕೈಗೊಂಡ ಆಧುನಿಕಪಾಶ್ಚಾತ್ಯ ವಿದ್ವಾಂಸರು–ಓಲ್ಡ್ಮನ್, ಡಾಲ್ಮನ್, ಗಾರ್ಬೆ, ಬಟ್ಲೊ, ಎಡ್ಗರ್ಟನ್–ಮೊದಲಾದವರು ಗ್ರಂಥದ ಮೂಲ–ಪ್ರಕ್ಷಿಪ್ತಗಳ ವಿಭಾಗ, ನೈತಿಕ ಸಾಮಾಜಿಕ-ರಾಜಕೀಯ ವಿಚಾರಗಳ ವಿಕಾಸ ಮುಂತಾದ ಸಮಸ್ಯೆಗಳನ್ನೆತ್ತಿಕೊಂಡು ಅನೇಕಪ್ರಕಾರವಾದ ವಾದಗಳನ್ನು ಬೆಳೆಸಿದ್ದಾರೆ. ಇವು ವಿದ್ವಾಂಸರಿಗೆ ಮೋಹಕವಾಗಿದ್ದರೂ ಶ್ರದ್ಧೆಯಿಂದ ಗ್ರಂಥವನ್ನೋದಿ ತಮ್ಮ ಜೀವನವನ್ನು ಉತ್ತಮಗೊಳಿಸುವ ಉದ್ದೇಶದಿಂದ ಹೊರಟ ಸಾಮಾನ್ಯಜನರಿಗೆ ಕೇವಲ ಭ್ರಾಮಕವಾಗಿರುತ್ತವೆ. ಈ ದೋಷಕ್ಕೆ ಪಕ್ಕಾಗದೆ ಭಗವದ್ಗೀತೆಯ ಅಧ್ಯಯನವನ್ನು ಬೇರೆ-ಬೇರೆ ದಿಕ್ಕುಗಳಿಂದ ವಿವೇಚಿಸಿರುವ ಭಾರತೀಯಮಹನೀಯರಲ್ಲಿ ಬಂಕಿಮಚಂದ್ರ ಚಟರ್ಜಿ, ಲೋಕಮಾನ್ಯತಿಲಕ್, ಗಾಂಧೀಜಿ, ಅರವಿಂದರು, ವಿನೋಬಾಭಾವೆ–ಇವರು ಅಗ್ರಗಣ್ಯರು. ಆದರೆ ಸಾಮಾನ್ಯ ಜನಕ್ಕೆ ಅವೆಲ್ಲ ಏಕರೀತಿಯಿಂದ ಪರಿಣಾಮಕಾರಿಗಳೆನ್ನುವಂತಿಲ್ಲ. ಏಕೆಂದರೆ : ಪರಂಪರಾಗತ ಆಧ್ಯಾತ್ಮಿಕ ಬೆಲೆಗಳ ವಿವೇಚನೆಯಲ್ಲಿ ವಿನೂತನ ವಿಚಾರಸರಣಿಯೂ ಸಾಕಷ್ಟು ಪ್ರಮಾಣದಲ್ಲಿ ಕೂಡಿಬಿಟ್ಟಿರುತ್ತದೆ. ಇದಲ್ಲದೇ ಅಧಿಕ ಸಂಖ್ಯೆಯಲ್ಲಿ ಗೀತೆಯ ಅನುವಾದಗಳು ದೊರೆಯುತ್ತಿರುವುದಾದರೂ, ವಿಸ್ತೃತವಿವರಣೆಯ ಕೊರತೆಯಿಂದ ಅವುಗಳ ಪ್ರಯೋಜನ ಸೀಮಿತವೆನಿಸುತ್ತದೆ.

ಪ್ರಾಚೀನಪರಂಪರೆಯನ್ನು ಎಲ್ಲ ದಿಕ್ಕುಗಳಿಂದಲೂ ಆಯ್ದು ಸಂಯೋಜಿಸಿಕೊಂಡು ಭಗವದ್ಗೀತೆಯ ಸಾರಾರ್ಥವನ್ನು ಸರಲವಾಗಿಯೂ, ಸರಸವಾಗಿಯೂ ಪುನರ್ನಿರೂಪಣೆಮಾಡುವುದೇ ಈ ಭಾರತ ದರ್ಶನ ಪ್ರಕಾಶನದವರ ಮುಖ್ಯಧ್ಯೇಯವಾಗಿದೆ. ಈಗಾಗಲೇ ಹನ್ನೆರಡನೆಯ ಸಂಪುಟದಲ್ಲಿ ಪ್ರಕಟವಾಗಿರುವ ಗೀತೆಯ ಆರು ಅಧ್ಯಾಯಗಳನ್ನೂ, ಈಗ

ಹದಿನಾಲ್ಕನೆಯ ಅಧ್ಯಾಯದವರೆಗೆ ಪ್ರಕಟವಾಗುತ್ತಿರುವ ಹದಿಮೂರನೆಯ ಸಂಪುಟವನ್ನೂ ಸ್ಥಾಲೀಪುಲಾಕನ್ಯಾಯದಿಂದ ಎಲ್ಲಿ ಶ್ಲೋಕತೆಗೆದು ಪರಿಶೀಲಿಸಿದರೂ ಅಲ್ಲಿಯ ವಿವರಣೆ ತನ್ನ ಧ್ಯೇಯಸಾಧನೆಯಲ್ಲಿ ಬಹುಮಟ್ಟಿಗೆ ಯಶಸ್ವಿಯಾಗಿರುವುದನ್ನು ಕಾಣಬಹುದು.

ಉದಾಹರಣೆಗೆ–**ತ್ರೈಗುಣ್ಯವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ** (೨-೧೫) ಎನ್ನುವಾಗ, ಇಲ್ಲವೆ–

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ವೇದವಾದರತಾಃ**(೨-೪೨) ಎನ್ನುವಾಗ, ಇಲ್ಲವೆ–

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ । ತಾವಾನ್ ಸರ್ವೇಷು ವೇದೇಷು** (೨.೪೬) ಎನ್ನುವಾಗ ವೇದನಿಂದೆ ವಿವಕ್ಷಿತವೇ? ವಿವಕ್ಷಿತವಲ್ಲವಾದರೆ ನಿಜವಾದ ತಾತ್ಪರ್ಯವೇನು?–ಎಂಬ ಪ್ರಶ್ನೆ ಯಾವ ಆಧುನಿಕವ್ಯಾಖ್ಯೆ ನೋಡಿದರೂ ಪರಿಹಾರವಾಗುವಂತಹುದಲ್ಲ. ಆದರೆ ಯಾವ ಆಚಾರ್ಯರ ಸಮನ್ವಯವನ್ನು ಗ್ರಹಿಸಿದರೂ ವೇದನಿಂದೆಯ ಸಮಸ್ಯೆಗೆ ಅವಕಾಶವಿರುವುದಿಲ್ಲ. **'ವೇದದ ಮೇಲ್ತೋರಿಕೆಯ ಅರ್ಥ'** ಎನ್ನುವ ಮಧ್ವಾಚಾರ್ಯರ ವಿವರಣೆಯಾಗಲೀ, **'ಸ್ವರ್ಗಾದಿಫಲಸಕ್ತರ ವಾದ'**, ಎಂಬ ರಾಮಾನುಜರ ವಿವರಣೆಯಾಗಲಿ, **'ಫಲಸಾಧನ ಪ್ರಕಾಶಕವೇದವಚನ,'** ಎಂಬ ಶಂಕರಾಚಾರ್ಯರ ವಿವರಣೆಯಾಗಲಿ– ಒಂದೊಂದೂ ವ್ಯಾಸರ ತಾತ್ಪರ್ಯದ ಗ್ರಹಣೆಗೆ ಸಹಾಯಕವಾಗುತ್ತದೆ. ಹೀಗೆ ಪ್ರತಿಶ್ಲೋಕಕ್ಕೂ ಎಲ್ಲ ಆಚಾರ್ಯರ ವಿವೇಚನೆಗಳನ್ನೂ ಹಿತ-ಮಿತವಾದ ರೀತಿಯಲ್ಲಿ ಕನ್ನಡದಲ್ಲಿ ಒದಗಿಸಿರುವುದು ಈ ಸಂಪುಟದ ವೈಶಿಷ್ಟ್ಯವಾಗಿದೆ.

ಇನ್ನೊಂದು ಉದಾಹರಣೆ :

**ಶ್ರೇಯೋ ಹಿ ಜ್ಞಾನಮಭ್ಯಾಸಾದ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಃ ತ್ಯಾಗಾಚ್ಛಾಂತಿರನಂತರಮ್ ॥**

(೧೨-೧೨)

ಮೇಲೆ ನೋಡುವುದಕ್ಕೆ ಇಲ್ಲಿ ಯಾವ ಕ್ಲಿಷ್ಟಪದವೂ ಇಲ್ಲ. ಅಭ್ಯಾಸ, ಜ್ಞಾನ, ಧ್ಯಾನ, ಕರ್ಮಫಲತ್ಯಾಗ, ಶಾಂತಿ–ಇವೆಲ್ಲ ಸ್ಪಷ್ಟಾರ್ಥವೆನಿಸುತ್ತವೆ. ಆದರೆ ಒಂದಕ್ಕಿಂತ ಒಂದು ಮೇಲಿನದು ಹೇಗೆ, ಏಕೆ?–ಎಂಬುದು ವಿದ್ವಜ್ಜನರಿಗೂ ತಟ್ಟನೆ ಹೊಳೆಯಲಾರದು. ಇದರ ಪೂರ್ಣತಾತ್ಪರ್ಯ ತಿಳಿಯುವಂತೆ ಭಾಗವತ ಮುಂತಾದ ಗ್ರಂಥಾಂತರಗಳಿಂದ ಸಂವಾದಿ ಆಕರಶ್ಲೋಕಗಳನ್ನು ಉದ್ಧರಿಸಿ ಗೀತೆಯ ಹೃದಯವನ್ನು ಮಾರ್ಮಿಕವಾಗಿ ವಿವೇಚಿಸಲಾಗಿದೆ. (ಪುಟ ೧೦೪೨-೧೦೪೭) ಹೀಗೆಯೇ ಪಾರಿಭಾಷಿಕವಾಗಿ ಗೀತೆಯಲ್ಲಿ ಬಳಸಲಾಗಿರುವ 'ಸಾಂಖ್ಯ' 'ಯೋಗ' 'ವ್ಯವಸಾಯ' 'ಅಧಿಯಜ್ಞ' ಮುಂತಾದ ಶಬ್ದಗಳಿಗೆ ಯೌಗಿಕಾರ್ಥ, ರೂಢಾರ್ಥ, ಹಾಗೂ ಪಾರಿಭಾಷಿಕಾರ್ಥಗಳನ್ನು ವೇದಾಂತದರ್ಶನಾನುಗುಣವಾಗಿ ವಿಶದೀಕರಿಸಿರುವುದನ್ನೂ ನೋಡಬಹುದು. ಹೀಗೆ ವೇದ-ವೇದಾಂತ-ಶಾಸ್ತ್ರ-ಪುರಾಣ-ವ್ಯಾಖ್ಯಾನಗ್ರಂಥಗಳು–ಮುಂತಾದುವನ್ನೆಲ್ಲ ಹೃದಯಂಗಮವಾಗಿ ವಿವರಣೆಗೆ ಇಲ್ಲಿ ಬಳಸಲಾಗಿದೆ.

ಯಾವುದೇ ರೀತಿಯ ಜಟಿಲತೆಗೆ ಆಸ್ಪದವಿಲ್ಲದೇ ಶ್ಲೋಕಗಳನ್ನೂ ಸಹ ಕೇವಲ ಸರಳಾನುವಾದದಿಂದ ಮುಗಿಸದೇ ಇಂದಿನ ನಿತ್ಯಜೀವನಾನುಭವದ ಅನೇಕದೃಷ್ಟಾಂತಗಳ ಮೂಲಕ ಮನಸ್ಸಿಗೆ ಬಿಂಬಿಸುವಂತೆ ಯಥೋಚಿತ ವಿವರಣೆಯನ್ನೊದಗಿಸಲಾಗಿದೆ. ಉದಾಹರಣೆಗೆ : ಮೂರನೆಯ ಅಧ್ಯಾಯದ ೩೬ನೆಯ ಶ್ಲೋಕ (ಪುಟ ೩೫೧-೩೫೩) ನೋಡಬಹುದು.

ಈ ಸಂಪುಟದಲ್ಲಿ ಒಡಮೂಡಿರುವ ಗೀತಾವಿಚಾರಗಳನ್ನು ಆಸ್ಥೆಯಿಂದ ಅನುಸಂಧಾನಮಾಡುವ ಶ್ರದ್ಧಾವಂತರಿಗೆ ಭಾರತದ ನವನೀತವೆನಿಸುವ ಗೀತಾರಹಸ್ಯ ಹರ್ಷಪ್ರದವಾಗುವಂತೆ, ಬೋಧಪ್ರದವೂ ಆಗುವುದರಲ್ಲಿ ಸಂಶಯವಿಲ್ಲ. ಹಿಂದಿನ ಕವಿಗಳೂ, ಕವಯಿತ್ರಿಯರೂ ಭಾರತವನ್ನು ಕುರಿತು ನುಡಿದಿರುವ ಪ್ರಶಸ್ತಿರತ್ನಗಳು ಅತಿಶಯೋಕ್ತಿಗಳಲ್ಲವೆಂಬುದನ್ನು ಅವರು ಸ್ವಾನುಭವದಿಂದ ಮನಗಾಣಬಹುದು.

ಇದು ಕರ್ನಾಟಕದ ಕವಯಿತ್ರಿ ಗಂಗಾದೇವಿಯ ಉದ್ಗಾರ :

**ಭಾರತಾಖ್ಯಂ ಸರೋ ಭಾತಿ ವ್ಯಾಸವಾಗಮೃತೈರ್ವೃತಮ್ ।**
**ಯತ್ರ ಕ್ಷತ್ರಕುಲಾಬ್ಜೇಷು ಹಂಸೀಯತಿ ಹರೇರ್ಯಶಃ ॥**

**ವೈಯಾಸಿಕೀ ಗಿರಾಂ ಗುಂಫೇ ಪುಂಡ್ರೇಕ್ಷಾವಿವ ಲಭ್ಯತೇ ।**
**ಸದ್ಯಃ ಸಹೃದಯಾಹ್ಲಾದೋ ಸಾರಃ ಪರ್ವಣಿ ಪರ್ವಣಿ ॥**

ಭಾರತವೆಂಬುದು ಒಂದು ಸರೋವರ ; ಅದರಲ್ಲಿರುವ ಜಲವೆಲ್ಲ ವ್ಯಾಸರ ವಾಕ್ಸುಧೆ. ಅಲ್ಲಿ ಕ್ಷತ್ರಿಯರೇ ಅರಳಿರುವ ಕಮಲಗಳು. ಆ ಕಮಲ ವನದಲ್ಲಿ ಸುಳಿಯುವ ಹಂಸವೇ ಹರಿಯ ಯಶ.

ರಸದಾಳೆ ಕಬ್ಬಿನಲ್ಲಿ ಗೆಣ್ಣು-ಗೆಣ್ಣಿಗೂ ಸವಿಯುಕ್ಕುವಂತೆ ವ್ಯಾಸರ ರಚನೆಯಲ್ಲಿ ಪರ್ವ-ಪರ್ವಕ್ಕೂ ಸಹೃದಯರಿಗೆ ಆಹ್ಲಾದಕಾರಿಯಾದ ಹೊಸ ಸವಿಯುಕ್ಕುತ್ತಲೇ ಇರುವುದು.

ಕವಿರಾಜನ ಪ್ರಶಸ್ತಿಯಿದು :

**ದ್ವೈಪಾಯನೋಽಪರೋ ಬ್ರಹ್ಮಾ ತತ್ಸೃಷ್ಟಿರ್ಭಾರತಾರ್ಣವಃ ।**
**ಸೂಕ್ತಯೋ ದಿವ್ಯರತ್ನಾನಿ ತ್ರೈಲೋಕ್ಯಂ ತೈರಲಂಕೃತಮ್ ॥**

ವ್ಯಾಸಮುನಿ ಎರಡನೇ ಬ್ರಹ್ಮನೇ ಸರಿ. ಅವನ ಸೃಷ್ಟಿಯೇ ಭಾರತವೆಂಬ ಸಾಗರ. ಅವನ ಸೂಕ್ತಿಗಳೇ ಆ ಸಾಗರದ ದಿವ್ಯರತ್ನಗಳು. ಆ ರತ್ನಗಳಿಂದ ತ್ರಿಲೋಕವೂ ಅಲಂಕೃತವಾಗಿದೆ.

ಮಹಾಕವಿ ರಾಜಶೇಖರನ ಭಾರತವರ್ಣನೆ :

**ದಂತೋಲೂಖಲಿಭಿಃ ಶಿಲೋಂಛಿಭಿರಿದಂ ಕಂದಾಶನೈಃ ಫೇನಪೈಃ**
**ಪರ್ಣಪ್ರಾಶನಿಭಿರ್ಮಿತಾಂಬುಕವಲೈಃ ಕಾಲೇ ಚ ಪಕ್ವಾಶಿಭಿಃ ।**
**ನೀವಾರಪ್ರಸೃತಿಂಪಚೈಶ್ಚ ಮುನಿಭಿರ್ಯದ್ವಾ ತ್ರಯೀಧ್ಯಾಯಿಭಿಃ**
**ಸೇವ್ಯಂ ಭವ್ಯಮನೋಭಿರರ್ಥಪತಿಭಿಸ್ತದ್ವೈ ಮಹಾಭಾರತಮ್ ॥**

ಎಷ್ಟೊಂದು ಬಗೆ-ಬಗೆಯ ತಪಸ್ಸಿನ ಪ್ರಕಾರಗಳಿವೆಯೋ—ಉಂಛ ವೃತ್ತಿ, ಪರ್ಣಾಶನ, ಕಂದಾಶನ ಇತ್ಯಾದಿ—ಅವುಗಳಲ್ಲಿ ಯಾವುದನ್ನು ಹಿಡಿದ ಮುನಿಗಳಾಗಿರಲಿ, ವೇದಾಧ್ಯಯನಕ್ಕೆ ಮೀಸಲಾಗಿಟ್ಟ ಜೀವನದವರಾಗಿರಲಿ, ಅಥವಾ ಎಷ್ಟೇ ದೊಡ್ಡ ಶ್ರೀಮಂತರಾಗಿರಲಿ—ಅವರಿಗೆಲ್ಲ ಭವ್ಯರೀತಿಯಿಂದ ಸೇವ್ಯವಾಗಿರುವ ದಿವ್ಯಗ್ರಂಥವೊಂದೇ ಮಹಾಭಾರತ!

ವ್ಯಾಸರು ಹಚ್ಚಿಟ್ಟಿರುವ ಆ ಜ್ಞಾನದೀಪ ಎಂದೆಂದೂ ಬೆಳಗುತ್ತಿರಲಿ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೭-೧೧-೧೯೭೭ ಕೆ. ಕೃಷ್ಣಮೂರ್ತಿ.



## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಕೃಪೆಯಿಂದಾಗಿ ಭಗವದ್ಗೀತೆಗೆ ಸಂಬಂಧಿಸಿದಂತೆ 12-13 ಮತ್ತು 14ನೇ ಸಂಪುಟಗಳನ್ನು ಒಟ್ಟಾಗಿ ಹೊರ ತರಲು ಸಂಕಲ್ಪಿಸಿದ್ದೆವು. ಕಾಗದಕ್ಕೆ ಹಣದ ನೆರವೂ ಸಿಕ್ಕಿತ್ತು. ಆದರೆ ಮಾರು ಕಟ್ಟೆಯಲ್ಲಿ ಕಾಗದ ಸಿಕ್ಕುವುದೇ ಪ್ರಯಾಸವಾಗಿ ಒಂದು ತಿಂಗಳು ವ್ಯರ್ಥವಾಗಿ ಕಳೆದುಹೋಯಿತು. ಇದು ಭಗವಂತನ ಸಂಕಲ್ಪ. ನಾವೇನು ಮಾಡಲೂ ಸಾಧ್ಯವಾಗುವುದಿಲ್ಲ. ಕಡೆಗಾದರೂ ಬೇಕಾದ ಕಾಗದವು ಸಿಕ್ಕಿ ಇಷ್ಟು ಬೇಗನೆ ಸಂಪುಟಗಳು ಸಿದ್ಧವಾದುದಕ್ಕೆ ದಯಾಮಯನಾದ ಭಗವಂತನ ಕೃಪೆಯೇ ಕಾರಣ. ಅವನ ಸಂಕಲ್ಪದಂತೆ ಸಂಪುಟಗಳು ಆಯಾಕಾಲಕ್ಕೆ ಪ್ರಕಟವಾಗು ವುವು. ಗ್ರಾಹಕರು ಸಹಕರಿಸಬೇಕಾಗಿ ವಿನಂತಿಸುತ್ತೇವೆ.

ಕನ್ನಡ ಬಂಧುಗಳೇ! ನಮ್ಮ ಅಜೇಯ ಸಂಸ್ಕೃತಿಯ ಅಡಿಗಲ್ಲುಗಳಂತಿ ರುವ ಮಹಾಭಾರತ-ರಾಮಾಯಣ-ಭಾಗವತಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಇದೊಂದು ಸುವರ್ಣಾವಕಾಶ. ತ್ವರೆಮಾಡಿರಿ. ಜ್ಞಾನದೀವಿಗೆಯನ್ನು ಮನೆ-ಮನೆಗಳಲ್ಲಿ ಹೊಚ್ಚಿರಿ. ಮಹಾಭಾರತ-ರಾಮಾಯಣ-ಭಾಗವತಗಳ ಅಧ್ಯಯನದಿಂದ ಸುಜ್ಞಾನವನ್ನು ಪಡೆದು ಹೃದಯಕಮಲದ ಮಧ್ಯದಲ್ಲಿರುವ ದಿವ್ಯಜ್ಯೋತಿಯನ್ನು ಕಂಡುಕೊಳ್ಳಿರಿ. ಬ್ರಹ್ಮಾನಂದವನ್ನು ಅನುಭವಿಸಿರಿ. ಭಗ ವಂತನು ನಮ್ಮೆಗೆಲ್ಲರಿಗೂ ಸನ್ಮಂಗಲವನ್ನುಂಟುಮಾಡಲಿ.

—ಪ್ರಕಾಶಕರು.

# ಶ್ರೀಮನ್ಮಹಾಭಾರತದ ಹದಿಮೂರನೆಯ ಸಂಪುಟದ ವಿಷಯಾನುಕ್ರಮಣಿಕೆ

## ಭೀಷ್ಮಪರ್ವ

ಶ್ರೀಮದ್ಭಗವದ್ಗೀತಾಪರ್ವ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಅಭಯಪ್ರದಾನದಿಂದಲೂ ಸದ್ಗುರುವಿನ ಆಶೀರ್ವಾದದಿಂದಲೂ ಹದಿಮೂರನೆಯ ಸಂಪುಟದ ಎರಡನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಛಾಯಾಮುದ್ರಣದ ಮೂಲಕವಾಗಿ ಪ್ರಕಟಿಸುತ್ತಿರುವುದರಲ್ಲಿ ಇದು ಮೂರನೆಯ ಸಂಪುಟ ವಾಗಿದೆ. ಮೆ|| ನವೀನ್ ಮುದ್ರಣದವರು ಸುವ್ಯವಸ್ಥಿತವಾಗಿಯೂ ಶೀಘ್ರ ವಾಗಿಯೂ ಮುದ್ರಣಮಾಡಿಕೊಡುವ ಆಶ್ವಾಸನೆಯನ್ನು ಕೊಟ್ಟು ಈ ಸಂಪುಟವನ್ನು ನಮ್ಮ ನಿರೀಕ್ಷೆಗಿಂತಲೂ ಮುಂದಾಗಿಯೇ ಮುದ್ರಣಮಾಡಿ ಕೊಟ್ಟಿರುತ್ತಾರೆ. ಅವರಿಗೆ ನಮ್ಮ ಧನ್ಯವಾದಗಳು. ಕಾಗದ ಮುಂತಾದುವುಗಳ ಬೆಲೆ ಗಗನಕ್ಕೆ ಏರುತ್ತಿದ್ದು ಛಾಯಾಮುದ್ರಣದ ಮೂಲಕವಾಗಿ ಸಂಪುಟವನ್ನು ಹೊರತರಲು ಸಾಧ್ಯವೇ ಎಂಬ ಬಗೆಗೆ ಬಹಳವಾಗಿ ಯೋಚಿಸುತ್ತಿದ್ದೇವೆ. ಒಂದು ಕಡೆಯಲ್ಲಿ ಈ ಸಂಪುಟವನ್ನು ಬಿಟ್ಟು ಇನ್ನೂ 8 ಸಂಪುಟಗಳನ್ನು ಪುನರ್ಮುದ್ರಣಮಾಡಿಕೊಡಬೇಕಾಗಿರುವುದರಿಂದ ಛಾಯಾಮುದ್ರಣ ಮಾಡಿಸುವುದು ಓದುಗರ ದೃಷ್ಟಿಯಿಂದ ಅನಿವಾರ್ಯವಾಗಿ ಕಾಣುತ್ತಿದೆ. ಆದರೆ ಆರ್ಥಿಕದೃಷ್ಟಿಯಿಂದ ನೋಡಿದರೆ ನಾವೀಗ ಪೂರ್ಣಗ್ರಾಹಕರಿಗೆ ಕೊಡುತ್ತಿರುವ ಬೆಲೆಗಿಂತ ಮೂಲಬೆಲೆಯೇ ಒಂದೆರಡು ರೂ.ಗಳಷ್ಟು ಅಧಿಕವಾಗುತ್ತದೆ. ಇದನ್ನು ಸುಧಾರಿಸಲು ಸಾಧ್ಯವೇ? ತಿರುಪತಿಯ ವೆಂಕಟರಮಣನ ದಯೆಯಿಂದ ನಷ್ಟದಲ್ಲಿ ಸ್ವಲ್ಪಭಾಗ ತುಂಬುತ್ತಿರುವುದು ನಿಜ. ಆದರೂ ಸುಧಾರಿಸುವುದು ಕಷ್ಟಸಾಧ್ಯವಾಗಿ ತೋರುತ್ತಿದೆ. ಬೆಲೆಯನ್ನು ಪದೇ-ಪದೇ ಏರಿಸಲು ಮನಸ್ಸು ಒಪ್ಪುತ್ತಿಲ್ಲ. ಈ ಸಂಪುಟಗಳು ಮಧ್ಯಮವರ್ಗದವರಿಗೆ ತಲುಪಬೇಕೆಂಬುದೇ ಇದಕ್ಕೆ ಮುಖ್ಯಕಾರಣ. ಲಕ್ಷೋಪಲಕ್ಷ ಜನರು ಇದನ್ನು ಓದಬೇಕು–ಅದು ನಮ್ಮ ಉದ್ದೇಶವಾಗಿದೆ. ಈ ಸತ್ಸಂಕಲ್ಪವಿರುವುದರಿಂದ ಪರಮಾತ್ಮನು ದಾರಿತೋರುವನೆಂಬ ದೃಢ ನಂಬಿಕೆಯಿಂದಿರುತ್ತೇವೆ.

–ಪ್ರಕಾಶಕರು.

# ತೃತೀಯ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದ ಶ್ರೀಮನ್ಮಹಾಭಾರತದ ಹದಿಮೂರನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸಿದ್ದೇವೆ. ಈ ಕಾರ್ಯನಿರ್ವಹಣೆಗೆ ಭಗವಂತನ ಅಭಯಹಸ್ತವೇ ಮಹಾಶ್ರಯವಾಗಿದೆ. ಕಾಗದದ ಬೆಲೆಯು ಅತ್ಯಧಿಕವಾಗಿ ಹೆಚ್ಚಿರುವ ಈ ಸಮಯದಲ್ಲಿ ಮುದ್ರಣಕ್ಕೆ ಬೇಕಾಗುವ ಕಾಗದವನ್ನು ಒದಗಿಸಿಕೊಳ್ಳುವುದೂ ದುಸ್ತರವೇ ಆಗಿದೆ. ಆದರೂ ಭಗವಂತನ ಕೃಪಾಶ್ರಯದಿಂದ ಕೆಲಸವು ಮುಂದುವರಿಯುತ್ತಿದೆ. ಭಗವಂತನು ಅವನ ಕಾರ್ಯವನ್ನು ಹೇಗೋ ಮಾಡಿಸಿಕೊಳ್ಳುತ್ತಿದ್ದಾನೆ. ಹದಿನಾಲ್ಕನೆಯ ಸಂಪುಟದ ಪುನರ್ಮುದ್ರಣವು ಪ್ರಾರಂಭವಾಗಿದೆ. ಸೆಪ್ಟೆಂಬರ್ ವೇಳೆಗೆ ಆ ಸಂಪುಟವೂ ವಿತರಣೆಗೆ ಸಿದ್ಧವಾಗಬಹುದು.

ತಾತ್ಕಾಲಿಕವಾಗಿ ಪೂರ್ಣಮಾಲೆಯ ಚಂದಾ ಹಣವನ್ನು ಹೆಚ್ಚಿಸಿಲ್ಲ. ಆದರೆ ನಾವು ಈಗ ತೆಗೆದುಕೊಳ್ಳುತ್ತಿರುವ ಬೆಲೆ ನಮ್ಮ ಉತ್ಪಾದನಾಬೆಲೆಗಿಂತ ಬಹಳ ಕಡಿಮೆ ಇದೆ. ಇದನ್ನು ನವೀಕರಿಸುವುದು ಅನಿವಾರ್ಯವಾಗಿದೆ. ಆದರೆ ಈ ಸಂದರ್ಭದಲ್ಲಿ ನಮ್ಮ ಗ್ರಾಹಕರ ಮೂಲಕ ಹೆಚ್ಚು ಹೊಸ ಗ್ರಾಹಕರು ಲಭಿಸಿದರೆ ನಮ್ಮ ಆರ್ಥಿಕ ಸ್ಥಿತಿ ಕೊಂಚಮಟ್ಟಿಗೆ ಉತ್ತಮವಾದೀತು. ನಮ್ಮ ಹಿಂದಿನ ಪ್ರಾರ್ಥನೆಯಂತೆ ಪ್ರತಿಯೊಬ್ಬ ಗ್ರಾಹಕರೂ– ಐದು ಮಂದಿ ಹೊಸ ಗ್ರಾಹಕರನ್ನು ಮಾಡಿಕೊಡಬೇಕಾಗಿ ವಿನಂತಿಸುತ್ತೇವೆ. ಪ್ರಸಕ್ತ ನಮ್ಮಲ್ಲಿ ಮಹಾಭಾರತದ ೧೬ ಸಂಪುಟಗಳು ಸಿಕ್ಕುತ್ತವೆ. (ಈ ಸಂಪುಟವೂ ಸೇರಿ).

ಗ್ರಾಹಕರು ದಯಮಾಡಿ ಸಹಕರಿಸಬೇಕಾಗಿ ಪ್ರಾರ್ಥನೆ. ಯಥಾ ಪೂರ್ವ ದಯಾಮಯರಾದ ನಮ್ಮ ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪುಗಳನ್ನು ನೋಡಿಕೊಟ್ಟಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ತೆರೆಯಮರೆಯಲ್ಲಿ ಈ ಅಗಾಧವಾದ ಕಾರ್ಯಕ್ಕೆ ತನು-ಮನ-ಧನಗಳಿಂದ ನೆರವುನೀಡುತ್ತಿರುವ ನೂರಾರು ಕಾರ್ಯಕರ್ತರಿಗೆ ದಯಾಮಯನಾದ ಭಗವಂತನು ಅವರ ಸಕಲ ಇಷ್ಟಾರ್ಥಗಳನ್ನು ನೆರವೇರಿಸಿಕೊಟ್ಟು ಕಾಪಾಡಲೆಂಬ ಹೃತ್ಪೂರ್ವಕ ಪ್ರಾರ್ಥನೆಯೊಡನೆ ವಿರಮಿಸುವೆವು.

–ಪ್ರಕಾಶಕರು.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶ್ರೀಮನ್ಮಹಾಭಾರತ-ಭೀಷ್ಮಪರ್ವ :
# ಹದಿಮೂರನೆಯ ಸಂಪುಟ

೩೧ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಭಗವದ್ಗೀತಾ-೭ನೆಯ ಅಧ್ಯಾಯ

### ಜ್ಞಾನ-ವಿಜ್ಞಾನ : ಭಗವಂತನ ವ್ಯಾಪಕತೆ : ಅನ್ಯದೇವತೆಗಳ ಉಪಾಸನೆ : ಭಗವಂತನ ಪ್ರಭಾವವನ್ನು ತಿಳಿಯದವರ ನಿಂದೆ : ಪ್ರಭಾವವನ್ನು ತಿಳಿದಿರತಕ್ಕವರ ಪ್ರಶಂಸೆ

ಆರನೆಯ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಶ್ರೀಕೃಷ್ಣನು-'ಅಂತರಾತ್ಮನಲ್ಲಿ ನನ್ನನ್ನು ಇಟ್ಟುಕೊಂಡು ಶ್ರದ್ಧೆಯಿಂದ ನನ್ನನ್ನೇ ಧ್ಯಾನಿಸತಕ್ಕವನು ಯೋಗಿಗಳಲ್ಲಿ ಶ್ರೇಷ್ಠನು'-ಎಂದು ಹೇಳಿದನು. ಆದರೂ ಸಹ-'ತಾನು ಯಾರು? ತನ್ನ ಗುಣವೇನು? ತನ್ನ ಪ್ರಭಾವವೇನು?'-ಇವುಗಳನ್ನು ವಿವರಿಸಿ ಹೇಳದಿದ್ದರೆ ಭಕ್ತನ ಚಿತ್ತದಲ್ಲಿ ತನ್ನ ಶುದ್ಧವಾದ ಮುದ್ರೆಯು ಬೀಳಲಾರದೆಂದು ಭಾವಿಸಿ ಈ ಅಧ್ಯಾಯದಲ್ಲಿ ತಾನಾರೆಂಬುದನ್ನು ವಿವರಿಸಿ ಶ್ರೀಕೃಷ್ಣನು ಹೇಳುತ್ತಾನೆ :

ಮೊದಲನೆಯ ಷಟ್ಕದಲ್ಲಿ ಶ್ರೀಮನ್ನಾರಾಯಣನ ಪ್ರಾಪ್ತಿಗೆ ಉಪಾಯವಾದ ಅವನ ಉಪಾಸನೆಯನ್ನು ಹೇಳಿ, ಅದಕ್ಕೆ ಅಂಗವಾದ ಆತ್ಮಜ್ಞಾನಪೂರ್ವಕವಾದ ಕರ್ಮಾನುಷ್ಠಾನದಿಂದ ಸಾಧ್ಯವಾಗುವ ಪ್ರತ್ಯಗಾತ್ಮನ ಯಾಥಾತ್ಮ್ಯದರ್ಶನವನ್ನು ಹೇಳಿಯಾಯಿತು. ಈ ಎರಡನೆಯ ಷಟ್ಕದಲ್ಲಿ ಪರಮಪುರುಷನ ಸ್ವರೂಪವನ್ನೂ, 'ಭಕ್ತಿ' ಎಂಬ ಶಬ್ದದಿಂದ ಹೇಳಲ್ಪಡುವ

ಅವನ ಉಪಾಸನೆಯನ್ನೂ ಹೇಳಲಾಗುತ್ತದೆ–ಎಂದು ಶ್ರೀರಾಮಾನುಜರು ಹೇಳುತ್ತಾರೆ.

ಹಿಂದಿನ ಅಧ್ಯಾಯಗಳಲ್ಲಿ ಪ್ರಧಾನವಾಗಿ ಜ್ಞಾನದ ಸಾಧನವನ್ನು ಹೇಳಿಯಾಯಿತು. ಇಲ್ಲಿಂದ ಆರಂಭವಾಗುವ ಆರು ಅಧ್ಯಾಯಗಳಲ್ಲಿ ಭಗವಂತನ ಮಾಹಾತ್ಮ್ಯವನ್ನು ಪ್ರಧಾನವಾಗಿ ಹೇಳಲಾಗುತ್ತದೆ–ಎಂದು ಶ್ರೀಮಧ್ವಾಚಾರ್ಯರು ಹೇಳುತ್ತಾರೆ.

**ಓಂ ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥**

ಅರ್ಜುನ! ನನ್ನಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ ಯೋಗವನ್ನು ಸಾಧಿಸುತ್ತಾ ನನ್ನನ್ನೇ ಆಶ್ರಯಿಸಿದವನಾಗಿ ನಿಃಸಂದೇಹವಾಗಿ ಮತ್ತು ಸಂಪೂರ್ಣವಾಗಿ ನನ್ನನ್ನು ಹೇಗೆ ತಿಳಿದುಕೊಳ್ಳುವೆಯೆಂಬುದನ್ನು ಹೇಳುವೆನು; ಕೇಳು.

* * *

(ಶ್ರೀಕೃಷ್ಣನು 'ಮಯಿ ಆಸಕ್ತಮನಾಃ' ನನ್ನಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಎಂದು ಅರ್ಜುನನಿಗೆ ಹೇಳುತ್ತಾನೆ. ನಮಗೆ ದೇವರಲ್ಲಿ ಆಸಕ್ತಿಯು ಎಷ್ಟಿದೆ ಎಂಬುದನ್ನು ನಮಗೆ ನಾವೇ ಪರೀಕ್ಷಿಸಿಕೊಳ್ಳಬೇಕಾಗಿದೆ. ನಮ್ಮ ಆಸಕ್ತಿಯೆಲ್ಲವೂ ಸಂಸಾರನಿರ್ವಹಣೆಯಲ್ಲೇ ಇರುತ್ತದೆ. ದೇವರಪಟದ ಮೇಲೆ ಒಂದು ಹೂವಿಡಲು ಸಹ ನಮಗೆ ಆಸಕ್ತಿಯಿರುವುದಿಲ್ಲ ; ವಿರಾಮವೂ ಇರುವುದಿಲ್ಲ. ಇಲ್ಲಿ ಶ್ರೀಕೃಷ್ಣನು ಹೇಳುವ ಆಸಕ್ತವಾದ ಮನಸ್ಸೆಂದರೆ ದೇವರನ್ನು ಬಿಟ್ಟು ಬೇರೆ ಯಾವುದನ್ನೂ ಚಿಂತಿಸದೆಯೇ ಇರುವ ಮನಸ್ಸು ; ಸದಾಕಾಲದಲ್ಲಿಯೂ ಅವನ ಧ್ಯಾನ, ಸಂಕೀರ್ತನೆ, ಮಹಿಮಾಶ್ರವಣ–ಇತ್ಯಾದಿಗಳಲ್ಲಿಯೇ ಇರುವುದು ; ಕನಸು ನನಸ್ಸಿನಲ್ಲಿಯೂ ಅವನನ್ನೇ ನೆನೆಯುತ್ತಿರುವುದು ; ಎಣ್ಣೆಯು ಶರೀರಕ್ಕೆ ಅಂಟಿಕೊಳ್ಳುವಂತೆ ಆರಾಧ್ಯ ದೇವತೆಯನ್ನು ಮನಸ್ಸಿಗೆ ಅಂಟಿಸಿಕೊಂಡುಬಿಟ್ಟಿರುವುದು–ಇಂತಹ ಮನಸ್ಸಿದ್ದರೆ ಅದಕ್ಕೆ ದೇವರಲ್ಲಿಯೇ ಆಸಕ್ತವಾದ ಮನಸ್ಸೆಂದು ಹೇಳಬಹುದು. ಪರತತ್ತ್ವವೊಂದರಲ್ಲಿಯೇ ಏಕನಿಷ್ಠೆಯಿಂದ ಮನಸ್ಸು ಲಗ್ನವಾಗಿರಬೇಕು. ಅಂತಹ

ಪರಮಪರಿಶುದ್ಧವಾದ ಭಕ್ತಿಯಿಂದ ಸರ್ವಸ್ವವನ್ನೂ ಭಗವಂತನಲ್ಲಿ ಅರ್ಪಿಸಿದರೆ ಅವನು ತನ್ನ ಸರ್ವಸ್ವವನ್ನೂ ನಮಗೇ ಕೊಟ್ಟುಬಿಡುತ್ತಾನೆ. ಅಂತಹ ದಯಾಮಯನವನು.

ಎರಡನೆಯದಾಗಿ :– **ಮದಾಶ್ರಯಃ** ಎನ್ನುತ್ತಾನೆ. ಅವನಲ್ಲಿಯೇ ಆಸಕ್ತವಾದ ಮನಸ್ಸಿದ್ದರೆ ಭಕ್ತನು ಬೇರೆ ಯಾವ ದೇವತೆಯ ಆಶ್ರಯವನ್ನೂ ಆಶಿಸಲಾರ. ಆದರೆ ಮಾನವಸಾಮಾನ್ಯನಿಗೆ ಒಬ್ಬನೇ ದೇವನಲ್ಲಿ ಆಸಕ್ತವಾದ ಮನಸ್ಸೂ ಇರುವುದಿಲ್ಲ. ಒಬ್ಬನೇ ದೇವನನ್ನು ಆಶ್ರಯಿಸುವುದೂ ಇಲ್ಲ. ದೊಡ್ಡವರ ಆಶ್ರಯ, ಐಶ್ವರ್ಯವಂತರ ಆಶ್ರಯ, ಅಧಿಕಾರಿಗಳ ಆಶ್ರಯ ಹೀಗೆ ಹುಲುಮನುಜರ ಆಶ್ರಯವನ್ನು ಪಡೆದುಕೊಳ್ಳುವುದರಲ್ಲಿಯೇ ಮನುಷ್ಯನು ಆಸಕ್ತನಾಗಿರುತ್ತಾನೆ. ಒಮ್ಮೊಮ್ಮೆ ಕಷ್ಟಸಮಯದಲ್ಲಿ–ಕಷ್ಟಗಳು ಬಗೆಹರಿಯದಿದ್ದ ಸಮಯದಲ್ಲಿ ದೇವರನ್ನೂ ಮನುಷ್ಯನು ಆಶ್ರಯಿಸುವುದುಂಟು. ಆಗಲೂ ಒಬ್ಬ ದೇವನ ಆಶ್ರಯವನ್ನಲ್ಲ ನಾನಾ ದೇವತೆಗಳನ್ನು ಆಶ್ರಯಿಸುತ್ತಾನೆ. ಕಷ್ಟವು ನಿವಾರಣೆಯಾದೊಡನೆಯೇ ಪುನಃ ದೇವರನ್ನು ಮರೆಯುತ್ತಾನೆ. ಅದು ಸರಿಯಲ್ಲ. ದೇವರನ್ನು ನೆಚ್ಚುವುದು ಅಥವಾ ಆಶ್ರಯಿಸುವುದು, ಎಂದರೆ ಸಂಪೂರ್ಣವಾಗಿ ಆಶ್ರಯಿಸಬೇಕು ; ಅನನ್ಯಶರಣನಾಗಿ ಆಶ್ರಯಿಸಬೇಕು.

ಹಡಗಿನಲ್ಲಿ ಪ್ರಯಾಣಮಾಡುತ್ತಿದ್ದಾಗ ಭಯಂಕರವಾದ ಬಿರುಗಾಳಿಯು ಬಂದು ಪ್ರಯಾಣಿಕರೆಲ್ಲರನ್ನೂ ತಲ್ಲಣಗೊಳಿಸಿತು. ಆಗ ಅವರೆಲ್ಲರೂ ಶಿವ, ವಿಷ್ಣು, ಅಲ್ಲಾ–ಎಂದು ಮೊದಲಾಗಿ ತಮ್ಮ ತಮ್ಮ ಮತಾನುಸಾರ ರಕ್ಷಣೆಗಾಗಿ ದೇವರನ್ನು ಪ್ರಾರ್ಥಿಸತೊಡಗಿದರು. ಇದ್ದಕ್ಕಿದ್ದಂತೆಯೇ ಬಿರುಗಾಳಿಯು ನಿಂತುಹೋಯಿತು. ಜನರ ಪ್ರಾರ್ಥನೆಯೂ ನಿಂತುಹೋಯಿತು. 'ಬಿರುಗಾಳಿಯ ಜೊತೆಯಲ್ಲಿಯೇ ಅವರ ಭಗವಂತನೂ ಹೊರಟುಹೋದ' ಎಂದು ಗಾಂಧೀಜೀಯವರು ವ್ಯಾಖ್ಯಾನಿಸುತ್ತಿದ್ದರು. ಈ ರೀತಿ ಕಷ್ಟಬಂದಾಗ ಮಾತ್ರ ಸ್ವಾರ್ಥಕ್ಕಾಗಿ ಭಗವಂತನನ್ನು ಕೋರಿ ಉಳಿದ ಸಮಯಗಳಲ್ಲಿ ಭಗವಂತನನ್ನು ಮರೆಯುವುದು ಭಗವದಾಶ್ರಯದ ಲಕ್ಷಣವಲ್ಲ.

ಹೀಗೆ ನನ್ನಲ್ಲಿಯೇ ಮನಸ್ಸನ್ನಿಟ್ಟು ನನ್ನನ್ನೇ ಸಂಪೂರ್ಣವಾಗಿ

ಆಶ್ರಯಿಸಿಕೊಂಡು ಧ್ಯಾನಯೋಗಾಸಕ್ತನಾಗಿದ್ದರೆ **ಅಸಂಶಯಂ** ಸಂದೇಹವೇ ಉಂಟಾಗದ ರೀತಿಯಲ್ಲಿ ; ಸಂದೇಹ ಎಂದರೆ ದೇವರಿದ್ದಾನೋ ಇಲ್ಲವೋ? ಇದ್ದರೆ ಹೇಗಿದ್ದಾನೆ? ಸಾಕಾರನೇ ನಿರಾಕಾರನೇ?–ಇತ್ಯಾದ್ಯನೇಕಸಂಶಯ ಗಳಿಗೆ ಸ್ವಲ್ಪವೂ ಅವಕಾಶವಿಲ್ಲದಂತೆ, **ಸಮಗ್ರಂ ಮಾಂ** ಸಂಪೂರ್ಣವಾಗಿ. ಒಂದಂಶವನ್ನು ಮಾತ್ರವಲ್ಲ ; ಪೂರ್ಣರೂಪನಾದ ನನ್ನನ್ನು ಯಾವ ರೀತಿ ಯಲ್ಲಿ ತಿಳಿದುಕೊಳ್ಳುವೆಯೆಂಬುದನ್ನು ಹೇಳುವೆನು ; ಕೇಳು ಎನ್ನುತ್ತಾನೆ, ಶ್ರೀಕೃಷ್ಣ.)

o o o

**ಸಮಗ್ರಂ** ಎನ್ನುವುದು ಭಗವಂತನಿಗೆ ವಿಶೇಷಣ. **ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ** = ಸಮಗ್ರನಾಗಿರುವ ಎಂದರೆ ವಿಭೂತಿ, ಬಲ-ಶಕ್ತಿ, ಐಶ್ವರ್ಯ–ಮುಂತಾದ ಗುಣಸಂಪನ್ನನಾಗಿರುವ ನನ್ನನ್ನು ಹೇಗೆ ತಿಳಿಯು ವೆಯೋ ಅದನ್ನು. (ಶಂ. ಭಾ.)

**ಮಯಿ ಆಸಕ್ತಮನಾಃ** = ನನ್ನ ಸ್ವರೂಪ, ಗುಣ, ವ್ಯಾಪಾರ, ವಿಭೂತಿ–ಇವುಗಳಿಂದ ಅಗಲಿಕೆಯುಂಟಾದರೆ ಒಡನೆಯೇ ದುಃಖದಿಂದ ಮನಸ್ಸು ಒಡೆದುಹೋಗಬೇಕು. ಆ ಮಟ್ಟದಲ್ಲಿ ಭಗವಂತನಲ್ಲಿ ಅತ್ಯಂತ ಪ್ರೇಮವನ್ನು ಹೊಂದಿ ಗಾಢವಾದ ಮನಸ್ಸನ್ನು ಇಟ್ಟುಕೊಳ್ಳುವವನು. **ಮದಾಶ್ರಯಃ**– ನನ್ನೊಬ್ಬನನ್ನೇ ಆಧಾರವಾಗಿ ಉಳ್ಳವನು. **ಅಸಂಶಯಂ ಸಮಗ್ರಂ** ಎರಡೂ ಕ್ರಿಯಾವಿಶೇಷಣಗಳು. (ರಾ. ಭಾ.)

ಭಾಸ್ಕರಾಚಾರ್ಯರು **ಅಸಂಶಯಂ ಸಮಗ್ರಂ** ಎಂಬ ಎರಡು ಪದಗಳನ್ನೂ ಭಗವಂತನಿಗೇ ವಿಶೇಷಣವನ್ನಾಗಿ ಮಾಡುತ್ತಾರೆ.

**ಮದಾಶ್ರಯಃ** 'ಭಗವಂತನೇ ಎಲ್ಲವನ್ನೂ ನನ್ನಿಂದ ಮಾಡಿಸುತ್ತಾನೆ. ಅವನೇ ನನಗೆ ಶರಣ್ಯ. ಅವನಲ್ಲೇ ನಾನು ಇದ್ದೇನೆ'–ಎಂದು ಇರುವವನಾಗಿ. **ಮಯಿ ಆಸಕ್ತಮನಾಃ** ನನ್ನಲ್ಲಿ ಅತ್ಯಂತಸ್ನೇಹಯುಕ್ತವಾದ ಮನಸ್ಸುಳ್ಳವನಾಗಿ. **ಅಸಂಶಯಂ** ಮತ್ತು **ಸಮಗ್ರಂ** ಎರಡೂ ಸಹ ಕ್ರಿಯಾವಿಶೇಷಣಗಳು.

(ಮ.ಭಾ.)

**ಓಂ ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥೨॥**

ವಿಜ್ಞಾನದಿಂದ ಕೂಡಿದ ಈ ಜ್ಞಾನವನ್ನು ನಿನಗೆ ಸ್ವಲ್ಪವೂ ಉಳಿಯದಂತೆ ಹೇಳುತ್ತೇನೆ. ಅದನ್ನು ತಿಳಿದುಕೊಂಡರೆ ಮುಂದೆ ತಿಳಿದುಕೊಳ್ಳಬೇಕಾದುದು ಏನೂ ಇರುವುದಿಲ್ಲ.

* * *

('ವಿಜ್ಞಾನಸಹಿತವಾದ ಜ್ಞಾನವನ್ನು ಸಂಪೂರ್ಣವಾಗಿ ಹೇಳುತ್ತೇನೆ' ಎನ್ನುತ್ತಾನೆ ಶ್ರೀಕೃಷ್ಣ.

ಜ್ಞಾನವೆಂಬುದು ಪರಬ್ರಹ್ಮಸ್ವರೂಪ ; ಶುದ್ಧಸ್ವರೂಪ ; ಮೂಲ ಸ್ವರೂಪ. ಜ್ಞಾನದ ವಿಕಾಸರೂಪವಾದ ವಿಸ್ತಾರವೇ ವಿಜ್ಞಾನವೆನಿಸುತ್ತದೆ. ಜ್ಞಾನವು ಬೀಜವಾದರೆ ವಿಜ್ಞಾನವು ವೃಕ್ಷದಂತೆ. ಹೀಗೆ ಸರ್ವಮೂಲವಾಗಿ ರುವ ಜ್ಞಾನ, ವಿಶ್ವವೆಂಬ ವೃಕ್ಷದ ರೂಪದಲ್ಲಿ ಅದು ವಿಕಾಸಗೊಂಡಿರುವಿಕೆ– ಇವುಗಳನ್ನು ತಿಳಿದಾದ ಬಳಿಕ ತಿಳಿಯಬೇಕಾದುದು ಬೇರೆ ಏನೂ ಉಳಿಯು ವುದಿಲ್ಲ. ಎಲ್ಲಕ್ಕೂ ಮೂಲವಾಗಿ ಸದ್ವಸ್ತುವು ನಾನಾರೂಪಗಳಲ್ಲಿ ವಿಸ್ತಾರ ಗೊಂಡಿರುವುದರಿಂದ ಅದನ್ನರಿತರೆ ಎಲ್ಲವನ್ನೂ ಅರಿತಂತೆಯೇ–ಎಂಬ ಅಭಿಪ್ರಾಯವು ಛಾಂದೋಗ್ಯಶ್ರುತಿಯಲ್ಲಿಯೂ ನಿರೂಪಿತವಾಗಿದೆ.

**ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್** (ಛಾಂದೋಗ್ಯ ಉ.)

ಆ ಪರಮಾತ್ಮನ ಜ್ಞಾನವಾಗುವುದರಿಂದ ಕೇಳದೇ ಇದ್ದುದೆಲ್ಲಾ ಕೇಳಿ ದಂತಾಗುತ್ತದೆ. ತಿಳಿಯದೇ ಇದ್ದುದೆಲ್ಲ ತಿಳಿದಂತಾಗುತ್ತದೆ. ಅನುಭವಕ್ಕೆ ಬರದೇ ಇದ್ದುದೆಲ್ಲವೂ ಅನುಭವಕ್ಕೆ ಬಂದಂತಾಗುತ್ತದೆ.)

o o o

ಜ್ಞಾನ-ವಿಜ್ಞಾನಶಬ್ದಗಳಿಗೆ ಆಚಾರ್ಯರು ನಾನಾರೀತಿಗಳಲ್ಲಿ ಭಾಷ್ಯ ಮಾಡಿದ್ದಾರೆ.

ಜ್ಞಾನವೆಂದರೆ ಅಧ್ಯಾತ್ಮಶಾಸ್ತ್ರ. ವಿಜ್ಞಾನವೆಂದರೆ ಸ್ವಾನುಭವಯುಕ್ತವಾದ ಜ್ಞಾನ. (ಶಂ. ಭಾ.)

ಜ್ಞಾನವೆಂದರೆ ಭಗವಂತನ ಸ್ವರೂಪವಿಷಯವಾದ ಜ್ಞಾನ. ವಿಜ್ಞಾನ

ವೆಂದರೆ ವಿವಿಕ್ತಾಕಾರವಿಷಯಕವಾದ ಜ್ಞಾನ. ಎಂದರೆ ಭಗವಂತನು ತನ ಗಿಂತಲೂ ವ್ಯತಿರಿಕ್ತವಾದ ಎಲ್ಲ ಚಿದಚಿದ್ವಸ್ತುಗಳಿಗಿಂತಲೂ ವಿವಿಕ್ತನಾದ ವನು–ಎಂಬ ವಿಷಯವಾದ ಜ್ಞಾನ. (ರಾ. ಭಾ.)

ಜ್ಞಾನವೆಂದರೆ ಭಗವದ್ವಿಷಯಿಕವಾದ ಜ್ಞಾನ. ವಿಜ್ಞಾನವೆಂದರೆ ವಿಶೇಷಜ್ಞಾನ ಅಥವಾ ಅಪರೋಕ್ಷಜ್ಞಾನ. (ಮ. ಭಾ.)

ವಿಜ್ಞಾನವು ಜ್ಞಾನ ಮತ್ತು ಅಜ್ಞಾನಗಳನ್ನೂ ಮೀರಿದ್ದು. ವಿಶೇಷಜ್ಞಾನ ಎಂದು ಕೆಲವರ ಅಭಿಪ್ರಾಯ. ವಿಜ್ಞಾನವು ಜ್ಞಾನದ ವಿಕಾಸ. ಪ್ರಕೃತಿಯಲ್ಲಿ ಜ್ಞಾನವು ಹೇಗೆ ಅವತೀರ್ಣವಾಗಿ ವಿಸ್ತಾರಗೊಂಡಿದೆ–ಎಂಬ ತಿಳಿವಳಿಕೆಯು ವಿಜ್ಞಾನ. ವಿಜ್ಞಾನದ ಮಾರ್ಗವನ್ನು ಅವಲಂಬಿಸಿ ಅದರ ಮೂಲವನ್ನು ತಲುಪಿದಾಗ ದೊರೆಯುವುದು ಜ್ಞಾನ. ವಿಜ್ಞಾನದ ವಿಕಾರವು ತೊಲಗಿದಾಗ ಜ್ಞಾನವು ಉಳಿಯುತ್ತದೆ. –ಶ್ರೀರಂಗಮಹಾಗುರುಗಳು.

ವಿಜ್ಞಾನವನ್ನು–ಇಂದ್ರಿಯಾಶ್ವಗಳನ್ನು ಹತೋಟಿಯಲ್ಲಿಟ್ಟು ನಡೆಸುವ ಸಾರಥಿಯನ್ನಾಗಿ ಕಠೋಪನಿಷತ್ತು ಹೇಳುತ್ತದೆ. **ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ**

ವಿಜ್ಞಾನವು ಆನಂದಮಯಕ್ಕೆ ಕೆಳಗಿನದು ಎಂದು ತೈತ್ತಿರೀಯೋಪ ನಿಷತ್ತಿನ ನಿರೂಪಣೆ :

**ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ ।**
**ಆನನ್ದೋ ಬ್ರಹ್ಮೇತಿ ವ್ಯಜಾನಾತ್ ।**

ವಿಜ್ಞಾನವನ್ನು ಪರಮಾತ್ಮಸ್ವರೂಪ ಎಂದೂ ಶ್ರುತಿ-ಸ್ಮೃತಿಗಳು ಕೆಲವು ಕಡೆ ನಿರೂಪಿಸುತ್ತವೆ.

**ವಿಜ್ಞಾನಮಾನನ್ದಂ ಬ್ರಹ್ಮ । ತಸ್ಮಾನ್ನ ವಿಜ್ಞಾನಮೃತೇಽಸ್ತಿ ಕಿಂಚಿತ್।** ವಿಷ್ಣುಪುರಾಣ.

ಜ್ಞಾನವೂ ಬ್ರಹ್ಮಸ್ವರೂಪವೇ. **ಸತ್ಯಂ ಜ್ಞಾನಮನನ್ತಂ ಬ್ರಹ್ಮ.** ಈ ಅರ್ಥದಲ್ಲಿ ಜ್ಞಾನ-ವಿಜ್ಞಾನಗಳೆರಡೂ ಪರ್ಯಾಯಪದಗಳಾಗುತ್ತವೆ.

ಮೋಕ್ಷದಲ್ಲಿರುವ ಬುದ್ಧಿಯು ಜ್ಞಾನ, ಶಿಲ್ಪಶಾಸ್ತ್ರ–ಮುಂತಾದುವು ಗಳಲ್ಲಿರುವ ತಿಳಿವಳಿಕೆಯು ವಿಜ್ಞಾನ–ಎಂದು ಅಮರಕೋಶವು ಹೇಳುತ್ತದೆ. **ಮೋಕ್ಷೇ ಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ ।**

**ಓಂ ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥**

ಅನೇಕ ಸಹಸ್ರ ಮನುಷ್ಯರಲ್ಲಿ ಯಾವನೋ ಒಬ್ಬನು ಸಿದ್ಧಿಯನ್ನು ಪಡೆಯಲು ಪ್ರಯತ್ನಿಸುತ್ತಾನೆ. ಹೀಗೆ ಪ್ರಯತ್ನಿಸುವ ಸಿದ್ಧರಲ್ಲಿ ಯಾವನೋ ಒಬ್ಬನು ನನ್ನನ್ನು ತತ್ತ್ವತಃ ತಿಳಿದುಕೊಳ್ಳುತ್ತಾನೆ.

* * *

(ಇಲ್ಲಿ ಹೇಳಿರುವ ಸಿದ್ಧಿ ಎಂಬ ಪದದ ಅರ್ಥ ಆತ್ಮಸಿದ್ಧಿ. ಅನೇಕ ಸಹಸ್ರ ಮನುಷ್ಯರಲ್ಲಿ ಯಾವನೋ ಒಬ್ಬನು ಆತ್ಮಸಿದ್ಧಿಗೆ ಪ್ರಯತ್ನಿಸುತ್ತಾನೆ. 'ಆತ್ಮ ಎಂಬುದು ಒಂದಿದೆ. ಅದೂ ನಮ್ಮ ದೇಹದಲ್ಲಿಯೇ ಇದೆ. ಅದೇ ಬೇರೆ–ದೇಹವೇ ಬೇರೆ. ಆ ಆತ್ಮವನ್ನು ನಾವು ಕಾಣಬಹುದು'–ಎಂಬ ವಿಷಯ ವನ್ನೇ ಜನಸಾಮಾನ್ಯನು ತಿಳಿದಿರುವುದಿಲ್ಲ. ಈ ವಿಷಯವನ್ನು ತಿಳಿದುಕೊಳ್ಳಬೇಕಾದರೂ ಸಂಸ್ಕಾರವಾಗಿರಬೇಕು. ಹುಟ್ಟಿದಂದಿನಿಂದ ಸಾಯುವವರೆಗೂ ದೇಹವೇ ಆತ್ಮವೆಂಬ ಸಂಸ್ಕಾರವಿರುತ್ತದೆಯೇ ಹೊರತು ದೇಹವು ಬೇರೆ ; ಆತ್ಮವು ಬೇರೆ–ಎಂದು ವಿವೇಕದಿಂದ ಚಿಂತಿಸುವ ಸಂಸ್ಕಾರವೇ ಇರುವುದಿಲ್ಲ. ಈ ಕಾರಣದಿಂದ ಆಧ್ಯಾತ್ಮಿಕಚಿಂತನೆಯೇ ಸಂಪೂರ್ಣವಾಗಿ ಅಳಿಸಿ ಹೋಗಿದೆ. ಶ್ರೀಕೃಷ್ಣನು ದ್ವಾಪರಯುಗದಲ್ಲಿಯೇ– 'ಅನೇಕ ಸಹಸ್ರ ಜನರಲ್ಲಿ ಒಬ್ಬನು ಆತ್ಮಸಿದ್ಧಿಗೆ ಪ್ರಯತ್ನಿಸುತ್ತಾನೆ'–ಎಂದು ಹೇಳಿದ್ದರೆ ಮೂರು ಭಾಗ ಧರ್ಮವನ್ನು ಕಳೆದುಕೊಂಡಿರುವ ಕಲಿಯುಗದ ವಿಷಯವನ್ನು ಹೇಳಬೇಕಾಗಿಯೇ ಇಲ್ಲ. ಆದರೆ ಒಂದು ವಿಷಯ ಮಾತ್ರ ನಿಜ; **ಕಲೌ ವೇದಾನ್ತಿನೋ ಭಾನ್ತಿ....** ಎಂದು ಹೇಳಿರುವಂತೆ ಕಲಿಯುಗದಲ್ಲಿ ವೇದಾಂತವನ್ನು ಹೇಳುವವರು ಅನೇಕರಿದ್ದಾರೆ. ಮಳೆಗಾಲದಲ್ಲಿ ನಾಯಿ ಕೊಡೆಗಳು ಹೇರಳವಾಗಿ ಬೆಳೆಯುವಂತೆ–ವಚನಬ್ರಹ್ಮದ ವೇದಾಂತಿಗಳು ಈಗ ಹೇರಳವಾಗಿ ಕಂಡುಬರುತ್ತಿದ್ದಾರೆ. ಪರಮಾರ್ಥಸಿದ್ಧಿಗೆ ಪ್ರಾಮಾಣಿಕ ವಾಗಿ ಶ್ರದ್ಧೆಯಿಂದ ಪ್ರಯತ್ನಿಸುವವರು ಅತಿವಿರಳ. ಹಾಗೆ ಪ್ರಯತ್ನಿಸುವ ಮಹನೀಯರಲ್ಲಿ ಪರಮಾತ್ಮತತ್ತ್ವವನ್ನು ನಿಜವಾಗಿಯೂ ಸ್ಪಷ್ಟವಾಗಿ ಅನು ಭವದಿಂದ ತಿಳಿದವರು ಅತ್ಯಂತವಿರಳ. ಅಭ್ಯಾಸಶೂರರೂ ವಿರಳ ; ಅನು ಭವಿಸಿದ ಕೃತಕೃತ್ಯರೂ ವಿರಳ.)

o o o

ಮೋಕ್ಷಕ್ಕೋಸ್ಕರ ಪ್ರಯತ್ನಿಸುವವರು ಕೂಡ ಒಂದು ಅರ್ಥದಲ್ಲಿ ಸಿದ್ಧರೇ. **ಸಿದ್ಧಾ ಏವ ಹಿ ತೇ ಯೇ ಮೋಕ್ಷಾಯ ಯತನ್ತೇ**

(ಶಂ. ಭಾ.)

**ಮನುಷ್ಯಾಣಾಂ** = ಇಲ್ಲಿ ಹೇಳಿರುವ ಮನುಷ್ಯಶಬ್ದವು ಜಾತಿವಿಶೇಷ ವಾಚಕವಲ್ಲ. ಶಾಸ್ತ್ರಾಧಿಕಾರಯೋಗ್ಯರಾದವರು. ಸಿದ್ಧ್ಯರ್ಥವಾಗಿ ಪ್ರಯತ್ನ ಮಾಡಲು ಯೋಗ್ಯರಾದವರೆಲ್ಲರೂ ಇದರಲ್ಲಿ ಅಡಕವಾಗುತ್ತಾರೆ. ಏಕೆಂದರೆ : ದೇವತೆಗಳಿಗೂ ಕೂಡ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಬ್ರಹ್ಮಸೂತ್ರ ದಲ್ಲಿ ಸಮರ್ಥಿಸಿದೆ. ಸಿದ್ಧಯೇ ಎಂದರೆ ಸಿದ್ಧಿಪರ್ಯಂತವಾಗಿ ಎಂದು ಅರ್ಥ. ಸಿದ್ಧಿಪರ್ಯಂತವಾಗಿ ಪ್ರಯತ್ನಮಾಡುವ ಸಾವಿರಾರು ಮಂದಿಯಲ್ಲಿ ನನ್ನನ್ನರಿತು ನನ್ನಿಂದ ಸಿದ್ಧಿಯನ್ನು ಪಡೆಯಲು ಪ್ರಯತ್ನಿಸುವವರು ವಿರಳ. ಇಂತಹವರಲ್ಲೂ ನನ್ನನ್ನು ಯಥಾವಸ್ಥಿತವಾಗಿ ಯಾರೂ ಅರಿಯಲಾರರು. **ಮಾಂ ತು ವೇದ ನ ಕಶ್ಚನ । ಸ ಮಹಾತ್ಮಾ ಸುದುರ್ಲಭಃ ।** ಎಂದು ಭಗವಂತನೇ ಮುಂದೆ ಹೇಳುತ್ತಾನೆ. (ರಾ. ಭಾ.)

ಜ್ಞಾನದ ದೌರ್ಲಭ್ಯವನ್ನು ಈ ಶ್ಲೋಕವು ಹೇಳುತ್ತದೆ. ಜ್ಞಾನವೇ ದುರ್ಲಭವಾಗಿರುವಾಗ ಇನ್ನು ವಿಜ್ಞಾನವು ದುರ್ಲಭವೆಂಬುದನ್ನು ಹೇಳ ಬೇಕಾಗಿಯೇ ಎಲ್ಲ–ಎಂದು ಶ್ರೀಜಯತೀರ್ಥರು ನಿರೂಪಿಸಿರುತ್ತಾರೆ.

**ಜ್ಞಾನಸ್ಯ ದೌರ್ಲಭೇ ವಿಜ್ಞಾನಸ್ಯ ತತ್ಸುತರಾಮ್**

ಶ್ರೀಕೃಷ್ಣನು ತನ್ನ ಸ್ವರೂಪವಿಸ್ತಾರವನ್ನು (ವಿಜ್ಞಾನವನ್ನು) ವರ್ಣಿ ಸುತ್ತಾನೆ.

**ಓಂ ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥೪॥**

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ–ಹೀಗೆ ನನ್ನ ಪ್ರಕೃತಿಯು ಎಂಟು ಭಾಗವಾಗಿರುತ್ತದೆ.

* * *

(ಇಲ್ಲಿ ಶ್ರೀಕೃಷ್ಣನು ತನ್ನ ಪ್ರಕೃತಿಯ ಎಂಟು ಬಗೆಗಳನ್ನು ಹೇಳು ತ್ತಾನೆ. ಇವುಗಳಿಂದಲೇ ಪ್ರಪಂಚದ ಸೃಷ್ಟಿ. ಈ ಎಂಟು ಪ್ರಕೃತಿಗಳು ಪ್ರಪಂಚಸೃಷ್ಟಿಗೆ ಉಪಯೋಗಿಸುವ ಅಸಿದ್ಧ (ಕಚ್ಚಾ) ಪದಾರ್ಥಗಳು.

ಪ್ರಪಂಚದಲ್ಲಿ ಹಿಂದಿದ್ದ, ಈಗಿರುವ, ಮುಂದೆ ಬರುವ ಎಲ್ಲ ವಸ್ತುಗಳೂ ಈ ಎಂಟು ಪ್ರಕೃತಿಗಳಿಂದಲೇ ಕೂಡಿದುವುಗಳಾಗಿವೆ.

ಇಲ್ಲಿ ಪೃಥಿವ್ಯಾದಿಸ್ಥೂಲಭೂತಗಳನ್ನು ಹೇಳಿಲ್ಲ. ಅವುಗಳಿಗೆ ಉಪಾದಾನ ಕಾರಣವಾದ ಆಯಾ ತನ್ಮಾತ್ರೆಗಳನ್ನು ಹೇಳಿದೆ. ತನ್ಮಾತ್ರೆಯೆಂದರೆ ಪಂಚಭೂತಗಳ ಅವ್ಯವಹಿತಸೂಕ್ಷ್ಮಾವಸ್ಥೆಯೊಡನೆ ಕೂಡಿದ ದ್ರವ್ಯ.

ಈಶ್ವರನನ್ನು ಅಷ್ಟಮೂರ್ತಿ ಎಂದು ಕರೆಯುತ್ತಾರೆ. ಪೃಥಿವ್ಯಾದಿ ಪಂಚ ತನ್ಮಾತ್ರೆಗಳು, ಸೂರ್ಯ-ಚಂದ್ರರು ಮತ್ತು ಯಜಮಾನ–ಈ ಎಂಟೂ ಈಶ್ವರನ ಮೂರ್ತಿಗಳು. ಸೂರ್ಯ-ಚಂದ್ರರನ್ನು ಬುದ್ಧಿ ಮತ್ತು ಮನಸ್ಸು ಗಳಿಗೂ, ಯಜಮಾನನನ್ನು ಅಹಂಕಾರಕ್ಕೂ ಹೋಲಿಸಬಹುದಾಗಿದೆ. ಈ ಎಂಟು ಬಗೆಯ ಪ್ರಕೃತಿಗಳನ್ನೇ ಶ್ರೀಕೃಷ್ಣನು ಇಲ್ಲಿ ವಿವರಿಸಿ ಹೇಳಿದ್ದಾನೆ. ಇವನಿಂದಲೇ (ಪುರುಷನಿಂದಲೇ) ಪ್ರಾಣವೂ, ಮನಸ್ಸೂ, ಸರ್ವೇಂದ್ರಿಯ ಗಳೂ, ಆಕಾಶ-ವಾಯು-ತೇಜಸ್ಸು-ನೀರುಗಳೂ, ವಿಶ್ವಧಾರಿಣಿಯಾದ ಪೃಥಿವಿಯೂ ಹುಟ್ಟುತ್ತವೆ.)

o o o

ಮನಃ ಎಂಬ ಶಬ್ದವು ಮನಸ್ಸಿಗೆ ಕಾರಣವಾದ ಅಹಂಕಾರವನ್ನೂ, ಬುದ್ಧಿಃ ಎಂಬುದು ಅಹಂಕಾರಕ್ಕೆ ಕಾರಣವಾದ ಮಹತ್ತತ್ತ್ವವನ್ನೂ, ಅಹಂಕಾರ ಎನ್ನುವುದು ಅವಿದ್ಯೆಯಿಂದ ಕೂಡಿದ ಅವ್ಯಕ್ತವನ್ನೂ ಹೇಳುತ್ತದೆ. ವಿಷಸಂಯುಕ್ತವಾದ ಅನ್ನವನ್ನು ವಿಷವೆಂದು ಹೇಳುವಂತೆ ಅಹಂಕಾರ ವಾಸನೆಯುಳ್ಳ ಅವ್ಯಕ್ತ (ಮೂಲಪ್ರಕೃತಿ) ವನ್ನೂ ಅಹಂಕಾರವೆಂದು ಕರೆಯಲಾಗಿದೆ. ಲೋಕದಲ್ಲಿ ಎಲ್ಲಕ್ಕೂ ಅಹಂಕಾರವೇ ಪ್ರವರ್ತಕ. ಎಲ್ಲ ಪ್ರವೃತ್ತಿಗಳಿಗೂ ಬೀಜ. (ಶಂ. ಭಾ.)

ಈ ವಿಚಿತ್ರವಾದ ಮತ್ತು ಅನಂತವಾದ, ಭೋಗ್ಯ-ಭೋಗೋಪಕರಣ-ಭೋಗಸ್ಥಾನರೂಪದಲ್ಲಿರುವ ಮತ್ತು ಗಂಧವೇ ಮುಂತಾದ ಗುಣವುಳ್ಳ, ಪೃಥಿವ್ಯಾದಿ ರೂಪದಲ್ಲೂ, ಮನಸ್ಸೇ ಮುಂತಾದ ಇಂದ್ರಿಯರೂಪದಲ್ಲೂ ಎಂಟು ಬಗೆಯಾಗಿರುವ ಪ್ರಕೃತಿಯು ನನ್ನದು ಎಂಬುದಾಗಿ ತಿಳಿ. (ರಾ. ಭಾ.)

ಹಿಂದೆ ಪ್ರತಿಜ್ಞೆಮಾಡಲ್ಪಟ್ಟ ಜ್ಞಾನವನ್ನು ಇಲ್ಲಿ ಭಗವಂತನು ಹೇಳು ತ್ತಾನೆ. ಮಹತ್ತೆಂಬುದನ್ನು ಇಲ್ಲಿ ಹೇಳದಿದ್ದರೂ ಅಹಂಕಾರಶಬ್ದಾರ್ಥದಲ್ಲೇ

ಅದು ಅಡಕವಾಗಿದೆ. ಕಾರ್ಯವಾಚಕವಾದ ಅಹಂಕಾರಶಬ್ದವು ಕಾರಣ ವಾಗಿರುವ ಮಹತ್ತಿಗೆ ಉಪಲಕ್ಷಣ. –ಶ್ರೀಜಯತೀರ್ಥರು.

**ಓಂ ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥**

ಮೇಲೆ ಹೇಳಿದ ನನ್ನ ಪ್ರಕೃತಿಯು (ಭಿನ್ನ-ಭಿನ್ನವಾದ ಎಂಟು ಪ್ರಕೃತಿ ಗಳು) ನಿಕೃಷ್ಟವಾದುವುಗಳು. ಇದಕ್ಕಿಂತಲೂ ಬೇರೆಯಾದ ಉತ್ಕೃಷ್ಟವಾದ ನನ್ನ ಪ್ರಕೃತಿಯನ್ನು ಹೇಳುವೆನು, ಅವಧರಿಸು. ಮಹಾಬಾಹುವೇ! ಅದು ಜೀವಭೂತವಾಗಿದೆ. ಅದೇ ಈ ಜಗತ್ತನ್ನು ಧರಿಸಿದೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಅಪರಾಪ್ರಕೃತಿಯ ವಿಷಯವನ್ನು ಹೇಳಿದನು. ಈ ಶ್ಲೋಕದಲ್ಲಿ ಪರಾಪ್ರಕೃತಿಯ ವಿಷಯವನ್ನು ಹೇಳುವೆನು ಎನ್ನುತ್ತಾನೆ. ಎಂಟು ವಿಧವಾದ ಅಪರಾಪ್ರಕೃತಿ ಮತ್ತು ಪರಾಪ್ರಕೃತಿ ಎರಡೂ ಸಹ ಪರಮಪುರುಷನಿಗೇ ಸೇರಿದುವುಗಳು. ಇವುಗಳಲ್ಲಿ ಪರಾಪ್ರಕೃತಿಯು ಜೀವಭೂತವಾದುದು ; ಚೈತನ್ಯರೂಪವಾದುದು.

ಪರಾಪ್ರಕೃತಿಯು ವಿಶ್ವವನ್ನು ಹೇಗೆ ಧರಿಸಿದೆಯೆಂದರೆ : ಅಪರಾಪ್ರಕೃತಿ ಯೊಡನೆ (ಜಡವಸ್ತುಗಳಲ್ಲಿ ) ಪರಾಪ್ರಕೃತಿಯು (ಜೀವವು) ಸೇರಿಕೊಳ್ಳದಿದ್ದರೆ ಪ್ರಪಂಚವೇ ಇಲ್ಲ. ಆದುದರಿಂದ ಜಗತ್ತಿನ ಉತ್ಪತ್ತಿ-ವಿಕಾಸಗಳಿಗೆ ಶುದ್ಧವಾದ ಪರಾಪ್ರಕೃತಿ ಅರ್ಥಾತ್ ಜೀವವೇ ಮುಖ್ಯಕಾರಣ. ಜೀವವಿಲ್ಲದಿದ್ದರೆ ಪಂಚಭೂತಾತ್ಮಕವಾದ ಈ ಶರೀರವಾಗಲೀ–ಮನಸ್ಸು, ಬುದ್ಧಿ, ಅಹಂಕಾರ ಗಳಾಗಲೀ ಇರಲು ಸಾಧ್ಯವಾಗುವುದೇ ಇಲ್ಲ. ಆದುದರಿಂದ ಜೀವಭೂತ ವಾದ, ಜೀವಸ್ವರೂಪವಾದ ಪರಮಾತ್ಮನ ಪರಾಪ್ರಕೃತಿಯೇ ಅಪರಾ ಪ್ರಕೃತಿಯನ್ನು ಎಂದರೆ ಜಡಜಗತ್ತನ್ನು ಧಾರಣೆಮಾಡಿದೆ. ಅದರ ಉತ್ಪತ್ತಿ-ವಿಕಾಸಗಳಿಗೆ ಕಾರಣವಾಗಿದೆ. **ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ** (ಛಾಂದೋಗ್ಯ ೬-೩-೨) ತೇಜಸ್ಸು, ನೀರು ಮತ್ತು ಪೃಥ್ವಿ ಇವುಗಳಿಗೆ ಕಾರಣವಾದ ಬ್ರಹ್ಮವು (ಪರಮಾತ್ಮನು) ಹೀಗೆಂದು ಯೋಚಿಸಿತು : 'ಈ ಜೀವಾತ್ಮನ ಮೂಲಕ ಒಳಹೊಕ್ಕು (ಎಂಟು ವಿಧವಾಗಿರುವ ಅಪರಾಪ್ರಕೃತಿಯ ಒಳಹೊಕ್ಕು ) ನಾಮ-ರೂಪಗಳನ್ನು ವಿಂಗಡಿಸುವೆನು.'

ಛಾಂದೋಗ್ಯದಲ್ಲಿರುವ ಈ ಮಂತ್ರಾರ್ಥವನ್ನೇ ಇಲ್ಲಿ ಶ್ರೀಕೃಷ್ಣನು ಹೇಳಿರುತ್ತಾನೆ.

ಉಪನಿಷತ್ತುಗಳಲ್ಲಿಯೂ ಪರಮಾತ್ಮನಿಂದಲೇ ಪ್ರಕೃತಿಯು ಹುಟ್ಟುವುದೆಂದು ಹೇಳುವ ಅನೇಕಮಂತ್ರಗಳಿವೆ. ಎಲ್ಲಕ್ಕೂ ಭಗವಂತನೇ ಕಾರಣ ಎಂಬ ವಿಷಯವನ್ನು ಉಪನಿಷತ್ತುಗಳೂ ಹೇಳುತ್ತವೆ.

**ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥**

ಮುಂಡಕ ೨-೧-೩

o o o

ಪರಾಪ್ರಕೃತಿಯು ಮೇಲೆ ಹೇಳಿದ ಪ್ರಕೃತಿಗಿಂತಲೂ ಬೇರೆಯಾದುದು. ಪರಿಶುದ್ಧವಾದುದು–ಜೀವರೂಪವಾದುದು ಎಂದರೆ ಪ್ರಾಣಧಾರಣೆಗೆ ನಿಮಿತ್ತವಾಗಿರುವ ಕ್ಷೇತ್ರಜ್ಞರೂಪವಾದುದು. ಇದು ಒಳಗೆ ಪ್ರವೇಶ ಮಾಡಿರುವುದರಿಂದಲೇ ಜಗತ್ತಿನ ಧಾರಣೆ. (ಶಂ. ಭಾ.)

ಹಿಂದಿನ ಶ್ಲೋಕದಲ್ಲಿ ಹೇಳಿದ್ದು ಅಪರಾಪ್ರಕೃತಿ. ಅಚೇತನವಾದುದು ಮತ್ತು ಚೇತನಕ್ಕೆ ಭೋಗ್ಯವಾದುದು. ಪ್ರಕೃತಿಯಿಂದ ವಿಜಾತೀಯವಾದುದು ಭಗವಂತನ ಪರಾಪ್ರಕೃತಿ. ಅದು ಚೇತನರೂಪವಾದುದು ಮತ್ತು ಭೋಕ್ತೃವಾಗಿರುವುದರಿಂದ ಮುಖ್ಯವಾದುದು. ಅಚೇತನವಾದ ಈ ಇಡೀ ಜಗತ್ತನ್ನು ಅದೇ ಧರಿಸಿದೆ. (ರಾ. ಭಾ.)

ಹಿಂದಿನ ಶ್ಲೋಕದಲ್ಲಿ ಹೇಳಿರುವುದು ಅಪರಾ ಎಂದರೆ ಅನುತ್ತಮವಾದ ಪ್ರಕೃತಿ. ಇಲ್ಲಿ ಹೇಳಿರುವ ಪ್ರಕೃತಿಯ ದೃಷ್ಟಿಯಿಂದ ಅದು ಅನುತ್ತಮವಾದುದು. ಪರಾಪ್ರಕೃತಿಯೆಂದರೆ ಜೀವಭೂತಳಾಗಿರುವ ಶ್ರೀದೇವೀ. ಅವಳು ಜೀವಗಳ ಪ್ರಾಣಧಾರಿಣೀ ; ಚಿದ್ರೂಪಳು. ಸದಾ ಸದ್ರೂಪಳು. ಭೂತ ಎಂಬುದಕ್ಕೆ 'ಸತೀ' ಎಂದು ಅರ್ಥ.

**ಏತನ್ಮಹದ್ಭೂತಂ** ಎಂಬಲ್ಲಿ ಶ್ರುತಿಯು ಭೂತಶಬ್ದಕ್ಕೆ ಇದೇ ಅರ್ಥವನ್ನು ಹೇಳುತ್ತದೆ. ಹಿಂದಿನ ಶ್ಲೋಕದಲ್ಲಿ ಹೇಳಿರುವುದು ಜಡಪ್ರಕೃತಿ. ಅದಕ್ಕೆ ಅವ್ಯಕ್ತ ಎಂದು ಹೆಸರು. ಅದು ಮಹತ್ತೇ ಮುಂತಾಗಿ ಎಂಟು ಬಗೆಯಾದುದು. ಇಲ್ಲಿ ಹೇಳಿರುವುದು ಚಿದ್ರೂಪಳೂ, ಅನಂತಳೂ, ಅನಾದಿನಿಧನಳೂ, ಸರ್ವ

ಮಾತೆಯೂ ಆಗಿರುವ ಶ್ರೀ. ಈ ಎರಡು ಪ್ರಕೃತಿಗಳಿಂದಲೇ ಭಗವಂತನು ಎಲ್ಲ ಜಗತ್ತನ್ನೂ ಸೃಷ್ಟಿಸುತ್ತಾನೆ. (ಮ.ಭಾ.)

**ಓಂ ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥೬॥**

ಸರ್ವಪ್ರಾಣಿಗಳೂ ಈ ಪ್ರಕೃತಿಗಳಿಂದಲೇ ಹುಟ್ಟುವುವೆಂದು ನಿಶ್ಚಯಿಸು. ನಾನು ಈ ಜಗತ್ತಿನ ಉತ್ಪತ್ತಿಗೆ ಮತ್ತು ಲಯಕ್ಕೆ ಕಾರಣನಾಗಿರುತ್ತೇನೆ.

* * *

(ಪ್ರಪಂಚದ ಮತ್ತು ಅದರಲ್ಲಿರುವ ಚರಾಚರಗಳು—ಇವುಗಳೆಲ್ಲವೂ ನನ್ನ ಪರಾ ಮತ್ತು ಅಪರಾಪ್ರಕೃತಿಗಳಿಂದಲೇ ಹುಟ್ಟಿದುವುಗಳಾಗಿವೆ. ಅರ್ಥಾತ್ ಈ ಜಗತ್ತಿಗೆ ನಾನೇ ಕಾರಣನಾಗಿರುತ್ತೇನೆ. ಆದುದರಿಂದ ಅಖಂಡ ವಿಶ್ವಕ್ಕೂ ನಾನೇ ಪ್ರಭವನು. ವಿಶ್ವದ ಪ್ರಭವಕ್ಕೆ ಕಾರಣನು. ವಿಶ್ವದ ಹುಟ್ಟುವಿಕೆಗೆ ಕಾರಣನು ಮತ್ತು ಪ್ರಳಯಕ್ಕೂ ಕಾರಣನು. ಸಮಸ್ತಜಗತ್ತೂ ಸಹ ಪರಮಾತ್ಮನಿಂದಲೇ ಹುಟ್ಟಿ—ಪರಮಾತ್ಮನಲ್ಲೇ ಲಯಹೊಂದುತ್ತದೆ.)

O O O

ಕ್ಷೇತ್ರಜ್ಞರೂಪವಾದ ಈ ನನ್ನ ಎರಡು ಪ್ರಕೃತಿಗಳೇ ಎಲ್ಲ ಭೂತಗಳಿಗೂ ಕಾರಣ. ಆದುದರಿಂದ ಇಡೀ ಜಗತ್ತಿನ ಉತ್ಪತ್ತಿ-ನಾಶಗಳಿಗೂ ಪ್ರಕೃತಿದ್ವಯಗಳ ಮೂಲಕ ಸರ್ವಜ್ಞನೂ ಈಶ್ವರನೂ ಆದ ನಾನೇ ಕಾರಣ. **ಪ್ರಕೃತಿದ್ವಯದ್ವಾರೇಣ ಅಹಂ ಸರ್ವಜ್ಞಃ ಈಶ್ವರಃ ಜಗತಃ ಕಾರಣಂ** (ಶಂ. ಭಾ.)

ಬ್ರಹ್ಮಾದಿ ಸ್ತಂಭಪರ್ಯಂತವಾದ ಚಿದಚಿನ್ಮಿಶ್ರವಾಗಿರುವ ಜಗತ್ತೆಲ್ಲವೂ ಚೇತನಾಚೇತನಸಮಷ್ಟಿರೂಪವಾದ ನನ್ನ ಎರಡು ಪ್ರಕೃತಿಗಳಿಂದಲೇ ಉಂಟಾದುವುಗಳು. ನನ್ನ ಎರಡು ಪ್ರಕೃತಿಗಳಿಂದ ಹುಟ್ಟಿರುವುದರಿಂದ ಆ ಭೂತಗಳೆಲ್ಲವೂ ನನ್ನವೇ ಆಗಿವೆ. ಆದುದರಿಂದ ಇಡೀ ಜಗತ್ತಿಗೆ ನಾನೇ ಕಾರಣ, ಪ್ರಳಯ ಮತ್ತು ಶೇಷಿ. **ವಿಷ್ಣೋಃ ಸ್ವರೂಪಾತ್ ಪರತೋದಿತೇ ದ್ವೇ ರೂಪೇ ಪ್ರಧಾನಂ ಪುರುಷಶ್ಚ ವಿಪ್ರ । ವಿ. ಪು.** (ರಾ. ಭಾ.)

ಪರಾ ಮತ್ತು ಅಪರಾಪ್ರಕೃತಿಗಳು ನನ್ನ ವಶದಲ್ಲಿವೆ—ಎಂದರೆ ಇಷ್ಟು

ಮಾತ್ರವೇ ನನ್ನ ಐಶ್ವರ್ಯವಲ್ಲ, ಜಗತ್ತಿನ ಜನ್ಮ-ಸ್ಥಿತಿ-ಲಯಗಳೂ ನನಗೆ ಅಧೀನ. ನನ್ನ ಪ್ರಕೃತಿಗಳು ಜಗತ್ತಿಗೆ ಕಾರಣವಾಗಿರುವುದೂ ಕೂಡ ನನ್ನ ಇಚ್ಛೆಯಿಂದಲೇ. –ಶ್ರೀಜಯತೀರ್ಥರು.

**ಓಂ ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥೭॥**

ಧನಂಜಯ! ನನಗಿಂತಲೂ ಇನ್ನೂ ಹೆಚ್ಚಿನ ಮತ್ತೊಂದು ಯಾವುದೂ ಇಲ್ಲ. ದಾರದಲ್ಲಿ ಮಣಿಗಳ ಸಮೂಹಗಳಂತೆ ನನ್ನಲ್ಲಿ ಇವೆಲ್ಲವೂ ಪೋಣಿಸಲ್ಪಟ್ಟಿವೆ.

*  *  *

(ಪರಾಪರಾಪ್ರಕೃತಿಗಳ ಮೂಲಕವಾಗಿ ಸರ್ವಜ್ಞನಾದ ಈಶ್ವರನಾದ ನಾನೇ ಈ ಜಗತ್ತಿಗೇ ಕಾರಣನಾಗಿದ್ದೇನೆ. ನನಗಿಂತಲೂ ಅತಿರಿಕ್ತವಾದುದು ಮತ್ತು ಶ್ರೇಷ್ಠವಾದುದು ಜಗತ್ತಿಗೆ ಕಾರಣವಾದುದು ಬೇರೆ ಯಾವುದೂ ಇಲ್ಲ–ಎನ್ನುತ್ತಾನೆ ಶ್ರೀಕೃಷ್ಣ. **ಪರತರಂ** ಎನ್ನುವುದಕ್ಕೆ ಬೇರೆಯಾದುದು ; ಅಥವಾ ಶ್ರೇಷ್ಠವಾದುದು ಎಂದು ಅರ್ಥ. ಭಗವಂತನು ಜಗತ್ಕಾರಣವಾದ ಪರಾಪರಾಪ್ರಕೃತಿಗಳಿಗೂ ಸ್ವಾಮಿಯಾಗಿರುವುದರಿಂದ ಅವನನ್ನು ಬಿಟ್ಟು ಜಗತ್ತಿಗೆ ಬೇರೆ ಯಾವ ಕಾರಣವೂ ಇಲ್ಲ. ಸರ್ವಕಾರಣನಾದ ಅವನಿಂದ ವ್ಯತಿರಿಕ್ತವಾದುದೂ ಯಾವುದೂ ಇಲ್ಲ. ಎಲ್ಲಕ್ಕೂ ಆಧಾರನೂ ಆಗಿರುವುದರಿಂದ ಅವನು ಸರ್ವಶ್ರೇಷ್ಠನೂ ಆಗಿದ್ದಾನೆ. ಪರಾಪರಾಪ್ರಕೃತಿಗಳೆರಡೂ ಅವನವೇ ಆದಮೇಲೆ ಅವನಿಗಿಂತಲೂ ಬೇರೊಂದು ಕಾರಣವಿರಲು ಹೇಗೆ ತಾನೇ ಸಾಧ್ಯವಾಗುತ್ತದೆ? ದಾರದಲ್ಲಿರುವ ಮಣಿಗಳಂತೆ ಈ ಪರಾಪರಾಪ್ರಕೃತಿಗಳು ಭಗವಂತನಲ್ಲಿಯೇ ಹೆಣೆದುಕೊಂಡಿವೆ ಅವನು ಅವುಗಳಲ್ಲಿ ಅಂತರ್ಗತನಾಗಿರದಿದ್ದರೆ ಆಗಲೂ ಅವುಗಳು ಉಳಿಯಲಾರವು. ತಂದೆಯು ಹುಟ್ಟಿದ ಮಗುವಿಗೆ **ಆತ್ಮಾ ವೈ ಪುತ್ರನಾಮಾ**ಸಿ ಎಂದು ಹೇಳುವಂತೆ ಮತ್ತು ತಂದೆಯೇ ಪುತ್ರರೂಪನಾಗಿರುವಂತೆ ಪರಮಾತ್ಮನಿಂದ ಹೊರಟ ಪರಾಪರಾ ಪ್ರಕೃತಿಗಳು ಪರಮಾತ್ಮನ ರೂಪವೇ ಆಗಿವೆ. ಪರಮಾತ್ಮನಿಲ್ಲದೇ ಪ್ರಕೃತಿ ಯಿಲ್ಲ. ಪ್ರಕೃತಿಯಿಲ್ಲದೇ ಪರಮಾತ್ಮನೊಬ್ಬನೇ ಇರಬಹುದು. ತಂದೆ ಯಿಲ್ಲದೇ ಮಗನು ಹುಟ್ಟಲಾರ. ಮಕ್ಕಳಾಗದಿರುವ ಮನುಷ್ಯನಿರಬಹು ದಲ್ಲವೇ?

ಅರ್ಥಾತ್ ಪರಾಪರಾಪ್ರಕೃತಿಗಳು ಪರಮಾತ್ಮನಿಂದಲೇ ಪ್ರಾದುರ್ಭೂತವಾದುವುಗಳು. ಈ ಪರಾಪರಾಪ್ರಕೃತಿಗಳಲ್ಲಿಯೂ ಪರಮಾತ್ಮನ ಆವಿರ್ಭಾವವಿದೆ.

ಭಗವಂತನು ಇಲ್ಲಿ ಹೇಳಿರುವ ಉಪಮಾನವು ಅತ್ಯಂತರಮಣೀಯವಾಗಿದೆ. ಸೂತ್ರವು ಮಣಿಗಣಗಳನ್ನು ಧರಿಸಿರುವಂತೆ–ಭಗವಂತನು ಎಲ್ಲ ಭೂತಗಳಿಗೂ ಧಾರಕ ಮತ್ತು ಎಲ್ಲಕ್ಕೂ ಆಧಾರ. ಸೂತ್ರವು ಎಲ್ಲ ಮಣಿಗಳ ಒಳಹೊಕ್ಕಿರುವಂತೆ–ಭಗವಂತನು ಸರ್ವಾಂತರ್ಯಾಮೀ. **ಅನ್ತಃ ಪ್ರವಿಷ್ಟಂ ಕರ್ತಾರಮೇತಂ.** ಮಣಿಗಳು ಬೇರೆ ಬೇರೆ ಬಣ್ಣ, ಕಾಂತಿ, ಗಾತ್ರಗಳಿಂದ ಕೂಡಿದ್ದರೂ ಅವುಗಳಲ್ಲಿ ಸೂತ್ರವು ಮಾತ್ರ ಸಮವಾಗಿ ಸೇರಿಕೊಂಡಿರುವಂತೆ–ವೈವಿಧ್ಯಪೂರ್ಣವಾದ ಭೂತಗಳಲ್ಲಿ ಏಕರೂಪವಾದ ಸರ್ವಸಮವಾದ ಬ್ರಹ್ಮವು ಅಡಗಿದೆ. ಸೂತ್ರವು ವಿಸ್ತಾರವಾಗಿರುವಂತೆ ಬ್ರಹ್ಮವು ಬೃಹತ್ತ್ವಗುಣದಿಂದ ಕೂಡಿದೆ. (ವಿಸ್ತೃತವಾಗಿದೆ.) ಸೂತ್ರವು ಮಣಿಗಳನ್ನು ಒಟ್ಟಿಗೆ ಧರಿಸಿರದಿದ್ದರೆ ಅವುಗಳು ಒಂದುಗೂಡಿ ಏಕಾರ್ಥಸಾಧನೆಗೆ ಬರುತ್ತಿರಲಿಲ್ಲ. ಅಂತೆಯೇ ಎಲ್ಲ ಭೂತಗಳೂ ಅವ್ಯವಸ್ಥೆಹೊಂದದೇ ಒಂದೇ ಅರ್ಥಕ್ಕಾಗಿ ನಿಯುಕ್ತವಾಗಿರುವುದು ಪರಮಾತ್ಮನು ಸೂತ್ರರೂಪನಾಗಿ ಅವುಗಳಲ್ಲಿರುವುದರಿಂದಲೇ. ಮಣಿಗಳು ಹೊರಗೆ ಕಾಣುತ್ತಿದ್ದರೂ ಸೂತ್ರವು ಅವುಗಳೊಳಗೆ ಮರೆಯಾಗಿರುವಂತೆ–ಭಗವಂತನು ಭೂತಗಳೊಳಗೆ ನಿಗೂಢನಾಗಿದ್ದಾನೆ. ಸೂತ್ರವು ಮಣಿಗಳಿಂದ ವ್ಯತಿರಿಕ್ತವಾಗಿರುವಂತೆ–ಭಗವಂತನು ದೇಹಾದ್ಯತಿರಿಕ್ತನಾದವನು. ಸೂತ್ರವು ಮಣಿಗಳನ್ನೆಲ್ಲಾ ಧರಿಸಿದ್ದರೂ ಅವುಗಳಲ್ಲಿ ಅಂಟಿಕೊಳ್ಳದೇ ಇರುವಂತೆ–ಭಗವಂತನು ಭೂತಗಳಲ್ಲಿ ಅಂತರ್ಯಾಮಿಯಾಗಿದ್ದರೂ ಅವುಗಳ ಗುಣ-ದೋಷಗಳ ಸ್ಪರ್ಶವಿಲ್ಲದೇ ಇರುತ್ತಾನೆ. ಅಂಟಿಯೂ ಅಂಟದಂತೆ ಅವುಗಳಲ್ಲಿ ಸೇರಿಕೊಂಡಿರುತ್ತಾನೆ.)

o o o

ಉದ್ದವಾದ ದಾರಗಳಲ್ಲಿ ವಸ್ತ್ರವು ಇರುವಂತೆಯೂ ಮತ್ತು ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟಿರುವಂತೆಯೂ–ಪರಮೇಶ್ವರನಲ್ಲಿ ಎಲ್ಲವೂ ಅನುಸ್ಯೂತವಾಗಿವೆ, ಅನುಗತವಾಗಿವೆ. ಪೋಣಿಸಲ್ಪಟ್ಟಿವೆ. ( ಶಂ. ಭಾ.)

ಪರಾಪರಾ ಎಂಬ ಪ್ರಕೃತಿದ್ವಯಕ್ಕೆ ಕಾರಣನಾಗಿರುವುದರಿಂದಲೂ, ಎಲ್ಲ ಅಚೇತನವಸ್ತುಗಳಿಗೆ ಶೇಷಿಯಾಗಿರುವ ಚೇತನಕ್ಕೂ ಶೇಷಿಯಾಗಿರು

ವುದರಿಂದಲೂ ನಾನೇ ಎಲ್ಲಕ್ಕಿಂತಲೂ ಶ್ರೇಷ್ಠನಾದವನು. ಜ್ಞಾನ, ಶಕ್ತಿ, ಬಲ ಮುಂತಾದ ಗುಣಗಳ ಯೋಗದಿಂದಲೂ ನಾನೇ ಎಲ್ಲಕ್ಕಿಂತಲೂ ಶ್ರೇಷ್ಠನು. ನನಗಿಂತಲೂ ಬೇರೆಯಾಗಿ ಜ್ಞಾನ-ಬಲಾದಿ ಗುಣಾಂತರಯೋಗವುಳ್ಳ ಶ್ರೇಷ್ಠವಸ್ತುವು ಯಾವುದೂ ಇಲ್ಲ. ಕಾರ್ಯಾವಸ್ಥೆ ಮತ್ತು ಕಾರಣಾ ವಸ್ಥೆಗಳಲ್ಲಿದ್ದು ನನಗೆ ಶರೀರವಾಗಿರುವ ಈ ಚಿದಚಿದ್ವಸ್ತುಗಳೆಲ್ಲವೂ ಸೂತ್ರ ಗಳಲ್ಲಿ ಮಣಿಗಣದಂತೆ ಎಲ್ಲಕ್ಕೂ ಆತ್ಮವಾಗಿರುವ ನನ್ನಲ್ಲೇ ಪೋಣಿಸಲ್ಪಟ್ಟಿವೆ, ನನ್ನಲ್ಲಿ ಆಶ್ರಿತವಾಗಿವೆ. ಎಲ್ಲಕ್ಕೂ ನಾನೇ ಚೈತನ್ಯ ಮತ್ತು ಅಂತರ್ಯಾಮೀ. **ಯಸ್ಯ ಪೃಥಿವೀ ಶರೀರಂ ಯಸ್ಯಾತ್ಮಾ ಶರೀರಂ (ಬೃಹದಾರಣ್ಯಕ) ಏಷ ಸರ್ವಭೂತಾನ್ತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ (ಜಾಬಾಲೋಪನಿಷತ್ತು )** (ರಾ. ಭಾ.)

ನಾನೇ ಪರತತ್ತ್ವನಾದವನು. ನನ್ನನ್ನು ಬಿಟ್ಟು ಪರತರವಾದುದು ಬೇರೆ ಯಾವುದೂ ಇಲ್ಲ. ಇಲ್ಲಿ ಹೇಳಿರುವುದು ಜ್ಞಾನವನ್ನು. ರಸೋಹಮಪ್ಸು ಇತ್ಯಾದಿ ಶ್ಲೋಕಗಳಲ್ಲಿ ಹೇಳಿರುವುದು ವಿಜ್ಞಾನವನ್ನು. (ಮ. ಭಾ.)

**ಪ್ರೋತಂ** = ಪೋಣಿಸಲ್ಪಟ್ಟಿದೆ ಎಂಬ ಶಬ್ದವು ಭಗವಂತನ ಅನು ಪ್ರವೇಶ–ಆಶ್ರಯಭಾವಗಳನ್ನು ಸೂಚಿಸುವಂತೆ ಎಲ್ಲವೂ ಭಗವಂತನಿಗೆ ಶರೀರ ಎಂಬುದನ್ನು ಸೂಚಿಸುತ್ತದೆ. ಭಗವಂತನ ಸರ್ವಾಧಾರತ್ವ, ಅನುಪ್ರವಿ ಷ್ಟತ್ವ, ಗೂಢತ್ವ ಮತ್ತು ಆಧೇಯವಾದ ಪ್ರಕೃತಿಗೆ ಅಧೀನವಾಗದಿರುವಿಕೆ– ಇವುಗಳನ್ನೂ ಸೂತ್ರದ ದೃಷ್ಟಾಂತವು ತಿಳಿಸುತ್ತದೆ. –ಶ್ರೀವೇದಾಂತದೇಶಿಕರು

**ಓಂ ರಸೋऽಹಮಪ್ಸು ಕೌನ್ತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥೮॥**

ಕೌಂತೇಯ! ನಾನು ನೀರಿನಲ್ಲಿ ರಸ. ಸೂರ್ಯ-ಚಂದ್ರರಲ್ಲಿ ತೇಜಸ್ಸೇ ನಾನಾಗಿದ್ದೇನೆ. ಸರ್ವವೇದಗಳಲ್ಲಿಯೂ ನಾನು ಓಂಕಾರನಾಗಿದ್ದೇನೆ. ಆಕಾಶದಲ್ಲಿ ನಾನು ಶಬ್ದರೂಪನಾಗಿದ್ದೇನೆ. ಪುರುಷರಲ್ಲಿ ಪರಾಕ್ರಮವೇ ನಾನಾಗಿದ್ದೇನೆ.

* * *

(ತಾನು ಪರಾಪರಾಪ್ರಕೃತಿಗಳಲ್ಲಿ ಹೇಗೆ ಹಾಸುಹೊಕ್ಕಾಗಿರುವನೆಂಬು ದನ್ನು ಶ್ರೀಕೃಷ್ಣನಿಲ್ಲಿ ವಿವರಿಸುತ್ತಾನೆ :

ರಸವೇ ನೀರಿನ ಸಾರ ಮತ್ತು ಆತ್ಮಭೂತವಾದುದು. ಹೀಗೆಯೇ ಪ್ರಭೆಯು ಚಂದ್ರ-ಸೂರ್ಯರಲ್ಲೂ, ಪ್ರಣವವು ವೇದಗಳಲ್ಲೂ, ಶಬ್ದವು ಆಕಾಶದಲ್ಲೂ, ಪೌರುಷವು ಪುರುಷನಲ್ಲೂ, ಪುಣ್ಯಗಂಧವು ಪೃಥಿವಿಯಲ್ಲೂ, ತೇಜಸ್ಸು ಅಗ್ನಿಯಲ್ಲೂ, ಜೀವಗಳು ಜೀವಿಗಳಲ್ಲೂ, ತಪಸ್ಸು ತಪಸ್ವಿಗಳಲ್ಲೂ, ಬುದ್ಧಿಯು ಬುದ್ಧಿವಂತರಲ್ಲೂ, ತೇಜಸ್ಸು ತೇಜಸ್ವಿಗಳಲ್ಲೂ, ಶುದ್ಧವಾದ ಬಲವು ಬಲಿಷ್ಠರಲ್ಲೂ ಕ್ರಮವಾಗಿ ಅವುಗಳ ಸಾರಭೂತವಾಗಿ ಆತ್ಮರೂಪವಾಗಿ ಅವುಗಳು ಆಯಾಧರ್ಮಗಳುಳ್ಳವೆಂಬ ವ್ಯವಹಾರಕ್ಕೆ ಕಾರಣವಾಗಿರುತ್ತವೆ.

'ನೀರಿನಲ್ಲಿ ರಸ ನಾನು' ಎನ್ನುತ್ತಾನೆ ಶ್ರೀಕೃಷ್ಣ. ರಸವಿಲ್ಲದಿದ್ದರೆ ನೀರೇ ಇರಲಾರದು. ಪಂಚಭೂತಗಳಲ್ಲೊಂದಾದ ನೀರೇ ನಾನು ಎಂಬ ಅರ್ಥವೇ ಇದು. ಚಂದ್ರ-ಸೂರ್ಯರ ಪ್ರಭೆಯೇ ನಾನು ಎನ್ನುತ್ತಾನೆ. ಪ್ರಭೆಯಿಲ್ಲದಿದ್ದರೆ ಅವರಿಗೆ ಚಂದ್ರ-ಸೂರ್ಯತ್ವವೇ ಇರುವುದಿಲ್ಲ. ಸರ್ವವೇದಗಳಲ್ಲಿಯೂ ನಾನು ಪ್ರಣವ ಎನ್ನುತ್ತಾನೆ. ವೇದಗಳ ಪ್ರಾದುರ್ಭಾವವೇ ಪ್ರಣವದಿಂದ ಅಥವಾ ಓಂಕಾರದಿಂದ. ಓಂಕಾರವಿಲ್ಲದಿದ್ದರೆ ವೇದಗಳೇ ಇಲ್ಲ. ಆದುದರಿಂದ ನಾನು 'ಓಂಕಾರ' ಎಂದರೆ ನನ್ನ ವಿಸ್ತಾರವೇ ವೇದಗಳು ಎಂದಂತಾಯಿತು. ಆಕಾಶದಲ್ಲಿ ಶಬ್ದವೇ ನಾನು ಎನ್ನುತ್ತಾನೆ. ಶಬ್ದವೇ ಆಕಾಶದ ಗುಣ. ಮನುಷ್ಯರಲ್ಲಿ ಪೌರುಷವು ನಾನೇ ಎನ್ನುತ್ತಾನೆ. ಪೌರುಷ ಎಂದರೆ ಪುರುಷನ ಸ್ವಭಾವ. ಪುರುಷನ ಸ್ವಭಾವವನ್ನೇ ತೆಗೆದುಹಾಕಿಬಿಟ್ಟರೆ ಅವನು ಪುರುಷ ಎನಿಸಿಕೊಳ್ಳುವುದೇ ಇಲ್ಲ. ಆದುದರಿಂದ 'ಪುರುಷನ ಸಾರ ನಾನೇ' ಎಂದಂತಾಯಿತು. 'ಬಲ್ಬ್‌ನಲ್ಲಿರುವ ವಿದ್ಯುತ್ ನಾನಾಗಿದ್ದೇನೆ.' ಎಂದು ಹೇಳಿದ ಹಾಗೆ. ವಿದ್ಯುತ್ ಹರಿಯುವುದಾಗಿದ್ದರೆ ಅಲ್ಲಿ ಬಲ್ಬಿಗೆ ಒಂದು ಸ್ಥಾನ. ವಿದ್ಯುತ್ತೇ ಇಲ್ಲದಿದ್ದರೆ ಬಲ್ಬ್ ಇದ್ದು ಪ್ರಯೋಜನವೇನು? ಆದರೆ ವಿದ್ಯುತ್ತಿನ ಪ್ರಕಾಶಕ್ಕೆ ಬಲ್ಬ್ ಆವಶ್ಯಕ. ಆದುದರಿಂದ ಬಲ್ಬಿನಲ್ಲಿರುವ ವಿದ್ಯುತ್ತು ನಾನೇ ಎಂದರೂ ಒಂದೇ, ಬಲ್ಬೇ ನಾನು ಎಂದರೂ ಒಂದೇ ಆಗುತ್ತದೆ. ವ್ಯತ್ಯಾಸವೇನೂ ಇಲ್ಲ. ಪರಾಪರಾಪ್ರಕೃತಿಗಳಲ್ಲಿ ಅವನೇ ತುಂಬಿ ಕೊಂಡುಬಿಟ್ಟಿದ್ದಾನೆ ಎಂದರ್ಥ.)

O O O

ನೀರಿನ ಸಾರವಾದ ಯಾವ ರಸವುಂಟೋ ಅಂತಹ ರಸಸ್ವರೂಪನಾದ

ನನ್ನಲ್ಲಿ ನೀರು ಪೋಣಿಸಲ್ಪಟ್ಟಿದೆ. ಹಾಗೆಯೇ ಉಳಿದ ವಿಷಯಗಳಲ್ಲೂ ನೀರಿನಲ್ಲಿ ರಸವು ಇರುವಂತೆ ಚಂದ್ರ-ಸೂರ್ಯರಲ್ಲಿ ಕಾಂತಿಯು ನಾನೇ. ಎಲ್ಲ ವೇದಗಳಲ್ಲಿಯೂ ಓಂಕಾರವು ನಾನೇ. ಎಂದರೆ ಪ್ರಣವಸ್ವರೂಪನಾದ ನನ್ನಲ್ಲಿ ಎಲ್ಲ ವೇದಗಳೂ ಪೋಣಿಸಲ್ಪಟ್ಟಿವೆ. ಅಂತೆಯೇ ಆಕಾಶದ ಸಾರವಾದ ಶಬ್ದದಂತಿರುವ ನನ್ನಲ್ಲಿ ಆಕಾಶವು ಪೋಣಿಸಲ್ಪಟ್ಟಿದೆ. ಪುರುಷರಲ್ಲಿರುವ ಸಾರವಾದ ಪೌರುಷವಾಗಿರುವ ನನ್ನಲ್ಲಿ ಪುರುಷರು ಪೋಣಿಸಲ್ಪಟ್ಟಿದ್ದಾರೆ.

(ಶಂ. ಭಾ.)

ಎಲ್ಲವೂ ಪರಮಪುರುಷನ ಶರೀರವಾಗಿರುವುದರಿಂದ ಆತ್ಮಭೂತನಾದ ಪರಮಪುರುಷನ ಪ್ರಕಾರವೇ ಎಲ್ಲವೂ ಆಗಿದೆ. ಸರ್ವಪ್ರಕಾರಗಳಾಗಿ ಪರಮಪುರುಷನೇ ಇದ್ದಾನೆ. ಆದುದರಿಂದ ಎಲ್ಲ ಶಬ್ದಗಳಿಂದಲೂ ಹೇಳಲ್ಪಡುವವನೂ ಅವನೇ. ಆದುದರಿಂದ ಆಯಾವಸ್ತುಗಳೆಲ್ಲವೂ ಅವನೇ ಎಂದು ಸಾಮಾನಾಧಿಕರಣ್ಯವನ್ನು ಹೇಳಿದೆ. 'ನೀರಿನಲ್ಲಿರುವ ರಸ, ಚಂದ್ರ-ಸೂರ್ಯರಲ್ಲಿರುವ ಪ್ರಭೆ–ಇತ್ಯಾದಿ ವಿಲಕ್ಷಣಭಾವಗಳೆಲ್ಲವೂ ನನ್ನಿಂದಲೇ ಉಂಟಾಗಿವೆ. ನನಗೆ ಶೇಷಭೂತವಾಗಿವೆ. ನನಗೆ ಶರೀರದಂತೆ ನನ್ನಲ್ಲಿ ಆವರಿಸಲ್ಪಟ್ಟಿವೆ. ಆದುದರಿಂದ ನಾನೇ ಆಯಾಪ್ರಕಾರವಾಗಿ ಇರುವವನು.'

(ರಾ. ಭಾ.)

ನೀರು ಮುಂತಾದುವುಗಳು ಅವನಿಂದಲೇ ಉಂಟಾಗುತ್ತವೆ. ಹಾಗೆಯೇ ರಸಾದಿ ಸ್ವಭಾವಗಳೂ ಮತ್ತು ಸಾರಗಳೂ, ಸ್ವಭಾವ ಮತ್ತು ಸಾರವಾಗಿರುವುದಕ್ಕೆ ವಿಶೇಷವಾಗಿ ನಿಯಾಮಕನೂ ಅವನೇ. ರಸವೇ ಮುಂತಾದುವುಗಳ ಅಸ್ತಿತ್ವಕ್ಕೆ ಕಾರಣನೂ ಮತ್ತು ಅವುಗಳ ಭೋಕ್ತೃವೂ ಭಗವಂತನೇ ಆಗಿರುವುದರಿಂದ ಆ ರಸಾದಿಗಳೂ ಭಗವಂತನೇ ಎಂದು ಹೇಳಿದೆ. 'ಪರಮೇಶ್ವರನ ರಸಾದಿಗಳ ಭೋಗಗಳು ನೀರು ಮುಂತಾದುವು ಗಳ ಭೋಗಕ್ಕಿಂತಲೂ ಅತಿಶಯವಾಗಿರುತ್ತದೆ'–ಎಂಬುದನ್ನೂ ವಿಶೇಷಶಬ್ದ ಗಳು ಸೂಚಿಸುತ್ತವೆ ಮತ್ತು 'ನೀರಿನಲ್ಲಿ ರಸವೇ ಅವನು' ಎಂದು ಉಪಾಸನೆ ಮಾಡಬೇಕಾಗಿರುವುದನ್ನೂ ವಿಶೇಷಶಬ್ದಗಳು ಸೂಚಿಸುತ್ತವೆ. (ಮ. ಭಾ.)

ಮುಂದೆ ಶ್ರೀಕೃಷ್ಣನು ಈ ವಿಷಯವನ್ನೇ ಸ್ಪಷ್ಟಪಡಿಸುತ್ತಾ ಹೋಗುತ್ತಾನೆ.

**ಓಂ ಪುಣ್ಯೋ ಗನ್ಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥**

ಭೂಮಿಯಲ್ಲಿ ಪುಣ್ಯವಾದ ಗಂಧವೂ, ಅಗ್ನಿಯಲ್ಲಿ ತೇಜಸ್ಸೂ, ಸರ್ವ ಪ್ರಾಣಿಗಳಲ್ಲಿ ಜೀವನವೂ, ತಪಸ್ವಿಗಳಲ್ಲಿ ತಪಸ್ಸೂ ನಾನೇ ಆಗಿರುತ್ತೇನೆ.

*   *   *

(ಪೃಥಿವೀ, ಜಲ, ಅಗ್ನಿ, ವಾಯು ಮತ್ತು ಆಕಾಶ–ಇವುಗಳಿಗೆ ಅನುಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದ–ಇವುಗಳೇ ಮುಖ್ಯ ಗುಣಗಳು.

ಪೃಥಿವಿಗೆ ಗಂಧವೇ ಮುಖ್ಯಗುಣ. ಈ ಗುಣವು ಬೇರೆ ಯಾವ ತತ್ತ್ವದಲ್ಲಿಯೂ ಇಲ್ಲ. ಹೂವು-ಹಣ್ಣು ಮುಂತಾದ ಯಾವುದೇ ಪದಾರ್ಥಗಳಲ್ಲಿ ಗಂಧವಿದ್ದರೂ ಅದು ಪೃಥಿವೀತತ್ತ್ವದ ಸಂಬಂಧದಿಂದಲೇ ಬಂದಿರುತ್ತದೆ. ಹೀಗೆ ಪೃಥ್ವಿಯ ಸಾರಗುಣವಾಗಿರುವ ಗಂಧವೆಂಬುದು ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಪವಿತ್ರವಾದ ಯಾವ ಗಂಧವು ಪೃಥಿವಿಯ ಸಾರವಾಗಿದೆಯೋ ಅದು ತಾನೇ ಎನ್ನುತ್ತಾನೆ, ಭಗವಂತ. ಅಗ್ನಿಯಲ್ಲಿ ತೇಜಸ್ಸಾಗಿದ್ದೇನೆ ಎನ್ನುತ್ತಾನೆ. **'ಅಗ್ನೇ ತೇಜಸ್ವಿನ್'** ಎಂಬ ಶ್ರುತಿಪ್ರಮಾಣದಂತೆ ಅಗ್ನಿಗೆ ತೇಜಸ್ವೀ ಎಂದೇ ಹೆಸರು. ತೇಜಸ್ಸಿಲ್ಲದಿದ್ದರೆ ಅಗ್ನಿಯೇ ಇಲ್ಲ. ಆ ತೇಜಸ್ಸೇ ಸಾರ ; ಆ ಸಾರವಸ್ತುವು ಪರಮಾತ್ಮನೇ. ಸರ್ವಪ್ರಾಣಿಗಳಲ್ಲಿಯೂ ನಾನು ಜೀವರೂಪನಾಗಿರುವೆನು ಎನ್ನುತ್ತಾನೆ. ಹಿಂದೆ ಶ್ರೀಕೃಷ್ಣನು ೫ನೆಯ ಶ್ಲೋಕದಲ್ಲಿ **'ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್'** ಎಂದು ಹೇಳಿದ್ದಾನೆ. ಇಲ್ಲಿ ಸರ್ವಪ್ರಾಣಿಗಳಲ್ಲಿಯೂ ನಾನು ಜೀವನವಾಗಿದ್ದೇನೆ ಅಥವಾ ಜೀವರೂಪದಲ್ಲಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಜೀವನ ಎಂದರೆ ಪರಮಾತ್ಮಾ ಎಂದೂ ಆಗುತ್ತದೆ. ಯಾವುದರಿಂದ ಸರ್ವಪ್ರಾಣಿಗಳೂ ಬದುಕಿರುವುವೋ–ಅದೂ ಜೀವನವೆಂದಾಗುತ್ತದೆ. ಯಾವುದೇ ಅರ್ಥವನ್ನಿಟ್ಟುಕೊಂಡರೂ ಪರಮಾತ್ಮನ ಹೊರತಾಗಿ ಪ್ರಾಣಿಗಳ ಬದುಕೇ ಇಲ್ಲ ಎಂಬುದು ಸ್ಪಷ್ಟ. ತಪಸ್ವಿಗಳಲ್ಲಿ ತಪಸ್ಸೇ ಆಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ತಪಸ್ಸನ್ನೇ ತೆಗೆದುಬಿಟ್ಟರೆ ತಪಸ್ವಿಗಳೆನಿಸಿಕೊಳ್ಳುವುದೇ

ಇಲ್ಲ. ತಪೋರೂಪನಾದ ಪರಮಾತ್ಮನ ಸಾನ್ನಿಧ್ಯದಿಂದಾಗಿ ಅವನನ್ನು ತಪಸ್ವೀ ಎಂದು ಕರೆಯುತ್ತಾರೆ.)

o o o

ಸುಗಂಧಸ್ವರೂಪನಾದ ಈಶ್ವರನಾದ ನನ್ನಲ್ಲಿ ಭೂಮಿಯು ಪೋಣಿಸಲ್ಪಟ್ಟಿದೆ. ಆದುದರಿಂದ ಪೃಥಿವಿಯಲ್ಲಿರುವ ಪವಿತ್ರಗಂಧವು ಭಗವಂತ. ಪೃಥಿವಿಯಲ್ಲಿ ಗಂಧದ ಸ್ವಾಭಾವಿಕವಾದ ಪವಿತ್ರತೆಯನ್ನು ಹೇಳಿರುವುದು ನೀರು ಮುಂತಾದುವುಗಳಲ್ಲಿರುವ ರಸವೇ ಮುಂತಾದುವುಗಳ ಪವಿತ್ರತೆಗೂ ಉಪಲಕ್ಷಣ. ಗಂಧ, ರಸ ಮುಂತಾದುವುಗಳಲ್ಲಿ ಅಪವಿತ್ರತೆಯೇನಾದರೂ ಕಂಡುಬಂದರೆ ಅದು ಅವಿದ್ಯೆ, ಅಧರ್ಮ ಮುಂತಾದುವುಗಳ ಅಪೇಕ್ಷೆಯಿಂದ ಮತ್ತು ಭೂತವಿಶೇಷಗಳ ಸಂಬಂಧದಿಂದ. ಅಪವಿತ್ರತೆಯು ಅವುಗಳ ಸ್ವಾಭಾವಿಕಗುಣವಲ್ಲ. (ಶಂ. ಭಾ.)

ಪುಣ್ಯವಾದ ಗಂಧ ಎಂದು ಹೇಳಿರುವುದು ಭೋಗದ ಅಪೇಕ್ಷೆಯಿಂದ. ಎಂದರೆ ಭಗವಂತನಿಗೆ ಪುಣ್ಯಗಂಧದ ಭೋಗವೇ ಹೊರತು ದುರ್ಗಂಧದ ಭೋಗವಿಲ್ಲ–ಎಂದು ಜ್ಞಾಪಿಸಲು ಪುಣ್ಯಗಂಧವೆಂಬ ವಿಶೇಷಣವನ್ನು ಕೊಟ್ಟಿದೆ. ಶುಚಿತ್ವವು ಯಾವುದರಲ್ಲಿದೆಯೋ ಅದು ತಾನೇ ಭಗವಂತನಿಗೆ ಭೋಗ್ಯವಾಗುತ್ತದೆ? 'ಋತಂ ಪಿಬನ್ತೌ ಸುಕೃತಸ್ಯ ಲೋಕೇ' ಇಲ್ಲಿ ಋತಂ ಎಂದರೆ ಪುಣ್ಯ. (ಮ. ಭಾ.)

**ಓಂ ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥೧೦॥**

ಪಾರ್ಥ! ಸರ್ವಭೂತಗಳಿಗೂ ಸನಾತನನಾದ ಬೀಜಸ್ವರೂಪನೆಂದು ನನ್ನನ್ನು ತಿಳಿ. ಬುದ್ಧಿವಂತರಲ್ಲಿ ನಾನು ಬುದ್ಧಿಯಾಗಿದ್ದೇನೆ. ತೇಜಸ್ವಿಗಳಲ್ಲಿ ತೇಜಸ್ಸೇ ನಾನಾಗಿದ್ದೇನೆ.

* * *

(ಬೀಜವಿಲ್ಲದೇ ಯಾವುದೂ ಹುಟ್ಟುವುದಿಲ್ಲ. ಸರ್ವಪ್ರಾಣಿಗಳ ಹುಟ್ಟುವಿಕೆಗೂ ಹಿನ್ನೆಲೆಯಲ್ಲಿ ಒಂದು ಬೀಜವಿದ್ದೇ ಇರಬೇಕು. ಹೀಗೆಯೇ ಇದರ ಮೂಲವನ್ನು ಕಂಡುಹಿಡಿಯುತ್ತಾ ಹೋದರೆ ಪರಮಾತ್ಮನೇ ಸಕಲಪ್ರಾಣಿಗಳಿಗೂ ಬೀಜರೂಪನಾಗುತ್ತಾನೆ. ಎಲ್ಲ ಕಾರಣಗಳಿಗೂ ಅವನು ಆದಿಕಾರಣ. ಆದುದರಿಂದಲೇ ಇಲ್ಲಿ ಶ್ರೀಕೃಷ್ಣನು ನನ್ನನ್ನು ಸರ್ವಭೂತಗಳಿಗೂ ಸನಾತನ

ನಾದ ಬೀಜರೂಪನೆಂದು ತಿಳಿ–ಎನ್ನುತ್ತಾನೆ. 'ಅಹಂ ಬೀಜಪ್ರದಃ ಪಿತಾ'–ಎಂದು ಮುಂದೆಯೂ ಹೇಳುತ್ತಾನೆ. ಅವನೇ ಸರ್ವಪ್ರಾಣಿಗಳಿಗೂ ಬೀಜಸ್ವರೂಪನೆಂದಾದಮೇಲೆ ಎಲ್ಲವೂ ಅವನೇ ಎಂದೂ ಹೇಳಬಹುದು.

ಬುದ್ಧಿವಂತರಲ್ಲಿರುವ ಬುದ್ಧಿಯೇ ನಾನು. ಬುದ್ಧಿಯಿಲ್ಲದಿದ್ದರೆ ಅವರು ಬುದ್ಧಿವಂತರೆನಿಸಿಕೊಳ್ಳುವುದಿಲ್ಲ. ತನ್ನ ನಿಜಸ್ವರೂಪವಾದ ಬುದ್ಧಿಯನ್ನು ಅವರಲ್ಲಿಟ್ಟಿದ್ದಾನೆ ಭಗವಂತ. 'ತೇಜಸ್ವಿಗಳಲ್ಲಿ ತೇಜಸ್ಸೇ ನಾನಾಗಿದ್ದೇನೆ.' ಭಗವಂತನ ಸಂಪತ್ತಾದ ತೇಜಸ್ಸನ್ನು ಪ್ರತ್ಯೇಕಿಸಿಬಿಟ್ಟರೆ ಯಾವನೂ ತೇಜಸ್ವಿಯೆಂದೆನಿಸಿಕೊಳ್ಳುವುದಿಲ್ಲ. ಆದುದರಿಂದ ತೇಜಸ್ಸೇ ಪರಮಾತ್ಮಾ ಎಂದೂ ಹೇಳಬಹುದು.)

o o o

ತೇಜಃ = ಪ್ರಗಲ್ಭತೇ, ಪ್ರಭಾವ. (ಶಂ. ಭಾ.)

**ಓಂ ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋऽಸ್ಮಿ ಭರತರ್ಷಭ ॥೧೧॥**

ಭರತಶ್ರೇಷ್ಠನೇ! ನಾನು ಬಲಶಾಲಿಗಳಲ್ಲಿ ಕಾಮ-ರಾಗಗಳಿಂದ ವರ್ಜಿತವಾದ ಬಲವು. ಭೂತಗಳಲ್ಲಿರುವ ಧರ್ಮಕ್ಕೆ ವಿರೋಧವಲ್ಲದ ಕಾಮವೂ ನಾನೇ ಆಗಿದ್ದೇನೆ.

* * *

(ಬಲಿಷ್ಠರಲ್ಲಿರುವ ಬಲವೂ ಮತ್ತು ಭೂತಗಳಲ್ಲಿರುವ ಕಾಮವೂ ತಾನೇ ಎಂದು ಹೇಳಿಕೊಂಡರೂ ಪರಮಾತ್ಮನು ಅವುಗಳಿಗೆ ವಿಶೇಷಧರ್ಮಗಳ ನಿಬಂಧನೆಯನ್ನು ಹೇಳಿದ್ದಾನೆ. ಕಾಮ-ರಾಗಗಳಿಂದ ಆಕ್ರಮಿಸಲ್ಪಟ್ಟಿರುವವನ ಬಲವು ನಾನಲ್ಲ. ಕಾಮ-ರಾಗಾಭಿಭೂತನಲ್ಲದವನಲ್ಲಿ ಇರುವ ಬಲವು ನಾನಾಗಿದ್ದೇನೆ. ಕಾಮ-ರಾಗಾಭಿಭೂತನಾಗಿದ್ದರೆ–'ಅವನು ತನ್ನಲ್ಲಿರುವ ಬಲವನ್ನು ಯಾವುದಕ್ಕೆ ಉಪಯೋಗಿಸುವನು? ಯಾವುದಕ್ಕೆ ಉಪಯೋಗಿಸುವುದಿಲ್ಲ?'–ಎಂಬುದನ್ನು ಹೇಳುವುದಕ್ಕೆ ಆಗುವುದಿಲ್ಲ. ತನ್ನ ಕಾಮೇಚ್ಛೆಯನ್ನು ಪೂರೈಸಿಕೊಳ್ಳುವುದಕ್ಕಾಗಿ ಹೀನಕಾರ್ಯಗಳಲ್ಲಿಯೂ ತನ್ನ ಬಲವನ್ನು ವಿನಿಯೋಗಿಸಬಹುದಾಗಿದೆ. ಅಂತಹವನಲ್ಲಿರುವ ಬಲವು ಪರಮಾತ್ಮನ ಸ್ವರೂಪವೆಂದು ಹೇಳಲಾಗದು. ಕಾಮ-ರಾಗವಿವರ್ಜಿತನಾದವನೆಂದರೆ ಅಧ್ಯಾತ್ಮಗುಣಸಂಪನ್ನ. ಅವನು ತನ್ನ ಬಲವೆಲ್ಲವನ್ನೂ ಪರಮಾತ್ಮದರ್ಶನ

ಮತ್ತು ಭಗವತ್ಸೇವೆಗಾಗಿ ಎಂದರೆ ಧರ್ಮಕಾರ್ಯಗಳಿಗಾಗಿಯೇ ವಿನಿಯೋಗಿಸುತ್ತಾನೆ. ಅಂತಹವನ ಬಲವು ಪರಮಾತ್ಮನ ಸ್ವರೂಪವೆಂದೇ ಹೇಳಬೇಕು.

ಪ್ರಾಣಿಗಳಲ್ಲಿ ಕಾಮವು ನಾನೇ. ಆದರೆ ಪ್ರಾಣಿಗಳ ಕೆಟ್ಟ ಕಾಮನೆಗಳು ನಾನಲ್ಲ. ಧರ್ಮಕ್ಕೆ ವಿರೋಧವಲ್ಲದ ಕಾಮವು ನಾನು. ಧರ್ಮಶಾಸ್ತ್ರಗಳಲ್ಲಿ 'ಮನುಷ್ಯನು ಯಾವುದನ್ನು ಆಶಿಸಬಹುದು ; ಯಾವುದನ್ನು ಆಶಿಸಬಾರದು ; ಯಾವುದನ್ನು ತ್ಯಾಗಮಾಡಬೇಕು'–ಎಂಬುದೆಲ್ಲವನ್ನೂ ಸ್ಪಷ್ಟವಾಗಿ ಹೇಳಿದೆ. ಧರ್ಮಶಾಸ್ತ್ರಗಳಿಗೆ ವಿರೋಧವಾಗದ ರೀತಿಯಲ್ಲಿ ಮನುಷ್ಯನು ಯಾವುದನ್ನು ಕಾಮಿಸುವನೋ ಅಂತಹ ಶುದ್ಧವಾದ ಕಾಮವು ನಾನೇ ಆಗಿರುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ.

ಧರ್ಮಾವಿರುದ್ಧಕಾಮವೆಂದರೆ ತನಗೆ ಎಷ್ಟು ಬೇಕೋ ಅಷ್ಟನ್ನು ಧರ್ಮಮಾರ್ಗದಿಂದಲೇ ಸಂಪಾದಿಸಿಟ್ಟುಕೊಳ್ಳುವುದು. ಧರ್ಮಪತ್ನಿಯೊಡನೆ ಯುಕ್ತಕಾಲದಲ್ಲಿ ರಮಿಸುವುದು–ಇತ್ಯಾದಿ.)

O O O

ಕಾಮ-ರಾಗ ಎಂಬ ಎರಡು ಪದಗಳಿಗೂ ಪ್ರತ್ಯೇಕವಾದ ಅರ್ಥವನ್ನು ಶ್ರೀಶಂಕರರು ಹೇಳಿದ್ದಾರೆ. ಕಾಮವೆಂದರೆ : ತನಗೆ ದೊರಕದಿರುವ ದೂರವಾದ ವಿಷಯಗಳಲ್ಲಿನ ಬಯಕೆ. ರಾಗವೆಂದರೆ : ಒದಗಿರುವ ವಿಷಯಗಳಲ್ಲಿ ಅತ್ಯಾಸಕ್ತನಾಗಿರುವುದು.

**ಕಾಮಃ : ತೃಷ್ಣಾ ಅಸನ್ನಿಕೃಷ್ಟೇಷು ವಿಷಯೇಷು ।**
**ರಾಗಃ : ರಞ್ಜನಾ ಪ್ರಾಪ್ತೇಷು ವಿಷಯೇಷು ॥**

**ಓಂ ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥೧೨॥**

ಸಾತ್ತ್ವಿಕವಾದ ಭಾವಗಳು ಯಾವುವು ಇರುವುವೋ, ರಾಜಸವಾದ ಮತ್ತು ತಾಮಸವಾದ ಭಾವಗಳು ಯಾವುವು ಇರುವುವೋ–ಅವೆಲ್ಲವೂ ನನ್ನಿಂದಲೇ ಆಗಿರುವುವು–ಎಂದು ತಿಳಿ. ಅವು ನನ್ನಲ್ಲಿರುವುವು. ಆದರೆ ನಾನು ಅವುಗಳಲ್ಲಿರುವುದಿಲ್ಲ.

* * *

(ಸಾತ್ತ್ವಿಕಭಾವಗಳು, ರಾಜಸಭಾವಗಳು ಮತ್ತು ತಾಮಸಭಾವಗಳು

ಇವೆಲ್ಲವೂ ನನ್ನಿಂದಲೇ ಪ್ರಾದುರ್ಭೂತವಾದುವುಗಳು ಎನ್ನುತ್ತಾನೆ ಶ್ರೀಕೃಷ್ಣ. ಸಾತ್ತ್ವಿಕಭಾವಗಳು : ಶಮ, ದಮ, ಶಾಂತಿ, ತಿತಿಕ್ಷೆ, ಸತ್ಯನಿಷ್ಠೆ, ಪ್ರಾಣಿದಯೆ ಇತ್ಯಾದಿಗಳು. ಇವುಗಳೆಲ್ಲವೂ ಸತ್ತ್ವದ ಸ್ವಭಾವಗಳು. ಹಾಲು, ಸಕ್ಕರೆ, ಹಣ್ಣು—ಇವುಗಳು ಸಾತ್ತ್ವಿಕಪದಾರ್ಥಗಳು. ದೇವತೆಗಳು ಸತ್ತ್ವಗುಣ ಪ್ರಧಾನರಾದವರು.

ಹರ್ಷ, ದರ್ಪ, ಕೀರ್ತಿಕಾಮನೆ, ಮಹತ್ವಾಕಾಂಕ್ಷೆ—ಇತ್ಯಾದಿಗಳು ರಾಜಸಗುಣದ ಸ್ವಭಾವಗಳು. ಮೆಣಸಿನಕಾಯಿ, ಮೆಣಸು, ಲವಂಗ—ಇತ್ಯಾದಿಗಳು ರಾಜಸಪದಾರ್ಥಗಳು. ಗಂಧರ್ವರು ರಾಜಸಗುಣಪ್ರಧಾನರು.

ಶೋಕ, ಮೋಹ, ನಿದ್ರೆ, ಆಲಸ್ಯ—ಇವುಗಳು ತಾಮಸಗುಣದ ಸ್ವಭಾವ ಗುಣಗಳು. ಈರುಳ್ಳಿ, ಬೆಳ್ಳುಳ್ಳಿ, ಮದ್ಯ—ಇವುಗಳು ತಾಮಸಗುಣದ ಪದಾರ್ಥಗಳು. ಭೂತ-ಪ್ರೇತಾದಿಗಳು ತಾಮಸಗುಣಪ್ರಧಾನವಾದುವುಗಳು.

ಸತ್ತ್ವ-ರಜಸ್ತಮೋಗುಣಗಳನ್ನು ಹೀಗೂ ವರ್ಣಿಸುವುದುಂಟು. ನೀರು ಮೊದಲು ಘನೀಭೂತವಾಗಿರುತ್ತದೆ. ಆಗ ಅದು ತಾಮಸಗುಣ. ಕರಗಿ ನೀರಾಗಿ ಸರ-ಸರನೆ ಹರಿಯಲು ಪ್ರಾರಂಭಿಸುತ್ತದೆ. ಆಗ ಅದು ರಾಜಸಗುಣ. ಅನಂತರ ಆವಿಯಾಗಿ ಮೇಲೆ ಹೋಗುತ್ತದೆ. ಅದು ಸತ್ತ್ವಗುಣ.

ಸುಮ್ಮನೆ ಬಿದ್ದಿರುವ ಮರದ ಕೊರಡು ತಮೋಗುಣದ ಕಾರ್ಯವನ್ನು ಪ್ರತಿನಿಧಿಸುತ್ತದೆ. ಅದರಿಂದ ಹೊರಡುವ ಹೊಗೆಯು ರಜೋಗುಣವನ್ನೂ, ಕೊನೆಯಲ್ಲಿ ಉಂಟಾಗುವ ಬೆಂಕಿಯ ಪ್ರಕಾಶವು ಸತ್ತ್ವಗುಣವನ್ನೂ ಪ್ರತಿ ನಿಧಿಸುತ್ತದೆ.

ಈ ಮೂರು ಗುಣಗಳೂ ನನ್ನಿಂದಲೇ ಹೊರಟಿವೆಯೆಂದು ಶ್ರೀಕೃಷ್ಣನು ಹೇಳುತ್ತಾನೆ. ಆದರೂ ನಾನು ಅವುಗಳಲ್ಲಿಲ್ಲ. ಅವುಗಳು ನನ್ನಲ್ಲಿವೆ ಎನ್ನುತ್ತಾನೆ. ಅರ್ಥಾತ್ ಸತ್ತ್ವ-ರಜಸ್ತಮೋಗುಣಗಳು ಪರಮಾತ್ಮನಿಗೆ ಅಧೀನವಾಗಿವೆ. ಆದರೆ ಪರಮಾತ್ಮನು ಸಂಸಾರಿಗಳಂತೆ ಅವುಗಳಿಗೆ ಅಧೀನನಾಗಿಲ್ಲ. ಅವನಿಂದಲೇ ಈ ಮೂರು ಗುಣಗಳೂ ಹೊರಟಿವೆಯಾದರೂ ಅವನು ತ್ರಿಗುಣಾತೀತ. ಇದು ನಿಜವಾಗಿಯೂ ವಿಚಿತ್ರವಲ್ಲವೇ? ಆದರೆ ಇಂತಹ

ಹೋಲಿಕೆಗಳು ಅದೆಷ್ಟೋ ಇವೆ. ಆಕಾಶದಲ್ಲಿ ಮೋಡಗಳು ಉದಯಿಸುವುವು. ಆದರೆ ಆಕಾಶವು ಆ ಮೋಡಗಳನ್ನು ಆಶ್ರಯಿಸಿರುವುದಿಲ್ಲ. ಅದೇ ರೀತಿಯಲ್ಲಿ ಮೂರು ಗುಣಗಳೂ ಪರಮಾತ್ಮನಿಂದ ಹುಟ್ಟಿದ್ದರೂ ಪರಮಾತ್ಮನು ತ್ರಿಗುಣಾತೀತನೇ ಆಗಿದ್ದಾನೆ.)

o o o

ಭಾವಾಃ = ಪದಾರ್ಥಗಳು. (ಶಂ. ಭಾ.)

ಭಾವಾಃ = ಜಗತ್ತಿನಲ್ಲಿ ದೇಹವಾಗಿಯೂ, ಇಂದ್ರಿಯವಾಗಿಯೂ, ಭೋಗ್ಯವಾಗಿಯೂ ಅವುಗಳಿಗೆ ಕಾರಣವಾಗಿಯೂ ಇರುವ ಭಾವಗಳು. **ತಾನ್ ಮತ್ತಃ ಏವ ಇತಿ ವಿದ್ಧಿ** ನನ್ನ ಶರೀರವಾಗಿರುವುದರಿಂದ ಅವು ನನ್ನಲ್ಲಿಯೇ ಇವೆ.

**ನ ತ್ವಹಂ ತೇಷು** = ಶರೀರದ ಸ್ಥಿತಿಯು ಆತ್ಮಕ್ಕೆ ಅಧೀನವಾಗಿದ್ದರೂ ಆತ್ಮನ ಇರುವಿಕೆಗೆ ಶರೀರದಿಂದಲೂ ಉಪಕಾರವುಂಟು. ಆದರೆ ನನಗೆ ಶರೀರಾದಿ ಭಾವಗಳಿಂದ ಅಂತಹ ಉಪಕಾರವೂ ಇಲ್ಲ. ಕೇವಲ ಲೀಲೆಯೇ ಪ್ರಯೋಜನ. (ರಾ. ಭಾ.)

**ನ ತ್ವಹಂ ತೇಷು** = ಅವುಗಳು ಭಗವಂತನಿಗೆ ಆಧಾರವಲ್ಲ ಎಂದು ಇಲ್ಲಿ ಹೇಳಲ್ಪಟ್ಟಿದೆ. **ತದಾಶ್ರಿತಂ ಜಗತ್ಸರ್ವಂ ನಾಸೌ ಕುತ್ರಚಿದಾಶ್ರಿತಃ** (ಗೀತಾಕಲ್ಪ )

(ಮ. ಭಾ.)

**ಓಂ ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥೧೩॥**

ಗುಣಮಯವಾದ ಈ ಮೂರು ಭಾವಗಳಿಂದ ಈ ಜಗತ್ತೆಲ್ಲವೂ ಮೋಹಿತವಾಗಿ ಇವುಗಳಿಗಿಂತಲೂ ಬೇರೆಯಾಗಿ ಅವ್ಯಯನಾಗಿರುವ ನನ್ನನ್ನು ತಿಳಿದುಕೊಂಡಿಲ್ಲ.

* * *

(ತ್ರಿಗುಣಮಯವಾದ ಭಾವ ಎಂದರೆ ಮೂರು ಗುಣಗಳೂ ಒಂದೇ ಸಮವಾಗಿರುತ್ತವೆಂಬ ಅಭಿಪ್ರಾಯವಲ್ಲ. ಸತ್ತ್ವ-ರಜಸ್ಸು : ಸತ್ತ್ವವು ಹೆಚ್ಚಾಗಿದ್ದು ರಜೋಗುಣವು ಕಡಿಮೆಯಾಗಿರುವುದು. ರಜಸ್ಸು-ಸತ್ತ್ವ : ರಜೋ

ಗುಣವು ಹೆಚ್ಚಾಗಿದ್ದು ಸತ್ತ್ವಗುಣವು ಕಡಿಮೆಯಾಗಿರುವುದು. ರಜಸ್ಸು- ತಮಸ್ಸು: ರಜೋಗುಣವು ಹೆಚ್ಚಾಗಿದ್ದು ತಮೋಗುಣವು ಕಡಿಮೆಯಾಗಿರುವುದು. ತಮಸ್ಸು-ರಜಸ್ಸು : ತಮೋಗುಣವು ಹೆಚ್ಚಾಗಿದ್ದು ರಜೋಗುಣವು ಕಡಿಮೆಯಾಗಿರುವುದು. ಈ ವಿಧವಾದ ಗುಣಗಳ ಮಿಶ್ರಣದಿಂದ ಪದಾರ್ಥ ಗಳು ಹುಟ್ಟುತ್ತವೆ ಅಥವಾ ಪ್ರಾಣಿಗಳ ಭಾವವಿರುತ್ತದೆ. ಈ ಮೂರು ಗುಣ ಗಳಿಂದಲೇ ಜಗತ್ತು ಆವರಿಸಲ್ಪಟ್ಟಿದ್ದು ವಿಮೋಹಿತವಾಗಿದೆ. ಈ ಗುಣಗಳೆ ಲ್ಲವೂ ಅಹಂಕಾರದ ಹಿನ್ನೆಲೆಯಲ್ಲಿಯೇ ಪ್ರಾಣಿಗಳಿಗೆ ಅಂಟಿಕೊಂಡಿರುವುದ ರಿಂದ ಈ ಭಾವಗಳಿಗಿಂತಲೂ ವಿಲಕ್ಷಣನಾದ, ಈ ಗುಣಗಳ ಉತ್ಪತ್ತಿಗೆ ಕಾರಣನಾದ ವಿಕಾರರಹಿತನಾದ ನನ್ನನ್ನು ಪ್ರಾಣಿಮಾತ್ರದವರು ಅರಿಯುವು ದಿಲ್ಲ.

ನೀರಿನಿಂದಲೇ ಪಾಚಿಯು ಹುಟ್ಟುತ್ತದೆ. ಹಾಗೆ ಹುಟ್ಟಿದ ಪಾಚಿಯು ಕೊಳವನ್ನೆಲ್ಲಾ ಆವರಿಸಿಕೊಳ್ಳುವುದರಿಂದ ಪಾಚಿಯ ಕೆಳಭಾಗದಲ್ಲಿರುವ ನೀರೇ ಕಾಣುವುದಿಲ್ಲ. ಆಕಾಶದಲ್ಲೇ ಹುಟ್ಟಿದ ಮೋಡವು ಆಕಾಶವೇ ಕಾಣದಂತೆ ಅದನ್ನು ಆವರಿಸಿಬಿಡುತ್ತದೆ. ಈ ಉದಾಹರಣೆಗಳಂತೆ ಪರಮಾತ್ಮನಿಂದಲೇ ಜನ್ಮತಾಳಿದ ಸತ್ತ್ವ-ರಜಸ್ತಮೋಗುಣಗಳು ಪರಮಾತ್ಮನನ್ನೇ ಆವರಿಸಿ ಅವನು ಜಗತ್ತಿನ ಅರಿವಿಗೆ ಬರದಂತೆ ಮಾಡಿಬಿಡುತ್ತವೆ. ಪರಮಾತ್ಮನಿಗೆ ಈ ಗುಣಗಳ ಸಂಬಂಧವು ಇಲ್ಲದೇ ಇರುವುದರಿಂದ ಅವನು ಎಲ್ಲವನ್ನೂ ನೋಡುತ್ತಾನೆ.

ಇದಕ್ಕೆ ಶ್ರೀರಾಮಕೃಷ್ಣರು ಒಂದು ಉದಾಹರಣೆಯನ್ನು ಕೊಡುತ್ತಿದ್ದರು. ಬುರ್ಕಾ ಧರಿಸಿದ ಹೆಂಗಸು ಕಂಡಿಯಿಂದ ಎಲ್ಲವನ್ನೂ ನೋಡಬಲ್ಲಳು. ಆದರೆ ಅವಳನ್ನು ಮಾತ್ರ ಹೊರಗಿನವರು ನೋಡುವುದಕ್ಕಾಗುವುದಿಲ್ಲ. ಅದರಂತೆ ತ್ರಿಗುಣಗಳಿಂದ ಆವೃತರಾದ ಮನುಷ್ಯರು (ಪ್ರಾಣಿಗಳು) ಅವನನ್ನು ನೋಡಲಾರರು. ತ್ರಿಗುಣಾತೀತನಾದ ಪರಮಾತ್ಮನಾದರೋ ಎಲ್ಲರನ್ನೂ ನೋಡಬಲ್ಲನು.

ಸತ್ತ್ವ-ರಜಸ್ತಮೋಗುಣಗಳೆಲ್ಲವೂ ಬಂಧಕಗಳೇ. ಆದರೆ ಅವುಗಳ ಸ್ವಭಾವವು ಮಾತ್ರ ವ್ಯತ್ಯಾಸವಾಗಿರುತ್ತದೆ.

ಈ ಕೆಳಗಿನ ಕಥೆಯು ತ್ರಿಗುಣಗಳ ಈ ಕಾರ್ಯವನ್ನು ಸುಂದರವಾಗಿ ಉದಾಹರಿಸುತ್ತದೆ :

ಕಾಡಿನಲ್ಲಿ ಹಣಗಾರನೊಬ್ಬನು ಪ್ರಯಾಣಮಾಡುತ್ತಿದ್ದನು. ಮೂವರು ಕಳ್ಳರು ಅವನ ಮೇಲೆ ಬಿದ್ದು ಅವನ ಹತ್ತಿರ ಇದ್ದುದೆಲ್ಲವನ್ನೂ ಅಪಹರಿಸಿದರು. ಅನಂತರ ಮೂವರಲ್ಲಿ ಒಬ್ಬನು ಹೀಗೆ ಹೇಳಿದನು :

'ಇವನನ್ನು ಹೀಗೆಯೇ ಬಿಟ್ಟುಬಿಟ್ಟರೆ ಇವನು ಊರಿಗೆ ಹೋಗಿ ವಿಷಯವನ್ನು ಹೇಳಿಬಿಡುತ್ತಾನೆ. ಆದುದರಿಂದ ಇವನನ್ನು ಕೊಂದೇಬಿಡೋಣ.'

ಇದೇ ತಮೋಗುಣದ ಕಾರ್ಯ.

'ಅವನನ್ನು ಕೊಲ್ಲುವುದು ಬೇಡ. ಕೈ-ಕಾಲುಗಳನ್ನು ಕಟ್ಟಿಹಾಕಿಬಿಡೋಣ'–ಎಂದು ಎರಡನೆಯ ಕಳ್ಳನು ಹೇಳಿದನು. ಇದು ರಜೋಗುಣದ ಕಾರ್ಯ.

ಅವನು ಹೇಳಿದಂತೆಯೇ ಕೈ-ಕಾಲುಗಳನ್ನು ಬಿಗಿದು ಮೂವರೂ ಮುಂದೆ ನಡೆದರು. ಸ್ವಲ್ಪ ದೂರ ಹೋದನಂತರ ಮೂವರಲ್ಲಿ ಒಬ್ಬನು ಹಿಂದಿರುಗಿ ಬಂದು ಅವನ ಕಟ್ಟುಗಳೆಲ್ಲವನ್ನೂ ಬಿಚ್ಚಿ ಅವನನ್ನು ಉಪಚರಿಸಿ ಊರಿನ ಗಡಿಯವರೆಗೂ ಬಿಟ್ಟು ಹೊರಟುಹೋದನು. ಇದು ಸತ್ತ್ವಗುಣದ ಕಾರ್ಯ. ಆದರೆ ಇಲ್ಲಿ ಮೂವರೂ ಕಳ್ಳರೆಂಬುದನ್ನು ಮರೆಯಬಾರದು.)

o o o

**ಗುಣಮಯೈಃ ಭಾವೈಃ** = ಗುಣವಿಕಾರಗಳಾದ ರಾಗ-ದ್ವೇಷ-ಮೋಹಾದಿ ಪ್ರಕಾರಗಳಾದ ಪದಾರ್ಥಗಳಿಂದ, **ಅವ್ಯಯಂ** = ಹುಟ್ಟು ಮೊದಲಾದ ಎಲ್ಲ ಭಾವವಿಕಾರಗಳಿಂದಲೂ ವರ್ಜಿತನಾದ. (ಶಂ. ಭಾ.)

ಹೀಗೆ ನನ್ನ ಚೇತನಾಚೇತನಾತ್ಮಕವಾದ ಈ ಜಗತ್ತು ಆಯಾ ಕಾಲಗಳಲ್ಲಿ ನನ್ನಿಂದಲೇ ಉಂಟಾಗುತ್ತದೆ. ನನ್ನಲ್ಲೇ ಲಯಿಸುತ್ತದೆ. ನನ್ನಲ್ಲೇ ನೆಲೆಗೊಂಡಿದೆ. ನನಗೆ ಶರೀರಭೂತವಾಗಿದೆ ಮತ್ತು ಮದಾತ್ಮಕವಾಗಿದೆ. ಆದುದರಿಂದ ಕಾರಣಾವಸ್ಥೆ ಮತ್ತು ಕಾರ್ಯಾವಸ್ಥೆಗಳಲ್ಲಿ ಎಲ್ಲವೂ ನನ್ನ ಶರೀರವಾಗಿರುವುದರಿಂದ ಸರ್ವಪ್ರಕಾರದಲ್ಲೂ ಇರುವವನು ನಾನೇ. ಆದುದರಿಂದ ಕಾರಣತ್ವ, ಶೇಷಿತ್ವ ಮತ್ತು ಜ್ಞಾನಾದಿ ಅನಂತಕಲ್ಯಾಣಗುಣಗಳಿಂದ ಎಲ್ಲ ಪ್ರಕಾರಗಳಿಂದಲೂ ಶ್ರೇಷ್ಠತಮನಾದವನು ನಾನೇ. ಇಂತಹ ಉತ್ಕೃಷ್ಟತಮನಾದ ನನ್ನನ್ನು ಗುಣಮಯಪದಾರ್ಥಗಳಿಂದ ಮೋಹಿತವಾದ ಜಗತ್ತು ಅರಿಯದು.

**ಬ್ರಹ್ಮಾದ್ಯಾಃ ಸಕಲಾ ದೇವಾಃ ಮನುಷ್ಯಾಃ ಪಶವಸ್ತಥಾ ।**
**ವಿಷ್ಣುಮಾಯಾಮಹಾವರ್ತಮೋಹಾನ್ಧತಮಸಾವೃತಾಃ ॥**

ವಿಷ್ಣುಪುರಾಣ ೫-೩೦-೧೭ ( ರಾ. ಭಾ.)

**ಗುಣಮಯೈಃ ಭಾವೈಃ** = ಇಲ್ಲಿ ಮಯಟ್ ಪ್ರತ್ಯಯವು ತಾದಾತ್ಮ್ಯ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

**ಏಭಿಃ ಮೋಹಿತಂ** = ಗುಣಮಯವಾದ ದೇಹವೇ ಮುಂತಾದುವುಗಳನ್ನು ಕಂಡು ಈಶ್ವರನ ದೇಹದಲ್ಲಿಯೂ ಕೂಡ ಇರುವುದೂ ಈ ತೆರನಾದುದೇ ಎಂದು ಮಾಯೆಯಿಂದ ಮೋಹಗೊಂಡು. (ಮ. ಭಾ.)

ಕೇವಲ ಸ್ವಪ್ರಯತ್ನದಿಂದ ಈ ಮೂರು ಗುಣಗಳನ್ನು ದಾಟಲು ಅತಿ ಕಷ್ಟವೆಂದೂ ಆದರೆ ಭಗವದನುಗ್ರಹದಿಂದ ಅವನ್ನು ದಾಟಲು ಸಾಧ್ಯವೆಂದೂ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ :

**ಓಂ ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥**

ಗುಣರೂಪವಾಗಿರುವ ನನ್ನ ಈ ದೈವೀಮಾಯೆಯನ್ನು ದಾಟಲು ಅತಿ ಕಷ್ಟ. ಆದರೆ ನನ್ನನ್ನೇ ಯಾರು ಶರಣುಹೊಂದುವರೋ ಅವರು ಈ ಮಾಯೆಯನ್ನು ದಾಟುವರು.

* * *

(ಶ್ರೀಕೃಷ್ಣನು ತನ್ನ ಮಾಯಾಸ್ವರೂಪವನ್ನು ಸಂಕ್ಷೇಪವಾಗಿ ಹೇಳುತ್ತಾನೆ :

ಅರ್ಜುನ! ತ್ರಿಗುಣಸ್ವರೂಪವಾದ ಈ ಮಾಯೆಯು ದೇವನಾದ ನನ್ನದೇ ಆಗಿದೆ. ಈ ದೈವೀಮಾಯೆಯು ಸಾಧಾರಣಶಕ್ತಿಯವಳೆಂದು ತಿಳಿಯಬೇಡ. ಇವಳನ್ನು ಮೀರಿಹೋಗುವುದು ಬಲು ಕಷ್ಟ. ಇವಳಿಂದ ಪಾರಾಗಲು ದೈವಾನುಗ್ರಹವಿಲ್ಲದೇ ಯಾರಿಗೂ ಸಾಧ್ಯವೇ ಇಲ್ಲ. ಮೇಲೆ ಹಾರಿದವನನ್ನು ಭೂಮಿಯು ಪುನಃ ಕೆಳಕ್ಕೆ ಸೆಳೆದುಕೊಳ್ಳುವಂತೆ–ತನ್ನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದವನನ್ನು ಪುನಃ ಇವಳು ಆಕರ್ಷಿಸಿಬಿಡುತ್ತಾಳೆ. ಇವಳು ಹೇಳಿದಂತೆ ಕೇಳಿಕೊಂಡಿದ್ದರೆ ಒಮ್ಮೆ ಅಳಿಸುತ್ತಾಳೆ. ಒಮ್ಮೆ ಸಂತೋಷ

ಗೊಳಿಸುತ್ತಾಳೆ. ಏಳಿಸುತ್ತಾ ಮುಳುಗಿಸುತ್ತಾ ಸಂಸಾರಸಾಗರದಲ್ಲೇ ಸೆಳೆದು ಕೊಂಡು ಹೋಗುತ್ತಿರುತ್ತಾಳೆ. ಇವಳಿಂದೇನಾದರೂ ತಪ್ಪಿಸಿಕೊಳ್ಳಲು ಪ್ರಯತ್ನಿಸಿದೆವೆಂದರೆ ದೊಡ್ಡ ದೊಡ್ಡ ಆತಂಕಗಳನ್ನೇ ತಂದೊಡ್ಡುತ್ತಾಳೆ. ಪರಾಭವವನ್ನು ಎಂದೂ ಒಪ್ಪಿಕೊಳ್ಳುವವಳಲ್ಲ. ಮನುಷ್ಯನನ್ನು ವಿಮೋಹ ಗೊಳಿಸಲು ಇವಳ ಹತ್ತಿರ ಬೇಕಾದಷ್ಟು ಸಲಕರಣೆಗಳೂ ಇವೆ. ದೇವತೆಗಳೂ ಸಹ ಸಮಯದಲ್ಲಿ ಇವಳಿಗೇ ವಶರಾಗಿಬಿಡುತ್ತಾರೆ. ಕೆಲವು ಸಮಯಗಳಲ್ಲಿ ದೊಡ್ಡ ಯೋಗಿಗೂ ಸಹ–'ನಾನು ಮಾಯೆಗೆ ಸಿಕ್ಕಿಹಾಕಿಕೊಂಡೆ'–ಎಂಬ ವಿವೇಕ ಉಂಟಾಗಿರುವುದಿಲ್ಲ. ಫಲಿತಾಂಶದಲ್ಲೇ ಅದು ಅರ್ಥವಾಗುತ್ತದೆ. ಯಾರ ಮೇಲೋ ದಯೆ ; ಯಾರ ಮೇಲೋ ಮರುಕ ; ಯಾರ ಮೇಲೋ ಕನಿಕರ–ಇತ್ಯಾದಿಗಳು ಯೋಗಿಗೆ ತಿಳಿಯದಂತೆಯೇ ಅವನನ್ನು ಆಕ್ರಮಿಸಿ ಬಿಡುವುವು. ಆ ಸಮಯದಲ್ಲಿ ಮಾಯೆಯು ತನ್ನ ಆಟವನ್ನು ತೋರಿಸಿ ಬಿಡುತ್ತದೆ. ಆದರೆ ಯೋಗಿಗೆ ಕರುಣೆಯಾಗಲೀ ದಯೆಯಾಗಲೀ ಇರಕೂಡ ದೆಂದಲ್ಲ. ಬಂಧನವಾಗುವ ರೀತಿಯಲ್ಲಿರಬಾರದು. ಕರುಣೆ-ದಯೆಗಳೂ ಸಹ ಸಾತ್ವಿಕಬಂಧನಗಳಾಗುತ್ತವೆ. **'ಗುಣಾ ಗುಣೇಷು ವರ್ತನ್ತೇ'** ಎಂಬ ಭಾವನೆ ಯನ್ನೇ ಪ್ರಧಾನವನ್ನಾಗಿಟ್ಟುಕೊಂಡು ದಯೆಯನ್ನೂ ತೋರಬಹುದು ; ಕರುಣೆಯನ್ನೂ ತೋರಬಹುದು. ಆ ಭಾವನೆಯು ಹಿನ್ನೆಲೆಯಲ್ಲಿಲ್ಲದಿದ್ದರೆ ಅದೇ ಒಂದು ಬಂಧನವಾಗುತ್ತದೆ. ಶ್ರೀಕೃಷ್ಣನು 'ಮಾಯೆಯು ದುರತ್ಯಯ ವಾದುದು ; ನಿವಾರಿಸಲು ಕಷ್ಟಸಾಧ್ಯವಾದುದು' ಎಂದು ಹೇಳಿದರೂ ಸಹ ಸಾಧಕರಿಗೆ ನಿರಾಶೆಯನ್ನುಂಟುಮಾಡುವುದಿಲ್ಲ. ಉಪಾಯವನ್ನು ಹೇಳಿ ಕೊಡುತ್ತಾನೆ. 'ಯಾರು ನನ್ನನ್ನೇ ಶರಣುಹೊಂದುವರೋ ಅವರು ಈ ಮಾಯೆಯನ್ನು–ಮಾಯಾಸಮುದ್ರವನ್ನು ದಾಟುತ್ತಾರೆ.'

**'ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ'** ಎಂದು ಅವನು ಹೇಳಿರುವ ರೀತಿಯಲ್ಲಿ ಅನನ್ಯಶರಣನಾಗಿ ಪರಮಾತ್ಮನಿಗೆ ಮರೆಹೋಗಬೇಕು. ವಾಸುದೇವನೇ ಸರ್ವನೆಂದು ಭಾವಿಸಬೇಕು. ಅವನನ್ನೇ ಹೊಂದಬೇಕು. ಅಂತಹವರು ಮಾತ್ರವೇ ಮಾಯೆಯನ್ನು ದಾಟುತ್ತಾರೆ. ಪರಮಾತ್ಮನು ತ್ರಿಗುಣಾತೀತನಾದುದರಿಂದ ಅವನ ಭಕ್ತರೂ ತ್ರಿಗುಣಾತೀತ ರಾಗುವಂತೆ ಅನುಗ್ರಹಿಸುತ್ತಾನೆ. ತನ್ನದೇ ಆದ ಮಾಯೆಯು ಅವರಿಂದ

ದೂರಸರಿಯುವಂತೆ ಮಾಡುತ್ತಾನೆ. ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ಶ್ರೀಕೃಷ್ಣನು ಕಂಸನ ಸೆರೆಮನೆಯಲ್ಲಿ ಹುಟ್ಟಿದನು. ಅವನನ್ನು ವಸುದೇವನು ಸೆರೆಯಿಂದ ಎತ್ತಿಕೊಂಡು ಹೊರಟಾಗ ಸೆರೆಮನೆಯ ಬಾಗಿಲಿನ ಬೀಗವು ಕಳಚಿ ಕೆಳಗೆ ಬಿದ್ದಿತು. ಕಾವಲುಗಾರರು ನಿದ್ರಾಪರವಶರಾಗಿದ್ದರು. ತುಂಬಿ ಹರಿಯುತ್ತಿದ್ದ ಯಮುನೆಯು ತನ್ನಲ್ಲಿಯೇ ಹಾದಿಯನ್ನು ಮಾಡಿಕೊಟ್ಟಳು. ಇಂತಹ ಮಹಾಮಹಿಮನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಅನನ್ಯಭಕ್ತಿಯಿಂದ ಅವನನ್ನು ಆಶ್ರಯಿಸಬೇಕು. ಇದೊಂದೇ ಸಾಧಕನ ಮುಖ್ಯಕರ್ತವ್ಯ.)

o o o

**ದೈವೀ ಮಮ ಮಾಯಾ :** ವಿಷ್ಣುವೂ ಈಶ್ವರನೂ ಆದ ನನ್ನ ಸಂಪತ್ತಾದ ಮಾಯೆ.

**ದೇವಸ್ಯ ಮಮ ಈಶ್ವರಸ್ಯ ವಿಷ್ಣೋಃ ಸ್ವಭೂತಾ.**

**ಮಾಂ ಯೇ ಪ್ರಪದ್ಯನ್ತೇ** = ಎಲ್ಲ ಧರ್ಮಗಳನ್ನೂ ತೊರೆದು ಯಾರು ಮಾಯಾವಿಯೂ ತಮಗೆಲ್ಲರಿಗೂ ಆತ್ಮಭೂತನೂ ಆಗಿರುವ ನನ್ನನ್ನು ಸರ್ವಭಾವದಿಂದ ಶರಣುಹೊಂದುತ್ತಾರೆಯೋ ಅವರು. (ಶಂ. ಭಾ.)

**ದೈವೀ ಮಾಯಾ** = ದೇವನಾದ ಎಂದರೆ ಕ್ರೀಡೆಯಲ್ಲಿ ತೊಡಗಿರುವ, ನನ್ನಿಂದಲೇ ನಿರ್ಮಿತವಾಗಿರುವ ಮಾಯೆಯು. ಇದಕ್ಕೆ ಮಾಯೆ ಎಂದು ಹೆಸರು ಬರಲು ಕಾರಣ : ಅಸುರ, ರಾಕ್ಷಸ ಮುಂತಾದವರ ಅಸ್ತ್ರಗಳಂತೆ ವಿಚಿತ್ರವಾದ ಕಾರ್ಯವನ್ನು ಮಾಡುವುದರಿಂದ ಅದಕ್ಕೆ ಮಿಥ್ಯಾ ಎಂದು ಅರ್ಥವಲ್ಲ. ಗುಣಮಯವಾದ ಮಾಯೆಯು ಪಾರಮಾರ್ಥಿಕವಾದುದು.

**ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್**

ಇದರ ಕಾರ್ಯವು ಭಗವಂತನ ಸ್ವರೂಪವನ್ನು ಮುಚ್ಚುವುದು ಮತ್ತು ತನ್ನ ಸ್ವರೂಪದಲ್ಲಿ ಭೋಗ್ಯತಾಬುದ್ಧಿಯನ್ನು ಉಂಟುಮಾಡುವುದು.

(ರಾ. ಭಾ.)

ಈ ಮಾಯೆಯು ಮೋಹಕವಾದುದು. ಸೃಷ್ಟಿಯೇ ಮುಂತಾದ ಕ್ರೀಡೆ

ಗಳನ್ನಾಡುವ ದೇವನಿಗೆ ಸಂಬಂಧಪಟ್ಟಿದ್ದಾದ್ದರಿಂದ ಅತಿಶಕ್ತಿಶಾಲಿಯಾದ ಅದನ್ನು ದಾಟಲು ತುಂಬಾ ಕಷ್ಟ. ಆದುದರಿಂದಲೇ ಅನಾದಿಕಾಲದಿಂದಲೂ ಈ ಮೋಹವನ್ನು ದಾಟಲು ಬಹುಜನರಿಗೆ ಸಾಧ್ಯವಾಗಿಲ್ಲ. ಆದರೆ ಇದನ್ನು ಎಂದೆಂದಿಗೂ ದಾಟಲಾಗುವುದಿಲ್ಲ ಎಂದು ತಿಳಿಯಬಾರದು. ಉಳಿದುದೆಲ್ಲ ವನ್ನೂ ಬಿಟ್ಟು ಯಾರು ನನ್ನನ್ನೇ ಶರಣುಹೊಂದುತ್ತಾರೆಯೋ, ಗುರುಗಳೇ ಮುಂತಾದವರಿಗೆ ಮಾಡುವ ನಮಸ್ಕಾರವನ್ನು ನನಗೇ ಸಮರ್ಪಿಸುತ್ತಾ ರೆಯೋ, ಪರಮಾತ್ಮನೇ ಅಲ್ಲಿದ್ದು ಗುರುರೂಪನಾಗುತ್ತಾನೆ-ಎಂದು ನೋಡು ತ್ತಾರೆಯೋ ಅಂತಹವರು ಮಾಯೆಯನ್ನು ದಾಟುತ್ತಾರೆ.

ಮಾಯೆಯು ದೈವೀ. ನನ್ನದಾದುದರಿಂದ ಇದು ದೈವೀ. ಏಕೆಂದರೆ ನಾನೇ ದೇವರು. (ಮ. ಭಾ.)

**ಓಂ ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥೧೫॥**

ದುರಾಚಾರಿಗಳೂ, ಮೂಢರೂ ಆದ ನರಾಧಮರು ಮಾಯೆಯಿಂದ ಅಪಹೃತವಾದ ಜ್ಞಾನವುಳ್ಳವರಾಗಿ ಆಸುರೀಭಾವವನ್ನು ಹೊಂದಿದವರಾಗಿ ನನ್ನನ್ನು ಆಶ್ರಯಿಸುವುದಿಲ್ಲ.

* * *

(ಶ್ರೀಕೃಷ್ಣನು ಗೀತೆಯಲ್ಲಿ ತನ್ನ ಭಕ್ತರನ್ನು ಉದ್ಧಾರಮಾಡುವೆನೆಂದು ಸಾರಿ-ಸಾರಿ ಹೇಳುತ್ತಾನೆ. ಪ್ರತಿಜ್ಞೆಮಾಡಿ ಹೇಳುತ್ತಾನೆ. ಆದರೂ ಅವನ ಮಾತಿಗೆ ಓಗೊಟ್ಟು ಅವನನ್ನು–'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ'–ಎಂದು ಮನಃಪೂರ್ವಕವಾಗಿ ದೃಢವಾದ ಭಕ್ತಿಯಿಂದ ಪ್ರಾರ್ಥಿಸುವವರು ಅಪರೂಪ. ಅವರಿಗೆ ದೈವೀಮಾಯೆಯಿಂದ ವಿವೇಚನಾ ಶಕ್ತಿಯೇ ಹೋಗಿಬಿಟ್ಟಿರುತ್ತದೆ. ದೇಹಾತ್ಮಭಾವವು ಬೇರೂರಿಬಿಟ್ಟಿರುತ್ತದೆ. ಆಸುರಭಾವವನ್ನು ಹೊಂದಿರುತ್ತಾರೆ. ಆಸುರಭಾವ ಎಂದರೆ ದಂಭ, ದರ್ಪ, ಅಭಿಮಾನ, ಕ್ರೋಧ–ಈ ಗುಣಗಳನ್ನೇ ಹೊಂದಿರುವಿಕೆ. ಅವರು ರಾಜಸ ಮತ್ತು ತಾಮಸಗುಣಗಳಿಂದ ಕೂಡಿದವರಾಗಿರುತ್ತಾರೆ. ಆದುದರಿಂದಲೇ ಅವರು ಮೂಢರಾಗಿರುತ್ತಾರೆ. 'ದೇಹಕ್ಕಿಂತಲೂ ಬೇರೆಯಾದುದು ದೇಹ ದಲ್ಲಿಯೇ ಆತ್ಮ ಎಂಬ ಚಿದ್ವಸ್ತು ಒಂದಿದೆ. ಅದನ್ನು ಕಂಡುಕೊಳ್ಳಬೇಕಾ

ದುದೇ ಮನುಷ್ಯನ ಕರ್ತವ್ಯ. ಆತ್ಮದರ್ಶನದಿಂದ ಆಗುವ ಆನಂದಕ್ಕಿಂತಲೂ ಹೆಚ್ಚಿನ ಆನಂದವು ಬೇರೆ ಯಾವುದೂ ಇರುವುದಿಲ್ಲ'–ಈ ಸತ್ಯಸಂಗತಿಗಳು ಒಬ್ಬ ಮನುಷ್ಯನ ಜೀವಮಾನದಲ್ಲಿಯೇ ಅವನ ಮನಸ್ಸಿನಲ್ಲಿ ಸುಳಿಯುವುದಿಲ್ಲ. ಪಾಪ-ಪುಣ್ಯಕರ್ಮಗಳನ್ನು ಎವೆಯಿಕ್ಕದೇ ನೋಡುತ್ತಿರುವವನೊಬ್ಬನು ತಮ್ಮ ಹೃದಯದಲ್ಲಿಯೇ ಇದ್ದಾನೆಂಬ ವಿಷಯವನ್ನು ತಿಳಿಯದ ಈ ಮೂಢರು–ಪಾಪಕರ್ಮಗಳನ್ನೇ ಮಾಡುತ್ತಾ ಜನಸಾಮಾನ್ಯರು ಅನುಸರಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ–ಇತ್ಯಾದಿಗಳನ್ನೂ ಆಚರಿಸದೇ ಅಟ್ಟಹಾಸದ ಜೀವನದಲ್ಲಿಯೇ ಆಸಕ್ತರಾದ ಈ ನರಾಧಮರು–ನನ್ನನ್ನು ಖಂಡಿತವಾಗಿಯೂ ಆಶ್ರಯಿಸುವುದಿಲ್ಲ ಎನ್ನುತ್ತಾನೆ ಶ್ರೀಕೃಷ್ಣ.)

o o o

**ಆಸುರಂ ಭಾವಂ**= ಹಿಂಸೆ, ಅಸತ್ಯಭಾಷಣ ಮುಂತಾದ ಲಕ್ಷಣವುಳ್ಳ ಆಸುರಭಾವವನ್ನು. (ಶಂ. ಭಾ.)

ಪಾಪಕರ್ಮಿಗಳು ನನ್ನನ್ನು ಶರಣುಹೊಂದುವುದಿಲ್ಲ. ಅವರಲ್ಲಿ ಪಾಪದ ತಾರತಮ್ಯಕ್ಕೆ ಅನುಗುಣವಾಗಿ ನಾಲ್ಕು ಬಗೆ. ಮೂಢರು, ನರಾಧಮರು, ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು ಮತ್ತು ಆಸುರಭಾವವನ್ನು ತಳೆದವರು. ಅವರಲ್ಲಿ ಮುಂದು-ಮುಂದಿನವರು ಹಿಂದು-ಹಿಂದಿನವರಿಗಿಂತಲೂ ಹೆಚ್ಚು ಪಾಪಿಷ್ಠರು.

ಮೂಢರು : ವಿಪರೀತಜ್ಞಾನವುಳ್ಳವರು. ಜೀವನು ಭಗವಂತನಿಗೆ ಶೇಷನು (ದಾಸನು) ; ಪ್ರಕೃತಿಯು ಭಗವಂತನ ದಾಸೀ. ಈ ಸತ್ಯಸಂಗತಿಯನ್ನು ಮನಗೊಳ್ಳದೇ 'ತಾನೇ ಸ್ವತಂತ್ರ ಎಲ್ಲವೂ ತನಗೇ ಅಧೀನ' ಎಂದು ತಿಳಿಯುವವರು ಮೂಢರು. ವಿಪರೀತಜ್ಞಾನಿಗಳು.

ನರಾಧಮರು : ಸಾಮಾನ್ಯವಾಗಿ ಭಗವದ್ವಿಷಯಕವಾದ ತಿಳಿವಳಿಕೆಯಿದ್ದರೂ ಅವನ ಸ್ವರೂಪದಲ್ಲಿ ತತ್ಪರರಾಗಲು ಅರ್ಹರಲ್ಲದವರು.

ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು : ಭಗವಂತನ ವಿಷಯವಾದ ಮತ್ತು ಅವನ ಐಶ್ವರ್ಯದ ವಿಷಯವಾದ ಜ್ಞಾನವನ್ನು, ಕೂಟಯುಕ್ತಿಗಳಿಂದ 'ಅದು ಅಸಂಭವ' ಎಂದು ಪ್ರತಿಪಾದಿಸಿ ಕಳೆದುಕೊಂಡವರು.

ಆಸುರಭಾವವನ್ನು ಆಶ್ರಯಿಸಿದವರು : ಭಗವದ್ವಿಷಯಕವಾದ ಸುದೃಢ ವಾದ ತಿಳಿವಳಿಕೆ ಇದ್ದರೂ ಯಾರಿಗೆ ಅದು ದ್ವೇಷಕ್ಕೆ ಕಾರಣವಾಗುತ್ತದೆಯೋ ಅವರು.

ಹೆಚ್ಚು ತಿಳಿವಳಿಕೆ ಇದ್ದರೂ ಭಗವಂತನನ್ನು ದ್ವೇಷಿಸುವುದರಿಂದ ಅವರು ಅತ್ಯಂತಪಾಪಿಷ್ಠರು. **ವಿದುಷೋಽತಿಕ್ರಮೇ ದಣ್ಡಭೂಯಸ್ತ್ವಂ** (ಗೌತಮ ಧರ್ಮಸೂತ್ರ ೨-೧೨-೬) ಎಂಬ ನ್ಯಾಯದಂತೆ.

ಅತಿಶಯಜ್ಞಾನವಿದ್ದರೂ ಹೀಗೆ ಭಗವಂತನಲ್ಲಿ ವಿಮುಖರಾಗಬೇಕಾ ದರೆ ಅದು ಪ್ರಾಚೀನವಾದ ಪಾಪಾತಿಶಯದಿಂದಲೇ ಎಂದು ತಿಳಿಯಬೇಕು.

(ರಾ. ಭಾ.)

'ಎಲ್ಲರೂ ಭಗವಂತನ ಮಾಯೆಯನ್ನು ಏಕೆ ದಾಟುವುದಿಲ್ಲ?' ಎನ್ನುವುದಕ್ಕೆ ಭಗವಂತನು ಇಲ್ಲಿ ಉತ್ತರಹೇಳುತ್ತಾನೆ :

ಯಾರು ದುಷ್ಕೃತಿಗಳಾಗಿ ಆ ಕಾರಣದಿಂದ ಮೂಢರಾಗಿರುತ್ತಾರೆಯೋ ಮತ್ತು ಅದೇ ಕಾರಣದಿಂದ ನರಾಧಮರಾಗಿರುತ್ತಾರೆಯೋ, ಜ್ಞಾನದ ಅಪ ಹಾರ (ಅಭಿಭವ) ವಾಗಿರುವುದರಿಂದ ಮೂಢರಾಗಿದ್ದು ಆ ಕಾರಣದಿಂದಲೇ ಆಸುರಭಾವವನ್ನು ತಳೆದಿರುತ್ತಾರೆಯೋ–ಅವರು ನನ್ನನ್ನು ಶರಣುಹೊಂದು ವುದಿಲ್ಲ.

**ಅಸುರಾಃ= ಅಸುಷು ರತಾಃ** = ಇಂದ್ರಿಯಗಳನ್ನು ಸಂತೋಷಪಡಿಸು ವುದರಲ್ಲಿಯೇ ತತ್ಪರರಾದವರು. (ಮ. ಭಾ.)

**ಓಂ ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥೧೬॥**

ಭರತಕುಲಶ್ರೇಷ್ಠನೇ! ಸುಕೃತಿಗಳಾದ ನಾಲ್ಕು ಬಗೆಯ ಜನರು ನನ್ನನ್ನು ಭಜಿಸುವರು. ಆರ್ತ, ಜಿಜ್ಞಾಸು, ಅರ್ಥಾರ್ಥೀ ಮತ್ತು ಜ್ಞಾನೀ–ಇವರೇ ಆ ನಾಲ್ವರು.

* * *

(ಹಿಂದಿನ ಶ್ಲೋಕದಲ್ಲಿ ಮೂಢರಾದವರು ನನ್ನನ್ನು ಆಶ್ರಯಿಸಲು ಬರುವುದಿಲ್ಲ–ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಮೂಢರಾದವರೆಂದರೆ

ನಾಸ್ತಿಕರು ಎಂದು ಇಟ್ಟುಕೊಳ್ಳಬಹುದು. ಈ ಶ್ಲೋಕದಲ್ಲಿ ಸುಕೃತಿಗಳಾಗಿರುವ ಭಕ್ತರ ವಿಷಯವನ್ನು ಹೇಳುತ್ತಾನೆ. ತನ್ನ ಭಕ್ತರನ್ನು ನಾಲ್ಕು ವಿಧವಾಗಿ ವಿಂಗಡಿಸಿ ಉದಾರಿಯಾದ, ದಯಾಮಯನಾದ, ದಿವ್ಯಮಂಗಳವಿಗ್ರಹನಾದ ಶ್ರೀಕೃಷ್ಣನು ತನ್ನ ನಾಲ್ಕು ಬಗೆಯ ಭಕ್ತರನ್ನೂ ಸುಕೃತಿಗಳೆಂದೇ ಕರೆಯುತ್ತಾನೆ. ಏಕೆಂದರೆ : ದೇವರನ್ನು ಯಾವುದೇ ಕಾರಣದಿಂದ ಒಮ್ಮೆ ಸ್ಮರಿಸಬೇಕಾದರೂ ಪೂರ್ವಜನ್ಮದ ಸುಕೃತವಿರಬೇಕು. ನಾವೇ ಅನೇಕರನ್ನು ಕಾಣುತ್ತೇವೆ. ಪಡ ಬಾರದ ಕಷ್ಟಗಳನ್ನೂ ಪಡುತ್ತಿರುತ್ತಾರೆ. ರೋಗಗ್ರಸ್ತರಾಗಿರುತ್ತಾರೆ. ಔಷಧೋಪಚಾರಗಳಿಗೆ ಅಪಾರವಾದ ಹಣವನ್ನೂ ವ್ಯಯಮಾಡುತ್ತಿರುತ್ತಾರೆ. ಹೀಗಿದ್ದರೂ ಸಹ ಭಗವಂತನಲ್ಲಿ ಒಮ್ಮೆಯಾದರೂ ತಮ್ಮ ಸಂಕಟವನ್ನು ಹೇಳಿಕೊಂಡು ಪ್ರಾರ್ಥಿಸಲು ಅವರಿಗೆ ಮನಸ್ಸು ಬರುವುದಿಲ್ಲ. ಆದುದರಿಂದ ಯಾವುದೇ ಕಾರಣದಿಂದಲಾದರೂ ಒಮ್ಮೆಯಾದರೂ ಪರಮಾತ್ಮನನ್ನು ಭಜಿಸುವವನೇ ಸುಕೃತಿಯು.

**ಆರ್ತಃ** (ಸಂಕಟದಲ್ಲಿರುವವನು), **ಜಿಜ್ಞಾಸುಃ** (ಭಗವತ್ತತ್ತ್ವವನ್ನು ತಿಳಿಯಲು ಇಚ್ಛಿಸುವವನು), **ಅರ್ಥಾರ್ಥೀ** (ಸುಖಸಾಧನ ಸಂಪತ್ತನ್ನು ಬಯಸುವವನು), **ಜ್ಞಾನೀ** (ಆತ್ಮಜ್ಞಾನಿಯು.)

ಶ್ರೀಕೃಷ್ಣನು ಇಲ್ಲಿ ಭಕ್ತರನ್ನು ಅನುಕ್ರಮವಾಗಿ ಹೇಳಿಲ್ಲ–ಎಂಬುದು ಕೆಲವರ ಭಾವನೆ.

'ಈ ನಾಲ್ಕು ಬಗೆಯವರಲ್ಲಿ ಜ್ಞಾನಿಯು ಶ್ರೇಷ್ಠತಮ'–ಎಂದು ಭಗವಂತನೇ ಮುಂದೆ ಹೇಳುತ್ತಾನೆ. ಉಳಿದವರಲ್ಲಿ ಪರಸ್ಪರತಾರತಮ್ಯವನ್ನು ವಿವೇಚಿಸಬಹುದಾದರೂ ಅವರೆಲ್ಲರನ್ನೂ ಭಗವಂತನು ಸುಕೃತಿಗಳು ; (ಪುಣ್ಯಶಾಲಿಗಳು) ಉದಾರರು–ಎಂದೇ ಹೊಗಳಿದ್ದಾನೆಂಬುದನ್ನು ಮರೆಯ ಬಾರದು. ಎಲ್ಲರೂ ಭಗವಂತನಿಗೆ ಪ್ರಿಯರಾದವರೇ. ಅವರ ಭಗವದ್ಭಕ್ತಿಯ ಮಟ್ಟದಲ್ಲಿ ವ್ಯತ್ಯಾಸವು ಇರಬಹುದಾದರೂ ಭಗವಂತನು ಎಲ್ಲರನ್ನೂ ಉತ್ಕೃಷ್ಟರೆಂದೇ ಹೇಳಿದ್ದಾನೆ.

**ಆರ್ತಃ**––ಸಂಕಟಬಂದಾಗ ವೆಂಕಟರಮಣನನ್ನು ಪ್ರಾರ್ಥಿಸುವವನು. ಆ ಸಮಯದಲ್ಲವನು ತನ್ನ ಸಂಕಟವು ದೇವರಿಗೆ ಮುಟ್ಟುವಂತೆ ಗೋಳಿಡು

ತ್ತಾನೆ. ದಯಾಮಯನು ಒಡನೆಯೇ ಅವನ ಸಂಕಟವನ್ನು ಪರಿಹರಿಸುತ್ತಾನೆ. ಸುಖ-ದುಃಖಗಳು ಚಕ್ರದಂತೆ ತಿರುಗುತ್ತಾ ಇರುವಾಗ ಆ ಆರ್ತನಿಗೂ ಸಹ ಕಷ್ಟಬಂದಾಗ ದೇವರನ್ನು ಮರೆತು ಕುಳಿತುಕೊಳ್ಳಲು ಸಾಧ್ಯವಾಗುವುದಿಲ್ಲ. ಆದರೆ ಅವನಲ್ಲಿ ಎಣಿಸಬಹುದಾದ ದೋಷಗಳೆಂದರೆ ಸಂಕಟಬಂದಾಗ ನೆನೆಯುತ್ತಾನೆ. ಪ್ರಾಪಂಚಿಕವಾದ ಕಷ್ಟಗಳನ್ನು ಬಗೆಹರಿಸಿಕೊಳ್ಳಲು ಮಾತ್ರವೇ ಪ್ರಾರ್ಥನೆಮಾಡುತ್ತಾನೆ. ಸಂಸಾರಬಂಧನವನ್ನು ಬಿಡಿಸಿಕೊಳ್ಳುವ ಸಲುವಾಗಿ ಪ್ರಾರ್ಥನೆಯನ್ನು ಮಾಡುವುದಿಲ್ಲ. ಪೀಡಾಪರಿಹಾರದ ಸುಖವನ್ನು ಪಡೆಯುವನೇ ಹೊರತು ಸಹಜಾನಂದದ ಅನುಸ್ಯೂತವಾದ ಅನುಭವವು ಅವನಿಗೆ ಉಂಟಾಗುವುದಿಲ್ಲ. ಆದರೂ ಹೇಗಾದರೂ ಯಾವಾಗಲಾದರೂ ಭಗವಂತನನ್ನು ನೆನೆದಿದ್ದರಿಂದ ಅವನು ಸುಕೃತಿಯಾದ ಮತ್ತು ಉದಾರನಾದ ಭಕ್ತನೆಂದು ಶ್ರೀಕೃಷ್ಣನೇ ಹೇಳಿದ್ದಾನೆ. ದ್ರೌಪದಿಯನ್ನೂ ಗಜೇಂದ್ರನನ್ನೂ ಆರ್ತಭಕ್ತರೆಂದು ಉದಾಹರಿಸುತ್ತಾರೆ. ದ್ರೌಪದಿಯು ಕಷ್ಟಬಂದಾಗಲೆಲ್ಲಾ (ವಸ್ತ್ರಾಪಹರಣ, ದೂರ್ವಾಸಾತಿಥ್ಯ–ಮುಂತಾದ ಸಮಯಗಳಲ್ಲಿ) ಆರ್ತಳಾಗಿ ಅನನ್ಯಭಕ್ತಿಯಿಂದ ಶ್ರೀಕೃಷ್ಣನನ್ನೇ ಪ್ರಾರ್ಥಿಸಿ ಅವನ ದಯೆಯಿಂದ ಕಷ್ಟಗಳನ್ನು ಪರಿಹರಿಸಿಕೊಂಡಳು.

**ಜಿಜ್ಞಾಸುಃ** : ಇವನು ಕೇವಲ ನಂಬಿಕೆಯುವನಲ್ಲ. 'ಕಷ್ಟಪರಿಹಾರಕ್ಕಾಗಿಯೇ ದೇವರು' ಎಂದು ಭಾವಿಸಿರತಕ್ಕವನೂ ಅಲ್ಲ. ಭಗವತ್ತತ್ತ್ವವನ್ನು ವಿಚಾರಮಾಡಿ ತಿಳಿದುಕೊಳ್ಳಲು ಇಚ್ಛಿಸತಕ್ಕವನು. **'ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ'** ಎಂದು ಈ ಹಿಂದೆ ಶ್ರೀಕೃಷ್ಣನೇ ಹೇಳಿದ್ದಾನೆ. ಇವನ ಮನಸ್ಸೆಲ್ಲವೂ ದೇವರನ್ನು ತಿಳಿದುಕೊಳ್ಳುವುದರಲ್ಲಿಯೇ ಆಸಕ್ತವಾಗಿರುತ್ತದೆ. ಸಗುಣ-ನಿರ್ಗುಣ ಇತ್ಯಾದಿಗಳನ್ನು ಕುರಿತು ಆಳವಾಗಿ ಅಧ್ಯಯನಮಾಡುತ್ತಾನೆ. ಆದರೆ ಇವನ ಜಿಜ್ಞಾಸುತ್ವವು ಕೇವಲ ವಿಚಾರಕ್ಷೇತ್ರದಲ್ಲಿಯೇ ಇರುತ್ತದೆ. ಆದರೂ ಇವನೂ ಸಹ ಭಗವನ್ಮಾರ್ಗದಲ್ಲಿರುವುದರಿಂದ ಪರಮಾತ್ಮನ ದೃಷ್ಟಿಯಲ್ಲಿ ಉದಾರ ಮತ್ತು ಸುಕೃತಿ.

**ಅರ್ಥಾರ್ಥೀ** : ಅರ್ಥಾರ್ಥೀ ಎಂಬುದು ಅರ್ಥಪ್ರಾಪ್ತಿಗಾಗಿ ಏಕನಿಷ್ಠೆ

ಯನ್ನು ಸೂಚಿಸುತ್ತದೆ. ಇವನಿಗೆ ಹಣವು ಬೇಕು. ಅದಕ್ಕಾಗಿಯೇ ಇವನು ಪರಮಾತ್ಮನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಇವನಿಗೆ ಹಣವು ಒಮ್ಮೆ ಬೇಕು ಮತ್ತೊಮ್ಮೆ ಬೇಡ ಎನಿಸುವುದಿಲ್ಲ. ಐಶ್ವರ್ಯವು ಸತತವಾಗಿ ಸೇರುತ್ತಲೇ ಇರಬೇಕು. ಆದುದರಿಂದ ಅರ್ಥಾರ್ಥಿಯಾದ ಭಕ್ತನು ಸತತ ವಾಗಿ ದೇವರನ್ನು ಪ್ರಾರ್ಥಿಸುತ್ತಲೇ ಇರುತ್ತಾನೆ. ವೆಂಕಟರಮಣಸ್ವಾಮಿಗೆ ಇಂದು ಗರುಡೋತ್ಸವ ; ಮತ್ತೊಂದು ದಿವಸ ಕಲ್ಯಾಣೋತ್ಸವ ; ಇನ್ನೂ ಹೆಚ್ಚು ಹಣ ಬಂದ ದಿವಸ ಬ್ರಹ್ಮೋತ್ಸವ–ಹೀಗೆ ಮಾಡಿಸುತ್ತಲೇ ಇರುತ್ತಾರೆ. 'ದೇವರ ಕೃಪೆಯಿಂದ ನನಗೆ ಈ ಐಶ್ವರ್ಯ ಬಂದಿತು' ಎಂಬುದು ಇವನಿಗೆ ಖಚಿತವಾಗಿರುತ್ತದೆ. ಆದುದರಿಂದ ಇವನು ಕ್ಷಣಮಾತ್ರವೂ ದೇವರನ್ನು ಮರೆಯತಕ್ಕವನಲ್ಲ. ಆದರೆ ಕಾಲಕರ್ಮವಶದಿಂದ ಇವನಿಗೆ ಅರ್ಥದಲ್ಲಿ ವೈರಾಗ್ಯವು ಬಂದುಬಿಟ್ಟಿತೆಂದರೆ ಜ್ಞಾನಿಯಾಗಲು ಇವನ ಏಕನಿಷ್ಠೆಯು ಸಹಾಯವಾಗುತ್ತದೆ. ಅರ್ಥಾರ್ಥಿಗೆ ಧ್ರುವನನ್ನು ಉದಾಹರಿಸುತ್ತಾರೆ. ಅವನ ತಪಸ್ಸಿನ ಉದ್ದೇಶ ಸಿಂಹಾಸನಪ್ರಾಪ್ತಿಗಾಗಿ. ಅದನ್ನವನು ಪಡೆದುಕೊಂಡನು. ಪರಮಾತ್ಮನ ದಯೆಯಿಂದ ಅವನು ಮುಂದೆ ಮಹಾಜ್ಞಾನಿಯೂ ಆದನು.

ಜ್ಞಾನೀ : ಆತ್ಮದರ್ಶನಮಾಡಿರತಕ್ಕವನು. ಪರಮಾತ್ಮನನ್ನು ಆತ್ಮದಲ್ಲಿ ನೋಡುತ್ತಿರುವುದೊಂದರ ಹೊರತಾಗಿ ಮತ್ತಾವ ಕಾಮನೆಯೂ ಇವನಿಗಿರುವುದಿಲ್ಲ. ಜಿಜ್ಞಾಸೆಯಿಂದ ಎಲ್ಲದರ ಸ್ವರೂಪವನ್ನೂ ತಿಳಿದುಕೊಂಡು ಪರಮಾತ್ಮನೊಬ್ಬನನ್ನು ಬಿಟ್ಟು ಉಳಿದುದೆಲ್ಲವೂ ನಶ್ವರವೆಂದು ನಿಶ್ಚಯಿಸಿ ಸದಾಕಾಲದಲ್ಲಿಯೂ ಪರಮಾತ್ಮನ ಆರಾಧನೆಯಲ್ಲಿಯೇ ಆಸಕ್ತನಾಗಿರುತ್ತಾನೆ. ಇಂತಹ ಜ್ಞಾನಿಯು ಪರಮಾತ್ಮನಿಗೆ ಅತೀವ ಪ್ರಿಯನು. ಜ್ಞಾನಿಗೂ ಸಹ ಪರಮಾತ್ಮನನ್ನು ಬಿಟ್ಟು ಪರಮಪ್ರಿಯನಾದವನು ಬೇರೆ ಯಾರೂ ಇರುವುದೇ ಇಲ್ಲ. ಜ್ಞಾನಿಗೆ ಪ್ರಹ್ಲಾದನನ್ನು ಉದಾಹರಿಸುತ್ತಾರೆ. ಅವನು ಒಂದು ಕ್ಷಣವೂ ಪರಮಾತ್ಮಾನುಸಂಧಾನದಿಂದ ಚ್ಯುತನಾದವನೇ ಅಲ್ಲ. ಜಡ ಪದಾರ್ಥದಲ್ಲಿಯೂ ಪರಮಾತ್ಮನನ್ನು ತೋರಿಸಿ ಪರಮಾತ್ಮನ ಸರ್ವಾಂತ ರ್ಯಾಮಿತ್ವವನ್ನು ವಿಶ್ವಕ್ಕೆ ತೋರಿಸಿಕೊಟ್ಟ ಮಹಾಮಹಿಮನು.

ಆರ್ತ, ಜಿಜ್ಞಾಸು, ಅರ್ಥಾರ್ಥೀ–ಈ ಮೂವರೂ ಕಾಲಕ್ರಮ

ದಲ್ಲಾದರೂ ಜ್ಞಾನದಲ್ಲಿಯೇ ನೆಲೆಯನ್ನು ಹೊಂದುವವರೇ. ವಿಪತ್ತಿಗೊಳಗಾದವನು ಆರ್ತ. ಅವನು ಆ ವಿಪತ್ತಿನ ಪರಿಹಾರಕ್ಕೋಸ್ಕರವಾಗಿ ಪೀಡಾನಿವಾರಕನಾದ (ಪ್ರಣತಾರ್ತಿಹರನಾದ) ಪರಮಾತ್ಮನನ್ನು ನೋಡುವ ಬಗೆ– ಮುಂತಾದುವನ್ನು ತಿಳಿಯಲು ಬಯಸುವುದರಿಂದ ಜಿಜ್ಞಾಸುವಾಗುತ್ತಾನೆ. ಅದರ ಫಲವಾಗಿ ಸಾಕ್ಷಾತ್ಕೃತನಾದ ಭಗವಂತನಿಂದ ತನ್ನ ಇಷ್ಟಾರ್ಥಸಿದ್ಧಿಯನ್ನು ಬಯಸಿದಾಗ ಅವನು ಅರ್ಥಾರ್ಥೀ, ಇಷ್ಟವಾದ ಸಂಪತ್ತು ದೊರೆತ ಬಳಿಕ (ಇಲ್ಲಿ ಸಂಪತ್ತು ಎಂದರೆ ಮೋಕ್ಷಭಿನ್ನವಾದ ಇತರ ಸಂಪತ್ತು) ಅದರ ಅನುಭವವನ್ನು ಪಡೆದು ಅವುಗಳಲ್ಲಿ ನಶ್ವರತೆ ಮುಂತಾದ ದೋಷಗಳನ್ನು ಕಂಡು ವೈರಾಗ್ಯವನ್ನು ಪಡೆದ ಬಳಿಕ ಸರ್ವಕಾಮರಹಿತನಾಗಿ ಪರಮಾನಂದಮಯನಾದ ಪರಮಾತ್ಮನ ಧ್ಯಾನದಲ್ಲಿಯೇ ಇರುವ ಜ್ಞಾನಿಯಾಗುತ್ತಾನೆ. ಹೀಗೆ ಆರ್ತನಾಗಿರುವವನೇ ಅನುಕ್ರಮದಲ್ಲಿ ಜ್ಞಾನಿಯೂ ಆಗುತ್ತಾನೆ. ಈ ನಾಲ್ವರೂ ಬ್ರಹ್ಮಮಾರ್ಗ ಅಥವಾ ಬ್ರಹ್ಮಲಕ್ಷ್ಯದಲ್ಲಿರುವುದರಿಂದ ಉದಾರರೆಂದೇ ಭಾವಿಸಬೇಕು.)

O O O

**ಆರ್ತಃ** –ಕಳ್ಳ-ಕಾಕರು, ಹುಲಿ, ಖಾಯಿಲೆ ಮುಂತಾದ ವಿಪತ್ತುಗಳಿಗೆ ಸಿಕ್ಕಿದವನು.

**ಜಿಜ್ಞಾಸುಃ**–ಭಗವತ್ತತ್ತ್ವವನ್ನು ತಿಳಿಯಬಯಸುವವನು.

**ಅರ್ಥಾರ್ಥೀ**–ಹಣವನ್ನು ಬಯಸುವವನು.

**ಜ್ಞಾನೀ**–ವಿಷ್ಣುವಿನ ತತ್ತ್ವವನ್ನು ತಿಳಿದವನು. (ಶಂ. ಭಾ.)

ಸುಕೃತಿಗಳು ನನ್ನನ್ನು ಶರಣುಹೊಂದಿ ನನ್ನನ್ನೇ ಬಯಸುತ್ತಾರೆ. ಅವರಲ್ಲಿ ಸುಖದ ತಾರತಮ್ಯದಿಂದ ನಾಲ್ಕು ಬಗೆ. ಆರ್ತ, ಅರ್ಥಾರ್ಥೀ, ಜಿಜ್ಞಾಸು ಮತ್ತು ಜ್ಞಾನಿ–ಇವರಲ್ಲಿ ಮುಂದು-ಮುಂದಿನವರು ಹಿಂದು-ಹಿಂದಿನವರಿಗಿಂತಲೂ ಹೆಚ್ಚು ಸುಕೃತಿಗಳು. ಪಾಠಕ್ರಮಕ್ಕಿಂತಲೂ ಅರ್ಥಕ್ರಮವು ಪ್ರಬಲವಾದುದರಿಂದ ಜಿಜ್ಞಾಸುವನ್ನು ಇಲ್ಲಿ ಅರ್ಥಾರ್ಥಿಗಿಂತಲೂ ಮೊದಲು ಹೇಳಿದೆ.

**ಆರ್ತಃ** = ನೆಲೆಯಿಲ್ಲದವನು. ಐಶ್ವರ್ಯಾದಿಗಳನ್ನು ಕಳೆದುಕೊಂಡು ಅದನ್ನು ಪುನಃ ಪಡೆಯಲು ಬಯಸುವವನು.

**ಅರ್ಥಾರ್ಥೀ** = ತನಗೆ ಐಶ್ವರ್ಯವು ದೊರೆತಿಲ್ಲವಾದುದರಿಂದ ಅದು ಬೇಕೆಂದು ಬಯಸುವವನು. ಆರ್ತ, ಅರ್ಥಾರ್ಥೀ ಇಬ್ಬರೂ ಐಶ್ವರ್ಯವನ್ನು ಬಯಸುವವರೇ. ಆದರೂ ಅವರಿಗೆ ಮುಖಭೇದ ಮಾತ್ರ.

**ಜಿಜ್ಞಾಸುಃ** = ಪ್ರಕೃತಿಯನ್ನು ದಾಟಿರುವ ಆತ್ಮಸ್ವರೂಪವನ್ನು ಹೊಂದಲು ಬಯಸುವವನು.

**ಜ್ಞಾನೀ**=ಭಗವಂತನನ್ನೇ ಪರಮಪ್ರಾಪ್ಯವನ್ನಾಗಿ ತಿಳಿದು ಸೇವಿಸುವವನು. ಇವನು ಪ್ರಕೃತಿಯುಕ್ತವಾದ ಕೇವಲ ಆತ್ಮಸ್ವರೂಪದಲ್ಲಿ ನಿಲ್ಲದೇ ಅದಕ್ಕೂ ಆತ್ಮವಾಗಿರುವ ಪರಮಾತ್ಮನನ್ನು ಹೊಂದಲು ಬಯಸುವವನು. ಭಗವಂತನಲ್ಲಿ ಅನನ್ಯನಿಷ್ಠೆಯುಳ್ಳವನು. (ರಾ. ಭಾ.)

ಈ ನಾಲ್ಕು ಮಂದಿಗೂ ಭಗವಂತನಲ್ಲಿ ವಿಶ್ವಾಸ ಮುಂತಾದುವುಗಳಿದ್ದರೂ ಅವರ ಪ್ರಪತ್ತಿಯಲ್ಲಿ ಫಲೇಚ್ಛಾಭೇದದಿಂದ ವಿಶೇಷತೆಯಿದೆ.

**ವಿಶ್ವಾಸಾದೇಃ ಸಾಧಾರಣತ್ವೇಽಪಿ ಪ್ರಪತ್ತೇಃ ವೈಶಿಷ್ಟ್ಯಂ ಫಲೇಚ್ಛಾಭೇದಾತ್** –ವೇದಾಂತದೇಶಿಕರು.

ಮತ್ತೊಬ್ಬ ವಿದ್ವಾಂಸರು ಆರ್ತ, ಜಿಜ್ಞಾಸು, ಅರ್ಥಾರ್ಥೀ ಮತ್ತು ಜ್ಞಾನಿ ಎಂಬುದಕ್ಕೆ ಹೀಗೆ ಅರ್ಥಮಾಡಿರುತ್ತಾರೆ :

**ಆರ್ತ**–ಸಾಂಸಾರಿಕವಾದ ಕಾಮನೆಗಳನ್ನು ಪೂರೈಸಿಕೊಳ್ಳಲು ಮತ್ತು ಕಷ್ಟಗಳನ್ನು ಹೋಗಲಾಡಿಸಿಕೊಳ್ಳಲು ದೇವರನ್ನು ಪ್ರಾರ್ಥಿಸುವವನು. **ಜಿಜ್ಞಾಸುಃ**–ಆತ್ಮಾನಾತ್ಮಗಳ ವಿಷಯವಾಗಿ ಯೋಚಿಸುವವನು. **ಅರ್ಥಾರ್ಥೀ**–ತಾನು ಯೋಚಿಸಿ ನಿರ್ಧರಿಸಿದ ಆತ್ಮಸಿದ್ಧಿಯನ್ನು ಪಡೆದುಕೊಳ್ಳಲು ಅಪೇಕ್ಷಿಸಿರುವವನು. ಅರ್ಥ ಎಂದರೆ ಹಣ ಮುಂತಾದುವುಗಳಲ್ಲ. **ಅರ್ಥ್ಯತೇ ಇತಿ ಅರ್ಥಃ. ಅರ್ಥ–ಯಾಞ್ಚಾಯಾಂ.** ಅಪೇಕ್ಷಿಸತಕ್ಕುದು ಯಾವುದು ಬೇಕಾದರೂ ಆಗಬಹುದು. ಜನಸಾಮಾನ್ಯರೆಲ್ಲರೂ ಅಪೇಕ್ಷಿಸುವುದು ಹಣವನ್ನೇ. ಆದುದರಿಂದ ಅರ್ಥಶಬ್ದಕ್ಕೆ ಹಣ ಎಂಬ ರೂಢಿಯಾದ ಅರ್ಥವು ಬಂದಿರುವುದೇ ಹೊರತು ಬೇರೆಯ ಅರ್ಥವನ್ನು ಹೇಳಬಾರದೆಂದಲ್ಲ. ಸಂದರ್ಭೋಚಿತವಾಗಿ ಇಲ್ಲಿ ಅರ್ಥಾರ್ಥೀ ಎಂದರೆ ಜಿಜ್ಞಾಸೆಯಾದ

ನಂತರ ಜಿಜ್ಞಾಸೆಯಿಂದ ಸಿದ್ಧವಾದ ಆತ್ಮಸಿದ್ಧಿಯನ್ನು ಪಡೆದುಕೊಳ್ಳುವ ಅಭಿಲಾಷೆಯುಳ್ಳವನು ಎಂದು ಅರ್ಥಮಾಡುವುದು ಸಾಧುವಾಗಿದೆ–ಎಂದು ಇವರು ಅಭಿಪ್ರಾಯಪಟ್ಟಿದ್ದಾರೆ. ನಾಲ್ಕನೆಯವನು ಆತ್ಮಸಿದ್ಧಿಯನ್ನು ಸಾಧಿಸಿದ ಬ್ರಹ್ಮಜ್ಞಾನೀ. ಆರ್ತನೇ ಅನುಕ್ರಮವಾಗಿ ಬ್ರಹ್ಮಜ್ಞಾನಿಯಾಗುವನೆಂಬುದು ಇವರ ಅಭಿಮತ.

ಈ ವಿಷಯವನ್ನೇ ಮುಂದುವರಿಸಿ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ :

**ಓಂ ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥**

ಈ ನಾಲ್ವರಲ್ಲಿ ಸರ್ವದಾ ನನ್ನಲ್ಲಿ ಯೋಗಹೊಂದಿರುವ ಜ್ಞಾನಿಯು ನಿತ್ಯಯೋಗವುಳ್ಳವನೂ ಅನನ್ಯಭಕ್ತಿಯುಳ್ಳವನೂ ಆಗಿರುವುದರಿಂದ ಅಧಿಕನಾಗಿದ್ದಾನೆ. ಏಕೆಂದರೆ : ನಾನು ಜ್ಞಾನಿಗೆ ಅತ್ಯಂತಪ್ರಿಯನಾಗಿದ್ದೇನೆ ಮತ್ತು ಅವನು ನನಗೂ ಅತ್ಯಂತಪ್ರಿಯನಾಗಿದ್ದಾನೆ.

* * *

(ಆರ್ತ, ಜಿಜ್ಞಾಸು, ಅರ್ಥಾರ್ಥೀ ಮತ್ತು ಜ್ಞಾನೀ–ಈ ನಾಲ್ವರಲ್ಲಿ ಜ್ಞಾನಿಯೇ ನನಗೆ ಅತ್ಯಂತಪ್ರಿಯನಾದವನೆಂದು ಶ್ರೀಕೃಷ್ಣನು ಹೇಳುತ್ತಾನೆ. ಇದಕ್ಕೆ ಕಾರಣಗಳನ್ನು ನಿರೂಪಣೆಮಾಡುತ್ತಾ–'ಜ್ಞಾನಿಯು ನಿತ್ಯಯುಕ್ತನು. ಏಕಭಕ್ತಿಯುಳ್ಳವನು'–ಎಂದೂ ಶ್ರೀಕೃಷ್ಣನು ಹೇಳಿದ್ದಾನೆ. ಜ್ಞಾನಿಯು ನಿತ್ಯಯುಕ್ತನಾದವನು. ೬ನೆಯ ಅಧ್ಯಾಯದ ೮ನೆಯ ಶ್ಲೋಕದಲ್ಲಿ ಹೇಳಿರುವಂತೆ ಜ್ಞಾನ ಮತ್ತು ವಿಜ್ಞಾನ ಇವುಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನು. ಕೂಟಸ್ಥನೂ, ಜಿತೇಂದ್ರಿಯನೂ, ಮಣ್ಣು-ಕಲ್ಲು-ಚಿನ್ನ ಇವುಗಳನ್ನು ಸಮವಾಗಿ ನೋಡುವವನೂ ಆದ ಯೋಗಿಯು ಯುಕ್ತನೆಂದು ಕರೆಯಲ್ಪಡುತ್ತಾನೆ. ಇಲ್ಲಿಯೂ ಅದೇ ಅರ್ಥವನ್ನೇ ಇಟ್ಟುಕೊಳ್ಳಬಹುದು. ನಿತ್ಯಯುಕ್ತನು ಎಂದರೆ ಯಾವಾಗಲೂ ಪರಮಾತ್ಮನಲ್ಲಿಯೇ ಯುಕ್ತನಾಗಿರು ವವನು ; ಆಸಕ್ತನಾಗಿರುವವನು. ಇವನಿಗೆ ಧ್ಯಾನಮಾಡುತ್ತಾ–ಮಾಡುತ್ತಾ ಆತ್ಮದರ್ಶನದ ಆನಂದವನ್ನು ಪಡೆಯುವುದರ ಹೊರತಾಗಿ ಬೇರೆ ಯಾವ

ಧ್ಯೇಯಗಳೂ ಇರುವುದಿಲ್ಲ. ಪತಂಗವು ಬೆಂಕಿಗೆ ಆಕರ್ಷಿತವಾಗುವಂತೆ ಜ್ಞಾನಿಯ ಮನಸ್ಸು ಯಾವಾಗಲೂ ಪರಮಾತ್ಮನ ಕಡೆಗೇ ಆಕರ್ಷಿತವಾಗಿರುತ್ತದೆ. ಪತಂಗವು ಬೆಂಕಿಯ ಹತ್ತಿರ ಹಾರಾಡಿ ಕೊನೆಗೆ ಬೆಂಕಿಯಲ್ಲಿಯೇ ಬಿದ್ದು ತಾನು ಪ್ರೀತಿಸಿದ ವಸ್ತುವಿಗೆ ತನ್ನನ್ನೇ ಅರ್ಪಣೆಮಾಡಿಕೊಳ್ಳುವಂತೆ ಜ್ಞಾನಿಯೂ ಸರ್ವದಾ ಪರಮಾತ್ಮನಲ್ಲಿಯೇ ಲೀನವಾದ ಮನಸ್ಸುಳ್ಳವನಾಗಿದ್ದು ಕಡೆಯಲ್ಲಿ ಪರಮಾತ್ಮನಲ್ಲಿಯೇ ಸೇರಿಹೋಗುತ್ತಾನೆ. ಇವನು ಏಕ ಭಕ್ತಿಯುಳ್ಳವನು. ಇವನ ಭಕ್ತಿಯು ಏಕಮುಖವಾಗಿರುವುದು. ಭಗವಂತ ನೆಡೆಗಲ್ಲದೇ ಬೇರೆಯ ಕಡೆಗೆ ಹರಿಯುವುದಿಲ್ಲ. ಇದನ್ನು **'ಅವ್ಯಭಿಚಾರಿಣೀ ಭಕ್ತಿ'** ಎಂದು ಕರೆಯುತ್ತಾರೆ. ಇದು ಫಲಕಾಮನೆಯ ಭಕ್ತಿಯಲ್ಲ. ಪ್ರಾಪಂಚಿಕವಾದ ಕಷ್ಟ-ಸುಖಗಳನ್ನು ಇವನು ಇಂದ್ರಿಯಗಳಿಗೆ ಸಂಬಂಧಿಸಿದುವೆಂದು ಔದಾಸೀನ್ಯದಿಂದ ನೋಡುತ್ತಾನೆ. ಸುಖವಾದರೆ ಸಂತೋಷಿಸುವುದಿಲ್ಲ ; ಕಷ್ಟಬಂದರೆ ದುಃಖಿಸುವುದೂ ಇಲ್ಲ. ದುಃಖ-ಸುಖಗಳೆಲ್ಲವೂ ಕೇವಲ ಕವಚರೂಪವಾದ ದೇಹಕ್ಕೇ ಎಂಬುದನ್ನಿವನು ಚೆನ್ನಾಗಿ ಅರಿತುಕೊಂಡಿರುತ್ತಾನೆ. ಕಾಮನೆಯಿಲ್ಲದ ಭಕ್ತನನ್ನು ಕಂಡರೆ ಪರಮಾತ್ಮನಿಗೂ ಹೆಚ್ಚು ಪ್ರೀತಿ. ಕಾಡಿ-ಬೇಡುವ ಸ್ನೇಹಿತನನ್ನಾಗಲೀ–ಬಂಧುವನ್ನಾಗಲೀ ಯಾರೂ ಪ್ರೀತಿಸುವುದಿಲ್ಲ. ಯಾವ ವಿಧವಾದ ಪ್ರಯೋಜನಾಪೇಕ್ಷೆಯೂ ಇಲ್ಲದ ಶುದ್ಧಸ್ನೇಹವುಳ್ಳವನ ಮೇಲೆ ಸ್ವಾಭಾವಿಕವಾಗಿಯೇ ಮನುಷ್ಯನಿಗೆ ಹೆಚ್ಚು ಪ್ರೀತಿಯಿರುತ್ತದೆ.

ಜ್ಞಾನಿಗೆ ವಿಶ್ವದಲ್ಲಿ ಪರಮಾತ್ಮನೊಬ್ಬನೇ ಅತ್ಯಂತಪ್ರಿಯನಾದವನು. ಅಮೃತಾನಂದದಾಯಕನು. ಜ್ಞಾನಿಯು ಹೀಗೆ ಭಾವಿಸಿರುವುದರಿಂದಲೇ **'ಸ ಚ ಮಮ ಪ್ರಿಯಃ'** 'ಅಂತಹ ಜ್ಞಾನಿಯು ನನಗೂ ಸಹ ಪ್ರಿಯನು' ಎಂದು ಶ್ರೀಕೃಷ್ಣನು ಹೇಳಿದ್ದಾನೆ. ದಯಾಮಯನಾದ ಭಗವಂತನು ಅಂತಹ ಪರಮಭಕ್ತನನ್ನಲ್ಲದೇ ಮತ್ತಾರನ್ನು ತಾನೇ ಪ್ರೀತಿಸಿಯಾನು? )

o o o

ಜ್ಞಾನೀ=ತತ್ತ್ವವನ್ನು ಬಲ್ಲವನು. ಅವನು ಸದಾ ಭಗವಂತನಲ್ಲಿ ಯುಕ್ತನಾಗಿರುತ್ತಾನೆ. ಭಜನೀಯವಾದ ಬೇರೊಂದು ಪದಾರ್ಥವು ಅವನಿಗೆ ಇರುವುದಿಲ್ಲ. ಆದುದರಿಂದ ಅವನು ನಿತ್ಯಯುಕ್ತನು ಮತ್ತು ಏಕಭಕ್ತಿಯುಳ್ಳ

ವನು. ನಾನು ಜ್ಞಾನಿಗೆ ಅತ್ಯಂತಪ್ರಿಯನು. ಏಕೆಂದರೆ : ನಾನು ಅವನಿಗೆ ಆತ್ಮನಾಗಿದ್ದೇನೆ. ಆತ್ಮವು ಅತ್ಯಂತಪ್ರಿಯವಾದುದು ಎಂಬುದು ಲೋಕದಲ್ಲಿ ಪ್ರಸಿದ್ಧ. ಆದುದರಿಂದ ಜ್ಞಾನಿಗೆ ಆತ್ಮವಾಗಿರುವುದರಿಂದ ವಾಸುದೇವನು ಅವನಿಗೆ ಅತ್ಯಂತಪ್ರಿಯನು. ಆ ಜ್ಞಾನಿಯೂ ವಾಸುದೇವನಿಗೆ ಆತ್ಮವೇ ಆಗಿರುವುದರಿಂದ ವಾಸುದೇವನಿಗೆ ಅತ್ಯಂತಪ್ರಿಯನು. (ಶಂ. ಭಾ.)

ಈ ನಾಲ್ವರಲ್ಲಿ ಜ್ಞಾನಿಯು ಉಚ್ಚಕೋಟಿಯವನು. ಏಕೆಂದರೆ : ಅವನು ನಿತ್ಯಯುಕ್ತನು ಮತ್ತು ಏಕಭಕ್ತಿಯುಳ್ಳವನು. ನಾನೊಬ್ಬನೇ ಅವನಿಗೆ ಪ್ರಾಪ್ಯನಾಗಿರುವುದರಿಂದ ಅವನಿಗೆ ನನ್ನೊಡನೆ ನಿತ್ಯಯೋಗ. ಇತರರಿ ಗಾದರೋ ತಮ್ಮ ಅಭಿಲಾಷೆಯು ನೆರವೇರುವವರೆಗೆ ಮಾತ್ರ ಯೋಗ. ಇದಲ್ಲದೇ ಜ್ಞಾನಿಗೆ ನನ್ನೊಬ್ಬನಲ್ಲೇ ಭಕ್ತಿ. ಇತರರಿಗೆ ತಮಗೆ ಅಭಿಲಷಿತವಾದ ಪದಾರ್ಥಗಳಲ್ಲಿಯೂ ಭಕ್ತಿ ಮತ್ತು ಅದಕ್ಕೆ ಸಾಧನವಾಗಿರುವ ನನ್ನಲ್ಲಿಯೂ ಭಕ್ತಿ. ಇದಲ್ಲದೇ ನಾನು ಜ್ಞಾನಿಗೆ ಅತ್ಯರ್ಥಪ್ರಿಯ. ಅರ್ಥ ಎಂದರೆ ಇಲ್ಲಿ ಅಭಿಧೇಯ ಎಂದು ಅರ್ಥ. ಜ್ಞಾನಿಗೆ ನಾನು ಎಷ್ಟು ಪ್ರಿಯ ಎಂಬುದನ್ನು ಸರ್ವಜ್ಞನೂ ಸರ್ವಶಕ್ತನೂ ಆದ ನನಗೂ ಹೇಳುವುದಕ್ಕಾಗುವುದಿಲ್ಲ. ಅವನ ಪ್ರಿಯತ್ವಕ್ಕೆ ಎಲ್ಲೆಯೇ ಇಲ್ಲ. ಜ್ಞಾನಿಗಳಲ್ಲಿ ಮುಂದಾಳಾದ ಪ್ರಹ್ಲಾದನು ಇದಕ್ಕೆ ದೃಷ್ಟಾಂತ.

**ಸ ತ್ವಾಸಕ್ತಮತಿಃ ಕೃಷ್ಣೇ ದಶ್ಯಮಾನೋ ಮಹೋರಗೈಃ ।**
**ನ ವಿವೇದಾತ್ಮನೋ ಗಾತ್ರಂ ತತ್ಸ್ಮೃತ್ಯಾಹ್ಲಾದಸಂಸ್ಥಿತಃ ॥**

ಶ್ರೀಕೃಷ್ಣನಲ್ಲಿ ಆಸಕ್ತವಾದ ಬುದ್ಧಿಯುಳ್ಳ ಪ್ರಹ್ಲಾದನು ಕೃಷ್ಣಸ್ಮರಣೆಯ ಆನಂದದಲ್ಲಿ ಮುಳುಗಿದ್ದನು. ಆದುದರಿಂದ ಮಹಾಸರ್ಪಗಳು ದೇಹವನ್ನು ಕಚ್ಚುತ್ತಿದ್ದರೂ ಅವನಿಗೆ ತನ್ನ ದೇಹದ ಪರಿವೆಯೇ ಇರಲಿಲ್ಲ.

ಹೀಗೆ ಜ್ಞಾನಿಗೆ ನನ್ನಲ್ಲಿ ನಿರವಧಿಕವಾದ ಪ್ರೇಮವಿರುವಂತೆ ನನಗೂ ಅವನಲ್ಲಿ ನಿರವಧಿಕವಾದ ಪ್ರೇಮವಿದೆ. (ರಾ. ಭಾ.)

**ಏಕಭಕ್ತಿಃ = ಒಬ್ಬನಲ್ಲೇ ಭಕ್ತಿಯಿರುವಿಕೆ, ಏಕಸ್ಮಿನ್ನೇವ ಭಕ್ತಿಃ ಯಸ್ಯ ಸಃ ಮಯ್ಯೇವ ಭಕ್ತಿರ್ನಾನ್ಯತ್ರ ಏಕಭಕ್ತಿಃ ಸ ಉಚ್ಯತೇ**

**(ಇತಿ ಗಾರುಡೇ) (ಮ. ಭಾ.)**

**ಓಂ ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥**

ಇವರೆಲ್ಲರೂ ಉದಾರರೇ ಆಗಿರುತ್ತಾರೆ. ಆದರೆ ಜ್ಞಾನಿಯಾದವನು ನನ್ನ ಆತ್ಮನೇ ಎಂದು ನನ್ನ ಅಭಿಪ್ರಾಯ. ಏಕೆಂದರೆ : ಅವನು ಯುಕ್ತಾತ್ಮನಾಗಿ ನನ್ನನ್ನೇ ಪರಮಗತಿಯೆಂದು ಆಶ್ರಯಿಸಿರುವನು.

* * *

(ನಾನು ಜ್ಞಾನಿಯನ್ನು ನನ್ನ ಪ್ರಿಯನೆಂದು ಹೇಳಿದ ಮಾತ್ರಕ್ಕೆ ಉಳಿದ ಮೂರು ಬಗೆಯ ಭಕ್ತರು ನನಗೆ ಪ್ರಿಯರಲ್ಲವೆಂದು ಭಾವಿಸಬೇಡ. ಅವರೆಲ್ಲರೂ ತ್ಯಾಗಶೀಲರೇ ಆಗಿರುತ್ತಾರೆ. ನನ್ನ ಭಕ್ತರು ನನಗೆ ಎಂದಿಗೂ ಅಪ್ರಿಯರಾಗುವುದೇ ಇಲ್ಲ. ಆದರೆ ಜ್ಞಾನಿಯು ಮಾತ್ರ ಅತ್ಯಂತಪ್ರಿಯನು. ಪ್ರಿಯನು ಎನ್ನುವುದಕ್ಕಿಂತಲೂ ಅವನು ನನ್ನ ಆತ್ಮನೇ ಎಂದು ನನ್ನ ಅಭಿಮತವಾಗಿದೆ. ಅವನು ನನಗಿಂತಲೂ ಬೇರೆಯವನಲ್ಲ. ಅವನು ಮನಸ್ಸನ್ನು ಸಮತ್ವದಲ್ಲಿಟ್ಟುಕೊಂಡಿರುವವನು ; ಸಮಾಹಿತಚಿತ್ತನಾಗಿರುವವನು ; ನನ್ನಲ್ಲಿಯೇ ಲೀನವಾದ ಮನಸ್ಸುಳ್ಳವನು ; ಅನನ್ಯಗತಿಕನು ; ಅನನ್ಯ ಶರಣನು. ನನ್ನನ್ನು ಹೃನ್ಮಂದಿರದಲ್ಲಿ ಕಂಡುಕೊಂಡ ಅವನಿಗೆ ಬೇರಾವುದರ ಅರಿವೂ ಇರುವುದಿಲ್ಲ. ನನ್ನನ್ನೇ ಶ್ರೇಷ್ಠನಾದ ಆಶ್ರಯನೆಂದು ನಿಶ್ಚಯಿಸಿ ನನ್ನಲ್ಲಿಯೇ–ನನ್ನ ಧ್ಯಾನಾನುಸಂಧಾನದಲ್ಲಿಯೇ ಇದ್ದುಬಿಡುತ್ತಾನೆ.)

o o o

**ಯುಕ್ತಾತ್ಮಾ ಸ್ವಯಂ** = ನಾನೇ ಭಗವಂತನಾದ ವಾಸುದೇವನು, ನಾನು ಅವನಿಂದ ಅನ್ಯನಲ್ಲ–ಎಂದು ನನ್ನಲ್ಲಿ ಯುಕ್ತನಾಗಿರುವ ಸಮಾಹಿತಚಿತ್ತನು.

(ಶಂ. ಭಾ.)

ಅವರೆಲ್ಲರೂ ನನ್ನನ್ನೇ ಉಪಾಸನೆಮಾಡುವುದರಿಂದ ಉದಾರಿಗಳು. ನನ್ನಿಂದ ಯಾವ ಒಂದಿಷ್ಟನ್ನು ತೆಗೆದುಕೊಂಡರೆ ಅವರೇ ನನಗೆ ಸರ್ವಸ್ವವನ್ನೂ ಕೊಟ್ಟವರಂತೆ. ಜ್ಞಾನಿಯಾದರೋ ನನಗೆ ಆತ್ಮವೇ. ಏಕೆಂದರೆ ಅವನ ಜೀವನವು ನನಗೆ ಅಧೀನ. ಅವನು ಮದ್ಗತಪ್ರಾಣನು, ಮದಾಯತ್ತಜೀವನನು. ನನ್ನನ್ನು ಬಿಟ್ಟು ಆತ್ಮಧಾರಣೆಯೇ ಸಂಭವವಿಲ್ಲವೆಂದು ತಿಳಿದು ನನ್ನನ್ನೇ ಶ್ರೇಷ್ಠತಮಪ್ರಾಪ್ಯನನ್ನಾಗಿ ಆತನು ಆಶ್ರಯಿಸಿದ್ದಾನೆ.

ಆದುದರಿಂದ ಅವನನ್ನು ಬಿಟ್ಟು ನನಗೂ ಆತ್ಮಧಾರಣೆಯಿಲ್ಲ. ಆದುದರಿಂದ ಅವನು ನನಗೆ ಆತ್ಮವೇ ಅಲ್ಲವೇ? (ರಾ. ಭಾ.)

**ಓಂ ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥೧೯॥**

ಅನೇಕಜನ್ಮಗಳ ಕೊನೆಯಲ್ಲಿ ಇಂತಹ ಜ್ಞಾನವನ್ನು ಪಡೆದು–'ವಾಸು ದೇವನೇ ಸರ್ವಸ್ವವು'–ಎಂದು ತಿಳಿದು ನನ್ನನ್ನು ಹೊಂದುತ್ತಾನೆ. ಅಂತಹ ಮಹಾತ್ಮನು ಸುಲಭವಾಗಿ ಸಿಕ್ಕತಕ್ಕವನಲ್ಲ.

* * *

(ಇಂತಹ ಜ್ಞಾನವು ಸುಲಭಸಾಧ್ಯವಲ್ಲ. ಬಹುಜನ್ಮಗಳ ಸಾಧನೆಯು ಅದಕ್ಕೆ ಬೇಕು. ಜ್ಞಾನಕ್ಕೆ ಬೇಕಾದ ಸಂಸ್ಕಾರಗಳನ್ನು ಅನೇಕಜನ್ಮಗಳಲ್ಲಿ ಪಡೆದು ಪರಿಪಕ್ವಜ್ಞಾನವನ್ನು ಪಡೆದವನು 'ವಾಸುದೇವನೇ ಸರ್ವನು' ಎಂಬುದನ್ನು ಅನುಭವದಿಂದ ತಿಳಿದುಕೊಂಡು (ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡು) ನನ್ನನ್ನು ಸೇರುತ್ತಾನೆ. ಇದು ಒಂದೆರಡು ಜನ್ಮಗಳಲ್ಲಿ ಸಾಧಿಸತಕ್ಕ ಕಾರ್ಯವೇ ಅಲ್ಲ. ಜ್ಞಾನಿಗಳಾಗಿ ನಮಗೆ ಇಂದು ಕಾಣಿಸಿಕೊಳ್ಳುತ್ತಿರುವವರೂ ಸಹ ಅನೇಕಜನ್ಮಗಳಲ್ಲಿ ಸಾಧನೆಮಾಡಿ ಈ ಜನ್ಮದಲ್ಲಿ ಸಾಕ್ಷಾತ್ಕಾರವನ್ನು ಪಡೆದವರೇ ಆಗಿದ್ದಾರೆ. ಇದಕ್ಕೆ ಶ್ರೀರಾಮಕೃಷ್ಣರು ಒಂದು ಕಥೆಯನ್ನು ಹೇಳುತ್ತಿದ್ದರು :

ಶಾಕ್ತೇಯನೊಬ್ಬನು ಶಕ್ತಿದೇವತೆಯ ಪೂಜೆಗಾಗಿ ಸ್ಮಶಾನದಲ್ಲಿ ಎಲ್ಲವನ್ನೂ ಸಿದ್ಧಮಾಡಿಕೊಂಡು ಕುಳಿತಿದ್ದನು. ಆ ಸಮಯಕ್ಕೆ ಸರಿಯಾಗಿ ಹುಲಿಯೊಂದು ಬಂದು ಅವನನ್ನು ಕೊಂದುಬಿಟ್ಟಿತು. ಆ ಸಂದರ್ಭದಲ್ಲಿಯೇ ದಾರಿಹೋಕನೊಬ್ಬನು ಹುಲಿಯನ್ನು ಕಂಡು ಹೆದರಿ ಮರದ ಮೇಲೆ ಹತ್ತಿ ಕುಳಿತಿದ್ದನು. ಶಾಕ್ತೇಯನನ್ನು ಹುಲಿಯು ಕೊಂದು ಹೊರಟುಹೋದನಂತರ ಹಾದಿಗನು ಮರದಿಂದ ಇಳಿದು ಪರಿಸರವನ್ನು ನೋಡಿದನು. ಶಕ್ತಿಯ ಪೂಜೆಗೆ ಎಲ್ಲವೂ ಸಿದ್ಧವಾಗಿತ್ತು. ತಾನೇ ಆ ಪೂಜೆಯನ್ನು ಮಾಡಬೇಕೆಂಬ ಮನಸ್ಸು ಅವನಿಗುಂಟಾಯಿತು. ಶಾಕ್ತೇಯನ ದೇಹವನ್ನು ಬದಿಗೆ ಸರಿಸಿ ಅವನ ಆಸನದಲ್ಲಿಯೇ ತಾನು ಕುಳಿತು ಪೂಜೆಯನ್ನು ಪ್ರಾರಂಭಿಸಿದನು.

ಪೂಜೆಯು ಮುಗಿದೊಡನೆಯೇ ದೇವಿಯು ಪ್ರತ್ಯಕ್ಷಳಾದಳು. ಹಾದಿಗನು ಅಚ್ಚರಿಯಿಂದ ಕೇಳಿದನು :

"ಅಮ್ಮ! ಕೇವಲ ಇಂದಿನ ಪೂಜೆಯಿಂದಲೇ ನೀನು ಸುಪ್ರೀತಳಾಗಿ ಬಿಟ್ಟೆಯಾ?"

"ಇಲ್ಲ ಮಗು! ನೀನು ಅನೇಕಜನ್ಮಗಳಲ್ಲಿ ಅನೇಕವಿಧವಾಗಿ ನನ್ನನ್ನು ಆರಾಧಿಸಿರುವೆ. ಈ ಜನ್ಮದಲ್ಲಿ ಇಷ್ಟುಮಾತ್ರ ಪೂಜೆಮಾಡುವುದು ಉಳಿದಿತ್ತು. ಕಾಲಕರ್ಮವಶದಿಂದ ಅದನ್ನು ನೀನೀಗ ಮುಗಿಸಿರುವೆ. ನಿನಗೇನು ಬೇಕು ಕೇಳಿಕೋ"–ಎಂದು ಶಕ್ತಿದೇವತೆಯು ಹೇಳಿತು.

ಹೀಗೆ ಅನೇಕ ಜನ್ಮಗಳಲ್ಲಿ ಅನವರತವಾಗಿ ಸಾಧನೆಯನ್ನು ಮಾಡು ತ್ತಿದ್ದರೆ ಅದರ ಫಲವು ಒಮ್ಮೆ ನಮಗೆ ಲಭ್ಯವಾಗುತ್ತದೆ. ಅನೇಕ ವಿಜ್ಞಾನಿಗಳನ್ನು ಕಂಡಿದ್ದೇವೆ. ಆರೆಂಟು ವರ್ಷದವರಾಗಿರುವಾಗಲೇ ಅವರಿಗೆ ಅಸಾಧಾರಣವಾದ ಪ್ರೌಢಿಮೆಯಿರುತ್ತದೆ. ಇದು ಕೇವಲ ಒಂದು ಜನ್ಮದ ಅಭ್ಯಾಸದಿಂದ ಲಭ್ಯವಾದುದಲ್ಲ. ಅವರು ಈ ಜನ್ಮದಲ್ಲಿ ಅಭ್ಯಾಸವನ್ನೇ ಮಾಡಿರುವುದಿಲ್ಲ. ಆದರೂ ಸಹ ಅವರಿಗೆ ಆ ದಿವ್ಯಶಕ್ತಿಯಿರುತ್ತದೆ. ಭೌತಿಕ ವಾದ ಜ್ಞಾನಕ್ಕೇ ಜನ್ಮಜನ್ಮಾಂತರಗಳ ಸಾಧನೆಯಿರಬೇಕೆನ್ನುವುದಾದರೆ ಆಧ್ಯಾತ್ಮಿಕಜ್ಞಾನದ ವಿಷಯವಾಗಿ ಹೇಳಬೇಕಾಗಿಯೇ ಇಲ್ಲ. 'ಮನುಷ್ಯಾಣಾಂ ಸಹಸ್ರೇಷು' 'ಎಷ್ಟೋ ಸಾವಿರ ಮನುಷ್ಯರಲ್ಲಿ ಒಬ್ಬನು ನನ್ನನ್ನು ತಿಳಿಯಲು ಪ್ರಯತ್ನಿಸುತ್ತಾನೆ. ಹಾಗೆ ಪ್ರಯತ್ನಿಸಿದವರಲ್ಲೂ ಒಬ್ಬಿಬ್ಬರು ಮಾತ್ರ ನನ್ನನ್ನು ತಿಳಿದುಕೊಳ್ಳಬಲ್ಲರು.' ಎಂಬ ವಿಷಯವನ್ನು ಈ ಹಿಂದೆಯೇ ಶ್ರೀಕೃಷ್ಣನು ಹೇಳಿದ್ದಾನೆ. 'ಅನೇಕಾನೇಕ ಜನ್ಮಗಳ ಸಾಧನೆಯನ್ನು ಮಾಡಿದನಂತರ ಒಬ್ಬನು ವಾಸುದೇವನೇ ಸರ್ವಸ್ವವೆಂದು ನನ್ನನ್ನು ಹೊಂದುತ್ತಾನೆ'–ಎಂದು ಹೇಳಿದ ಶ್ರೀಕೃಷ್ಣನು ಅವನೇ ಮಹಾತ್ಮನೆನ್ನುತ್ತಾನೆ. ಮಹಾತ್ಮಾಶಬ್ದದಿಂದ ಬೇರೆಯವರನ್ನು ಕರೆಯತಕ್ಕದ್ದಲ್ಲ. ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಜ್ಞಾನಿಯೇ ಮಹಾತ್ಮನು. ಅಂತಹವನು ಸಿಕ್ಕುವುದು ದುರ್ಲಭ. ಇದು ಶ್ರೀಕೃಷ್ಣನು ಹೇಳಿರುವ ಮಾತು. ವೇದಾಂತಪ್ರವಚನವನ್ನು ಮಾಡುವವ ರೆಲ್ಲರೂ ಜ್ಞಾನಿಗಳಾಗಿಬಿಡುವುದಿಲ್ಲ. ಹಲವಾರು ಸಿದ್ಧಿಗಳನ್ನು ಪಡೆದಿರುವುದ ರಿಂದಲೇ ಮಹಾತ್ಮರಾಗುವುದಿಲ್ಲ. ಸಾಂಸಾರಿಕವಾದ ತೊಂದರೆಗಳನ್ನು ತಾತ್ಕಾ

ಲಿಕವಾಗಿ ಪರಿಹಾರಮಾಡಿದ್ದರಿಂದಲೂ ಅವರು ಮಹಾತ್ಮರಾಗುವುದಿಲ್ಲ. ವಾಸುದೇವನೇ ಸರ್ವಸ್ವವು–ಎಂಬ ಅನುಭವವನ್ನು ಪಡೆದು ಪರಿಪೂರ್ಣ ಪರಮಾತ್ಮಸಾಕ್ಷಾತ್ಕಾರವನ್ನು ಪಡೆದಿರತಕ್ಕವರೇ ಮಹಾತ್ಮರು.

**ಮಹತ್ಸಙ್ಗಸ್ತು ದುರ್ಲಭೋऽಗಮ್ಯೋऽಮೋಘಶ್ಚ** ನಾ.ಭ.ಸೂ.೩೯

ದೊಡ್ಡವರ (ಮಹಾತ್ಮರ) ಸಂಗವಾದರೋ ದುರ್ಲಭ. ಅದನ್ನು ಅರಿತುಕೊಳ್ಳುವುದೂ ಕಷ್ಟ. ದೊರೆತರೆ ಅದು ಅಮೋಘವೂ ಆಗಿರುತ್ತದೆ. ಅಂತಹ ಮಹಾತ್ಮರ ವರ್ಣನೆಯನ್ನು ಭಾಗವತದಲ್ಲಿ ಮಾಡಿದ್ದಾರೆ :

**ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।**
**ಅಜಾತಶತ್ರವಃ ಶಾನ್ತಾಃ ಸಾಧವಃ ಸಾಧುಭೂಷಣಾಃ ॥**
**ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವನ್ತಿ ಯೇ ದೃಢಾಮ್ ।**
**ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾನ್ಧವಾಃ ॥**
**ಮದಾಶ್ರಯಾಃ ಕಥಾಂ ಹೃಷ್ಟಾಃ ಶೃಣ್ವನ್ತಿ ಕಥಯನ್ತಿ ಚ ।**
**ತಪನ್ತಿ ವಿವಿಧಾಂಸ್ತಾಪಾನೇತಾನ್ಮದ್ಗತಚೇತಸಃ ॥**
**ತ ಏತೇ ಸಾಧವಃ ಸಾಧ್ವಿ ಸರ್ವಸಙ್ಗವಿವರ್ಜಿತಾಃ ।**
**ಸಙ್ಗಸ್ತೇಷ್ವಥ ತೇ ಪ್ರಾರ್ಥ್ಯಃ ಸಙ್ಗದೋಷಹರಾ ಹಿ ತೇ ॥**

ಭಾಗವತ ೩-೨೫-೨೧-೨೪

ಸತ್ಪುರುಷರು ತಿತಿಕ್ಷುಗಳಾಗಿರುತ್ತಾರೆ. ಪರಮಕರುಣಾಮೂರ್ತಿಗಳಾಗಿರುತ್ತಾರೆ. ಅವರಿಗೆ ಶತ್ರುಗಳೇ ಇರುವುದಿಲ್ಲ. ಅವರು ಭಗವಂತನನ್ನೇ ಆಶ್ರಯಿಸಿಕೊಂಡು ಆತ್ಮನಲ್ಲಿಯೇ ದೃಢಭಕ್ತಿಯುಳ್ಳವರಾಗಿರುತ್ತಾ ಆತನ ವಿಷಯವಾಗಿ ಮೃದು-ಮಧುರವಾದ ಮಾತುಗಳನ್ನು ಹೇಳುತ್ತಲೂ ಕೇಳುತ್ತಲೂ ಇರುತ್ತಾರೆ. ಆತನಲ್ಲಿಯೇ ನೆಟ್ಟ ಚಿತ್ತವುಳ್ಳವರಾಗಿ ಇರುತ್ತಾರೆ. ಇವರನ್ನು ಬಗೆಬಗೆಯ ತಾಪಗಳು ಪೀಡಿಸಲಾರವು. ಇವರು ಸರ್ವಸಂಗವನ್ನೂ ಪರಿತ್ಯಜಿಸಿರುತ್ತಾರೆ. ಅವರ ಸಂಗವನ್ನು ಪಡೆದುಕೊಂಡರೆ ಸಂಗತ್ಯಾಗವೂ ವಿಷಯತ್ಯಾಗವೂ ಸುಲಭವಾಗಿ ಆಗುತ್ತದೆ. ಪ್ರಾಪಂಚಿಕಸಂಗದಿಂದುಂಟಾದ ಮೋಹಾದಿಗಳನ್ನು ಮಹಾತ್ಮರ ಸಂಗವು ಪರಿಹರಿಸುತ್ತದೆ. (ಮಹಾತ್ಮರು ಶೋಕಮೋಹಾದಿಗಳನ್ನು ಪರಿಹರಿಸುತ್ತಾರೆ.)

o o o

**ಜ್ಞಾನವಾನ್** = ಜ್ಞಾನಪರಿಪಾಕವನ್ನು ಹೊಂದಿದವನು. **ಮಾಂ ವಾಸುದೇವಃ ಸರ್ವಮಿತಿ ಪ್ರಪದ್ಯತೇ**=ವಾಸುದೇವನಾಗಿರುವ ಪ್ರತ್ಯಗಾತ್ಮನಾದ ನನ್ನನ್ನು ಸರ್ವವೂ ವಾಸುದೇವನೇ ಎಂದು ಪ್ರತ್ಯಕ್ಷವಾಗಿ ಹೊಂದುತ್ತಾನೆ. ಹೀಗೆ ಸರ್ವಾತ್ಮನಾದ ನನ್ನನ್ನು ಪ್ರತ್ಯಕ್ಷವಾಗಿ ಅನುಭವಿಸುವವನೇ ಮಹಾತ್ಮನು. ಅವನಿಗೆ ಸಮರಾಗಲೀ-ಅಧಿಕರಾಗಲೀ ಬೇರೆ ಯಾರೂ ಇಲ್ಲ. ಅಂತಹವನು ದುರ್ಲಭನು. (ಶಂ. ಭಾ.)

ಮೇಲೆ ಹೇಳಿದ ಜ್ಞಾನವು ಅಲ್ಪಸಂಖ್ಯೆಯ ಪುಣ್ಯಜನ್ಮಗಳ ಫಲವಲ್ಲ. ಅನೇಕಪುಣ್ಯಜನ್ಮಗಳ ಕೊನೆಯಲ್ಲಿ–'ವಾಸುದೇವಶೇಷತ್ವವೆಂಬುದೊಂದೇ ನನ್ನ ರಸ. ನನ್ನ ಸ್ವರೂಪಸ್ಥಿತಿ-ಪ್ರವೃತ್ತಿಗಳು ಅವನಿಗೆ ಅಧೀನ. ಅವನು ಅನಂತಕಲ್ಯಾಣಗುಣಗಣಗಳಿಂದ ಪರತರನು'–ಎಂಬ ಜ್ಞಾನವುಳ್ಳವನಾಗಿ ಆ ವಾಸುದೇವನೇ ನನಗೆ ಪರಮಪ್ರಾಪ್ಯ ಮತ್ತು ಪ್ರಾಪಕ. ನನ್ನ ಮನೋರಥಕ್ಕೆ ವಿಷಯವಾದ ಉಳಿದುದೆಲ್ಲವೂ ಕೂಡ ಅವನೇ. ಅವನೇ ನನಗೆ ಎಲ್ಲವೂ ಆಗಿದ್ದಾನೆ. ಅವನೇ ನನ್ನ ಸರ್ವಸ್ವ–ಎಂದು ನನ್ನನ್ನು ಉಪಾಸನೆ ಮಾಡುವವನು ಮಹಾತ್ಮನು ; ಮಹಾಮನಸ್ಸುಳ್ಳವನು. ಅಂತಹವನು ಲೋಕದಲ್ಲಿ ಅತ್ಯಂತದುರ್ಲಭ. (ರಾ.ಭಾ.)

ಬಹಳ ಜನ್ಮಗಳ ಕೊನೆಯಲ್ಲಿ ಜ್ಞಾನಿಯಾಗುತ್ತಾನೆ. ಮತ್ತು ನನ್ನನ್ನು ಹೊಂದುತ್ತಾನೆ.

**ಬಹುಭಿರ್ಜನ್ಮಭಿರ್ಜ್ಞಾತ್ವಾ ತತೋ ಮಾಂ ಪ್ರತಿಪದ್ಯತೇ ॥**

(ಮ. ಭಾ.)

**ಓಂ ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥೨೦॥**

ಆಯಾ ಕಾಮಗಳಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು ತಮ್ಮ ಪ್ರಕೃತಿಯಿಂದ ನಿಯಂತ್ರಿತರಾಗಿ ಆಯಾ ನಿಯಮಗಳನ್ನು ಅನುಸರಿಸಿ ಬೇರೆ ದೇವತೆಗಳನ್ನು ಶರಣುಹೋಗುತ್ತಾರೆ.

* * *

(ಆತ್ಮಜ್ಞಾನವನ್ನು ಇಷ್ಟು ಪರಿಯಿಂದ ವಿವರಿಸಿದರೂ, ಆತ್ಮಜ್ಞಾನದ ಆನಂದವು ಇತರ ಆನಂದಗಳಿಗಿಂತಲೂ ಕೋಟಿಪಾಲು ಹೆಚ್ಚಿನದೆಂದು ಹೇಳಿದರೂ–'ವಾಸುದೇವನೇ ಸರ್ವಸ್ವ'–ಎಂದು ಎಲ್ಲರೂ ಏಕೆ ಭಾವಿಸಿ ಸಾಧನೆ

ಮಾಡುವುದಿಲ್ಲ?–ಎಂಬುದಕ್ಕೆ ಶ್ರೀಕೃಷ್ಣನು ಎರಡು ಮುಖ್ಯ ಕಾರಣಗಳನ್ನು ಕೊಡುತ್ತಾನೆ. ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಕಾಮನೆಯಿರುತ್ತದೆ. ಆ ಕಾಮನೆಗಳನ್ನು ಪೂರೈಸಿಕೊಳ್ಳಲು ಆಯಾ ಕಾಮನೆಗಳಿಗೆ ಅಧಿಪತಿಗಳಾದ ದೇವತೆಗಳನ್ನು ಆರಾಧಿಸಿ ತಮ್ಮ ಕಾಮನೆಗಳನ್ನು ಪೂರೈಸಿಕೊಳ್ಳುತ್ತಾರೆ. ಕಾಮ್ಯಫಲಗಳನ್ನು ಕೊಡುವ ದೇವತೆಗಳನ್ನು ಆರಾಧಿಸಲೂ ಒಂದು ಕ್ರಮ ವಿದೆ; ನಿಯಮವಿದೆ. ಆ ನಿಯಮಕ್ಕೆ ಅನುಗುಣವಾಗಿ ದೇವತೆಗಳನ್ನು ಪೂಜಿಸಿ ಕಾಮ್ಯಫಲಗಳನ್ನು ಪಡೆದುಕೊಳ್ಳುತ್ತಾರೆ. ಎರಡನೆಯದಾಗಿ : ಅವರವರ ಪ್ರಕೃತಿಗೆ ಅನುಗುಣವಾಗಿ ಆಯಾ ದೇವತೆಗಳನ್ನು ಪೂಜಿಸುತ್ತಾರೆ. ದೇವತೆಗಳಲ್ಲಿಯೂ ಸಾತ್ತ್ವಿಕ-ರಾಜಸ-ತಾಮಸದೇವತೆಗಳಿವೆ. ಮನುಷ್ಯನು ತಾಮಸಸ್ವಭಾವದವನಾದರೆ ಅವನು ಭೂತ-ಪ್ರೇತಗಳನ್ನೇ ಪೂಜಿಸುತ್ತಾನೆ. ರಾಜಸಗುಣದವನಾದರೆ ಯಕ್ಷ-ರಾಕ್ಷಸರನ್ನು ಪೂಜಿಸುತ್ತಾನೆ. ಸಾತ್ತ್ವಿಕ ಗುಣಸಂಪನ್ನನಾದರೆ ಸತ್ತ್ವಪ್ರಧಾನರಾದ ದೇವತೆಗಳನ್ನು ಪೂಜಿಸುತ್ತಾನೆ. ಅದರಲ್ಲಿ ಅವನಿಗೆ ಅಭಿರುಚಿಯು ಸ್ವಾಭಾವಿಕವಾಗಿಯೇ ಹುಟ್ಟುತ್ತದೆ. ಈ ಪ್ರಕೃತಿಯು ಎಂದರೆ ಸಾತ್ತ್ವಿಕ-ರಾಜಸ-ತಾಮಸಗುಣಗಳು ಹುಟ್ಟುವಾಗಲೇ ಅವನ ಜೊತೆಯಲ್ಲೇ ಬಂದಿರುತ್ತವೆ. ಇದಕ್ಕೆ ವಾಸನೆಗಳೆಂದೂ ಹೆಸರು. ಅವನ ಪೂರ್ವಜನ್ಮದ ವಾಸನೆಗೆ ಅನುಗುಣವಾಗಿ ಈ ಜನ್ಮದಲ್ಲವನು ತನ್ನ ಗುಣಕ್ಕೆ ಅನುರೂಪವಾದ ಗುಣಗಳುಳ್ಳ ದೇವತೆಯನ್ನೇ ಪೂಜಿಸುತ್ತಾನೆ.

ಆದರೆ ದಯಾಮಯನಾದ ಪರಮಾತ್ಮನು ಅಂತಹವರಿಗೂ ನಿರಾಶೆ ಯನ್ನುಂಟುಮಾಡುವುದಿಲ್ಲ.)

o o o

**ಹೃತಜ್ಞಾನಾಃ**= ನಷ್ಟವಾದ ವಿವೇಕವಿಜ್ಞಾನವುಳ್ಳವರಾಗಿ, **ಪ್ರಕೃತ್ಯಾ**= ಸ್ವಭಾವದಿಂದ, ಜನ್ಮಾಂತರದಿಂದ ಸಂಪಾದಿಸಲ್ಪಟ್ಟ ಸಂಸ್ಕಾರವಿಶೇಷದಿಂದ **ಅನ್ಯದೇವತಾಃ**= ಆತ್ಮಸ್ವರೂಪನಾದ ವಾಸುದೇವನಿಂದ ಭಿನ್ನರಾದ ದೇವತೆ ಗಳನ್ನು, **ತಂ ತಂ ನಿಯಮಂ ಆಸ್ಥಾಯ** = ಆಯಾ ದೇವತಾರಾಧನೆಗೆ ಪ್ರಸಿದ್ಧವಾಗಿರುವ ನಿಯಮವನ್ನು ಅವಲಂಬಿಸಿ. (ಶಂ. ಭಾ.)

**ಪ್ರಕೃತ್ಯಾ** = ಗುಣಮಯಭಾವವಿಷಯವಾದ ವಾಸನೆಯಿಂದ, **ನಿಯತಾಃ**= ಸದಾ ಕೂಡಿದವರಾಗಿ.

**ಹೃತಜ್ಞಾನಾಃ**= ನನ್ನ ಸ್ವರೂಪವಿಷಯವಾದ ಜ್ಞಾನವನ್ನು ಕಳೆದು ಕೊಂಡವರಾಗಿ, **ಅನ್ಯದೇವತಾಃ**= ನನ್ನಿಂದ ಬೇರೆಯಾದ ಇಂದ್ರಾದಿದೇವತೆ ಗಳನ್ನು, **ತಂ ತಂ ನಿಯಮಮಾಸ್ಥಾಯ** = ಆಯಾ ದೇವತಾವಿಶೇಷಕ್ಕೆ ಮಾತ್ರ ಸಂತೋಷವನ್ನುಂಟುಮಾಡುವ ಅಸಾಧಾರಣವಾದ ನಿಯಮವನ್ನು ಆಶ್ರಯಿಸಿ, **ಪ್ರಪದ್ಯನ್ತೇ** = ಆ ದೇವತೆಗಳನ್ನೇ ಆಶ್ರಯಿಸಿ ಪೂಜಿಸುತ್ತಾರೆ.

**ಅನ್ಯದೇವತಾಃ**= ಇಂದ್ರಾದಿ ದೇವತೆಗಳನ್ನು. ಇಂದ್ರಾದಿದೇವತೆಗಳನ್ನು ಭಗವತ್ಪರ್ಯಂತವಾಗಿ ಅನುಸಂಧಾನಮಾಡಿದರೆ ಆಯಾ ದೇವತಾ ವಿಶಿಷ್ಟ ನಾದ ಭಗವಂತನೇ ಫಲವನ್ನು ದಯಪಾಲಿಸುತ್ತಾನೆ. ಆದುದರಿಂದ ಇಲ್ಲಿ ಹೇಳಿರುವ ಅನ್ಯದೇವತೋಪಾಸನೆಯು ಭಗವಂತನನ್ನು ಬಿಟ್ಟು ಅವನಿಂದ ವ್ಯತಿರಿಕ್ತರೆಂದು ಭಾವಿಸಿ ಬೇರೆ ದೇವತೆಗಳನ್ನು ಉಪಾಸನೆಮಾಡುವಿಕೆ.

ಆಯಾ ಕಾಮನೆಗಳು ಸಿದ್ಧಿಯಾಗಬೇಕಾದರೂ ನಿಪುಣರಾದವರು ಆಯಾ ದೇವತೆಗಳಲ್ಲಿ ಅಂತರ್ಯಾಮಿಯಾಗಿರುವ ಭಗವಂತನನ್ನೇ ಶರಣು ಹೊಂದಬೇಕು. (ರಾ. ಭಾ.)

**ಪ್ರಕೃತ್ಯಾ** = ಸ್ವಭಾವದಿಂದ, **ಸ್ವಭಾವಃ ಪ್ರಕೃತಿಶ್ಚೈವ ಸಂಸ್ಕಾರೋ ವಾಸನೇಽಪಿ ಚ (ಕೋಶಃ)** (ಮ. ಭಾ.)

**ಓಂ ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು-**
**ಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥೨೧॥**

ಯಾವ ಯಾವ ಭಕ್ತನು ಯಾವ ಯಾವ ನನ್ನ ಶರೀರವನ್ನು ಶ್ರದ್ಧೆಯಿಂದ ಕೂಡಿ ಪೂಜಿಸುವುದಕ್ಕೆ ಇಚ್ಛಿಸುತ್ತಾನೆಯೋ–ಆಯಾ ಭಕ್ತನಿಗೆ ಅವನ ಆ ಶ್ರದ್ಧೆಯನ್ನೇ ಅಚಲವಾಗಿ ಮಾಡುವೆನು.

* * *

(ಎಲ್ಲ ದೇವತೆಗಳ ಶರೀರವೂ ತನ್ನದೇ ಎಂಬ ಪರಮಾತ್ಮನ ಅಭಿ ಪ್ರಾಯವು ಈ ಶ್ಲೋಕದಲ್ಲಿದೆ. ವರಪ್ರದರಾದ ಆ ಎಲ್ಲ ದೇವತೆಗಳೂ ಸಹ ಪರಮಾತ್ಮನಿಂದಲೇ ಆವಿರ್ಭಾವಹೊಂದಿರುತ್ತಾರೆ. ಅವನ ಶರೀರವೇ ಆಗಿದ್ದಾರೆ. ಅವನೇ ಅವರಿಗೆ ಆತ್ಮಭೂತನಾಗಿ ಅವರ ಮೂಲಕ ಫಲವನ್ನು ದಯಪಾಲಿಸುತ್ತಾನೆ. ಈ ಕಾರಣದಿಂದಲೇ ಶ್ರೀಕೃಷ್ಣನು 'ಯಾವ ಭಕ್ತನು

ಯಾವುದೇ ರೂಪದ ನನ್ನ ಮೂರ್ತಿಯನ್ನು ಶ್ರದ್ಧೆಯಿಂದಲೂ ಭಕ್ತಿಯಿಂದಲೂ ಪೂಜಿಸಲು ಇಚ್ಛಿಸುತ್ತಾನೆಯೋ–ಆ ಭಕ್ತನಿಗೆ ಅದೇ ರೂಪದಿಂದಲೇ ಅವನು ಅಪೇಕ್ಷಿಸಿದ ಕಾಮನೆಗಳನ್ನು ಪೂರೈಸಿಕೊಡುತ್ತೇನೆ. ಇದರಿಂದಾಗಿ ಅನ್ಯದೇವತಾಭಕ್ತನಾದವನು ಅನ್ಯದೇವತೆಯಲ್ಲಿಯೇ ಅಚಲವಾದ ಶ್ರದ್ಧಾ-ಭಕ್ತಿಗಳನ್ನಿಟ್ಟುಕೊಳ್ಳುವಂತೆ ನಾನು ಮಾಡುತ್ತೇನೆ'–ಎನ್ನುತ್ತಾನೆ.

ಗಣಪತಿಯನ್ನು ಪೂಜಿಸುವವನು ಗಣಪತಿಯಿಂದಲೇ ತನ್ನ ಇಷ್ಟ ಕಾಮನೆಗಳನ್ನು ಪಡೆದುಕೊಳ್ಳುತ್ತಾನೆ. ಇದರಿಂದಾಗಿ ಗಣಪತಿಯಲ್ಲಿಯೇ ಅವನಿಗೆ ಅಚಲವಾದ ಭಕ್ತಿ-ಶ್ರದ್ಧೆಗಳುಂಟಾಗುತ್ತವೆ. ತನ್ನ ಕುಲಸ್ವಾಮಿಯು ಯಾರೇ ಆಗಿರಲಿ ; ಅವನನ್ನು ನಂಬಿ ಕೆಟ್ಟವರಿಲ್ಲ. ಯಾವ ದೇವತೆಯ ವಿಷಯದಲ್ಲೇ ಆಗಲೀ ಅವ್ಯಭಿಚಾರಿಣಿಯಾದ ಶ್ರದ್ಧಾ-ಭಕ್ತಿಗಳಿರಬೇಕು. ನಮ್ಮ ಪ್ರಕೃತಿಗೆ ಅನುಗುಣವಾದ ಒಬ್ಬ ದೇವತೆಯನ್ನು ಅಥವಾ ನಮ್ಮ ಕುಲ ಸ್ವಾಮಿಯನ್ನು ಆಶ್ರಯಿಸಿದನಂತರ ಕಂಡ ಕಂಡ ದೇವತೆಗಳಿಗೆ ಕೈಮುಗಿದು ಅವರನ್ನು ಉಪಾಸನೆಮಾಡಬೇಕಾಗಿಲ್ಲ. 'ಕಂಡ ಕಂಡ ದೇವತೆಗಳಿಗೆಲ್ಲಾ ಕೈಮುಗಿದರೂ ಅವನ ಕೆಲಸವು ಮಾತ್ರ ಆಗಲಿಲ್ಲ'–ಎಂದು ಕೆಲವರ ವಿಷಯ ದಲ್ಲಿ ಅನುಕಂಪವನ್ನು ತೋರಿಸುವುದುಂಟು. ಕಂಡ ಕಂಡ ದೇವತೆಗಳಿಗೆ ಕೈಮುಗಿದರೆ ಅದರಿಂದ ಫಲಸಿದ್ಧಿಯಾಗುವುದೆಂಬ ಭರವಸೆಯನ್ನು ಶಾಸ್ತ್ರಗಳು ಹೇಳಿಲ್ಲ. ತನ್ನನ್ನು ಬಿಟ್ಟು ಬೇರೆಯ ದೇವರ ಬಳಿಗೆ ಹೋದೊಡನೆಯೇ ಇಷ್ಟದೇವತೆಯು ಕೈಬಿಡುತ್ತದೆ. ಮುಂದಿನ ದೇವತೆಯು ಕೈಹಿಡಿಯುವುದಿಲ್ಲ. **ಉಭಯತಶ್ಚ್ಯವತೇ** ಎರಡು ಕಡೆಗಳಿಂದಲೂ ಜಾರುತ್ತಾನೆ ಎಂಬ ಶ್ರುತಿವಾಕ್ಯವೇ ಇದೆ. ಹೀಗಾಗಿ 'ಭಕ್ತನು' ತ್ರಿಶಂಕುವಾಗುತ್ತಾನೆ. ಆದುದರಿಂದ ಒಬ್ಬ ದೇವತೆಯನ್ನಾಶ್ರಯಿಸುವುದು ಶ್ರೇಯಸ್ಕರ. ಶ್ರೀಕೃಷ್ಣನ ಪ್ರತಿಜ್ಞೆಯಂತೆ ಪರಮಾತ್ಮನ ಶರೀರವೇ ಆದ ಯಾವುದೇ ದೇವತೆಯನ್ನು ನಾವು ಶ್ರದ್ಧಾ-ಭಕ್ತಿಗಳಿಂದ ಆರಾಧಿಸಿದರೂ ನಮ್ಮ ಕಾಮನೆಗಳು ಕೈಗೂಡುವುವು. ಇದರಲ್ಲಿ ಸಂಶಯವೇ ಇಲ್ಲ. ಭಕ್ತಿಯು ಅವ್ಯಭಿಚಾರಿಣಿಯಾಗಿರಬೇಕು. ಇದು ಬಹುಮುಖ್ಯ. )

o o o

**ತಸ್ಯ ಅಹಂ** = ಮನುಷ್ಯನು ಸ್ವಾಭಾವಿಕವಾಗಿಯೇ ಪ್ರವೃತ್ತನಾಗಿ

ಯಾವ ಶ್ರದ್ಧೆಯ ಮೂಲಕ ಯಾವ ದೇವತಾಸ್ವರೂಪವನ್ನು ಪೂಜಿಸಲು ಬಯಸುತ್ತಾನೆಯೋ–ಆ ಮನುಷ್ಯನಿಗೆ ಅದೇ ಶ್ರದ್ಧೆಯನ್ನು ನಾನು ಸ್ಥಿರಪಡಿಸುತ್ತೇನೆ. (ಶಂ. ಭಾ.)

ಆ ದೇವತೆಗಳೂ ಕೂಡ–**ಯ ಆದಿತ್ಯೇ ತಿಷ್ಠನ್ ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ** (ಬೃಹದಾರಣ್ಯಕ ೫-೯) ಮುಂತಾದ ಶ್ರುತಿಗಳು ಪ್ರತಿಪಾದಿಸುವಂತೆ ನನ್ನ ಶರೀರಗಳೇ ಆಗಿದ್ದಾರೆ. ಅವು ನನ್ನ ಶರೀರಗಳೆಂದು ಅರಿಯದಿದ್ದರೂ ಕೂಡ ಯಾವನು ಆಯಾ ದೇವತಾರೂಪವಾದ ನನ್ನ ಶರೀರವನ್ನು ಶ್ರದ್ಧೆಯಿಂದ ಪೂಜಿಸಲು ಬಯಸುತ್ತಾನೆಯೋ– ಆಯಾ ಭಕ್ತನಿಗೆ. ಅವನಿಗೆ ಆ ಅರಿವಿಲ್ಲದಿದ್ದರೂ ಕೂಡ, ನನ್ನ ಆ ಶರೀರದ ವಿಷಯದಲ್ಲಿಯೇ ಆತನಿಗೆ ಶ್ರದ್ಧೆಯಿದೆ–ಎಂದು ಅನುಸಂಧಾನಮಾಡಿ ಆ ಶ್ರದ್ಧೆಯೇ ಅವನಿಗೆ ನಿರ್ವಿಘ್ನವಾಗಿ ಇರುವಂತೆ ಮಾಡುತ್ತೇನೆ. (ರಾ. ಭಾ.)

**ಯಾಂ ಯಾಂ ತನುಂ**=ಬ್ರಹ್ಮಾದಿರೂಪವಾದ ಯಾವ ಯಾವ ಶರೀರವನ್ನು. ಆದರೆ ಬ್ರಹ್ಮಾದಿದೇವತೆಗಳ ಭಕ್ತರಿಗೆ ನಾಶವುಂಟು. ನನ್ನ ಭಕ್ತರಿಗೆ ನಾಶವಿಲ್ಲ. **ಅನ್ತೋ ಬ್ರಹ್ಮಾದಿಭಕ್ತಾನಾಂ ಮದ್ಭಕ್ತಾನಾಂ ಅನನ್ತತಾ ।** (ಮ. ಭಾ.)

ಮುಂದಿನ ಶ್ಲೋಕದಲ್ಲಿ ಇದೇ ವಿಷಯವನ್ನು ಶ್ರೀಕೃಷ್ಣನು ಇನ್ನೂ ಸ್ಪಷ್ಟಪಡಿಸುತ್ತಾನೆ.

**ಓಂ ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿ ತಾನ್ ॥೨೨॥**

ಅವನು ಆ ಶ್ರದ್ಧೆಯಿಂದ ಕೂಡಿದವನಾಗಿ ಆ ನನ್ನ ತನುವಿನ (ಮೂರ್ತಿಯ) ಆರಾಧನೆಯನ್ನು ಮಾಡಲು ಪ್ರಯತ್ನಿಸುತ್ತಾನೆ. ನನ್ನಿಂದಲೇ ಉಂಟಾದ ಆ ಕಾಮನೆಗಳನ್ನು ಅವನು ಆ ದೇವತೆಯ ಮೂಲಕ ಪಡೆದುಕೊಳ್ಳುತ್ತಾನೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು–'ಅವನಿಗೆ ಆ ದೇವತೆಯಲ್ಲಿಯೇ ಅಚಲವಾದ ಶ್ರದ್ಧೆಯು ಬೆಳೆಯುವಂತೆ ಮಾಡುವೆನು'–ಎಂದು ಹೇಳಿದನು.

ಈ ಶ್ಲೋಕದಲ್ಲಿ ಅದನ್ನೇ ಮುಂದುವರಿಸಿ ಹೇಳುತ್ತಾನೆ : 'ನನ್ನ ಸಂಕಲ್ಪದಿಂದ ಆವಿರ್ಭೂತವಾದ ಆ ಶ್ರದ್ಧೆಯಿಂದಲೇ ಅನ್ಯದೇವತಾಭಕ್ತನು ಆ ದೇವತೆಯ ಆರಾಧನವನ್ನು ಶ್ರದ್ಧಾ-ಭಕ್ತಿಪೂರ್ವಕವಾಗಿ ಮಾಡುತ್ತಾನೆ. ಅನಂತರ ಆ ದೇವತೆಯ ಮೂಲಕವಾಗಿಯೇ ತನ್ನ ಕಾಮನೆಗಳನ್ನು ಪಡೆದುಕೊಳ್ಳುತ್ತಾನೆ. ಕಾಮಗಳೂ ಸಹ ನನ್ನಿಂದಲೇ ನಿರ್ಮಿತವಾದುವುಗಳು. ಅರ್ಥಾತ್ ದೇವತೆಯೂ ನಾನೇ ; ಕಾಮನೆಗಳೂ ನನ್ನವೇ ; ದಯಪಾಲಿಸುವವನೂ ನಾನೇ ಆಗಿರುತ್ತೇನೆ. ಆದರೆ ದೈವೀಮಾಯೆಯಿಂದಾಗಿ ಮಾನವನು ಈ ರಹಸ್ಯವನ್ನು ಅರಿತಿರುವುದಿಲ್ಲ.'

**ತಯಾ ಶ್ರದ್ಧಯಾ ಯುಕ್ತಃ**= ನಾನು ಉಂಟುಮಾಡಿದ ಆ ಶ್ರದ್ಧೆಯಿಂದ ಕೂಡಿದವನಾಗಿ ; **ತತಃ** = ಆರಾಧಿಸಲ್ಪಟ್ಟ ಆ ದೇವತಾಶರೀರದಿಂದ, **ಮಯ್ಯೈವ ವಿಹಿತಾನ್**–ಪರಮೇಶ್ವರನೂ ಸರ್ವಜ್ಞನೂ ಆದ ನನ್ನಿಂದಲೇ ನಿರ್ಮಿತವಾದ.)

O O O

ವಿಹಿತಾನ್ ಹಿತಾನ್ ಎಂದು ಪದಚ್ಛೇದಮಾಡಿದರೆ ನಾನು ನಿರ್ಮಿಸಿದ ಹಿತವಾದ ಆ ಕಾಮಗಳನ್ನು ಎಂದು ಅರ್ಥ. ಇಲ್ಲಿ ಕಾಮಗಳನ್ನು ಹಿತಕರ ಎಂದು ಕರೆದಿರುವುದು ಔಪಚಾರಿಕವಾಗಿ. ಏಕೆಂದರೆ ನಿಜವಾಗಿಯೂ ಕಾಮಗಳು ಯಾರಿಗೂ ಹಿತಕರವಲ್ಲ. (ಶಂ. ಭಾ.)

ನಿರ್ವಿಘ್ನವಾದ ಆ ಶ್ರದ್ಧೆಯಿಂದ ಕೂಡಿದ ಭಕ್ತನು ಇಂದ್ರನೇ ಮುಂತಾದ ಆಯಾ ದೇವತೆಗಳ ಪೂಜೆಯನ್ನು ಮಾಡಲು ಬಯಸುತ್ತಾನೆ. ನನ್ನ ದೇಹ ವಾಗಿರುವ ಇಂದ್ರಾದಿದೇವತೆಗಳ ಆರಾಧನೆಯಿಂದ ನಾನೇ ನಿರ್ಮಿಸಿರುವ ತನಗೆ ಇಷ್ಟವಾದ ಆ ಕಾಮಗಳನ್ನು ಅವನು ಪಡೆಯುತ್ತಾನೆ. ಪೂಜೆಮಾಡುವ ಸಮಯದಲ್ಲಿ ಆರಾಧಿಸಲ್ಪಡುವ ಇಂದ್ರಾದಿಗಳು ನನ್ನ ಶರೀರಗಳು. ಆದುದ ರಿಂದ ಅವುಗಳ ಪೂಜೆಯೂ ನನ್ನ ಆರಾಧನೆಯೇ ಆಗಿದೆ–ಎಂಬುದನ್ನು ಅವನು ಅರಿತಿರುವುದಿಲ್ಲ. ಆದರೆ ವಾಸ್ತವಿಕವಾಗಿ ಅದು ನನ್ನ ಪೂಜೆಯೇ ಆಗಿರುವುದರಿಂದ ಆ ಪೂಜಕನ ಇಷ್ಟವನ್ನು ನಾನೇ ಪೂರೈಸಿಕೊಡುತ್ತೇನೆ.

(ರಾ. ಭಾ. )

ಓಂ ಅನ್ತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।
ದೇವಾನ್ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥

ಆದರೆ ಅಲ್ಪಬುದ್ಧಿಯುಳ್ಳ ಅವರಿಗೆ ದೊರೆಯುವ ಫಲವು ಅಂತ್ಯವುಳ್ಳದ್ದು. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಸೇರುವರು. ನನ್ನ ಭಕ್ತರಾದರೋ ನನ್ನನ್ನೇ ಸೇರುವರು.

* * *

(ಅನ್ಯದೇವತಾಭಕ್ತರು ಪಡೆದುಕೊಳ್ಳುವ ಫಲದ ವಿಷಯವಾಗಿ ಶ್ರೀಕೃಷ್ಣನು ಹೀಗೆ ಹೇಳುತ್ತಾನೆ : 'ಈ ಕಾಮ್ಯಫಲಗಳೆಲ್ಲವೂ ಅಂತವಿರತಕ್ಕುವುಗಳು. ಇವುಗಳಿಗೆ ಇತಿ-ಮಿತಿಗಳಿವೆ. ಆದುದರಿಂದಲೇ ಅಲ್ಪಫಲಾಪೇಕ್ಷಿಗಳು ಅಲ್ಪಬುದ್ಧಿಯವರು ಎನ್ನುತ್ತಾನೆ ಶ್ರೀಕೃಷ್ಣ. ಅದರ ಕಾರಣವನ್ನು ಹೀಗೆ ನಿರೂಪಿಸುತ್ತಾನೆ. ದೇವತೆಗಳನ್ನು ಪೂಜಿಸಿದವರು ದೇವತೆಗಳನ್ನು ಸೇರುತ್ತಾರೆ. ಅರ್ಥಾತ್ ಅವರ ಲೋಕಗಳನ್ನು ಸೇರುತ್ತಾರೆ. ನನ್ನನ್ನು ಪೂಜಿಸಿದವರು ನನ್ನನ್ನೇ ಸೇರುತ್ತಾರೆ. ಆದರೆ ದೇವತೆಗಳ ಲೋಕಕ್ಕೆ ಹೋದವರು ಪುಣ್ಯವು ಮುಗಿದನಂತರ ಅಲ್ಲಿಂದ ಪುನಃ ಜನ್ಮವನ್ನು ತಾಳಲೇಬೇಕಾಗುತ್ತದೆ. ಆದರೆ ನನ್ನನ್ನು ಪೂಜಿಸಿದರೆ ಅವರಿಗೆ ನಾನು ಅನಂತಫಲವನ್ನು ಕೊಡುತ್ತೇನೆ. ಅವರು ಮುಕ್ತಿಯನ್ನು ಪಡೆದು ನನ್ನನ್ನೇ ಸೇರುತ್ತಾರೆ. ಅವರಿಗೆ ಪುನರ್ಜನ್ಮವಿಲ್ಲ. ದೇವತೆಗಳನ್ನು ಪೂಜಿಸುವವರು ಅಲ್ಪಬುದ್ಧಿಯವರು ಹೇಗೆ? ದೇವತೆಗಳನ್ನು ಪೂಜಿಸಿ ಕಾಮ್ಯಫಲಗಳನ್ನು ಪಡೆದುಕೊಳ್ಳುವುದು ಅಷ್ಟೇನೂ ಕಷ್ಟವಾಗುವುದಿಲ್ಲ. ಆಯಾ ದೇವತೆಗಳ ಪೂಜೆಗೆ ಅಥವಾ ವ್ರತಕ್ಕೆ ಉಕ್ತವಾಗಿರುವ ರೀತಿಯಲ್ಲಿ ನಿಯಮಗಳನ್ನು ಅನುಸರಿಸಿ ಪೂಜೆಯನ್ನು ಮಾಡಿದರೆ ರೋಗನಿವಾರಣೆ, ಪುತ್ರಪ್ರಾಪ್ತಿ, ಐಶ್ವರ್ಯಪ್ರಾಪ್ತಿ, ಅಧಿಕಾರಪ್ರಾಪ್ತಿ, ವಿವಾಹ ಇತ್ಯಾದಿ ಕಾಮ್ಯಫಲಗಳು ಸಿದ್ಧಿಸುತ್ತವೆ. ಕಠೋರವ್ರತಾಚರಣೆಯ ಫಲವಾಗಿ ಆ ದೇವತಾಲೋಕಗಳನ್ನೂ ಪಡೆಯಬಹುದು. ಆದರೆ ಆ ದೇವತೆಗಳೇ ನಶ್ವರರಾದುದರಿಂದ ಅವರ ಅನುಗ್ರಹವೂ ನಶ್ವರ. ಪುಣ್ಯಕರ್ಮವು ಮುಗಿದೊಡನೆಯೇ ಪೂಜಕನೂ ಅವರೊಡನೆಯಾಗಲೀ ಅಥವಾ ಅದಕ್ಕಿಂತಲೂ ಮೊದಲಾಗಲೀ ಪುನರಾವೃತ್ತಿಯನ್ನು ಹೊಂದಬೇಕಾಗುತ್ತದೆ. ನಾಲ್ಕಾರು ಜನ್ಮಗಳಲ್ಲಿ ಅಷ್ಟೇ ಶ್ರಮದಿಂದ ವಾಸುದೇವನನ್ನು ಕುರಿತು ತಪಸ್ಸು ಮಾಡಿ

ದ್ದರೆ ಮೋಕ್ಷವನ್ನೇ ಪಡೆಯುವ ಅವಕಾಶವಿತ್ತು. ಅದನ್ನು ಬಿಟ್ಟು ಅಲ್ಪ ಸುಖಕ್ಕಾಗಿ ನಾಲ್ಕಾರು ಜನ್ಮಗಳನ್ನು ಅವರು ವ್ಯರ್ಥಮಾಡಿಕೊಂಡದ್ದರಿಂದ ಅಂತಹ ಜನರನ್ನು ಶ್ರೀಕೃಷ್ಣನು 'ಅಲ್ಪಮೇಧಸ್ಸಿನವರು' ಎಂದಿದ್ದಾನೆ.)

O O O

ದೇವತೆಗಳನ್ನು ಆರಾಧಿಸುವುದಕ್ಕೂ ಮತ್ತು ಭಗವಂತನನ್ನು ಆರಾಧಿಸುವುದಕ್ಕೂ ಪರಿಶ್ರಮವನ್ನು ಪಡಲೇಬೇಕು. ಆದರೆ ಜನರು ನನ್ನೊಬ್ಬನನ್ನೇ ಶರಣುಹೊಂದಿ ಶ್ರದ್ಧೆಯಿಂದ ಆರಾಧಿಸಿದರೆ ಅನಂತಫಲವನ್ನು ಪಡೆಯಬಹುದು. ಆದರೆ ಜನರು ಹಾಗೆ ಮಾಡುವುದಿಲ್ಲವಲ್ಲಾ!–ಎಂದು ಭಗವಂತನು ಕನಿಕರಪಡುತ್ತಾನೆ. (ಶಂ. ಭಾ.)

ಅಲ್ಪಮೇಧಸಾಂ = ಇಂದ್ರಾದಿದೇವತೆಗಳನ್ನು ಮಾತ್ರವೇ ಪೂಜಿಸುವ ಅಲ್ಪಬುದ್ಧಿಯುಳ್ಳವರಿಗೆ. ಅವರ ಆರಾಧನೆಯಿಂದ ದೊರೆಯುವ ಫಲವೂ ಅಲ್ಪ. ಅದು ವಿನಾಶಿಯೂ ಆಗಿದೆ. ಇಂದ್ರಾದಿದೇವತೆಗಳನ್ನು ಪೂಜಿಸುವವರು ಆಯಾ ದೇವತೆಗಳನ್ನು ಹೊಂದುತ್ತಾರೆ. ಆದರೆ ಇಂದ್ರಾದಿದೇವತೆಗಳ ಭೋಗಗಳೂ ಪರಿಮಿತ. ಅವುಗಳು ಇರುವ ಕಾಲವೂ ಪರಿಮಿತ. ಆದುದರಿಂದ ಅವರ ಸಾಯುಜ್ಯವನ್ನು ಹೊಂದಿದವರು ಅವರೊಡನೆ ಈ ಲೋಕಕ್ಕೆ ಮತ್ತೆ ಜಾರುತ್ತಾರೆ. ನನ್ನ ಭಕ್ತರಾದರೋ–ಅನೇಕಕರ್ಮಗಳೇ ನನ್ನ ಆರಾಧನರೂಪವಾದುವು–ಎಂದು ತಿಳಿದು ಪರಿಮಿತವಾದ ಫಲದ ಸಂಗವನ್ನು ತೊರೆದು, ನನ್ನನ್ನು ಸಂತೋಷಪಡಿಸುವುದೊಂದೇ ಪ್ರಯೋಜನ ವೆಂದು ಭಾವಿಸಿ ನನ್ನನ್ನು ಸೇರುತ್ತಾರೆ. ಅವರಿಗೆ ಪುನರಾವೃತ್ತಿಯಿಲ್ಲ.

**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥೮-೧೬॥**

(ರಾ. ಭಾ.)

**ಓಂ ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।**
**ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ॥೨೪॥**

ಬುದ್ಧಿಯಿಲ್ಲದವರು ನನ್ನನ್ನು ಅವ್ಯಕ್ತನಾಗಿದ್ದು ವ್ಯಕ್ತಿಯನ್ನು ಹೊಂದಿದೆನೆಂದು ಎಣಿಸುವರು. ಅವರು ಅವ್ಯಯವಾಗಿರುವ ನನ್ನ ಶ್ರೇಷ್ಠವಾದ ಭಾವವನ್ನು ತಿಳಿದವರಾಗಿಲ್ಲ.

* * *

(ತನ್ನನ್ನು ಜನರು ಪರಮಾತ್ಮನೆಂದೇಕೆ ಗುರುತಿಸುವುದಿಲ್ಲ? ಎಂಬುದಕ್ಕೆ ಶ್ರೀಕೃಷ್ಣನೇ ಸಮಾಧಾನವನ್ನು ಹೇಳುತ್ತಾನೆ :

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ । ಅವ್ಯಕ್ತ ನಿಧನಾನ್ಯೇವ....** ೨-೨೮

ಪ್ರಾಣಿಗಳು ಮೊದಲೂ ಅವ್ಯಕ್ತವಾಗಿರುತ್ತವೆ. ಮಧ್ಯದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಪುನಃ ನಿಧನಾನಂತರ ಅವ್ಯಕ್ತಕ್ಕೇ ಹೊರಟುಹೋಗುತ್ತವೆ–ಎಂದು ಶ್ರೀಕೃಷ್ಣನೇ ಹಿಂದೆ ಅರ್ಜುನನಿಗೆ ಹೇಳಿದ್ದನು. ಜನರು ನನ್ನನ್ನೂ ತಮ್ಮಂತೆಯೇ ಪ್ರಾಣಿಮಾತ್ರದವನೆಂದು ತಿಳಿದುಕೊಂಡಿರುತ್ತಾರೆ. '**ಅವ್ಯಕ್ತಂ ವ್ಯಕ್ತಿಮಾಪನ್ನಂ** ಇವನೂ ಸಹ ಹಿಂದೆ ಅವ್ಯಕ್ತನಾಗಿದ್ದನು. ಹಿಂದೆ ಯಾರಾಗಿದ್ದನೋ ಏನಾಗಿದ್ದನೋ ತಿಳಿಯದು. ಈಗ ಕೃಷ್ಣನೆಂಬ ವ್ಯಕ್ತಿಯಾಗಿ ಹುಟ್ಟಿದ್ದಾನೆ'–ಎಂಬುದಾಗಿ ಬುದ್ಧಿಯಿಲ್ಲದವರು ತಿಳಿಯುತ್ತಾರೆ. ಇಲ್ಲಿ '**ಅಬುದ್ಧಯಃ**' ಎಂದರೆ 'ಅಧ್ಯಾತ್ಮಬುದ್ಧಿಯಿಲ್ಲದವರು' ಎಂದೇ ಅರ್ಥ ಮಾಡಬೇಕಾಗಿದೆ. 'ಲೋಕವ್ಯವಹಾರದಲ್ಲಿ ಬುದ್ಧಿಯಿಲ್ಲದವರು' ಎಂಬ ಅರ್ಥವು ಸರಿಹೋಗುವುದಿಲ್ಲ. ದುರ್ಯೋಧನನೂ ಸಹ ಕೃಷ್ಣನನ್ನು '**ಅವ್ಯಕ್ತಂ ವ್ಯಕ್ತಿಮಾಪನ್ನಂ**' ಎಂದೇ ತಿಳಿದಿದ್ದನು. ಶ್ರೀಕೃಷ್ಣನು ರಾಜಸಭೆಯಲ್ಲಿ ತೋರಿದ ವಿಶ್ವರೂಪದರ್ಶನವನ್ನೂ ಸಹ ಇಂದ್ರಜಾಲವಿದ್ಯೆಯೆಂದೇ ಹೇಳಿದನು. ಆದುದರಿಂದ **ಅಬುದ್ಧಯಃ** ಎಂದರೆ ಅಧ್ಯಾತ್ಮಜ್ಞಾನವಿಲ್ಲದವರು. ಶ್ರೀಕೃಷ್ಣನ ನಿಜಸ್ವರೂಪವು ವಿದುರ, ಭೀಷ್ಮ, ಧರ್ಮಜ, ಉದ್ಧವ–ಇವರೇ ಮೊದಲಾದ ಅಧ್ಯಾತ್ಮಜೀವಿಗಳಿಗೆ ಮಾತ್ರವೇ ತಿಳಿದಿದ್ದಿತು.

'ಅವ್ಯಕ್ತನಾಗಿದ್ದ ಶ್ರೀಕೃಷ್ಣನು ಈಗ ವಸುದೇವ-ದೇವಕಿಯರ ಮಗನಾಗಿ ಹುಟ್ಟಿದ್ದಾನೆ'–ಎಂದು ತಿಳಿದಿರತಕ್ಕವರು ನನ್ನ ಶ್ರೇಷ್ಠವಾದ ಭಾವವನ್ನು ಎಂದರೆ ಪರಮಾತ್ಮಸ್ವರೂಪವನ್ನು ತಿಳಿದವರಾಗಿಲ್ಲ. ಧರ್ಮೋದ್ಧಾರಕ್ಕಾಗಿ ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳಿಗಾಗಿ ನಾನು ನನ್ನ ಇಚ್ಛೆಯಿಂದಲೇ ಅವತರಿಸಿರುವೆನೆಂಬ ವಿಷಯವು ಅವರಿಗೆ ತಿಳಿಯದು. ನಾನು ಪ್ರಕೃತಿಗೆ ಅತೀತನಾದವನೆಂಬುದನ್ನು ಅವರು ಅರಿತವರಾಗಿಲ್ಲ. ನಾನು ನಾಶರಹಿತನೆಂಬುದೂ ಅವರಿಗೆ ತಿಳಿಯದು. 'ಮಾನವಸಾಮಾನ್ಯ ; ಮರಣಗುಣ

ವುಳ್ಳವನು' ಎಂದೇ ತಿಳಿದಿರುತ್ತಾರೆ. ಈ ಕಾರಣದಿಂದಲೇ ಅವರು ಇದಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲದ ನನ್ನ ಪರಮಾತ್ಮಸ್ವರೂಪವನ್ನು ತಿಳಿದವರಾಗಿಲ್ಲ.)

o o o

**ಮಾಮ್**=ನಿತ್ಯಪ್ರಸಿದ್ಧನೂ ಈಶ್ವರನೂ ಆಗಿರುವ ನನ್ನನ್ನು (ಶಂ. ಭಾ.)

ಎಲ್ಲ ಕರ್ಮಗಳಿಂದಲೂ ಆರಾಧಿಸಲ್ಪಡುವ ಸರ್ವೇಶ್ವರನಾದ ನಾನು ವಾಙ್ಮನಸ್ಸುಗಳ ಅಳತೆಗೆ ಸಿಕ್ಕದ ಸ್ವರೂಪ-ಸ್ವಭಾವವುಳ್ಳವನಾಗಿದ್ದರೂ ಪರಮಕರುಣೆಯಿಂದಲೂ, ಆಶ್ರಿತವಾತ್ಸಲ್ಯದಿಂದಲೂ, ಎಲ್ಲರೂ ನನ್ನನ್ನು ಆಶ್ರಯಿಸಲೆಂದು, ನನ್ನ ಸ್ವಭಾವವನ್ನು ಕಳೆದುಕೊಳ್ಳದೆಯೇ ನಾನು ವಸುದೇವನ ಮಗನಾಗಿ ಹುಟ್ಟಿದ್ದೇನೆ. ಅವ್ಯಯವೂ ಅತಿಶಯವೂ ಆದ ಈ ನನ್ನ ಪರಭಾವವನ್ನು ಅರಿಯದ ಅವಿವೇಕಿಗಳು–'ಈತನು ಹಿಂದೆ ಅಭಿವ್ಯಕ್ತನಾಗಿರಲಿಲ್ಲ. ಈಗ ಕರ್ಮವಶದಿಂದ ಹುಟ್ಟಿ ವ್ಯಕ್ತನಾಗಿದ್ದಾನೆ. ಪ್ರಾಕೃತನಾದ ರಾಜಪುತ್ರನು ಇವನು'–ಎಂದೇ ನನ್ನನ್ನು ತಿಳಿಯುತ್ತಾರೆ. ಆದುದರಿಂದ ನನ್ನನ್ನು ಆಶ್ರಯಿಸುವುದಿಲ್ಲ. ಕರ್ಮಗಳಿಂದ ನನ್ನನ್ನು ಆರಾಧಿಸುವುದೂ ಇಲ್ಲ.

(ರಾ. ಭಾ.)

ನಿನಗೆ ಇತರರಿಗಿಂತ ಏನು ವಿಶೇಷ ಎಂದರೆ : **ಅವ್ಯಕ್ತಂ** = ಕಾರ್ಯದೇಹಾದಿಗಳು ಇಲ್ಲದವನು ನಾನು. ಗೌಣದೇಹವುಳ್ಳವನೆಂದು ಅವಿವೇಕಿಗಳು ನನ್ನನ್ನು ತಿಳಿಯುತ್ತಾರೆ. **ಭಾವಂ** = ನನ್ನ ಯಥಾರ್ಥತೆಯನ್ನು ಅರಿಯದವರು ಹಾಗೆ ತಿಳಿಯುತ್ತಾರೆ.

**ಆನನ್ದದೇಹಂ ಪುರುಷಂ ಮನ್ಯನ್ತೇ ಗೌಣದೈಹಿಕಮ್** (ಮ.ಭಾ.)

**ಓಂ ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ**
**ಮಾಮಜಮವ್ಯಯಮ್ ॥೨೫॥**

ಯೋಗಮಾಯೆಯಿಂದ ಆವರಿಸಲ್ಪಟ್ಟಿರುವ ನಾನು ಎಲ್ಲರಿಗೂ ಕಾಣಿಸಿಕೊಳ್ಳತಕ್ಕವನಲ್ಲ. ಆದುದರಿಂದ ಈ ಮೂಢಜನರು ಜನನವಿಲ್ಲದವನೂ ನಾಶರಹಿತನೂ ಆದ ನನ್ನನ್ನು ಅರಿಯರು.

* * *

(ಶ್ರೀಕೃಷ್ಣನು ಈ ಶ್ಲೋಕದಲ್ಲಿ ಲೋಕದ ಜನರು ತನ್ನನ್ನು ಗುರುತಿಸದೇ ಇರುವುದಕ್ಕೆ ಕಾರಣವನ್ನು ಹೇಳುತ್ತಾನೆ :

ನಾನು 'ಯೋಗಮಾಯಾಸಮಾವೃತನಾಗಿದ್ದೇನೆ' ಎನ್ನುತ್ತಾನೆ ಶ್ರೀಕೃಷ್ಣ. ಮಾಯೆ ಎಂದರೆ ಸತ್ತ್ವರಜಸ್ತಮೋಗುಣಗಳು. ನಾವೆಲ್ಲರೂ ಮಾಯೆಯಿಂದ ಕೂಡಿರುವವರೇ ಆಗಿದ್ದೇವೆ. ಆದರೆ ಈ ಗುಣವು ನಮ್ಮಲ್ಲಿಯೇ ಸೇರಿ ಕೊಂಡುಬಿಟ್ಟಿದೆ. ಶ್ರೀಕೃಷ್ಣನದು ಯೋಗಮಾಯೆ. ಅದೂ ಸಹ ಆವರಣ ಮಾತ್ರವಾಗಿದೆ. ತನಗೆ ಇಚ್ಛೆಬಂದಾಗ ಆ ಮಾಯೆಯನ್ನು ದೂರದಲ್ಲಿರಿಸಲು ಅವನು ಸಮರ್ಥನು. ಆದರೆ ನಾವು ಮಾತ್ರ ಅದನ್ನು ದೂರವಾಗಿಡಲು ಸಮರ್ಥರಲ್ಲ. ಶ್ರೀಕೃಷ್ಣನಿಗೆ ಈ ಯೋಗಮಾಯೆಯು ಕೇವಲ ಆವರಣ ರೂಪವಾಗಿರುವುದರಿಂದಲೇ ಅವನು ತನ್ನ ನಿಜಸ್ವರೂಪವನ್ನು (ತ್ರಿಗುಣಾತೀತತ್ವವನ್ನು) ಯಾವಾಗ ಬೇಕಾದರೂ ಧರಿಸಬಲ್ಲನು. ಈ ಯೋಗ ಮಾಯೆಯ ಆವರಣವು ಬುರ್ಕಾದಂತಿದೆ. ಅವನು ಎಲ್ಲವನ್ನೂ ನೋಡ ಬಲ್ಲನು. ಎಲ್ಲರ ಭೂತಭವಿಷ್ಯದ್ವರ್ತಮಾನಗಳೂ ಅವನಿಗೆ ತಿಳಿದಿವೆ. ಆದರೆ ಅವನನ್ನು ಅವನ ನಿಜಸ್ವರೂಪವನ್ನು ಮಾತ್ರ ಮೂಢಜನರು ತಿಳಿದಿರುವುದಿಲ್ಲ. ಅವರಿಂದ ತಿಳಿಯಲು ಸಾಧ್ಯವೇ ಆಗುವುದಿಲ್ಲ. ಇಂದ್ರಜಾಲ ವಿದ್ಯೆಯನ್ನು ಕಲಿತವನು ಪ್ರೇಕ್ಷಕರನ್ನು ತನ್ನ ಇಂದ್ರಜಾಲದೊಳಗೆ ಮುಳುಗಿಸಿ ಬಿಡುತ್ತಾನೆ. ಆದರೆ ತಾನು ಮಾತ್ರ ಆ ಮಾಯೆಗೆ ಒಳಗಾಗಿರುವುದಿಲ್ಲ. ಅದೇ ರೀತಿಯಲ್ಲಿ ಜೀವನ ಜ್ಞಾನಕ್ಕೆ ಗುಣಾತ್ಮಕಮಾಯೆಯು ಅಡ್ಡಿಯಾಗಿರುತ್ತದೆ. ಆದರೆ ಮಹಾಮಾಯಾವಿಯಾದ ಈಶ್ವರನ ಜ್ಞಾನಕ್ಕೆ ಗುಣಾತ್ಮಕಮಾಯೆಯು ಅಡ್ಡಬರುವುದಿಲ್ಲ. ಸೂರ್ಯನನ್ನು ಮುಸುಕಿರುವ ಮೋಡಗಳು ಅವನ ಪ್ರಕಾಶವು ಪ್ರಪಂಚಕ್ಕೆ ಬೀಳದಂತೆ ಮಾಡುವುವೇ ಹೊರತು ಸೂರ್ಯನ ಪ್ರಕಾಶವನ್ನು ಕುಂದಿಸುವುದಿಲ್ಲ. ಅದೇ ರೀತಿಯಲ್ಲಿ ಯೋಗಮಾಯೆಯಿಂದ ಆವೃತನಾಗಿರುವ ಶ್ರೀಕೃಷ್ಣನು ಸರ್ವರಿಗೂ ಕಾಣಿಸಿಕೊಳ್ಳುವುದಿಲ್ಲ. ಕೆಲವು ಯೋಗಿಗಳಾದರೂ ಅವನ ನಿಜಸ್ವರೂಪವನ್ನು ತಿಳಿದುಕೊಳ್ಳುತ್ತಾರೆ ಎಂದರ್ಥ. ಅಜನೂ, ಜನನ-ಮರಣಗಳಿಲ್ಲದವನೂ, ನಾಶರಹಿತನೂ ಆದವನೆಂದು ಮೂಢಜನರು ನನ್ನನ್ನು ತಿಳಿದುಕೊಳ್ಳುವುದಿಲ್ಲ–ಎನ್ನುತ್ತಾನೆ

ಶ್ರೀಕೃಷ್ಣ. ವಸುದೇವ-ದೇವಕಿಯರ ಮಗನಾಗಿ ಹುಟ್ಟಿದ ಶ್ರೀಕೃಷ್ಣನು ತಮ್ಮಂತೆಯೇ ಒಬ್ಬ ಮನುಷ್ಯನೆಂದು ಭಾವಿಸುತ್ತಾರೆ.)

o o o

**ಯೋಗಮಾಯಾಸಮಾವೃತಃ**= ಯೋಗವೆಂದರೆ ಗುಣಗಳ ಮಿಶ್ರಣ. ಸಂಘಟನೆ. ಅದೇ ಮಾಯೆ. ಆ ಮಾಯೆಯೇ ಯೋಗಮಾಯೆ. ಅದು ನನ್ನನ್ನು ಆವರಿಸಿದೆ. (ಶಂ. ಭಾ.)

**ಯೋಗಮಾಯಾಸಮಾವೃತಃ** = ಅಪ್ರತಿಹತಸಂಕಲ್ಪನಾದ ನೀನು ಅಭಿಸಂಧಿಯೊಡನೆ ಎಲ್ಲರೂ ಆಶ್ರಯಿಸಲೆಂದು ಅವತರಿಸಿದ್ದರೆ ಎಲ್ಲರಿಗೂ ಆ ಫಲವು ಏಕೆ ಸಿದ್ಧಿಸುವುದಿಲ್ಲ? ಎಂದರೆ :–ನಾನು ಯೋಗಮಾಯೆಯಿಂದ ಆವರಿಸಲ್ಪಟ್ಟಿದ್ದೇನೆ. ಇಲ್ಲಿ ಮಾಯೆ ಎಂದರೆ ವಿಚಿತ್ರಸೃಷ್ಟಿಯನ್ನು ಮಾಡುವ ನನ್ನ ಶಕ್ತಿ. ಮನುಷ್ಯತ್ವದ ಆಕಾರವೇ ಮುಂತಾದ ಯೋಗವೆಂಬ ಮಾಯೆ ಯಿಂದ ನಾನು ಆವರಿಸಲ್ಪಟ್ಟಿರುವುದರಿಂದ ಎಲ್ಲರಿಗೂ ಪ್ರಕಾಶಕೊಡುತ್ತಿಲ್ಲ. ಈ ಆಕಾರವನ್ನು ನೋಡಿ ಮೂಢರಾದ ಜನರು, 'ನಾನು ವಾಯು, ಇಂದ್ರ ಮೊದಲಾದವರನ್ನು ಮೀರಿಸಿದ ಕರ್ಮವುಳ್ಳವನು ; ಸೂರ್ಯಾಗ್ನಿಗಳ ತೇಜಸ್ಸನ್ನು ಮೀರಿಸಿದವನು ; ಅಜ, ಅವ್ಯಯ, ಜಗದೇಕಕಾರಣ ; ಸರ್ವೇಶ್ವರನಾಗಿದ್ದರೂ ಮನುಷ್ಯಾಕಾರವನ್ನು ತಳೆದಿದ್ದೇನೆ'–ಎಂಬುದನ್ನು ಅರಿಯರು. ಅವ್ಯಯ ಎಂದರೆ ನಿರ್ವಿಕಾರ. ನಾನು ಸ್ವರೂಪ ಮತ್ತು ಧರ್ಮ ಎರಡು ದೃಷ್ಟಿಗಳಲ್ಲಿಯೂ ನಿರ್ವಿಕಾರ. ನನ್ನ ಜನ್ಮವು ಸ್ವಸಂಕಲ್ಪದಿಂದ ಉಂಟಾದುದು. ಇತರರಂತೆ ಕರ್ಮಾಧೀನವಲ್ಲ. ಅದರಲ್ಲಿ ಜ್ಞಾನಸಂಕೋಚಾದಿಗಳಿಲ್ಲ.

(ರಾ. ಭಾ.)

**ಯೋಗಮಾಯಾಸಮಾವೃತಃ** = ಯೋಗದಿಂದಲೂ ಅಂದರೆ ಸಾಮರ್ಥ್ಯದ ಉಪಾಯದಿಂದಲೂ ಮತ್ತು ಮಾಯೆಯಿಂದಲೂ ಆವರಿಸಲ್ಪಟ್ಟಿದ್ದೇನೆ ನಾನು. ನನ್ನಿಂದಲೇ ಲೋಕವು ಅಜ್ಞಾನಕ್ಕೆ ಒಳಗಾಗಿ ನನ್ನನ್ನು ಅರಿಯುತ್ತಿಲ್ಲ. (ಮ. ಭಾ.)

**ಓಂ ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥೨೬॥**

ಅರ್ಜುನ! ಹಿಂದೆ ಆಗಿಹೋಗಿರುವ, ಈಗ ಇರುವ ಮತ್ತು ಮುಂದೆ

ಹುಟ್ಟಲಿರುವ ಎಲ್ಲ ಪ್ರಾಣಿಗಳನ್ನೂ ನಾನು ಬಲ್ಲೆನು. ಆದರೆ ನನ್ನನ್ನು ಯಾವನೊಬ್ಬನೂ ಅರಿಯನು.

* * *

(ಶ್ರೀಕೃಷ್ಣನು ತನ್ನ ಸರ್ವಜ್ಞತ್ವವನ್ನು ಇಲ್ಲಿ ಉದ್ಘೋಷಿಸುತ್ತಾನೆ.

ಅರ್ಜುನ! ನನಗೆ ಯಾವ ಪ್ರಾಣಿಗಳು ಹೇಗೆ ಹುಟ್ಟುತ್ತವೆ–ಎಂಬ ವಿಷಯವು ಗೊತ್ತಿದೆ. ಇಂದು ಅವು ಯಾವ ರೂಪದಲ್ಲಿವೆ? ಎಂಬುದೂ ಗೊತ್ತು. ಹಿಂದೆ ಅವು ಯಾವ ರೂಪದಲ್ಲಿದ್ದವೆಂಬುದೂ ಗೊತ್ತು. ಈ ಪ್ರಪಂಚದ ಆಗು-ಹೋಗುಗಳೆಲ್ಲವನ್ನೂ ನಾನೂ ಪೂರ್ಣವಾಗಿ ಬಲ್ಲೆನು.

ಶ್ರೀಕೃಷ್ಣನು ವಿಶ್ವನಾಟಕದ ಸೂತ್ರಧಾರ. ನಾಟಕದ ಸೂತ್ರಧಾರನಿಗೆ ಮೊದಲನೆಯ ದೃಶ್ಯ, ಮಧ್ಯದಲ್ಲಿ ಬರುವ ದೃಶ್ಯ, ಕಡೆಯಲ್ಲಿ ಬರುವ ದೃಶ್ಯ ಎಲ್ಲವೂ ಸಂಪೂರ್ಣವಾಗಿ ತಿಳಿದಿರುತ್ತದೆ. ಪ್ರೇಕ್ಷಕರಿಗೆ ತಿಳಿದಿರುವುದಿಲ್ಲ. ಅದೇ ರೀತಿಯಲ್ಲಿ ವಿಶ್ವನಾಟಕದ ಸೂತ್ರಧಾರಿಯಾದ ಶ್ರೀಕೃಷ್ಣನಿಗೆ ವಿಶ್ವನಾಟಕದ ಅಂಕಗಳೆಲ್ಲವೂ ಆದಿಯಿಂದ ಕಡೆಯವರೆಗೂ ಗೊತ್ತಿದೆ. ಅವನೇ ಈ ನಾಟಕವನ್ನು ಆಡಿಸುತ್ತಿದ್ದಾನೆ. ಅವನ ನಾಟಕದಲ್ಲಿ ನಾವೆಲ್ಲರೂ ಪಾತ್ರ ಧಾರಿಗಳೇ ಆಗಿರುತ್ತೇವೆ. ಸೂತ್ರಧಾರನು ತೆರೆಯ ಹಿಂದೆ ನಿಂತು ನಿರ್ದೇಶಿಸು ವವನೇ ಹೊರತು ತೆರೆಯ ಹೊರಗೆ ಬರುವವನಲ್ಲ. ಅದೇ ರೀತಿಯಲ್ಲಿ ವಿಶ್ವನಾಟಕದ ಸೂತ್ರಧಾರನಾದ ಪರಮಾತ್ಮನೂ ಸಹ ಎಲ್ಲರಿಗೂ ಅಗೋ ಚರನಾಗಿಯೇ ಇದ್ದು ಈ ನಾಟಕವನ್ನು ಆಡಿಸುತ್ತಿದ್ದಾನೆ. ಚಿತ್ರವನ್ನು ತಯಾರಿಸಿದ ನಿರ್ದೇಶಕನನ್ನು ಯಾವ ರೀತಿಯಲ್ಲಿ ಪ್ರೇಕ್ಷಕರು ಚಿತ್ರದಲ್ಲಿ ಕಾಣಲಾರರೋ–ಅದೇ ರೀತಿಯಲ್ಲಿ ವಿಶ್ವನಾಟಕದ ಸೂತ್ರಧಾರನಾರೆಂಬು ದನ್ನು ಯಾರೂ ಅರಿಯರು. ಆದರೆ ಭಕ್ತನೊಬ್ಬನಿಗೆ ಮಾತ್ರ ಅವನಾರೆಂಬುದು ತಿಳಿದಿರುತ್ತದೆ.

**ಮಾಂ ತು ವೇದ ನ ಕಶ್ಚನ** =ಶರಣಾಗತನಾದ ನನ್ನ ಭಕ್ತನನ್ನು ಬಿಟ್ಟು ಬೇರೆ ಯಾವನೂ ನನ್ನನ್ನು ಅರಿಯನು ಮತ್ತು ನನ್ನ ತತ್ತ್ವವನ್ನು ಅರಿಯದ ಕಾರಣ ಜನರು ನನ್ನನ್ನು ಭಜಿಸುತ್ತಿಲ್ಲ.)

O O O

**ವೇದಾಹಂ ವರ್ತಮಾನಾನಿ** =ಭೂತ, ವರ್ತಮಾನ ಮತ್ತು ಭವಿಷ್ಯತ್ತಿನ ಎಲ್ಲ ವಿಷಯಗಳೂ ನನಗೆ ತಿಳಿದಿದೆ. (ಶಂ. ಭಾ.)

ನಾನು ಕಾಲತ್ರಯಗಳಲ್ಲಿರುವ ಎಲ್ಲ ಭೂತಗಳನ್ನೂ ಬಲ್ಲೆನು. ನಾನು ಸೃಷ್ಟಿಸಿದ ಈ ಮೂರು ಕಾಲಗಳಲ್ಲಿರುವ ಭೂತಗಳಲ್ಲಿ–ಹೀಗೆ ಎಲ್ಲ ಭೂತಗಳೂ ಆಶ್ರಯಿಸುವುದಕ್ಕೋಸ್ಕರ ಹುಟ್ಟಿರುವ ಪರಮಾತ್ಮನು ಇವನು– ಎಂದು ನನ್ನನ್ನು ತಿಳಿದು ನನ್ನನ್ನೇ ಆಶ್ರಯಿಸುವವನು ಯಾರೂ ಕಂಡುಬರುತ್ತಿಲ್ಲ. ಆದುದರಿಂದ ಜ್ಞಾನಿಯು ಅತ್ಯಂತದುರ್ಲಭ ಎಂದು ಅರ್ಥ.

(ರಾ. ಭಾ.)

ಮಾಯೆಯು ನನ್ನನ್ನು ಕಟ್ಟಿಹಾಕುವುದಿಲ್ಲ. ನಾನು ಎಲ್ಲ ಕಾಲದ ವಿಷಯಗಳನ್ನೂ ಬಲ್ಲೆನು. ಯಾವನೂ ಕೂಡ (ಅತ್ಯಂತಸಮರ್ಥನೂ ಕೂಡ) ತನ್ನ ಸಾಮರ್ಥ್ಯದಿಂದ ನನ್ನನ್ನು ತಿಳಿಯಲಾರನು. (ಮ. ಭಾ.)

**ಓಂ ಇಚ್ಛಾದ್ವೇಷಸಮುತ್ಥೇನ ದ್ವನ್ದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾನ್ತಿ ಪರಂತಪ ॥೨೭॥**

ಭಾರತ! ಪರಂತಪ! ಇಚ್ಛಾ-ದ್ವೇಷಗಳಿಂದ ಹುಟ್ಟಿಕೊಂಡಿರುವ ದ್ವಂದ್ವಗಳ ಮೋಹದಿಂದ ಸರ್ವಪ್ರಾಣಿಗಳೂ ಸೃಷ್ಟಿಕಾಲದಲ್ಲಿ ಸಮ್ಮೋಹವನ್ನು ಹೊಂದುವುವು.

* * *

(ಬೇರೆಯವರು ತನ್ನನ್ನು ತಿಳಿಯದಿರಲು ಕಾರಣವನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿ ನಿರೂಪಿಸುತ್ತಾನೆ. ಇಚ್ಛಾ-ದ್ವೇಷಗಳಿಂದ ಹುಟ್ಟಿದ್ದು ದ್ವಂದ್ವ ಮೋಹ ಎನ್ನುತ್ತಾನೆ ಶ್ರೀಕೃಷ್ಣ. ಇಚ್ಛೆ ಎಂದರೆ ಒಂದು ವಸ್ತುವನ್ನು ಪ್ರೀತಿಸುವುದು ; ದ್ವೇಷ ಎಂದರೆ ಮತ್ತೊಂದು ವಸ್ತುವನ್ನು ದ್ವೇಷಿಸುವುದು ; ದ್ವಂದ್ವ ಎಂದರೆ ಶೀತೋಷ್ಣಗಳು–ಸುಖ-ದುಃಖಗಳು. ಇಚ್ಛಾ-ದ್ವೇಷಗಳಿಂದ ಹುಟ್ಟಿದುವುಗಳೇ ಈ ಶೀತೋಷ್ಣ, ಸುಖ-ದುಃಖಗಳು. ಶೀತವು ಬೇಕು ; ಉಷ್ಣವು ಬೇಡ. ಸುಖವು ಬೇಕು ; ದುಃಖವನ್ನು ಕಂಡರೆ ದ್ವೇಷ. ಜಯವು ಇಷ್ಟ : ಅಪಜಯವು ಅನಿಷ್ಟ. ಆದುದರಿಂದ ಇಚ್ಛೆ ಮತ್ತು ದ್ವೇಷಗಳಿರುವುದರಿಂದಲೇ ದ್ವಂದ್ವಗಳ ಮೋಹವುಂಟಾಗುತ್ತದೆ. ದ್ವಂದ್ವ ಎಂಬುದೇ ಒಂದು ಮೋಹ. ಪರಮಾತ್ಮನಿಗೆ ಸುಖ-ದುಃಖ ಎಂಬುದು ಯಾವುದೂ ಇರುವುದಿಲ್ಲ. ದೇಹಾತ್ಮಬುದ್ಧಿಯವನಿಗೆ ಇಚ್ಛಾ-ದ್ವೇಷಗಳಿರುತ್ತವೆ. ಅದರಿಂದಲೇ ಈ ದ್ವಂದ್ವಗಳೂ ಹುಟ್ಟಿಕೊಳ್ಳುತ್ತವೆ. ಇಚ್ಛೆ ಮತ್ತು ದ್ವೇಷ ಇವೆರಡನ್ನೂ ತೊರೆದುಬಿಟ್ಟರೆ ದ್ವಂದ್ವಗಳಿರುವುದಕ್ಕೇ ಅವಕಾಶವಿಲ್ಲ. ಜಯವಾಗಬೇಕೆಂಬ

ಇಚ್ಛೆಯಿದ್ದರಲ್ಲವೇ ಅಪಜಯದ ವಿಷಯವಾಗಿ ದ್ವೇಷಮಾಡುವುದು? 'ಕರ್ತವ್ಯದೃಷ್ಟಿಯಿಂದ ಯುದ್ಧಮಾಡುತ್ತೇನೆ. ಜಯವನ್ನು ಇಚ್ಛಿಸುವುದಿಲ್ಲ ; ಅಪಜಯವನ್ನೂ ದ್ವೇಷಿಸುವುದಿಲ್ಲ?'–ಎಂಬ ನಿರ್ಧಾರದಿಂದ ಯುದ್ಧ ಮಾಡುವವನಿಗೆ ಜಯಾಪಜಯಗಳ ದ್ವಂದ್ವವೆಲ್ಲಿರುತ್ತದೆ? ಇಚ್ಛಾ-ದ್ವೇಷಗಳು ಎಲ್ಲಿಯವರೆಗೆ ಇರುತ್ತವೆಯೋ ಅಲ್ಲಿಯವರೆಗೂ ದ್ವಂದ್ವಗಳು ಇದ್ದೇ ಇರುತ್ತವೆ. ಸತ್ತುಹೋದರೂ ಸಹ ಈ ವಾಸನೆಯು ಮಾತ್ರ ದೇಹಿಯನ್ನು ಬಿಟ್ಟು ಹೋಗುವುದಿಲ್ಲ. ಮುಂದಿನ ಜನ್ಮಕ್ಕೂ ಇದು ಅಂಟಿಕೊಂಡೇ ಬರು ತ್ತದೆ. ಆದುದರಿಂದಲೇ ಶ್ರೀಕೃಷ್ಣನು **ಸರ್ವಭೂತಾನಿ ಸಂಮೋಹಂ ಸರ್ಗೇ ಯಾನ್ತಿ** ಎಂದು ಹೇಳಿದ್ದಾನೆ. ಹಿಂದಿನ ಜನ್ಮದಿಂದಲೇ ವಾಸನಾರೂಪವಾಗಿ ಬಂದ ಸಮ್ಮೋಹವನ್ನು ಎಲ್ಲ ಪ್ರಾಣಿಗಳೂ ಹುಟ್ಟುವಾಗಲೇ ಪಡೆದುಕೊಂಡಿರುತ್ತವೆ. ಅಥವಾ ವಾಸನಾಮಯವಾಗಿಯೇ ಹುಟ್ಟುತ್ತವೆ. ಆದುದರಿಂದ ಅಜ್ಞಾನದಿಂದ ಆವೃತವಾಗಿರುವ ಈ ಪ್ರಾಣಿಗಳಿಗೆ ನಾನಾರೆಂಬುದನ್ನು ತಿಳಿಯುವ ಅವಕಾಶವೇ ಇರುವುದಿಲ್ಲ.

**ಸರ್ಗ** ಎಂಬುದಕ್ಕೆ ಜನ್ಮದಲ್ಲಿಯೇ ಅರ್ಥಾತ್ ಹುಟ್ಟಿದ ಕಾಲದಲ್ಲಿ ಎಂದು ಅರ್ಥ.

**ಸರ್ಗಃ ಸ್ವಭಾವನಿರ್ಮೋಕ್ಷನಿಶ್ಚಯಾಧ್ಯಾಯಸೃಷ್ಟಿಷು** (ಅಮರಃ)

**ದ್ವನ್ದ್ವಮೋಹಃ**= ದ್ವಂದ್ವನಿಮಿತ್ತವಾದ ಮೋಹ. ಇಚ್ಛಾ-ದ್ವೇಷಗಳೇ ಶೀತೋಷ್ಣಗಳಂತೆ ಪರಸ್ಪರ ವಿರುದ್ಧಸ್ವಭಾವಗಳು ಮತ್ತು ಸುಖ-ದುಃಖ ಮತ್ತು ಅವುಗಳ ಕಾರಣಗಳಲ್ಲಿ ಇದ್ದುಕೊಂಡು ದ್ವಂದ್ವವೆಂದು ಕರೆಸಿಕೊಳ್ಳುತ್ತವೆ.

ಇಚ್ಛಾ-ದ್ವೇಷ ಎಂಬ ದೋಷಗಳಿಗೆ ವಶವಾದ ಚಿತ್ತವುಳ್ಳವನಿಗೆ ಯಥಾ ವತ್ತಾದ ವಿಷಯಗಳ ಜ್ಞಾನವು ಹೊರಗಡೆಯೂ ಉಂಟಾಗುವುದಿಲ್ಲ. ಹೀಗಿರುವಾಗ ಅವುಗಳಿಂದ ಆಕ್ರಮಿಸಲ್ಪಟ್ಟ ಬುದ್ಧಿಯುಳ್ಳ ಮೂಢನಿಗೆ ಅತ್ಯಂತಪ್ರತಿಬಂಧದಿಂದ ಕೂಡಿದ ಅಂತರಾತ್ಮನ ವಿಷಯವಾದ ಜ್ಞಾನ ವುಂಟಾಗುವುದಿಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.)

o o o

**ಸರ್ಗೇ** = ಉತ್ಪತ್ತಿಕಾಲದಲ್ಲಿ (ಶಂ. ಭಾ.)

ಗುಣಮಯವಾದ ಸುಖ-ದುಃಖಾದಿ ದ್ವಂದ್ವಗಳಲ್ಲಿ ಹಿಂದು-ಹಿಂದಿನ ಜನ್ಮಗಳಲ್ಲಿ ಯಾವುದರ ವಿಷಯವಾಗಿ ಇಚ್ಛಾ-ದ್ವೇಷಗಳು ಅಭ್ಯಾಸವಾಗಿರುತ್ತವೆಯೋ, ಆ ವಾಸನೆಯಿಂದ ಮತ್ತೆ ಜನ್ಮಸಮಯದಲ್ಲಿಯೇ ಅದೇ ದ್ವಂದ್ವವೆಂಬುದು ಇಚ್ಛಾ-ದ್ವೇಷವಿಷಯವಾಗಿ ಪುನಃ ಸ್ಫೂರ್ತಿಗೊಂಡು ಭೂತಗಳಿಗೆ ಮೋಹವನ್ನು ಉಂಟುಮಾಡುತ್ತದೆ. ಆ ಮೋಹದಿಂದ ಎಲ್ಲ ಭೂತಗಳಿಗೂ ಸಮ್ಮೋಹವುಂಟಾಗುತ್ತದೆ. ಅವುಗಳು ಆ ವಿಷಯದ ಬಗ್ಗೆ ಇಚ್ಛಾ-ದ್ವೇಷ ಗಳುಳ್ಳ ಸ್ವಭಾವವನ್ನು ಹೊಂದಿರುತ್ತವೆ. ನನ್ನ ವಿಷಯವಾದ ಸಂಯೋಗವನ್ನು ಸುಖವನ್ನಾಗಿಯೂ-ವಿಯೋಗವನ್ನು ದುಃಖವನ್ನಾಗಿಯೂ ಭಾವಿಸುವ ಸ್ವಭಾವವನ್ನು ಹೊಂದುವುದಿಲ್ಲ. ಜ್ಞಾನಿಗಾದರೋ ನನ್ನ ಸಂಯೋಗ-ವಿಯೋಗಗಳನ್ನೇ ಸುಖ-ದುಃಖಗಳನ್ನಾಗಿ ಹೊಂದಿರುವ ಸ್ವಭಾವವಿರುತ್ತದೆ. ಅಂತಹ ಸ್ವಭಾವವುಳ್ಳ ಜ್ಞಾನಿಗಳು ಹುಟ್ಟುವುದು ದುರ್ಲಭ. (ರಾ. ಭಾ.)

**ದ್ವನ್ದ್ವಮೋಹೇನ** = ಸುಖ-ದುಃಖಾದಿ ವಿಷಯವಾದ ಮೋಹದಿಂದ ಇಚ್ಛಾ-ದ್ವೇಷಗಳು ಬೆಳೆದರೆ ಯಾವುದನ್ನೂ ತಿಳಿಯಲು ಸಾಧ್ಯವಾಗುವುದಿಲ್ಲ. **ಸರ್ವಭೂತಾನಿ ಸರ್ಗೇ ಯಾನ್ತಿ**= ಇಲ್ಲಿ ಸಮ್ಮೋಹಕ್ಕೆ ಮತ್ತೊಂದು ಕಾರಣವನ್ನು ಹೇಳಿದೆ. ಶರೀರದ ಸೃಷ್ಟಿಕಾಲದ ಆರಂಭದಿಂದಲೇ ಸಮ್ಮೋಹವುಂಟಾಗುತ್ತದೆ. ಸೃಷ್ಟಿಗೆ ಮೊದಲು ಅಜ್ಞಾನವು ಮಾತ್ರ ಇರುತ್ತದೆ. ಇಚ್ಛಾದಿಗಳು ಇರುವುದಿಲ್ಲ. ಶರೀರವು ಬಂದ ಮೇಲೆಯೇ ಇಚ್ಛಾದಿಗಳು ಉಂಟಾಗುತ್ತವೆ. (ಮ. ಭಾ.)

**ಓಂ ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ॥೨೮॥**

ಅಂದರೆ ಪುಣ್ಯಕರ್ಮಿಗಳಾದ ಯಾರಿಗೆ ಪಾಪವು ಅಂತಗತವಾಗಿರುತ್ತದೆಯೋ (ಕ್ಷೀಣಿಸಿರುತ್ತದೆಯೋ) ಅವರು ದ್ವಂದ್ವ-ಮೋಹಗಳಿಂದ ಬಿಡುಗಡೆ ಹೊಂದಿದವರಾಗಿ, ದೃಢವ್ರತರಾಗಿ ನನ್ನನ್ನೇ ಭಜಿಸುವರು.

* * *

(ಪ್ರಾಣಿಮಾತ್ರದವರು ಅದರಲ್ಲಿಯೂ ಮನುಷ್ಯರು ಹೀಗೆ ಮೋಹಜಾಲದಲ್ಲಿಯೇ ಇದ್ದುಬಿಟ್ಟರೆ ಅವರಿಗೆ ಮೋಕ್ಷವು ಸಿಗುವುದು ಯಾವಾಗ? ಎಂಬುದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಈ ಶ್ಲೋಕವನ್ನು ಹೇಳಿದ್ದಾನೆ.

ಜನಾನಾಂ ಪುಣ್ಯಕರ್ಮಣಾಂ ಎಂದರೆ ಪುಣ್ಯಕರ್ಮಗಳನ್ನು ಮಾಡುವ ಜನರ ಅರ್ಥಾತ್ ನಿಷ್ಕಾಮಕರ್ಮವನ್ನು ಈಶ್ವರಪ್ರೀತ್ಯರ್ಥವಾಗಿ ಫಲಾಭಿಸಂಧಿಯಿಲ್ಲದೇ ಮಾಡುವ ಜನರ ಪಾಪವು ಕ್ಷೀಣಹೊಂದುತ್ತದೆ. ಕರ್ಮಯೋಗದ ಮೂಲಕವಾಗಿ ಫಲಾಭಿಸಂಧಿಯಿಲ್ಲದೇ ಕರ್ಮಮಾಡುವವರು, ದ್ವಂದ್ವ-ಮೋಹಗಳಿಂದ-ಸುಖ-ದುಃಖ, ಶೀತೋಷ್ಣ, ಜಯಾಪಜಯ, ಲಾಭಾಲಾಭ ಇತ್ಯಾದಿಗಳಿಂದ ನಿರ್ಮುಕ್ತರಾದವರು ನನ್ನನ್ನೇ ಸೇವಿಸುತ್ತಾರೆ. ದ್ವಂದ್ವಗಳದ್ದೇ ಮೋಹ : ಜಯವಾಯಿತೆಂಬ ಹೆಚ್ಚುಗಾರಿಕೆ, ಲಾಭವಾಯಿತೆಂಬ ಅತಿಶಯವಾದ ಸಂತೋಷ. ಏಕೆಂದರೆ : ಜಯದಂತೆ ಅಪಜಯವೂ ಬಂದೀತೆಂದು ಇವನು ಭಾವಿಸುವುದಿಲ್ಲ. ಇಂದು ಲಾಭವಾದರೆ ನಾಳೆ ನಷ್ಟವಾದೀತೆಂದು ಯೋಚಿಸುವುದಿಲ್ಲ. ಕ್ಷಣಿಕವಾದ ಲಾಭಕ್ಕೆ ಅಥವಾ ವಿಜಯಕ್ಕೆ ಹಿರಿಹಿಗ್ಗುತ್ತಾನೆ. ಹೀಗೆಯೇ ನಷ್ಟವಾದುದಕ್ಕಾಗಿ ಕುಗ್ಗುವುದೂ ಸಹ ಮೋಹವೇ ಸರಿ. ಕರ್ಮಯೋಗಿಗಳು ಈ ವಿಧವಾದ ಮೋಹದಿಂದ ಮುಕ್ತರಾಗಿರುತ್ತಾರೆ. ಯಾವಾಗ ಅವರು ಫಲಾಭಿಸಂಧಿಯಿಲ್ಲದೇ ಈಶ್ವರಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡುತ್ತಾ ಪಾಪದಿಂದಲೂ ದ್ವಂದ್ವ-ಮೋಹಗಳಿಂದಲೂ ನಿರ್ಮುಕ್ತರಾಗುತ್ತಾರೆಯೋ–ಆಗ ಅವರು ಸಮಾಹಿತಚಿತ್ತರಾಗಿರುತ್ತಾರೆ. ಅವರ ಮನಸ್ಸೆಲ್ಲವೂ ಪರಮಾತ್ಮನಲ್ಲಿಯೇ ಕೇಂದ್ರೀಕೃತವಾಗಿರುತ್ತದೆ. ಅವರು ಪರಮಾತ್ಮನ ಸ್ವರೂಪವನ್ನು ತಮ್ಮಲ್ಲಿ ಕಂಡುಕೊಳ್ಳಬೇಕೆಂಬ ದೃಢನಿಶ್ಚಯದಿಂದ ವ್ರತನಿಷ್ಠರಾಗಿ ಪರಮಾತ್ಮನನ್ನೇ ಧ್ಯಾನಮಾಡುತ್ತಾರೆ.)

O O O

**ದೃಢವ್ರತಾಃ** = ಪರಮಾರ್ಥತತ್ತ್ವವು ಇದೇ ರೀತಿಯಲ್ಲೇ ಇದೆ ; ಹೀಗೆಯೇ ಇದೆ ; ಬೇರೆ ಯಾವ ರೀತಿಯಲ್ಲೂ ಇಲ್ಲ–ಎಂಬ ನಿಶ್ಚಿತವಾದ ಜ್ಞಾನವುಳ್ಳವರು. (ಶಂ. ಭಾ.)

**ದೃಢವ್ರತಾಃ**=ಜರಾ-ಮರಣಗಳಿಂದ ಬಿಡುಗಡೆ ; ಮಹತ್ತಾದ ಐಶ್ವರ್ಯ ಮತ್ತು ನನ್ನನ್ನು ಹೊಂದುವಿಕೆ–ಇವುಗಳಿಗೋಸ್ಕರ ದೃಢಸಂಕಲ್ಪ ವುಳ್ಳವರಾಗಿ **ದ್ವನ್ದ್ವಮೋಹನಿರ್ಮುಕ್ತಾಃ**= ಗುಣಮಯವಾದ ಮೋಹದಿಂದ ಬಿಡುಗಡೆಹೊಂದಿದವರಾಗಿ. (ರಾ. ಭಾ.)

ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಮೋಹವನ್ನು ಹೊಂದುವ ಭೂತ

ಗಳಿಗಿಂತಲೂ ವಿಪರೀತರಾದವರು ಎಂದರೆ ಸುಕೃತಶಾಲಿಗಳಾಗಿ ದ್ವಂದ್ವ-ಮೋಹಗಳಿಂದ ಬಿಡುಗಡೆಹೊಂದಿ ನನ್ನನ್ನು ಭಜಿಸುವವರೂ ಕೆಲವರು ಇದ್ದಾರೆ ಎಂದು ಭಗವಂತನು ಇಲ್ಲಿ ನಿರೂಪಿಸುತ್ತಾನೆ. ವಿಪರೀತಾಶ್ಚ ಕೇಚಿತ್ಸನ್ತೀತ್ಯಾಹ. (ಮ. ಭಾ.)

**ಓಂ ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥**

**ಓಂ ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥೩೦॥**

ಮುಪ್ಪು-ಸಾವುಗಳನ್ನು ತಪ್ಪಿಸಿಕೊಳ್ಳಲು ನನ್ನನ್ನು ಆಶ್ರಯಿಸಿ, ಅದಕ್ಕಾಗಿ ಯಾರು ಪ್ರಯತ್ನಿಸುವರೋ–ಅವರು ಆ ಬ್ರಹ್ಮವನ್ನೂ, ಸಂಪೂರ್ಣವಾದ ಅಧ್ಯಾತ್ಮವನ್ನೂ, ಅಖಿಲವಾದ ಕರ್ಮವನ್ನೂ ಅರಿತುಕೊಳ್ಳುವರು. ಅಧಿಭೂತ, ಅಧಿದೈವ, ಅಧಿಯಜ್ಞ–ಇವುಗಳೊಡನೆ ನನ್ನನ್ನು ಯಾರು ಅರಿತುಕೊಳ್ಳುವರೋ–ಅವರು ಸಾಯುವ ಕಾಲದಲ್ಲಿಯೂ ಸಮಾಧಾನ ಮನಸ್ಕರಾಗಿದ್ದು ನನ್ನನ್ನು ಕಂಡುಕೊಳ್ಳುವರು.

* * *

(ಮಾನವನಿಗೆ ಯಾವಾಗಲೂ ಯೌವನವೂ–ಸಮಗ್ರಸುಖಸಾಧನಗಳೂ ಇರುವುದಾಗಿದ್ದರೆ ಅವನಿಗೆ ದೇವತ್ವವೂ ಬೇಕಾಗುತ್ತಿರಲಿಲ್ಲ ; ಅಧ್ಯಾತ್ಮವೂ ಬೇಕಾಗುತ್ತಿರಲಿಲ್ಲ. ದೇವತೆಗಳಿಗೆ ಯಾವಾಗಲೂ ಯೌವನವಿರುವುದರಿಂದಲೇ ಅವರು ಬಂಧನದ ಮೋಕ್ಷಕ್ಕಾಗಿ ಪ್ರಯತ್ನಿಸುವುದಿಲ್ಲ. ಮನುಷ್ಯನು ಹೆದರುವುದು ಮುಪ್ಪಿಗೆ ಮತ್ತು ಮರಣಕ್ಕೆ. ಇವನ್ನು ಕಳೆದುಕೊಳ್ಳಬೇಕೆಂದು ಮಾನವನು ಸತತವಾಗಿ ಹೋರಾಡುತ್ತಾನೆ. ಮುಪ್ಪಿನಿಂದ ತಪ್ಪಿಸಿಕೊಳ್ಳಲು ಕಾಯಕಲ್ಪವನ್ನು ಮಾಡಿಸಿಕೊಳ್ಳುತ್ತಾನೆ. ಕಾಯಕಲ್ಪದಿಂದ ಮತ್ತು ಔಷಧಿಗಳ ಸೇವನೆಯಿಂದ ತಾತ್ಕಾಲಿಕವಾಗಿ ಮುಪ್ಪನ್ನೂ ಮತ್ತು ಮರಣವನ್ನೂ ಸ್ವಲ್ಪ ಕಾಲದವರೆಗೆ ದೂರವಾಗಿಡಬಹುದಾದರೂ ಮುಪ್ಪಿನಿಂದ ಮತ್ತು ಮರಣದಿಂದ ತಪ್ಪಿಸಿಕೊಳ್ಳುವ ಸಾಧ್ಯತೆಯು ಮಾನವನಿಗಿಲ್ಲ. ಆದರೆ ಪರಮಾತ್ಮನನ್ನು ಆಶ್ರಯಿಸಿ ಮೋಕ್ಷವನ್ನು ಪಡೆದರೆ ಇವೂ ಸಹ ಸಾಧ್ಯವಾಗುವುವು. ಆದುದರಿಂದಲೇ ಇಲ್ಲಿ ಶ್ರೀಕೃಷ್ಣನು, ಮುಪ್ಪು ಮತ್ತು ಮರಣಗಳನ್ನು

ತಪ್ಪಿಸಿಕೊಳ್ಳಲು ನನ್ನನ್ನು ಆಶ್ರಯಿಸಿ ಯಾರು ಪ್ರಯತ್ನಿಸುತ್ತಾರೆಯೋ ಅವರೇ ಬ್ರಹ್ಮವಿದರು ಎನ್ನುತ್ತಾನೆ. ಬ್ರಹ್ಮವಿದರಾದವರು ಮುಪ್ಪು-ಸಾವುಗಳಿಂದ ಮುಕ್ತರಾಗಬಲ್ಲರು. ಅವರು ಬ್ರಹ್ಮವನ್ನು ತಿಳಿದವರಾಗಿರುತ್ತಾರೆ. ಬ್ರಹ್ಮವನ್ನು ತಮ್ಮ ಹೃದಯಗುಹೆಯಲ್ಲಿ ಸಾಕ್ಷಾತ್ಕರಿಸಿಕೊಂಡಿರುತ್ತಾರೆ. ಎಲ್ಲ ಅಧ್ಯಾತ್ಮವನ್ನೂ ತಿಳಿದವರಾಗಿರುತ್ತಾರೆ. ಈ ಹಿಂದೆ ಪರಮಾತ್ಮನೇ ಹೇಳಿದ ಪರಾಪ್ರಕೃತಿ-ಅಪರಾಪ್ರಕೃತಿಗಳನ್ನು ತಿಳಿದವರಾಗಿರುತ್ತಾರೆ. ನಿಖಿಲವಾದ ಕರ್ಮವನ್ನೂ ತಿಳಿದುಕೊಂಡಿರುತ್ತಾರೆ. ಅಕರ್ಮ ಮತ್ತು ವಿಕರ್ಮ ಗಳು-ಅವುಗಳ ಆಚರಣೆ ಇವುಗಳೆಲ್ಲವೂ ಬ್ರಹ್ಮಜ್ಞಾನಿಗಳಿಗೆ ತಿಳಿದಿರುತ್ತದೆ. ಇದೇ ಅಧ್ಯಾಯದ ೪ನೆಯ ಶ್ಲೋಕದಲ್ಲಿ ಹೇಳಿರುವಂತೆ ಎಂಟು ವಿಧವಾದ ಭಿನ್ನಪ್ರಕೃತಿಗಳು ಅಥವಾ ಅಪರಾಪ್ರಕೃತಿಯು ನನ್ನಿಂದಲೇ ಹೊರಟಿದೆ–ಎಂಬುದನ್ನು ಯಾರು ತಿಳಿದಿರುತ್ತಾರೆಯೋ, ಎಲ್ಲ ದೇವತೆಗಳಲ್ಲಿಯೂ ಇರ ತಕ್ಕವನು ನಾನೇ ಎಂದು ಯಾರು ತಿಳಿದಿರುತ್ತಾರೆಯೋ, ಯಾವ ವಿಧವಾದ ಯಜ್ಞಮಾಡಿದರೂ ಅದು ನನಗೇ ಸಲ್ಲುತ್ತದೆಂದೂ, ಯಜ್ಞರೂಪನೂ ನಾನೇ ಎಂದೂ ಯಾರು ತಿಳಿದಿರುತ್ತಾರೆಯೋ–ಅಂತಹ ಸಮಾಹಿತಚಿತ್ತರಾದ, ನನ್ನಲ್ಲಿಯೇ ದೃಢಮನಸ್ಸುಳ್ಳ ಅವರು ಅಂತ್ಯಕಾಲದಲ್ಲಿಯೂ ನನ್ನನ್ನು ತಿಳಿದುಕೊಳ್ಳುತ್ತಾರೆ.

ಅಂತ್ಯಕಾಲದಲ್ಲಿ ಪರಮಾತ್ಮನನ್ನು ನೆನೆಯುವುದು ಅಷ್ಟು ಸುಲಭವಲ್ಲ. ಅನೇಕ ಯುವಕರು ಭಾರತ-ರಾಮಾಯಣಗಳೆಲ್ಲವೂ ಮುದುಕರಿಗೆ ಮಾತ್ರವೇ ಎಂಬ ಭಾವನೆಯನ್ನಿಟ್ಟುಕೊಂಡಿರುತ್ತಾರೆ. ಗೀತೆಯಲ್ಲಿ ಪರಮಾತ್ಮನು ಸಾರುತ್ತಿರುವ ಆತ್ಮಜ್ಞಾನವನ್ನು ವೃದ್ಧರಿಂದ ಸಾಧಿಸಿಕೊಳ್ಳುವುದಕ್ಕಾಗುವುದಿಲ್ಲ. ನಮ್ಮ ಅಧ್ಯಾತ್ಮವಿದ್ಯೆಯು ಕೇವಲ ತಿಳಿದುಕೊಳ್ಳುವುದಲ್ಲ ; ಸಾಧನೆಮಾಡಿ ಅನುಭವಕ್ಕೆ ಪಡೆದುಕೊಳ್ಳತಕ್ಕದ್ದು. ಆದುದರಿಂದ ಈ ಸಾಧನೆಯನ್ನು ಯುವಕರೇ ಆರಂಭಿಸಬೇಕು. ಹೀಗೆ ಸತತವಾದ ಸಾಧನೆಯಿದ್ದರೂ ಅಂತ್ಯಕಾಲದಲ್ಲಿ ಎಲ್ಲರಿಗೂ ಪರಮಾತ್ಮನ ಸ್ಮರಣೆಯುಂಟಾಗುವುದೆಂದೂ ಹೇಳುವುದಕ್ಕಾಗುವುದಿಲ್ಲ. ಅದಕ್ಕೆ ಸತತವಾದ ಸಾಧನೆಯೂ ಬೇಕು ; ಸುಕೃತವೂ ಇರಬೇಕು.

ಇಲ್ಲಿ ಶ್ರೀಕೃಷ್ಣನು ಅಧಿಭೂತ, ಅಧಿದೈವ, ಅಧಿಯಜ್ಞ–ಈ ಮೂರೂ

ನಾನೇ ಎಂದು ತಿಳಿಯಬೇಕು ಎನ್ನುತ್ತಾನೆ. **'ಸರ್ವಂ ವಿಷ್ಣುಮಯಂ ಜಗತ್'** ಎಂಬ ಭಾವನೆಯು ಬರಬೇಕು. ಎಲ್ಲ ಪ್ರಾಣಿಗಳಲ್ಲಿಯೂ, ಎಲ್ಲ ವಸ್ತುಗಳಲ್ಲಿಯೂ, ಎಲ್ಲ ದೇವತೆಗಳಲ್ಲಿಯೂ, ಎಲ್ಲ ಪೂಜೆಗಳಲ್ಲಿಯೂ ನಾವು ಭಗವಂತನನ್ನು ಕಾಣುವಂತಾಗಬೇಕು. ನಾವು ಈ ಅಭ್ಯಾಸವನ್ನು ಮಾಡಿದರೆ ಮರಣಕಾಲದ ವಿಷಯವಾಗಿ ನಾವು ಯೋಚಿಸಬೇಕಾಗುವುದಿಲ್ಲ. ಎಲ್ಲದರಲ್ಲಿಯೂ ನಾವು ಪರಮಾತ್ಮನನ್ನೇ ಕಾಣುವುದನ್ನು ಅಭ್ಯಾಸಮಾಡುವುದರಿಂದ ಅಂತ್ಯಕಾಲದಲ್ಲಿ ಅವನ ಸ್ಮರಣೆಯು ಸ್ವಾಭಾವಿಕವಾಗಿಯೇ ಬರುವುದಕ್ಕೆ ಸಹಾಯವಾಗುವುದು. ಅಂತಹ ಸಾಧನೆ ಮತ್ತು ಭಾವನೆಗಳಿಲ್ಲದಿದ್ದರೆ ಅಂತ್ಯಕಾಲದಲ್ಲಿ ಅವನನ್ನು ಸ್ಮರಿಸುವ ಸಾಧ್ಯತೆಯಿಲ್ಲ.

* * *

**ಮಾಂ ಆಶ್ರಿತ್ಯ**=ಪರಮೇಶ್ವರನನ್ನು ಆಶ್ರಯಿಸಿ ಎಂದರೆ ನನ್ನಲ್ಲಿ ಚಿತ್ತವನ್ನು ಸಮಾಹಿತವನ್ನಾಗಿ ಮಾಡಿ, **ತತ್‌ಬ್ರಹ್ಮ**=ಪರಬ್ರಹ್ಮನನ್ನು **ಅಧ್ಯಾತ್ಮಂ** = ಪ್ರತ್ಯಗಾತ್ಮವಿಷಯವಾದ ಎಲ್ಲ ವಸ್ತುಗಳನ್ನೂ, **ಯುಕ್ತಚೇತಸಃ**= ಸಮಾಹಿತವಾದ ಚಿತ್ತವುಳ್ಳವರು. (ಶಂ. ಭಾ.)

**ಜರಾಮರಣಮೋಕ್ಷಾಯ ಯೇ ಯತನ್ತೇ**=ಪ್ರಕೃತಿಯುಕ್ತವಾದ ಆತ್ಮಸ್ವರೂಪದರ್ಶನಕ್ಕೋಸ್ಕರ ನನ್ನನ್ನು ಆಶ್ರಯಿಸಿ ಯಾರು ಪ್ರಯತ್ನಿಸುತ್ತಾರೆಯೋ ಎಂದರೆ ಆರಾಧಿಸುತ್ತಾರೆಯೋ ಅವರಿಗೆ ಬ್ರಹ್ಮ, ಅಧ್ಯಾತ್ಮ ಕರ್ಮ–ಇವುಗಳು ಸಂಪೂರ್ಣವಾಗಿ ತಿಳಿದುಬರುತ್ತವೆ. ಇವರಲ್ಲದೆ ಬೇರೆ ಅಧಿಕಾರಿಗಳೂ ಅವುಗಳನ್ನು ತಿಳಿಯುತ್ತಾರೆ. ಅವರು ಜ್ಞಾನಿಗಳು. ಅಧಿಭೂತ–ಅಧಿದೈವಗಳೊಡನೆ ಯಾವ ಐಶ್ವರ್ಯಾರ್ಥಿಗಳು ನನ್ನನ್ನು ತಿಳಿಯುತ್ತಾರೆಯೋ, ಹಾಗೆಯೇ ಅಧಿಯಜ್ಞದೊಡನೆ ನನ್ನನ್ನು ತಿಳಿಯುತ್ತಾರೆಯೋ ಆ ಮೂವರೂ ಪ್ರಾಣಪ್ರಯಾಣಕಾಲದಲ್ಲಿಯೂ ಸಮಾಹಿತ ಚಿತ್ತರಾಗಿ ನನ್ನನ್ನು ತಿಳಿಯುವರು. ಮೂವರೂ ನಿತ್ಯ-ನೈಮಿತ್ತಿಕರೂಪವಾದ ಮಹಾಯಜ್ಞಗಳ ಅನುಷ್ಠಾನವನ್ನು ಮಾಡಲೇಬೇಕು. ಅವರು ತಮ್ಮ ಪ್ರಾಣ ಪ್ರಯಾಣಕಾಲದಲ್ಲೂ ಕೂಡ ತಮ್ಮ ಪ್ರಾಪ್ಯವಸ್ತುವಿಗೆ ಅನುಗುಣವಾಗಿ ನನ್ನನ್ನು ತಿಳಿಯುತ್ತಾರೆ. ಇದಲ್ಲದೇ ಜರಾ-ಮರಣಗಳ ಬಿಡುಗಡೆಗೋಸ್ಕರವಾಗಿ ಪ್ರಯತ್ನಿಸುವವರು ಎಂದರೆ ಪ್ರಕೃತಿ-ವಿಕೃತಿರೂಪವಾದ ಆತ್ಮಸ್ವರೂಪ

ವನ್ನು ನೋಡಲು ನನ್ನನ್ನು ಆಶ್ರಯಿಸಿ ಆರಾಧಿಸುವವರೂ ಪ್ರಯಾಣಕಾಲದಲ್ಲಿ ತಮ್ಮ ಪ್ರಾಪ್ಯಕ್ಕೆ ಅನುಗುಣವಾಗಿ ನನ್ನನ್ನು ತಿಳಿಯುವರು. (ರಾ. ಭಾ.)

**ಜರಾಮರಣಮೋಕ್ಷಾಯ** ಎಂಬಲ್ಲಿ ಮೋಕ್ಷಕಾಮತ್ವವನ್ನು ವಿಧಿಸಿಲ್ಲ. ಅನ್ಯಕಾಮಗಳ ವ್ಯಾಹೃತಿಗೋಸ್ಕರವಾಗಿಯಾಗಲೀ–ಮೋಕ್ಷದಲ್ಲಿ ಆಸಕ್ತಿಯನ್ನು ಸ್ತುತಿಸುವುದಕ್ಕಾಗಲೀ ಮೋಕ್ಷಕಾಮತ್ವವನ್ನು ವಿಧಿಸಿಲ್ಲ. ಏಕೆಂದರೆ ಭಗವಂತನಲ್ಲಿ ಅವ್ಯಾಜವಾದ ಭಕ್ತಿಯಿದ್ದರೆ ಅದು ಸಿದ್ಧಿಗಿಂತಲೂ ಶ್ರೇಷ್ಠವಾದುದು–ಎಂದು ಶಾಸ್ತ್ರವು ಹೇಳುತ್ತದೆ.

**ಅನಿಮಿತ್ತಾ ಭಗವತಿ ಭಕ್ತಿಃ ಸಿದ್ಧೇರ್ಗರೀಯಸೀ ।** (ಭಾಗವತ)

(ಮ. ಭಾ.)

ಭಗವಂತನಲ್ಲಿ ಫಲೋದ್ದೇಶರಹಿತವಾದ, ಸ್ವಾಭಾವಿಕವಾದ, ನಿರವಧಿಕ ಸ್ನೇಹರೂಪವಾದ, ಸ್ವಭಾವಸುಖವುಳ್ಳ ವೃತ್ತಿಯು ಭಕ್ತಿ ಎನಿಸುತ್ತದೆ. ಅದು ಸಕಾಮಭಕ್ತಿಯಿಂದ ಉಂಟಾದ ಸಿದ್ಧಿಗಿಂತಲೂ ಶ್ರೇಷ್ಠವಾದುದು.

–ಜಯತೀರ್ಥರು.

**ತೇ ವಿದುಃ = ತ ಏವ ವಿದುಃ** ಆ ಪರಮಾತ್ಮನನ್ನು ಅವರೇ (ಭಕ್ತರೇ) ಬಲ್ಲರು. 'ಯಮೇವೈಷ ವೃಣುತೇ' ಎಂದು ಶ್ರುತಿಯು ಹೇಳುವಂತೆ ಪರಮಾತ್ಮನು ಯಾರನ್ನು ವರಿಸುತ್ತಾನೆಯೋ ಅವರಿಗೆ ಮಾತ್ರವೇ ಭಗವಂತನ ಲಾಭ. ಭಗವಂತನು ವರಿಸುವುದು ಭಕ್ತನನ್ನೇ. ಆದುದರಿಂದ ಭಕ್ತರೇ ಅವನನ್ನು ತಿಳಿಯುವರು. (ಮ. ಭಾ.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನ–ವಿಜ್ಞಾನ ಯೋಗೋ ನಾಮ ಸಪ್ತಮೋಽಧ್ಯಾಯಃ**

ಭಗವದ್ಗೀತೆಯಲ್ಲಿ ೭ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೩೧ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ - ೮ನೆಯ ಅಧ್ಯಾಯ

೩೨ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಗಳ ವಿಷಯವಾಗಿ ಅರ್ಜುನನ ಏಳು ಪ್ರಶ್ನೆಗಳು : ಅವುಗಳಿಗೆ ಭಗವಂತನ ಉತ್ತರ : ಭಕ್ತಿಯೋಗ ಮತ್ತು ಶುಕ್ಲ-ಕೃಷ್ಣಗತಿಗಳ ಪ್ರತಿಪಾದನೆ

**ಅರ್ಜುನ ಉವಾಚ :**

**ಓಂ ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥೧॥**
**ಓಂ ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥೨॥**

ಅರ್ಜುನನು ಹೇಳುತ್ತಾನೆ :

"ಪುರುಷೋತ್ತಮ! ಆ ಬ್ರಹ್ಮವೆಂಬುದು ಯಾವುದು? ಅಧ್ಯಾತ್ಮವೆಂಬುದು ಯಾವುದು? ಕರ್ಮವು ಯಾವುದು? ಅಧಿಭೂತವೆಂದು ಯಾವುದು ಹೇಳಲ್ಪಡುತ್ತದೆ? ಅಧಿದೈವವೆಂಬುದು ಯಾವುದು? ಮಧುಸೂದನ! ಈ ದೇಹದಲ್ಲಿ ಅಧಿಯಜ್ಞನಾಗಿರುವವನು ಯಾರು? ಅವನು ಹೇಗೆ ಅಧಿಯಜ್ಞನು? ಮರಣಕಾಲದಲ್ಲಿ ಜಿತಮನಸ್ಕರಾದವರು ನಿನ್ನನ್ನು ಹೇಗೆ ತಿಳಿಯಬಹುದು?"

* * *

(ಏಳನೆಯ ಅಧ್ಯಾಯದ ಕಡೆಯ ೨೯ ಮತ್ತು ೩೦ನೆಯ ಶ್ಲೋಕಗಳಲ್ಲಿ ಶ್ರೀಕೃಷ್ಣನು–'ಜರಾ-ಮರಣಗಳ ಮೋಕ್ಷಕ್ಕಾಗಿ ನನ್ನನ್ನು ಯಾರು ಆಶ್ರಯಿಸುತ್ತಾರೆಯೋ-ಅವರು ಆ ಬ್ರಹ್ಮವನ್ನೂ, ಪರಿಪೂರ್ಣವಾದ ಅಧ್ಯಾತ್ಮವನ್ನೂ ಅಖಿಲವಾದ ಕರ್ಮಗಳನ್ನೂ ತಿಳಿದಿರುತ್ತಾರೆ ಮತ್ತು ಅಧಿಭೂತ, ಅಧಿದೈವ, ಅಧಿಯಜ್ಞ ಇವುಗಳೊಡನೆ ಎಂದರೆ ಇವೆಲ್ಲಾ ನಾನೇ ಎಂದು ನನ್ನನ್ನು ತಿಳಿದವರು ಮರಣಕಾಲದಲ್ಲಿಯೂ ಸಮಾಹಿತಚಿತ್ತರಾಗಿ ನನ್ನನ್ನು ತಿಳಿದುಕೊಳ್ಳುವರು'–ಎಂದು ಹೇಳಿರುತ್ತಾನೆ. ಅರ್ಥಾತ್ ಬ್ರಹ್ಮ, ಅಧ್ಯಾತ್ಮ,

ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞ–ಈ ಆರರ ಪ್ರಸ್ತಾಪವನ್ನೆತ್ತಿದ್ದಾನೆ. ಈ ಆರರ ತತ್ತ್ವಾರ್ಥಗಳ ಜೊತೆಗೆ ಪ್ರಯಾಣಕಾಲದಲ್ಲಿ ಭಗವಂತನನ್ನು ನಿಯತಾತ್ಮರಾದವರು ಹೇಗೆ ತಿಳಿದುಕೊಳ್ಳುತ್ತಾರೆಂಬ ಏಳನೆಯ ಪ್ರಶ್ನೆಯನ್ನೂ ಕೇಳಿದ್ದಾನೆ ಅರ್ಜುನ. **ಅಧಿಯಜ್ಞಃ ಕಥಂ**? ಅಧಿಯಜ್ಞನು ಹೇಗೆ ಆಗಿರುವನು? **ಅಧಿಯಜ್ಞಃ ಕೋಽತ್ರ**? ಈ ದೇಹದಲ್ಲಿ ಅಧಿಯಜ್ಞನಾಗಿರುವವನು ಯಾವನು?–ಈ ರೀತಿಯಲ್ಲಿ ಇದನ್ನೇ ಎರಡು ಪ್ರಶ್ನೆಗಳೆಂದು ಗಣನೆಮಾಡಿದರೆ ಒಟ್ಟು ಎಂಟು ಪ್ರಶ್ನೆಗಳಾಗುತ್ತವೆ. ಅಧಿಯಜ್ಞಪರ್ಯಾಯದಲ್ಲಿಯೇ **ಕಥಂ, ಕೋಽತ್ರ** ಎರಡಕ್ಕೂ ಉತ್ತರ ಸಿಗುವುದರಿಂದ ಒಂದೇ ಪ್ರಶ್ನೆಯನ್ನಾಗಿ ತೆಗೆದುಕೊಂಡು ಅರ್ಜುನನು ಕೇಳಿದ್ದು ಏಳು ಪ್ರಶ್ನೆಗಳೆಂದು ಹೇಳುತ್ತಾರೆ. ಬ್ರಹ್ಮ= **ಆತ್ಮತತ್ತ್ವ. ಅಧ್ಯಾತ್ಮಂ=ಅಧಿ** ಎಂಬ ಉಪಸರ್ಗವು 'ಕುರಿತು' ಎಂಬ ಅರ್ಥವನ್ನು ಕೊಡುತ್ತದೆ. ಅರ್ಥಾತ್ ಅಧ್ಯಾತ್ಮ ಎಂದರೆ ಆತ್ಮನನ್ನು ಕುರಿತು ಹೇಳುವುದು. **ಕರ್ಮ**=ಕೆಲಸ. ನಿತ್ಯ-ನೈಮಿತ್ತಿಕ-ಕಾಮ್ಯ-ನಿಷಿದ್ಧಕರ್ಮಗಳಾಗಬಹುದು. ಕುಳಿತುಕೊಳ್ಳುವುದು, ನಿಲ್ಲುವುದು, ಮಾತನಾಡುವುದು–ಮುಂತಾದ ಕೆಲಸಗಳೂ ಆಗಬಹುದು. **ಅಧಿಭೂತಂ**=ಪಂಚಮಹಾಭೂತಗಳನ್ನು ಕುರಿತು ಹೇಳುವುದು. ಸೃಷ್ಟಿಯ ಸಕಲವಸ್ತುಗಳೂ **ಪೃಥಿವ್ಯಾಪಸ್ತೇಜೋವಾಯ್ವಾಕಾಶಗಳೆಂಬ** ಪಂಚಭೂತಗಳ ವಿಕಾರಗಳೇ ಆಗಿದ್ದು ಆ ಪಂಚಭೂತಗಳ ಹೊರತಾಗಿ ಅನ್ಯತತ್ತ್ವಗಳು ಮೂಲದಲ್ಲಿ ಯಾವುವೂ ಇಲ್ಲವೆಂದು ಕೆಲವರ ಅಭಿಪ್ರಾಯವಾಗಿದೆ. ಶರೀರದ ವಿಷಯದಲ್ಲಿ ತೆಗೆದುಕೊಂಡರೆ : ಪಂಚಭೂತಗಳ ತನ್ಮಾತ್ರೆಗಳಿಗೆ ಸಂಬಂಧಿಸಿದಂತೆ ಕಿವಿಯಿಂದ ಕೇಳುವುದು, ಕಣ್ಣಿನಿಂದ ನೋಡುವುದು, ಮೂಗಿನಿಂದ ಆಘ್ರಾಣಿಸುವುದು, ನಾಲಿಗೆಯಿಂದ ರುಚಿನೋಡುವುದು, ಚರ್ಮದಿಂದ ಸ್ಪರ್ಶಿಸುವುದು–ಇವುಗಳು ಅಧಿಭೂತಗಳು.

**ಅಧಿಯಜ್ಞಃ** : ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ ಹೇಳಿರುವಂತೆ ಪ್ರಜೆಗಳ ಜೊತೆಯಲ್ಲಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವ ಯಜ್ಞಗಳು. ಶ್ರೀಕೃಷ್ಣನು ಅದೇ ಅಧ್ಯಾಯದ ೨೮ನೆಯ ಶ್ಲೋಕದಲ್ಲಿ ಹೇಳಿರುವಂತೆ ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ಸ್ವಾಧ್ಯಾಯ-ಜ್ಞಾನಯಜ್ಞಗಳೂ ಆಗಬಹುದು.

**ಅಧಿದೈವಂ**–ಸೃಷ್ಟಿಯ ವ್ಯಾಪಾರಗಳನ್ನು ಜಡಪದಾರ್ಥಗಳು ತಮ್ಮಷ್ಟಕ್ಕೆ ತಾವೇ ಉಂಟುಮಾಡುವುದಿಲ್ಲ. ಆ ಜಡಪದಾರ್ಥಗಳಲ್ಲಿ ಪ್ರತ್ಯೇಕವಾಗಿ ಒಬ್ಬೊಬ್ಬ ದೇವತೆಯು ವಾಸಮಾಡಿಕೊಂಡಿದ್ದು ಆ ದೇವತೆಗಳೇ ಮೇಲ್ಕಂಡ ವ್ಯಾಪಾರಗಳನ್ನು ಉಂಟುಮಾಡುತ್ತಿರುವುದರಿಂದ ಆ ದೇವತೆಗಳ ಆರಾಧನೆಯು ನಮಗೆ ಪ್ರಾಪ್ತವಾಯಿತು. ಹೇಗೆಂದರೆ ಪಾಂಚಭೌತಿಕ ಜಡಗೋಳದಲ್ಲಿ ವಾಸಮಾಡಿಕೊಂಡಿರುವ ಸೂರ್ಯನೆಂಬ ಪುರುಷನೇ ಪ್ರಕಾಶವನ್ನು ಕೊಡುವ ಕೆಲಸವನ್ನು ಮಾಡುತ್ತಿದ್ದು ಅವನೊಬ್ಬ ಉಪಾಸ್ಯ ದೇವತೆಯಾಗಿದ್ದಾನೆ. ಇಂತಹ ದೇವತೆಗಳು ಅನೇಕರಿದ್ದಾರೆ.

ಶರೀರದ ವಿಷಯವನ್ನು ತೆಗೆದುಕೊಂಡರೂ ಒಂದೊಂದು ಅವ ಯವಕ್ಕೂ ಒಬ್ಬೊಬ್ಬ ದೇವನು ಅಧಿಪತಿಯೆಂದು ಹೇಳುತ್ತಾರೆ. ಕೈಗಳ ದೇವತೆ ಇಂದ್ರ. ಕಾಲುಗಳ ದೇವತೆ ವಿಷ್ಣು. ಗುದದ ದೇವತೆ ಮಿತ್ರ. ಉಪಸ್ಥದ ದೇವತೆ ಪ್ರಜಾಪತಿ. ವಾಣಿಯ ದೇವತೆ ಅಗ್ನಿ. ಕಣ್ಣುಗಳ ದೇವತೆ ಸೂರ್ಯ, ಕಿವಿಗಳ ದೇವತೆ ಆಕಾಶ, ನಾಲಗೆಯ ದೇವತೆ ವರುಣ. ಮೂಗಿನ ದೇವತೆ ಪೃಥಿವೀ. ತ್ವಚೆಯ ದೇವತೆ ವಾಯು. ಮನದ ದೇವತೆ ಚಂದ್ರ. ಅಹಂಕಾರದ ದೇವತೆ ಬುದ್ಧಿ. ಬುದ್ಧಿಯ ದೇವತೆ ಪುರುಷ. ಆಯಾ ದೇವತೆಗಳು ಆಯಾ ಇಂದ್ರಿಯಗಳ ಚಾಲಕರಾಗಿರುತ್ತಾರೆ.

ಉಪನಿಷತ್ತಿನಲ್ಲಿಯೂ ಕೂಡ ಉಪಾಸನೆಗಾಗಿ ಹೇಳಲ್ಪಟ್ಟ ಬ್ರಹ್ಮ ಸ್ವರೂಪದ ಪ್ರತೀಕಗಳಲ್ಲಿ ಮನಸ್ಸು ಅಧ್ಯಾತ್ಮಪ್ರತೀಕವೆಂದೂ ಸೂರ್ಯ ಅಥವಾ ಆಕಾಶವು ಅಧಿದೈವದ ಪ್ರತೀಕವೆಂದೂ ಹೇಳಿದ್ದಾರೆ. **ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತ್ಯು-ಭಯಮಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ।** ಮನಸ್ಸನ್ನು ಬ್ರಹ್ಮವೆಂದು ಉಪಾಸಿಸಬೇಕು. ಇದು ಅಧ್ಯಾತ್ಮ. ಆಕಾಶವನ್ನು ಬ್ರಹ್ಮವೆಂದು ಉಪಾಸಿಸಬೇಕು. ಇದು ಅಧಿದೈವತ–ಹೀಗೆ ಅಧ್ಯಾತ್ಮ ಅಧಿದೈವತ–ಇವೆರಡೂ ಉಪದಿಷ್ಟವಾಗಿವೆ.

ಹಿಂದಿನ ಅಧ್ಯಾಯದ ಕೊನೆಯಲ್ಲಿ ಪ್ರಸ್ತುತವಾಗಿದ್ದ ತಿಳಿಯಬೇಕಾ ಗಿರುವ ಉಪಾದೇಯವಸ್ತುಗಳ ಭೇದಗಳನ್ನು ಇಲ್ಲಿ ವಿವೇಚನೆಮಾಡಲಾಗಿದೆ. ಮುಪ್ಪು-ಸಾವುಗಳಿಂದ ಬಿಡುಗಡೆಹೊಂದಲು ಭಗವಂತನನ್ನು ಆಶ್ರಯಿಸಿ

ಉಪಾಸನೆಮಾಡುವವರು ತಿಳಿಯಬೇಕೆಂದು ಹೇಳಿರುವ ಆ ಬ್ರಹ್ಮವು ಯಾವುದು? ಅಧ್ಯಾತ್ಮವು ಯಾವುದು ಮತ್ತು ಕರ್ಮವು ಯಾವುದು? ಎಂಬುದನ್ನು ಹೇಳಬೇಕು. ಐಶ್ವರ್ಯಾರ್ಥಿಗಳು ತಿಳಿಯಬೇಕಾಗಿರುವ ಅಧಿಭೂತ ಮತ್ತು ಅಧಿದೈವಗಳು ಯಾವುವು?

O O O

ಕೇವಲಾತ್ಮಸ್ವರೂಪವನ್ನು ಹೊಂದಲು ಬಯಸುವವರು, ಐಶ್ವರ್ಯಕಾಮರು ಮತ್ತು ಪರಮಾತ್ಮಪ್ರಾಪ್ತಿಕಾಮರು–ಇವರು ಮೂವರೂ ತಿಳಿಯಬೇಕಾಗಿರುವ ಅಧಿಯಜ್ಞ ಎಂಬ ಶಬ್ದದಿಂದ ಹೇಳಲ್ಪಟ್ಟಿರುವವನು ಯಾರು? ಅವನಿಗೆ ಅಧಿಯಜ್ಞಭಾವವು ಹೇಗೆ? ಪ್ರಾಣಪ್ರಯಾಣಕಾಲದಲ್ಲಿ ನಿಯತಾತ್ಮರಾದ ಈ ಮೂವರೂ ನಿನ್ನನ್ನು ಹೇಗೆ ತಿಳಿಯಬೇಕು? (ರಾ. ಭಾ.)

ಮರಣಕಾಲದಲ್ಲಿ ಮಾಡಬೇಕಾದ ಕೆಲಸ, ಗತಿ, ಮಾರ್ಗ–ಮುಂತಾದುವುಗಳು ಈ ಅಧ್ಯಾಯದಲ್ಲಿ ಉಪದೇಶಮಾಡಲ್ಪಟ್ಟಿವೆ. (ಮ. ಭಾ.)

ಶ್ರೀಭಗವಾನುವಾಚ :

**ಓಂ ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥೩॥**

**ಓಂ ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥೪॥**

ಶ್ರೀಕೃಷ್ಣನು ಹೇಳುತ್ತಾನೆ :

“ಶ್ರೇಷ್ಠವಾದ ಅಕ್ಷರವೇ ಬ್ರಹ್ಮವು. ಸ್ವಭಾವವು ಅಧ್ಯಾತ್ಮವೆನಿಸುತ್ತದೆ. ಭೂತಭಾವಗಳ ಹುಟ್ಟಿಗೆ ಕಾರಣವಾದ ವಿಸರ್ಗವೇ ಕರ್ಮವೆಂಬ ಹೆಸರುಳ್ಳದ್ದು. ಅಧಿಭೂತವು ನಾಶವಾಗುವ ಸ್ವಭಾವದ್ದು. ಪುರುಷನೇ ಅಧಿದೈವತವು. ದೇಹಧಾರಿಗಳಲ್ಲಿ ಶ್ರೇಷ್ಠನಾದವನೇ! ಈ ದೇಹದಲ್ಲಿರುವ ಅಧಿಯಜ್ಞನು ನಾನೇ ಆಗಿರುತ್ತೇನೆ.

* * *

(ಪರಮಂ ಅಕ್ಷರಂ ಬ್ರಹ್ಮ = ಶ್ರೇಷ್ಠವೂ ಅವಿನಾಶಿಯೂ ಆಗಿರುವುದೇ ಬ್ರಹ್ಮ. ಬ್ರಹ್ಮಕ್ಕೆ ಸಮವಾದುದಾಗಲೀ ಅದಕ್ಕಿಂತಲೂ ಶ್ರೇಷ್ಠವಾದು

ದಾಗಲೀ ಮತ್ತೊಂದಿಲ್ಲ. ಕ್ಷರ ಎಂದರೆ ನಾಶ. ಅಕ್ಷರ ಎಂದರೆ ನಾಶವಿಲ್ಲದುದು. ಬ್ರಹ್ಮಾಂಡದಲ್ಲಿ ಶಾಶ್ವತವಾದುದು ಅದೊಂದೇ. ಅದಕ್ಕೇ ಬ್ರಹ್ಮವೆಂದು ಹೆಸರು. 'ಅಕ್ಷರಂ ಬ್ರಹ್ಮ ಪರಮಂ' ಎಂಬ ಪದಗಳ ಧ್ವನಿಯು ಅಕ್ಷರಶಬ್ದಕ್ಕೆ ಓಂಕಾರದ ಅರ್ಥವನ್ನೂ ಕೊಡುತ್ತದೆ. ಓಂಕಾರವನ್ನು ಅಕ್ಷರಬ್ರಹ್ಮವೆಂದೇ ಕರೆದಿದ್ದಾರೆ. 'ಓಂ ತದ್ಬ್ರಹ್ಮ । ಓಮಿತ್ಯೇಕಾಕ್ಷರಂ ಬ್ರಹ್ಮ' ಮುಂತಾದ ಶ್ರುತಿವಚನಗಳೂ ಇವೆ. ಅಕ್ಷರಶಬ್ದವು ಪರಮಾತ್ಮವಾಚಕವೂ ಆಗಿದೆ.

ಅಕ್ಷರಬ್ರಹ್ಮದ ವಿಷಯವಾಗಿ ಬೃಹದಾರಣ್ಯಕದಲ್ಲಿ ಹೀಗೆ ಹೇಳಿದ್ದಾರೆ :

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠನ್ತಿ। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯನ್ದನ್ತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾಃ ಯಾಂ ಯಾಂ ದಿಶಮನು । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸನ್ತಿ ಯಜಮಾನಂ ದೇವಾಃ ದರ್ವೀಂ ಪಿತರೋಽನ್ವಾಯತ್ತಾಃ ॥೯॥**

ಈ ಅಕ್ಷರದ (ಅಪರೋಕ್ಷವಾದ ಬ್ರಹ್ಮನ) ಶಾಸನದಿಂದ ಸೂರ್ಯ-ಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ. ಈ ಅಕ್ಷರದ ಅನುಶಾಸನದಿಂದಲೇ ದ್ಯುಲೋಕ-ಪೃಥ್ವಿಗಳು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ. ನಿಮಿಷಗಳು, ಮುಹೂರ್ತಗಳು, ಅಹೋರಾತ್ರಗಳು, ಪಕ್ಷಗಳು, ಮಾಸಗಳು, ವರ್ಷಗಳು ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ. ಈ ಅಕ್ಷರದ ಪ್ರಶಾಸನದಿಂದಲೇ ಕೆಲವು ನದಿಗಳು ಪೂರ್ವವಾಹಿನಿಗಳಾಗಿಯೂ, ಕೆಲವು ಪಶ್ಚಿಮವಾಹಿನಿಗಳಾಗಿಯೂ, ಮತ್ತೆ ಕೆಲವು ಆಯಾ ದಿಕ್ಕುಗಳಲ್ಲಿಯೂ ಹರಿಯುತ್ತಿರುತ್ತವೆ. ಗಾರ್ಗಿ! ಈ ಅಕ್ಷರಬ್ರಹ್ಮನ ಪ್ರಶಾಸನದಿಂದಲೇ

ಮನುಷ್ಯರು ದಾನಿಗಳನ್ನು ಹೊಗಳುತ್ತಾರೆ. ದೇವತೆಗಳು ಯಜಮಾನನನ್ನೂ, ಪಿತೃಗಳು ದರ್ವೀಹೋಮವನ್ನೂ ಅವಲಂಬಿಸಿರುತ್ತಾರೆ.

**ಸ್ವಭಾವೋऽಧ್ಯಾತ್ಮಮುಚ್ಯತೇ** = 'ಸ್ವ' ಎಂದರೆ ತನ್ನ ಭಾವ. ಆತ್ಮನ ಭಾವವೇ ಸ್ವಭಾವ. ಅರ್ಥಾತ್ ಅಧ್ಯಾತ್ಮವೆಂದರೆ ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ–ಇವುಗಳಿಂದೊಡಗೂಡಿದ ಆತ್ಮನೇ ಆಯಿತು. ಪರಬ್ರಹ್ಮವಸ್ತುವಿನ ಅಂಶಿಯಾದ ಜೀವಾತ್ಮನೇ ಅಧ್ಯಾತ್ಮ-ಸ್ವಭಾವ ಎಂಬುದಕ್ಕೆ ಮಹಾಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ :

**ತಸ್ಯೈವ ಪದಸ್ಯ ಪ್ರತಿದೇಹಂ ಪ್ರತ್ಯಗಾತ್ಮಭಾವಃ ಸ್ವೋಭಾವಃ**

ಸ್ವಭಾವಸಿದ್ಧವಾದುದು ದೇಹ. ಸ್ವಭಾವ ಎಂದರೆ ಸತ್ತ್ವ-ರಜಸ್ತಮೋ ಗುಣಗಳೂ ಆಗುತ್ತವೆ. ಈ ಗುಣಗಳಿಗೆ ಅನುಸಾರವಾಗಿಯೇ ಜೀವಿಯು ನಾನಾ ಯೋನಿಗಳಲ್ಲಿ ಜನ್ಮತಾಳುತ್ತಾನೆ. ಸ್ವಭಾವಸಿದ್ಧವಾದ ಆತ್ಮನಲ್ಲಿ (ದೇಹದಲ್ಲಿ) ಇರುವುದೇ ಅಧ್ಯಾತ್ಮ. ಅರ್ಥಾತ್ ಸ್ವಭಾವಸಿದ್ಧವಾದುದು ಪ್ರತ್ಯಗಾತ್ಮ. ಆದುದರಿಂದಲೇ ಸ್ವಭಾವ ಎಂದರೆ ಅಧ್ಯಾತ್ಮ.

**ಭೂತಭಾವೋದ್ಭವಕರಃ ವಿಸರ್ಗಃ ಕರ್ಮಸಂಜ್ಞಿತಃ ।**

ಭೂತಗಳ-ಪ್ರಾಣಿಗಳ, ಭಾವದ-ಸ್ವಭಾವದ, ಉದ್ಭವಕರ–ಉದ್ಭವ ವನ್ನು ಉಂಟುಮಾಡತಕ್ಕದ್ದು. ವಿಸರ್ಗ ಎಂದರೆ ಬ್ರಹ್ಮನಿಂದ ವಿಸೃಷ್ಟವಾದ ಪ್ರಕೃತಿ. ಇದಕ್ಕೆ ಕರ್ಮವೆಂದೂ ಹೆಸರು. ಪ್ರಕೃತಿ ಎಂದರೆ ಕರ್ಮ. ಕರ್ಮ ಎಂದರೆ ಪ್ರಕೃತಿ. ಎರಡೂ ಪ್ರತ್ಯೇಕವಸ್ತುಗಳಲ್ಲ. ಕರ್ಮವಿಲ್ಲದಿದ್ದರೆ ಪ್ರಕೃತಿಯೇ ಇಲ್ಲ. ಆದುದರಿಂದ ವಿಸರ್ಗ ಅಥವಾ ಬ್ರಹ್ಮನಿಂದ ವಿಸೃಷ್ಟವಾದುದಕ್ಕೆ ಪ್ರಕೃತಿಯೆಂದೂ–ಅದೇ ಕರ್ಮವೆಂದೂ ಶ್ರೀಕೃಷ್ಣನು ಹೇಳಿದ್ದಾನೆ.

**ಅಧಿಭೂತಂ ಕ್ಷರೋ ಭಾವಃ**= ಬ್ರಹ್ಮವು ಅಕ್ಷರವಾದರೆ ಅಧಿಭೂತವು ಕ್ಷರಭಾವವುಳ್ಳದ್ದು. ಕ್ಷರ ಎಂದರೆ ವಿಕಾರಸ್ವಭಾವದ ; ಮಾರ್ಪಡುವ ಸ್ವಭಾ ವದ ; ಅಸ್ಥಿರವಾದ ಎಂದರ್ಥ. ಅಧಿಭೂತಗಳು ಎಂದರೆ ಪಂಚಮಹಾಭೂತ ಗಳು. ಇವುಗಳು ವಿಕಾರವುಳ್ಳವುಗಳು. ಅಸ್ಥಿರವಾದುವುಗಳು. ಇವತ್ತಿದ್ದಂತೆ ನಾಳೆ ಇರುವುದಿಲ್ಲ. ಈ ಭೂಮಿಯೂ ಸಹ ಬದಲಾವಣೆಯನ್ನು ಹೊಂದು ತ್ತಲೇ ಇರುತ್ತದೆ. ಪ್ರಪಂಚದ ಪ್ರಳಯಕಾಲದಲ್ಲಿ ಭೂಮಿಯೂ ಸಹ ಇರು

ವುದೇ ಇಲ್ಲ. ಆದುದರಿಂದ ಅಧಿಭೂತ ಎಂದರೆ ಪ್ರಾಣಿಸಮೂಹಕ್ಕೆ ಆಧಾರವಾಗಿರುವ ಪಂಚಭೂತಗಳು. ಇವು ನಾಶವಾಗುವ ಸ್ವಭಾವವನ್ನು ಹೊಂದಿವೆ. ಅಥವಾ ಪಂಚಭೂತಾತ್ಮಕವಾದ ಪ್ರಾಣಿಗಳ ಶರೀರವನ್ನೇ ಇಲ್ಲಿ ಅಧಿಭೂತವೆಂದು ಹೇಳಬಹುದಾಗಿದೆ. ಈ ಶರೀರವು ನಾಶಹೊಂದುವ ಸ್ವಭಾವವುಳ್ಳದ್ದು ಎಂಬುದು ಪ್ರತ್ಯಕ್ಷವಾಗಿಯೇ ಇದೆ.

**ಪುರುಷಶ್ಚಾಧಿದೈವತಂ** = ಪುರುಷನೇ ಅಧಿದೈವತನು. ಅಧಿದೈವತ ಎಂದರೆ ಅಧಿದೇವತೆ ಎಂದಾಗುತ್ತದೆ. ದೇವತೆಗಳನ್ನೆಲ್ಲಾ ಅನುಗ್ರಹಿಸುವ ಮೇಲ್ಪಟ್ಟದ ಪದಾರ್ಥ. ಇಂದ್ರಿಯಗಳನ್ನು ಆಳುತ್ತಿರುವ ಜೀವ. ಪುರುಷ ಎಂದರೆ ಯಾರು?–**ಪೂರ್ಣಂ ಅನೇನ ಸರ್ವಂ ಇತಿ ಪುರುಷಃ** ಇವನಿಂದ ಎಲ್ಲವೂ ಪೂರ್ಣವಾಗಿದೆ. ಆದುದರಿಂದ ಇವನು ಪುರುಷನು. ಅಥವಾ **ಪುರಿ ಶಯನಾತ್ ಪುರುಷಃ** ಪುರದಲ್ಲಿ (ದೇಹದಲ್ಲಿ) ಮಲಗಿರುವುದರಿಂದ ಪುರುಷನು. ಪುರುಷಸೂಕ್ತದಲ್ಲಿ–**ಸಹಸ್ರಶೀರ್ಷಾ ಪುರುಷಃ** ಪುರುಷನು ಸಾವಿರ ತಲೆಯುಳ್ಳವನಾಗಿದ್ದಾನೆ. ಪುರುಷನು ಎಂದರೆ ಜೀವಾತ್ಮನು. ಶರೀರದಲ್ಲಿರುವುದರಿಂದಲೇ ಮನುಷ್ಯನನ್ನು 'ಪುರುಷ' ಎಂದೇ ಕರೆಯುತ್ತಾರೆ. ಸಾವಿರ ತಲೆಗಳುಳ್ಳ ಸರ್ವವ್ಯಾಪಕನಾದ ಪರಮಾತ್ಮನೂ ಪುರುಷನೇ. ಮನುಷ್ಯನ ಶರೀರದಲ್ಲಿ ಪರಮಾತ್ಮನ ಏಕಾಂಶನಾಗಿ ಜೀವಾತ್ಮನಾಗಿರುವವನೂ ಪುರುಷನೇ.

**ಅಧಿಯಜ್ಞೋಽಹಮೇವಾತ್ರ ಅಸ್ಮಿನ್ ದೇಹೇ**=ಎನ್ನುತ್ತಾನೆ ಶ್ರೀಕೃಷ್ಣ. ಅಧಿಯಜ್ಞ ಎಂದರೆ ಪರಮಾತ್ಮ. ಯಜ್ಞಶಬ್ದವೇ ವಿಷ್ಣುವಾಚಕವಾಗಿದೆ. **ಯಜ್ಞೋ ವೈ ವಿಷ್ಣುಃ**= ಯಜ್ಞವೇ ವಿಷ್ಣು. ಯಜ್ಞವು ದೇಹಕ್ಕೆ ಸಂಬಂಧಪಟ್ಟಿದ್ದಾಗಿದೆ. ದೇಹದಿಂದಲೇ ಯಜ್ಞವು ನಡೆಯುತ್ತದೆ. ಅರ್ಥಾತ್ ಯಜ್ಞಕ್ಕೆ ಈ ದೇಹವೇ ಆಶ್ರಯವಾಗಿದೆ. ಈ ಕಾರಣದಿಂದಲೇ ಯಜ್ಞರೂಪಿಯಾದ ಮಹಾವಿಷ್ಣುವು ದೇಹದಲ್ಲಿ ಆಶ್ರಯವನ್ನು ಪಡೆದಿದ್ದಾನೆ. ಆದುದರಿಂದ ಶ್ರೀಕೃಷ್ಣನು ಈ ದೇಹದಲ್ಲಿರುವ ಅಧಿಯಜ್ಞನು ಎಂದರೆ ಪರಮಾತ್ಮನು, ಮಹಾವಿಷ್ಣುವು ನಾನೇ ಎನ್ನುತ್ತಾನೆ.

ಎರಡು ಶ್ಲೋಕಗಳನ್ನೂ ಕ್ರೋಡೀಕರಿಸಿ ಪರಬ್ರಹ್ಮಾದಿಗಳ ವಿವರಣೆಯನ್ನು ಹೀಗೆ ಕೊಡಬಹುದಾಗಿದೆ.

(೧) ಪರಬ್ರಹ್ಮ (೨) ಆತ್ಮ (೩) ಪ್ರಕೃತಿ ಅಥವಾ ಕರ್ಮ (೪) ಪಂಚಭೂತಾತ್ಮಕವಾದ ಶರೀರ (೫) ಶರೀರದಲ್ಲಿರುವ ಜೀವಾತ್ಮ (೬) ಯಜ್ಞಸ್ವರೂಪಿಯಾದ ಭಗವಂತ.

ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಕ್ಕೆ ಜ್ಞಾನೇಶ್ವರರು ಹೃದಯಂಗಮವಾಗಿ ಸೋದಾಹರಣದೃಷ್ಟಾಂತಗಳೊಡನೆ ಈ ರೀತಿಯಲ್ಲಿ ವಿವರಣೆ ಕೊಟ್ಟಿರುತ್ತಾರೆ :

ಅಧಿಭೂತದ ಅಸ್ತಿತ್ವವು ಮೇಘಸದೃಶವಾಗಿದೆ. ಮೋಡದಂತೆ ಇದು ಉದಿಸುವುದು ಮತ್ತು ಲಯವಾಗುವುದು. ಇದರ ಅಸ್ತಿತ್ವವು ಮೇಲೆ ತೋರಿದರೂ ವಸ್ತುತಃ ಇಲ್ಲವೆಂಬುದೇ ನಿಜವಾದ ಸ್ವರೂಪ. ಪಂಚಮಹಾ ಭೂತಗಳು ಒಂದಾಗಿ ಇದಕ್ಕೆ ರೂಪವನ್ನು ಉಂಟುಮಾಡುವುವು.

ಆದರೆ ಈ ಅಧಿಭೂತವು ಪಂಚಮಹಾಭೂತಗಳನ್ನೇ ಆಶ್ರಯಿಸಿ ಕೊಂಡಿರುವುದು ಮತ್ತು ಪಂಚೀಕರಣದಿಂದ ತನ್ನನ್ನೂ ತೋರಿಸಿಕೊಳ್ಳುವುದು. ಪಂಚಭೂತಗಳೆಲ್ಲಾ ಬೇರೆ-ಬೇರೆಯಾದಾಗ ಅಧಿಭೂತದ (ಶರೀರದ) ನಾಮರೂಪಗಳೂ ಇಲ್ಲದಾಗುವುವು. ಇಂತಹ ಶರೀರಕ್ಕೆ ಅಧಿಭೂತವೆಂದು ಹೆಸರು.

ಅಧಿದೈವವೆಂದರೆ ಪುರುಷ ಅಥವಾ ಜೀವ. ಅದು ಪ್ರಕೃತಿಯಿಂದ ದೊರಕಿಸಲ್ಪಟ್ಟ ಭೋಗಗಳನ್ನು ಅನುಭವಿಸುವುದು. ಅದು ಬುದ್ಧಿಯ ಪ್ರಕಾಶವು. ಇಂದ್ರಿಯರೂಪವಾದ ದೇಹದ ಅಧಿಪತಿಯು. ಶರೀರಪತನದ ಸಮಯದಲ್ಲಿ ಜೀವವೆಂಬ ವೃಕ್ಷವು ಸಂಕಲ್ಪವೆಂಬ ಪಕ್ಷಿಗೆ ಆಶ್ರಯವನ್ನು ಕೊಡುವುದರಿಂದ ತನ್ನ ಪುನರ್ಜನ್ಮಕ್ಕೆ ತಾನೇ ಅವಕಾಶಮಾಡಿಕೊಳ್ಳುತ್ತದೆ. ನಿಜಕ್ಕೂ ಜೀವನು ಪ್ರತಿಪರಮಾತ್ಮನಾಗಿರುವನು. ಆದರೆ ಅಹಂಕಾರವೆಂಬ ನಿದ್ರೆಯ ವಶನಾಗಿ ಸ್ವಪ್ನವ್ಯವಹಾರದಂತೆ ಸುಖಿಯೂ ದುಃಖಿಯೂ ಆಗು ವನು. ಜೀವನೆಂದು ಸಂಬೋಧಿಸುವ ಇದನ್ನೇ ಪಂಚಭೂತಾತ್ಮಕವಾದ ಶರೀರದೊಳಗಿನ ಅಧಿದೈವತವೆಂದು ತಿಳಿಯಬೇಕು.

ಶರೀರವೆಂಬ ಊರಿನಲ್ಲಿದ್ದುಕೊಂಡು ಶರೀರಭಾವವನ್ನು ಲಯಗೊಳಿ ಸುವವನು ಈ ಶರೀರದಲ್ಲಿರುವ ನಾನು ; ಅಧಿಯಜ್ಞನು. ಉಳಿದ ಅಧಿದೈವ, ಅಧಿಭೂತಗಳೆಲ್ಲವೂ ನಿಜವಾಗಿ ನಾನೇ ಆಗಿರುವೆ. ಚೊಕ್ಕಚಿನ್ನದಲ್ಲಿ ಹೀನ ಧಾತುವನ್ನು (ತಾಮ್ರವನ್ನು ) ಬೆರೆಸಿದರೆ ಅದರ ಬೆಲೆಯೇನೋ ಕಡಿಮೆ

ಯಾಗುವುದು. ಆದರೆ ಮೂಲ ಬಂಗಾರದ ಉತ್ಕೃಷ್ಟತೆಯು ಹೋಗಿರುವುದಿಲ್ಲ. ಅದು ಹೀನವೂ ಆಗುವುದಿಲ್ಲ. ಆದರೆ ಹೀನಧಾತುವಿನ ಸಂಬಂಧವಿರುವವರೆಗೆ ಅದು ಕಡಿಮೆಬೆಲೆಯದೆಂದೇ ನಿರ್ಣಯಿಸಲ್ಪಡುತ್ತದೆ. ಅದರಂತೆ ಅಧಿಭೂತಾಧಿದೈವಗಳು ಅವಿದ್ಯೆಯ ಆವರಣದಲ್ಲಿ ಮುಚ್ಚಿರುವವರೆಗೆ ಅವು ನನ್ನಿಂದ ಬೇರೆಯಾಗಿಯೇ ಉಳಿಯುವುವು. ಅವಿದ್ಯೆಯ ಆವರಣವು ದೂರವಾಯಿತೆಂದರೆ ಎಲ್ಲವೂ ನಾನೇ ಆಗುತ್ತೇನೆ. ಕೂದಲಿನ ಮೇಲೆ ಸ್ಫಟಿಕ ಶಿಲೆಯನ್ನಿಟ್ಟರೆ ಅದು ಒಡೆದಿರುವಂತೆ ಕಾಣುತ್ತದೆ. ಕೂದಲನ್ನು ತೆಗೆದುಹಾಕಿಬಿಟ್ಟರೆ ಆ ಒಡಕು ಕಾಣುವುದೇ ಇಲ್ಲ. ಅದರಂತೆ ನಾನೂ ಮತ್ತು ಜೀವವೂ ಅಖಂಡ. ಜೀವಕ್ಕೆ ಅವಿದ್ಯೆಯ ಆವರಣವಿರುವವರೆಗೆ ಭಿನ್ನವಾಗಿಯೇ ಕಾಣುತ್ತೇವೆ. ಅವಿದ್ಯೆಯ ಆವರಣವು ಹೋಗಿಬಿಟ್ಟರೆ ಒಂದೇ ಆಗುತ್ತೇವೆ. ಈ ಪ್ರಕಾರವಾಗಿ ಪರಮಾತ್ಮಸ್ವರೂಪನಾದ ಅಧಿಯಜ್ಞನು ನಾನೇ ಆಗಿರುವೆನು.

ಅಧಿಯಜ್ಞದ ಅರ್ಥವಿವರಣೆಮಾಡುತ್ತಾ ಜ್ಞಾನೇಶ್ವರರು ಹೀಗೆ ಹೇಳಿದ್ದಾರೆ :

ವೈರಾಗ್ಯವೆಂಬ ಸಾಕಷ್ಟು ಕಟ್ಟಿಗೆಗಳ ಸಹಾಯದಿಂದ ಚೆನ್ನಾಗಿ ಪ್ರಜ್ವಲಿಸಿದ ಇಂದ್ರಿಯರೂಪವಾದ ಅಗ್ನಿಯಲ್ಲಿ ಶಬ್ದಾದಿ ವಿಷಯರೂಪಗಳಾದ ದ್ರವ್ಯಗಳನ್ನು ಆಹುತಿನೀಡುವರು. ಬಳಿಕ ವಜ್ರಾಸನರೂಪದ ಭೂಮಿಯನ್ನು ಶುದ್ಧಗೊಳಿಸಿ ಅದರ ಮೇಲೆ ಶರೀರರೂಪಮಂಟಪದಲ್ಲಿ ಆಧಾರಮುದ್ರೆಯೆಂಬ ಚೆನ್ನಾಗಿ ಒಣಗಿದ ಕಟ್ಟಿಗೆಯನ್ನು ಹಾಕುವರು. ಅಲ್ಲಿ ಸಂಯಮಾಗ್ನಿಯ ಕುಂಡದೊಳಗೆ ಯುಕ್ತಿಮಂತ್ರದಿಂದ ಮತ್ತು ಇಂದ್ರಿಯ ದ್ರವ್ಯದ ಸಹಾಯದಿಂದ ಅವರು ಯಜನಮಾಡುವರು. ಬಳಿಕ ಮನಸ್ಸು ಮತ್ತು ಪ್ರಾಣಗಳ ನಿಗ್ರಹವೇ ಒಂದು ಹವನದ್ರವ್ಯದ ಸಿದ್ಧತೆಯಾಗಿದ್ದು ಅದರಿಂದ ಹೊಗೆಯಿಲ್ಲದ ಜ್ಞಾನಾಗ್ನಿಯನ್ನು ಸಂತುಷ್ಟಗೊಳಿಸುವರು. ಈ ಬಗೆಯಾಗಿ ಇವೆಲ್ಲವನ್ನೂ ಜ್ಞಾನಾಗ್ನಿಗೆ ಸಮರ್ಪಿಸಲು ಆ ಜ್ಞಾನವೂ ಕೂಡ ಜ್ಞೇಯನಾದ ಪರಮಾತ್ಮನಲ್ಲಿ ಲಯವಾಗುವುದು ಮತ್ತು ಕೇವಲ ಜ್ಞೇಯವೇ ಶೇಷವಾಗಿ ಉಳಿಯುವುದು. ಇದಕ್ಕೆ ಅಧಿಯಜ್ಞವೆಂದು ಹೆಸರು.

**ಅಕ್ಷರಂ** = ಅಕ್ಷರವೆಂದರೆ ಪರಮಾತ್ಮ. ಕ್ಷರಭಾವವಿಲ್ಲದವನು. ಇದಕ್ಕೆ

ಓಂಕಾರ ಎಂಬ ಅರ್ಥವನ್ನು ಹೇಳಬಹುದಾದರೂ ಪರಮಂ ಎಂಬ ವಿಶೇಷಣ ಇರುವುದರಿಂದ ನಿರತಿಶಯವಾದ ಪರಬ್ರಹ್ಮ ಎಂದು ಹೇಳುವುದೇ ಉಚಿತ. ಆ ಪರಬ್ರಹ್ಮವು ಪ್ರತಿದೇಹದಲ್ಲೂ ಪ್ರತ್ಯಗಾತ್ಮಭಾವವಾಗಿರುವುದೇ ಸ್ವಭಾವ. ಅದೇ ಅಧ್ಯಾತ್ಮಶರೀರವನ್ನು ಆಶ್ರಯಿಸಿ ಪ್ರತ್ಯಗಾತ್ಮಭಾವದಿಂದ ಅದ ರಲ್ಲಿ ಇರುತ್ತಾ ಕೊನೆಗೆ ಪರಮಾರ್ಥಬ್ರಹ್ಮದಲ್ಲೇ ಪರ್ಯವಸಾನಹೊಂದುವ ವಸ್ತು. ಭೂತಗಳ ಸತ್ತೆಯನ್ನು ಉಂಟುಮಾಡುವ ವಿಸರ್ಗವೇ ಎಂದರೆ ದೇವತೆಗಳನ್ನುದ್ದೇಶಿಸಿ ಚರು, ಪುರೋಡಾಶ–ಮುಂತಾದ ಹವಿಸ್ಸನ್ನು ತ್ಯಾಗ ಮಾಡುವಿಕೆಯೇ (ಅರ್ಪಿಸುವಿಕೆಯೇ) ಅರ್ಥಾತ್ ಯಜ್ಞವೇ ಕರ್ಮವು. ಬೀಜರೂಪವಾದ ಈ ಯಜ್ಞದಿಂದಲೇ ಮಳೆ-ಬೆಳೆಗಳೇ ಮುಂತಾದುವು ಉಂಟಾಗಿ ಆ ಕ್ರಮದಿಂದ ಸ್ಥಾವರ-ಜಂಗಮಾತ್ಮಕವಾದ ಸಮಸ್ತಭೂತಗಳೂ ಉದ್ಭವಿಸುತ್ತವೆ. ವಿನಾಶಹೊಂದುವ ಎಲ್ಲ ಪದಾರ್ಥಗಳು (ಉತ್ಪತ್ತಿ ಹೊಂದುವ ಪದಾರ್ಥಗಳು) ಅಧಿಭೂತಗಳು. ಪುರುಷನು ಎಂದರೆ ಎಲ್ಲ ಜಗತ್ತನ್ನೂ ತುಂಬಿಕೊಂಡಿರುವವನು ಅಥವಾ ಶರೀರವೆಂಬ ಪುರದಲ್ಲಿ ವಾಸಿಸುವವನು. ಆದಿತ್ಯನಲ್ಲಿ ಅಂತರ್ಗತನಾಗಿರುವ ಹಿರಣ್ಯಗರ್ಭ. ಎಲ್ಲ ಪ್ರಾಣಿಗಳ ಕರಣಗಳನ್ನೂ ಅನುಗ್ರಹಿಸುವವನು.

o o o

ಅಧಿಯಜ್ಞವೆಂದರೆ ಎಲ್ಲ ಯಜ್ಞಗಳಿಗೂ ಅಭಿಮಾನಿದೇವತೆಯಾದ ವಿಷ್ಣು. "ಯಜ್ಞೋ ವೈ ವಿಷ್ಣುಃ" ಈ ದೇಹದಲ್ಲಿ ಯಾವ ಯಜ್ಞವುಂಟೋ ಅದಕ್ಕೆ ಅಧಿಷ್ಠಾತೃವಾದ ವಿಷ್ಣುರೂಪನು ನಾನೇ. ಯಜ್ಞವು ಶರೀರದಿಂದಲೇ ಮಾಡಲ್ಪಡುವುದು. ಶರೀರದೊಡನೆ ಅದಕ್ಕೆ ನಿತ್ಯಸಂಬಂಧ. ಆದುದರಿಂದ ಶರೀರದಲ್ಲಿ ಇರುವುದು ಎಂದು ಅದನ್ನು ತಿಳಿಯಲಾಗುತ್ತದೆ.

(ಶಂ. ಭಾ.)

ಬ್ರಹ್ಮ ಎಂದರೆ ಪರಮವಾದ ಅಕ್ಷರವಸ್ತು. ಪ್ರಕೃತಿವಿನಿರ್ಮುಕ್ತವಾದ ಶುದ್ಧವಾದ ಆತ್ಮಸ್ವರೂಪ. ಕ್ಷೇತ್ರಜ್ಞದ ಸಮಷ್ಟಿರೂಪ. ಸ್ವಭಾವವು ಅಧ್ಯಾತ್ಮವೆನಿಸುತ್ತದೆ. ಸ್ವಭಾವ ಎಂದರೆ ಪ್ರಕೃತಿ. ಆತ್ಮವಲ್ಲದ್ದು. ಆದರೆ ಆತ್ಮಕ್ಕೆ ಸಂಬಂಧಹೊಂದುವುದು. ಆದುದರಿಂದ ಅದು ಅಧ್ಯಾತ್ಮ. ಭೂತ

ಸೂಕ್ಷ್ಮ, ಅವುಗಳ ವಾಸನೆ ಮುಂತಾದುವು. (ಮುಮುಕ್ಷುಗಳು ಆತ್ಮ ಮತ್ತು ಪ್ರಕೃತಿ ಎರಡನ್ನೂ ಅರಿತುಕೊಳ್ಳಬೇಕು. ಮೊದಲನೆಯದನ್ನು ಹೊಂದುವುದಕ್ಕೋಸ್ಕರ, ಎರಡನೆಯದನ್ನು ತ್ಯಾಗಮಾಡುವುದಕ್ಕೋಸ್ಕರ.) ಭೂತಭಾವ ಎಂದರೆ ಮನುಷ್ಯಾದಿ ಭಾವಗಳನ್ನುಂಟುಮಾಡುವ ಯಾವ ವಿಸರ್ಗವುಂಟೋ ಎಂದರೆ ರೇತೋವಿಸರ್ಜನೆಯುಂಟೋ ಅದೇ ಕರ್ಮ.

**ಪಞ್ಚಮ್ಯಾಮಾಹುತೌ ಆಪಃ ಪುರುಷ ವಚಸೋ ಭವನ್ತಿ** ಎಂದು ಛಾಂದೋಗ್ಯವು (೫-೯-೧) ಹೇಳುವಂತೆ ಸ್ತ್ರೀಸಂಬಂಧದಿಂದ ಉಂಟಾದುದೆಲ್ಲವನ್ನೂ ಅದರ ಅನುಬಂಧಗಳೊಡನೆ ಎಂದರೆ ಕಾರಣ ಮತ್ತು ಫಲಗಳೊಡನೆ ತಿಳಿಯಬೇಕು. ಅದು ಜುಗುಪ್ಸೆಯನ್ನುಂಟುಮಾಡುವುದು, ಭಯಂಕರವಾದುದು ಎಂಬುದಾಗಿಯೂ–ಪರಿಹರಿಸಲ್ಪಡಬೇಕಾದುದು ಎಂಬುದಾಗಿಯೂ ಮುಮುಕ್ಷುವು ತಿಳಿಯಬೇಕು.

**ಅಧಿಭೂತಂ ಕ್ಷರೋ ಭಾವಃ** = ಐಶ್ವರ್ಯಾರ್ಥಿಗಳು ತಿಳಿಯಬೇಕೆಂದು ಹೇಳಿರುವ ಅಧಿಭೂತ ಎಂದರೆ ಕ್ಷರವಾದ ಭಾವ. ಆಕಾಶವೇ ಮುಂತಾದ ಭೂತಗಳಲ್ಲಿರುವ, ಅದರ ಪರಿಣಾಮವಾಗಿ ನಾಶಹೊಂದುವ ಸ್ವಭಾವವುಳ್ಳ, ವಿಲಕ್ಷಣವಾದ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಮತ್ತು ಅವುಗಳ ಆಶ್ರಯ. ಐಶ್ವರ್ಯಕಾಮರು ಪ್ರಾಪ್ಯವಸ್ತುಗಳೆಂದು ಅವುಗಳನ್ನು ಅನು ಸಂಧಾನ ಮಾಡಬೇಕು. ಅಧಿದೈವತ ಎಂಬ ಶಬ್ದದಿಂದ ಹೇಳಲ್ಪಟ್ಟಿರುವವನು ಪುರುಷ. ದೇವತೆಗಳಿಗೂ ಮೇಲೆ ಇರುವವನು ; ಇಂದ್ರ, ಪ್ರಜಾಪತಿ ಮುಂತಾದ ದೇವತೆಗಳಿಗೆಲ್ಲಾ ಮೇಲಿದ್ದು ಅವರ ಭೋಗ್ಯವಸ್ತುಗಳಿಗಿಂತಲೂ ವಿಲಕ್ಷಣವಾದ, ಶಬ್ದಾದಿಗಳನ್ನು ಭೋಗಿಸುವವನು. ಐಶ್ವರ್ಯಾರ್ಥಿಗಳು ಆ ಭೋಕ್ತೃತ್ವಾವಸ್ಥೆಯನ್ನೂ ತಮಗೆ ಪ್ರಾಪ್ಯವೆಂದು ಅನುಸಂಧಾನಮಾಡಬೇಕು. ಅಧಿಯಜ್ಞ ಎಂಬ ಶಬ್ದದಿಂದ ಹೇಳಲ್ಪಟ್ಟಿರುವವನು ನಾನೇ. ಯಜ್ಞಗಳಿಂದ ಆರಾಧಿಸಲ್ಪಡುವವನು ಅಧಿಯಜ್ಞ. ಅವನು ನಾನೇ. ನನಗೆ ದೇಹವಾಗಿರುವ ಇಂದ್ರಾದಿಗಳಲ್ಲಿ ಆತ್ಮರೂಪದಲ್ಲಿದ್ದು ಯಜ್ಞಗಳಿಂದ ನಾನೇ ಆರಾಧಿಸಲ್ಪಡುತ್ತೇನೆ. ಆದುದರಿಂದ ಮಹಾಯಜ್ಞಗಳೇ ಮುಂತಾದ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಅನುಷ್ಠಾನಮಾಡುವಾಗ ಮೂವರು ಅಧಿಕಾರಿಗಳೂ–ಕೇವಲ

ಆತ್ಮಸ್ವರೂಪವನ್ನು ಹೊಂದಲು ಬಯಸುವವರೂ, ಐಶ್ವರ್ಯಕಾಮರೂ ಮತ್ತು ಪರಮಾತ್ಮಪ್ರಾಪ್ತಿಕಾಮರೂ ಆದ ಜ್ಞಾನಿಗಳು ಮೇಲೆ ಹೇಳಿದ ರೀತಿಯಲ್ಲಿ ಅನುಸಂಧಾನಮಾಡಬೇಕು. (ರಾ. ಭಾ.)

ಪರಮಶ್ರೇಷ್ಠವಾದ ಅಕ್ಷರವೇ ಬ್ರಹ್ಮ. ಬ್ರಹ್ಮ ಎಂದರೆ ಪ್ರಕೃತಿ-ವೇದ ಮುಂತಾದುವುಗಳು ಎಂಬ ಬೇರೆ ಅರ್ಥದ ಶಂಕೆಯನ್ನು ನಿವಾರಿಸಲು **ಪರಮಂ** ಎಂಬುದನ್ನು ಅಕ್ಷರಕ್ಕೆ ವಿಶೇಷಣವನ್ನಾಗಿ ಹೇಳಿದೆ. ಅಧ್ಯಾತ್ಮ ಎಂದರೆ ಆತ್ಮವನ್ನು (ಜೀವವನ್ನು ) ಅಧಿಕರಿಸಿರುವ ಎಂದರೆ ಅದಕ್ಕೆ ಉಪಕಾರಿಯಾಗಿರುವ ವಸ್ತು ಎಂದು ಅರ್ಥ. ಅಥವಾ ಆತ್ಮಾಧಿಕಾರವುಳ್ಳ ಗ್ರಂಥವಿಶೇಷದಲ್ಲಿ ಪ್ರತಿಪಾದಿಸಲ್ಪಡುವುದು. ಏಕೆಂದರೆ : ಸ್ವಭಾವ ಎಂದರೆ ಜೀವಕ್ಕೆ ಸಂಬಂಧಪಟ್ಟ ಅಂತಃಕರಣದಿಂದ ಆರಂಭಿಸಿ ದೇಹದವರೆಗಿನ ಪದಾರ್ಥ. (**ಸ್ವಸ್ಯ ಭಾವಃ ಸ್ವಭಾವಃ**) ಸ್ವ ಎಂದರೆ ಜೀವ. ಅದನ್ನು ಅಧಿಕರಿಸಿರುವ ವಸ್ತು ಅಧ್ಯಾತ್ಮ. ಸ್ವಭಾವ ಎಂಬ ಶಬ್ದಕ್ಕೆ ಜೀವ ಎಂದೂ ಅರ್ಥ ಮಾಡಬಹುದು. **ಸ್ವಾಖ್ಯೋ ಭಾವಃ ಸ್ವಭಾವಃ** ಯಾವಾಗಲೂ ಏಕ ಪ್ರಕಾರದಿಂದ ಇರುವುದು. ಅಂತಃಕರಣ ಮುಂತಾದುದು ವಿಕಾರಹೊಂದ ತಕ್ಕದ್ದು, ಅದು ಏಕಪ್ರಕಾರವಾಗಿರುವುದಿಲ್ಲ. ಆದುದರಿಂದ ಭಾವ ಎಂಬ ಶಬ್ದವು ಅದಕ್ಕೆ ಹೊಂದಿಕೆಯಾಗುವುದಿಲ್ಲ. ಸ್ವ ಎಂಬ ಶಬ್ದವನ್ನು ಹೇಳಿರುವುದರಿಂದ ಈಶ್ವರ ಎಂದು ಅರ್ಥವನ್ನು ಇಲ್ಲಿ ತೆಗೆದುಕೊಳ್ಳಬಾರದು. **ಭೂತ-ಭಾವೋದ್ಭವಕರಃ ವಿಸರ್ಗಃ** ಎಂದರೆ ಭೂತ (ಜೀವ)ಗಳನ್ನೂ ಮತ್ತು ಭಾವಗಳನ್ನೂ (ಜಡಪದಾರ್ಥಗಳನ್ನು ) ಉಂಟುಮಾಡುವ ಈಶ್ವರನ ಯಾವ ಕ್ರಿಯೆಯುಂಟೋ ಅದು, **ವಿಶೇಷೇಣ ಸರ್ಜನಂ=ವಿಸರ್ಗಃ** ಈ ವಿಸರ್ಗವೇ ಕರ್ಮ ಎನಿಸುತ್ತದೆ.

**ಅಧಿಭೂತ** ಎಂದರೆ ಸಶರೀರಗಳಾದ ಜೀವಗಳನ್ನು ಅಧಿಕರಿಸಿ ಅದಕ್ಕೆ ಉಪಕಾರಿಯಾಗಿರುವುದು. ಇದು ಕ್ಷರಹೊಂದುವ ಭಾವ. ಎಂದರೆ ವಿನಾಶ ಹೊಂದುವ ಕಾರ್ಯಪದಾರ್ಥ.

**ಪುರುಷ** ಎಂದರೆ ಜೀವ. (**ಪುರಿ ಶಯನಾತ್ ಪುರುಷಃ**) ಸರ್ವ ಜೀವಿಗಳಿಗೂ ಅಭಿಮಾನಿಯಾಗಿರುವವನು. ಅವನು ಸಂಕರ್ಷಣ ಅಥವಾ

ಬ್ರಹ್ಮ. ಅವನು ಎಲ್ಲ ದೇವತೆಗಳನ್ನೂ ಅಧಿಕರಿಸಿ ಅವುಗಳಿಗೆ ಪ್ರತಿಯಾಗಿರುವುದರಿಂದ ಅಥವಾ ದೇವಾಧಿಕಾರದಲ್ಲಿರುವುದರಿಂದ ಅಧಿದೈವತನಾಗಿದ್ದಾನೆ.

**ಅಧಿಯಜ್ಞಃ** ಎಂದರೆ **ಸರ್ವಯಜ್ಞಭೋಕ್ತಾ** ಇತ್ಯಾದಿ ಆಗಿರುವ ಭಗವಂತ. ಅಗ್ನಿ ಮುಂತಾದುವುಗಳು ಯಜ್ಞಭೋಕ್ತೃಗಳಾಗಿದ್ದರೂ ಅವರಿಂದ ಬೇರ್ಪಡಿಸುವುದಕ್ಕೋಸ್ಕರ **ದೇಹೇ** ಎಂಬ ವಿಶೇಷಣವನ್ನು ಹೇಳಿದೆ. ದೇಹದಲ್ಲಿ ಇದ್ದು ಸರ್ವಯಜ್ಞಗಳ ಭೋಕ್ತೃವಾಗಿರುವವನು ಪರಮಾತ್ಮನೇ.
**'ಭೋಕ್ತಾರಂ ಯಜ್ಞತಪಸಾಂ'** (ಮ. ಭಾ.)

ಭಗವಂತನು ಏಳನೆಯ ಪ್ರಶ್ನೆಗೆ ಉತ್ತರಕೊಡುತ್ತಾನೆ :

**ಓಂ ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥೫॥**

"ಕಡೆಯ ಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಾ ಯಾವನು ದೇಹವನ್ನು ಬಿಟ್ಟು ಹೊರಟುಹೋಗುತ್ತಾನೆಯೋ–ಅವನು ನನ್ನ ಭಾವವನ್ನೇ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ."

* * *

**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ।**

ಈ ದೇಹವನ್ನು ಬಿಟ್ಟು ಪ್ರಯಾಣಮಾಡುವ ಕಾಲದಲ್ಲಿ ಜಿತೇಂದ್ರಿಯರಾದವರು ನಿನ್ನನ್ನು ಹೇಗೆ ತಿಳಿಯುತ್ತಾರೆ?–ಎಂಬುದಕ್ಕೆ ಇದು ಶ್ರೀಕೃಷ್ಣನ ಉತ್ತರವಾಗಿದೆ.

ಮರಣಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ಯಾರು ಶರೀರವನ್ನು ಬಿಡುತ್ತಾನೆಯೋ ಅವನು ನನ್ನ ಭಾವವನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ–ಎನ್ನುತ್ತಾನೆ ಶ್ರೀಕೃಷ್ಣ. ಶ್ರೀಕೃಷ್ಣನ ಈ ಮಾತು ದೊಡ್ಡ ವಿಜ್ಞಾನವೂ ಆಗಿದೆ. ತೋರಿಕೆಗೆ ಸುಲಭವಾಗಿದೆ. ಏನೇ ಕರ್ಮಗಳನ್ನು ಹಿಂದೆ ಮಾಡಿದ್ದರೂ ಸಹ ಕಡೆಯಲ್ಲಿ ಶ್ರೀಕೃಷ್ಣನನ್ನು ಸ್ಮರಿಸಿಬಿಟ್ಟರೆ ಮೋಕ್ಷಪ್ರಾಪ್ತಿಯಾಗುವುದೆಂದು ಭಾವಿಸಲು ಸಾಧ್ಯವಿದೆ. ಹೀಗಾಗುವುದೇನೋ ನಿಶ್ಚಯ. ಇದಕ್ಕೆ ಸಾಕ್ಷಿಯಾಗಿ ಪೌರಾಣಿಕಕಥೆಗಳೂ ಇವೆ.

ಆದರೆ ಇದು ಸುಲಭವಾಗಿ ಸಾಧ್ಯವಾಗುವುದಿಲ್ಲ. ಮರಣವೆಂಬುದು

ಹೇಳದೆ ಕೇಳದೇ ಬರುವುದು. ಮರಣಶಯ್ಯೆಯಲ್ಲಿರುವವನೂ ಸಹ ನಾನು ಬದುಕಿಬಿಡುವೆನೆಂಬ ಆಸೆಯಿಂದಿರುವನೇ ಹೊರತು ತನ್ನ ಅವಸಾನ ವಾಗುವುದೆಂದು ಭಾವಿಸುವುದಿಲ್ಲ. ಮರಣವೆಂದರೆ ನಡುಗುತ್ತಾನೆ. ಹೀಗಿರು ವಾಗ ಆ ಸಮಯದಲ್ಲಿ ಸುಲಭವಾಗಿ ನಾರಾಯಣಸ್ಮರಣೆಯು ಹೇಗೆ ತಾನೇ ಬಂದೀತು? ಹಣಕಾಸು, ಪತ್ನೀ-ಪುತ್ರರು ಇವರ ಮೇಲೆಯೇ ಮನಸ್ಸು ಕೇಂದ್ರೀಕೃತವಾಗಿರುತ್ತದೆ. ರೋಗಾದಿಗಳ ಪೀಡೆಯೂ ಇರಬಹುದು. **ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ ಕಣ್ಠಾವರೋಧನವಿಧೌ ಸ್ಮರಣಂ ಕುತಸ್ತೇ** ಎಂದು ಕುಲಶೇಖರಭಗವಾನರು ಹೇಳಿರುವುದನ್ನು ಇಲ್ಲಿ ಸ್ಮರಿಸ ಬಹುದಾಗಿದೆ. ಇದು ಸಾಧಾರಣಮನುಷ್ಯರ ವಿಷಯವಾಯಿತು. ಸರ್ವದಾ ನಾರಾಯಣಸ್ಮರಣೆ ಮಾಡುತ್ತಿರುವವರೂ ಸಹ ಆ ಸಮಯದಲ್ಲಿ ಎಚ್ಚರ ತಪ್ಪುವುದುಂಟು. ಮತ್ತೇನನ್ನೋ ಯೋಚಿಸಿ ಮೋಕ್ಷವನ್ನು ಪಡೆಯಲಾಗದೇ ಜನ್ಮಾಂತರವನ್ನು ಪಡೆದಿರುವ ಅನೇಕನಿದರ್ಶನಗಳು ಪುರಾಣಗಳಲ್ಲಿ ಬರುತ್ತವೆ.

ಅಂತಹ ಕಾಲದಲ್ಲಿ ಶ್ರೀಕೃಷ್ಣಾನುಸ್ಮರಣೆಮಾಡಲು ಯೋಗಿಯಾದವನಿ ಗಲ್ಲದೇ ಮತ್ತಾರಿಗೂ ಸಾಧ್ಯವಿಲ್ಲವೆಂಬುದು ಜ್ಞಾನಿಗಳ ಅಭಿಪ್ರಾಯವೂ ಆಗಿದೆ. ಶ್ರೀಕೃಷ್ಣನು **ಮದ್ಭಾವಂ ಯಾತಿ** ಎಂದು ಹೇಳಿರುವುದನ್ನು ಗಮನಿಸ ಬೇಕು.

ಯೋಗಿಯು ಆತ್ಮಾನಾತ್ಮವಿವೇಕದಿಂದ ಆತ್ಮವನ್ನು ಅನಾತ್ಮನಿಂದ ಪ್ರತ್ಯೇಕಿಸಿ ಧ್ಯಾನಯೋಗದಿಂದ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡಿರುತ್ತಾನೆ. ಸರ್ವದಾ ಬ್ರಹ್ಮಭಾವದಲ್ಲಿಯೇ ಇರುತ್ತಾನೆ. ಮರಣವೆಂದರೆ ಶರೀರವೆಂಬ ಅಂಗಿಯು ಕಳಚಿ ಬೀಳುತ್ತದೆಂಬ ಭಾವನೆಯಲ್ಲಿಯೇ ಯೋಗಿಯು ಯಾವಾಗಲೂ ಇರುತ್ತಾನೆ. ಆಳವಾದ ಬಾವಿಯ ನೀರಿನಲ್ಲಿ ಕೊಡವೊಂದು ಮುಳುಗಿರುತ್ತದೆ. ಆಕಸ್ಮಿಕವಾಗಿ ಕೊಡವು ಅಲ್ಲಿಯೇ ಒಡೆದುಹೋಗಿಬಿಟ್ಟರೆ ಕೊಡದ ನೀರು ಯಾವ ರೀತಿಯಲ್ಲಿ ಪ್ರತ್ಯೇಕವಾಗಿ ಉಳಿಯದೇ ಬಾವಿಯ ನೀರಿನಲ್ಲೇ ಬೆರೆತುಹೋಗುತ್ತದೆಯೋ–ಅದೇ ರೀತಿಯಲ್ಲಿ ಬ್ರಹ್ಮಭಾವದಲ್ಲಿ ರುವ ಯೋಗಿಯು ಶರೀರವೆಂಬ ಕವಚವು ಕಳಚಿಹೋದನಂತರ ಬ್ರಹ್ಮನಲ್ಲೇ ಸೇರಿಬಿಡುತ್ತಾನೆ. ಕೀಟವು ತನ್ನ ಮುಂದಿರುವ ದುಂಬಿಯನ್ನೇ ಸದಾ ಚಿಂತಿಸು

ತ್ತಿದ್ದು ಕಡೆಗೆ ದುಂಬಿಯೇ ಆಗಿಬಿಡುವಂತೆ–ಸರ್ವದಾ ಈಶ್ವರಸ್ಮರಣೆಯಲ್ಲಿಯೇ ಇರುವವನು ಅವಸಾನಾನಂತರದಲ್ಲಿ ಈಶ್ವರಭಾವವನ್ನೇ ಹೊಂದುತ್ತಾನೆ.

ಹೀಗಾಗುವುದರಲ್ಲಿ ಸಂಶಯವೇ ಇಲ್ಲ ಎನ್ನುತ್ತಾನೆ ಶ್ರೀಕೃಷ್ಣ. ಯಾರೂ ಸಹ ಈ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ. ಭಗವಂತನ ಭರವಸೆಯ ಮಾತಿದು. ಈ ಮಾತನ್ನು ದೃಢವಾಗಿ ನಂಬಬೇಕು. ನಂಬಿ ಸಾಧನೆಯನ್ನು ಇಂದಿನಿಂದಲೇ ಪ್ರಾರಂಭಿಸಬೇಕು. ನಾಳೆ ಎಂಬುದು ಹಾಳು. ಮೃತ್ಯುವು ಮುಂದಿನ ಕ್ಷಣದಲ್ಲಿಯೇ ಬಂದುಬಿಡಬಹುದು. ಅದನ್ನು ನೆಚ್ಚುವುದಕ್ಕಾಗುವುದಿಲ್ಲ. ಈ ಕಾರಣದಿಂದ ಪರಮಾತ್ಮಧ್ಯಾನದ ಅಭ್ಯಾಸವನ್ನು ಈ ಕ್ಷಣದಿಂದಲೇ ಮಾಡುವುದು ಶ್ರೇಯಸ್ಕರ.

ಅಂತ್ಯಕಾಲದಲ್ಲಿ ನಾರಾಯಣನ ಸ್ಮರಣೆಯನ್ನು ಮಾಡಿದ್ದರಿಂದ ಜ್ಞಾನೋದಯವಾಯಿತೆಂಬುದಕ್ಕೆ ಭಾಗವತದಲ್ಲಿ ಬರುವ ಅಜಾಮಿಳನ ಕಥೆಯನ್ನು ಉದಾಹರಣೆಗಾಗಿ ಹೇಳುತ್ತಾರೆ. ಈ ಕಥೆಯ ತತ್ತ್ವವನ್ನು ಸೂಕ್ಷ್ಮವಾಗಿ ವಿವೇಚಿಸಬೇಕು.

ಅಜಾಮಿಳನೆಂಬ ಬ್ರಾಹ್ಮಣನು ಮೊದಲು ಸದಾಚಾರಸಂಪನ್ನನಾದ ಭಗವದ್ಭಕ್ತನಾಗಿದ್ದನು. ಅವನು ಕನ್ಯಾಕುಬ್ಜದಲ್ಲಿ ವಾಸವಾಗಿದ್ದನು. ಅವನು ದುರದೃಷ್ಟವಶದಿಂದ ಧರ್ಮಪತ್ನಿಯನ್ನೂ ಮಾತಾ-ಪಿತೃಗಳನ್ನೂ ತ್ಯಾಗಮಾಡಿ ನೀಚಸ್ತ್ರೀಸಂಪರ್ಕಮಾಡಿ ಅವಳ ಜೊತೆಯಲ್ಲೇ ಇದ್ದುಬಿಟ್ಟನು. ಕರ್ಮಗಳೆಲ್ಲವನ್ನೂ ದೂರಮಾಡಿದನು. ಅಭಕ್ಷ್ಯಗಳನ್ನೇ ತಿನ್ನುತ್ತಿದ್ದನು. ಶ್ವಪಚನಾದನು. ಆದರೆ ಪ್ರಾಣೋತ್ಕ್ರಮಣಸಮಯದಲ್ಲಿ ಮಗನಾದ ನಾರಾಯಣನನ್ನು ಕರೆದನು. ವ್ಯಾಜದಿಂದಲಾದರೂ ನಾರಾಯಣಸ್ಮರಣೆಯಾದಂತೆಯೇ ಆಗಿ ಸುಕೃತವಿಶೇಷದಿಂದ ಯಮಭಟರು ಅವನನ್ನು ಬಿಟ್ಟು ಹೋದರು. ವಿಷ್ಣುಭಟರೂ ಸಹ ಕೂಡಲೇ ಅವನನ್ನು ಕೊಂಡೊಯ್ಯಲಿಲ್ಲ. ಅವರ ಪರಸ್ಪರಸಂಭಾಷಣೆಯನ್ನು ಕೇಳಿದ ಅಜಾಮಿಳನಿಗೆ ಜ್ಞಾನೋದಯವಾಯಿತು. ಒಡನೆಯೇ ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ಹರಿದ್ವಾರಕ್ಕೆ ಹೋಗಿ ಅಲ್ಲಿ ಅನೇಕವರ್ಷಗಳವರೆಗೆ ತಪಸ್ಸುಮಾಡಿಕೊಂಡಿದ್ದು ಮುಕ್ತನಾದನು.

ಅಜಾಮಿಳನು ಹಿಂದೆ ಸರಿಯಾದ ಅರ್ಥದಲ್ಲಿಯೇ ನಾರಾಯಣಸ್ಮರಣೆಯನ್ನು ಮಾಡಿದ್ದನು. ಅದರ ಸಂಸ್ಕಾರವು ಅವನಲ್ಲಿ ದೃಢವಾಗಿದ್ದಿತು. ಆದುದರಿಂದ ಅವಸಾನಕಾಲದಲ್ಲಿ ಯಾವುದೋ ವ್ಯಾಜದಿಂದ ಮಾಡಿದ ನಾರಾಯಣನ ಅನುಸ್ಮರಣವು ಅವನನ್ನು ಹಿಂದಿನ ಸಂಸ್ಕಾರಕ್ಕೆ ಕರೆದೊಯ್ದು ಅವನ ಸದ್ಗತಿಗೆ ಕಾರಣವಾಯಿತು. ಆದುದರಿಂದ ಈ ಕಥೆಯು ದೇಹವು ಗಟ್ಟಿಮುಟ್ಟಾಗಿರುವಾಗ ಭಗವಂತನ ಸ್ಮರಣೆಯನ್ನು ಮಾಡುತ್ತಿರುವುದು ಶ್ರೇಯಸ್ಕರ–ಎಂಬ ಅಭಿಪ್ರಾಯಕ್ಕೆ ಪೋಷಕವೇ ಹೊರತು ಜೀವನಪೂರ್ತಿ ದುರಾಚಾರಿಯಾಗಿದ್ದು ಕೊನೆಗಾಲದಲ್ಲಿ ಯಾವುದೋ ಕಾರಣದಿಂದ ನಾರಾಯಣ ಎಂಬ ಹೆಸರನ್ನು ಹೇಳಿದರೂ ಮೋಕ್ಷವು ದೊರೆಯುತ್ತದೆ–ಎಂಬ ಭಾವನೆಗೆ ಪೋಷಕವಲ್ಲ.

ಶ್ರೀರಂಗಮಹಾಗುರುಗಳು ಅಂತ್ಯಕಾಲದಲ್ಲಿ ದೇವತಾಸ್ಮರಣೆಯ ವಿಷಯವಾಗಿ ಒಂದು ಸ್ವಾರಸ್ಯವಾದ ಕಥೆಯನ್ನು ಹೇಳುತ್ತಿದ್ದರು.

ಒಬ್ಬ ವ್ಯಾಪಾರಿಯಿದ್ದನು. ಅವನಿಗೆ ಸುರೇಶ ಎಂಬ ಮಗನಿದ್ದನು. ರಾಮ ಎಂಬ ವಿಧೇಯನಾದ ಸೇವಕನೂ ಇದ್ದನು. ವೃದ್ಧಾಪ್ಯದಲ್ಲಿ ಆ ವ್ಯಾಪಾರಿಯು ಅಂಗಡಿಯನ್ನು ಮಗನಿಗೆ ವಹಿಸಿಕೊಟ್ಟನು. ನಂಬಿಗಸ್ಥನಾದ ರಾಮನೂ ಅಂಗಡಿಯಲ್ಲೇ ಕೆಲಸಮಾಡುತ್ತಿದ್ದನು. ಹೀಗೆಯೇ ಇರುತ್ತಿರಲಾಗಿ ವ್ಯಾಪಾರಿಗೆ ಮರಣಕಾಲವು ಸನ್ನಿಹಿತವಾಯಿತು. ಆ ಸಮಯದಲ್ಲಿ ಅವನಿಗೆ ಕಣ್ಣು ಕಾಣಿಸುತ್ತಿರಲಿಲ್ಲ. ಆದರೆ ಜ್ಞಾನವು ತಪ್ಪಿರಲಿಲ್ಲ. ಅವನನ್ನು ನೋಡಲು ಬೇರೇ ಊರುಗಳಿಂದ ನೆಂಟರಿಷ್ಟರು ಬಂದರು. ಹತ್ತಿರದಲ್ಲೇ ಕುಳಿತಿದ್ದವರು ಒಬ್ಬೊಬ್ಬರ ಹೆಸರನ್ನೂ ಹೇಳಿ ಇಂತಹವರು ಇಂತಹ ಕಡೆಯಿಂದ ಬಂದಿರುವರೆಂಬುದನ್ನು ವಿವರಿಸಿ ಹೇಳುತ್ತಿದ್ದರು. ವ್ಯಾಪಾರಿಯು ಹೂಗುಟ್ಟುತ್ತಿದ್ದನು. ವ್ಯಾಪಾರಿಗೆ ತನ್ನ ಮಗನಾದ ಸುರೇಶನೂ ಸಹ ಸಮೀಪದಲ್ಲೇ ಕುಳಿತಿದ್ದಾನೆಂಬುದು ತಿಳಿದಿತ್ತು. ತನ್ನ ಹಿರಿಯ ದಣಿಯನ್ನು ಕಡೆಗಾಲದಲ್ಲಿ ನೋಡುವ ಸಲುವಾಗಿ ಅಂಗಡಿಯನ್ನು ಮುಚ್ಚಿಕೊಂಡು ವ್ಯಾಪಾರಿಯ ಸಮೀಪಕ್ಕೆ ರಾಮನೂ ಬಂದನು. ಪಕ್ಕದಲ್ಲಿದ್ದವರು ರಾಮನು ಬಂದಿದ್ದಾನೆಂಬ ವಿಷಯವನ್ನೂ ಹೇಳಿದರು. ಒಡನೆಯೇ ವ್ಯಾಪಾರಿಯು ರಾಮನೂ ಬಂದು.... ಎಂದು ಹೇಳುತ್ತಲೇ ಪ್ರಾಣಬಿಟ್ಟನು.

ಈ ಪ್ರಕರಣದಲ್ಲಿ ವ್ಯಾಪಾರಿಯು ರಾಮನ ಹೆಸರನ್ನು ಹೇಳಿದ್ದೇನೋ ನಿಜ. ಆದರೆ ತನ್ನ ಸೇವಕನು ಅಂಗಡಿಯನ್ನು ಮುಚ್ಚಿಕೊಂಡು ಬಂದು ಬಿಟ್ಟನೆಂಬ ಧಾವಂತದಿಂದ 'ರಾಮನೂ ಬಂದುಬಿಟ್ಟನೇ?' ಎಂದು ಹೇಳಲು ಹೊರಟು ವಾಕ್ಯವನ್ನು ಪೂರ್ಣಮಾಡಲಾಗದೇ ಪ್ರಾಣಬಿಟ್ಟನು. ಇದು ಖಂಡಿತವಾಗಿಯೂ ಶ್ರೀರಾಮನ ಸ್ಮರಣೆಯಾಗುವುದಿಲ್ಲ. ಇದರಿಂದ ಅವನಿಗೆ ಸದ್ಗತಿಯು ಖಂಡಿತವಾಗಿಯೂ ಸಿಕ್ಕಿರಲಾರದು. ಕಡೆಗಾಲದಲ್ಲಿ ನಾರಾಯಣ ಸ್ಮರಣೆ ಎಂಬುದಕ್ಕೆ ನಿಜವಾದ ಅರ್ಥವನ್ನು ತಿಳಿಸುತ್ತಾ ಶ್ರೀರಂಗಮಹಾಗುರು ಗಳು ಮೇಲಿನ ದೃಷ್ಟಾಂತವನ್ನು ಹೇಳುತ್ತಿದ್ದರು.

ಸ್ಮೃತಿ ಎಂಬುದಕ್ಕೆ ಪಾತಂಜಲಯೋಗಸೂತ್ರದಲ್ಲಿ ಹೀಗೆ ಹೇಳಿದೆ :

**ಅನುಭೂತವಿಷಯಾ ಸಂಪ್ರಮೋಷಂ ಸ್ಮೃತಿಃ ॥೧-೧೧॥**

ಅನುಭವಿಸಿದ ವಿಷಯವನ್ನು ಮರೆಯದೇ ಇರುವುದು ಸ್ಮೃತಿ. ನಾರಾಯಣನಾಮದ ವಿಷಯವಾಗಿ ಅನುಭವವಿರಬೇಕು. ಅವನ ಜೀವನ ಪೂರ್ತಿಯಾಗಿ ನಾರಾಯಣನನ್ನು ಧ್ಯಾನಿಸಿ-ಧ್ಯಾನಿಸಿ ಅದರಿಂದ ಪ್ರಾಪ್ತವಾದ ಅನುಭವವನ್ನು ಎಂದೆಂದಿಗೂ ಮರೆಯದೇ ಇರುವುದು ಅಥವಾ ಅಂತ್ಯ ಕಾಲದವರೆಗೂ ನಾರಾಯಣನ ಧ್ಯಾನವನ್ನೇ ಮಾಡುತ್ತಿರುವುದು–ನಾರಾ ಯಣಸ್ಮೃತಿ ಅಥವಾ ಸ್ಮರಣೆ. ಹೀಗೆ ಮಾಡುವುದನ್ನು ಬಿಟ್ಟು ಯಾವುದೋ ಕಾರಣದಿಂದ ರಾಮ, ನಾರಾಯಣ–ಎಂದು ಹೇಳಿದ ಮಾತ್ರಕ್ಕೆ ಯಾರೂ ಪರಮಗತಿಯನ್ನು ಹೊಂದುವುದಿಲ್ಲ.)

o o o

ಅವಸಾನಕಾಲದಲ್ಲಿ ನನ್ನನ್ನು ಸ್ಮರಿಸಿದರೆ ನನ್ನ ಭಾವವನ್ನೇ ಹೊಂದು ತ್ತಾನೆ–ಎಂದು ಹೇಳಿದನಂತರ ಅವಸಾನಕಾಲದಲ್ಲಿ ಅವನಿಗೆ ಯಾವ ಭಾವನೆ ಯಿರುತ್ತದೆಯೋ ಅವನು ಅದೇ ಆಗುತ್ತಾನೆ–ಎಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ.

**ಮಾಂ ಏವ ಸ್ಮರನ್**=ಪರಮೇಶ್ವರನೂ ವಿಷ್ಣುವೂ ಆದ ನನ್ನನ್ನೇ ಸ್ಮರಿಸುತ್ತಾ, **ಮದ್ಭಾವಂ** = ನನ್ನ ಭಾವವನ್ನು ಅಂದರೆ ವೈಷ್ಣವತತ್ತ್ವವನ್ನು. (ಶಂ. ಭಾ.)

ಈ ಶ್ಲೋಕದಲ್ಲಿ ಹೇಳಿರುವುದೂ ಕೂಡ ಮೂರು ಬಗೆಯ ಅಧಿಕಾರಿ

ಗಳಿಗೂ ಸಾಧಾರಣವಾದುದು. **ಸಃ ಮದ್ಭಾವಂ ಯಾತಿ** =ಅವನು ನನ್ನ ಯಾವ ಭಾವವುಂಟೋ, ಸ್ವಭಾವವುಂಟೋ ಅದನ್ನು ಹೊಂದುತ್ತಾನೆ. ಆ ಸಮಯದಲ್ಲಿ ನನ್ನನ್ನು ಹೇಗೆ ಅನುಸಂಧಾನಮಾಡುತ್ತಾರೆಯೋ ಅದೇ ಆಕಾರವುಳ್ಳವರಾಗುತ್ತಾರೆ. ಆದಿಭರತ ಮುಂತಾದವರು ಅಂತ್ಯಕಾಲದಲ್ಲಿ ಮೃಗಭಾವವನ್ನು ಸ್ಮರಿಸಿದುದರಿಂದ ಮೃಗಕ್ಕೆ ಸಜಾತೀಯವಾದ ಆಕಾರವನ್ನು ಅವರು ಜನ್ಮಾಂತರದಲ್ಲಿ ತಳೆದಂತೆ. ಪರಮಾತ್ಮನ ಸ್ಮರಣೆಯನ್ನು ಮಾಡುವುದರಿಂದ ಭಗವಂತನ ಆಯಾ ಆಕಾರವಿಶೇಷದ ಸಾಮ್ಯವುಂಟಾಗುತ್ತದೆ. ಸ್ವರೂಪದಲ್ಲಿ ಭೇದವಿದ್ದರೂ ಆಕಾರದಲ್ಲಿ, ಆನಂದದಲ್ಲಿ ಸಾಮ್ಯ. (ರಾ. ಭಾ.)

**ಮದ್ಭಾವಂ = ಮಯಿ ಸತ್ತಾಂ ಯಾತಿ** ನನ್ನಲ್ಲಿ ಸತ್ತೆಯನ್ನು ಹೊಂದುತ್ತಾನೆ. ಎಂದರೆ ದುಃಖರಹಿತವಾದ ನಿರತಿಶಯಾನಂದಾತ್ಮಕವಾದ ಸ್ಥಿತಿಯನ್ನು ಪಡೆಯುತ್ತಾನೆ.

**ಸ್ಮರನ್ ಕಳೇವರಂ ಮುಕ್ತ್ವಾ**=ಇಲ್ಲಿ ಸ್ಮರಣೆ ಮತ್ತು ದೇಹತ್ಯಾಗ ಎರಡೂ ಏಕಕಾಲದಲ್ಲಿ ಆಗಬೇಕಾದುದು. 'ಅಂತ್ಯಕಾಲದಲ್ಲಿ ದುಃಖಾದಿಗಳು ಉಂಟಾಗುವುದರಿಂದ ಮೂರ್ಛೆಯುಂಟಾಗಿ ಭಗವಂತನ ಸ್ಮರಣೆಯುಂಟಾಗುವುದಿಲ್ಲ. ದೇಹತ್ಯಾಗದ ಸಮಯದಲ್ಲಿ ಸ್ಮರಣೆಯ ಸಂಭವವಿಲ್ಲ. ಆದುದರಿಂದ ಸ್ಮರಣೆ ಮತ್ತು ದೇಹತ್ಯಾಗ ಎರಡೂ ಬೇರೆ ಬೇರೆ ಕಾಲಕ್ಕೆ ಸಂಬಂಧಿಸಿದುದು'–ಎಂದು ದುರ್ಮತಿಗಳಿಗೆ ಶಂಕೆಯುಂಟಾಗಬಹುದು. ಸುಮತಿಗಳಿಗೆ ಈ ಶಂಕೆಗೆ ಅವಕಾಶವಿಲ್ಲ. ದೇಹಾಭಿಮಾನವುಳ್ಳ ಅಜ್ಞಾನಿಗೆ ಮಾತ್ರವೇ ಮರಣಕಾಲದಲ್ಲಿ ದುಃಖವುಂಟಾಗುತ್ತದೆ. ಅದೂ ಮರಣಕ್ಷಣಕ್ಕೆ ಮೊದಲೇ ಆಗುತ್ತದೆ. ಜ್ಞಾನಿಯಾದರೋ ದೇಹವನ್ನು ಸದಾ ಹೇಯವಸ್ತುವನ್ನಾಗಿ ತಿಳಿಯುತ್ತಿರುವುದರಿಂದ ಮರಣಸಮಯದಲ್ಲಿ ದುಃಖ ಪಡುವುದಿಲ್ಲ. ಅವನಿಗೆ ಮೋಹವಿರುವುದಿಲ್ಲ.

**ತ್ಯಜನ್ದೇಹಂ ನ ಕಶ್ಚಿತ್ತು ಮೋಹಮಾಪ್ನೋತ್ಯಸಂಶಯಮ್ ।**

(ಮ. ಭಾ.)

**ಓಂ ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯನ್ತೇ ಕಲೇವರಮ್ ।**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥೬॥**

ಅರ್ಜುನ! ಮರಣಕಾಲದಲ್ಲಿ ಯಾವ ಯಾವ ಭಾವವನ್ನು ಚಿಂತಿ

ಸುತ್ತಾ ಶರೀರವನ್ನು ಬಿಡುತ್ತಾನೆಯೋ ಸದಾಕಾಲದಲ್ಲಿಯೂ ಅದೇ ಭಾವವನ್ನೇ ಭಾವಿಸುತ್ತಾ ಆಯಾ ಭಾವವನ್ನೇ ಹೊಂದುತ್ತಾನೆ.

* * *

('ಇಲ್ಲಿ "ಯಂ ಯಂ ವಾಪಿ" ಎಂಬುದಕ್ಕೆ 'ಯಾವ ಯಾವ ದೇವತೆಯನ್ನು ಚಿಂತಿಸುತ್ತಾನೆಯೋ' ಎಂದು ಬೇಕಾದರೂ ಅರ್ಥವನ್ನು ಇಟ್ಟುಕೊಳ್ಳಬಹುದು. ಕೃಷ್ಣನನ್ನು ಚಿಂತಿಸಿದವನು ಶ್ರೀಕೃಷ್ಣನ ಭಾವವನ್ನೇ ಹೊಂದುತ್ತಾನೆ. ಶಂಕರನನ್ನು ಸ್ಮರಿಸಿದವನು ಶಂಕರನ ಭಾವವನ್ನೇ ಪಡೆಯುತ್ತಾನೆ. ಯಾವುದೇ ದೇವತೆಯನ್ನು ಸಾಯುವ ಸಮಯದಲ್ಲಿ ನೆನೆದರೂ ಆ ದೇವತೆಯ ಭಾವವನ್ನೇ ಅವನು ಪಡೆಯುತ್ತಾನೆ. ಆದರೆ ಸಾವಿನ ಸಮಯದಲ್ಲಿ ಎಲ್ಲರಿಗೂ ಶ್ರೀಕೃಷ್ಣನಾಗಲೀ ಬೇರೇ ದೇವತೆಯಾಗಲೀ ಸ್ಮರಣೆಗೆ ಬರಬೇಕೆಂಬುದೇನೂ ಇಲ್ಲ. ಹೀಗೆ ಬರಲು ಬಹಳಕಾಲದ ಸಂಸ್ಕಾರವಾಗಬೇಕು. ಬಹಳ ಜನಕ್ಕೆ ಪ್ರಾಣಹೋಗುವ ಸಮಯದಲ್ಲಿ ಪ್ರಜ್ಞೆಯೇ ಇರುವುದಿಲ್ಲ. ಪ್ರಜ್ಞೆಯಿದ್ದರೂ ಸಾವನ್ನು ತಪ್ಪಿಸಿಕೊಳ್ಳಲು ಹೋರಾಟ ನಡೆಯುತ್ತಿರುವುದೇ ಹೊರತು ಸಾವನ್ನು ಧೈರ್ಯವಾಗಿ ಎದುರಿಸುವ ಸಿದ್ಧತೆಯಿರುವುದಿಲ್ಲ. ಒಂದುವೇಳೆ ಸಾಯುವ ಕಾಲದಲ್ಲಿ ಪ್ರಜ್ಞೆಯಿರುವುದಾದರೂ ಸಾಂಸಾರಿಕವ್ಯಾಮೋಹವು ಜೀವಿಗೆ ಕವಿದಿರುತ್ತದೆ. ಹೆಂಡತಿ, ಮಕ್ಕಳು, ಹಣ ಇತ್ಯಾದಿಗಳನ್ನೇ ಜೀವವು ಚಿಂತಿಸುತ್ತಿರುತ್ತದೆ. ಏಕೆಂದರೆ ಅವನಲ್ಲಿ ಸಂಸಾರದ ಸಂಸ್ಕಾರವೇ ಹೆಚ್ಚಾಗಿರುತ್ತದೆ. ಹಾಗೆ ಮರಣಸಮಯದಲ್ಲಿ ಸಂಸಾರದ ವಿಷಯವಾಗಿ ಚಿಂತಿಸುವ ಜೀವನು ಪುನಃ ಸಂಸಾರಿಯಾಗಿಯೇ ಹುಟ್ಟುತ್ತಾನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಒಬ್ಬನಿಗೆ ಮನೆಕಟ್ಟಿಸಬೇಕೆಂಬ ಆಸೆಯಿರುತ್ತದೆ. ಅವನು ಸಾಯುವ ಕಾಲದಲ್ಲಿ ಅದನ್ನೇ ಸ್ಮರಿಸುತ್ತಿರುತ್ತಾನೆ. ಮುಂದಿನ ಜನ್ಮದಲ್ಲಿ ಮನೆಕಟ್ಟಿಸುವ ಪ್ರಯತ್ನವನ್ನೇ ಮುಂದುವರಿಸುತ್ತಾನೆ. ಪಾಪಕರ್ಮಿಯಾಗಿದ್ದರೆ ತಿರ್ಯಗ್ಯೋನಿಗಳಲ್ಲಾದರೂ ಹುಟ್ಟಿ ಸ್ವಂತ ಗೂಡುಮಾಡಿಕೊಂಡು ಹಿಂದಿನ ಜನ್ಮದ ಚಪಲವನ್ನು ತೀರಿಸಿಕೊಳ್ಳುತ್ತಾನೆ. ನಮ್ಮಲ್ಲಿ ನಾಯಿ-ಕುದುರೆಗಳನ್ನು ಪ್ರೀತಿಸುವವರೂ ಅನೇಕರಿದ್ದಾರೆ. ಸಾಯುವ ಸಮಯದಲ್ಲೂ ಅವರು ತಮ್ಮ ಮುದ್ದುನಾಯಿಗಾಗಿ ಹಾತೊರೆಯುತ್ತಾರೆ. ಇಂತಹವರಿಗೆ ನಾಯಿಯ ಜನ್ಮವು ತಪ್ಪಿದ್ದಲ್ಲ.

ಋಷಭನ ಮಗ ಆದಿಭರತನೆಂಬ ಒಬ್ಬ ರಾಜನಿದ್ದನು. ಅವನು ಅನೇಕವರ್ಷಗಳವರೆಗೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದು ಅನಂತರದಲ್ಲಿ ಸುಮತಿ, ಸುದರ್ಶನ, ರಾಷ್ಟ್ರಭುಜ, ಧೂಮ್ರಕೇತು, ಆದರ್ಶ–ಎಂಬ ಐವರು ಮಕ್ಕಳಿಗೆ ತನ್ನ ರಾಜ್ಯವನ್ನು ಹಂಚಿಕೊಟ್ಟು ಕಾಡಿಗೆ ತಪಸ್ಸುಮಾಡಲು ಹೊರಟುಹೋದನು. ಒಂದು ದಿನ ಆದಿಭರತನು ಸ್ನಾನಕ್ಕಾಗಿ ನದಿಗೆ ಹೋಗಿದ್ದನು. ಅವನ ಸಮೀಪದಲ್ಲಿಯೇ ಗರ್ಭಧರಿಸಿದ್ದ ಒಂದು ಹುಲ್ಲೆಯು ನೀರುಕುಡಿಯುತ್ತಿದ್ದಿತು. ಅದೇ ಸಮಯಕ್ಕೆ ಸರಿಯಾಗಿ ಮೇಘಾಚ್ಛಾದಿತವಾಗಿದ್ದ ಆಕಾಶದಿಂದ ಸಿಡಿಲೊಂದು ಬಡಿಯಿತು. ಒಡನೆಯೇ ಹುಲ್ಲೆಗೆ ಗರ್ಭಪಾತವಾಗಿ ಅದು ಸತ್ತುಹೋಯಿತು. ಮರಿಯು ಮಾತ್ರ ಸಜೀವವಾಗಿತ್ತು. ಭರತನು ಆ ಮರಿಯನ್ನು ಕರುಣೆಯಿಂದ ತನ್ನ ಆಶ್ರಮಕ್ಕೆ ತಂದು ಸಾಕಲು ಉಪಕ್ರಮಿಸಿದನು. ರಾಜ್ಯ-ಕೋಶಗಳನ್ನೂ, ಮಕ್ಕಳನ್ನೂ ತೊರೆದು ಕಾಡಿಗೆ ಬಂದವನಿಗೆ ಹರಿಣದ ಮೇಲಿನ ಮಮತೆಯು ಅಧಿಕವಾಗುತ್ತಾ ಬಂದು ಅವನು ಮರಣಕಾಲದಲ್ಲಿಯೂ ಹುಲ್ಲೆಯ ಮರಿ ಯನ್ನೇ ಸ್ಮರಿಸುತ್ತಾ ಪ್ರಾಣತೊರೆದನು. ಇದರಿಂದಾಗಿ ಅವನಿಗೆ ಹುಲ್ಲೆಯ ಜನ್ಮವೇ ಪ್ರಾಪ್ತವಾಯಿತು. ಪ್ರಾಣಿಗಳನ್ನು ಪ್ರೀತಿಸಬಾರದೆಂಬ ಅಭಿಪ್ರಾಯ ವಲ್ಲ. ಪ್ರಾಣಿಯ ಚಿತ್ರವೇ ಅಂತಃಕರಣದಲ್ಲಿ ನೆಲೆಸುವಂತಾಗಬಾರದು.

ನಮ್ಮ ಛಾಯಾಚಿತ್ರವನ್ನು ತೆಗೆಯುವ ಸಮಯದಲ್ಲಿ ನಾವು ಬಹು ಎಚ್ಚರಿಕೆಯಿಂದಿರಬೇಕು. ಛಾಯಾಗ್ರಾಹಕನು `Steady' (ಸ್ಥಿರವಾಗಿ ನಿಲ್ಲು) ಎನ್ನುತ್ತಾನೆ. ನಾವು ಎವೆಯಿಕ್ಕದೇ ನಿಂತು ಛಾಯಾಗ್ರಹಣದ ಯಂತ್ರದ ಕಡೆಗೇ ನೋಡುತ್ತಿರಬೇಕು. ಹಾಗೆ ಮಾಡದಿದ್ದರೆ ನಮ್ಮ ವ್ಯಕ್ತಿ ಚಿತ್ರವು ಕೆಟ್ಟುಹೋಗುತ್ತದೆ. ಮರಣಸಮಯವು ಮುಂದಿನ ಜನ್ಮದ ಛಾಯಾಚಿತ್ರವನ್ನು ಸಿದ್ಧಪಡಿಸುವ ಮಹಾಯಂತ್ರ. ಆ ಸಮಯದಲ್ಲಿ ನಮ್ಮ ಅಂತಃಕರಣದಲ್ಲಿ ಯಾವ ಚಿತ್ರವಿರುವುದೋ ಅದೇ ಚಿತ್ರವೇ ನಾವಾಗು ತ್ತೇವೆ. ಆ ಅಂತಃಕರಣದ ಚಿತ್ರವನ್ನೇ ನಾವು ದಿಟ್ಟಿಸಿ ನೋಡುತ್ತಿರಬೇಕು. ಮನಸ್ಸಿನ ಸ್ಖಾಲಿತ್ಯವುಂಟಾದರೆ ಮುಂದಿನ ಜನ್ಮದ ಚಿತ್ರವೂ ಅಸ್ತವ್ಯಸ್ತ ವಾಗುತ್ತದೆ. ಸ್ಥಿರತೆಯಿಂದಿದ್ದು ಶ್ರೀಕೃಷ್ಣನನ್ನೇ ಅಂತಃಕರಣದಲ್ಲಿ ನೋಡು ತ್ತಿದ್ದರೆ ಜೀವಿಯು ಶ್ರೀಕೃಷ್ಣನ ಭಾವವನ್ನೇ ಪಡೆಯುತ್ತಾನೆಂಬುದರಲ್ಲಿ ಸಂಶ

ಯವೇ ಇಲ್ಲ. ಯಾವ ದೇವತೆಯ ಆಕೃತಿಯನ್ನು ನೋಡುತ್ತಿದ್ದನೋ ಅದೇ ದೇವತೆಯ ಭಾವವನ್ನೇ ಹೊಂದುತ್ತಾನೆ. ಇದೇ ವಿಧಾನದಲ್ಲಿಯೇ ನಾಯಿಯ ಚಿತ್ರವು ಅಂತಃಕರಣದಲ್ಲಿದ್ದರೆ ನಾಯಿಯಾಗಿಯೇ ಹುಟ್ಟುತ್ತಾನೆ. ಕೋತಿಯ ಚಿತ್ರವಿದ್ದರೆ ಕೋತಿಯಾಗಿಯೇ ಹುಟ್ಟುತ್ತಾನೆ. ಈ ಕಾರಣದಿಂದಾಗಿ ಅಂತಃಕರಣದಲ್ಲಿ ಶ್ರೀಕೃಷ್ಣಮೂರ್ತಿಯನ್ನು ನೆನೆಯಲು ಸರ್ವದಾ ಪ್ರಯತ್ನಮಾಡಬೇಕು. ಮೊದಲಿನಿಂದಲೂ ಪ್ರಯತ್ನಮಾಡಬೇಕು. ಕೇವಲ ಒಂದೆರಡು ದಿವಸಗಳ ಅಭ್ಯಾಸದಿಂದ ಇದು ಬರತಕ್ಕುದಲ್ಲ. ಮರಣವು ಹೇಳದೇ ಬರತಕ್ಕದ್ದೆಂಬುದನ್ನು ದೃಢವಾಗಿ ನಿಶ್ಚಯಿಸಿಕೊಂಡು ಈ ಸಾಧನೆಯನ್ನು ಮಾಡಬೇಕು. ಮರಣಕ್ಕೆ ಹೆದರಬಾರದು. ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವಂತೆ ಮರಣವೆಂಬುದು 'ಅಂಗಿಯನ್ನು ಕಳಚಿಹಾಕುವಂತೆ' ಎಂಬುದನ್ನು ಮನಗಾಣಬೇಕು. ಒಳ್ಳೆಯ ಅಂಗಿಯನ್ನು ಪಡೆದುಕೊಳ್ಳುವ ಸಾಧನೆಯನ್ನು ಮಾಡಬೇಕು. ಎಲ್ಲವನ್ನೂ ಕೃಷ್ಣಮಯವನ್ನಾಗಿಯೇ ಕಾಣಬೇಕು. ಶ್ರೀಕೃಷ್ಣನು ಹಿಂದಿನ ಶ್ಲೋಕದಲ್ಲಿ ತನ್ನನ್ನು ಸೇರುವ ಮಾರ್ಗವು ಬಹುಸುಲಭಮಾರ್ಗ ಎಂಬಂತೆ ಹೇಳಿದ್ದರೂ ಸಹ ಅಂತ್ಯಕಾಲದಲ್ಲಿ ಅವನನ್ನು ಸ್ಮರಿಸುವ ಸಾಧ್ಯತೆಯು ಜ್ಞಾನಿಯಾದವನಿಗೆ ಮಾತ್ರವೇ ಇರುತ್ತದೆ. ಎಲ್ಲ ಕರ್ಮಗಳೂ ಈಶ್ವರಪ್ರೀತ್ಯರ್ಥವಾಗಿ ಎಂದು ಕರ್ಮಮಾಡುವ ಕರ್ಮಯೋಗಿಗೆ ಮಾತ್ರವೇ ಇರುತ್ತದೆ–ಎಂಬುದನ್ನು ನಾವು ಮರೆಯಬಾರದು.)

o o o

ಈ ಜನ್ಮದಲ್ಲಿ ಮಾಡಿದ ಸಂಸ್ಕಾರಗಳು ಮುಂದೆ ಯಾವ ಜನ್ಮವನ್ನು ಹೊಂದಬೇಕು ಎನ್ನುವುದಕ್ಕೆ ನಿಯಾಮಕವಾಗುತ್ತವೆ. ಅವುಗಳಲ್ಲಿ ಕೊನೆಗಾಲದ ಸಂಸ್ಕಾರವು ಅತ್ಯಂತಪ್ರಭಾವಪೂರ್ಣವಾದುದು.

**ಯಂ ಯಂ ವಾಪಿ ಭಾವಂ ಸ್ಮರನ್** = ಯಾವ ಯಾವ ದೇವತಾ ವಿಶೇಷವನ್ನು ಚಿಂತಿಸುತ್ತಾ, **ತದ್ಭಾವಭಾವಿತಃ** = ಉಪಾಸ್ಯದೇವತಾವಿಷಯ ಯುಕ್ತವಾದ ಭಾವವು ತದ್ಭಾವ. ಮತ್ತೆ ಮತ್ತೆ ಚಿಂತನೆಮಾಡುವುದರ ಮೂಲಕ ಯಾವನು ಯಾವುದನ್ನು ಅಭ್ಯಾಸಮಾಡಿಕೊಂಡಿದ್ದಾನೆಯೋ ಅವನು **ತದ್ಭಾವಭಾವಿತ**–ಎನಿಸುತ್ತಾನೆ. (ಶಂ. ಭಾ.)

ಸ್ಮರಣೆಮಾಡುವವನಿಗೆ ತಾನು ಯಾವುದನ್ನು ಸ್ಮರಿಸುತ್ತಾನೆಯೋ

ಅದಕ್ಕೆ ಸಜಾತೀಯವಾದ ಆಕಾರವನ್ನು ಉಂಟುಮಾಡುವುದು ಕೊನೆಯ ಅರಿವಿನ ಸ್ವಭಾವ ಎಂಬುದನ್ನು ಇಲ್ಲಿ ಭಗವಂತನು ಸ್ಪಷ್ಟಪಡಿಸುತ್ತಾನೆ. ಕೊನೆಗಾಲದಲ್ಲಿ ಯಾವ ಯಾವ ಭಾವವನ್ನು ಸ್ಮರಿಸುತ್ತಾ ದೇಹವನ್ನು ಬಿಡುತ್ತಾನೆಯೋ-ಆಯಾ ಭಾವವನ್ನೇ ಮರಣಾನಂತರದಲ್ಲಿ ಹೊಂದುತ್ತಾನೆ. ಆದರೆ ಆ ಕೊನೆಯ ಪ್ರತ್ಯಯವು (ಸ್ಮೃತಿಯು) ಹಿಂದೆ ಯಾವುದನ್ನು ಭಾವಿಸಿಕೊಂಡಿದ್ದನೋ ಆ ವಿಷಯಕ್ಕೆ ಸಂಬಂಧಿಸಿಯೇ ಇರುತ್ತದೆ. **ಅನ್ತಿಮ ಪ್ರತ್ಯಯಶ್ಚ ಪೂರ್ವಭಾವಿತವಿಷಯ ಏವ ಜಾಯತೇ** (ರಾ. ಭಾ.)

ಇಲ್ಲಿ ಭಾವ ಎಂಬ ಶಬ್ದಕ್ಕೆ ಸ್ವಭಾವ ಎಂದು ಅರ್ಥ. ಪದಾರ್ಥ ಎಂದು ಅರ್ಥಮಾಡಬಾರದು. **ತದ್ಭಾವಭಾವಿತಃ** = ಆ ಭಾವನೆಯಿಂದ ಭಾವಿತನಾಗಿ.

–ವೇದಾಂತದೇಶಿಕರು

**ತದ್ಭಾವಭಾವಿತಃ**–ಇಲ್ಲಿ ಭಾವಿತತ್ವ ಎಂದರೆ ಅತಿಯಾಗಿ ವಾಸಿತವಾಗಿರುವಿಕೆ, ಸಂಸ್ಕೃತವಾಗಿರುವಿಕೆ. **ಭಾವನಾತ್ವತಿವಾಸನಾ**

**ಸದಾ ತದ್ಭಾವಭಾವಿತಃ** –ಎಂಬಲ್ಲಿ ಭಗವಂತನು ಅಂತ್ಯಕಾಲದ ಸ್ಮರಣೆಗೆ ಉಪಾಯವನ್ನು ಹೇಳಿದ್ದಾನೆ.

**ಭಾವಃ** ಎಂದರೆ ಅಂತರ್ಗತವಾದ ಮನಸ್ಸು. **ಭಾವೋಽನ್ತರ್ಗತಂ ಮನಃ.** ಅಂತ್ಯಕಾಲಸ್ಮರಣೆಯೇ ಭಗವಂತನ ಪ್ರಾಪ್ತಿಗೆ ಸಾಧನ. ಆದರೆ ಆ ಅಂತ್ಯಕಾಲಸ್ಮರಣೆಯು ಅಕಸ್ಮಾತ್ತಾಗಿ ಉಂಟಾಗುವುದಿಲ್ಲ. ಆದುದರಿಂದ ಅದಕ್ಕೆ ಉಪಾಯವಾಗಿ ಸದಾ ತದ್ಭಾವಭಾವಿತನಾಗಿರಬೇಕು.

–ಜಯತೀರ್ಥರು

ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಇದನ್ನೇ ಹೇಳಿದ್ದಾನೆ :

**ಓಂ ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಮ್ ॥೭॥**

ಆದುದರಿಂದ ಸರ್ವಕಾಲದಲ್ಲಿಯೂ ನನ್ನನ್ನು ಸ್ಮರಿಸುತ್ತಿರು. ಯುದ್ಧವನ್ನೂ ಮಾಡು. ನನ್ನಲ್ಲಿಯೇ ಅರ್ಪಿಸಿದ ಮನಸ್ಸು-ಬುದ್ಧಿಗಳುಳ್ಳವನಾಗಿ ಸಂಶಯಲೇಶವೂ ಇಲ್ಲದೇ ನನ್ನನ್ನೇ ಸೇರುವೆ.

* * *

(ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸುವವನು ನನ್ನ ಭಾವವನ್ನೇ

ಹೊಂದುತ್ತಾನೆ. ಬೇರೆಯದನ್ನು ಸ್ಮರಿಸುವವನು ಬೇರೆಯದನ್ನು ಹೊಂದುತ್ತಾನೆ. ನನ್ನನ್ನು ಸ್ಮರಿಸಿ ನನ್ನ ಭಾವವನ್ನು ಪಡೆದುಕೊಳ್ಳುವುದು ಪರಮ ಶ್ರೇಷ್ಠವಾದುದು. ಆದುದರಿಂದ ಸರ್ವಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಿರು. ಅರ್ಥಾತ್ ಯಾವಾಗಲೂ ನನ್ನನ್ನೇ ಸ್ಮರಿಸುವುದನ್ನು ಅಭ್ಯಾಸಮಾಡಿದರೆ ಅಂತ್ಯಕಾಲದಲ್ಲಿ ನನ್ನ ಸ್ಮರಣೆಯು ಸಾಧ್ಯವಾಗುವುದು ಎಂಬ ಅಭಿಪ್ರಾಯ. ಯುದ್ಧವನ್ನು ಮಾಡು ಎನ್ನುತ್ತಾನೆ. ನನ್ನನ್ನು ಸ್ಮರಿಸುತ್ತಿದ್ದರೂ ಕರ್ತವ್ಯಭ್ರಷ್ಟನಾಗಕೂಡದು. ಯುದ್ಧರೂಪವಾದ ನಿನ್ನ ವರ್ಣಾಶ್ರಮೋಕ್ತಕರ್ತವ್ಯವನ್ನು ನೀನು ಮಾಡುತ್ತಿರಲೇಬೇಕು. ಎಲ್ಲ ಕರ್ಮಗಳನ್ನೂ ಹರಿಸ್ಮರಣೆಯೊಡನೆ ಮಾಡಬೇಕು. ಹರಿಪ್ರೀತಿಗಾಗಿ ಮಾಡಬೇಕು. ಪರಮಾತ್ಮನ ಸ್ಮರಣೆಯನ್ನು ಮಾಡುತ್ತಿದ್ದು ಮೃತನಾಗಿಬಿಟ್ಟರೆ ಪರಮಾತ್ಮನನ್ನೇ ಸೇರುತ್ತಾನೆ. ಈ ಕಾರಣದಿಂದಲೇ ಯುದ್ಧಸಮಯದಲ್ಲಿ 'ಹರ ಹರ ಮಹಾದೇವ' ಎಂಬ ಘೋಷಣೆಯೊಡನೆ ಸೈನಿಕರು ಮುನ್ನುಗ್ಗುತ್ತಿದ್ದರು. ಈ ನಾಗರಿಕತೆಯ ಹಿನ್ನೆಲೆಯು 'ಮಾಮನುಸ್ಮರ ಯುಧ್ಯ ಚ' ಆಗಿರುತ್ತದೆ.

ತುಕಾರಾಮರು ಹೀಗೆ ಹೇಳಿದ್ದಾರೆ : 'ಹಗಲಿರುಳೂ ನಮಗೆ ಯುದ್ಧ ಪ್ರಸಂಗ. ಮನದೊಡನೆ ಅಂತರ್ಬಾಹ್ಯಜನರಂಗ.' ಈಶ್ವರಸ್ಮರಣೆಯಿಂದ ಒಳ್ಳೆಯ ಕ್ರಿಯೆಯು ಸಹಜವಾಗಿ ನಡೆಯುವುದೆಂಬುದು ನಿಜ. ಆದರೆ ಹೋರಾಡುತ್ತಿರಬೇಕೆಂದು ಭಗವಂತನ ಆಜ್ಞೆ. ಹೊರಗಿನಿಂದ ಸತತವಾಗಿ ಸ್ವಧರ್ಮಾಚರಣೆ. ಒಳಗಿನಿಂದ ಚಿತ್ತಶುದ್ಧಿಯ ಹರಿಸ್ಮರಣಕ್ರಿಯೆ. ಹೀಗೆ ಅಂತರ್ಬಾಹ್ಯಕರ್ಮಗಳ ಪ್ರವಾಹವು ಹರಿಯುತ್ತಿದ್ದಾಗ ಮರಣವೂ ಆನಂದಮಯವಾಗುತ್ತದೆ. ಗೀತೆಯ ಸಂದೇಶವನ್ನು ಚುಟುಕಾಗಿ ಹೇಳಿ ಎಂದು ಮಹಾತ್ಮಾಜೀಯವರನ್ನು ಕೇಳಿದಾಗ ಅವರು ಕೆಲಕ್ಷಣ ಧ್ಯಾನಿಸಿ–**'ಕಹೋ ರಾಮ್ ಕರೋ ಕಾಮ್'**–ಎಂದರು. ಬಾಯಲ್ಲಿ ಸತತನಾಮಸ್ಮರಣೆ ; ಕೈಯಲ್ಲಿ ಕೆಲಸ.

ಈ ಶ್ಲೋಕದ ಉತ್ತರಾರ್ಧದಲ್ಲಿ ಶ್ರೀಕೃಷ್ಣನು ನನ್ನಲ್ಲಿಯೇ ಅರ್ಪಿತವಾದ ಮನೋಬುದ್ಧಿಯುಳ್ಳವನಾಗಿ ನನ್ನನ್ನೇ ನಿಸ್ಸಂಶಯವಾಗಿ ಸೇರುವೆ–ಎಂದಿದ್ದಾನೆ. ಅವನಲ್ಲಿ ಅರ್ಪಿಸುವುದೆಂದರೆ : ಮನಸ್ಸನ್ನು–ಬುದ್ಧಿಯಲ್ಲೂ,

ಬುದ್ಧಿಯನ್ನು–ಆತ್ಮನಲ್ಲಿಯೂ ಲೀನಗೊಳಿಸುವುದು. ಹೀಗೆ ಲೀನಗೊಳಿಸುವುದೇ ಅವನನ್ನು ಸೇರುವಿಕೆಯು. ಅಗ್ನಿಕುಂಡದಲ್ಲಿ ಬಿದ್ದ ಇದ್ದಲಿನಂತೆ ಆತ್ಮಜ್ಯೋತಿಯಲ್ಲಿ ಬುದ್ಧಿಯನ್ನು ಲೀನಗೊಳಿಸಿದವನು ಅವನನ್ನೇ ಸೇರಿಕೊಂಡುಬಿಡುತ್ತಾನೆ. ಅವನ ಭಾವವನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲವೆಂದು ಭಗವಂತನು ಪ್ರತಿಜ್ಞೆಮಾಡಿ ಹೇಳುತ್ತಾನೆ. ಬುದ್ಧಿಯೆಂಬುದೊಂದು ಸ್ಫಟಿಕಶಿಲೆ. ಭಗವಂತನ ಮುಂದಿಟ್ಟರೆ ಭಗವಂತನನ್ನೇ ಪ್ರತಿಬಿಂಬಿಸುತ್ತದೆ. ಪ್ರಪಂಚದ ಮುಂದಿಟ್ಟರೆ ಪ್ರಪಂಚವನ್ನೇ ಪ್ರತಿಬಿಂಬಿಸುತ್ತದೆ. ಆದುದರಿಂದ ಬುದ್ಧಿಯನ್ನು ಪ್ರಪಂಚಕ್ಕೆ ಅರ್ಪಿಸಹೋಗದೇ ಭಗವಂತನಿಗೇ ಅರ್ಪಿಸಬೇಕು. ಅವನಲ್ಲಿಯೇ ಲೀನಗೊಳಿಸಬೇಕು.)

o o o

**ಮಾಮನುಸ್ಮರ ಯುದ್ಧ್ಯ ಚ** =ನನ್ನನ್ನು ಸ್ಮರಣೆಮಾಡು ಮತ್ತು ಶಾಸ್ತ್ರದ ಆಜ್ಞೆಗೆ ಅನುಗುಣವಾಗಿ ಸ್ವಧರ್ಮರೂಪವಾದ ಯುದ್ಧವನ್ನು ಮಾಡು. **ಮಯಿ ಅರ್ಪಿತಮನೋಬುದ್ಧಿಃ** = ವಾಸುದೇವನಾದ ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ಅರ್ಪಿಸಿದವನಾಗಿ. **ಮಾಮೇವ**=ನನ್ನ ಯಾವ ಸ್ವರೂಪವನ್ನು ನೀನು ಸ್ಮರಿಸುತ್ತಿರುವೆಯೋ ಆ ಸ್ವರೂಪವನ್ನೇ. (ಶಂ. ಭಾ.)

ಕೊನೆಯ ಸ್ಮರಣೆಯು ಹಿಂದೆ ಅಭ್ಯಾಸಮಾಡಿದ್ದ ವಿಷಯದಲ್ಲಿಯೇ ಉಂಟಾಗುತ್ತದೆ. ಆದುದರಿಂದ ಪ್ರಾಣಪ್ರಯಾಣದವರೆಗೂ ಪ್ರತಿದಿನವೂ ನನ್ನನ್ನು ಸ್ಮರಿಸುತ್ತಿರು. ಪ್ರತಿದಿನವೂ ನನ್ನ ಸ್ಮರಣೆಯನ್ನುಂಟುಮಾಡುವ ಯುದ್ಧವೇ ಮುಂತಾದ ವರ್ಣಾಶ್ರಮಕರ್ಮಗಳನ್ನೂ, ಶ್ರುತಿ-ಸ್ಮೃತಿಗಳು ಹೇಳುವ ನಿತ್ಯ-ನೈಮಿತ್ತಿಕಕರ್ಮಗಳನ್ನೂ ಮಾಡುತ್ತಿರು. ಈ ಉಪಾಯದಿಂದ ಮನಸ್ಸು-ಬುದ್ಧಿಗಳನ್ನು ನನ್ನಲ್ಲಿಯೇ ಅರ್ಪಿಸಿ ಅಂತ್ಯಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ, ನಿನ್ನ ಅಭಿಲಾಷೆಗೆ ಅನುಗುಣವಾದ ಪ್ರಕಾರದಲ್ಲಿ ನನ್ನನ್ನು ಹೊಂದುವೆ. ಈ ಬಗ್ಗೆ ಸಂಶಯವಿಲ್ಲ. (ರಾ. ಭಾ.)

**ನಾತ್ರ ಸಂಶಯಃ** ಸಂಶಯವಿರುವ ಜಾಗದಲ್ಲಿ ಭಗವಂತನು ದೊರೆಯುವುದಿಲ್ಲ.

**ನಿಸ್ಸಂಶಯೇಷು ಸರ್ವೇಷು ನಿತ್ಯಂ ವಸತಿ ವೈ ಹರಿಃ ।**
**ಸಸಂಶಯಾದ್ಧೇತುಬಲಾನ್ನಾಧ್ಯಾವಸತಿ ಮಾಧವಃ ॥**

–ಮೋಕ್ಷಧರ್ಮ ೩೬-೭೧.

ಏತಮಿತಃ ಪ್ರೇತ್ಯ ಅಭಿಸಂಭವಿತಾಸ್ಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ. ಛಾ.ಉ.೩-೧೪-೪ (ಮ. ಭಾ.)

ಓಂ ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ॥೮॥

ಪಾರ್ಥ! ಅಭ್ಯಾಸಯೋಗದಿಂದ ಕೂಡಿದ ಮತ್ತು ಬೇರೆಯ ಕಡೆಗೆ ಹೋಗದಿರುವ ಚಿತ್ತದಿಂದ ಸರ್ವದಾ (ಅವನನ್ನು) ಚಿಂತನೆಮಾಡುತ್ತಿರುವವನು ಆ ದಿವ್ಯನಾದ ಪರಮಪುರುಷನನ್ನೇ ಸೇರುತ್ತಾನೆ.

* * *

(ಅಭ್ಯಾಸ ಎಂದರೆ ವಿಷಯವನ್ನು ಹೃದ್ಗತಮಾಡಿಕೊಳ್ಳಲು ಪುನರಾವೃತ್ತಿಮಾಡುತ್ತಲೇ ಇರುವುದು. ವೇದಾಭ್ಯಾಸ : ವೇದವನ್ನು ಹೃದ್ಗತಮಾಡಿಕೊಳ್ಳಲು 'ತಿರುವೆ' ಹಾಕುತ್ತಾರೆ. ತಿರುವೆ ಎಂದರೆ ಹೇಳಿದುದನ್ನೇ ಮತ್ತೆ- ಮತ್ತೆ ಹೇಳುತ್ತಿರುವುದು. ಹೀಗೆಯೇ ಹೇಳುತ್ತಿದ್ದರೆ ಅದು ಹೃದ್ಗತವಾಗುತ್ತದೆ. ಬಾಯಿಗೆ ಬರುತ್ತದೆ. ಸಂಗೀತವೂ ಅಷ್ಟೇ. ಪ್ರತಿನಿತ್ಯವೂ ಮಾಡುವ ಪುನರಾವರ್ತನದಿಂದಲೇ ಹೃದ್ಗತವಾಗತಕ್ಕ ವಿದ್ಯೆ. ಇಲ್ಲಿ ಅಭ್ಯಾಸವೆಂದರೆ ಚಿತ್ತವನ್ನು ಸಮರ್ಪಿಸುವುದಕ್ಕೆ ವಿಷಯನಾಗಿರತಕ್ಕ ಪರಮಾತ್ಮನಲ್ಲಿಯೇ ಮನಸ್ಸನ್ನು ನೆಲೆಗೊಳಿಸುವ ಕ್ರಿಯೆಯನ್ನು ಮತ್ತೆ-ಮತ್ತೆ ಆವೃತ್ತಿ ಮಾಡುತ್ತಿರುವುದು. ಎಲ್ಲೆಲ್ಲಿಗೋ ಹೋಗುವ ಮನಸ್ಸನ್ನು ಪುನಃ ಪುನಃ ಹಿಡಿದು ತಂದು ಪರಮಾತ್ಮನಲ್ಲಿ ನೆಲೆಗೊಳಿಸುವುದು. ಹೀಗೆ ಅನುದಿನವೂ ಮಾಡುತ್ತಾ, ಧ್ಯಾನಕ್ಕೆ ಕುಳಿತೊಡನೆಯೇ ಮನಸ್ಸು ನೇರವಾಗಿ ಪರಮಾತ್ಮನಲ್ಲಿಯೇ ನಿಲ್ಲುವಂತೆ ಮಾಡುವುದು. ಇದಕ್ಕೆ ಅಭ್ಯಾಸವೆಂದು ಹೆಸರು. ಈ ಅಭ್ಯಾಸವೆಂಬುದೇ ಯೋಗ. ಏಕೆಂದರೆ : ಇಂತಹ ಅಭ್ಯಾಸದಿಂದ ಮಾತ್ರವೇ ಪರಮಾತ್ಮನೊಡನೆ ಸೇರುವಿಕೆಯುಂಟಾಗುತ್ತದೆ. ಅಭ್ಯಾಸಯೋಗವನ್ನು ಯೋಗದ ಅಭ್ಯಾಸ ಎಂದೂ ಇಟ್ಟುಕೊಳ್ಳಬಹುದು. ಯಮ-ನಿಯಮಾದಿ ಅಷ್ಟಾಂಗಯೋಗದ ಅಭ್ಯಾಸ. ಇಂತಹ ಯೋಗಾಭ್ಯಾಸದಿಂದ ಅಥವಾ ಅಭ್ಯಾಸಯೋಗದಿಂದ ಕೂಡಿದ ಮನಸ್ಸಿನಿಂದ. ಇಷ್ಟು ಹೇಳಿದುದರಿಂದಲೇ ಅನನ್ಯಗಾಮಿತ್ವವು ಈ ಚಿತ್ತಕ್ಕೆ ಸಿದ್ಧವಾಗುತ್ತದೆ. ಆದರೂ ಸಹ ಅಭ್ಯಾಸಯೋಗದ ಪರಮಾರ್ಥವನ್ನು ಸ್ಪಷ್ಟಪಡಿಸಲು ಶ್ರೀಕೃಷ್ಣನು 'ನಾನ್ಯಗಾಮಿನಾ' ಎಂದೂ ಹೇಳಿದ್ದಾನೆ.

ಧ್ಯೇಯವಸ್ತುವನ್ನು ಬಿಟ್ಟು ಬೇರೆಯ ಕಡೆಗೆ ಹರಿದಾಡದೇ ಸ್ತಬ್ಧವಾಗಿರುವುದು. ಏಕೆಂದರೆ : ಅಭ್ಯಾಸದ (ಪುನರಾವರ್ತನೆಯ) ಲಾಭವನ್ನು ಪಡೆದಿರತಕ್ಕದ್ದು ; ಧ್ಯಾನಕ್ಕೆ ಕುಳಿತೊಡನೆಯೇ ಪರಮಾತ್ಮನನ್ನು ನೇರವಾಗಿ ಮುಟ್ಟತಕ್ಕದ್ದು ; ಅಲ್ಲಿಯೇ ನೆಲೆಸತಕ್ಕದ್ದು–ಇಂತಹ ಮನಸ್ಸಿನಿಂದ ಅನು ಚಿಂತನೆಮಾಡಿ ಶ್ರೇಷ್ಠನಾದ ಪರಮಪುರುಷನನ್ನೇ ಹೊಂದುತ್ತಾನೆ. **ಅನು** ಎಂಬ ಉಪಸರ್ಗದಿಂದ ಶಾಸ್ತ್ರ ಮತ್ತು ಗುರುವಿನ ಉಪದೇಶಾನುಗುಣವಾಗಿ ಧ್ಯಾನಮಾಡುತ್ತಾ–ಎಂದು ಅರ್ಥಮಾಡಬಹುದಾಗಿದೆ. ದಿವ್ಯಂ ಪರಮಂ **ಪುರುಷಂ** ಎಂದರೆ ಜ್ಯೋತಿರ್ಮಯನೂ ಪರಂಧಾಮನೂ ಆದ ದಿವ್ಯನಾದ ಪರಮಾತ್ಮನನ್ನು. **'ಅನ್ತಕಾಲೇ ಚ ಮಾಮೇವ ಸ್ಮರನ್'** ಎಂದು ಐದನೆಯ ಶ್ಲೋಕದಲ್ಲಿ ಹೇಳಿದ್ದಾನೆ. ಅಂತ್ಯಕಾಲದಲ್ಲಿ ಅವನ ಸ್ಮರಣೆ ಬರಬೇಕಾದರೆ ಅಭ್ಯಾಸಯೋಗಯುಕ್ತವಾದ ಮನಸ್ಸುಳ್ಳವನಾಗಿರಬೇಕು. ಅಂತಹ ಮನಸ್ಸಿರುವವನು ಅಂತ್ಯಕಾಲದಲ್ಲಿ ಅವನನ್ನೇ ಸ್ಮರಿಸುತ್ತಿದ್ದು ದಿವ್ಯಂ ಪರಮಂ **ಪುರುಷಂ ಯಾತಿ**= ಭವ್ಯನಾದ ಪರಮಪುರುಷನನ್ನು ಹೊಂದುತ್ತಾನೆ. ಅಥವಾ ನನ್ನ ಭಾವವನ್ನೇ ಹೊಂದುತ್ತಾನೆ–ಎಂಬುದು ಶ್ರೀಕೃಷ್ಣನ ಅಭಿಪ್ರಾಯವಾಗಿದೆ.

o o o

**ಪರಮಂ ದಿವ್ಯಂ ಪುರುಷಂ** = ನಿರತಿಶಯನೂ ರವಿಯಲ್ಲಿ (ಸೂರ್ಯ ಮಂಡಲದಲ್ಲಿ ) ಇರುವವನೂ ಆದ ಪರಮಪುರುಷನನ್ನು. (ಶಂ. ಭಾ.)

ಐಶ್ವರ್ಯವನ್ನು ಬಯಸುವವರು ಮಾಡುವ ಭಗವಂತನ ಉಪಾಸನಾ ಪ್ರಕಾರವನ್ನೂ ಮತ್ತು ಉಪಾಸನೆಗೆ ಅನುಗುಣವಾಗಿ ಇರಬೇಕಾದ ಅಂತಿಮ ಸ್ಮೃತಿಯ ಪ್ರಕಾರವನ್ನೂ ಇಲ್ಲಿ ಹೇಳಲಾಗಿದೆ.

ಪ್ರತಿದಿನವೂ ಅಭ್ಯಾಸ ಮತ್ತು ಯೋಗಗಳಿಂದ ಕೂಡಿರುವುದರಿಂದ ಬೇರೆಯ ಕಡೆಗೆ ಹೋಗದೇ ಇರುವ ಮನಸ್ಸಿನಿಂದ ಮುಂದೆ ಹೇಳುವ ರೀತಿಯಲ್ಲಿ ದಿವ್ಯನಾದ ಪರಮಪುರುಷನಾದ ನನ್ನನ್ನು ಚಿಂತಿಸುವವನು ನನ್ನನ್ನೇ ಹೊಂದುತ್ತಾನೆ. ಆದಿಭರತನು ಮೃಗತ್ವವನ್ನು ಹೊಂದಿದಂತೆ ಐಶ್ವರ್ಯ ವಿಶಿಷ್ಟನಾಗಿ ನನಗೆ ಸಮಾನವಾದ ಆಕಾರವುಳ್ಳವನಾಗುತ್ತಾನೆ.

ಅಭ್ಯಾಸ ಎಂದರೆ ನಿತ್ಯ-ನೈಮಿತ್ತಿಕಗಳಿಗೆ ವಿರೋಧವಿಲ್ಲದಂತೆ ಎಲ್ಲ ಕಾಲ

ಗಳಲ್ಲಿಯೂ ಉಪಾಸ್ಯವಸ್ತುವನ್ನೇ ಮನಸ್ಸಿನಿಂದ ಅನುಶೀಲನೆಮಾಡುವುದು. ಯೋಗವೆಂದರೆ ಪ್ರತಿದಿನವೂ ಯೋಗ್ಯಸಮಯದಲ್ಲಿ ಅನುಷ್ಠಾನಮಾಡಬೇಕಾದ ಉಪಾಸನೆ. (ರಾ. ಭಾ.)

ಹಿಂದಿನ ಶ್ಲೋಕದಲ್ಲಿ ಹೇಳಿದ ಸದಾ ತದ್ಭಾವಭಾವಿತನಾಗಿರುವಿಕೆಯನ್ನು ಇಲ್ಲಿ ಭಗವಂತನು ಸ್ಪಷ್ಟಪಡಿಸುತ್ತಾನೆ.

**ಅಭ್ಯಾಸಯೋಗಯುಕ್ತೇನ । ಅಭ್ಯಾಸ ಏವ ಯೋಗಃ**

ಅಭ್ಯಾಸವೇ ಯೋಗ. ಅದರಿಂದ ಕೂಡಿದ ಮನಸ್ಸಿನಿಂದ **ಪುರುಷಂ**= ಶರೀರವೆಂಬ ಪುರದಲ್ಲಿ ಶಯಿಸಿರುವ ಮತ್ತು ಪೂರ್ಣನಾಗಿರುವ ಪರಮಾತ್ಮನನ್ನು 'ಪುರಿ ಶಯಂ ಪೂರ್ಣಂ ಚ ದಿವ್ಯಂ'= ಸೃಷ್ಟಿಯೇ ಮುಂತಾದ ಕ್ರೀಡೆಯಿಂದ ಕೂಡಿರುವವನಾದ. (ಮ. ಭಾ.)

**ಓಂ ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿನ್ತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥೯॥**

ಕವಿಯೂ, ಪುರಾಣನೂ, ಆಳುವವನೂ, ಅಣುವಿಗಿಂತಲೂ ಅಣುವೂ, ಎಲ್ಲದರ ವಿಧಾನವನ್ನೂ ಮಾಡುವವನೂ, ಮನಸ್ಸಿನ ಆಲೋಚನೆಗೆ ಎಟುಕದ ರೂಪವುಳ್ಳವನೂ, ಸೂರ್ಯನಂತೆ ವರ್ಣವುಳ್ಳವನೂ ಮತ್ತು ಕತ್ತಲೆಯಿಂದ ಆಚೆ ಇರುವವನೂ ಆಗಿರುವ ಭಗವಂತನನ್ನು ಯಾವನು ಸದಾಕಾಲದಲ್ಲಿಯೂ ಸ್ಮರಿಸುತ್ತಿರುತ್ತಾನೆಯೋ–ಅವನು ಆ ದಿವ್ಯಪರಮಪುರುಷನನ್ನು ಹೊಂದುತ್ತಾನೆ.

* * *

(ಉಪನಿಷತ್ತುಗಳು ಮತ್ತು ವೇದಗಳಲ್ಲಿ ಬಂದಿರುವ ಮಂತ್ರವೇ ಇಲ್ಲಿ ಸ್ವಲ್ಪ ಶಬ್ದಭೇದದಿಂದ ಹೇಳಲ್ಪಟ್ಟಿದೆ. ಕವಿ ಎಂದರೆ ಬ್ರಹ್ಮ ಅಥವಾ ಪರಬ್ರಹ್ಮ. ಕವಿಶಬ್ದಕ್ಕೆ ವಿದ್ವಾಂಸ, ಬುದ್ಧಿವಂತ, ಪಂಡಿತ, ಶ್ಲೋಕಗಳನ್ನು ರಚಿಸುವವನು, ಶುಕ್ರಾಚಾರ್ಯ–ಮುಂತಾದ ಅನೇಕಾರ್ಥಗಳಿದ್ದರೂ ಪ್ರಕೃತಸಂದರ್ಭದಲ್ಲಿ ಪರಬ್ರಹ್ಮ ಎಂಬ ಅರ್ಥವೇ ಉಚಿತವಾಗಿದೆ.

**ಪುರಾಣಂ** = ಬಹಳ ಹಿಂದಿನವನು. ಇವನಿಗಿಂತಲೂ ಹಿಂದಿನವನು

ಬೇರೊಬ್ಬನಿಲ್ಲ. ಇವನಿಂದಲೇ ಬ್ರಹ್ಮಾಂಡದ ಸೃಷ್ಟಿಯಾಗಿದೆ. ಸೃಷ್ಟಿಕರ್ತನಾದ ಪಿತಾಮಹನಿಗೂ ಪಿತಾಮಹನಿವನು. **ಅನುಶಾಸಿತಾರಂ**= ವಿಶ್ವವನ್ನು ಅನುಶಾಸನಮಾಡತಕ್ಕವನೂ ಇವನೇ. ವಿಶ್ವನಾಟಕಸೂತ್ರಧಾರ. ಬ್ರಹ್ಮಾಂಡ ವನ್ನೇ ಅನುಶಾಸನಮಾಡುವ ಇವನ ಗಾತ್ರವಾದರೂ ಎಷ್ಟಿದ್ದೀತು? ಅಣುವಿಗಿಂತಲೂ ಅಣುವು ಅರ್ಥಾತ್ ಪರಮಾಣುವು. ಊಹೆಗೆ ನಿಲುಕ ದಷ್ಟೂ ಸೂಕ್ಷ್ಮಾತಿಸೂಕ್ಷ್ಮಸ್ವರೂಪನು. **ಸರ್ವಸ್ಯ ಧಾತಾರಂ**=ಸೂಕ್ಷ್ಮಾತಿ ಸೂಕ್ಷ್ಮನಾಗಿದ್ದರೂ ಅಣುವಿಗೂ ಅಣುವಾಗಿದ್ದರೂ ಎಲ್ಲವನ್ನೂ ಧಾರಣೆ ಮಾಡಿರತಕ್ಕವನು ಮತ್ತು ಪೋಷಿಸತಕ್ಕವನು ಇವನೇ ಆಗಿರುತ್ತಾನೆ. **ಅಚಿನ್ತ್ಯರೂಪಂ**= ಇವನ ರೂಪವು ಇಂತಹುದೇ ಎಂದು ನಿರ್ಧರಿಸಿ ಹೇಳಲು ಸಾಧ್ಯವಿಲ್ಲ. ಇವನ ರೂಪು ಚಿಂತನಕ್ಕೆ ಅಥವಾ ಆಲೋಚನೆಗೆ ಸಿಕ್ಕತಕ್ಕುದಲ್ಲ. ಇವನು ಹೀಗೆಯೇ ಇದ್ದಾನೆಂದು ತರ್ಕದಿಂದ ಸಿದ್ಧಮಾಡುವುದಕ್ಕಾಗುವು ದಿಲ್ಲ. ಹಾಗಾದರೆ ಇವನನ್ನು ಚಿಂತಿಸುವುದೆಂತು? ಧ್ಯಾನಿಸುವುದೆಂತು? ಶ್ರೀಕೃಷ್ಣನು ಅರ್ಜುನನಿಗೆ ತನ್ನನ್ನೇ ಸ್ಮರಿಸು ಎಂದಿದ್ದಾನೆ. ಧ್ಯಾನಕಾರ್ಯಕ್ಕೆ ತೊಡಗಿಸುವ ಗುರುಗಳೂ ಸಹ ಧ್ಯಾನಮೂರ್ತಿಯೊಂದನ್ನು ದಯ ಪಾಲಿಸುತ್ತಾರೆ. ಆ ಧ್ಯಾನಮೂರ್ತಿಯ ಮೂಲಕ ಆತ್ಮದರ್ಶನಮಾಡ ಬೇಕಾಗುತ್ತದೆ. ಒಬ್ಬೊಬ್ಬರ ಧ್ಯಾನಮೂರ್ತಿಯೂ ಒಂದೊಂದಾಗಬಹುದು. ಧ್ಯಾನಕ್ಕೆ ಇಂತಹುದೇ ಬೇಕೆಂದು ನಿರ್ಧರಿಸುವ ಸಾಧ್ಯತೆಯಿಲ್ಲ. ಭಗವಂತ ನನ್ನು ನಿರಾಕಾರನಾಗಿಯೂ ಉಪಾಸನೆಮಾಡುವವರಿದ್ದಾರೆ. ಆದುದರಿಂದ ಇವನು ಅಚಿಂತ್ಯರೂಪ. ಚಿಂತಿಸಲಸಾಧ್ಯವಾದ ರೂಪವುಳ್ಳವನು. ಆದಿತ್ಯ ವರ್ಣನು. ಸೂರ್ಯನಂತೆ ಪ್ರಕಾಶವುಳ್ಳವನು ಎಂದರೆ ಸ್ವಯಂಜ್ಯೋತಿ. ಮತ್ತೊಬ್ಬರಿಂದ ಪ್ರಕಾಶವನ್ನು ಅಪೇಕ್ಷಿಸತಕ್ಕವನಲ್ಲ. **ತಮಸಃ ಪರಸ್ತಾತ್**= ಕತ್ತಲೆಯಿಂದ ಅಥವಾ ಅಜ್ಞಾನದಿಂದ ಆಚೆ ಇರತಕ್ಕವನು. ಕತ್ತಲೆಯಲ್ಲಿ ಇರುವವರಿಗೆ ಸೂರ್ಯನು ಕಾಣಿಸದಂತೆ ಅಜ್ಞಾನದಲ್ಲಿರುವವರಿಗೆ ಅವನು ಕಾಣಿಸತಕ್ಕವನಲ್ಲ. ಅಂತಹ ಪರಂಜ್ಯೋತಿಯನ್ನು ಯಾವನು ಅಂತ್ಯಕಾಲ ದಲ್ಲಿ ಚೆನ್ನಾಗಿ ಅನುಸ್ಮರಣೆಮಾಡುತ್ತಾನೆಯೋ ಸ್ಮರಿಸಿಕೊಳ್ಳುತ್ತಾನೆಯೋ ಅವನು **ದಿವ್ಯಂ ಪರಮಂ ಪುರುಷಂ ಯಾತಿ**. ದಿವ್ಯನಾದ ಪರಮ ಪುರುಷನನ್ನೇ ಹೊಂದುತ್ತಾನೆ. ಶ್ವೇತಾಶ್ವತರೋಪನಿಷತ್ತಿನ ಮೂರನೆಯ

ಅಧ್ಯಾಯದ ೮ ಮತ್ತು ೯ನೆಯ ಮಂತ್ರಗಳಲ್ಲಿ ಭಗವದ್ಗೀತೆಯ ಈ ಮಂತ್ರವು ಹೀಗೆ ಬಂದಿರುತ್ತದೆ.

**ವೇದಾಹಮೇತಂ ಪುರುಷಂ ಮಹಾನ್ತ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ ।**
**ತಮೇವಂ ವಿದಿತ್ವಾಽತಿಮೃತ್ಯುಮೇತಿ**
**ನಾನ್ಯಃ ಪನ್ಥಾ ವಿದ್ಯತೇಽಯನಾಯ ॥೮॥**

ಅಜ್ಞಾನವೆಂಬ ಅಂಧಕಾರಕ್ಕಿಂತಲೂ ಆಚೆಗಿರುವ ಪ್ರಕಾಶಸ್ವರೂಪನಾದ ಮಹಾತ್ಮನಾದ ಆ ಪುರುಷನನ್ನು ನಾನು ಅರಿತಿರುತ್ತೇನೆ. ಅವನನ್ನೇ ಅರಿತು ಕೊಂಡ ಮನುಷ್ಯನು ಮೃತ್ಯುವನ್ನು ದಾಟುತ್ತಾನೆ. ಪರಮಪದಪ್ರಾಪ್ತಿಗೆ ಇದಕ್ಕಿಂತಲೂ ಬೇರೆ ದಾರಿಯಿಲ್ಲ.

**ಯಸ್ಮಾತ್ಪರಂ ನಾಪರಮಸ್ತಿಕಿಂಚಿ-**
**ದ್ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಶ್ಚಿತ್ ।**
**ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕ-**
**ಸ್ತೇನೇದಂ ಪೂರ್ಣಂ ಪುರುಷೇಣ ಸರ್ವಮ್ ॥೯॥**

ಯಾವ ಪುರುಷನಿಗಿಂತಲೂ ಅತ್ಯುತ್ಕೃಷ್ಟವಾದ ಬೇರೆ ಯಾವುದೂ ಇಲ್ಲವೋ, ಯಾವನಿಗಿಂತ ಅಣುತರವಾದುದಾಗಲೀ–ಮಹತ್ತರವಾದು ದಾಗಲೀ ಯಾವುದೂ ಇಲ್ಲವೋ, ಯಾವ ಅದ್ವಿತೀಯನಾದ ಪರಮಾತ್ಮನು ದ್ಯುಲೋಕದಲ್ಲಿ ವೃಕ್ಷದಂತೆ ನಿಶ್ಚಲಭಾವದಿಂದ ನೆಲೆಸಿರುವನೋ–ಅವನಿಂದ ಇವೆಲ್ಲವೂ ವ್ಯಾಪ್ತವಾಗಿದೆ.

**ಕವಿಂ** = ಸರ್ವಜ್ಞನು (ಎಲ್ಲ ಕಾಲಗಳನ್ನೂ ಆಕ್ರಮಿಸಿದ ದರ್ಶನವುಳ್ಳ ವನು) **ಸರ್ವಸ್ಯ ದಾತಾರಂ** =ಎಲ್ಲ ಕರ್ಮಫಲಗಳನ್ನೂ ವಿಚಿತ್ರರೂಪವಾಗಿ ಪ್ರಾಣಿಗಳಿಗೆ ವಿಭಾಗಮಾಡಿ ದಯಪಾಲಿಸುವವನು.

**ಕರ್ಮಫಲಜಾತಸ್ಯ ವಿಚಿತ್ರತಯಾ ಪ್ರಾಣಿಭ್ಯಃ ವಿಭಕ್ತಾರಂ ವಿಭಜ್ಯ ದಾತಾರಂ)**

O O O

**ಆದಿತ್ಯವರ್ಣಂ** = ಆದಿತ್ಯನಂತೆ ನಿತ್ಯಚೈತನ್ಯಪ್ರಕಾಶಮಯವಾದ ವರ್ಣವುಳ್ಳವನು. **ತಮಸಃ ಪರಸ್ತಾತ್**=ಅಜ್ಞಾನವೆಂಬ ಕತ್ತಲೆಯಿಂದ ಹೊರಗೆ ಇರುವವನು. (ಶಂ. ಭಾ.)

ಅಣೋಃ ಅಣೀಯಾಂಸಂ =ಜೀವಕ್ಕಿಂತಲೂ ಹೆಚ್ಚು ಸೂಕ್ಷ್ಮವಾಗಿರುವವನು. ಸರ್ವಸ್ಯ ಧಾತಾರಂ=ಎಲ್ಲದರ ಸೃಷ್ಟಿಕರ್ತನು. ಅಚಿನ್ತ್ಯರೂಪಂ= ಉಳಿದ ಎಲ್ಲಕ್ಕಿಂತಲೂ ವಿಜಾತೀಯವಾದ ಸ್ವರೂಪವುಳ್ಳವನು. ಆದಿತ್ಯವರ್ಣಂ ತಮಸಃ ಪರಸ್ತಾತ್=ಅಪ್ರಾಕೃತವಾಗಿ ತನಗೆ ಅಸಾಧಾರಣವಾಗಿರುವ ದಿವ್ಯರೂಪವುಳ್ಳವನೂ ಆದ ಪರಮಾತ್ಮನನ್ನು..... (ರಾ. ಭಾ.)

ಕವಿಂ=ಸರ್ವಜ್ಞನಾದ ಯಃ ಸರ್ವಜ್ಞಃ ಸರ್ವವಿತ್ । ತ್ವಂ ಕವಿಃ ಸರ್ವವೇದಾನಾಂ । ಧಾತಾರಂ = ಧಾರಣ-ಪೋಷಣೆಗಳನ್ನು ಮಾಡುವವನು. ಧಾತಾ ವಿಧಾತಾ ಪರಮೋತ ಸಂದೃಕ್ । ತಮಸಃ ಪರಸ್ತಾತ್। ಅವ್ಯಕ್ತದಿಂದ ಹೊರಗೆ ಇರುವವನು. (ಮ. ಭಾ.)

ಓಂ ಪ್ರಯಾಣಕಾಲೇ ಮನಸಾಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯ-
ಕ್ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥

ಅಂತಹವನು ಪ್ರಯಾಣಕಾಲದಲ್ಲಿ (ಮರಣಕಾಲದಲ್ಲಿ) ಸುಸ್ಥಿರವಾದ ಮನಸ್ಸಿನಿಂದ ಭಕ್ತಿಯಿಂದಲೂ, ಯೋಗಬಲದಿಂದಲೂ ಕೂಡಿದವನಾಗಿ ಹುಬ್ಬುಗಳ ಮಧ್ಯದಲ್ಲಿ ಪ್ರಾಣವನ್ನು ಸ್ಥಿರವಾಗಿ ಇಟ್ಟು ಆ ದಿವ್ಯನಾದ ಪರಮ ಪುರುಷನನ್ನು ಹೊಂದುವನು.

* * *

(ಇಲ್ಲಿ ಶ್ರೀಕೃಷ್ಣನು ಪ್ರಯಾಣಕಾಲ ಎನ್ನುತ್ತಾನೆ. ಪ್ರಯಾಣಕಾಲವೆಂದರೆ ಪ್ರಾಣಗಳು ಈ ದೇಹವನ್ನು ಬಿಟ್ಟು ಹೊರಟುಬಿಡುವ ಕಾಲ ; ಅವಸಾನಕಾಲ. ಆ ಮುಂದಿನ ಯಾತ್ರೆಯಲ್ಲಿ ಹಾದಿಯು ತಪ್ಪದಂತೆ ಎಚ್ಚರಿಕೆವಹಿಸಬೇಕು. ಸರಿಯಾದ ಹಾದಿಯಲ್ಲಿ ಹೋಗದಿದ್ದರೆ ಯಾವುದೋ ಶರೀರಕ್ಕೆ ಹೋಗಿ ಸೇರಿಕೊಳ್ಳಬೇಕಾಗುತ್ತದೆ. ಸರಿಯಾದ ಹಾದಿ ಯಾವುದು?–ಪರಮಾತ್ಮನ ಬಳಿಗೆ ಹೋಗುವುದೇ ಸರಿಯಾದ ದಾರಿ. ಪರಮಾತ್ಮನ ಬಳಿಗೆ ಹೋಗಲು ಸೇತುವೆಯ ರೂಪವಾಗಿರತಕ್ಕುವುಗಳು ಭಕ್ತಿ ಮತ್ತು ಯೋಗಗಳು. ಭಕ್ತಿಯೂ ಕೂಡ ಯೋಗವೇ ಆದರೂ ಯಮ-ನಿಯಮಾದಿ ಅಷ್ಟಾಂಗ

ಯೋಗವನ್ನು ಪ್ರಧಾನವಾಗಿ ಉಳ್ಳ ಯೋಗವನ್ನು ಭಗವಂತನು ಪ್ರತ್ಯೇಕವಾಗಿಯೂ ಹೇಳಿದ್ದಾನೆ. ಭಕ್ತಿಯಲ್ಲೂ ಯೋಗವಿದೆ. ಯೋಗಮಾರ್ಗದಲ್ಲೂ ಭಕ್ತಿಯುಂಟು. ಆದರೆ ಯಾವುದರಲ್ಲಿ ಯಾವುದು ಪ್ರಧಾನವೋ ಅದನ್ನು ಆಧರಿಸಿ ಹೆಸರು ಕೊಡುವ ವಾಡಿಕೆ. **ಪ್ರಾಧಾನ್ಯೇನ ವ್ಯಪದೇಶಾ ಭವನ್ತಿ। ಯೋಗಬಲೇನ ಚೈವ** ಎಂದು ಹೇಳಿರುವುದರಿಂದ ಭಕ್ತಿಯೆಂಬ ಸೇತುವೆಯ ಮೂಲಕವೂ ಅವನನ್ನು ಸೇರಬಹುದು ; ಯೋಗಬಲದ ಮೂಲಕವಾಗಿಯೂ ಅವನನ್ನು ಸೇರಬಹುದು. ಭಕ್ತಿ ಮತ್ತು ಯೋಗಬಲ– ಎರಡೂ ಸೇರಿದರೆ ಅವನನ್ನು ತಲುಪುವುದು ಇನ್ನೂ ಸುಲಭ.

ಭಕ್ತಿ ಎಂದರೇನು? ಭಕ್ತಿ ಎಂಬುದಕ್ಕೆ ಸಂಸ್ಕೃತದಲ್ಲಿ ಅನೇಕಾರ್ಥಗಳಿವೆ. ಸಾಮವೇದದಲ್ಲಿ ಒಂದು ಸಾಮದ 'ಭಾಗ'ವೆಂದು ಇದಕ್ಕೆ ಅರ್ಥ. ಶಬ್ದಶಾಸ್ತ್ರದಲ್ಲಿ ಭಕ್ತಿ ಎಂದರೆ ಒಂದು ಶಬ್ದವನ್ನು ಮತ್ತೊಂದು ಅರ್ಥದಲ್ಲಿ ಬಳಸಿದಾಗ ಆ ಶಬ್ದಕ್ಕೆ ಇಟ್ಟುಕೊಂಡ 'ಗೌಣವೃತ್ತಿ' ಎಂದು ಅರ್ಥ. ಲೋಕದಲ್ಲಿ ಒಬ್ಬನು ತನ್ನ ಗುರು-ಹಿರಿಯರಲ್ಲಿ ಇಟ್ಟುಕೊಂಡಿರುವ ಪ್ರೇಮ. ಭಕ್ತಿ ಎಂಬುದಕ್ಕೆ ಈ ಅರ್ಥವೇ ಹೆಚ್ಚು ರೂಢಿಯಲ್ಲಿದೆ. ಭಕ್ತಿ ಎಂಬ ಪದವು ಭಜ–ಸೇವಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಮತ್ತು ಸೇವೆಮಾಡಲು ಪ್ರೇಮವು ಇರಬೇಕಾದುದು ಅವಶ್ಯವಾಗಿರುವುದರಿಂದ ಭಕ್ತಿ ಎಂಬ ಪದಕ್ಕೆ ಪ್ರೇಮಪೂರ್ವಕವಾದ ಸೇವೆ–ಎಂಬ ಅರ್ಥವು ಸ್ವಭಾವತಃ ಮೂಡುತ್ತದೆ. ಮಾತೃಭಕ್ತಿ, ಪಿತೃಭಕ್ತಿ, ಗುರುಭಕ್ತಿ, ರಾಜಭಕ್ತಿ, ದೈವಭಕ್ತಿ–ಮುಂತಾದ ಶಬ್ದಗಳಲ್ಲೆಲ್ಲಾ ಭಕ್ತಿಯೆಂದರೆ ಪೂಜ್ಯಬುದ್ಧಿಯಿಂದ ಉಂಟಾಗಿರುವ ಪ್ರೇಮ ಎಂದೇ ಅರ್ಥವಾಗುತ್ತದೆ. ಈ ಕಾರಣದಿಂದಲೇ ನಾರದಭಕ್ತಿಸೂತ್ರದಲ್ಲಿ ಭಕ್ತಿಯ ಸ್ವರೂಪಲಕ್ಷಣವನ್ನು ಹೇಳುವಾಗ

**ಸಾ ತ್ವಸ್ಮಿನ್ ಪರಮಪ್ರೇಮರೂಪಾ ॥೨॥**

'ಅದಾದರೋ (ಆ ಭಕ್ತಿಯಾದರೋ) ಪರಮಾತ್ಮನಲ್ಲಿ ಮಿಗಿಲಿಲ್ಲದ ಪರಮಶ್ರೇಷ್ಠವಾದ ಪ್ರೇಮರೂಪವಾಗಿರುತ್ತದೆ' ಎಂದು ಹೇಳಿದ್ದಾರೆ. ಇಂತಹ ಪರಮಪ್ರೇಮಪೂರ್ವಕವಾದ ಅನನ್ಯಭಕ್ತಿಯಿಂದ ಕೂಡಿರತಕ್ಕವನು.

ವಿಭಕ್ತಿ ಎಂದರೆ ವಿಭಜನೆ, ಭಕ್ತಿ ಎಂದರೆ ಸೇರುವಿಕೆ. ಭಗವಂತನನ್ನು

ಸೇರುವಿಕೆಯೇ ಭಕ್ತಿ. ಯೋಗಿಯೂ ಕೂಡ ಭಕ್ತನಾಗಲೇಬೇಕು, ಎಂದು ಶ್ರೀರಂಗಮಹಾಗುರುಗಳು ಹೇಳುತ್ತಿದ್ದರು.

ಯೋಗಬಲದಿಂದ ಕೂಡಿರತಕ್ಕವನು–ಎಂದರೆ ಇಲ್ಲಿ ಅಷ್ಟಾಂಗಯೋಗ ಸಿದ್ಧಿಯನ್ನು ಪಡೆದವನು ಎಂದು ಅರ್ಥ. ಅಷ್ಟಾಂಗಯೋಗದ ಸಿದ್ಧಿಯನ್ನು ಪಡೆದವನು ಯೋಗಬಲದಿಂದ ಎರಡು ಹುಬ್ಬುಗಳ ಮಧ್ಯದಲ್ಲಿ ಪ್ರಾಣವನ್ನು ಚೆನ್ನಾಗಿ ನಿಲ್ಲಿಸಿ ಹಿಂದೆ ಹೇಳಿದ ಶ್ರೇಷ್ಠನಾದ ದಿವ್ಯಪುರುಷನನ್ನು ಹೊಂದು ತ್ತಾನೆ. ದಿವ್ಯಪುರುಷನ ಕಡೆಗೆ ನೇರವಾಗಿ ಹಾದಿ ತಪ್ಪದೆ ಪ್ರಯಾಣಮಾಡು ತ್ತಾನೆ. ಹಿಂದೊಮ್ಮೆ ಹೇಳಿದಂತೆ ಎರಡು ಹುಬ್ಬುಗಳ ನಡುವೆ ಆಜ್ಞಾಚಕ್ರ ವಿದೆ. ಆ ಆಜ್ಞಾಚಕ್ರವು ಎರಡು ದಳಗಳಿಂದ ಕೂಡಿರುತ್ತದೆ. ಅದರಲ್ಲಿ ತ್ರಿಕೋಣಯೋಗವಿದೆ. ಆ ತ್ರಿಕೋಣದಲ್ಲಿ ಅಗ್ನಿ, ಸೂರ್ಯ ಮತ್ತು ಚಂದ್ರ–ಇವರ ಅಧಿಷ್ಠಾನವಿರುತ್ತದೆ. ಪ್ರಬುದ್ಧನಾದ ಯೋಗಿಯು ಮಹಾಪ್ರಯಾಣ ಸಮಯದಲ್ಲಿ ಯೋಗಬಲದಿಂದ ತನ್ನ ಪ್ರಾಣಗಳನ್ನು ಆಜ್ಞಾಚಕ್ರಕ್ಕೆ ತಂದು ಅಲ್ಲಿಯೇ ಸ್ತಂಭನಗೊಳಿಸುತ್ತಾನೆ. ಹೀಗೆ ಮಾಡಲು ಹೆಚ್ಚು ಅಭ್ಯಾಸವು ಬೇಕಾಗುತ್ತದೆ. ಆಜ್ಞಾಚಕ್ರದ ಸಮೀಪದಲ್ಲಿಯೇ ಸಪ್ತಕೋಶಗಳಿವೆ. ಇಂದು, ಬೋಧಿನೀ, ನಾದ, ಅರ್ಧಚಂದ್ರಿಕಾ, ಮಹಾನಾದ, (ಸೋಮ-ಸೂರ್ಯಾಗ್ನಿ ರೂಪಿಣೀ) ಕಲಾ, ಉನ್ಮನೀ–ಇವುಗಳೇ ಆ ಸಪ್ತಕೋಶಗಳು. ಪ್ರಾಣಗಳ ಮೂಲಕ ಉನ್ಮನೀ ಕೋಶವನ್ನು ಜೀವನು ಪ್ರವೇಶಿಸಿದ್ದೇ ಆದರೆ ಪರಮಪುರುಷನ ಪ್ರಾಪ್ತಿಯಾಗುತ್ತದೆ. ಅನಂತರ ಜೀವನಿಗೆ ಪುನರ್ಜನ್ಮವಿಲ್ಲ.)

o o o

ಭಕ್ತಿಃ =ಭಜನೆ, ಭಜಿಸುವಿಕೆ. ಯೋಗ ಎಂದರೆ ಸಮಾಧಿಯಿಂದ ಬಂದ ಸಂಸ್ಕಾರಗಳ ಸಮೂಹದಿಂದ ಉಂಟಾದ ಚಿತ್ತಸ್ಥೈರ್ಯ. ಭಕ್ತಿಯಿಂದಲೂ ಇಂತಹ ಯೋಗಬಲದಿಂದಲೂ ಕೂಡಿದವನಾಗಿ ಭ್ರುವೋಃ... ಸಮ್ಯಕ್ ಮೊದಲು ಹೃದಯಕಮಲದಲ್ಲಿ ಚಿತ್ತವನ್ನು ಸ್ಥಿರಪಡಿಸಿಕೊಂಡು, ಅನಂತರ ಮೇಲಕ್ಕೆ ಹೋಗುವ ನಾಡಿಯ ಮೂಲಕ ಚಿತ್ತದ ಭೂಮಿಗಳನ್ನು ಕ್ರಮವಾಗಿ ಜಯಿಸುತ್ತಾ, ಹುಬ್ಬುಗಳ ಮಧ್ಯದಲ್ಲಿ ಪ್ರಾಣವನ್ನು ನೆಲೆಗೊಳಿಸಿ, ತುಂಬ ಸಾವ ಧಾನನಾಗಿದ್ದು ಪರಮಾತ್ಮನನ್ನು ಚಿಂತಿಸುವ ಬುದ್ಧಿವಂತನಾದ ಯೋಗಿಯು,

ಕವಿಂ ಪುರಾಣಂ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುವ ದಿವ್ಯಪ್ರಕಾಶ ಸ್ವರೂಪನಾದ ಆ ಪರಮಪುರುಷನನ್ನು ಹೊಂದುತ್ತಾನೆ. (ಶಂ. ಭಾ.)

ಭಕ್ತ್ಯಾ ಚೈವ =ಪ್ರತಿನಿತ್ಯವೂ ಅಭ್ಯಾಸಮಾಡುತ್ತಿರುವ ಭಕ್ತಿಯಿಂದೊಡ ಗೂಡಿದ ಯೋಗಬಲದಿಂದ, ಸಂಸ್ಕಾರಗೊಂಡಿರುವ ಅಚಲವಾದ ಮನಸ್ಸಿನಿಂದ, ಪ್ರಾಣಪ್ರಯಾಣಸಮಯದಲ್ಲಿ ಹುಬ್ಬುಗಳ ಮಧ್ಯೆ ಪ್ರಾಣವನ್ನು ಚೆನ್ನಾಗಿ ಸ್ಥಾಪನೆಮಾಡಿಕೊಂಡು ಆ ಭ್ರೂಮಧ್ಯದಲ್ಲಿ ದಿವ್ಯಪುರುಷನನ್ನು ಸ್ಮರಿಸುವವನು ಅವನನ್ನೇ ಹೊಂದುತ್ತಾನೆ. ಅವನ ಭಾವವನ್ನು ಹೊಂದುತ್ತಾನೆ. ಅವನಿಗೆ ಸಮಾನವಾದ ಐಶ್ವರ್ಯವುಳ್ಳವನಾಗುತ್ತಾನೆ. (ರಾ. ಭಾ.)

ವಾಯುಜಯವೇ ಮುಂತಾದ ಯೋಗವುಳ್ಳವರು ಮರಣಸಮಯದಲ್ಲಿ ಮಾಡಬೇಕಾದ ಕರ್ತವ್ಯವನ್ನು ಇಲ್ಲಿ ವಿಶೇಷವಾಗಿ ಭಗವಂತನು ಹೇಳುತ್ತಾನೆ. ವಾಯುಜಯ ಮುಂತಾದುವುಗಳು ಇಲ್ಲದೇ ಇದ್ದವರು ಕೂಡ ಅವರಲ್ಲಿ ಜ್ಞಾನ, ಭಕ್ತಿ, ವೈರಾಗ್ಯ–ಮುಂತಾದುವುಗಳು ತುಂಬಿದ್ದರೆ ಅವರಿಗೆ ಮುಕ್ತಿಯು ಉಂಟಾಗಿಯೇ ಆಗುತ್ತದೆ. ಆದರೆ ವಾಯುಜಯಾದಿಗಳು ಇದ್ದವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳು ಅಸಂಪೂರ್ಣವಾಗಿದ್ದರೂ ಅವರಲ್ಲಿ ನೈಪುಣ್ಯವಿರುವುದರಿಂದ ಅದರ ಬಲದಿಂದ ಸ್ವಲ್ಪ ಶೀಘ್ರವಾಗಿಯೇ ಅವರಿಗೆ ಮೋಕ್ಷವುಂಟಾಗುತ್ತದೆ. ಆದರೆ ಅದು ಶ್ರಮಸಾಧ್ಯ. ಸಾಧಕರಲ್ಲಿ ಎರಡು ವಿಧ: ಭಕ್ತಿಯೇ ಮುಂತಾದುವು ಪ್ರಧಾನವಾಗಿರುವವರು–ವಾಯುಜಯಾದಿ ಗಳನ್ನು ಪ್ರಧಾನವಾಗಿ ಹೊಂದಿರುವವರು. ಆದರೆ ಭಕ್ತಿ-ವೈರಾಗ್ಯಾದಿಗಳು ಇಬ್ಬರಿಗೂ ಸಾಧಾರಣ. –ಜಯತೀರ್ಥರು.

ಓಂ ಯದಕ್ಷರಂ ವೇದವಿದೋ ವದನ್ತಿ
ವಿಶನ್ತಿ ಯದ್ಯತಯೋ ವೀತರಾಗಾಃ ।
ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥೧೧॥

ಯಾವ ಅಕ್ಷರವನ್ನು ವೇದವಿದರು ತಿಳಿಯುವರೋ, ರಾಗರಹಿತರಾದ ಯತಿಗಳು ಯಾವುದನ್ನು ಪ್ರವೇಶಿಸುವರೋ, ಯಾವುದನ್ನು ಬಯಸಿದವರಾಗಿ

ಬ್ರಹ್ಮಚರ್ಯವನ್ನು ಆಚರಿಸುವರೋ–ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುವೆನು.

*   *   *

(ಇಲ್ಲಿ ಅಕ್ಷರ ಎಂದರೆ 'ಓಂಕಾರ'. ಅಕ್ಷರ ಎಂದರೆ ಕ್ಷರವಿಲ್ಲದ್ದು. (ನಾಶವಿಲ್ಲದ್ದು.) ಅಕ್ಷರಬ್ರಹ್ಮ ಎಂದೂ ಆಗುತ್ತದೆ. ಓಂಕಾರವೇ ಬ್ರಹ್ಮವೆಂದು ಶ್ರುತಿಯು ಸಾರುತ್ತದೆ. 'ಓಮಿತ್ಯೇಕಾಕ್ಷರಂ ಬ್ರಹ್ಮ' ಓಂಕಾರದ ಮೂಲಕ ಬ್ರಹ್ಮೋಪಾಸನೆಯ ಪ್ರಕರಣವಾದುದರಿಂದ ಅಕ್ಷರಂ ಎಂಬುದಕ್ಕೆ ಓಂಕಾರ ಎಂದು ಅರ್ಥಮಾಡಬೇಕು. ಈ ಓಂಕಾರವನ್ನು ವೇದವಿದರು ಹೇಳುತ್ತಾರೆ. ಯಾವುದೇ ವೇದವನ್ನು ಪ್ರಾರಂಭಿಸಬೇಕಾದರೂ 'ಓಂ' ಎಂದು ಹೇಳಿಕೊಂಡೇ ಪ್ರಾರಂಭಿಸುತ್ತಾರೆ–'ಶ್ರೀ ಗುರುಭ್ಯೋ ನಮಃ ಹರಿಃ ಓಂ'; ಮುಗಿಸುವಾಗಲೂ ಓಂಕಾರದಿಂದಲೇ ಮುಗಿಸುತ್ತಾರೆ. 'ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ಓಂ ತತ್ಸತ್'–ಹೀಗೆ ಓಂಕಾರವನ್ನು ವೇದವಿದರು ಹೇಳುತ್ತಾರೆ. ಅಂತಹ ಏಕಾಕ್ಷರಪದದ ಮಾಹಾತ್ಮ್ಯವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ, ಎನ್ನುತ್ತಾನೆ ಶ್ರೀಕೃಷ್ಣ.

ರಾಗ-ದ್ವೇಷಾದಿಗಳಿಲ್ಲದ ಯತಿಗಳು ಆ ಏಕಾಕ್ಷರಪದವನ್ನು ಪ್ರವೇಶಿಸು ತ್ತಾರೆ. ಓಂಕಾರದಲ್ಲಿ ಐಕ್ಯವಾಗುತ್ತಾರೆ. ಅಥವಾ ಬುದ್ಧಿಯನ್ನು ಓಂಕಾರದಲ್ಲಿ ಲೀನಗೊಳಿಸುತ್ತಾರೆ. ನವರತ್ನಮಾಲಿಕೆಯಲ್ಲಿ ಶ್ರೀಶಂಕರಭಗವತ್ಪಾದರು ಓಂಕಾರವನ್ನು ಪಂಜರಕ್ಕೆ ಹೋಲಿಸಿದ್ದಾರೆ. ಓಂಕಾರಪಂಜರಶುಕೀಂ ದೇವಿಯನ್ನು ಓಂಕಾರಪಂಜರದಲ್ಲಿರುವ ಗಿಳಿ ಎಂದು ಹೇಳಿದ್ದಾರೆ. ಅಂತಹ ಓಂಕಾರಪಂಜರವನ್ನು ವೀತರಾಗರಾದ (ರಾಗ-ದ್ವೇಷವಿವರ್ಜಿತರಾದ) ಯತಿಗಳು ಪ್ರವೇಶಿಸುತ್ತಾರೆ.

ಆದರೆ ಈ ಓಂಕಾರವು ಸುಲಭವಾಗಿ ಪ್ರಾಪ್ತವಾಗತಕ್ಕುದಲ್ಲ. ಇದರ ಸಾಧನೆಗೆ ಬಹುಮುಖ್ಯವಾಗಿ ಬ್ರಹ್ಮಚರ್ಯೆಯಿರಬೇಕು. ಬ್ರಹ್ಮಚರ್ಯ ವೆಂದರೆ ಬ್ರಹ್ಮನಲ್ಲಿ ಸಂಚಾರಮಾಡುವಿಕೆ. ಅದಕ್ಕೆ ಪೋಷಕವಾಗುವಂತಹ ಇಂದ್ರಿಯಸಂಯಮವು ಬ್ರಹ್ಮಚರ್ಯ ಎನಿಸುತ್ತದೆ. ಬ್ರಹ್ಮಚಾರಿಯು ಊರ್ಧ್ವರೇತಸ್ಕನಾಗಿರಬೇಕು.

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।**
**ಸರ್ವತ್ರ ಮೈಥುನತ್ಯಾಗೋ ಬ್ರಹ್ಮಚರ್ಯಂ ಪ್ರಚಕ್ಷತೇ ॥**

ಗರುಡಪುರಾಣ ಅಧ್ಯಾಯ ೨೩೮-೬

ಮನಸಾ, ವಾಚಾ, ಕರ್ಮಣಾ, ಸರ್ವಾವಸ್ಥೆಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಮೈಥುನತ್ಯಾಗಮಾಡುವುದು ಬ್ರಹ್ಮಚರ್ಯೆ ಎನಿಸಿಕೊಳ್ಳುತ್ತದೆ. ಗೃಹಸ್ಥರು ತಮ್ಮ ಪತ್ನಿಯರಲ್ಲಿ ಮಾತ್ರ ರತಿಯುಳ್ಳವರಾಗಿ ಶಾಸ್ತ್ರವು ಬೋಧಿಸುವ ಋತುಕಾಲಗಳಲ್ಲಿ ಮಾತ್ರ ಸ್ತ್ರೀಸಂಗವನ್ನು ಮಾಡುತ್ತಿರುವವರಾದರೆ ಅವರನ್ನೂ ಬ್ರಹ್ಮಚಾರಿಗಳೆಂದೇ ಶಾಸ್ತ್ರವು ಕರೆಯುತ್ತದೆ. ಉಳಿದ ಮೂರು ಆಶ್ರಮಗಳವರು ಸದಾ ಊರ್ಧ್ವರೇತಸ್ಕರಾಗಿಯೇ ಇರಬೇಕು. ಗುರುಕುಲದಲ್ಲಿ ಇಂದ್ರಿಯನಿಯಮವನ್ನು ಪಾಲಿಸುತ್ತಾ ಗುರುಶುಶ್ರೂಷೆ, ವೇದಾಧ್ಯಯನ, ತಪಸ್ಸು, ಬ್ರಹ್ಮಧ್ಯಾನಗಳನ್ನು ಮಾಡುವುದು ಮೊದಲನೆಯ ಆಶ್ರಮವಾದ ಬ್ರಹ್ಮಚರ್ಯಾಶ್ರಮದ ಕರ್ತವ್ಯವಾಗಿರುತ್ತದೆ.

ಅಂತಹ ಏಕಾಕ್ಷರರೂಪದ ಪದವನ್ನು–ಪದದ ಮಾಹಾತ್ಮ್ಯವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ. ಇದೇ ಅರ್ಥವನ್ನು ಕೊಡುವ ಮಂತ್ರವು ಕಠೋಪನಿಷತ್ತಿನಲ್ಲಿ ಹೀಗೆ ಬಂದಿದೆ :

**ಸರ್ವೇ ವೇದಾ ಯತ್ಪದಮಾಮನನ್ತಿ**
**ತಪಾಗ್ಂಸಿ ಚ ಸರ್ವಾಣಿ ಚ ಯದ್ವದನ್ತಿ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಗ್ಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥**

೧-೨-೧೫

ಎಲ್ಲ ವೇದಗಳೂ ಯಾವ ಪದವನ್ನು ಪ್ರತಿಪಾದಿಸುತ್ತವೆಯೋ, ಎಲ್ಲ ವೇದಗಳೂ ಯಾವುದನ್ನು ಹೇಳುತ್ತವೆಯೋ, ಯಾವುದನ್ನು ಇಚ್ಛಿಸುತ್ತಾ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ–ಆ ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ. ಅದು ‘ಓಂ’ ಎಂಬುದು. (ಪ್ರಣವವು ಬ್ರಹ್ಮದ ವಾಚಕವು ಅಥವಾ ಪ್ರತೀಕವು.)

ಅಕ್ಷರಶಬ್ದಕ್ಕೆ ಪ್ರಣವ ಎಂಬ ಅರ್ಥವನ್ನು ಹೇಳುವಂತೆಯೇ ಪ್ರಣವ

ಪ್ರತಿಪಾದ್ಯವಾದ ಅವಿನಾಶಿಯಾದ ಪರಬ್ರಹ್ಮ ಎಂದೂ ಕೆಲವರು ಇಲ್ಲಿ ಅರ್ಥವನ್ನು ಹೇಳುತ್ತಾರೆ.)

o o o

**ಯದಕ್ಷರಂ.... ವದನ್ತಿ**–ವೇದದ ಅರ್ಥವನ್ನು ಬಲ್ಲ ವಿದ್ವಾಂಸರು, ಯಾವ ಅಕ್ಷರವನ್ನು (ಅವಿನಾಶಿಯಾದ ಪ್ರಣವವನ್ನು) 'ಇದು ಸ್ಥೂಲವೂ ಅಲ್ಲ, ಸೂಕ್ಷ್ಮವೂ ಅಲ್ಲ' ಎಂದು ಮೊದಲಾಗಿ ಎಲ್ಲ ವಿಶೇಷಗಳನ್ನೂ ನಿರಾಕರಿಸುವುದನ್ನಾಗಿ ಹೇಳುತ್ತಾರೆಯೋ–**ತದ್ವಾ ಏತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತಿ.** ಅದನ್ನು ಆ ಅಕ್ಷರವಾದ ಪದವನ್ನು ಎಂದರೆ ಹೊಂದಲ್ಪಡುವ ಸ್ಥಾನವನ್ನು. ಪ್ರಣವವು ಪರಬ್ರಹ್ಮಕ್ಕೆ ವಾಚಕವಾಗಿ ಪ್ರತಿಮೆಯಂತೆಯೂ ಪ್ರತೀಕವಾಗಿಯೂ ಇದ್ದು ಪರಬ್ರಹ್ಮವನ್ನು ಹೊಂದಲು ಶ್ರೇಷ್ಠಸಾಧನವೆಂದು ಮಂದಬುದ್ಧಿ ಮತ್ತು ಮಧ್ಯಮಬುದ್ಧಿಯುಳ್ಳ ಸಾಧಕರಿಗೆ ಹೇಳಲ್ಪಟ್ಟಿದೆ. ಕಾಲಾನಂತರದಲ್ಲಿ ಮುಕ್ತಿಯನ್ನು ಕೊಡುವ ಅದರ ಉಪಾಸನೆಯನ್ನು ಹೇಳಿದೆ. (ಶಂ. ಭಾ.)

**ಪದಂ**= ಮನಸ್ಸಿನಿಂದ ಹೊಂದಲ್ಪಡುವುದು. **ಪದ್ಯತೇ ಗಮ್ಯತೇ ಚೇತಸಾ ಇತಿ ಪದಂ.** ಅಂತಹ ಸರ್ವವೇದಾಂತವೇದ್ಯವೂ ನನ್ನ ಸ್ವರೂಪವೂ ಆದ ಅಕ್ಷರವನ್ನು ಹೇಗೆ ಉಪಾಸನೆಮಾಡಬೇಕು ಎಂಬುದನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಅಕ್ಷರಶಬ್ದವು ಇಲ್ಲಿ ವಿವಾದವೇ ಮುಂತಾದ ದೋಷರಹಿತನಾದ ಪರಮಾತ್ಮನ ವಿಷಯವಾದುದರಿಂದ ಅದು ಪರಮಾತ್ಮನ ಅಸಾಧಾರಣ ರೂಪ. ಅಕ್ಷರರೂಪನಾದ ಜೀವಾತ್ಮನನ್ನು ಹೊಂದುವುದಕ್ಕೋಸ್ಕರ ಅಕ್ಷರ ರೂಪನಾದ ಪರಮಾತ್ಮನ ಉಪಾಸನೆಯನ್ನು ಹೇಳಿದೆ. (ರಾ. ಭಾ.)

ಮೇಲೆ ಹೇಳಿದ ಧ್ಯೇಯವಸ್ತುವನ್ನೇ ಇಲ್ಲಿ ಪ್ರಶಂಸೆಮಾಡಿದೆ. ಇಲ್ಲಿ ಪದವೆಂದರೆ ಮುಮುಕ್ಷುಗಳಿಂದ ಹೊಂದಲ್ಪಡುವ ಪರಮಾತ್ಮನ ಸ್ವರೂಪ. **ಪದ–ಗತೌ** ಎಂಬ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. **ತದ್ವಿಷ್ಣೋಃ ಪರಮಂ ಪದಂ** ಎಂದು ಶ್ರುತಿಯು ಹೇಳುತ್ತದೆ. ಪದಶಬ್ದವು ಪರಮಾತ್ಮವಾಚಕ ಎಂದು ನಾರದೀಯವು ಹೇಳುತ್ತದೆ. **ಗೀಯಸೇ ಪದ ಇತ್ಯೇವ ಮುನಿಭಿಃ ಪದ್ಯಸೇ ಯತಃ ।** (ಮ. ಭಾ.)

**ಓಂ ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ**
**ಯೋಗಧಾರಣಾಮ್ ॥೧೨॥**

**ಓಂ ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥**

ಸರ್ವದ್ವಾರಗಳನ್ನೂ ಸಂಯಮನಮಾಡಿಕೊಂಡು, ಮನಸ್ಸನ್ನು ಹೃದಯದಲ್ಲಿ ತಡೆದು, ತನ್ನ ಪ್ರಾಣವನ್ನು ತಲೆಯಲ್ಲಿಟ್ಟುಕೊಂಡು, ಯೋಗ ಧಾರಣೆಯನ್ನು ಅವಲಂಬಿಸಿ ಓಂ ಎಂಬ ಏಕಾಕ್ಷರಬ್ರಹ್ಮವನ್ನು ಹೇಳಿಕೊಳ್ಳುತ್ತಾ ನನ್ನನ್ನೇ ಅನುಸ್ಮರಣೆಮಾಡುತ್ತಾ ಯಾವಾತನು ದೇಹವನ್ನು ಬಿಟ್ಟು ಪ್ರಯಾಣಮಾಡುವನೋ ಅವನು ಪರಮಗತಿಯನ್ನೈದುವನು.

* * *

(ಶ್ರೀಕೃಷ್ಣನು ಭವರೋಗವೈದ್ಯ. ವೈದ್ಯನೊಬ್ಬನ ಬಳಿಗೆ ರೋಗಿಯು ಹೋದಲ್ಲಿ ಅವನ ಖಾಯಿಲೆಯು ಎಷ್ಟೇ ಉಲ್ಬಣವಾಗಿದ್ದರೂ ಅದನ್ನು ಹೊರಗೆಡಹದೇ ರೋಗಿಯು ಧೈರ್ಯಗೆಡದಂತೆ ಬುದ್ಧಿವಂತನಾದ ವೈದ್ಯನು ಮಾತನಾಡುತ್ತಾನೆ. ಒಂದೆರಡು ದಿವಸಗಳ ಔಷಧಿಯ ಸೇವನೆಯಿಂದ ರೋಗವು ವಾಸಿಯಾಗುವುದೆಂದು ಹೇಳುತ್ತಾನೆ. ಆದರೆ ಅವಧಿಯು ಇಪ್ಪತ್ತು ದಿವಸಗಳಾಗಬಹುದು. ಇಪ್ಪತ್ತು ದಿವಸಗಳಾಗುವುದೆಂದು ಮೊದಲೇ ಹೇಳಿ ಬಿಟ್ಟರೆ ರೋಗಿಯು ಧೈರ್ಯಗೆಡಬಹುದು. ಭವರೋಗವೈದ್ಯನಾದ ಶ್ರೀಕೃಷ್ಣನು ಅನುಸರಿಸಿರುವ ಮಾರ್ಗವೂ ಇದೇ ಆಗಿರುತ್ತದೆ. ಇದೇ ಅಧ್ಯಾಯದ ೫ನೆಯ ಶ್ಲೋಕದಲ್ಲಿ 'ಅನ್ತಕಾಲೇ ಚ' ಅಂತಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ದೇಹತ್ಯಾಗಮಾಡಿದವನು ನನ್ನ ಭಾವವನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ ಎನ್ನುತ್ತಾನೆ. ಇದು ತೋರಿಕೆಗೆ ಬಹಳ ಸುಲಭ ಮಾರ್ಗವಾಗಿಯೇ ಕಾಣುತ್ತದೆ. ಮುಂದು-ಮುಂದಕ್ಕೆ ಇದನ್ನೇ ವಿವರಿಸಿ ಹೇಳುತ್ತಾ ಈ ಶ್ಲೋಕದಲ್ಲಿ ಹೇಗೆ ಸ್ಮರಣೆಮಾಡಬೇಕೆಂಬುದರ ವಿವರಣೆಯನ್ನು ಕೊಡುತ್ತಾನೆ. ಇಲ್ಲಿ ಶ್ರೀಕೃಷ್ಣನು ಹೇಳಿರುವಂತೆ ನಡೆದುಕೊಳ್ಳಬೇಕಾದರೆ ಅದಕ್ಕೆ ಸತತವಾದ ಅಭ್ಯಾಸವೇ ಬೇಕು. ಸಾಯುವ ಸಮಯದಲ್ಲಿ ಕುಳಿತು ಇದನ್ನು ಮಾಡುವ ಸಾಧ್ಯತೆಯಿಲ್ಲ.

**ಸರ್ವದ್ವಾರಾಣಿ ಸಂಯಮ್ಯ**=ಸರ್ವದ್ವಾರಾಣಿ ಎಂಬುದಕ್ಕೆ ಐದು ಕರ್ಮೇಂದ್ರಿಯಗಳನ್ನೂ–ಐದು ಜ್ಞಾನೇಂದ್ರಿಯಗಳನ್ನೂ ಎಂದು ಕೆಲವರು ಅರ್ಥಮಾಡಿರುತ್ತಾರೆ. ಮನುಷ್ಯನಿಗಿರುವ ನವದ್ವಾರಗಳನ್ನು ಸಂಯಮನ ಮಾಡಿ ಎಂದೂ ಅರ್ಥಮಾಡಬಹುದಾಗಿದೆ. ಇರುವ ಒಂಬತ್ತು ಬಾಗಿಲುಗಳನ್ನೂ ಮುಚ್ಚಿಬಿಡಬೇಕು. ಮನಸ್ಸನ್ನು ಹೃದಯದಲ್ಲಿ ನಿರೋಧಿಸಬೇಕು. ಅರ್ಥಾತ್ ಮನಸ್ಸನ್ನು ಹೃದಯಕಮಲದಲ್ಲಿರುವ ಜ್ಞಾನದೀಪದೊಳಗೆ ವಿಲೀನಗೊಳಿಸಬೇಕು. ಅನಂತರ ಹೃದಿಸ್ಥವಾದ ಪ್ರಾಣವನ್ನು ಬ್ರಹ್ಮರಂಧ್ರದ ಬಳಿಗೊಯ್ದು ನಿಲ್ಲಿಸಬೇಕು.

ಈ ರೀತಿಯಲ್ಲಿ ಯೋಗಾರೂಢನಾಗಿ 'ಓಂ' ಎಂದು ಏಕಾಕ್ಷರಬ್ರಹ್ಮವನ್ನು ಉಚ್ಚಾರಣೆಮಾಡಬೇಕು. ಈ ಸ್ಥಿತಿಯಲ್ಲಿರುವವನಿಗೆ 'ಓಂ' ಕಾರದ ಉಚ್ಚಾರಣೆಯು ತಾನೇ ತಾನಾಗಿ ಆಗುತ್ತಿರುತ್ತದೆ. ಹೃತ್ಕಮಲದಿಂದ ಹೊರಟ 'ಓಂ' ಕಾರವು ಬ್ರಹ್ಮರಂಧ್ರದ ಪರ್ಯಂತವೂ ಪ್ರತಿಧ್ವನಿಸುತ್ತಿರುತ್ತದೆ. **'ಮಾಮನುಸ್ಮರನ್'** ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಪ್ರಾಣವನ್ನು ಬ್ರಹ್ಮರಂಧ್ರದಲ್ಲಿ ನಿಲ್ಲಿಸಿರುವ ಯೋಗಾರೂಢನಾಗಿರುವ ಯೋಗಿಗೆ ಜ್ಯೋತಿಸ್ವರೂಪನಾದ ಪರಮಾತ್ಮನ ಸ್ಮರಣೆಯಲ್ಲದೇ ಬೇರೆಯ ಸ್ಮರಣೆಯಿರಲು ಸಾಧ್ಯವೇ ಇಲ್ಲ. ಚಿದಾನಂದಜ್ಯೋತಿಯನ್ನು ಅಂತರ್ದೃಷ್ಟಿಯಿಂದ ಕಾಣುತ್ತಲೇ ಇರುತ್ತಾನೆ. ಈ ಸ್ಥಿತಿಯಲ್ಲಿದ್ದು ಯಾವನು ದೇಹವನ್ನು ತ್ಯಜಿಸಿ ಬ್ರಹ್ಮರಂಧ್ರದ ಮೂಲಕ ಹೊರಟುಹೋಗುತ್ತಾನೆಯೋ ಅಂತಹ ಯೋಗಿಯು ಪರಮಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ಕಠೋಪನಿಷತ್ತಿನಲ್ಲಿ ಓಂಕಾರಬ್ರಹ್ಮದ ವಿಷಯವಾಗಿ ಹೀಗೆ ಹೇಳಿದ್ದಾರೆ :

**ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥**

೨-೨-೧೬

ಈ ಅಕ್ಷರವೇ ಅಪರಬ್ರಹ್ಮ, ಈ ಅಕ್ಷರವೇ ಪರಬ್ರಹ್ಮ. ಪರಬ್ರಹ್ಮ-ಅಪರಬ್ರಹ್ಮ ಎರಡಕ್ಕೂ ಪ್ರತೀಕವಾಗಿರುವ ಓಂಕಾರವನ್ನು ಉಪಾಸಿಸಿ ಯಾವನು ಯಾವುದನ್ನು ಬಯಸುತ್ತಾನೆಯೋ ಅವನಿಗೆ ಅದೇ ಲಭಿಸುತ್ತದೆ.

**ಏತದಾಲಮ್ಬನಂ ಶ್ರೇಷ್ಠಮೇತದಾಲಮ್ಬನಂ ಪರಮ್ ।**
**ಏತದಾಲಮ್ಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥**

೨-೨-೧೭

ಬ್ರಹ್ಮಪ್ರಾಪ್ತಿಗೆ ಬೇಕಾದ ಆಧಾರಗಳಲ್ಲಿ ಇದು ಶ್ರೇಷ್ಠವಾದುದು ಮತ್ತು ಪರವೂ ಆದುದು. ಈ ಆಧಾರವನ್ನು ಅವಲಂಬಿಸಿಕೊಂಡು ಪರಬ್ರಹ್ಮದಲ್ಲಿಯೂ ಅಪರಬ್ರಹ್ಮದಲ್ಲಿಯೂ ಬ್ರಹ್ಮಭೂತನಾಗಿ ಬ್ರಹ್ಮದಂತೆ ಉಪಾಸ್ಯನಾಗುತ್ತಾನೆ.

ಓಂಕಾರದ ವಿಷಯವಾಗಿ ಮುಂಡಕೋಪನಿಷತ್ತಿನಲ್ಲಿ ಪೂರ್ಣವಾದ ವಿವರಣೆಯಿದೆ.

**ಓಮಿತ್ಯೇಕಾಕ್ಷರಮಿದಂ ಸರ್ವಂ ತಸ್ಯೋಪಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂಕಾರ ಏವ**

ಇದೆಲ್ಲವೂ ಓಂ ಎಂಬ ಈ ಅಕ್ಷರವು. ಅದರ ಉಪಾಖ್ಯಾನವು ಹೀಗಿದೆ: ಹಿಂದೆ ಆಗಿಹೋದುದು ; ಈಗ ಇರುವುದು ; ಮುಂದಿನದು—ಇವೆಲ್ಲವೂ ಓಂಕಾರವೇ. ತ್ರಿಕಾಲಾತೀತವಾದುದು ಇನ್ನೂ ಯಾವುದಿದೆಯೋ ಅದೂ ಓಂಕಾರವೇ. ಇದಕ್ಕೆ ಗೌಡಪಾದರ ಕಾರಿಕೆಯು ಹೀಗಿದೆ :

**ಓಂಕಾರಂ ಪಾದಶೋ ವಿದ್ಯಾತ್ಪಾದಾ ಮಾತ್ರಾ ನ ಸಂಶಯಃ ।**
**ಓಂಕಾರಂ ಪಾದಶೋ ಜ್ಞಾತ್ವಾ ನ ಕಿಂಚಿದಪಿ ಚಿನ್ತಯೇತ್ ॥೨೪॥**

ಓಂಕಾರವನ್ನು ಪಾದಶಃ ತಿಳಿದುಕೊಳ್ಳಬೇಕು. ಪಾದಗಳೇ ಮಾತ್ರೆಗಳು. ಓಂಕಾರವನ್ನು ಪಾದಶಃ ಅರಿತುಕೊಂಡು ಏನನ್ನೂ ಚಿಂತಿಸಕೂಡದು. (ಕೃತಾರ್ಥನಾಗಿರುವುದರಿಂದ ದೃಷ್ಟಪ್ರಯೋಜನವನ್ನಾಗಲೀ ಅದೃಷ್ಟ ಪ್ರಯೋಜನವನ್ನಾಗಲೀ ಚಿಂತಿಸಕೂಡದು.)

**ಯುಞ್ಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಮ್ ।**
**ಪ್ರಣವೇ ನಿತ್ಯಯುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥೨೫॥**

ಪರಮಾರ್ಥರೂಪವಾದ ಓಂಕಾರದಲ್ಲಿ ಮನಸ್ಸನ್ನು ಸೇರಿಸಬೇಕು. ಓಂಕಾರವು ನಿರ್ಭಯವಾದ ಬ್ರಹ್ಮವು. ಓಂಕಾರದಲ್ಲಿ ಸದಾ ಯುಕ್ತನಾಗಿರುವವನಿಗೆ ಎಲ್ಲಿಯೂ ಭಯವಿಲ್ಲ.

**ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಂ ಸ್ಮೃತಃ ।**
**ಅಪೂರ್ವೋಽನನ್ತರೋ ಬಾಹ್ಯೋಽಪರಃ ಪ್ರಣವೋಽವ್ಯಯಃ ॥೨೬॥**

ಓಂಕಾರವೇ ಅಪರಬ್ರಹ್ಮವು ; ಓಂಕಾರವೇ ಪರಬ್ರಹ್ಮವು ಎಂದೂ ಹೇಳಲ್ಪಟ್ಟಿದೆ. ಅವ್ಯಯವಾದ ಓಂಕಾರಕ್ಕೆ ಪೂರ್ವವಿಲ್ಲ. (ನಿಜವಾಗಿ ಮಾತ್ರೆಗಳೂ ಕ್ಷೀಣವಾದರೆ ಓಂಕಾರವು ಪರಮಾತ್ಮನಾದ ಬ್ರಹ್ಮವೇ ಆಗಿರುವುದರಿಂದ ಇದು ಅಪೂರ್ವವು ಎಂದರೆ ಕಾರಣರಹಿತವು.) ಅಂತರವಿಲ್ಲ. (ಭಿನ್ನಜಾತೀಯವಾದುದು ಯಾವುದೂ ಇಲ್ಲ.) ಬಾಹ್ಯವಿಲ್ಲ. ಕಾರ್ಯವಿಲ್ಲ.

**ಸರ್ವಸ್ಯ ಪ್ರಣವೋ ಹ್ಯಾದಿರ್ಮಧ್ಯಮನ್ತಸ್ತಥೈವ ಚ ।**
**ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನನ್ತರಮ್ ॥೨೭॥**

ಸರ್ವಕ್ಕೂ ಓಂಕಾರವೇ ಆದಿ-ಮಧ್ಯ ಮತ್ತು ಅಂತ್ಯ. ಹೀಗೆಂದೇ ಓಂಕಾರವನ್ನು ಅರಿತುಕೊಂಡರೆ ತತ್‌ಕ್ಷಣವೇ ಅದರ ಆತ್ಮಭಾವವನ್ನು ಹೊಂದುತ್ತಾನೆ.

**ಪ್ರಣವಂ ಹೀಶ್ವರಂ ವಿದ್ಯಾತ್ಸರ್ವಸ್ಯ ಹೃದಿ ಸಂಸ್ಥಿತಮ್ ।**
**ಸರ್ವವ್ಯಾಪಿನಮೋಂಕಾರಂ ಮತ್ವಾ ಧೀರೋ ನ ಶೋಚತಿ ॥೨೮॥**

ಓಂಕಾರವನ್ನು ಎಲ್ಲರ ಹೃದಯಗಳಲ್ಲಿಯೂ ಇರುವ ಈಶ್ವರನೆಂದು ತಿಳಿಯಬೇಕು. ಸರ್ವವ್ಯಾಪಿಯಾದ ಓಂಕಾರವನ್ನು ಅರಿತುಕೊಂಡ ಧೀರನು ಶೋಕಿಸುವುದಿಲ್ಲ.

**ಅಮಾತ್ರೋಽನನ್ತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।**
**ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥೨೯॥**

ಮಾತ್ರೆಯಿಲ್ಲದುದೂ, ಅನಂತಮಾತ್ರೆಗಳುಳ್ಳದ್ದೂ, ದ್ವೈತದ ಉಪಶಮವೂ, ಶಿವವೂ ಆದ ಓಂಕಾರವನ್ನು ಯಾವನು ಅರಿಯುತ್ತಾನೆಯೋ ಪರಮಾರ್ಥತತ್ತ್ವವನ್ನು ಮನನಮಾಡುತ್ತಾನೆಯೋ—ಅವನೇ ಮುನಿಯು. ಇತರರಲ್ಲ.

ಪ್ರಣವದ ವಿಷಯವಾಗಿ ಪಾತಂಜಲಯೋಗದರ್ಶನದಲ್ಲಿ ಹೀಗೆ ಹೇಳಿದೆ :

**ತಸ್ಯ ವಾಚಕಃ ಪ್ರಣವಃ** ೧-೨೭

ಅವನ ವಾಚಕವು ಪ್ರಣವ. ವಾಚಕವಾದುದು ಪ್ರಣವ. ಈಶ್ವರನು ವಾಚ್ಯನು.

**ತಜ್ಜಪಸ್ತದರ್ಥಭಾವನಮ್** ೧-೨೮

ವಾಚ್ಯತ್ವವನ್ನೂ ವಾಚಕತ್ವವನ್ನೂ ಅರಿತುಕೊಂಡಿರುವ ಯೋಗಿಯು ಅದನ್ನು ಜಪಿಸಬೇಕು ಮತ್ತು ಅದರ ಅರ್ಥವನ್ನು ಭಾವಿಸಬೇಕು.

ಪ್ರಣವವನ್ನು ಜಪಿಸಬೇಕು ಮತ್ತು ಪ್ರಣವದಿಂದ ಸೂಚಕವಾದುದನ್ನು ಎಂದರೆ ಈಶ್ವರನನ್ನು ಭಾವಿಸಬೇಕು. ಹೀಗೆ ಪ್ರಣವವನ್ನು ಜಪಿಸುತ್ತಿರುವ ಮತ್ತು ಅದರ ವಿಷಯವನ್ನು ಭಾವಿಸುತ್ತಿರುವ ಯೋಗಿಗೆ ಚಿತ್ತದ ಏಕಾಗ್ರತೆಯುಂಟಾಗುತ್ತದೆ.

O O O

ವಿಷಯಗಳ ಉಪಲಬ್ಧಿಗೆ ದ್ವಾರಗಳಾಗಿರುವ ಎಲ್ಲ ಇಂದ್ರಿಯಗೋಳಕಗಳನ್ನೂ ಹತೋಟಿಯಲ್ಲಿಟ್ಟುಕೊಂಡು, ಮನಸ್ಸನ್ನು ಹೃದಯಕಮಲದಲ್ಲಿ ತಡೆದು ಎಂದರೆ ಅದರ ವೃತ್ತಿಯನ್ನು ತಪ್ಪಿಸಿ, ಅಲ್ಲಿ ವಶಕ್ಕೆ ಬಂದ ಮನಸ್ಸಿನ ಸಹಾಯದಿಂದ ಹೃದಯದಿಂದ ಮೇಲಕ್ಕೆ ಹತ್ತಿ, ತನ್ನ ಪ್ರಾಣವನ್ನು ಮಸ್ತಕದಲ್ಲಿ ಸ್ಥಾಪಿಸಿ ಯೋಗವನ್ನು ಗ್ರಹಿಸಲು ತೊಡಗುವವನು, 'ಓಂ' ಎಂಬ ಏಕಾಕ್ಷರ ಬ್ರಹ್ಮವಾಚಕವನ್ನು ಹೇಳುತ್ತಾ ಅದರ ಅರ್ಥವಾಗಿರುವ ಈಶ್ವರನಾದ ನನ್ನನ್ನು ಸ್ಮರಿಸುತ್ತಾ ದೇಹವನ್ನು ಬಿಡುವವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. **ತ್ಯಜನ್ ದೇಹಂ** ಎಂದು ವಿಶೇಷಣವನ್ನು ಕೊಟ್ಟಿರುವುದರ ಅರ್ಥ :– ಆತ್ಮಕ್ಕೆ ಹೊರಟುಹೋಗುವುದು ಎಂದರೆ ದೇಹದ ತ್ಯಾಗವೇ ಹೊರತು ಸ್ವರೂಪನಾಶಕವಲ್ಲ. (ಶಂ. ಭಾ.)

**ಸರ್ವದ್ವಾರಾಣಿ**=ಜ್ಞಾನಕ್ಕೆ ದ್ವಾರವಾಗಿರುವ ಕಿವಿಯೇ ಮುಂತಾದ ಇಂದ್ರಿಯಗಳನ್ನು ಸಂಯಮನಮಾಡಿ ಎಂದರೆ ತಮ್ಮ ವ್ಯಾಪಾರಗಳಿಂದ ಹಿಂದಿರುಗಿಸಿ, ಹೃದಯಕಮಲದಲ್ಲಿರುವ ಅಕ್ಷರನಾದ ನನ್ನಲ್ಲಿ ಮನಸ್ಸನ್ನು ತಡೆಗಟ್ಟಿ, ಯೋಗವೆಂಬ ಧಾರಣೆಯಲ್ಲಿದ್ದು, ನನ್ನಲ್ಲೇ ನಿಶ್ಚಲವಾದ ಸ್ಥಿತಿಯನ್ನು ಹೊಂದಿ, ನನಗೆ ವಾಚಕವಾದ 'ಓಂ' ಎಂಬ ಏಕಾಕ್ಷರಬ್ರಹ್ಮವನ್ನು ಉಚ್ಚರಿಸುತ್ತಾ, ವಾಚ್ಯನಾದ ನನ್ನನ್ನು ಸ್ಮರಿಸುತ್ತಾ, ತನ್ನ ಪ್ರಾಣವನ್ನು ಶಿರಸ್ಸಿನಲ್ಲಿಟ್ಟುಕೊಂಡು ದೇಹವನ್ನು ಬಿಡುವವನು ಪರಮಗತಿಯನ್ನು ಹೊಂದುತ್ತಾನೆ ಎಂದರೆ ಪ್ರಕೃತಿವಿಯುಕ್ತನೂ, ನನಗೆ ಸಮಾನವಾದ ಆಕಾರವುಳ್ಳವನೂ, ಪುನರಾವೃತ್ತಿರಹಿತನೂ ಆದ ಆತ್ಮಸ್ವರೂಪವನ್ನು ಹೊಂದುತ್ತಾನೆ.

(ರಾ. ಭಾ.)

ಬ್ರಹ್ಮನಾಡಿಯನ್ನು ಬಿಟ್ಟು ಬೇರೆಯ ಕಡೆಗೆ ಹೋಗುವ ಪಕ್ಷಕ್ಕೆ ಮೋಕ್ಷಕ್ಕೆ ಹೋಗದೇ ಬೇರೆಯ ಸ್ಥಾನಕ್ಕೆ ಹೋಗುತ್ತಾನೆ. ಆದುದರಿಂದ ಎಲ್ಲ ದ್ವಾರಗಳನ್ನೂ ಸಂಯಮನಮಾಡಿ ಹೊರಟುಹೋಗುತ್ತಾ ; **ನಿರ್ಗಚ್ಛನ್ ಚಕ್ಷುಷಾ ಸೂರ್ಯಂ ದಿಶಃ ಶ್ರೋತ್ರೇಣ ಚೈವ ಹಿ I** ಎಂಬಂತೆ ಮನಸ್ಸನ್ನು ಹೃದಯದಲ್ಲಿ ಎಂದರೆ ನಾರಾಯಣನಲ್ಲಿ ನಿರೋಧಿಸಿ, ಶಿರಸ್ಸಿನಲ್ಲಿ ಪ್ರಾಣವನ್ನಿರಿಸಿಕೊಂಡು, ಯೋಗಭರಣದಲ್ಲೇ ಆಸಕ್ತನಾಗಿ 'ಓಂ' ಎಂಬ ಏಕಾಕ್ಷರಬ್ರಹ್ಮವನ್ನು ಉಚ್ಚರಿಸುತ್ತಾ ನನ್ನನ್ನೇ ಸ್ಮರಿಸುತ್ತಾ ದೇಹವನ್ನು ಬಿಡುವವನು ಪರಮಗತಿಯನ್ನು ಹೊಂದುತ್ತಾನೆ. ಶ್ಲೋಕದಲ್ಲಿ ಹೃದಿ ಎಂಬ ಪದಕ್ಕೆ ಹೃದಯದಲ್ಲಿ ಎಂದು ಅರ್ಥಮಾಡಬಾರದು. ಏಕೆಂದರೆ ಪ್ರಾಣವು ಶಿರಸ್ಸಿನಲ್ಲಿರುವಾಗ ಹೃದಯದಲ್ಲಿ ಮನಸ್ಸು ಇರಲಾರದು. ಎಲ್ಲಿ ಪ್ರಾಣ ವಿದೆಯೋ ಅಲ್ಲೇ ಮನಸ್ಸು. ಅಲ್ಲಿಯೇ ಜೀವ ಮತ್ತು ಪರಮಾತ್ಮ ಎಂದು ವ್ಯಾಸಯೋಗದಲ್ಲಿ ಹೇಳಿದೆ. **ಯತ್ರ ಪ್ರಾಣೋ ಮನಸ್ತತ್ರ ತತ್ರ ಜೀವಃ ಪರಸ್ತಥಾ** ಆದುದರಿಂದ ಹೃದಿ ಎಂಬುದಕ್ಕೆ ನಾರಾಯಣನಲ್ಲಿ ಎಂದು ಅರ್ಥಮಾಡಿದೆ.

**ಹ್ರಿಯತೇ ತ್ವಯಾ ಜಗದ್ಯಸ್ಮಾತ್ ಹೃದೀತ್ಯೇವಂ ಪ್ರಭಾಷಸೇ I** ಎಂದು ಪಾದ್ಮವು–ಹೃತ್ ಎಂಬುದನ್ನು ಪರಮಾತ್ಮವಾಚಕವಾಗಿ ಹೇಳುತ್ತದೆ.
(ಮ. ಭಾ.)

**ಓಂ ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ I**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥೧೪॥**

ಪಾರ್ಥ! ಅನನ್ಯಮನಸ್ಕನಾಗಿ ಸತತವಾಗಿ ಯಾವನು ಸದಾ ನನ್ನನ್ನು ನೆನೆಯುತ್ತಿರುವನೋ ನಿತ್ಯಯುಕ್ತನಾದ ಆ ಯೋಗಿಗೆ ನಾನು ಸುಲಭನು.

* * *

(ಐದನೆಯ ಶ್ಲೋಕಕ್ಕೆ ಶ್ರೀಕೃಷ್ಣನೇ ಇಲ್ಲಿ ನೇರವಾಗಿ ಉತ್ತರಿಸಿದ್ದಾನೆ. ಅವಸಾನಕಾಲದಲ್ಲಿ ತನ್ನನ್ನು ಚಿಂತಿಸಲು ಸುಲಭವಾದ ಮಾರ್ಗವನ್ನು ಸೂಚಿಸಿದ್ದಾನೆ.

**ಅನನ್ಯಚೇತಾಃ**= ಭಗವಂತನನ್ನು ಬಿಟ್ಟು ಅನ್ಯವಸ್ತುಗಳ ಮೇಲೆ ಮನಸ್ಸಿರಲೇ ಕೂಡದು. ಈ ಪದವನ್ನು ಹೇಳಿದ್ದರಿಂದಲೇ **ಸತತಂ**=ಯಾವಾ

ಗಲೂ ಎಂಬ ಅಭಿಪ್ರಾಯವೂ ಮೂಡಿರುತ್ತದೆ. ಆದರೂ ಸಹ ಅರ್ಥವನ್ನು ಸ್ಪಷ್ಟಪಡಿಸಲು ಶ್ರೀಕೃಷ್ಣನು **ಸತತಂ** ಎಂದೂ ಹೇಳಿದ್ದಾನೆ. ಯಾವಾಗಲೂ ಯಾವ ಕಾರಣದಿಂದಲೂ ಮನಸ್ಸು ಬೇರೆಯ ವಸ್ತುವಿನ ಕಡೆಗೆ ಹೋಗಬಾರದು. ಮನಸ್ಸು ಬೇರೆಡೆಗೆ ಹೋಗಬಾರದೆಂದು ಹೇಳಿದ ಮೇಲೆ ಆ ಮನಸ್ಸನ್ನು ನಿರ್ವಿಷಯವಾಗಿ ಇರಿಸುವುದು ಕಷ್ಟ. ಅದಕ್ಕೆ ಶುಭಾಲಂಬನನಾದ ಪರಮಪುರುಷನನ್ನೇ ವಿಷಯವನ್ನಾಗಿ ಮಾಡಿಕೊಳ್ಳಬೇಕು. ಹೀಗೆ ಸದಾ ಸಮಾಹಿತವಾದ ಮನಸ್ಸುಳ್ಳ ಯೋಗಿಗೆ ಭಗವಂತನು ಸುಲಭವಾಗಿ ದೊರೆಯುತ್ತಾನೆ. **ಸತತಂ** ಎಂದು ಹೇಳಿದನಂತರ ನಿತ್ಯಶಃ ಶಬ್ದದ ಆವಶ್ಯಕತೆಯಿಲ್ಲದಿದ್ದರೂ ಸತತಶಬ್ದದಲ್ಲಿ ನಿತ್ಯಶಬ್ದವು ಐಕ್ಯವಾಗಿಹೋಗಿದ್ದರೂ ಸಹ ವಿಷಯವನ್ನು ಹೆಚ್ಚು ಸ್ಪಷ್ಟಗೊಳಿಸಲು ಶ್ರೀಕೃಷ್ಣನು ನಿತ್ಯಶಃ ಎಂದೂ ಹೇಳಿದ್ದಾನೆ. ತಾತ್ಪರ್ಯ : ಯಾವನು ದಿನವೂ ಸತತವಾಗಿ ಬೇರೆಯ ಕಡೆಗೆ ಮನಸ್ಸನ್ನು ಕಳುಹಿಸದೆ ನನ್ನನ್ನೇ ಸ್ಮರಿಸುತ್ತಾನೆಯೋ, ಯಾವನ ಉಸಿರೂ ಸಹ ಶ್ರೀಕೃಷ್ಣನನ್ನೇ ಹಾಡುತ್ತಾ-ಪಾಡುತ್ತಾ ಇರುವುದೋ, ಯಾವನ ರಕ್ತಕಣಗಳಲ್ಲಿ ಶ್ರೀಕೃಷ್ಣನ ಬಿಂಬವು ಪ್ರತಿಬಿಂಬಿಸಿರುತ್ತದೆಯೋ, ಯಾವನ ಕಣ್ಣಿಗೆ ಎಲ್ಲವೂ ಶ್ರೀಕೃಷ್ಣಮಯವಾಗಿಯೇ ಕಾಣುವುದೋ, ಎಲ್ಲ ಕಾರ್ಯವನ್ನೂ ಯಾವನು ಶ್ರೀಕೃಷ್ಣನಿಗಾಗಿಯೇ ಮಾಡುತ್ತಾನೆಯೋ– ಅಂತಹ ನಿತ್ಯಯುಕ್ತನಾದ, ನಿತ್ಯವೂ ಸತತವಾಗಿ ಶ್ರೀಕೃಷ್ಣನನ್ನು ಎಡೆಬಿಡದೇ ಸ್ಮರಿಸುವ ಯೋಗಿಗೆ ಭಗವಂತನು ಬಹುಸುಲಭನು.

o o o

**ಸತತಂ ನಿತ್ಯಶಃ, ಸತತಂ** ಎಂಬ ಪದವು ನಿರಂತರವಾಗಿ ಎಂಬ ಅರ್ಥವನ್ನೂ, ನಿತ್ಯಶಃ ಎಂಬ ಪದವು ದೀರ್ಘಕಾಲದವರೆಗೆ ಎಂಬ ಅರ್ಥವನ್ನೂ ಹೇಳುತ್ತದೆ. ಆರು ತಿಂಗಳು ಅಥವಾ ಒಂದು ವರ್ಷ ಸ್ಮರಣೆಮಾಡಿದರೆ ಸಾಕು ಎಂದು ತಿಳಿಯಬಾರದು. ಜೀವನಪರ್ಯಂತವಾಗಿ, ನಿರಂತರವಾಗಿ ನನ್ನನ್ನು ಸ್ಮರಣೆಮಾಡುವವನಿಗೆ ನಾನು ಸುಲಭನು. (ಶಂ. ಭಾ.)

ಉದ್ಯೋಗಕಾಲದಿಂದ ಆರಂಭಿಸಿ ಎಲ್ಲ ಕಾಲಗಳಲ್ಲಿಯೂ ಅನನ್ಯಚಿತ್ತನಾಗಿ ನನ್ನನ್ನು ಯಾವನು ಸ್ಮರಿಸುತ್ತಾನೆಯೋ, ಎಂದರೆ ನನ್ನನ್ನು ಅತ್ಯರ್ಥಪ್ರಿಯನನ್ನಾಗಿ ಭಾವಿಸಿ ನನ್ನ ಸ್ಮರಣೆಯಿಲ್ಲದಿದ್ದರೆ ಆತ್ಮಧಾರಣೆಯೇ ಇಲ್ಲದೇ ನನ್ನನ್ನು ನಿರತಿಶಯವಾದ ಪ್ರೀತಿಯಿಂದ ಯಾವನು ಸ್ಮರಿಸುತ್ತಾನೆಯೋ,

ನಿತ್ಯಯುಕ್ತನಾದ ಎಂದರೆ ನಿತ್ಯಯೋಗವನ್ನು ಬಯಸುವ ಅಂತಹ ಯೋಗಿಗೆ ನಾನು ಸುಲಭನು. ಅವನಿಗೆ ನಾನೇ ಪ್ರಾಪ್ಯನಾಗುತ್ತೇನೆ. ನನ್ನ ಭಾವವಾದ ಐಶ್ವರ್ಯಾದಿಗಳನ್ನು ನಾನು ಅವನಿಗೆ ಸುಲಭವಾಗಿ ದೊರಕಿಸುತ್ತೇನೆ. ಅವನ ಅಗಲಿಕೆಯನ್ನು ಸಹಿಸದೇ ನಾನೇ ಅವನನ್ನು ವರಿಸುತ್ತೇನೆ. ನನ್ನ ಪ್ರಾಪ್ತಿಗೆ ಅನುಗುಣವಾದ ಉಪಾಸನೆಯ ಪರಿಪಾಕವನ್ನು ಉಂಟುಮಾಡಿಕೊಡುತ್ತೇನೆ. ಅದಕ್ಕೆ ವಿರೋಧವಾದುದನ್ನು ತೊಡೆದುಹಾಕುತ್ತೇನೆ. ಅತ್ಯರ್ಥಪ್ರಿಯತ್ವವೇ ಮುಂತಾದ ಭಾವವನ್ನು ನಾನೇ ಅವನಿಗೆ ಕೊಡುತ್ತೇನೆ–ಎಂಬುದು ಭಗವಂತನ ಭರವಸೆ.

**ಯಮೇವೈಷ ವೃಣುತೇ ತೇನ ಲಭ್ಯಃ** (ಕಠ ೨-೨೩ ಮುಂಡಕ ೩-೨-೩)

ಪರಮಾತ್ಮನು ಯಾರನ್ನು ವರಿಸುತ್ತಾನೆಯೋ ಅವನಿಗೇ ಪರಮಾತ್ಮನು ಸಿಕ್ಕುತ್ತಾನೆ ಎಂದು ಶ್ರುತಿಯು ಹೇಳುತ್ತದೆ.

**ತೇಷಾಂ ಸತತಯುಕ್ತಾನಾಂ । ಜ್ಞಾನದೀಪೇನ ಭಾಸ್ವತಾ** ಎಂದು ಭಗವಂತನೇ ಮುಂದೆ ಹೇಳುತ್ತಾನೆ. (ರಾ. ಭಾ.)

ನಿತ್ಯಯುಕ್ತಸ್ಯ = ನಿತ್ಯೋಪಾಯವುಳ್ಳ. **ಯೋಗಿನಃ** = ಪರಿಪೂರ್ಣ ಯೋಗವುಳ್ಳವನಿಗೆ, ನಿತ್ಯೋಪಾಯವನ್ನು ಹೊಂದಿರುವುದರಿಂದ ಯೋಗವನ್ನು ಪೂರ್ಣಗೊಳಿಸಿಕೊಂಡಿರುವವನಿಗೆ ; ನಿತ್ಯಯುಕ್ತಸ್ಯ ಮತ್ತು ಯೋಗಿನಃ ಎಂಬ ಎರಡು ಪದಗಳಿಗೂ ಒಂದೇ ಅರ್ಥ ಎಂಬ ಭಾವವನ್ನು ನಿವಾರಿಸಲು ಎರಡು ಪದಗಳಿಗೂ ಬೇರೆ-ಬೇರೆ ಅರ್ಥವನ್ನು ಹೇಳಿದೆ. (ಮ. ಭಾ.)

**ಓಂ ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥೧೫॥**

ನನ್ನನ್ನು ಸೇರಿ ಪರಮಸಂಸಿದ್ಧಿಯನ್ನು ಪಡೆದುಕೊಂಡ ಮಹಾತ್ಮರು ದುಃಖಕ್ಕೆ ನೆಲೆಯೂ ಅಶಾಶ್ವತವೂ ಆಗಿರುವ ಪುನರ್ಜನ್ಮವನ್ನು ಪಡೆಯುವುದಿಲ್ಲ.

* * *

(ಮರಣಪರ್ಯಂತವಾಗಿ ಶ್ರೀಕೃಷ್ಣನನ್ನು ಸತತವಾಗಿ ಸ್ಮರಿಸುತ್ತಾ ಅವಸಾನಕಾಲದಲ್ಲಿಯೂ ಅವನಲ್ಲಿಯೇ ನೆಟ್ಟ ಮನಸ್ಸುಳ್ಳವರು ಅವನ ಭಾವವನ್ನೇ ಹೊಂದುತ್ತಾರೆ ಅಥವಾ ಅವನನ್ನೇ ಸೇರುತ್ತಾರೆ. ಅಂತಹವರನ್ನು ಶ್ರೀಕೃಷ್ಣನು '**ಸಂಸಿದ್ಧಿಂ ಪರಮಾಂ ಗತಾಃ ಮಹಾತ್ಮಾನಃ**'

ಎನ್ನುತ್ತಾನೆ. ಸಿದ್ಧಿ ಎಂದರೆ ಆತ್ಮಸಿದ್ಧಿ ಅಥವಾ ಆತ್ಮದರ್ಶನ ಎಂದಾಗುತ್ತದೆ. ಸಂಸಿದ್ಧಿ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಸಮ್ಯಕ್ ಸಿದ್ಧಿಯನ್ನು ಪಡೆದವರು. ಯಾವುದೇ ಕಾರಣದಿಂದಲೂ ಆ ಸ್ಥಾನದಿಂದ ಚ್ಯುತರಾಗದವರು. ಇಷ್ಟೂ ಸಾಲದೆಂದು ಶ್ರೀಕೃಷ್ಣನು **ಪರಮಾಂ ಸಂಸಿದ್ಧಿಂ ಗತಾಃ** ಅತಿಶ್ರೇಷ್ಠವಾದ ಸಂಸಿದ್ಧಿಯನ್ನು ಪಡೆದವರು ಎನ್ನುತ್ತಾನೆ. ಗಂಗೆಯು ಸಮುದ್ರದಲ್ಲಿ ಐಕ್ಯವಾಗುವಂತೆ ಪರಮಾತ್ಮನಲ್ಲಿ ಸಂಪೂರ್ಣವಾಗಿ ಸೇರುವಿಕೆಯನ್ನು ಹೊಂದಿರತಕ್ಕವರು. ಇಂತಹವರನ್ನು ಶ್ರೀಕೃಷ್ಣನು **'ಮಹಾತ್ಮಾನಃ'** ಮಹಾತ್ಮರು ಎನ್ನುತ್ತಾನೆ. ನನ್ನನ್ನು ಸೇರಿದನಂತರ ಪುನರ್ಜನ್ಮವನ್ನು ಹೊಂದುವುದಿಲ್ಲ. ಸಮುದ್ರವನ್ನು ಸೇರಿದನಂತರ ಗಂಗೆಯ ನೀರನ್ನು ಪ್ರತ್ಯೇಕವಾಗಿ ತೆಗೆಯಲಾಗದಂತೆ–ಶ್ರೀಕೃಷ್ಣನನ್ನು ಹೊಂದಿದ ಯೋಗಿಗಳು ಪುನಃ ಜನ್ಮಪಡೆಯುವುದೇ ಇಲ್ಲ. ಪುನರ್ಜನ್ಮವು ಎಂತಹುದೆಂದು ಶ್ರೀಕೃಷ್ಣನು ವಿವರಿಸಿದ್ದಾನೆ. **ದುಃಖಾಲಯಮಶಾಶ್ವತಂ** ಪ್ರಪಂಚವು ದುಃಖಕ್ಕೆ ತವರುಮನೆ ಮತ್ತು ಕ್ಷಣಿಕವಾದುದು. ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ಮೂರು ಬಗೆಯ ದುಃಖಗಳು ಹುಟ್ಟಿದವರೆಲ್ಲರಿಗೂ ಒಂದಲ್ಲ ಒಂದು ಬಗೆಯಲ್ಲಿ ಇದ್ದೇ ಇರುತ್ತವೆ. 'ನನಗೆ ದುಃಖವೇ ಇಲ್ಲ' ಎಂದು ಹೇಳಿಕೊಳ್ಳುವವನು ಪ್ರಪಂಚದಲ್ಲಿ ಒಬ್ಬನೂ ಇಲ್ಲ. ಬಡವನಿಗೆ ಹೊಟ್ಟೆಯ ಚಿಂತೆಯಾದರೆ ಧನಿಕನಿಗೆ ಹಣವೆಲ್ಲಿ ಪೋಲಾಗುವುದೋ ಎಂಬ ಚಿಂತೆ. ಬಡವನು ಅನ್ನಕ್ಕಾಗಿ ಧಾವಂತಪಡುತ್ತಾನೆ. ಬಲ್ಲಿದನಿಗೆ ಅನ್ನವೇ ಬೇಕೆನ್ನಿಸುವುದಿಲ್ಲ. ಮಕ್ಕಳಿದ್ದರೂ ಚಿಂತೆ. ಮಕ್ಕಳಿಲ್ಲದಿದ್ದರೂ ಚಿಂತೆ. ರೋಗ-ರುಜಿನಾದಿಗಳ ಬಾಧೆ ಬೇರೆ. ಎಲ್ಲರೂ ತಾವು ಸುಖಿಗಳಾಗಿರುವೆವೆಂಬುದನ್ನು ತೋರಿಸಿಕೊಳ್ಳಲು ಇಚ್ಛಿಸುತ್ತಾರೆ. ಅಷ್ಟು ಹೊರತಾಗಿ ಪ್ರತಿಯೊಬ್ಬನಿಗೂ ಅವನ ಜೀವನದಲ್ಲಿ ಯಾವುದಾದರೊಂದು ದುಃಖವು ಇದ್ದೇ ಇರುತ್ತದೆ. ಇಷ್ಟು ದುಃಖವಿದ್ದರೂ ಕ್ಷಣಿಕವಾದ ಒಂದು ಸುಖಕ್ಕಾಗಿ ಮನುಷ್ಯನು ತನ್ನ ಜೀವನವನ್ನು ಮುಂದುವರಿಸುತ್ತಿರುತ್ತಾನೆ. ಅವನ ಆಶೆಯೇ ಅವನನ್ನು ಜೀವನದಲ್ಲಿ ಮುಂದುವರಿಯುವಂತೆ ಮಾಡುತ್ತದೆ. ಪ್ರಪಂಚದ ಜೀವನವು ದುಃಖಾಲಯವು ಮಾತ್ರವಲ್ಲದೇ ಅಶಾಶ್ವತವಾದುದು. ನೀರ ಮೇಲಣ ಗುಳ್ಳೆಯಂದದಿ ತೋರಿ ಅಡಗುವ ದೇಹ. ಆದರೆ ಮರಣ

ಶಯ್ಯೆಯಲ್ಲಿರುವವನೂ ಸಹ ತನ್ನ ಜೀವನವು ಅಶಾಶ್ವತವೆಂದು ಭಾವಿಸುವುದಿಲ್ಲ. ಇದೇ ಒಂದು ವೈಚಿತ್ರ್ಯ. ಕಾಲನೆಂಬ ರಾಕ್ಷಸನು ನಮ್ಮ ಆಯುಷ್ಯವನ್ನು ಪ್ರತಿಕ್ಷಣದಲ್ಲಿಯೂ ಭಕ್ಷಿಸುತ್ತಿರುತ್ತಾನೆ–ಎಂಬುದನ್ನು ಯಾರೂ ಭಾವಿಸುವುದಿಲ್ಲ. ಇಂತಹ ದುಃಖಾಲಯವೂ ಮತ್ತು ಅಶಾಶ್ವತವೂ ಆದ ಪುನರ್ಜನ್ಮಕ್ಕೆ ಮಹಾತ್ಮನಾದವನು ಪುನಃ ಕಾಲಿಕ್ಕುವುದಿಲ್ಲ.

o o o

**ಮಾಂ** = ಈಶ್ವರನಾದ ನನ್ನನ್ನು, **ಉಪೇತ್ಯ**= ಹೊಂದಿ, ನನ್ನ ಭಾವವನ್ನು ಪಡೆದು. **ದುಃಖಾಲಯಂ** = ಆಧ್ಯಾತ್ಮಿಕವೇ ಮುಂತಾದ ದುಃಖಗಳಿಗೆ ಆಶ್ರಯವಾಗಿರುವ, **ಅಶಾಶ್ವತಂ**= ಪುನರ್ಜನ್ಮವು ದುಃಖಗಳಿಗೆ ಮನೆಯಾಗಿರುವುದು ಮಾತ್ರವಲ್ಲದೇ ಅದರ ಸ್ವರೂಪವೂ ಸ್ಥಿರವಲ್ಲ ; ಅಸ್ಥಿರವಾದುದು. **ಮಹಾತ್ಮಾನಃ**=ಯತಿಗಳು. ಅವರು ಮೋಕ್ಷವೆಂಬ ಪರಮಗತಿಯನ್ನು ಹೊಂದುತ್ತಾರೆ. ನನ್ನನ್ನು ಯಾರು ಹೊಂದುವುದಿಲ್ಲವೋ ಅವರು ಮತ್ತೆ ಸಂಸಾರಕ್ಕೆ ಹಿಂದಿರುಗುತ್ತಾರೆ. (ಶಂ. ಭಾ.)

ಈ ಅಧ್ಯಾಯದ ಉಳಿದ ಶ್ಲೋಕಗಳು ಜ್ಞಾನಿಗೆ ಮತ್ತು ಕೈವಲ್ಯಕಾಮಿಗೆ ಪುನರಾವೃತ್ತಿಯು ಇಲ್ಲದಿರುವಿಕೆಯನ್ನೂ ಐಶ್ವರ್ಯಕಾಮಿಗಳಿಗೆ ಪುನರಾವೃತ್ತಿಯನ್ನೂ ಹೇಳುತ್ತವೆ. ಇವರು ನನ್ನನ್ನು ಹೊಂದಿದ ಮೇಲೆ ಎಲ್ಲ ದುಃಖಗಳಿಗೂ ನೆಲೆಮನೆಯಾಗಿ ಅಸ್ಥಿರವಾಗಿರುವ ಜನ್ಮವನ್ನು ಹೊಂದುವುದಿಲ್ಲ. ಏಕೆಂದರೆ : ಇವರು ಮಹಾತ್ಮರು ; ಮಹಾಮನಸ್ಸುಳ್ಳವರು. ಯಥಾವಸ್ಥಿತವಾದ ನನ್ನ ಸ್ವರೂಪವನ್ನರಿತವರಾಗಿ, ಅತ್ಯರ್ಥವಾಗಿ ನನ್ನನ್ನು ಪ್ರಿಯನನ್ನಾಗಿ ಹೊಂದಿರುವುದರಿಂದ ನನ್ನನ್ನು ಬಿಟ್ಟು ಆತ್ಮಧಾರಣೆಯಿಲ್ಲದವರಾಗಿ, ನನ್ನಲ್ಲಿ ದೃಢಮನಸ್ಸುಳ್ಳವರಾಗಿ ನನ್ನನ್ನೇ ಆಶ್ರಯಿಸಿ ನನ್ನನ್ನು ಉಪಾಸನೆಮಾಡಿ ಪರಮಸಂಸಿದ್ಧಿ (ಪರಮಪುರುಷಾರ್ಥ) ರೂಪನಾದ ನನ್ನನ್ನು ಪಡೆಯುವರು. (ರಾ. ಭಾ.)

ಇಲ್ಲಿ ಭಗವತ್ಪ್ರಾಪ್ತಿಯನ್ನು ಸ್ತೋತ್ರಮಾಡಿದೆ. **ಪರಮಾಂ ಸಂಸಿದ್ಧಿಂ ಗತಾಃ** ಎಂಬುದಕ್ಕೆ ಕಾರಣ **ತಸ್ಯಾಹಂ ಸುಲಭಃ**=ಅವನಿಗೆ ನಾನು ಸುಲಭ. ಆದುದರಿಂದಲೇ ಪರಮಗತಿಯನ್ನು ಪಡೆಯಲು ಸಾಧ್ಯವಾಯಿತು. ಪರಮಗತಿಯೇ ಬೇರೆ ; ಭಗವಲ್ಲಾಭವೇ ಬೇರೆ ಎಂದು ತಿಳಿಯಬಾರದು.

ಏಕೆಂದರೆ : ಭಗವತ್ಪ್ರಾಪ್ತಿಯನ್ನೇ ಮುಂದೆ ಸ್ತೋತ್ರಮಾಡಿದೆ. ಇಲ್ಲದಿದ್ದರೆ ಎರಡನ್ನೂ ಸ್ತೋತ್ರಮಾಡುವ ಪ್ರಸಂಗ ಬರುತ್ತಿತ್ತು. ಹಾಗಾದರೆ **ಮಾಮು ಪೇತ್ಯ** ಎಂದು ಹೇಳಿ **ಸಂಸಿದ್ಧಿಂ ಪರಮಾಂ ಗತಾಃ** ಎಂದು ಪ್ರತ್ಯೇಕವಾಗಿ ಹೇಳಲು ಕಾರಣವೇನೆಂದರೆ : ಯಾರು ನನ್ನನ್ನು ಹೊಂದುತ್ತಾರೆಯೋ ಅವರು ಮೋಕ್ಷವೆಂಬ ಪರಮಸಿದ್ಧಿಯನ್ನು ಹೊಂದಿದವರು ಎಂದು ಅರ್ಥ.

(ಮ. ಭಾ.)

**ಓಂ ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ॥೧೬॥**

ಅರ್ಜುನ! ಬ್ರಹ್ಮಲೋಕದವರೆಗೂ ಇರುವ ಲೋಕಗಳೆಲ್ಲವೂ ಪುನರಾವೃತ್ತಿಯುಳ್ಳವುಗಳು. ಆದರೆ ಕೌಂತೇಯ! ನನ್ನನ್ನು ಸೇರಿಬಿಟ್ಟರೆ ಪುನರ್ಜನ್ಮವಿಲ್ಲ.

* * *

(ಬ್ರಹ್ಮಭುವನವೆಂದರೆ ಬ್ರಹ್ಮಲೋಕ, ಬ್ರಹ್ಮದೇವರ ಲೋಕ. ಆ ಲೋಕವೇ ದಿವ್ಯಲೋಕಗಳಲ್ಲಿ ಪರಮೋನ್ನತಸ್ಥಾನದಲ್ಲಿರುವುದು. ಭೂ ಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ–ಇವುಗಳು ಕಳೆದನಂತರ ಸತ್ಯಲೋಕವು ಸಿಕ್ಕುತ್ತದೆ. ನಮಗೆ ಈ ಲೋಕಗಳ ಜ್ಞಾನವಿಲ್ಲದಿದ್ದರೂ ಸಂಧ್ಯಾವಂದನೆಯ ಸಮಯದಲ್ಲಿ ಪ್ರಾಣಾಯಾಮಮಾಡುವಾಗ ನಾವು ಈ ಏಳು ಲೋಕಗಳನ್ನೂ ಉಚ್ಚರಿ ಸುತ್ತಲೇ ಇರುತ್ತೇವೆ. ನಮ್ಮ ಶರೀರದಲ್ಲಿಯೇ ಹದಿನಾಲ್ಕು ಲೋಕಗಳೂ ಇವೆಯೆಂಬುದು ಬೇರೇ ಪ್ರಕರಣ. ಇಲ್ಲಿ ಶ್ರೀಕೃಷ್ಣನು ಬ್ರಹ್ಮಲೋಕದವರೆಗೆ ಇರುವ ಎಲ್ಲ ಲೋಕಗಳೂ ಪುನರಾವೃತ್ತಿಯನ್ನು ಹೊಂದುತ್ತವೆ ಎಂದಿದ್ದಾನೆ. ಲೋಕಗಳ ಪುನರಾವೃತ್ತಿಯೆಂದರೆ ಅಲ್ಲಿರುವ ಪ್ರಾಣಿಗಳ ಪುನರಾವೃತ್ತಿ. ಭೂಲೋಕದ ಪ್ರಾಣಿಗಳು ಅವುಗಳ ಪಾಪ-ಪುಣ್ಯಗಳಿಗೆ ತಕ್ಕಂತೆ ಮೇಲಿನ ಲೋಕಗಳಿಗೆ ಹೋಗುತ್ತವೆ. ಅಲ್ಲಿ ಪುಣ್ಯವು ಮುಗಿಯುವವರೆಗೂ ಇದ್ದು ಪುನಃ ಭೂಲೋಕದಲ್ಲಿ ಜನ್ಮತಾಳುತ್ತವೆ. ಭೂಲೋಕದಲ್ಲಲ್ಲದೇ ಬೇರೆ ಯಾವ ಲೋಕದಲ್ಲಾದರೂ ಅವು ಪುನಃ ಹುಟ್ಟಬಹುದು. ಅರ್ಥಾತ್ ಪುಣ್ಯ ಮಾಡಿದವರಿಗೂ ಪುನರ್ಜನ್ಮವು ತಪ್ಪಿದ್ದಲ್ಲ. ಹಾಗಾದರೆ ಪುನರ್ಜನ್ಮವನ್ನು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲವೇ? ಎಂದರೆ–ಸಾಧ್ಯ. 'ಶ್ರೀಕೃಷ್ಣನನ್ನು ಸೇರಿ

ಬಿಟ್ಟರೆ ಪುನರ್ಜನ್ಮವಿಲ್ಲ.' ಭಗವಂತನನ್ನು ಯಾರು ಹೊಂದುವುದಿಲ್ಲವೋ ಅವರು ಯಾವುದೇ ಉತ್ತಮಲೋಕದಲ್ಲಿದ್ದರೂ ಅವರಿಗೆ ಪುನರಾವೃತ್ತಿ ಯುಂಟು–ಎಂಬುದನ್ನು ಈ ಶ್ಲೋಕದಲ್ಲಿ ಭಗವಂತನು ಪ್ರತಿಪಾದಿಸುತ್ತಾನೆ.

ಅವನು ಅಚ್ಯುತ. ಅವನ ಸ್ಥಾನವೂ ಅಚ್ಯುತವಾದುದು. ಆದುದರಿಂದ ಆ ಪದದಲ್ಲಿ ನೆಲೆಗೊಂಡವರಿಗೂ ಚ್ಯುತಿಯಿಲ್ಲ. ಮರುಹುಟ್ಟಿನ ಭಯವಿಲ್ಲ. ಅಲ್ಲಿಗೆ ಜ್ಞಾನಿಗಳಿಗೆ ಮಾತ್ರವೇ ಹೋಗಲು ಸಾಧ್ಯ. ಅವರು ಜ್ಞಾನಾಗ್ನಿಯಿಂದ ಕರ್ಮಬೀಜಗಳನ್ನು ಸುಟ್ಟುಹಾಕಿಬಿಟ್ಟಿರುವುದರಿಂದ ಪುನರ್ಜನ್ಮವಿಲ್ಲ. ಪರಮಾನಂದಸುಖವನ್ನು ಅನುಭವಿಸಿದ ಅವರು ದುಃಖಮಯವಾದ ಸಂಸಾರಕ್ಕೆ ಏಕೆ ಮರಳಿಯಾರು? ತನ್ನ ಅಂಶವಾಗಿಯೇ ಇದ್ದು ಅತ್ಯಂತಪ್ರಿಯನಾಗಿರುವ ಜೀವನು ತನ್ನನ್ನು ಸೇರಿರುವಾಗ ಭಕ್ತಪ್ರಿಯನಾದ ಭಗವಂತನೂ ಅವನನ್ನು ಸಂಸಾರಕ್ಕೆ ತಳ್ಳುವ ಪ್ರಸಂಗವಿಲ್ಲ.

ಸಾಧಕನು ಕೇವಲ ಭೂಲೋಕವನ್ನು ಮಾತ್ರವಲ್ಲದೇ ಮೇಲಿನ ಪುಣ್ಯ ಲೋಕಗಳನ್ನೂ ಸಹ **ದುಃಖಾಲಯಮಶಾಶ್ವತಂ** ಎಂದು ಭಾವಿಸಬೇಕು. ನಮ್ಮ ಲೋಕದಲ್ಲಿರುವಂತೆ ಅಲ್ಲಿ ದುಃಖವಿರುವುದಿಲ್ಲವೆಂಬುದು ನಿಜ. ಆದರೆ ಅಲ್ಲಿಯೂ ಸಹ ಭಯವು ತಪ್ಪಿದ್ದಲ್ಲ. ಪುನರ್ಜನ್ಮದ ಭಯ, ಅಸುರಾದಿಗಳು ತಮ್ಮನ್ನು ಆಕ್ರಮಿಸುವರು ಎಂಬ ಭಯ. ಪುಣ್ಯವು ಕಳೆದು ಕೆಳಗೆ ಬೀಳುವುದೇ ಒಂದು ಮಹಾದುಃಖ. ಆದುದರಿಂದ ಸರ್ವದಾ ಪರಮಾತ್ಮನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿರಬೇಕು. ಎಲ್ಲೆಲ್ಲಿಯೂ ಪರಮಾತ್ಮನನ್ನೇ ಕಾಣುವ ಹುಚ್ಚನ್ನು ಬೆಳೆಸಿಕೊಳ್ಳಬೇಕು. ಪರಮಾತ್ಮನ ಹುಚ್ಚು ಹಿಡಿದವನಿಗೆ ಮಾತ್ರವೇ ಪರಮಾತ್ಮನು ಸಿಕ್ಕುತ್ತಾನೆ. ಆಸೆ-ಆಕಾಂಕ್ಷೆಗಳಿಂದ ತುಂಬಿರುವವನಿಗೆ ಪರಮಾತ್ಮನು ಖಂಡಿತವಾಗಿಯೂ ಸಿಕ್ಕುವುದಿಲ್ಲ. ಪುನರ್ಜನ್ಮದ ವಿಷಯವನ್ನು ಬೃಹದಾರಣ್ಯಕದಲ್ಲಿ ಸ್ಪಷ್ಟವಾಗಿ ಹೇಳಿದೆ :

**ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ ।**
**ತಸ್ಮಾಲ್ಲೋಕಾತ್ಪುನರೈತ್ಯಸ್ಮೈ ಲೋಕಾಯ ಕರ್ಮಣೇ ॥೪-೪-೬॥**

ಸಂಚರಿಸುತ್ತಿರುವ ಆತ್ಮನು ಆಸಕ್ತನಾಗಿ ಎಲ್ಲಿ ಅವನ ಲಿಂಗಶರೀರವು ಅಥವಾ ಮನಸ್ಸು ಆಸಕ್ತವಾಗಿದೆಯೋ ಅದನ್ನೇ ಕರ್ಮದೊಂದಿಗೆ ಸೇರುತ್ತಾನೆ. ಇಹಲೋಕದಲ್ಲಿ ಯಾವ ಯಾವ ಕರ್ಮವನ್ನು ಮಾಡುವನೋ ಅದರ ಅಂತ

ವನ್ನು ಪರಲೋಕದಲ್ಲಿ ಅನುಭವಿಸಿಕೊಂಡು ಅಲ್ಲಿಂದ ಪುನಃ ಈ ಲೋಕಕ್ಕೆ ನೂತನಕರ್ಮಕ್ಕಾಗಿ ಹಿಂದಿರುಗುತ್ತಾನೆ.

o o o

**ಭುವನ** ಎಂದರೆ ಪ್ರಾಣಿಗಳು ಉತ್ಪನ್ನರಾಗಿ ವಾಸಮಾಡುವ ಜಾಗ ; ಲೋಕ. **ಬ್ರಹ್ಮಭುವನ** ಎಂದರೆ ಬ್ರಹ್ಮಲೋಕ. **ಆಬ್ರಹ್ಮಭುವನಾತ್** ಎಂದರೆ ಬ್ರಹ್ಮಲೋಕಪರ್ಯಂತವಾಗಿ ಎಂದರೆ ಬ್ರಹ್ಮಲೋಕವನ್ನು ಸೇರಿಸಿಕೊಂಡು ಎಲ್ಲ ಲೋಕಗಳೂ ಪುನರಾವೃತ್ತಿಯನ್ನು ಹೊಂದುತ್ತವೆ. ಆದರೆ ವಾಸುದೇವನೊಬ್ಬನನ್ನು ಹೊಂದಿಬಿಟ್ಟರೆ ಪುನರ್ಜನ್ಮವಿಲ್ಲ. (ಶಂ. ಭಾ.)

ಬ್ರಹ್ಮಾಂಡದ ಒಳಗಿರುವ ಬ್ರಹ್ಮಲೋಕದವರೆಗಿನ ಎಲ್ಲ ಲೋಕಗಳೂ ನಾಶಹೊಂದತಕ್ಕುವುಗಳು. ಆದುದರಿಂದ ಆ ಐಶ್ವರ್ಯಗತಿಯನ್ನು ಹೊಂದಿದವರು–ಅವರು ಹೊಂದಿರುವ ಸ್ಥಾನವೇ ನಾಶಹೊಂದುವುದರಿಂದ–ಪುನರಾವೃತ್ತಿಯನ್ನು ಹೊಂದಲೇಬೇಕು. ಆದರೆ ಸರ್ವಜ್ಞನೂ, ಸತ್ಯಸಂಕಲ್ಪನೂ, ಎಲ್ಲ ಜಗತ್ತುಗಳ ಉತ್ಪತ್ತಿ-ಸ್ಥಿತಿ-ಲಯಗಳ ಲೀಲೆಯನ್ನು ಆಡುವವನೂ, ಪರಮಕಾರುಣಿಕನೂ, ಸದಾ ಏಕರೂಪನೂ ಆದ ನನ್ನನ್ನು ಹೊಂದಿದವರಿಗೆ ವಿನಾಶಪ್ರಸಂಗವಿಲ್ಲ. ಆದುದರಿಂದ ಅವರಿಗೆ ಪುನರ್ಜನ್ಮವಿಲ್ಲ. (ರಾ. ಭಾ.)

ಮಹಾಮೇರುವಿನಲ್ಲಿರುವ ಬ್ರಹ್ಮಲೋಕವನ್ನಾರಂಭಿಸಿಯೇ ಪುನರಾವೃತ್ತಿಯಿಲ್ಲ. ನಾರಾಯಣಗೋಪಾಲಕಲ್ಪದಲ್ಲಿ ಹೇಳಿರುವಂತೆ–**ಆಮೇರುಸದನಾತ್ ಆಜನಾನ್ನ ಜನಿರ್ಭುವಿ ।** ಮೇರುವಿನಲ್ಲಿರುವ ಬ್ರಹ್ಮಲೋಕವನ್ನಾರಂಭಿಸಿ ಮತ್ತು ಜನಲೋಕವನ್ನಾರಂಭಿಸಿದ ಲೋಕಗಳನ್ನು ತಲುಪಿದವರಿಗೆ ಪುನರ್ಜನ್ಮವಿಲ್ಲ. ಮಹಾಮೇರುವಿನಲ್ಲಿರುವ ಬ್ರಹ್ಮಲೋಕವನ್ನು ಮತ್ತು ಜನಲೋಕವನ್ನು ಆರಂಭಿಸಿ ಮೇಲಿನ ಲೋಕಗಳಲ್ಲಿ ಇರುವವರಿಗೂ ಪುನರಾವೃತ್ತಿಯಿಲ್ಲ. ಆದುದರಿಂದ ಭಗವಂತನನ್ನು ಹೊಂದಿದರೆ ಪುನರ್ಜನ್ಮವಿಲ್ಲ ಎಂಬುದನ್ನು ಪ್ರತ್ಯೇಕವಾಗಿ ಹೇಳಿರುವುದೇಕೆಂದರೆ : ಬ್ರಹ್ಮಲೋಕ-ಜನಲೋಕಗಳಿಗಿಂತಲೂ ಕೆಳಗಿನ ಲೋಕಗಳು ಪುನರಾವೃತ್ತಿಹೊಂದುತ್ತವೆ. ಆದರೆ ಮೇಲೆ ಹೇಳಿದ ಲೋಕಗಳಲ್ಲಿ ಇರುವ ನನ್ನನ್ನು ಆಶ್ರಯಿಸಿದವರಿಗೆ ಪುನರ್ಜನ್ಮವಿಲ್ಲ–ಎಂಬುದನ್ನು ತಿಳಿಸುವುದಕ್ಕಾಗಿ.

**ತೇಷು ಲೋಕೇಷು ಸ್ಥಿತಂ ಮಾಮುಪೇತ್ಯ ಅವಸ್ಥಿತಸ್ಯ ಪುನರ್ಜನ್ಮ ನ ವಿದ್ಯತೇ ।** (ಮ. ಭಾ.)

**ಓಂ ಸಹಸ್ರಯುಗಪರ್ಯನ್ತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾನ್ತಾಂ ತೇಽಹೋರಾತ್ರವಿದೋ ಜನಾಃ ॥೧೭॥**

ಹಗಲು ಮತ್ತು ರಾತ್ರಿಗಳ ವಿವೇಚನೆಯನ್ನು ಬಲ್ಲ ವಿದ್ವಾಂಸರು– ಬ್ರಹ್ಮನ ಹಗಲು ಸಾವಿರಯುಗಗಳ ಕಾಲದವರೆಗಿರುವುದೆಂಬುದನ್ನೂ, ರಾತ್ರಿಯೂ ಸಹ ಸಾವಿರಯುಗಗಳ ಕಾಲದವರೆಗಿರುವುದೆಂಬುದನ್ನೂ ತಿಳಿದಿರುತ್ತಾರೆ.

* * *

(ಇಲ್ಲಿ ಅಹೋರಾತ್ರವಿದರು ಎಂದರೆ ಕಾಲದ ಪರಿಮಿತಿಯನ್ನು ತಿಳಿದವರು ಎಂದರ್ಥ. ನಮಗೆ ತಿಳಿದಿರುವಂತೆಯೇ ಈ ಭೂಮಂಡಲದಲ್ಲಿ ಅಹಸ್ಸಿನ ಮತ್ತು ರಾತ್ರಿಯ ಪರಿಮಿತಿಯು ದೇಶ-ದೇಶಕ್ಕೂ ವ್ಯತ್ಯಾಸವಾಗಿರುತ್ತದೆ. ಭೂಮಂಡಲದಲ್ಲಿಯೇ ಉತ್ತರಧ್ರುವದ ಸಮೀಪದಲ್ಲಿ ಆರು ತಿಂಗಳು ರಾತ್ರಿಯಾಗಿಯೂ ಆರು ತಿಂಗಳೂ ಹಗಲಾಗಿಯೂ ಇರುತ್ತದೆ. ಆದರೆ ಭೂಮಂಡಲದಲ್ಲಿ ವಾಸಿಸುವವರ ಆಯುಷ್ಯವು ಭರತಖಂಡದಲ್ಲಾಗುತ್ತಿರುವಂತೆ ಹನ್ನೆರಡು ಘಂಟೆ ಹಗಲು, ಹನ್ನೆರಡು ಘಂಟೆ ರಾತ್ರಿ–ಎಂಬುದಾಗಿ ನಿರ್ಣಯಿಸಲ್ಪಟ್ಟಿದೆ. ಈ ಕಾಲಮಾನವು ಒಂಬತ್ತು ವಿಧವಾಗಿದೆ.

**ಬ್ರಾಹ್ಮಂ ದಿವ್ಯಂ ತಥಾ ಪಿತ್ರ್ಯಂ ಪ್ರಾಜಾಪತ್ಯಂ ಗುರೋಸ್ತಥಾ ।**
**ಸೌರಂ ಚ ಸಾವನಂ ಚಾನ್ದ್ರಮಾರ್ಕ್ಷಂ ಮಾನಾನಿ ವೈ ನವ ॥**

ಬ್ರಾಹ್ಮ, ದಿವ್ಯ, ಪಿತ್ರ್ಯ, ಪ್ರಾಜಾಪತ್ಯ, ಬಾರ್ಹಸ್ಪತ್ಯ, ಸೌರ, ಸಾವನ, ಚಾಂದ್ರ ಮತ್ತು ಆರ್ಕ್ಷ–ಇವೇ ಒಂಬತ್ತು ರೀತಿಯ ಕಾಲಮಾನಗಳು. ಇವುಗಳಲ್ಲಿ ಮನುಷ್ಯಲೋಕದ ವ್ಯವಹಾರಕ್ಕೆ ಕೊನೆಯ ನಾಲ್ಕು ಕಾಲಮಾನಗಳು ಮಾತ್ರವೇ ಸಂಬಂಧಪಟ್ಟಿವೆ. ನಾವು ಮೊದಲು ಮಾನವಕಾಲಮಾನದಿಂದ ವಿವರಣೆಯನ್ನು ಕೊಟ್ಟರೆ ಬ್ರಹ್ಮನ ಹಗಲು-ರಾತ್ರಿಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು.

**ಆರ್ಕ್ಷಸಂವತ್ಸರ :** ಅಶ್ವಿನ್ಯಾದಿ ಒಂದೊಂದು ನಕ್ಷತ್ರದ ಕಾಲಕ್ಕೂ ಒಂದು ಆರ್ಕ್ಷದಿನವೆಂದೂ, ಈ ರೀತಿ ಇಪ್ಪತ್ತೇಳು ನಕ್ಷತ್ರಗಳ ಕಾಲಕ್ಕೆ ಒಂದು

ತಿಂಗಳೆಂದೂ, ಇಂತಹ ಹನ್ನೆರಡು ತಿಂಗಳುಗಳಿಗೆ ಒಂದು ಆರ್ಕ್ಷಸಂವತ್ಸರ ವೆಂದೂ ಶಾಸ್ತ್ರದಲ್ಲಿ ಉಕ್ತವಾಗಿದೆ. ಪ್ರತಿತಿಂಗಳ ಹುಣ್ಣಿಮೆಯ ದಿನದ ನಕ್ಷತ್ರದ ಹೆಸರೇ ಆಯಾ ತಿಂಗಳಿಗೂ ಇರುತ್ತದೆ. ಚಿತ್ರಾನಕ್ಷತ್ರದ ಸಂಬಂಧದಿಂದ ಚೈತ್ರಮಾಸವೆಂದೂ, ವಿಶಾಖಾನಕ್ಷತ್ರವು ಹುಣ್ಣಿಮೆಯಂದು ಸಾಮಾನ್ಯವಾಗಿ ಇರುವುದರಿಂದ ವೈಶಾಖಮಾಸವೆಂದೂ ಹೆಸರಿರುತ್ತದೆ.

**ಚಾಂದ್ರಸಂವತ್ಸರ :** ಶುಕ್ಲಪ್ರತಿಪತ್ತು ಮೊದಲುಗೊಂಡು ಮೂವತ್ತು ತಿಥಿಗಳಿಗೆ ಒಂದು ಚಾಂದ್ರಮಾಸ. ಹೀಗೆ ಹನ್ನೆರಡು ತಿಂಗಳಿಗೆ ಒಂದು ಚಾಂದ್ರಸಂವತ್ಸರ. ಚಂದ್ರನು ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳಲ್ಲಿ (ಹನ್ನೆರಡು ರಾಶಿಗಳಲ್ಲಿ) ಸಂಚರಿಸುವಾಗ ತಿಥಿಗಳ ಕಾಲದ ಹೆಚ್ಚು-ಕಡಿಮೆಯಿಂದ ಮೂವತ್ತು ದಿವಸಗಳಿಗಿಂತಲೂ ಕಡಿಮೆಯಾಗುತ್ತದೆ. ಸೌರಮಾನದ ಗಣನೆಗಿಂತಲೂ ಕಡಿಮೆಯಾಗಬಹುದಾದುದರಿಂದ ಸುಮಾರು ಮೂರು ವರ್ಷಗಳಿಗೊಮ್ಮೆ ಒಂದು ತಿಂಗಳು ಅಧಿಕಮಾಸವೆಂದು ಪರಿಗಣಿಸಲ್ಪಟ್ಟು ಸೌರಮಾನಕ್ಕೆ ಅನುಗುಣವಾಗಿ ಸರಿಹೊಂದುವುದು.

**ಸಾವನಸಂವತ್ಸರ :** ಸೂರ್ಯೋದಯವಾದಾಗಿನಿಂದ ಮರುದಿನ ಸೂರ್ಯೋದಯದವರೆಗೆ ಒಂದು ಸಾವನದಿನವಾಗುವುದು. ಹೀಗೆ ಮೂವತ್ತು ದಿವಸಗಳಿಗೆ ಒಂದು ಸಾವನಮಾಸವೂ, ಮುನ್ನೂರ ಅರುವತ್ತು ದಿವಸಗಳಿಗೆ ಒಂದು ಸಾವನಸಂವತ್ಸರವೂ ಆಗುವುದು.

**ಸೌರಸಂವತ್ಸರ :** ಸಾಮಾನ್ಯವಾಗಿ ಒಂದು ಅಹೋರಾತ್ರವು ಸೌರದಿನ ವೆನಿಸುವುದು. ಹೀಗೆ ಒಂದು ವರ್ಷಕ್ಕೆ ಮುನ್ನೂರ ಅರುವತ್ತು ದಿವಸ ಗಳಾಗುವುವು. ಆದರೆ ಸೂರ್ಯನು ಇಪ್ಪತ್ತೇಳು ನಕ್ಷತ್ರಗಳಲ್ಲಿ (ಹನ್ನೆರಡು ರಾಶಿಗಳಲ್ಲಿ) ಸಂಚರಿಸುವ ಕಾಲದಲ್ಲಿ ಸ್ವಲ್ಪ ಹೆಚ್ಚು-ಕಡಿಮೆಯಾಗಿ ವರ್ಷಕ್ಕೆ ೩೬೫ ದಿವಸಗಳೂ, ೬ ಘಂಟೆಗಳೂ, ಕೆಲವು ನಿಮಿಷಗಳೂ ಆಗುವುವು. ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಿದಾಗ ಮೇಷಮಾಸ ಮೊದಲು ಗೊಂಡು ವರ್ಷವು ಪ್ರಾರಂಭವಾಗುವುದು.

**ಬಾರ್ಹಸ್ಪತ್ಯಸಂವತ್ಸರ :** ಬೃಹಸ್ಪತಿಯು ಒಂದೊಂದು ರಾಶಿಯಲ್ಲೂ ಇರುವ ಕಾಲಕ್ಕೆ ಬಾರ್ಹಸ್ಪತ್ಯಾಬ್ದವೆಂದು ಹೆಸರು. ಸರಿಯಾದ ಚಾರದಲ್ಲಿ ದ್ದರೆ ಬೃಹಸ್ಪತಿಯು ಒಂದು ರಾಶಿಯಲ್ಲಿ ಒಂದು ವರ್ಷ ಇರುತ್ತಾನೆ. ಅತಿ

ಚಾರ ಮತ್ತು ವಕ್ರಚಾರಗಳಿಂದ ಸ್ವಲ್ಪ ಹೆಚ್ಚು-ಕಡಿಮೆ ಆಗುವುದೂ ಉಂಟು. ಸೌರಮಾನ ದಿನಗಣನೆಯಂತೆ ಬೃಹಸ್ಪತಿಯು ಹನ್ನೆರಡು ರಾಶಿಗಳಲ್ಲೂ ಸಂಚರಿಸಲು ೪೩೩೨ ದಿವಸಗಳು ಬೇಕಾಗುತ್ತವೆ.

**ಪ್ರಾಜಾಪತ್ಯಸಂವತ್ಸರ :** (ಮನ್ವಂತರಮಾನ) ಬ್ರಹ್ಮನ ಒಂದು ಹಗಲಿನ ಹದಿನಾಲ್ಕನೆಯ ಒಂದು ಭಾಗ. (ಒಬ್ಬ ಮನುವಿನ ಕಾಲ)

ದೇವವರ್ಷಗಳು ೭,೫೨,೦೦೦. ಮಾನುಷವರ್ಷಗಳು ೩೦,೬೭,೨೦,೦೦೦ ; ಮಾನುಷಮಾನದಂತೆ ಸಂಧ್ಯಾ-ಸಂಧ್ಯಾಂಶಗಳಲ್ಲಿ ಕಳೆದುಹೋಗುವ ಅಧಿಕಕಾಲವೂ ಸೇರಿ ೩೦,೮೫,೭೧,೪೨೮ ಮಾನುಷ ವರ್ಷಗಳಾಗುತ್ತವೆ.

**ಪಿತೃಸಂವತ್ಸರ :** ಮನುಷ್ಯರ ಒಂದು ತಿಂಗಳು ಪಿತೃದೇವತೆಗಳಿಗೆ ಒಂದು ಅಹೋರಾತ್ರ (ಒಂದು ದಿನ) ವಾಗುವುದು. ಶುಕ್ಲಪಕ್ಷದ ಹಗಲು ಕೃಷ್ಣಪಕ್ಷದ ರಾತ್ರಿ. ಮನುಷ್ಯರ ೩೬೦ ತಿಂಗಳು ಅಥವಾ ೧೦,೮೦೦ ದಿವಸಗಳು ಪಿತೃಗಳಿಗೆ ಒಂದು ವರ್ಷ.

ಮರಣಾನಂತರದಲ್ಲಿ ಮಾಸಿಕಗಳನ್ನು ಮಾಡುವುದು ಮತ್ತು ಪ್ರತಿ ಅಮಾವಾಸ್ಯೆಯಲ್ಲಿಯೂ ತರ್ಪಣವನ್ನು ಕೊಡುವುದು ಇದರಿಂದಲೇ ಆಗಿದೆ. ನಮಗೆ ಒಂದು ಮಾಸವಾದರೆ ಪಿತೃಗಳಿಗೆ ಅದು ಒಂದು ದಿನವಾಗುವುದ ರಿಂದ ಪ್ರತಿನಿತ್ಯವೂ ಅವರನ್ನು ಶ್ರಾದ್ಧಮೂಲಕವಾಗಿ ಪೂಜಿಸಿದಂತೆಯೇ ಆಗುತ್ತದೆ.

**ದಿವ್ಯಸಂವತ್ಸರ :** ಮನುಷ್ಯನ ೩೬೫ ದಿವಸಗಳು. ದೇವತೆಗಳಿಗೆ ಒಂದು ದಿನ. ಉತ್ತರಾಯಣ ಹಗಲು. ದಕ್ಷಿಣಾಯನ ರಾತ್ರಿ. ೩೬೦ ಮಾನುಷವರ್ಷಗಳು ದೇವತೆಗಳಿಗೆ ಒಂದು ವರ್ಷ.

ರಥೋತ್ಸವಾದಿಗಳನ್ನೂ ಹಬ್ಬ-ಹರಿದಿನಗಳನ್ನೂ ವರ್ಷಕ್ಕೊಮ್ಮೆ ಆಚ ರಿಸಿ ದೇವತೆಗಳನ್ನು ಆರಾಧಿಸುತ್ತೇವೆ. ಮೇಲಾಗಿ ರಥೋತ್ಸವಾದಿಗಳೆಲ್ಲವೂ ದೇವತೆಗಳಿಗೆ ಹಗಲಾದ ಉತ್ತರಾಯಣದಲ್ಲೇ ನಡೆಯುತ್ತವೆ. ನಮ್ಮ ದೃಷ್ಟಿಯಿಂದ ಇದು ವರ್ಷಕ್ಕೊಮ್ಮೆಯಾದರೂ ದೇವತೆಗಳ ಕಾಲಮಾನದ ಪ್ರಕಾರ ಅವರಿಗೆ ಅನುದಿನವೂ ಪೂಜೆಯು ಸಂದಂತೆ ಆಗುತ್ತದೆ.

**ಬ್ರಾಹ್ಮಸಂವತ್ಸರ :** ದೇವತೆಗಳ ಒಂದು ಸಾವಿರ ಚತುರ್ಯುಗಗಳು.

ಬ್ರಹ್ಮನಿಗೆ ಒಂದು ಹಗಲು. ದೇವವರ್ಷಗಳು ೧,೨೦,೦೦,೦೦೦, ಮಾನುಷವರ್ಷಗಳು ೪,೩೨,೦೦,೦೦೦.

ಬ್ರಹ್ಮನ ರಾತ್ರಿಮಾನ : ಒಂದು ಸಾವಿರ ಚತುರ್ಯುಗಗಳು. ದೇವವರ್ಷಗಳು ೧,೨೦,೦೦,೦೦೦, ಮಾನುಷವರ್ಷಗಳು ೪,೩೨,೦೦,೦೦,೦೦೦.

ಬ್ರಹ್ಮನ ಒಂದು ದಿವಸದ ಅಹೋರಾತ್ರಮಾನ : ದೇವವರ್ಷಗಳು ೨,೪೦,೦೦,೦೦೦, ಮಾನುಷವರ್ಷಗಳು ೮,೬೪,೦೦,೦೦,೦೦೦.

ಬ್ರಹ್ಮನ ಒಂದು ವರ್ಷಮಾನ : (ಬ್ರಾಹ್ಮಸಂವತ್ಸರ) ದೇವವರ್ಷಗಳು ೮,೬೪,೦೦,೦೦,೦೦೦. ಮಾನುಷವರ್ಷಗಳು ೩೧,೧೦,೪೦,೦೦,೦೦, ೦೦೦.

ಬ್ರಹ್ಮನ ಆಯುಷ್ಯ : (ನೂರು ವರ್ಷಗಳು)

ದೇವಮಾನದಲ್ಲಿ ೮,೬೪,೦೦,೦೦,೦೦,೦೦೦ ವರ್ಷಗಳು

ಮನುಷ್ಯಮಾನದಲ್ಲಿ ೩೧,೧೦,೪೦,೦೦,೦೦,೦೦,೦೦೦ ವರ್ಷಗಳು

ಬ್ರಹ್ಮನ ಆಯುಸ್ಸಿಗೆ ಪರವೆಂದೂ ಹೆಸರು.

**ಚತುರ್ಯುಗಮಾನ**

| ದೇವವರ್ಷಗಳು : | | ಮಾನುಷವರ್ಷಗಳು : |
|---|---|---|
| ೪,೮೦೦ | ಕೃತಯುಗ | ೧೭,೨೮,೦೦೦ |
| ೩,೬೦೦ | ತ್ರೇತಾಯುಗ | ೧೨,೯೬,೦೦೦ |
| ೨,೪೦೦ | ದ್ವಾಪರಯುಗ | ೮,೬೪,೦೦೦ |
| ೧,೨೦೦ | ಕಲಿಯುಗ | ೪,೩೨,೦೦೦ |
| ೧೨,೦೦೦ | | ೪೩,೨೦,೦೦೦ |

ಈ ಯುಗಮಾನಗಳ 1/6 ಭಾಗವು ಸಂಧ್ಯಾ-ಸಂಧ್ಯಾಂಶಗಳು. ಇದನ್ನು ಕಳೆದರೆ ೪,೦೦೦ ೩,೦೦೦ ೨,೦೦೦ ೧,೦೦೦ ದೇವವರ್ಷಗಳು ಚತುರ್ಯುಗಮಾನವಾಗುತ್ತದೆ.

ಹೀಗೆ ಬ್ರಹ್ಮನಿಗೂ ಕೂಡ ಕಾಲಪರಿಚ್ಛೇದವು ಇರುವುದರಿಂದ ಅವನ ಲೋಕಗಳಲ್ಲಿರುವವರಿಗೂ ಕೂಡ ಪುನರಾವೃತ್ತಿಯುಂಟು.)

o o o

**ಬ್ರಹ್ಮಣಃ** = ಬ್ರಹ್ಮಪ್ರಜಾಪತಿಯ ಎಂದರೆ ವಿರಾಟ್ಪುರುಷನ, **ಅಹೋರಾತ್ರವಿದಃ**= ಅಹೋರಾತ್ರಿಗಳ ತತ್ತ್ವವನ್ನು ಎಂದರೆ ಕಾಲದ ಪರಿಮಾಣವನ್ನು ಬಲ್ಲ ಯೋಗಿಗಳು. ಹೀಗೆ ಬ್ರಹ್ಮನಿಗೂ ಕಾಲಪರಿಚ್ಛೇದ ವಿರುವುದರಿಂದ ಬ್ರಹ್ಮಲೋಕಸಹಿತವಾದ ಉಳಿದ ಲೋಕಗಳಿಗೂ ಪುನರಾ ವೃತ್ತಿಯುಂಟು. (ಶಂ. ಭಾ.)

ಮನುಷ್ಯನಿಂದ ಆರಂಭಿಸಿ ಚತುರ್ಮುಖನವರೆಗೆ ಇರುವ ಜೀವಿಗಳಿಗೆ ನನ್ನ ಸಂಕಲ್ಪದಿಂದಾಗಿರುವ ಅಹೋರಾತ್ರಗಳ ವ್ಯವಸ್ಥೆಯನ್ನು ಬಲ್ಲ ಜನರು ಚತುರ್ಮುಖನ ಹಗಲು ಒಂದುಸಾವಿರ ಚತುರ್ಯುಗಗಳಲ್ಲಿ ಕೊನೆಗಾಣು ವುದು ಮತ್ತು ಅವನ ರಾತ್ರಿಯೂ ಇದೇ ರೀತಿಯದು ಎಂದು ಹೇಳುತ್ತಾರೆ. (ರಾ. ಭಾ.)

**ಮಾಂ ಪ್ರಾಪ್ಯ** = ನನ್ನನ್ನು ಹೊಂದಿದಬಳಿಕ ಪುನರಾವೃತ್ತಿಯಿಲ್ಲ ಎಂದು ಹಿಂದೆ ಹೇಳಿದುದನ್ನು ಸ್ಥಾಪಿಸಲು **ಅವ್ಯಕ್ತ** ಎಂಬ ತನ್ನ ಸಾಮರ್ಥ್ಯವನ್ನು ತೋರಿಸುವುದಕ್ಕೋಸ್ಕರ ಇಲ್ಲಿ ಪ್ರಲಯ ಮುಂತಾದುವುಗಳನ್ನು ಭಗವಂತನು ಹೇಳುತ್ತಾನೆ.

ಇಲ್ಲಿ ಹೇಳಿರುವ ಸಹಸ್ರ ಎಂಬ ಪದದ ಅರ್ಥವನ್ನೂ ಗ್ರಹಿಸಬೇಕು. ಇದು ಪರಬ್ರಹ್ಮನಿಗೆ ಸಂಬಂಧಪಟ್ಟ ಕಾಲಮಾನಕ್ಕೆ ಸೂಚಕ.

**ಅನೇಕಯುಗಪರ್ಯನ್ತಂ ಮಹಾವಿಷ್ಣೋಸ್ತಥಾ ನಿಶಾ ।**

ಎಂದು ಮಹಾಕೂರ್ಮಪುರಾಣವು ಹೇಳುತ್ತದೆ.

**ರಾತ್ರ್ಯಾದೌ ಲೀಯತೇ ಸರ್ವಂ-ಅಹರಾದೌ ತು ಜಾಯತೇ ।**

ಅನೇಕಯುಗಗಳವರೆಗೆ ಮಹಾವಿಷ್ಣುವಿನ ರಾತ್ರಿಯಿರುತ್ತದೆ. ಆ ರಾತ್ರಿಯು ಕಳೆದು ಹಗಲು ಪ್ರಾರಂಭವಾದೊಡನೆಯೇ ಎಲ್ಲವೂ ಹುಟ್ಟುತ್ತವೆ. **ಯಃ ಸ ಸರ್ವೇಷು ಭೂತೇಷು** ಎಂದು ವಾಕ್ಯಶೇಷವನ್ನು ಹೇಳಿರುವುದರಿಂದ ಇಲ್ಲಿ ಹೇಳಿರುವ ಪ್ರಲಯವು ದ್ವಿಪರಾರ್ಧಪ್ರಲಯವೇ ಹೊರತು ಅವಾಂತರಪ್ರಲಯವಲ್ಲ. ಅವಾಂತರಪ್ರಲಯದಲ್ಲಿ ಆಕಾಶಾದಿ ಭೂತಗಳು ನಾಶಹೊಂದುವುದಿಲ್ಲ. ಬ್ರಹ್ಮದೇವರಿಗೂ ಲಯವಿಲ್ಲ.

ಪರಬ್ರಹ್ಮನು ನಿತ್ಯನಾಗಿರುವುದರಿಂದ ಅವನಿಗೆ ಹಗಲು-ರಾತ್ರಿಗಳಿಲ್ಲ.

ಆದುದರಿಂದ ಇಲ್ಲಿ ಬ್ರಹ್ಮ ಶಬ್ದವು ಪರಬ್ರಹ್ಮವಾಚಕವು ಹೇಗೆ ಆಗುತ್ತದೆ ಯೆಂದರೆ : ಸಾ ವಿಶ್ವರೂಪಸ್ಯ ರಜನೀ ಎಂಬ ಶ್ರುತಿಯು ಇದಕ್ಕೆ ಪ್ರಮಾಣ. ಹರಿಯು ಪರಿಪೂರ್ಣರೂಪನಾಗಿದ್ದರೂ ಕೂಡ ಅದು ಎಂದರೆ ನಿರ್ವ್ಯಾಪಾರವಾದ ಅವಸ್ಥೆಯು ಅವನಿಗೆ ರಾತ್ರಿ ಎಂದು ಅದಕ್ಕೆ ಅರ್ಥ. ಇದರಂತೆ ಹಗಲೂ ಉಂಟೆಂದು ತಿಳಿಯಬೇಕು. (ಮ. ಭಾ.)

**ಓಂ ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥೧೮॥**

ಬ್ರಹ್ಮನ ಹಗಲು ಪ್ರಾರಂಭವಾದೊಡನೆಯೇ ಸರ್ವವ್ಯಕ್ತಿಗಳೂ ಅವ್ಯಕ್ತ ದಿಂದ ಉಂಟಾಗುತ್ತವೆ. ರಾತ್ರಿಯು ಪ್ರಾರಂಭವಾಗುತ್ತಲೇ ಅವ್ಯಕ್ತ ಸಂಜ್ಞಕವಾದ ಅದರಲ್ಲಿಯೇ ಸರ್ವವ್ಯಕ್ತಿಗಳೂ ಲೀನವಾಗಿಬಿಡುತ್ತವೆ.

* * *

(ಬ್ರಹ್ಮನ ರಾತ್ರಿಯೆಂದರೆ ಪ್ರಲಯಕಾಲ. ಕೆಲವರು ಇದಕ್ಕೆ ದೈನಂದಿನ ಅಥವಾ ನೈಮಿತ್ತಿಕಪ್ರಲಯವೆನ್ನುವರು.

**ಏಷ ನೈಮಿತ್ತಿಕಃ ಪ್ರೋಕ್ತಃ ಪ್ರಲಯೋ ಯತ್ರ ವಿಶ್ವಸೃಕ್ ।**
**ಶೇತೇಽನನ್ತಾಸನೋ ವಿಶ್ವಮಾತ್ಮಸಾತ್ಕೃತ್ಯ ಚಾತ್ಮಭೂಃ ॥**

ಭಾಗವತ ೧೨-೪-೪

ಹಗಲು ಕಳೆದು ರಾತ್ರಿಯಲ್ಲಿ ಬ್ರಹ್ಮನು ಮಲಗಿದಾಗ ನೈಮಿತ್ತಿಕ ಪ್ರಲಯವಾಗುತ್ತದೆ. ಈ ನೈಮಿತ್ತಿಕ ಅಥವಾ ದೈನಂದಿನಪ್ರಲಯದಲ್ಲಿ ಮೂರು ಲೋಕಗಳು ಮಾತ್ರ ಪ್ರಲಯಹೊಂದುತ್ತವೆ. ಆ ಸಮಯದಲ್ಲಿ ಲೋಕ ತ್ರಯವೂ ಪ್ರಲಯಹೊಂದಿ ನಿರ್ವ್ಯಾಪಾರವಾಗಿರುವುದರಿಂದ ಅದನ್ನು ಸೃಷ್ಟಿ ಕರ್ತನ ನಿದ್ರಾವಸ್ಥೆಯೆಂದು ಕರೆಯಬಹುದು. ಬ್ರಹ್ಮನು ಈ ನೈಮಿತ್ತಿಕ ಪ್ರಲ ಯಕ್ಕೆ ಗುರಿಯಾಗುವುದಿಲ್ಲ. ಮಹಾಪ್ರಲಯದಲ್ಲಿ ಬ್ರಹ್ಮನೂ ತನ್ನ ಮೂಲ ದಲ್ಲಿ ಲಯಹೊಂದುತ್ತಾನೆ. ಬ್ರಹ್ಮನಿಗೆ ನೂರು ವರ್ಷಗಳು ತುಂಬಿದ ನಂತರ ಆಗುವ ಪ್ರಲಯವದು. ಈ ನೈಮಿತ್ತಿಕಪ್ರಲಯಕಾಲದಲ್ಲಿ ಮಹಾವಿಷ್ಣುವು ಮೂರು ಲೋಕಗಳನ್ನೂ ತನ್ನಲ್ಲಿಯೇ ಲೀನಮಾಡಿಕೊಂಡು ಅನಂತ ಶಯನನಾಗಿ ಯೋಗನಿದ್ರೆಯಲ್ಲಿರುತ್ತಾನೆ. ಅವನ ನಾಭಿಕಮಲದಲ್ಲಿರುವ ಬ್ರಹ್ಮನೂ ಸಹ ಅವನಂತೆಯೇ ನಿರ್ವ್ಯಾಪಾರನಾಗಿರುತ್ತಾನೆ. ಕೆಲವರು

ಅವ್ಯಕ್ತ ಎನ್ನುವುದಕ್ಕೆ ಪ್ರಕೃತಿಯ ಸೂಕ್ಷ್ಮರೂಪವೆಂದೂ, ಮತ್ತೆ ಕೆಲವರು ಬ್ರಹ್ಮನ ನಿದ್ರೆಗೆ ಅವ್ಯಕ್ತಸಂಜ್ಞೆಯೆಂದೂ, ಕೆಲವರು ಭಗವದ್ವಾಚಕವೆಂದೂ ಹೇಳುತ್ತಾರೆ. ಅದು ಸ್ಥೂಲಕ್ಕೆ ಕಾರಣವೂ, ಸೂಕ್ಷ್ಮವೂ ಆಗಿದ್ದು ಸ್ಪಷ್ಟವಾಗದೇ ಇರುವುದರಿಂದ ಅದಕ್ಕೆ ಆ ಹೆಸರು ಹೇಳಿದ್ದಾರೆ.

ಬ್ರಹ್ಮನಿಗೆ ಪ್ರಾತಃಕಾಲವಾಗುತ್ತಲೇ ಅವ್ಯಕ್ತದಿಂದ ವ್ಯಕ್ತಿಗಳೆಲ್ಲವೂ ಪ್ರಾದುರ್ಭಾವಹೊಂದುತ್ತವೆ. ರಾತ್ರಿಯಾಗುತ್ತಲೇ ಆ ವ್ಯಕ್ತಿಗಳು ಅಥವಾ ಪ್ರಾಣಿಗಳೆಲ್ಲವೂ ಅವ್ಯಕ್ತಕ್ಕೇ ಹೋಗಿ ಸೇರಿಕೊಳ್ಳುತ್ತವೆ. ವೃಕ್ಷವು ಬೀಜ ರೂಪವನ್ನು ಹೊಂದುವಂತೆ–ಮೋಡಗಳು ಆಕಾಶದ ರೂಪವನ್ನು ಹೊಂದುವಂತೆ–ವ್ಯಕ್ತಿಗಳೆಲ್ಲವೂ ಬೀಜರೂಪವನ್ನು ಅಥವಾ ಸೂಕ್ಷ್ಮರೂಪವನ್ನು ಹೊಂದಿ ಅವ್ಯಕ್ತದಲ್ಲಿ ಅಡಗಿರುತ್ತವೆ.

ನಮ್ಮ ನಿದ್ರೆಯಲ್ಲಿಯೂ ಪ್ರಪಂಚವು ನಮ್ಮ ಅರಿವಿಗೆ ಬರುವುದಿಲ್ಲ. ಆದರೆ ನಮ್ಮ ಜಾಗೃತಾವಸ್ಥೆಯಲ್ಲಿ ನಾವು ವಾಸಿಸುವ ಪ್ರಪಂಚದಲ್ಲಿ ಅಸ್ತಿತ್ವವು ಯಥಾಪೂರ್ವವಾಗಿಯೇ ಇರುತ್ತದೆ. ಬ್ರಹ್ಮನ ನಿದ್ರೆಯ ಸಮಯದಲ್ಲಿಯೂ ಮೂರು ಲೋಕಗಳೂ ವ್ಯಕ್ತರೂಪದಲ್ಲಿರುವುದಿಲ್ಲ. ಅವನು ಜಾಗ್ರತನಾದನಂತರ ಹಿಂದಿದ್ದ ವಿಶ್ವವನ್ನೇ ಯಥಾಪೂರ್ವವಾಗಿ ಪುನಃ ಸೃಷ್ಟಿಸುತ್ತಾನೆ. **'ಧಾತಾ ಯಥಾಪೂರ್ವಮಕಲ್ಪಯತ್'** ಎಂದು ಶ್ರುತಿಯು ಹೇಳುತ್ತದೆ.)

o o o

ಅವ್ಯಕ್ತ ಎಂದರೆ ಪ್ರಜಾಪತಿಯ ನಿದ್ರಾವಸ್ಥೆ. ಆದುದರಿಂದ ಬ್ರಹ್ಮನು ಎಚ್ಚರಗೊಂಡ ಸಮಯದಲ್ಲಿ ಎಲ್ಲ ವ್ಯಕ್ತಿಗಳೂ ಎಂದರೆ ಸ್ಥಾವರ-ಜಂಗಮ ರೂಪವಾದ ಎಲ್ಲವೂ ಪ್ರಕಟವಾಗುತ್ತವೆ. ವ್ಯಕ್ತಿ ಎಂದರೆ ಯಾವುದು ವ್ಯಕ್ತವಾಗುತ್ತದೆಯೋ, ಪ್ರಕಟವಾಗುತ್ತದೆಯೋ ಅದು. ಹಾಗೆಯೇ ಬ್ರಹ್ಮನಿಗೆ ರಾತ್ರಿ (ನಿದ್ರಾಕಾಲ) ಬಂದಾಗ ಎಲ್ಲ ವ್ಯಕ್ತಿಗಳೂ ಮೇಲೆ ಹೇಳಿದ ಅವ್ಯಕ್ತದಲ್ಲಿಯೇ ಲಯಹೊಂದುತ್ತವೆ. (ಶಂ. ಭಾ.)

ಅವ್ಯಕ್ತ ಎಂಬುದು ಚತುರ್ಮುಖನ ಶರೀರರೂಪವಾದುದು. ಮೂರು ಲೋಕಗಳಲ್ಲಿರುವ ದೇಹ, ಇಂದ್ರಿಯ, ಭೋಗ್ಯ ಮತ್ತು ಭೋಗಸ್ಥಾನ ರೂಪವಾದ ಎಲ್ಲ ವ್ಯಕ್ತಿಗಳೂ ಚತುರ್ಮುಖನ ದೇಹಾವಸ್ಥೆಯಾಗಿರುವ ಆ

ಅವ್ಯಕ್ತದಿಂದ ಅವನ ಹಗಲಿನ ಸಮಯದಲ್ಲಿ ಉಂಟಾಗುತ್ತವೆ. ಅವನಿಗೆ ರಾತ್ರಿಸಮಯವು ಬಂದಾಗ ಅವು ಅವ್ಯಕ್ತಾವಸ್ಥಾವಿಶೇಷವಾದ ಆ ಚತುರ್ಮುಖನ ದೇಹದಲ್ಲಿಯೇ ಲಯಹೊಂದುತ್ತವೆ. (ರಾ. ಭಾ.)

**ಓಂ ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥೧೯॥**

ಪಾರ್ಥ! ಅದೇ ಭೂತಗ್ರಾಮವು (ಪ್ರಾಣಿಗಳ ಸಮೂಹವು) ಮತ್ತೆ ಮತ್ತೆ ಉಂಟಾಗಿ ಬ್ರಹ್ಮನಿಗೆ (ಚತುರ್ಮುಖನ) ರಾತ್ರಿಯು ಬಂದಾಗ ಅವಶ್ಯವಾಗಿಯೇ ಅವ್ಯಕ್ತದಲ್ಲಿ ಲೀನವಾಗಿಬಿಡುತ್ತವೆ. ಬ್ರಹ್ಮನಿಗೆ ಹಗಲಾಗುತ್ತಿದ್ದಂತೆ ಪುನಃ ಹುಟ್ಟಿಕೊಳ್ಳುತ್ತವೆ.

* * *

(ಸ ಏವಾಯಂ–ಎಂದರೆ ಹಿಂದಿದ್ದ ಆ ಭೂತಸಮುದಾಯವೇ ಎಂದರ್ಥ. ಪ್ರಾಣಿಗಳ ಸಮೂಹವೇ ಎಂದರ್ಥ. ಕುದುರೆಯು ಕುದುರೆಯಂತೆಯೇ, ಕತ್ತೆಯು ಕತ್ತೆಯಂತೆಯೇ ಇರುತ್ತದೆಂಬ ಅರ್ಥವಲ್ಲ. ಈ ಕಾರಣದಿಂದ ಇಲ್ಲಿ ಭೂತಗ್ರಾಮ ಎಂಬ ಪದಪ್ರಯೋಗವಿದೆ. ಪ್ರಾಣಿಗಳ ಸಮೂಹ. ಮನುಷ್ಯರಾಗಬಹುದು ; ಪಕ್ಷಿಗಳಾಗಬಹುದು ; ಕ್ರಿಮಿಗಳಾಗಬಹುದು ; ಚತುಷ್ಪಾದಪ್ರಾಣಿಗಳೇ ಆಗಬಹುದು. ಒಟ್ಟಿನಲ್ಲಿ ಪ್ರಾಣವುಳ್ಳವುಗಳು. ಈ ಪ್ರಾಣಿಗಳು ತಮ್ಮ ತಮ್ಮ ಶರೀರಗಳಲ್ಲಿಯೇ ಇದ್ದುಬಿಡುವುದಿಲ್ಲ. ಈ ಪ್ರಾಣಿಗಳಲ್ಲಿನ ಪ್ರಾಣವು ತನ್ನ ಪಾಪ-ಪುಣ್ಯಗಳನ್ನು ಹೊತ್ತು ಸೂಕ್ಷ್ಮರೂಪದಲ್ಲಿರುತ್ತದೆ. ಕರ್ಮಸಂಬಂಧದಿಂದ ಜೀವವು ಹುಟ್ಟುತ್ತಿರುತ್ತದೆ. ಪ್ರಲಯಕಾಲದಲ್ಲಿ ಅವ್ಯಕ್ತದಲ್ಲಿ ಲೀನವಾಗುತ್ತಿರುತ್ತದೆ. ಅವ್ಯಕ್ತದಲ್ಲಿ ಲೀನವಾಗಿದ್ದರೂ ಸಹ ಅದು ತನ್ನ ವಾಸನೆಯನ್ನು ಕಳೆದುಕೊಂಡಿರುವುದಿಲ್ಲ. ಹೀನ ಅಥವಾ ಒಳ್ಳೆಯ ಸಂಸ್ಕಾರದಿಂದ ಕೂಡಿ ಸೂಕ್ಷ್ಮರೂಪವಾಗಿರುವ ಆ ಜೀವವು ಪುಣ್ಯ-ಪಾಪಗಳ ಫಲಗಳಿಗೆ ಅನುಸಾರವಾಗಿ ಮುಂದೆ ಮತ್ತೊಂದು ಜನ್ಮತಾಳುತ್ತದೆ. ಜಗತ್ಪ್ರಲಯವೇ ಆದರೂ ಆ ಜೀವಕ್ಕೆ ಮೋಕ್ಷಸಿಕ್ಕುವುದಿಲ್ಲ ಅಥವಾ ಅದು ಇಲ್ಲದೆಯೂ ಹೋಗುವುದಿಲ್ಲ. ಪ್ರಲಯಾನಂತರದಲ್ಲಿಯೂ ಸಹ ಅದಕ್ಕೆ ಪುನರಪಿ ಜನನಂ ಪುನರಪಿ ಮರಣಂ ಉಂಟೇ ಉಂಟು.

ಆ ಪ್ರಾಣಿಗಳಿಗೆ ಸ್ವಾತಂತ್ರ್ಯವೂ ಇಲ್ಲ. ಬ್ರಹ್ಮನಿಗೆ ರಾತ್ರಿಯಾಗುತ್ತಲೇ (ಪ್ರಲಯವಾಗುತ್ತಲೇ) ಅವ್ಯಕ್ತದಲ್ಲಿ ಲೀನಹೊಂದುತ್ತವೆ. ರಾತ್ರಿಯು ಮುಗಿದು (ಪ್ರಲಯಕಾಲವು ಮುಗಿದು) ಹಗಲಾಗುತ್ತಲೇ ಆ ಪ್ರಾಣಿಗಳು ಅವುಗಳು ಮಾಡಿದ ಕರ್ಮಾನುಸಾರವಾಗಿ ಯಾವುದೋ ಯೋನಿಯಲ್ಲಿ ಹೋಗಿ ಬಿದ್ದು ಲೋಕದಲ್ಲಿ ಜನ್ಮತಾಳುತ್ತವೆ. ಈ ಸಂಸಾರಚಕ್ರವು ಎಂದಿಗೂ ಯಾವಾಗಲೂ ತಪ್ಪಿದ್ದಲ್ಲ.)

O O O

ಭೂತಗ್ರಾಮಃ = ಸ್ಥಾವರ-ಜಂಗಮರೂಪವಾದ ಭೂತಸಮುದಾಯವು. ಸ ಏವಾಯಂ = ಹಿಂದಿನ ಕಲ್ಪದಲ್ಲಿ ಯಾವ ಭೂತಸಮುದಾಯವಿತ್ತೋ ಅದೇ. ಬೇರೊಂದಲ್ಲ. ಅವಶಃ= ಅಸ್ವತಂತ್ರವಾಗಿ, ಸ್ವಾಧೀನವಾಗಿ ರದೇ. ಸಂಸಾರದಲ್ಲಿ ವೈರಾಗ್ಯವನ್ನು ತೋರಿಸುವುದಕ್ಕೋಸ್ಕರವೂ ಈ ಶ್ಲೋಕವನ್ನು ಭಗವಂತನು ಹೇಳಿದ್ದಾನೆ.

**ಸಂಸಾರೇ ವೈರಾಗ್ಯಪ್ರದರ್ಶನಾರ್ಥಂ ಚ ಇದಂ ಆಹ** (ಶಂ. ಭಾ.)

ಕರ್ಮವಶವಾದ ಆ ಭೂತಸಮುದಾಯವೇ ಚತುರ್ಮುಖನಿಗೆ ಹಗಲು ಬಂದಾಗ ಮತ್ತೆ ಮತ್ತೆ ಹುಟ್ಟುತ್ತಾ, ರಾತ್ರಿಯು ಬಂದಾಗ ಲಯಹೊಂದುತ್ತದೆ. ಹಾಗೆಯೇ ನೂರು ವರ್ಷಗಳ ಅವಸಾನವೆಂಬ ಸಾವಿರಯುಗಗಳು ಕೊನೆಗೊಂಡಾಗ ಬ್ರಹ್ಮಲೋಕಪರ್ಯಂತವಾಗಿ ಎಲ್ಲ ಲೋಕಗಳೂ ಮತ್ತು ಬ್ರಹ್ಮನೂ ಕೂಡ—**ಪೃಥಿವ್ಯಪ್ಸು ಪ್ರಲೀಯತೇ । ಆಪಸ್ತೇಜಸಿ ಲೀಯನ್ತೇ।**— ಎಂದು ಉಪನಿಷತ್ತು ಹೇಳುವಂತೆ ಅವ್ಯಕ್ತ, ಅಕ್ಷರ ಮತ್ತು ತಮಸ್ಸಿನ ಪರ್ಯಂತವಾಗಿ ಎಲ್ಲವೂ ನನ್ನಲ್ಲಿಯೇ ಲಯಹೊಂದುತ್ತವೆ. ಹಾಗೆ ನನ್ನನ್ನು ಬಿಟ್ಟು ಉಳಿದ ಎಲ್ಲವೂ ಕಾಲವ್ಯವಸ್ಥೆಗೆ ಒಳಪಟ್ಟು ನನ್ನಿಂದಲೇ ಉತ್ಪತ್ತಿಯನ್ನೂ ಮತ್ತು ನನ್ನಿಂದಲೇ ಲಯವನ್ನೂ ಹೊಂದುತ್ತವೆ. ಉತ್ಪತ್ತಿ-ವಿನಾಶಗಳನ್ನು ಅವು ಯಾವುವೂ ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ. ಆದುದರಿಂದ ಐಶ್ವರ್ಯಗತಿಯನ್ನು ಹೊಂದಿದವರಿಗೆ ಪುನರಾವೃತ್ತಿಯು ಖಂಡಿತವಾಗಿಯೂ ಉಂಟು. ನನ್ನನ್ನು ಹೊಂದಿದವರಿಗಾದರೋ ಆ ಪ್ರಸಂಗವೇ ಇಲ್ಲ.

**ಮಾಮುಪೇತಾನಾಂ ತು ನ ಪುನರಾವೃತ್ತಿಪ್ರಸಙ್ಗಃ** (ರಾ. ಭಾ.)

**ಓಂ ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥೨೦॥**

ಆದರೆ ಆ ಅವ್ಯಕ್ತಕ್ಕಿಂತಲೂ ಬೇರೆಯಾದ ಅವ್ಯಕ್ತವಾಗಿರುವ ಸನಾತನವಾದ ಭಾವವು ಯಾವುದುಂಟೋ ಅದು ಎಲ್ಲ ಭೂತಗಳೂ ವಿನಾಶ ಹೊಂದಿದರೂ ವಿನಾಶಹೊಂದುವುದಿಲ್ಲ.

* * *

(ಹದಿನೆಂಟನೆಯ ಶ್ಲೋಕದಲ್ಲಿ **ಅವ್ಯಕ್ತಾದ್ವ್ಯಕ್ತಯಃ ಸರ್ವಾಃ**–ಎಂದು ಹೇಳಿದೆ. ಅವ್ಯಕ್ತದಿಂದ ವ್ಯಕ್ತಿಗಳ ಆವಿರ್ಭಾವವಾಗುತ್ತದೆ. ಇಲ್ಲಿನ ಅವ್ಯಕ್ತದ ಅರ್ಥ : ಕಣ್ಣಿಗೆ ಕಾಣಿಸದ ಜಗದ್ಬೀಜ ; ಪ್ರಕೃತಿ. ಇಂತಹ ಅವ್ಯಕ್ತಕ್ಕಿಂತಲೂ ಹೆಚ್ಚಿನದು ; ಬೇರೆಯಾದುದು ; ಜಗತ್ತಿನಲ್ಲೆಲ್ಲಾ ವ್ಯಾಪಿಸಿಕೊಂಡಿರತಕ್ಕದ್ದು ; ಇಂದ್ರಿಯಗಳಿಗೆ ಅಗೋಚರವಾದುದು ; ಬಹಳ ಹಿಂದಿನದು ; ಇದಕ್ಕಿಂತಲೂ ಹಿಂದಿನದು ಬೇರೊಂದಿಲ್ಲ. ಇದೂ ಸಹ ಅವ್ಯಕ್ತಸಂಜ್ಞಕವೇ ಆಗಿದೆ. ಆದರೆ ಎಲ್ಲ ಚರಾಚರವಸ್ತುಗಳು ನಾಶವಾದರೂ ಈ ಅವ್ಯಕ್ತವು ಮಾತ್ರ ನಾಶಹೊಂದುವುದೇ ಇಲ್ಲ.

ಚಿನ್ನದ ಗಟ್ಟಿಯು ಶಾಶ್ವತವಾದುದು. ಎಷ್ಟು ಕರಗಿಸಿದರೂ ಅದು ಚಿನ್ನವಾಗಿಯೇ ಉಳಿಯುತ್ತದೆ. ಆದರೆ ಅದನ್ನು ಕರಗಿಸಿ ಅನೇಕವಿಧವಾದ ಆಭರಣಗಳನ್ನು ಮಾಡಬಹುದು. ಅವುಗಳೆಲ್ಲವನ್ನೂ ಕರಗಿಸಿದರೆ ಪುನಃ ಅದು ಚಿನ್ನವಾಗಿಯೇ ಉಳಿಯುತ್ತದೆ. ಚಿನ್ನಕ್ಕೆ ಅಳಿವಿಲ್ಲ. ಮಣ್ಣಿನಿಂದ ಮನೆಯೂ ಆಗಬಹುದು, ಮಡಿಕೆಯೂ ಆಗಬಹುದು. ಇನ್ನೂ ಹಲವಾರು ಪದಾರ್ಥಗಳಾಗಬಹುದು. ಆ ಪದಾರ್ಥಗಳೆಲ್ಲವೂ ವಿನಾಶಹೊಂದಲಾಗಿ ಅವು ಪುನಃ ಮಣ್ಣಿನರೂಪಕ್ಕೇ ಬರುತ್ತವೆ.

ನೀರಿನಲ್ಲಿ ತೆರೆಗಳು ಹುಟ್ಟುತ್ತಲೇ ಇರುತ್ತವೆ ; ಅಡಗುತ್ತಲೇ ಇರುತ್ತವೆ. ನೀರು ಒಮ್ಮೆ ತುಂತುರಿನ ರೂಪವನ್ನು ತಾಳುತ್ತದೆ. ಮತ್ತೊಮ್ಮೆ ಆವಿಯೂ ಆಗುತ್ತದೆ. ಆದರೆ ಅವುಗಳೆಲ್ಲದರ ಮೂಲರೂಪವು ನೀರೇ ಆಗಿರುತ್ತದೆ.

ಅವ್ಯಕ್ತವಾದ ಶರೀರವು ವ್ಯಕ್ತವಾಗುತ್ತದೆ. ವ್ಯಕ್ತವಾಗಿದ್ದ ಶರೀರವು ಪುನಃ ಅವ್ಯಕ್ತಕ್ಕೆ ಹೋಗುತ್ತದೆ. ಆದರೆ ಆ ಶರೀರದಲ್ಲಿರುವ ಚೈತನ್ಯವು ಅವಿನಾಶಿ. ಸರ್ವಭೂತಗಳೂ ವಿನಾಶವಾದರೂ ಸರ್ವಭೂತಗಳ ಏಕಾತ್ಮನಾದ

ಪರಮಾತ್ಮನು ವಿನಾಶಹೊಂದುವುದಿಲ್ಲ. ಜಗತ್ತು ನಡೆಯುತ್ತಿರುವಾಗ ಅದರ ನಾಶವು ಯಾವಾಗ ಆಗುತ್ತದೆ? ಇದಕ್ಕಿಂತಲೂ ಮಿಗಿಲಾದ ಮತ್ತೊಂದು ಅವ್ಯಕ್ತವಿದೆಯೆಂದು ಏಕೆನ್ನಬೇಕು?–ಈ ಪ್ರಶ್ನೆಗೆ ಉತ್ತರವು ಅಹೋರಾತ್ರ ವಿದರಾದ ಜ್ಞಾನಿಗಳಿಗೆ ಮಾತ್ರ ತಿಳಿದಿದೆ. ಮಹಾಪ್ರಲಯಕಾಲದಲ್ಲಿ ಎಲ್ಲ ಜಗತ್ತೂ ಸ್ಥೂಲ-ಸೂಕ್ಷ್ಮಶರೀರರಹಿತವಾಗಿ ಅವ್ಯಾಕೃತಮಾಯೆ ಎಂಬ ಹೆಸರಿನ ಮೂಲಪ್ರಕೃತಿಯೊಳಗೆ ಸೇರಿಹೋಗುತ್ತದೆ. ಅದೇ ಜಗತ್ತಿನ ವಿನಾಶ. ಆ ಸಮಯದಲ್ಲಿ ಅವ್ಯಕ್ತದ (ಪ್ರಕೃತಿಯ) ಅಧಿಷ್ಠಾತೃವಾದ ಸನಾತನನಾದ ಅವ್ಯಕ್ತನಾಮಕನಾದ ದಿವ್ಯಪುರುಷನು ತನ್ನಿಂದ ಪ್ರಾದುರ್ಭೂತವಾಗಿದ್ದ ಪ್ರಕೃತಿಯನ್ನು (ಜಗದ್ಬೀಜವನ್ನು ) ತನ್ನಲ್ಲಿಯೇ ಲೀನಗೊಳಿಸಿಕೊಂಡಿರುತ್ತಾನೆ. ಮಹಾಪ್ರಲಯದ ಕಾಲದಲ್ಲಿಯೂ ಈ ಸನಾತನವಾದ ಅವ್ಯಕ್ತವು ಇದ್ದೇ ಇರುತ್ತದೆ.)

o o o

**ಪರಃ**–ಎಂದರೆ ಬೇರೆಯಾದವನು. ಮುಂದೆ ವರ್ಣಿಸಲ್ಪಡುವ ಅಕ್ಷರವು ಹಿಂದೆ ಹೇಳಿದ ಅವ್ಯಕ್ತಕ್ಕಿಂತಲೂ ವಿಲಕ್ಷಣವಾದುದು. ಭಾವಃ– ಎಂದರೆ ಅಕ್ಷರವೆಂಬ ಪರಬ್ರಹ್ಮ. ಪರಮಾತ್ಮ. ಅದು ಹಿಂದೆ ಹೇಳಿದ ಅವ್ಯಕ್ತಕ್ಕಿಂತಲೂ ಬೇರೆಯಾದುದು. ಅದು ಬೇರೆಯಾಗಿರುವುದು ಮಾತ್ರ ವಲ್ಲದೇ ಅದರ ಲಕ್ಷಣವೂ ಬೇರೆಯಾಗಿದೆ–ಎಂದು ಸೂಚಿಸುವುದಕ್ಕೋಸ್ಕರ ಅನ್ಯಃ ಎಂಬ ವಿಶೇಷಣವನ್ನೂ ಕೊಟ್ಟಿದೆ. ಆ ಅಕ್ಷರವು ಅವ್ಯಕ್ತವಾದುದು ಎಂದರೆ ಇಂದ್ರಿಯಗೋಚರವಾಗದೇ ಇರುವುದು. ಅದು ಭೂತಗ್ರಾಮಗಳಿಗೆ ಬೀಜವಾಗಿರುವ ಅವಿದ್ಯಾರೂಪವಾದ ಅವ್ಯಕ್ತಕ್ಕಿಂತಲೂ ವ್ಯತಿರಿಕ್ತವಾದುದು ಮತ್ತು ವಿಲಕ್ಷಣವಾದುದು. ಸನಾತನವಾದುದು. ಬ್ರಹ್ಮಾದಿ ಸಮಸ್ತಭೂತಗಳು ನಾಶಹೊಂದಿದರೂ ಅದಕ್ಕೆ ನಾಶವಿಲ್ಲ. (ಶಂ. ಭಾ.)

ಹಿಂದೆ ಹೇಳಿದ ಅಚೇತನಪ್ರಕೃತಿರೂಪವಾದ ಅವ್ಯಕ್ತಕ್ಕಿಂತಲೂ ಪರಃ ಉತ್ಕೃಷ್ಟವಾದುದು. ಶುದ್ಧಾತ್ಮಸ್ವರೂಪ. ಪುರುಷಾರ್ಥವಾದುದರಿಂದ ಅದು ಪ್ರಕೃತಿಗಿಂತಲೂ ಶ್ರೇಷ್ಠವಾದುದು. ಕೇವಲ ಜ್ಞಾನಾಕಾರವಾಗಿರುವುದರಿಂದ ಪ್ರಕೃತಿಗಿಂತಲೂ ವಿಲಕ್ಷಣವೂ ಆಗಿದೆ. ಅದರ ಸ್ವರೂಪವು ಯಾವ ಪ್ರಮಾಣ ದಿಂದಲೂ ವ್ಯಕ್ತವಾಗದೇ ಇರುವುದರಿಂದ ಅದೂ ಅವ್ಯಕ್ತ. ಸ್ವಾನುಭವ

ದಿಂದಲೇ ಅರಿಯಬೇಕಾದ ಅಸಾಧಾರಣವಾದ ಆಕಾರವುಳ್ಳದ್ದು. ಅದು ಸನಾತನ, ನಿತ್ಯವಾದುದು ; ಉತ್ಪತ್ತಿ-ವಿನಾಶಗಳನ್ನು ಹೊಂದುವುದಿಲ್ಲ. ಆಕಾಶವೇ ಮುಂತಾದ ಎಲ್ಲ ಭೂತಗಳೂ ತಮ್ಮ ಕಾರಣ ಮತ್ತು ಕಾರ್ಯಗಳೊಡನೆ ನಾಶಹೊಂದಿದರೂ ಅವುಗಳಲ್ಲಿ ತಾನು ಇರುತ್ತಿದ್ದರೂ ಅವನಿಗೆ ಮಾತ್ರ ನಾಶವಿಲ್ಲ. ಇಂತಹ ಅವ್ಯಕ್ತನಾದ ಶುದ್ಧಾತ್ಮನೇ ಅಕ್ಷರ ಎನಿಸುತ್ತಾನೆ.

**ಯೇ ತ್ವಕ್ಷರಮನಿರ್ದೇಶ್ಯಂ (೧೨.೩) ಕೂಟಸ್ಥೋಽಕ್ಷರ ಉಚ್ಯತೇ (೧೫)**

ಮುಂತಾದ ವಾಕ್ಯಗಳಲ್ಲಿ ಅಕ್ಷರ ಎಂದು ಇವನನ್ನೇ ಕರೆದಿರುವುದು.

(ರಾ.ಭಾ.)

**ಓಂ ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥೨೧॥**

ಅವ್ಯಕ್ತವೇ ಅಕ್ಷರವೆಂದೂ ಹೇಳಲ್ಪಟ್ಟಿದೆ. ಅದನ್ನೇ ಪರಮಗತಿಯೆಂದೂ ಹೇಳುತ್ತಾರೆ. ಯಾವ ಅವ್ಯಕ್ತವನ್ನು ಸೇರಿದರೆ ಹಿಂದಿರುಗುವುದಿಲ್ಲವೋ–ಆ ಅವ್ಯಕ್ತವೇ ಅಥವಾ ಅಕ್ಷರವೇ ನನ್ನ ಶ್ರೇಷ್ಠವಾದ ಧಾಮವಾಗಿದೆ.

* * *

(ಅವ್ಯಕ್ತಕ್ಕೆ ಅಕ್ಷರವೆಂದೂ ಹೆಸರು. ಅಕ್ಷರ ಎಂದರೆ ನಾಶವಿಲ್ಲದುದು ಅಥವಾ ಅದಕ್ಕೆ ವಾಚಕವಾದ **ಓಂಕಾರ** ಎಂದೂ ಹೇಳಬಹುದಾಗಿದೆ. ಅವ್ಯಕ್ತವು ಯಾವಾಗಲೂ ಅಕ್ಷರವಾಗಿಯೇ ಇರುತ್ತದೆ. ನಾಶವೆಂಬುದು ವ್ಯಕ್ತವಾದ ಪದಾರ್ಥಕ್ಕೇ ಹೊರತು ಅವ್ಯಕ್ತಕ್ಕಲ್ಲ. ಇದೇ ಶ್ರೇಷ್ಠವಾದ ಗತಿ ಅಥವಾ ಆಶ್ರಯ ಎಂದು ಏಕೆ ಹೇಳುತ್ತಾರೆ? ಯಾವ ಆಶ್ರಯವೇ ಆದರೂ ಚಿರಂತನವಾದುದಲ್ಲ. ಸ್ವರ್ಗದ ಆಶ್ರಯವನ್ನೇ ಪಡೆದರೂ ಪುನಃ ಹಿಂದಿರುಗಿ ಬರಬೇಕಾಗುವುದು. ಬ್ರಹ್ಮಲೋಕಕ್ಕೇ ಹೋದರೂ ಪುನರ್ಜನ್ಮವು ತಪ್ಪಿದ್ದಲ್ಲ. ಆದರೆ ಈ ಅಕ್ಷರದಲ್ಲಿ ಅಕ್ಷರಬ್ರಹ್ಮದಲ್ಲಿ ಆಶ್ರಯವನ್ನು ಪಡೆದರೆ ಪುನರ್ಜನ್ಮವಿಲ್ಲ. ಒಣಗಿದ ಮರವು ಪುನಃ ಚಿಗುರದಂತೆ–ಬೆಂದಕಾಳು ಮೊಳಕೆಯಾಗದಂತೆ–ಅವ್ಯಕ್ತವನ್ನು ಅಥವಾ ಅಕ್ಷರವನ್ನು, ಅಕ್ಷರಬ್ರಹ್ಮನನ್ನು ಸೇರಿದವನು ಪುನಃ ಪ್ರಪಂಚಕ್ಕೆ ಹಿಂದಿರುಗುವುದಿಲ್ಲ. ಅವನ ವಾಸನೆಗಳೆಲ್ಲವೂ ಸುಟ್ಟುಹೋಗಿರುತ್ತವೆ. ಅದು ಪುನರಾವೃತ್ತಿಯಿಲ್ಲದ ಸ್ಥಾನವಾದುದರಿಂದಲೇ ಅದನ್ನು ಪಂಡಿತರು ಶ್ರೇಷ್ಠವಾದ ಆಶ್ರಯಸ್ಥಾನವೆಂದೂ ಹೇಳುತ್ತಾರೆ.

ಪುನರಾವೃತ್ತಿರಹಿತವಾದ ಸ್ಥಾನವೆಂಬುದನ್ನು ಶ್ರೀಕೃಷ್ಣನೇ ಸ್ಪಷ್ಟಪಡಿಸಿದ್ದಾನೆ. ಯಂ ಪ್ರಾಪ್ಯ ನ ನಿವರ್ತನ್ತೇ–ಅಲ್ಲಿಗೆ ಹೋದನಂತರ ಹಿಂದಿರುಗಬೇಕಾಗಿಲ್ಲ. ಇದಕ್ಕೆ ಸ್ವಾರಸ್ಯವಾದ ಉದಾಹರಣೆಗಳನ್ನು ಸಂತಜ್ಞಾನೇಶ್ವರರು ಕೊಟ್ಟಿರುತ್ತಾರೆ : ಬೆಂಕಿಯಲ್ಲಿ ಹಾಕಿದ ಕಟ್ಟಿಗೆಯು ಬೆಂಕಿಯೇ ಆಗುವುದು. ಬೆಂಕಿಯಾದನಂತರ ಅದನ್ನು ಕಟ್ಟಿಗೆಯಾಗಿ ಪ್ರತ್ಯೇಕಿಸಲು ಸಾಧ್ಯವಾಗುವುದಿಲ್ಲ. ಕಬ್ಬಿನಿಂದ ಸಕ್ಕರೆಯನ್ನು ಮಾಡಬಹುದು. ಆದರೆ ಸಕ್ಕರೆಯಿಂದ ಪುನಃ ಕಬ್ಬನ್ನು ಮಾಡುವ ಸಾಧ್ಯತೆಯಿಲ್ಲ. ಸ್ಪರ್ಶಶಿಲೆಯಿಂದ ಕಬ್ಬಿಣವನ್ನು ಚಿನ್ನವನ್ನಾಗಿ ಮಾಡಬಹುದು. ಆದರೆ ಅದೇ ಚಿನ್ನವನ್ನು ಪುನಃ ಕಬ್ಬಿಣವನ್ನಾಗಿ ಮಾಡಲಾಗುವುದಿಲ್ಲ. ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯಬಹುದು. ಆದರೆ ಬೆಣ್ಣೆಯನ್ನು ಪುನಃ ಮೊಸರನ್ನಾಗಿ ಮಾಡಲು ಸಾಧ್ಯವಾಗುವುದಿಲ್ಲ. ಅದರಂತೆ ಬ್ರಹ್ಮನನ್ನು ಸೇರಿದನಂತರ ಜೀವವು ಮತ್ತೆ ಜನ್ಮಕ್ಕೆ ಬರುವುದಿಲ್ಲ. ಆ ಸ್ಥಳವು ನನ್ನದೇ ಆಗಿದೆ ಎನ್ನುತ್ತಾನೆ ಶ್ರೀಕೃಷ್ಣ. ಅರ್ಥಾತ್ ಆ ಅಕ್ಷರಬ್ರಹ್ಮನೇ ನಾನು. ನನ್ನನ್ನು ಸೇರಿದವನಿಗೆ ಪುನರ್ಜನ್ಮವಿಲ್ಲ ಎಂದರ್ಥ.)

O O O

**ಮಮ ಪರಮಂ ಧಾಮ=** ವಿಷ್ಣುವಾದ ನನ್ನ ಪರಮಪದ, ಪ್ರಕೃಷ್ಟವಾದ ಸ್ಥಾನ. (ಶಂ. ಭಾ.)

ಅಕ್ಷರವೆಂದು ಹೇಳಲ್ಪಟ್ಟಿರುವ ಆತ್ಮಸ್ವರೂಪವನ್ನೇ ವೇದವಿದರು ಶ್ರೇಷ್ಠವಾದ ಗತಿ ಎನ್ನುತ್ತಾರೆ.

**ಯಃ ಪ್ರಯಾತಿತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್**–ಎಂಬಲ್ಲಿ **ಪರಮಾ–ಗತಿ** ಎಂಬ ಶಬ್ದಗಳಿಂದ ನಿರ್ದೇಶಿಸಲ್ಪಟ್ಟಿರುವ ಅಕ್ಷರವು ಈ ಪ್ರಕೃತಿವಿಯುಕ್ತವಾದ ಸ್ವಸ್ವರೂಪದಲ್ಲಿರುವ ಆತ್ಮವೇ. ಇಂತಹ ಸ್ವಸ್ವರೂಪದಲ್ಲಿರುವ ಯಾವ ಆತ್ಮನನ್ನು ಹೊಂದಿದವರಿಗೆ ಪುನರಾವೃತ್ತಿಯಿಲ್ಲವೋ ಅದು ನನ್ನ ಶ್ರೇಷ್ಠವಾದ ನಿಯಮನಸ್ಥಾನವು. ಅಚೇತನಪ್ರಕೃತಿಯು ನನ್ನ ಮೊದಲನೆಯ ನಿಯಮನಸ್ಥಾನ. ಅದರ ಜೊತೆಯಲ್ಲಿ ಸೇರಿಕೊಂಡಿರುವ ಜೀವಪ್ರಕೃತಿಯು ನನ್ನ ಎರಡನೆಯ ನಿಯಮನಸ್ಥಾನ. ಆದರೆ ಜಡದ ಸಂಬಂಧವೇ ಇಲ್ಲದ ಸ್ವಸ್ವರೂಪದಲ್ಲಿರುವ ಮುಕ್ತಸ್ವರೂಪವು ನನ್ನ ಶ್ರೇಷ್ಠವಾದ ನಿಯಮನಸ್ಥಾನ. **ಧಾಮ** ಎಂಬ ಪದಕ್ಕೆ

ಪ್ರಕಾಶ ಎಂಬ ಅರ್ಥವನ್ನು ಹೇಳಬಹುದು. ಜ್ಞಾನರೂಪವಾದ ಪ್ರಕಾಶ. ಮುಕ್ತಸ್ವರೂಪವು ಪ್ರಕೃತಿವಶನಾಗಿ ಪರಿಚ್ಛಿನ್ನವಾದ ಜ್ಞಾನಪ್ರಕಾಶವುಳ್ಳ ಆತ್ಮನಂತಲ್ಲದೇ ಅಪರಿಚ್ಛಿನ್ನವಾದ ಜ್ಞಾನರೂಪವಾಗಿರುವುದರಿಂದ ಅದು ಪರಮಧಾಮ. ಶ್ರೇಷ್ಠಜ್ಞಾನಪ್ರಕಾಶಸ್ವರೂಪವಾದುದು. ಕೈವಲ್ಯವನ್ನು ಹೊಂದಿದವರಿಗೂ ಪುನರಾವೃತ್ತಿಯಿಲ್ಲ. (ರಾ. ಭಾ.)

ಇಲ್ಲಿ ಹೇಳಿರುವ ಅವ್ಯಕ್ತವು ಭಗವಂತ. **ಅವ್ಯಕ್ತೋ ಭಗವಾನ್ । ಯಂ ಪ್ರಾಪ್ಯ ನ ನಿವರ್ತನ್ತೇ । ಮಾಮುಪೇತ್ಯ ತು ಕೌನ್ತೇಯ**–ಎಂಬ ಗೀತಾವಾಕ್ಯಗಳೊಡನೆ ಪರಾಮರ್ಶೆಮಾಡಿದರೆ ಅಂತಹ ಪುನರಾವೃತ್ತಿ ರಹಿತಸ್ಥಾನವುಳ್ಳ ಅವ್ಯಕ್ತವೆಂದರೆ ಭಗವಂತನೇ.

**ಅವ್ಯಕ್ತಂ ಪರಮಂ ವಿಷ್ಣುಃ** ಎಂಬ ಗರುಡಪುರಾಣದ ಪ್ರಯೋಗವೂ ಇದು ವಿಷ್ಣುವಾಚಕವೆಂಬುದಕ್ಕೆ ಪ್ರಮಾಣ. ಅದು ನನ್ನ ಪರಮಧಾಮ ಎಂದರೆ ಪರಮಸ್ವರೂಪ. ಧಾಮಶಬ್ದಕ್ಕೆ ತೇಜಸ್ಸು, ಸ್ವರೂಪ, ಮನೆ–ಎಂಬ ಎಲ್ಲ ಅರ್ಥಗಳೂ ಉಂಟು.

**ತೇಜಃ ಸ್ವರೂಪಂ ಚ ಗೃಹಂ ಪ್ರಾಜ್ಞೈರ್ಧಾಮೇತಿ ಗೀಯತೇ ।** ಇಲ್ಲಿ ಧಾಮ ಎಂದರೆ ಸ್ವರೂಪ ಎಂದು ಅರ್ಥ. (ಮ. ಭಾ.)

**ಓಂ ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾನ್ತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥೨೨॥**

ಪಾರ್ಥ! ಎಲ್ಲ ಭೂತಗಳೂ ಯಾವನ ಒಳಗೆ ಅಡಗಿವೆಯೋ, ಯಾವನು ಇವೆಲ್ಲವನ್ನೂ ವ್ಯಾಪಿಸಿದ್ದಾನೆಯೋ–ಆ ಪರಮಪುರುಷನು ಅನನ್ಯವಾದ ಭಕ್ತಿಯಿಂದಲೇ ದೊರಕುತ್ತಾನೆ.

* * *

(ಹಿಂದಿನ ಶ್ಲೋಕದಲ್ಲಿ ಅವ್ಯಕ್ತ , ಅಕ್ಷರ ಎಂದು ಹೇಳಿದ ಪರಬ್ರಹ್ಮ ವಸ್ತುವನ್ನೇ ಶ್ರೀಕೃಷ್ಣನು ಈ ಶ್ಲೋಕದಲ್ಲಿ ಪುರುಷ ಎಂದು ಕರೆದಿದ್ದಾನೆ. **ಪುರಿ ಶಯನಾತ್ ಪುರುಷಃ**=ಶರೀರವೆಂಬ ಪಟ್ಟಣದಲ್ಲಿ ವಾಸಮಾಡುವುದರಿಂದ ಆತ್ಮನಿಗೆ ಪುರುಷ ಎಂಬ ಹೆಸರು ಬಂದಿದೆ. ಇದಲ್ಲದೇ ಸರ್ವತ್ರ ಪರಿಪೂರ್ಣನಾಗಿರುವುದರಿಂದಲೂ ಅವನು ಪುರುಷ. **ಸಹಸ್ರಶೀರ್ಷಾ**

**ಪುರುಷಃ** ಎಂಬ ಮಂತ್ರದಲ್ಲಿ ವಿರಾಟ್ಪುರುಷನನ್ನು ಪುರುಷಶಬ್ದದಿಂದ ಕರೆದಿದ್ದಾರೆ. ಶ್ರೀಕೃಷ್ಣನು ಈ ಶ್ಲೋಕದಲ್ಲಿ **ಸ ಪುರುಷಃ ಅನನ್ಯಯಾ ಭಕ್ತ್ಯಾ ಲಭ್ಯಃ** ಎಂದು ಹೇಳಿದ್ದಾನೆ. ಆ ಪುರುಷನು ಅನನ್ಯವಾದ ಭಕ್ತಿಗೆ ಮಾತ್ರವೇ ಸಿಕ್ಕತಕ್ಕವನಾಗಿದ್ದಾನೆ. ಆ ಪುರುಷನ ಸ್ವರೂಪ-ಲಕ್ಷಣಗಳನ್ನು ಹೇಳುವಾಗ–**ಯಸ್ಯಾನ್ತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್**–ಎಂದಿದ್ದಾನೆ. ಎಲ್ಲ ಪ್ರಾಣಿಗಳೂ ಯಾವ ಪುರುಷನಲ್ಲಿ ಅಡಗಿವೆಯೋ, ಯಾವನಿಂದ ಈ ಸಕಲಭುವನಗಳೂ ವ್ಯಾಪ್ತವಾಗಿವೆಯೋ–ಅಂತಹ ಪುರುಷನು ಅನನ್ಯಭಕ್ತಿಯಿಂದ ಮಾತ್ರವೇ ಲಭ್ಯನು. **ಪುರುಷ ಏವೇದಗ್ಂ ಸರ್ವಂ । ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ**–ಈ ಮಂತ್ರಗಳು ಪುರುಷನ ಸರ್ವವ್ಯಾಪಕತೆಯನ್ನೇ ಹೇಳುತ್ತವೆ. ಆಕಾಶವು ಕುಡಿಕೆ-ಮಡಿಕೆಗಳಲ್ಲಿ ವ್ಯಾಪ್ತವಾಗಿರುವಂತೆ–ಪುರುಷನು ಸರ್ವತ್ರ ವ್ಯಾಪ್ತನಾಗಿದ್ದಾನೆ. ಸರ್ವವ್ಯಾಪಕನಾದ, ಸರ್ವಭೂತಗಳನ್ನೂ ತನ್ನಲ್ಲಿಯೇ ಇಟ್ಟುಕೊಂಡಿರುವ, ಶರೀರವೆಂಬ ಪುರದಲ್ಲಿರುವ ಪರಮಾತ್ಮನು ಅನನ್ಯ ಭಕ್ತಿಯಿಂದ ಲಭ್ಯನು. ಭಕ್ತಿಯೆಂದರೆ ಅನನ್ಯಪ್ರೀತಿ. ಸಾಮಾನ್ಯವಾಗಿ ಎಲ್ಲ ಮನುಷ್ಯರಿಗೂ ಶರೀರದ ಮೇಲೆ ಅತ್ಯಂತಪ್ರೀತಿಯಿರುತ್ತದೆ. ಒಂದು ಕಪಿಯು ತನ್ನ ಕಂದನೊಡನೆ ನದಿಯನ್ನು ದಾಟುತ್ತಿದ್ದಿತು. ನದಿಯ ಮಧ್ಯ ಭಾಗದಲ್ಲಿ ಪ್ರವಾಹವು ರಭಸವಾಗಿ ಬರುತ್ತಿದ್ದುದರಿಂದ ಮರಿಯೊಡನೆ ಈಜಲು ಅದಕ್ಕೆ ಸಾಧ್ಯವಾಗಲಿಲ್ಲ. ಒಡನೆಯೇ ಅದು ಮರಿಯನ್ನು ಕಿತ್ತೊಗೆದು ತನ್ನ ಪ್ರಾಣವನ್ನು ಉಳಿಸಿಕೊಂಡಿತಂತೆ. ಇದರಂತೆ ಎಲ್ಲ ಪ್ರಾಣಿಗಳಿಗೂ ತಮ್ಮ ಪ್ರಾಣ ಅಥವಾ ದೇಹದ ಮೇಲೆ ಹೆಚ್ಚು ಪ್ರೀತಿಯಿರುತ್ತದೆ. ಅದೇ ಪ್ರೀತಿಯನ್ನು ಆತ್ಮದ ಕಡೆಗೆ ತಿರುಗಿಸಬೇಕು. ನಶ್ವರವಾದ ದೇಹಕ್ಕೂ ಶಾಶ್ವತವಾದ ಆತ್ಮಕ್ಕೂ ಭಿನ್ನತೆಯನ್ನು ಕಾಣಬೇಕು. ತನ್ನ ಶರೀರದಲ್ಲಿಯೇ ಅಡಗಿರುವ ಪುರುಷನನ್ನು ಅನನ್ಯಭಕ್ತಿಯಿಂದ ಸರ್ವದಾ ಆರಾಧಿಸಬೇಕು. ಆತ್ಮಪ್ರೇಮವೇ ಆತ್ಮದರ್ಶನಕ್ಕೆ ಮುಖ್ಯಸಾಧನ. ಯಾವನು ಆತ್ಮನನ್ನು ಅತ್ಯಂತ ಉತ್ಕಟವಾಗಿ ಪ್ರೀತಿಸುತ್ತಾನೆಯೋ ಅವನಿಗೆ ಮಾತ್ರವೇ ಆತ್ಮನು ಲಭ್ಯನಾಗುವನು. ಆತ್ಮಕಾಮನಾಗಬೇಕು, ಆತ್ಮರತಿಯಾಗಬೇಕು. ಆತ್ಮನಲ್ಲಿಯೇ ಅನನ್ಯಭಕ್ತಿಯುಳ್ಳವನಾಗಬೇಕು. ಅಂತಹವನಿಗೆ ಮಾತ್ರವೇ

ಸಕಲಪ್ರಾಣಿಗಳ ಹೃದಯಗುಹೆಯಲ್ಲಿ ಪವಡಿಸಿರುವ ಜ್ಯೋತಿಸ್ವರೂಪನಾದ ಪರಮಾತ್ಮನು ಸಿಕ್ಕುತ್ತಾನೆ.)

O O O

**ಅನನ್ಯಯಾ ಭಕ್ತ್ಯಾ** =ಜ್ಞಾನಲಕ್ಷಣವಾದ ಆತ್ಮೈಕವಿಷಯವಾದ ಭಕ್ತಿಯಿಂದ. **ಯಸ್ಯ ಅನ್ತಃಸ್ಥಾನಿ ಭೂತಾನಿ**=ಪರಮಾತ್ಮನು ಎಲ್ಲಕ್ಕೂ ಕಾರಣ. ಭೂತಗಳ ಸೃಷ್ಟಿಕ್ರಿಯೆಯೇ ಕಾರ್ಯ. ಕಾರ್ಯವು ಕಾರಣದಲ್ಲಿ ಅಡಕವಾಗಿದೆ. **ಕಾರ್ಯಂ ಹಿ ಕಾರಣಸ್ಯ ಅನ್ತರ್ವೃತ್ತಿ ಭವತಿ । ಯೇನ ಸರ್ವಮಿದಂ ತತಂ**= ಘಟ ಮುಂತಾದುವುಗಳೆಲ್ಲವೂ ಆಕಾಶದಿಂದ ವ್ಯಾಪಿಸಲ್ಪಟ್ಟಿರುವಂತೆ ಈ ಜಗತ್ತೆಲ್ಲವೂ ಆ ಪರಮಪುರುಷನಿಂದ ವ್ಯಾಪಿಸಲ್ಪಟ್ಟಿದೆ. (ಶಂ. ಭಾ.)

**ಮತ್ತಃ ಪರತರಂ ನಾನ್ಯತ್ । ಮಯಿ ಸರ್ವಮಿದಂ ಪ್ರೋತಂ । ಮಾಮೇಭ್ಯಃ ಪರಮವ್ಯಯಂ**–ಮುಂತಾದ ವಾಕ್ಯಗಳಿಂದ ನಿರ್ದಿಷ್ಟನಾಗಿರುವ ಯಾವನಲ್ಲಿ ಎಲ್ಲ ಭೂತಗಳೂ ಒಳಗೆ ಅಡಕವಾಗಿವೆಯೋ ಮತ್ತು ಯಾವ ಪ್ರಮಾಣದಿಂದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆಯೋ ಆ ಪುರುಷನು **ಅನನ್ಯಚೇತಾಃ ಸತತಂ** ಎಂದು ಹೇಳಲ್ಪಟ್ಟಿರುವ ಅನನ್ಯಭಕ್ತಿಗೆ ದೊರೆಯುವನು. ಜ್ಞಾನಿಗೆ ಪ್ರಾಪ್ಯವಾಗುವ ಪರಮಾತ್ಮವಸ್ತುವು ಹಿಂದಿನ ಶ್ಲೋಕದಲ್ಲಿ ಹೇಳಿದ ಅವ್ಯಕ್ತ, ಅಕ್ಷರ ಎಂದು ಕರೆಯಲ್ಪಟ್ಟಿರುವ ಕೇವಲಾತ್ಮಸ್ವರೂಪಕ್ಕಿಂತಲೂ ವಿಲಕ್ಷಣವಾದುದು ಮತ್ತು ಶ್ರೇಷ್ಠವಾದುದು. ಜ್ಞಾನಿಗೆ ಅದೇ ಪ್ರಾಪ್ಯ. ಏಕೆಂದರೆ ಅವನು ಕೇವಲ ಪುರುಷನಲ್ಲ ; ಪರಮಪುರುಷ. (ರಾ. ಭಾ.)

**ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್ । ತೇನೇದಂ ಪೂರ್ಣಂ ಪುರುಷೇಣ ಸರ್ವಂ**–ಮುಂತಾದ ಶ್ರುತಿಗಳಲ್ಲಿ ಹೇಳಿರುವ ಪರಮಾತ್ಮನು ಶರೀರವೆಂಬ ಪುರದಲ್ಲಿ ಶಯನಮಾಡುವಿಕೆ, ಪೂರ್ಣನಾಗಿರುವಿಕೆ, ಪೂರ್ವ ದಲ್ಲಿ ಇರುವಿಕೆ, ಪುರುವಾಗಿ (ಹೇರಳವಾಗಿ) ದಾನಮಾಡುವಿಕೆ–ಮುಂತಾದ ನಾನಾಕಾರಣಗಳಿಂದ ಪುರುಷನೆನಿಸುತ್ತಾನೆ. **ಸಹಸ್ರಶೀರ್ಷಾ ಪುರುಷಃ** ಮುಂತಾದ ಶ್ರುತಿಗಳಲ್ಲಿ ಅವನನ್ನೇ ಪುರುಷನೆಂದು ಕರೆದಿದೆ. **ಪರಃ** ಎಂಬ

ವಿಶೇಷಣವನ್ನು ಕೊಟ್ಟಿರುವುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿರುವ ಫಲ ಕ್ಕಿಂತಲೂ ಅಧಿಕಫಲವನ್ನು ಇಲ್ಲಿ ಉಪದೇಶಿಸಿದೆ. —ವೇದಾಂತದೇಶಿಕರು

ಈ ಶ್ಲೋಕವು ಪರಮಾತ್ಮಪ್ರಾಪ್ತಿಗೆ ಪರಮಸಾಧನವು ಯಾವುದೆಂಬು ದನ್ನು ಹೇಳುತ್ತದೆ. (ಮ. ಭಾ.)

**ಓಂ ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥೨೩॥**

ಎಲೈ ಭರತಶ್ರೇಷ್ಠನೇ! ಯಾವ ಕಾಲದಲ್ಲಿ ಪ್ರಯಾಣಮಾಡುವ ಯೋಗಿಗಳು ಪುನರ್ಜನ್ಮರಾಹಿತ್ಯವನ್ನು ಹೊಂದುವರೋ ಮತ್ತು ಯಾವ ಕಾಲದಲ್ಲಿ ಪ್ರಯಾಣಮಾಡುವ ಯೋಗಿಗಳು ಪುನರ್ಜನ್ಮವನ್ನು ಪಡೆಯುವರೋ—ಆ ಕಾಲವನ್ನು ನಿನಗೆ ಹೇಳುವೆನು.

* * *

(ಆತ್ಮದರ್ಶನವನ್ನು ಈ ಜನ್ಮದಲ್ಲಿಯೇ ಪಡೆದು ಜೀವನ್ಮುಕ್ತರಾದವರಿಗೆ ಯಾವ ಕಾಲವೂ ಏನೂ ಮಾಡುವುದಿಲ್ಲ. ಮನೆಯ ಯಜಮಾನನಿಗೆ ರಾತ್ರಿಯ ಕತ್ತಲೆಯಲ್ಲಿ ತನ್ನ ಮನೆಯ ಕೊಠಡಿಗಳ ವಿಷಯವು ಚೆನ್ನಾಗಿಯೇ ತಿಳಿದಿರುತ್ತದೆ. ಯಾವ ಕಡೆಯಲ್ಲಿ ಯಾವ ಕೊಠಡಿಯಿದೆ? ಬಚ್ಚಲುಮನೆಗೆ ಅಥವಾ ಅಡಿಗೆಯ ಮನೆಗೆ ಹೇಗೆ ಹೋಗಬೇಕು?—ಎಂಬ ಅರಿವಿರುತ್ತದೆ. ಅದೇ ರೀತಿಯಲ್ಲಿ ಜೀವನ್ಮುಕ್ತನಿಗೆ ಅಂತ್ಯಕಾಲದಲ್ಲಿ ಬ್ರಹ್ಮನಲ್ಲಿಯೇ ಸೇರಿ ಕೊಳ್ಳುವ ಅರಿವು ಚೆನ್ನಾಗಿರುತ್ತದೆ. ಸೇರಿ ಸೇರಿ ಅಭ್ಯಾಸವಾಗಿಬಿಟ್ಟಿರುತ್ತದೆ. ಆದುದರಿಂದ ಅವನು ಹಿಡಿದಿರುವ ಜಾಡನ್ನು ಯಾವುದೇ ಕಾಲವೂ ಸಹ ವ್ಯತ್ಯಾಸಗೊಳಿಸಲಾರದು.

ಸಮಾಧಿಸ್ಥನಾಗಿ ದೇಹವನ್ನು ಅಂಗಿಯಂತೆಯೇ ಕಳಚಿ ಪರಬ್ರಹ್ಮನಲ್ಲಿ ಸೇರಿಕೊಂಡುಬಿಡಬಹುದು. ಹಾಗೆ ಸಮಾಧಿಸ್ಥರಾಗಿ ದೇಹವನ್ನು ತೊರೆ ಯದೇ ಇರುವ ಜ್ಞಾನಯೋಗಿಗಳ ಮತ್ತು ಪುಣ್ಯಕರ್ಮಿಗಳಾದ ಯೋಗಿಗಳ ವಿಷಯವನ್ನು ಶ್ರೀಕೃಷ್ಣನು ಇಲ್ಲಿ ಹೇಳುತ್ತಾನೆ.

ಈ ಶ್ಲೋಕದಲ್ಲಿ ಭಗವಂತನು 'ಕಾಲದ ವಿಷಯವಾಗಿ ಹೇಳುತ್ತೇನೆ' ಎಂದು ಹೇಳಿರುವುದರಿಂದಲೂ, ಮುಂದಿನ ಶ್ಲೋಕಗಳಲ್ಲಿ ದಕ್ಷಿಣಾಯನ- ಉತ್ತರಾಯಣಗಳ ಪ್ರಸ್ತಾಪವಿರುವುದರಿಂದಲೂ—ಇಲ್ಲಿ ದಕ್ಷಿಣಾಯನ ಮತ್ತು

ಉತ್ತರಾಯಣಕಾಲಗಳನ್ನು ನಿರ್ದೇಶಿಸಿ ಹೇಳಿದ್ದಾನೆ ಎಂದು ಹೇಳಬಹುದಾಗಿದೆ. ಯತ್ರ ಶಬ್ದವು ಸ್ಥಳನಿರ್ದೇಶಕವೂ ಆಗಿರುವುದರಿಂದ ಮುಂದಿನ ಶ್ಲೋಕಗಳಲ್ಲಿ ತತ್ರ ಪದವಿರುವುದರಿಂದ ಉಪನಿಷತ್ತಿನಲ್ಲಿ ಹೇಳಿರುವ ಉತ್ತರಾಯಣಗತಿ ಮತ್ತು ದಕ್ಷಿಣಾಯನಗತಿಗಳನ್ನು ಕುರಿತು ಶ್ರೀಕೃಷ್ಣನಿಲ್ಲಿ ಹೇಳಿದ್ದಾನೆ.

ಇಲ್ಲಿ ಯೋಗಿನಃ ಎಂಬ ಶಬ್ದವು ಕ್ರಮಮುಕ್ತಿಯಿಂದ ಬ್ರಹ್ಮನನ್ನು ಹೊಂದುವ ಯೋಗಿಗಳನ್ನು ಹೇಳುತ್ತದೆ. ಕರ್ಮಿಗಳನ್ನೂ ಯೋಗಿಗಳೆಂದು ಕರೆದಿದೆ. ಕರ್ಮಯೋಗೇನ ಯೋಗಿನಾಂ ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ಕರ್ಮಿಗಳನ್ನು ಗೌಣಭಾವದಿಂದ ಯೋಗಿಗಳೆಂದು ಕರೆಯಬಹುದು.)

O O O

ಇಲ್ಲಿ ಆವೃತ್ತಿಮಾರ್ಗವನ್ನು ಕೂಡ ಭಗವಂತನು ವರ್ಣಿಸಿರುವುದು ಅನಾವೃತ್ತಿಮಾರ್ಗದ ಸ್ತುತಿಗೋಸ್ಕರ.

**ಆವೃತ್ತಿಮಾರ್ಗೋಪನ್ಯಾಸಃ ಇತರಮಾರ್ಗಸ್ತುತ್ಯರ್ಥಃ** (ಶಂ. ಭಾ.)

ಈ ಶ್ಲೋಕದಲ್ಲಿ ಹೇಳಿರುವ ಕಾಲಶಬ್ದವು ಮಾರ್ಗವನ್ನು ಹೇಳುತ್ತದೆ. ಆ ಮಾರ್ಗದಲ್ಲಿ ಹಗಲು ಮುಂತಾದ ಕಾಲಾಭಿಮಾನಿದೇವತೆಗಳು ಹೆಚ್ಚಾಗಿರುವುದರಿಂದ ಮಾರ್ಗವನ್ನು ಕಾಲವೆಂದು ವ್ಯವಹರಿಸಿದೆ. ಕಾಲ ಶಬ್ದವು ಮಾರ್ಗಕ್ಕೆ ಉಪಲಕ್ಷಣ.

ಯಾವ ಮಾರ್ಗದಲ್ಲಿ ಹೋದ ಯೋಗಿಗಳು ಅನಾವೃತ್ತಿಯನ್ನು ಹೊಂದುತ್ತಾರೆಯೋ ಆ ಮಾರ್ಗವನ್ನೂ ಮತ್ತು ಯಾವ ಮಾರ್ಗದಲ್ಲಿ ಹೋದ ಪುಣ್ಯಕರ್ಮಿಗಳು ಪುನರಾವೃತ್ತಿಯನ್ನು ಹೊಂದುತ್ತಾರೆಯೋ ಅದನ್ನೂ ಹೇಳುವೆನು ಎಂದು ಶ್ಲೋಕದ ಭಾವ. (ರಾ. ಭಾ.)

ಧೂಮಾದಿ ಮಾರ್ಗಗಳನ್ನು ಹೇಳಿರುವುದು ಅದು ಹೇಯವೆಂದು ತೋರಿಸುವುದಕ್ಕೋಸ್ಕರ. ಅರ್ಚಿರಾದಿ ಮಾರ್ಗವನ್ನು ಉಪದೇಶಮಾಡಿರುವುದು ಅದನ್ನು ಅನುಸಂಧಾನಮಾಡುವುದಕ್ಕೋಸ್ಕರವೇ. ಯತ್ರ ಕಾಲೇ ಪ್ರಯಾತಾ ಯೋಗಿನಃ ಎಂಬುದಕ್ಕೆ ಕಾಲವೇ ಮುಂತಾದ ಅಭಿಮಾನಿ ದೇವತೆಗಳುಳ್ಳ ಮಾರ್ಗದಲ್ಲಿ ಹೋದ ಯೋಗಿಗಳು ಎಂದರ್ಥ.

–ವೇದಾಂತದೇಶಿಕರು.

ಯಾವ ಕಾಲದಲ್ಲಿ ಅಗ್ನಿಯೇ ಮುಂತಾದ ಅಭಿಮಾನಿದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಹೋಗುವ ಯೋಗಿಗಳು ಆವೃತ್ತಿ ಮತ್ತು ಅನಾವೃತ್ತಿಗಳನ್ನು ಹೊಂದುತ್ತಾರೆಯೋ ಅದನ್ನು ಹೇಳುತ್ತೇನೆ.

**ಯತ್ಕಾಲಾದ್ಯಭಿಮಾನಿದೇವತಾಗತಾ ಆವೃತ್ಯನಾವೃತ್ತೀ ಗಚ್ಛನ್ತಿ ತಾ ಆಹ.**

**ಕಾಲ ಇತ್ಯುಪಲಕ್ಷಣಮ್. ಅಗ್ನ್ಯಾದೇರಪಿ ವಕ್ಷ್ಯಮಾಣತ್ವಾತ್.**
(ಮ. ಭಾ.)

ಬ್ರಹ್ಮವಿದರಾದ ಜನರು ಬ್ರಹ್ಮನನ್ನು ಸೇರುವ ಕಾಲವು ಯಾವುದು?

**ಓಂ ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥**

ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣದ ಆರು ಮಾಸಗಳು–ಇದರಲ್ಲಿ ಪ್ರಯಾಣಮಾಡಿದ ಬ್ರಹ್ಮವಿದರಾದ ಜನರು ಬ್ರಹ್ಮನನ್ನು ಸೇರುತ್ತಾರೆ.

*   *   *

(ಈ ಶ್ಲೋಕವೂ ಮತ್ತು ಮುಂದಿನ ಶ್ಲೋಕವೂ ಸಮಸ್ಯಾಪೂರ್ಣವಾಗಿವೆ. ಕೇವಲ 'ಉತ್ತರಾಯಣ' ಎಂದು ಹೇಳಿದ್ದರೆ ಅಷ್ಟು ಕಠಿನ ಸಮಸ್ಯೆಯಾಗುತ್ತಿರಲಿಲ್ಲ.

ಉತ್ತರಾಯಣ ಎಂದರೇನು? ಸೂರ್ಯನು ಉತ್ತರದಿಕ್ಕಿನಲ್ಲಿ ಸಂಚರಿಸುವ ಕಾಲ. ಮಕರಸಂಕ್ರಾತಿಯಿಂದ ಕರ್ಕಾಟಕಸಂಕ್ರಾಂತಿಯವರೆಗಿನ ಆರು ತಿಂಗಳ ಕಾಲಕ್ಕೆ ಉತ್ತರಾಯಣ ಎಂದು ಹೆಸರು.

**ಕರ್ಕಟಾದಿಸ್ಥಿತೇ ಭಾನೌ ದಕ್ಷಿಣಾಯನಮುಚ್ಯತೇ ।**
**ಉತ್ತರಾಯಣಮಪ್ಯುಕ್ತಂ ಮಕರಸ್ಥೇ ದಿವಾಕರೇ ॥**

ಸೂರ್ಯನು ಕರ್ಕಾಟಕರಾಶಿಯನ್ನು ಪ್ರವೇಶಿಸಿದಾಗ ದಕ್ಷಿಣಾಯನವು ಪ್ರಾರಂಭವಾಗುತ್ತದೆ. ಮಕರರಾಶಿಯನ್ನು ಪ್ರವೇಶಿಸಿದಾಗ ಉತ್ತರಾಯಣವು ಪ್ರಾರಂಭವಾಗುತ್ತದೆ.

ಉತ್ತರಾಯಣದ ವೈಶಿಷ್ಟ್ಯ : ಉತ್ತರಾಯಣದಲ್ಲಿ ಮರಣಹೊಂದಿದರೆ

ಮೋಕ್ಷಪ್ರಾಪ್ತಿ ಎಂಬುದು ಲೋಕಪ್ರಸಿದ್ಧವಾಗಿದೆ. ಉತ್ತರಾಯಣಕ್ಕೆ ಮಹತ್ತ್ವವನ್ನು ಕೊಡಲೆಂದೇ ಭೀಷ್ಮನೂ ಸಹ ತನ್ನ ಆಯುಷ್ಯವನ್ನು ಉತ್ತರಾಯಣದವರೆಗೆ ಹೆಚ್ಚಿಸಿಕೊಂಡನು.

**ದೈವೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ।**
**ಅಹಸ್ತತ್ರೋದಗಯನಂ ರಾತ್ರಿಃ ಸ್ಯಾದ್ದಕ್ಷಿಣಾಯನಮ್ ॥**

ಮಾನವಮಾನದ ಒಂದು ವರ್ಷವು–ಹಗಲೂ-ರಾತ್ರಿಗಳಿಂದ ಕೂಡಿದ ದೇವಮಾನದ ಒಂದು ದಿನವಾಗುತ್ತದೆ. ಅದರಲ್ಲಿ ದೇವತೆಗಳ ಹಗಲು ಮಾನವಮಾನದ ಉತ್ತರಾಯಣದ ಆರು ತಿಂಗಳೆಂದೂ, ದೇವತೆಗಳ ರಾತ್ರಿಯು ಮಾನವಮಾನದ ದಕ್ಷಿಣಾಯನದ ಆರು ತಿಂಗಳೆಂದೂ ವಿಭಾಗಿಸಲ್ಪಟ್ಟಿದೆ.

ಪ್ರಯಾಣಕ್ಕೆ ಸುಲಭವಾದ ಕಾಲವು ಹಗಲು ಎನಿಸುತ್ತದೆ. ಪ್ರಯಾಣಕ್ಕೆ ಕಷ್ಟವಾಗಿರುವ ಕಾಲವು ರಾತ್ರಿ ಎನಿಸುತ್ತದೆ. ಉತ್ತರಾಯಣವು (ಆರು ತಿಂಗಳು) ದೇವತೆಗಳಿಗೆ ಹಗಲಾಗಿರುತ್ತದೆ. ದಕ್ಷಿಣಾಯನವು ದೇವತೆಗಳಿಗೆ ರಾತ್ರಿಯಾಗಿರುತ್ತದೆ. ಉತ್ತರಾಯಣದಲ್ಲಿ (ದೇವತೆಗಳ ಹಗಲಿನಲ್ಲಿ) ಬ್ರಹ್ಮೋಪಾಸಕರಾದ ಯೋಗಿಗಳು ಸುಲಭವಾಗಿ ಪ್ರಯಾಣಮಾಡಬಲ್ಲರು. ದಕ್ಷಿಣಾಯನದಲ್ಲಿ (ದೇವತೆಗಳ ರಾತ್ರಿಯಲ್ಲಿ) ಪುಣ್ಯಕರ್ಮಿಗಳಾದ ಯೋಗಿಗಳು ಸುಲಭವಾಗಿ ಪ್ರಯಾಣಮಾಡಬಲ್ಲರು.

ಈ ಕಾರಣದಿಂದ ದೇವತೆಗಳಿಗೆ ಹಗಲಾಗಿರುವ ಉತ್ತರಾಯಣದಲ್ಲಿ ಮಾನವನು ಅಥವಾ ಯೋಗಿಯು ಮೃತಿಹೊಂದಿದರೆ ಅವನನ್ನು ದೇವತೆಗಳು ಅರ್ಚಿರಾದಿ ಮಾರ್ಗದಿಂದ ಬ್ರಹ್ಮನೆಡೆಗೆ ಸುಲಭವಾಗಿ ಒಯ್ಯುವರು. ಹೀಗೆ ಒಯ್ಯುವ ದೇವತೆಗಳು ಯಾರು?–ಎಂಬುದನ್ನು ಈ ಶ್ಲೋಕದಲ್ಲಿ ಹೇಳಿದೆ. **ಅಗ್ನಿ** ಎಂದರೆ ಅಗ್ನಿದೇವತೆ. **ಜ್ಯೋತಿ** ಎಂದರೆ ಜ್ಯೋತಿರ್ದೇವತೆ. **ಅಹಸ್ಸು** ಎಂದರೆ ಹಗಲಿನ ಅಭಿಮಾನಿದೇವತೆ. (ಮಿತ್ರ) **ಶುಕ್ಲ** ಎಂದರೆ ಶುಕ್ಲ ಪಕ್ಷಾಭಿಮಾನಿದೇವತೆ. ಉತ್ತರಾಯಣವೆಂಬ ಆರು ಮಾಸಗಳ ದೇವತೆಗಳು. ಈ ದೇವತೆಗಳೆಲ್ಲರೂ ಸೇರಿ ಉತ್ತರಾಯಣದಲ್ಲಿ ಮರಣಹೊಂದಿದ ಬ್ರಹ್ಮ ವಿದರಾದ ಜನರನ್ನು ಬ್ರಹ್ಮನಲ್ಲಿಗೆ ತಲುಪಿಸುತ್ತಾರೆ. ಅಥವಾ ಈ ಕಾಲಾಭಿ ಮಾನಿದೇವತೆಗಳ ಮಾರ್ಗವಾಗಿ ಹೋದ ಬ್ರಹ್ಮವಿದರಾದ ಜನರು ಬ್ರಹ್ಮಲೋಕವನ್ನು ಸೇರುತ್ತಾರೆ.

ಇದೇ ವಿಷಯವೇ ಬೃಹದಾರಣ್ಯಕದಲ್ಲಿ ಹೀಗೆ ಬಂದಿದೆ :

**ತೇ ಯ ಏವಮೇತದ್ವಿದುಃ ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ। ತೇಽರ್ಚಿರಭಿಸಮ್ಭವನ್ತಿ। ಅರ್ಚಿಷೋಽಹಃ।ಅಹ್ನ ಆಪೂರ್ಯಮಾಣಪಕ್ಷಮ್। ಆಪೂರ್ಯಮಾಣಪಕ್ಷಾದ್ಯಾನ್ ಷಣ್ಮಾಸಾನುದಙ್ಙಾದಿತ್ಯ ಏತಿ। ಮಾಸೇಭ್ಯೋ ದೇವಲೋಕಮ್। ದೇವಲೋಕಾದಾದಿತ್ಯಮ್। ಆದಿತ್ಯಾದ್ವೈದ್ಯುತಮ್। ತಾನ್ ವೈದ್ಯುತಾನ್ ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ಗಮಯತಿ। ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸನ್ತಿ ತೇಷಾಂ ನ ಪುನರಾವೃತ್ತಿಃ**
೮-೨-೧೫.

ಅರಣ್ಯದಲ್ಲಿ ಶ್ರದ್ಧೆಯಿಂದ ಸತ್ಯಬ್ರಹ್ಮನನ್ನು ಉಪಾಸಿಸುವವರು ಅರ್ಚಿರ್ದೇವತೆಯನ್ನು ಸೇರುತ್ತಾರೆ. ಅರ್ಚಿರ್ದೇವತೆಯಿಂದ ಅಹರ್ದೇವತೆಯನ್ನೂ, ಅಹರ್ದೇವತೆಯಿಂದ ಶುಕ್ಲಪಕ್ಷದೇವತೆಯನ್ನೂ, ಶುಕ್ಲಪಕ್ಷದೇವತೆಯಿಂದ ಉತ್ತರಾಯಣದೇವತೆಗಳನ್ನೂ, ಉತ್ತರಾಯಣದೇವತೆಗಳಿಂದ ದೇವಲೋಕಾಭಿಮಾನಿದೇವತೆಯನ್ನೂ, ದೇವಲೋಕಾಭಿಮಾನಿದೇವತೆಯಿಂದ ಆದಿತ್ಯನನ್ನೂ, ಆದಿತ್ಯನಿಂದ ವಿದ್ಯುದ್ದೇವತೆಯನ್ನೂ ಸೇರುತ್ತಾರೆ. ಆಗ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಪುರುಷನೊಬ್ಬನು ಬಂದು ವಿದ್ಯುದ್ದೇವತೆಯೊಡನಿರುವ ಬ್ರಹ್ಮೋಪಾಸಕನನ್ನು ಬ್ರಹ್ಮಲೋಕಗಳಿಗೆ ಕರೆದುಕೊಂಡು ಹೋಗುತ್ತಾನೆ. ಶ್ರೇಷ್ಠರಾದ ಆ ಯೋಗಿಗಳು ಬ್ರಹ್ಮಲೋಕದಲ್ಲಿ ಪ್ರಹೃಷ್ಟರಾಗಿ ವಾಸಿಸುತ್ತಾರೆ. ಅವರು ಸಂಸಾರಕ್ಕೆ ಹಿಂದಿರುಗುವುದಿಲ್ಲ.

**ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯನ್ತಿ ತೇ ಧೂಮಮಭಿಸಮ್ಭವನ್ತಿ ಧೂಮಾದ್ರಾತ್ರಿಂ। ರಾತ್ರೇರಪಕ್ಷೀಯಮಾಣಪಕ್ಷಮ್। ಅಪಕ್ಷೀಯಮಾಣಪಕ್ಷಾದ್ಯಾನ್ ಷಣ್ಮಾಸಾನ್ದಕ್ಷಿಣಾಮಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಮ್। ಪಿತೃಲೋಕಾಚ್ಚನ್ದ್ರಂ। ತೇ ಚನ್ದ್ರಂ ಪ್ರಾಪ್ಯಾನ್ನಂ ಭವನ್ತಿ। ತಾಂಸ್ತತ್ರ ದೇವಾ ಯಥಾ ಸೋಮಂ ರಾಜಾನಮಾಪ್ಯಾಯಸ್ವಾಪಕ್ಷೀಯಸ್ವೇತಿ।**

ಯಾರು ಯಜ್ಞದಿಂದಲೂ ದಾನದಿಂದಲೂ, ತಪಸ್ಸಿನಿಂದಲೂ ಲೋಕ

ಗಳನ್ನು ಜಯಿಸಿಕೊಳ್ಳುತ್ತಾರೆಯೋ ಅವರು ಧೂಮದೇವತೆಯನ್ನು ಸೇರುತ್ತಾರೆ. ಧೂಮದೇವತೆಯಿಂದ ರಾತ್ರಿದೇವತೆಯನ್ನೂ, ರಾತ್ರಿದೇವತೆಯಿಂದ ಕೃಷ್ಣಪಕ್ಷದೇವತೆಯನ್ನೂ, ಕೃಷ್ಣಪಕ್ಷದೇವತೆಯಿಂದ ದಕ್ಷಿಣಾಯನದೇವತೆಗಳನ್ನೂ, ದಕ್ಷಿಣಾಯನದೇವತೆಗಳಿಂದ ಪಿತೃಲೋಕದೇವತೆಗಳನ್ನೂ, ಪಿತೃಲೋಕದೇವತೆಗಳಿಂದ ಚಂದ್ರನನ್ನೂ ಸೇರುತ್ತಾರೆ.

ನಮ್ಮ ದೇಹದಲ್ಲಾಗುವ ನಾಡೀಸಂಚಾರಕ್ಕೂ ಉತ್ತರಾಯಣ-ದಕ್ಷಿಣಾಯನಗಳೆಂಬ ಹೆಸರಿದೆ.

**ಪಿಙ್ಗಳಾಯಾಂ ರವಿಸ್ತದ್ವನ್ಮನೇ ವೇದವಿದಾಂ ವರ ।**
**ಪಿಙ್ಗಳಾಯಾ ಇಡಾಯಾಂ ತು ವಾಯೋಃ ಸಂಕ್ರಮಣಂ ಹಿ ಯತ್ ।**
**ತದುತ್ತರಾಯಣಂ ಪ್ರೋಕ್ತಂ ಮುನೇ ವೇದಾನ್ತವೇದಿಭಿಃ ॥೪೩॥**

ಪೂರ್ವಾಭಿಮುಖವಾಗಿ ಕುಳಿತಿರುವವನಿಗೆ ಪಿಂಗಳಾನಾಡಿಯು ಬಲಪಾರ್ಶ್ವದಲ್ಲಿರುತ್ತದೆ. ಇಡಾನಾಡಿಯು ಉತ್ತರದಿಕ್ಕಿನಲ್ಲಿ ಅಥವಾ ಎಡಪಾರ್ಶ್ವದಲ್ಲಿರುತ್ತದೆ. ಮಕರಾಯನದಲ್ಲಿ ದಕ್ಷಿಣದಲ್ಲಿದ್ದ ಸೂರ್ಯನು ಕರ್ಕಟಾಯನಪರ್ಯಂತವಾಗಿ ಉತ್ತರದಿಕ್ಕಿಗೆ ಹೋಗುತ್ತಿರುತ್ತಾನೆ. ಅದೇ ರೀತಿಯಲ್ಲಿ ದಕ್ಷಿಣಪಾರ್ಶ್ವದಲ್ಲಿರುವ ಪಿಂಗಳಾನಾಡಿಯಲ್ಲಿರುವ ಸೂರ್ಯರೂಪನಾದ ವಾಯುವು ಇಡಾನಾಡಿಯ ಕಡೆಗೆ ಹೋಗುತ್ತಿದ್ದರೆ ಅದಕ್ಕೆ ಉತ್ತರಾಯಣವೆನ್ನುತ್ತಾರೆ. ಪ್ರಾಣವಾಯುವನ್ನು ಉತ್ತರಾಯಣಕ್ಕೆ ತಿರುಗಿಸಿದ ಯೋಗಿಯು ಯಾವುದೇ ಕಾಲದಲ್ಲಿಯೂ ಉತ್ತರಾಯಣಗತಿಯಲ್ಲೇ ಪ್ರಯಾಣ ಮಾಡಬಲ್ಲನು.

**ಇಡಾಯಾಃ ಪಿಙ್ಗಳಾಯಾಂ ತು ಪ್ರಾಣಸಂಕ್ರಮಣಂ ಮುನೇ ।**
**ದಕ್ಷಿಣಾಯನಮಿತ್ಯುಕ್ತಂ ಪಿಙ್ಗಳಾಯಾಮಿತಿ ಶ್ರುತಮ್ ॥೪೪॥**

(ಸೂತಸಂಹಿತೆ–ಜ್ಞಾನಕಾಂಡ ; ಅಧ್ಯಾಯ ೧೧)

ಇದೇ ರೀತಿಯಲ್ಲಿ ಪ್ರಾಣವಾಯುವು ಇಡಾನಾಡಿಯಿಂದ ಪಿಂಗಳಾನಾಡಿಯ ಕಡೆಗೆ ಸಂಕ್ರಮಣವಾಗುತ್ತಿದ್ದರೆ ದಕ್ಷಿಣಾಯನವೆಂದು ಹೆಸರು. ಜೀವದ ದಕ್ಷಿಣಾಯನಗತಿಯು ಸರ್ವಸಾಮಾನ್ಯವಾಗಿರುತ್ತದೆ. ಇವರು ಉತ್ತ ರಾಯಣ ಗತಿಯಲ್ಲಿ (ಅರ್ಚಿರಾದಿಗತಿಯಲ್ಲಿ ) ಎಂದೂ ಪ್ರಯಾಣಮಾಡಲಾರರು.)

o o o

ಅಗ್ನಿ, ಜ್ಯೋತಿ–ಇವುಗಳೆರಡೂ ಕಾಲಾಭಿಮಾನಿದೇವತೆಗಳು ಅಥವಾ ಪ್ರಸಿದ್ಧವಾದ ಅರ್ಥದ ವೈದಿಕದೇವತೆಗಳು. ಯಾವುದಾದರೂ ತೋಪಿನಲ್ಲಿ ಮಾವಿನ ಮರಗಳು ಹೆಚ್ಚಾಗಿದ್ದರೆ ಅದನ್ನು ಮಾವಿನ ತೋಪು ಎಂದು ಕರೆಯುವಂತೆ–ಇಲ್ಲಿ ಕಾಲಾಭಿಮಾನಿದೇವತೆಗಳ ವರ್ಣನೆಯೇ ಹೆಚ್ಚಾಗಿ ಬಂದಿರುವುದರಿಂದ 'ಯತ್ರ ಕಾಲೇ ತಂ ಕಾಲಂ' ಇತ್ಯಾದಿ ಕಾಲವಾಚಕ ಶಬ್ದಗಳನ್ನೇ ಉಪಯೋಗಿಸಿದೆ.

**ಭೂಯಸಾಂ ತು ನಿರ್ದೇಶಃ ಯತ್ರ ಕಾಲೇ ತಂ ಕಾಲಂ ಇತಿ ಆಮ್ರವಣವತ್.**

ಹಾಗೆಯೇ **ಅಹಃ** ಎಂಬುದು ಹಗಲಿನ ದೇವತೆ. **ಶುಕ್ಲಃ**-ಶುಕ್ಲಪಕ್ಷ ದೇವತೆ. **ಷಣ್ಮಾಸಾಃ ಉತ್ತರಾಯಣಂ**–ಇವುಗಳು ಮಾರ್ಗಭೂತರಾದ ದೇವತೆಗಳು. ಅಲ್ಲಿ ಎಂದರೆ ಆ ಮಾರ್ಗದಲ್ಲಿ ಹೋದ ಬ್ರಹ್ಮೋಪಾಸಕರು ಬ್ರಹ್ಮನನ್ನು ಹೊಂದುತ್ತಾರೆ. ಕ್ರಮವಾಗಿ ಬ್ರಹ್ಮನನ್ನು ಹೊಂದುತ್ತಾರೆ. **ಕ್ರಮೇಣ ಇತಿ ವಾಕ್ಯಶೇಷಃ.**

ಏಕೆಂದರೆ : ಸಮ್ಯಕ್ ಜ್ಞಾನನಿಷ್ಠರು ಒಡನೆಯೇ ಮುಕ್ತಿಯನ್ನು ಹೊಂದುವುದರಿಂದ ಅವರಿಗೆ ಹೋಗುವಿಕೆಗಳು ಇಲ್ಲ. **ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ** = ಬ್ರಹ್ಮದಲ್ಲಿ ಲಯಗೊಂಡ ಪ್ರಾಣವುಳ್ಳ ಅವರು ಬ್ರಹ್ಮಮಯರೇ ಬ್ರಹ್ಮಸ್ವರೂಪರೇ ಆಗಿರುತ್ತಾರೆ. (ಶಂ. ಭಾ.)

ಅಗ್ನಿರೂಪವಾದ ಜ್ಯೋತಿ (ಅರ್ಚಿ), ಅಹಸ್ಸು, ಶುಕ್ಲಪಕ್ಷ, ಉತ್ತ ರಾಯಣದ ಆರು ತಿಂಗಳು ಮತ್ತು ಸಂವತ್ಸರದವರೆಗಿನ ಕಾಲಾಭಿಮಾನಿ ದೇವತೆಗಳನ್ನು ಹೆಚ್ಚಾಗಿ ಹೊಂದಿರುವ ಮಾರ್ಗದ ಮೂಲಕ ಪ್ರಯಾಣ ಮಾಡಿದ ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ.

**ಅಗ್ನಿಃ.... ಉತ್ತರಾಯಣಮ್**–ಎಂಬುದರಿಂದ ಮುಂದಿನ ಸಂವತ್ಸರ ಮುಂತಾದುವುಗಳನ್ನೂ ಗ್ರಹಿಸಬೇಕು. ಏಕೆಂದರೆ : ಛಾಂದೋಗ್ಯದಲ್ಲಿ **ಷಡುದಙ್ಙೇತಿ ಮಾಸಾಂಸ್ತಾನ್ ಮಾಸೇಭ್ಯಃ ಸಂವತ್ಸರಂ** ಎಂದು ಕಾಲಾಭಿಮಾನಿದೇವತೆಗಳ ಕೊನೆಯಲ್ಲಿ ಸಂವತ್ಸರವನ್ನು ಹೇಳಿದೆ. ಬ್ರಹ್ಮ ಸೂತ್ರದ ಅರ್ಚಿರಾದಿಪಾದದಲ್ಲಿ ಇದನ್ನು ವಿಶದಪಡಿಸಿದೆ.

ಶ್ರೀವರದಗುರುಗಳು ಈ ದೇವತೆಗಳನ್ನು ಹೀಗೆ ಪರಿಗಣಿಸಿದ್ದಾರೆ :

**ಅರ್ಚಿರಹಸ್ಸಿತಪಕ್ಷಾ ಉದಗಯನಾಬ್ದಮರುದರ್ಕೇನ್ದೂನ್ ।**
**ಅಪಿವೈದ್ಯುತವರುಣೇನ್ದ್ರಪ್ರಜಾಪತೀನಾತಿವಾಹಿಕಾನಾಹುಃ**

ಈ ದೇವತೆಗಳಿಗೆ ಆತಿವಾಹಿಕರು ಎಂದು ಹೆಸರು.

**ಅಗ್ನಿರ್ಜ್ಯೋತಿಃ** ಎಂಬಲ್ಲಿ ಅಗ್ನಿರೂಪವಾದ ಜ್ಯೋತಿ ಎಂದು ಅರ್ಥ. ಇದು ದೇವಯಾನದ (ಅರ್ಚಿರಾದಿ ಮಾರ್ಗದ) ಮೊದಲನೆಯ ಪರ್ವದಲ್ಲಿರುವ ಅರ್ಚಿರ್ದೇವತೆಯನ್ನು ಹೇಳುತ್ತದೆ. ಅಗ್ನಿ, ಜ್ಯೋತಿ ಇಬ್ಬರೂ ಭಿನ್ನ ದೇವತೆಗಳಲ್ಲ. ಬ್ರಹ್ಮಸೂತ್ರದಲ್ಲಿ ದಕ್ಷಿಣಾಯನದಲ್ಲಿ ಮರಣಹೊಂದಿದವರಿಗೂ ಮೋಕ್ಷವೆಂದು ಹೇಳಿದೆ. **ಅತಶ್ಚಾಯನೇಽಪಿ ದಕ್ಷಿಣೇ.** ೪-೨-೧೯

ಇಲ್ಲಿಯೂ ಕೂಡ **ಶುಕ್ಲಕೃಷ್ಣೇ ಗತೀ ಹ್ಯೇತೇ** ಎಂದು ಮುಂದೆ ಹೇಳಿದೆ. ಆದುದರಿಂದ ಶ್ಲೋಕದಲ್ಲಿ ಹೇಳಿರುವ ಕಾಲಶಬ್ದವು ಕಾಲಾಭಿಮಾನಿ ದೇವತೆಗಳನ್ನು ಹೆಚ್ಚಾಗಿ ಹೊಂದಿರುವ ಮಾರ್ಗವನ್ನೇ ಹೇಳುತ್ತದೆ–ಎಂಬ ಅರ್ಥವನ್ನೇ ಗ್ರಹಿಸಬೇಕು. ನೈತೇ ಸೃತೀ ಪಾರ್ಥ ಜಾನನ್.

–ವೇದಾಂತದೇಶಿಕರು.

ಈ ಶ್ಲೋಕದಲ್ಲಿ ಜ್ಯೋತಿಃ ಎಂದರೆ ಅರ್ಚಿ. '**ತೇಽರ್ಚಿಷಮಭಿಸಮ್ಭವನ್ತಿ**' ಎಂದು ಶ್ರುತಿಯು ಹೇಳುತ್ತದೆ. ನಾರದೀಯದಲ್ಲಿಯೂ ಕೂಡ ಅಗ್ನಿಯನ್ನು ಹೊಂದಿ, ಅನಂತರ ಅರ್ಚಿಯನ್ನು ಹೊಂದಿ, ಅನಂತರ ಅಹಸ್ಸು ಮುಂತಾದುವುಗಳನ್ನು ಹೊಂದುತ್ತಾನೆ–ಎಂದು ಹೇಳುತ್ತದೆ. ಇಲ್ಲಿ ಹೇಳಿರುವ ಅಗ್ನಿ ಮುಂತಾದುವುಗಳು ಆಯಾ ಅಭಿಮಾನಿದೇವತೆಗಳು. ಇಲ್ಲದಿದ್ದರೆ **ಆಪೂರ್ಯಮಾಣಪಕ್ಷಂ** ಎಂಬುದರೊಡನೆ ಹೊಂದಿಕೆಯಾಗುವುದಿಲ್ಲ. ಇವರು ದೇವತೆಗಳು ಎಂಬುದನ್ನು ಬ್ರಾಹ್ಮವು ಸ್ಪಷ್ಟವಾಗಿ ಹೇಳುತ್ತದೆ.
**ದಿವಾದಿದೇವತಾಭಿಸ್ತು ಪೂಜಿತೋ ಬ್ರಹ್ಮ ಯಾತಿ ಹಿ ।**

ಮಾಸಾಭಿಮಾನಿದೇವತೆಗಳು ಮತ್ತು ಅಯನಾಭಿಮಾನಿದೇವತೆಗಳು ಬೇರೆ ಬೇರೆ.

ಧೂಮ ಮುಂತಾದುವುಗಳು ಆಯಾ ಅಭಿಮಾನಿದೇವತೆಗಳನ್ನು ಸೂಚಿಸುತ್ತವೆ. (ಮ. ಭಾ.)

**ಓಂ ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾನ್ದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥**

ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನದ ಆರು ಮಾಸಗಳು–ಇದರಲ್ಲಿ ಪ್ರಯಾಣಮಾಡಿದ ಯೋಗಿಯು ಚಂದ್ರನ ಜ್ಯೋತಿಯನ್ನು ಸೇರಿ ಮರಳಿಬರುತ್ತಾನೆ.

* * *

(ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ದಕ್ಷಿಣಾಯನವು ದೇವತೆಗಳಿಗೆ ರಾತ್ರಿಯಾಗಿರುತ್ತದೆ. ಆ ಸಮಯದಲ್ಲಿ ಪ್ರಾಣತೊರೆದವನು ಉತ್ತಮ ಲೋಕವನ್ನು ಕುರಿತು ಹೋಗುವುದಾದರೆ ಧೂಮ, ರಾತ್ರಿ, ಕೃಷ್ಣಪಕ್ಷ ಎಂದರೆ ಕತ್ತಲಿನ ದಿವಸ–ಇವುಗಳು ಸಿದ್ಧವಾಗಿಯೇ ಇರುತ್ತವೆ. ದೇವತೆಗಳ ರಾತ್ರಿಯಾದ ದಕ್ಷಿಣಾಯನದಲ್ಲಿ ಸತ್ತವನಿಗೆ ಚಂದ್ರನ ಹೊರತಾಗಿ ಸೂರ್ಯನ ಆಶ್ರಯವು ಸಿಕ್ಕುವುದಿಲ್ಲ. ಬ್ರಹ್ಮಲೋಕಕ್ಕೆ ಹೋಗಬೇಕಾದರೆ ಸೂರ್ಯದೇವತಾಮಾರ್ಗವಾಗಿಯೇ ಹೋಗಬೇಕು. ಆದುದರಿಂದ ಹಾಗೆ ಹೋಗದೇ ಚಂದ್ರಜ್ಯೋತಿಯನ್ನೇ ಸೇರುವುದರಿಂದ ಅಂತಹ ಜೀವಿಯು ಪುಣ್ಯಾನುಭವಾನಂತರ ಪುನಃ ಭೂಲೋಕಕ್ಕೇ ಹಿಂದಿರುಗಿಬರಬೇಕಾಗುತ್ತದೆ. ಇಲ್ಲಿ ಯೋಗೀ ಎಂಬ ಪದಕ್ಕೆ ಯಜ್ಞಾದಿ ಪುಣ್ಯಕರ್ಮಗಳನ್ನು ಮಾಡುವ ಯೋಗೀ ಎಂದು ಅರ್ಥಮಾಡಬೇಕು. ಏಕೆಂದರೆ : ಪರಮಾತ್ಮಯೋಗಿಯಾಗಿದ್ದರೆ–ಸೂತಸಂಹಿತೆಯ ಜ್ಞಾನಕಾಂಡದಲ್ಲಿ ಹೇಳಿರುವಂತೆ ಪ್ರಾಣವಾಯುವಿನ ಉತ್ತರಾಯಣಗತಿಯ ಸಾಧಕನಾಗಿದ್ದರೆ ಅವನಿಗೆ ನಿವೃತ್ತಿಯೇ ಇಲ್ಲ.)

O O O

**ಯೋಗೀ**= ಇಲ್ಲಿ ಯೋಗಿ ಎಂದರೆ ಇಷ್ಟಾ-ಪೂರ್ತಗಳೇ ಮುಂತಾದ ಕರ್ಮಗಳನ್ನು ಮಾಡುವ ಕರ್ಮಿ. ಧೂಮ, ರಾತ್ರಿ ಮುಂತಾದುವುಗಳು ಆಯಾ ಅಭಿಮಾನಿದೇವತೆಗಳು. (ಶಂ. ಭಾ.)

**ಧೂಮಃ ರಾತ್ರಿಃ** = ಇದು ಧೂಮಾದಿಮಾರ್ಗದಲ್ಲಿರುವ ಪಿತೃಲೋಕ ಮುಂತಾದುವನ್ನು ತಿಳಿಸುತ್ತದೆ. ಯೋಗಿಗೆ ಧೂಮಾದಿಮಾರ್ಗ ಮತ್ತು ಪುನರಾವೃತ್ತಿಯು ಹೇಗೆ ಸಾಧ್ಯ?–ಎಂದರೆ ಇಲ್ಲಿರುವ ಯೋಗಿಶಬ್ದವು ಪುಣ್ಯಕರ್ಮಸಂಬಂಧವುಳ್ಳವನು ಎಂಬ ಅರ್ಥವನ್ನು ಹೇಳುತ್ತದೆ. ಯೋಗ

ಶಬ್ದಕ್ಕೆ ಉಪಾಯ ಅಥವಾ ಸಂಬಂಧ ಎಂಬ ಅರ್ಥವನ್ನಿಟ್ಟುಕೊಂಡು ಪುಣ್ಯ ಕರ್ಮದ ಉಪಾಯವುಳ್ಳವನು ಅಥವಾ ಪುಣ್ಯಕರ್ಮಸ್ವರೂಪಸಂಬಂಧೀ ಎಂದು ಅರ್ಥಮಾಡಬೇಕು. (ರಾ. ಭಾ.)

ಧೂಮಃ ರಾತ್ರಿಃ–ಇವುಗಳು ಆಯಾ ಅಭಿಮಾನಿದೇವತೆಗಳು.

(ಮ. ಭಾ.)

ಈ ಶ್ಲೋಕಗಳಿಗೆ ಕೆಲವು ಆಧುನಿಕವಿಮರ್ಶಕರು ಹೀಗೆ ಅಭಿಪ್ರಾಯ ಗಳನ್ನು ಹೇಳಿದ್ದಾರೆ.

ಡಾ|| ಡಿ.ವಿ.ಜಿ. : ಸಾಧಕನು ಇಹಲೋಕದಿಂದ ತೆರಳಿದ ಬಳಿಕ ನೇರ ವಾಗಿ ನಡುವೆ ಎಲ್ಲಿಯೂ ತಂಗದೆ ಬ್ರಹ್ಮನನ್ನು ಸೇರುವುದು ಸದ್ಯೋಮುಕ್ತಿ. ಅದರ ಮಾರ್ಗವೇ ದೇವಯಾನ. ಹಾಗಲ್ಲದೇ ಬೇರೇ ಉತ್ತಮಲೋಕಗಳಲ್ಲಿ ಅಲ್ಲಲ್ಲಿ ಮಾಡುವ ಪ್ರಯಾಣವೇ ಕ್ರಮಮುಕ್ತಿ. ಅದೇ ಪಿತೃಯಾನ. ಇದನ್ನು ಸ್ವಾಮಿ ಹೀಗೆ ವರ್ಣಿಸಿದ್ದಾನೆ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**

ಬ್ರಹ್ಮಪದವಿಯ ಮಾರ್ಗದ ಲಕ್ಷಣಗಳು : ಅಗ್ನಿ, ಬೆಳಕು, ಹಗಲು, ಶುಭ್ರತೆ, ಉತ್ತರಾಯಣವೆಂಬ ವರ್ಷಾರ್ಧ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**

ಇತರ ಪುಣ್ಯಲೋಕಗಳ ಮಾರ್ಗದ ಲಕ್ಷಣಗಳು : ಹೊಗೆ, ಇರುಳು, ಕಪ್ಪು, ದಕ್ಷಿಣಾಯನವೆಂಬ ವರ್ಷಾರ್ಧ.

ಶ್ರೀತಿಲಕರು : ದೇಹಪಾತವಾಗಿ ಅವನ ಶರೀರವು ಚಿತೆಯಲ್ಲಿ ಸುಟ್ಟ ಬಳಿಕ ಆ ಅಗ್ನಿಯೊಳಗಿಂದ, ಜ್ಯೋತಿ (ಜ್ವಾಲೆ), ದಿವಸ, ಶುಕ್ಲಪಕ್ಷ ಮತ್ತು ಉತ್ತರಾಯಣದ ಆರು ತಿಂಗಳು ಇವುಗಳೊಳಗಿಂದ ಪ್ರಯಾಣಮಾಡುತ್ತಾ-ಮಾಡುತ್ತಾ ಬ್ರಹ್ಮಪದಕ್ಕೆ ಹೋಗಿ ಮುಟ್ಟುತ್ತಾನೆ ಮತ್ತು ಅವನಿಗೆ ಅಲ್ಲಿ ಮೋಕ್ಷವಾಗುವುದರಿಂದ ಅವನು ಮತ್ತೆ ಜನ್ಮವನ್ನು ತೆಗೆದುಕೊಂಡು ಮರಳಿ ಮರ್ತ್ಯಲೋಕಕ್ಕೆ ಬರುವುದಿಲ್ಲ. ಆದರೆ ಬರೇ ಕರ್ಮಠನಿದ್ದವನು ಎಂದರೆ ಜ್ಞಾನವಾಗದವನು ಅದೇ ಚಿತಾಗ್ನಿಯೊಳಗಿನಿಂದ ಧೂಮ, ರಾತ್ರಿ, ಕೃಷ್ಣ

ಪಕ್ಷ ಮತ್ತು ದಕ್ಷಿಣಾಯನದ ಆರು ತಿಂಗಳು ಈ ಕ್ರಮದಿಂದ ಚಂದ್ರಲೋಕಕ್ಕೆ ಮುಟ್ಟಿ ತಾನು ಮಾಡಿದ ಪುಣ್ಯದ ಉಪಭೋಗವನ್ನೆಲ್ಲಾ ತೆಗೆದುಕೊಂಡು ಇಹಲೋಕದಲ್ಲಿ ಜನ್ಮತಾಳುತ್ತಾನೆ. ಹೀಗೆ ಎರಡು ಮಾರ್ಗಗಳಲ್ಲಿ ಭೇದವಿದೆ.

ಶ್ರೀವಿನೋಬಾ : ಯಾವನ ಮರಣಕಾಲದಲ್ಲಿ ಅಗ್ನಿಯು ಉರಿಯುತ್ತದೆಯೋ, ಸೂರ್ಯನು ಬೆಳಗುವನೋ, ಶುಕ್ಲಪಕ್ಷದ ಚಂದ್ರನು ಪ್ರಕಾಶಿಸುತ್ತಿರುವನೋ, ಉತ್ತರಾಯಣದಲ್ಲಿನ ನಿರಭ್ರಸುಂದರವಾದ ಆಕಾಶವು ಹರಡಿದೆಯೋ ಅವನು ಬ್ರಹ್ಮನಲ್ಲಿ ವಿಲೀನವಾಗುತ್ತಾನೆ. ಯಾವನ ಮರಣಕಾಲದಲ್ಲಿ ಹೊಗೆಯು ಮುಸುಕಿರುವುದೋ, ಒಳಗೆ ಹೊರಗೆ ಕತ್ತಲು ಮುತ್ತಿರುವುದೋ, ಕೃಷ್ಣಪಕ್ಷದ ಚಂದ್ರನು ಅತ್ಯಂತಕ್ಷೀಣವಾಗಿರುವನೋ, ದಕ್ಷಿಣಾಯನದಲ್ಲಿನ ಅಭ್ರಾಚ್ಛಾದಿತವಾದ ಆಕಾಶವು ಹರಡಿದೆಯೋ ಅವನು ಹುಟ್ಟು-ಸಾವುಗಳ ಪರಂಪರೆಗೆ ಮತ್ತೆ ಸಿಕ್ಕಿಬೀಳುತ್ತಾನೆ. ಉರಿಯುವ ಅಗ್ನಿಯ ಅರ್ಥ ಇದು : ಮರಣಕಾಲದಲ್ಲಿ ಕರ್ಮನಿರತನಾಗಿರುವುದೇ ಅಗ್ನಿಯ ಕೃಪೆ. ಕಡೆಯತನಕ ಬುದ್ಧಿಯ ಪ್ರಭೆಯು ಬೆಳಗುತ್ತಿರುವುದು ಸೂರ್ಯನ ಕೃಪೆ. ಮರಣಕಾಲದಲ್ಲಿ ಪವಿತ್ರಭಾವವು ಬಲವತ್ತರವಾಗುವುದು ಚಂದ್ರನ ಕೃಪೆ. ಮನದ ಭಾವನೆಯ ದೇವತೆ ಚಂದ್ರ. ಶುಕ್ಲಪಕ್ಷದ ಚಂದ್ರನಂತೆ ಮನಸ್ಸಿನಲ್ಲಿನ ಪ್ರೇಮ, ಭಕ್ತಿ, ಉತ್ಸಾಹ, ಪರೋಪಕಾರ, ದಯೆ–ಇತ್ಯಾದಿ ಶುದ್ಧಭಾವನೆಗಳು ಪೂರ್ಣವಿಕಾಸ ಹೊಂದಬೇಕು. ಹೃದಯಾಕಾಶದಲ್ಲಿ ಆಸಕ್ತಿಯ ಮೋಡಗಳ ಅಭಾವವಿರುವುದು ಆಕಾಶದ ಕೃಪೆ. ಹೃದಯದಲ್ಲಿ ಆಸಕ್ತಿಯೆಂಬ ಮೋಡಗಳಿಲ್ಲದಿರುವುದೇ ಉತ್ತರಾಯಣವಿದ್ದ ಹಾಗೆ. ಕೊನೆಯ ಶ್ವಾಸೋಚ್ಛ್ವಾಸದವರೆಗೂ ಸೇವಾಭಾವನೆಗಳ ಬೆಳದಿಂಗಳಲ್ಲಿ ಮಿಂದು, ಹೃದಯಾಕಾಶದಲ್ಲಿ ಕೊಂಚವೂ ಆಸಕ್ತಿ ಉಳಿಸಿಕೊಳ್ಳದೇ, ಬುದ್ಧಿಯು ಸತೇಜವಾಗಿದ್ದು, ಸಾವಿನ ಘಟ್ಟಕ್ಕೆ ಬಂದು ಸೇರಿದವನು ಪರಮಾತ್ಮನಲ್ಲಿ ಲೀನವಾಗುತ್ತಾನೆ.)

**ಓಂ ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥೨೬॥**

ಶುಕ್ಲ-ಕೃಷ್ಣಗಳೆಂಬ ಈ ಎರಡು ಗತಿಗಳು ಜಗತ್ತಿನಲ್ಲಿ ಶಾಶ್ವತ ಎಂದು ತಿಳಿಯಲ್ಪಟ್ಟಿವೆ. ಅವುಗಳಲ್ಲಿ ಒಂದು ಮಾರ್ಗದಿಂದ ಹೋದವನು ಅನಾ

ವೃತ್ತಿಯನ್ನು ಹೊಂದುವನು. ಮತ್ತೊಂದು ಮಾರ್ಗದಿಂದ ಹೋದವನು ಮರಳಿ ಬರುವನು.

* * *

(ಈ ಶುಕ್ಲ-ಕೃಷ್ಣಮಾರ್ಗಗಳು ಶಾಶ್ವತವಾದುವುಗಳೆಂದು ಹೇಳುತ್ತಾನೆ ಶ್ರೀಕೃಷ್ಣ. ಶುಕ್ಲವೆಂದರೆ ಉತ್ತರಾಯಣ ; ದೇವತೆಗಳ ಹಗಲು. ಕೃಷ್ಣವೆಂದರೆ ದಕ್ಷಿಣಾಯನ ; ದೇವತೆಗಳ ರಾತ್ರಿ. ಒಂದು ಕತ್ತಲಿನ ಮಾರ್ಗ. ಮತ್ತೊಂದು ಬೆಳಕಿನ ಮಾರ್ಗ. ಬೆಳಕಿರುವಾಗ ಇಚ್ಛಿತಸ್ಥಳವನ್ನು ಸುಲಭವಾಗಿ ಸೇರ ಬಹುದು. ತತ್ತರಿಸಿ ಹಿಂದಿರುಗುವ ಕಾರಣವಿರುವುದಿಲ್ಲ. ಕತ್ತಲಲ್ಲಿ ಪ್ರಯಾಣವು ಅಪಾಯಕರವಾದುದು. ಮುಂದೆ ಹಾದಿಯು ತೋರದೇ ಹಿಂದಿರುಗುವ ಸಂಭವವೇ ಹೆಚ್ಚು. ಇವೆರಡೂ ಶಾಶ್ವತವಾದ ಮಾರ್ಗಗಳೇ. ವಿಶ್ವದಲ್ಲಿ ಹುಟ್ಟು-ಸಾವುಗಳಿರುವವರೆಗೂ ಈ ಮಾರ್ಗಗಳೂ ಶಾಶ್ವತವಾಗಿಯೇ ಇರುತ್ತವೆ.)

O O O

**ಶುಕ್ಲಕೃಷ್ಣೇ ಗತೀ** = ಇವುಗಳಲ್ಲಿ ಒಂದು ಗತಿಯು ಜ್ಞಾನವನ್ನು ಪ್ರಕಾಶಪಡಿಸುವುದರಿಂದ **ಶುಕ್ಲ** ಎನಿಸುತ್ತದೆ. ಮತ್ತೊಂದು ಆ ಕೆಲಸವನ್ನು ಮಾಡುವುದಿಲ್ಲವಾದುದರಿಂದ ಅದು **ಕೃಷ್ಣ** ಎನಿಸುತ್ತದೆ. ಜ್ಞಾನಪ್ರಕಾಶ. **ಕತ್ವಾತ್ ಶುಕ್ಲಾ, ತದಭಾವಾತ್ ಕೃಷ್ಣಾ.** ಈ ಗತಿಗಳು ಜಗತ್ತಿಗೆ ಇರುತ್ತವೆ ಎಂದರೆ ಜಗತ್ತಿನಲ್ಲಿ ಎಲ್ಲರಿಗೂ ಇರುತ್ತವೆ ಎಂದು ಅರ್ಥವಲ್ಲ. ಜ್ಞಾನದಲ್ಲಿ ಅಧಿಕೃತರಾದವರಿಗೆ ಶುಕ್ಲಗತಿಯೂ ಮತ್ತು ಕರ್ಮದಲ್ಲಿ ಅಧಿಕೃತರಾದವರಿಗೆ ಕೃಷ್ಣಗತಿಯೂ ಉಂಟಾಗುತ್ತದೆಂದು ತಿಳಿಯಬೇಕು. ಇವು ಹೇಗೆ ಶಾಶ್ವತ ಎಂದರೆ ಸಂಸಾರವು ನಿತ್ಯವಾದುದರಿಂದ ಇವೂ ನಿತ್ಯವೆಂದು ತಿಳಿಯಬೇಕು. (ಶಂ. ಭಾ.)

ಶುಕ್ಲಗತಿಯೆಂದರೆ ಅರ್ಚಿರಾದಿಗತಿ. ಕೃಷ್ಣಗತಿಯೆಂದರೆ ಧೂಮಾದಿಗತಿ. ಇವುಗಳಲ್ಲಿ ಮೊದಲನೆಯದರ ಮೂಲಕ ಪ್ರಯಾಣಮಾಡಿದವರಿಗೆ ಅನಾವೃತ್ತಿ. ಎರಡನೆಯದರ ಮೂಲಕ ಪ್ರಯಾಣಮಾಡಿದವರಿಗೆ ಪುನರಾ ವೃತ್ತಿ. ಈ ಶುಕ್ಲ-ಕೃಷ್ಣಗತಿಗಳು ಕ್ರಮವಾಗಿ ಜ್ಞಾನಿಗಳಿಗೂ ಬಗೆ-ಬಗೆಯ ಪುಣ್ಯ ಕರ್ಮಮಾಡುವವರಿಗೂ ಶಾಶ್ವತವಾದುವುಗಳೆಂದು ಶ್ರುತಿಯಿಂದ ತಿಳಿಯ ಲ್ಪಟ್ಟಿವೆ. (ರಾ. ಭಾ.)

**ಓಂ ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥**

ಪಾರ್ಥ! ಈ ಎರಡು ಮಾರ್ಗಗಳನ್ನೂ ತಿಳಿದುಕೊಂಡಿರುವ ಯಾವ ಯೋಗಿಯೂ ವಿಮೋಹಗೊಳ್ಳುವುದಿಲ್ಲ. ಆದುದರಿಂದ, ಅರ್ಜುನ! ಎಲ್ಲ ಕಾಲಗಳಲ್ಲಿಯೂ ಯೋಗಯುಕ್ತನಾಗಿರು.

* * *

(ಸೃತೀ ಎಂದರೆ ಮಾರ್ಗಗಳು. ಶುಕ್ಲ-ಕೃಷ್ಣ ಮಾರ್ಗಗಳು ; ಉತ್ತರಾಯಣ-ದಕ್ಷಿಣಾಯನಮಾರ್ಗಗಳು. ಈ ಎರಡು ಮಾರ್ಗಗಳನ್ನು ತಿಳಿದುಕೊಂಡಿರುವವನು, ಈ ಎರಡು ಮಾರ್ಗಗಳ ರಹಸ್ಯವನ್ನು ಬಲ್ಲವನು ಅವುಗಳಲ್ಲಿ ಯಾವುದು ಮೋಕ್ಷಕ್ಕೆ ಕಾರಣವಾಗುತ್ತದೆ–ಎಂಬುದನ್ನು ಅರಿತಿರುವುದರಿಂದ ಅದನ್ನು ಬಯಸಿ ಅದರಲ್ಲೇ ಪ್ರಯಾಣಮಾಡಿ ಬ್ರಹ್ಮವನ್ನು ಹೊಂದುತ್ತಾನೆ. ಮತ್ತೊಂದು ಸಂಸಾರಕ್ಕೆ ಅಥವಾ ಪುನರಾವೃತ್ತಿಗೆ ಕಾರಣವೆಂದು ತಿಳಿದಿರುವುದರಿಂದ ಅದನ್ನು ತ್ಯಜಿಸುತ್ತಾನೆ. ಆದುದರಿಂದ ಯಾವಾಗಲೂ ಮೋಹಗೊಳ್ಳುವುದಿಲ್ಲ. ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳುತ್ತಾನೆ : 'ಅರ್ಜುನ! ಸರ್ವಕಾಲದಲ್ಲಿಯೂ ನೀನು ಯೋಗಯುಕ್ತ ನಾಗಿಯೇ ಇರು. ನಿನ್ನ ಮನಸ್ಸು ಯಾವಾಗಲೂ ಪರಮಾತ್ಮನಲ್ಲಿಯೇ ಲೀನವಾಗಿದ್ದುಬಿಡಲಿ. ಅವನನ್ನು ಕ್ಷಣಕಾಲವಾದರೂ ಮರೆಯಬೇಡ. ನಿನ್ನ ಬುದ್ಧಿಗೆ ಪ್ರಮಾದವುಂಟಾಗದಿರಲಿ. ಉತ್ತರಾಯಣಮಾರ್ಗವು ಪ್ರಯಾಣಕ್ಕೆ ಇಷ್ಟವಾಗಲಿ.)

O O O

**ಏತೇ ಸೃತೀ ಜಾನನ್** = ಈ ಮಾರ್ಗಗಳಲ್ಲಿ ಒಂದು ಸಂಸಾರಕ್ಕೆ ಕಾರಣವಾದುದು, ಮತ್ತೊಂದು ಮೋಕ್ಷಕ್ಕೆ–ಎಂದು ತಿಳಿದು.

**ಯೋಗಯುಕ್ತಃ ಭವ** = ಸಮಾಹಿತನಾಗಿರು. (ಶಂ. ಭಾ.)

ಈ ಮಾರ್ಗಗಳನ್ನು ಅರಿತ ಯಾವ ಯೋಗಿಯೂ ಪ್ರಾಣಪ್ರಯಾಣ ಕಾಲದಲ್ಲಿ ಮೋಹಗೊಳ್ಳುವುದಿಲ್ಲ ಮತ್ತು ತನ್ನದಾದ ದೇವಯಾನಮಾರ್ಗ ದಿಂದಲೇ ಹೋಗುತ್ತಾನೆ. ಆದುದರಿಂದ ನೀನು ಪ್ರತಿದಿನವೂ ಅರ್ಚಿರಾದಿಗತಿ ಚಿಂತನವೆಂಬ ಯೋಗದಲ್ಲಿ ನಿಷ್ಠನಾಗಿರು. (ರಾ. ಭಾ.)

**ತತೋ ಮೋಗ್ರಜ್ವಲನಂ ತತ್ಪ್ರಕಾಶಿತದ್ವಾರ....** ಬ್ರ.೪-೨-೧೬.

ಎಂದು ಮೊದಲಾಗಿ ಶಾಸ್ತ್ರವು ಹೇಳುವ ಮಾರ್ಗವು ಸ್ಪಷ್ಟವಾಗುತ್ತದೆ. ಆ ಬಗ್ಗೆ ಮೋಹವುಂಟಾಗುವುದಿಲ್ಲ.

ಇಲ್ಲಿ ಹೇಳಿರುವ ಯೋಗವು ಧ್ಯಾನದ ವಿಷಯವಾದುದು. ಪ್ರಕೃತವಾದ ಅರ್ಚಿರಾದಿಗತಿಚಿಂತನರೂಪವಾದ ಧ್ಯಾನವೇ ಅದಾಗಿದೆ. ಆಗಿರಬೇಕು.

–ವೇದಾಂತದೇಶಿಕರು.

ಈ ಎರಡು ಮಾರ್ಗಗಳನ್ನೂ ಉಪಾಯದೊಡನೆ ಅರಿತು ಆ ಉಪಾಯವನ್ನು ಅನುಷ್ಠಾನಮಾಡಿದವನಿಗೆ ಮೋಹವುಂಟಾಗುವುದಿಲ್ಲ. ಕೇವಲ ಇವುಗಳ ಜ್ಞಾನವು ಮೋಹವನ್ನು ತೊಲಗಿಸುವುದಿಲ್ಲ. ಉಪಾಯದ ಅನುಷ್ಠಾನವೂ ಆವಶ್ಯಕ. ಯೋಗೀ ಎಂಬ ಪದವು ಇದನ್ನು ಸೂಚಿಸುತ್ತದೆ. ಯೋಗ ಎಂದರೆ ಉಪಾಯ.

**[ಯೋಗಃ ಸನ್ನಹನೋಪಾಯಧ್ಯಾನಸಂಗತಿಯುಕ್ತಿಷು–ಅಮರಃ]**

**ಏತೇ ಸೃತೀ ಸೋಪಾಯೇ ಜ್ಞಾತ್ವಾ ಅನುಷ್ಠಾಯ ನ ಮುಹ್ಯತಿ.**
(ಮ. ಭಾ.)

**ಓಂ ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥**

ಇದನ್ನು ತಿಳಿದ ಯೋಗಿಯು ವೇದಗಳಲ್ಲಿಯೂ, ಯಜ್ಞಗಳಲ್ಲಿಯೂ, ತಪಸ್ಸುಗಳಲ್ಲಿಯೂ, ದಾನಗಳಲ್ಲಿಯೂ ಯಾವ ಪುಣ್ಯಫಲವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆಯೋ ಅದೆಲ್ಲವನ್ನೂ ಮೀರುತ್ತಾನೆ ಮತ್ತು ಆದ್ಯವಾದ ಮತ್ತು ಅತ್ಯಂತಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ.

* * *

**(ವೇದಗಳು** ಎಂದರೆ ಅಂಗಸಹಿತವಾದ ನಾಲ್ಕು ವೇದಗಳು. **ಯಜ್ಞ** ಎಂದರೆ ದ್ರವ್ಯಯಜ್ಞವೇ ಮುಂತಾದುವು. **ತಪಃ** ಎಂದರೆ ವಾಕ್-ಮನಸ್ಸು-ಕಾಯಗಳಿಂದ ಆಚರಿಸಲ್ಪಡುವ ತಪಸ್ಸುಗಳು.

**ದಾನ** = ದೇಶ-ಕಾಲ-ಪಾತ್ರಗಳಲ್ಲಿ ಕೊಡುವ ದಾನ. ಇವುಗಳನ್ನು

ವಿಧಿಪೂರ್ವಕವಾಗಿ ಸಾದ್ಗುಣ್ಯವುಂಟಾಗುವಂತೆ ಆಚರಿಸಿದರೆ ಮಹಾಪುಣ್ಯ ಫಲವುಂಟೆಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಈ ಅಧ್ಯಾಯದಲ್ಲಿ ಬಂದಿರುವ ಏಳು ಪ್ರಶ್ನೆಗಳು ಮತ್ತು ಏಳು ಪ್ರಶ್ನೆಗಳಿಗೆ ಉತ್ತರ ಇವುಗಳನ್ನು ತಿಳಿದಿರುವವನು ವೇದ-ಯಜ್ಞ-ತಪಸ್ಸು-ದಾನ–ಇತ್ಯಾದಿಗಳನ್ನು ಮಾಡಿದವರನ್ನೂ ಮೀರಿಸುತ್ತಾನೆ. ಅವರಿಗೆ ಲಭಿಸುವ ಪುಣ್ಯಕ್ಕಿಂತಲೂ ಅತಿಶಯವಾದ ಪುಣ್ಯವು ಅಥವಾ ಅಮೃತತ್ವವು ಇವನಿಗೆ ಲಭಿಸುತ್ತದೆ. ಭಗವದುಕ್ತಿಯಂತೆ ಈ ಯೋಗಿಯು ಪಾಪ-ಪುಣ್ಯಗಳೆರಡನ್ನೂ ತ್ಯಜಿಸಿ ಯಾವಾಗಲೂ ಭಗವದ್ಧ್ಯಾನಪರಾಯಣನಾಗಿಯೇ ಇರುವುದರಿಂದ ಇವನಿಗೆ ಪುಣ್ಯಕರ್ಮಿಗಳಿಗೆ ಲಭಿಸುವ ಪುಣ್ಯಲೋಕಗಳಿಗಿಂತಲೂ ಮಿಗಿಲಾದ ಶಾಶ್ವತಬ್ರಹ್ಮಲೋಕವು ಸಿಕ್ಕುತ್ತದೆ.)

O O O

**ಪರಂ ಸ್ಥಾನಮುಪೈತಿ ಚಾದ್ಯಮ್** = ಆ ಪರಮಪದವು ಅನಾದಿಯಾದುದು ; ಎಲ್ಲಕ್ಕಿಂತಲೂ ಮೊದಲಿನದು. ಅಂತಹ ಬ್ರಹ್ಮಪದವನ್ನು ಸರ್ವದಾ ಬ್ರಹ್ಮನಿಷ್ಠನಾದ ಯೋಗಿಯು ಪಡೆಯುತ್ತಾನೆ.

**ಇದಂ ವಿದಿತ್ವಾ ಯೋಗೀ** = ಈ ಏಳು ಪ್ರಶ್ನೆಗಳ ಉತ್ತರಗಳ ನಿರ್ಣಯದ ಮೂಲಕ ಹೇಳಿರುವ ರಹಸ್ಯವನ್ನು ಚೆನ್ನಾಗಿ ತಿಳಿದು ಅದನ್ನು ಅನುಷ್ಠಾನಮಾಡಿದ ಯೋಗಿಯು. **ಸಪ್ತಪ್ರಶ್ನನಿರ್ಣಯದ್ವಾರೇಣ ಉಕ್ತಂ ಸಮ್ಯಕ್ ಅವಧಾರ್ಯ ಅನುಷ್ಠಾಯ.**

**ಆದ್ಯಂ** = ಆದಿಯಲ್ಲಿರುವ ಕಾರಣರೂಪನಾದ ಬ್ರಹ್ಮನನ್ನು (ಶಂ. ಭಾ.)

**ಇದಂ ವಿದಿತ್ವಾ**=ಈ ಎರಡು ಅಧ್ಯಾಯಗಳಲ್ಲಿ ಹೇಳಿರುವ ಭಗವಂತನ ಮಾಹಾತ್ಮ್ಯವನ್ನರಿತು. **ವೇದೇಷು ಪ್ರದಿಷ್ಟಂ**=ಋಗ್ಯಜುಸ್ಸಾಮಾಥರ್ವಗಳೆಂಬ ವೇದಗಳ ಅಭ್ಯಾಸ, ಯಜ್ಞ, ತಪಸ್ಸು, ದಾನ–ಮುಂತಾದ ಎಲ್ಲ ಪುಣ್ಯಕರ್ಮಗಳಲ್ಲಿಯೂ ಯಾವ ಫಲವು ನಿರ್ದಿಷ್ಟವಾಗಿದೆಯೋ, **ತತ್ಸರ್ವಂ ಅತ್ಯೇತಿ**=ಅದೆಲ್ಲವನ್ನೂ ಮೀರಿಬಿಡುತ್ತಾನೆ ಎಂದರೆ ಭಗವನ್ಮಾಹಾತ್ಮ್ಯದ ಸುಖಾತಿಶಯದಿಂದ ಮೇಲೆ ಹೇಳಿದ ಪುಣ್ಯಫಲವನ್ನು ತೃಣದಂತೆ ಭಾವಿಸುತ್ತಾನೆ ಮತ್ತು ಯೋಗಿಯಾಗಿ ಮತ್ತು ಜ್ಞಾನಿಯಾಗಿ ಜ್ಞಾನಿಗೆ ಪ್ರಾಪ್ತವಾಗುವ ಶ್ರೇಷ್ಠವೂ ಅನಾದಿಯೂ ಆದ ಸ್ಥಾನವನ್ನು ಹೊಂದುತ್ತಾನೆ.

(ರಾ. ಭಾ.)

ಪರಮಾತ್ಮನ ಸ್ಥಾನದ ದೃಷ್ಟಿಯಿಂದ ಪುಣ್ಯಲೋಕಗಳೆಲ್ಲವೂ ನರಕಕ್ಕೆ ಸಮಾನವೇ ಆಗಿವೆ.

ಏತೇ ವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ ।

ಮಹಾಭಾರತ, ಮೋಕ್ಷಧರ್ಮಪರ್ವ, ೧೯೮-೮-೬. (ವೇದಾಂತದೇಶಿಕರು)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅಕ್ಷರ ಬ್ರಹ್ಮಯೋಗೋ ನಾಮಾಷ್ಟಮೋಽಧ್ಯಾಯಃ**

ಭಗವದ್ಗೀತೆಯಲ್ಲಿ ೮ನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯವು ಮುಗಿಯಿತು.

## ಭಗವದ್ಗೀತಾ-೯ನೆಯ ಅಧ್ಯಾಯ

೩೩ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

### ಜ್ಞಾನ-ವಿಜ್ಞಾನ : ಜಗದುತ್ಪತ್ತಿ : ಆಸುರೀ ಮತ್ತು ದೈವೀಸಂಪತ್ತುಗಳು : ಪ್ರಭಾವಸಹಿತವಾದ ಭಗವತ್ಸ್ವರೂಪ, ಸಕಾಮ-ನಿಷ್ಕಾಮ ಉಪಾಸನೆ : ಭಗವದ್ಭಕ್ತಿ-ಇವುಗಳ ವರ್ಣನೆ

**ಶ್ರೀಭಗವಾನುವಾಚ :**

**ಓಂ ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

**ಶ್ರೀಕೃಷ್ಣನು ಹೇಳುತ್ತಾನೆ :**

ಅಸೂಯಾರಹಿತನಾದ ನಿನಗೆ ಅತ್ಯಂತರಹಸ್ಯವಾದ ವಿಜ್ಞಾನದಿಂದ ಕೂಡಿದ ಜ್ಞಾನವನ್ನು ಹೇಳುವೆನು. ಇದನ್ನು ತಿಳಿದುಕೊಂಡರೆ ಅಶುಭದಿಂದ ಬಿಡುಗಡೆಹೊಂದುವೆ.

* * *

(ಏಳನೆಯ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ಶ್ರೀಕೃಷ್ಣನು **ಜ್ಞಾನಂ ತೇಽಹಂ ಸವಿಜ್ಞಾನಂ ಇದಂ ವಕ್ಷ್ಯಾಮ್ಯಶೇಷತಃ** = ಜ್ಞಾನವನ್ನೂ ಅದರೊಡನೆ ವಿಜ್ಞಾನವನ್ನೂ ಸಂಪೂರ್ಣವಾಗಿ ನಿನಗೆ ಹೇಳುವೆನು– ಎನ್ನುತ್ತಾನೆ. ಏಳನೆಯ ಅಧ್ಯಾಯಕ್ಕೆ ಜ್ಞಾನ-ವಿಜ್ಞಾನಯೋಗಾಧ್ಯಾಯವೆಂದೇ ಹೆಸರು. ಇಲ್ಲಿಯೂ ಸಹ **ಜ್ಞಾನಂ ವಿಜ್ಞಾನಸಹಿತಂ** ಎಂದೇ ಹೇಳುತ್ತಾನೆ. ಆದುದರಿಂದ ಈ ಅಧ್ಯಾಯವೂ ಸಹ ಜ್ಞಾನ ಮತ್ತು ವಿಜ್ಞಾನಗಳಿಗೆ ಸಂಬಂಧಿಸಿದುದಾಗಿದೆ. ಆದರೆ ಈ ಅಧ್ಯಾಯದಲ್ಲಿ ಜ್ಞಾನದ ವಿಜ್ಞಾನಕ್ಕೆ ಮತ್ತೊಂದು ಹಾದಿಯನ್ನು ಪರಮಾತ್ಮನು ಸೂಚಿಸುತ್ತಾನೆ.

**ಇದಂ ಗುಹ್ಯತಮಂ**= ಈ ಆತ್ಮವಿದ್ಯೆಯು ರಹಸ್ಯತಮವಾದುದು. ಹೊರಗಡೆ ಸಿಕ್ಕುವುದಲ್ಲ. **ಗುಹೆ** ಎಂಬುದರಿಂದಲೇ **ಗುಹ್ಯ** ಶಬ್ದವಾಗಿದೆ. ಅಧ್ಯಾತ್ಮವು ಹೃದಯಗುಹೆಯಲ್ಲಿರತಕ್ಕದ್ದು. ಆದುದರಿಂದಲೇ 'ತಮ' ಪ್ರತ್ಯಯವು ಸೇರಿದೆ. ಬಹಳ ಗುಟ್ಟಾಗಿರತಕ್ಕದ್ದು. ಬ್ರಹ್ಮಜ್ಞಾನಿಯೊಬ್ಬನಿಗೆ ಹೊರತಾಗಿ ಬೇರೆಯವರಿಗೆ ಈ ಗುಟ್ಟುಬಿಡಿಸಿ ಗುಟ್ಟಿನಲ್ಲಡಗಿರುವ ಚಿನ್ಮಯ ನನ್ನು ತಿಳಿಯುವ ಸಾಧ್ಯತೆಯೇ ಇಲ್ಲ. ಇದನ್ನು ಅಸೂಯೆಯಿಲ್ಲದ ನಿನಗೆ ಹೇಳುತ್ತೇನೆ–ಎನ್ನುತ್ತಾನೆ ಶ್ರೀಕೃಷ್ಣ. ಬ್ರಹ್ಮವಿದ್ಯಾಪ್ರಾಪ್ತಿಗೆ ಅಸೂಯೆಯು ದೊಡ್ಡ ಪ್ರತಿಬಂಧಕ. ಅಸೂಯೆಯಿಂದ ಆವೃತನಾದವನಿಗೆ ಕ್ಷಣಕಾಲವಾದರೂ ಮನಸ್ಸನ್ನು ಹೃದಯಗುಹಾಶಯನಾಗಿರುವ ಪರಮಾತ್ಮನ ಮೇಲೆ ಕೇಂದ್ರೀಕರಿಸುವುದಕ್ಕಾಗುವುದಿಲ್ಲ.

ಅಸೂಯಾರಹಿತನ ಲಕ್ಷಣವನ್ನು ಅತ್ರಿಸಂಹಿತೆಯಲ್ಲಿ ಹೀಗೆ ಹೇಳಿದ್ದಾರೆ:

**ನ ಗುಣಾನ್ಗುಣಿನೋ ಹನ್ತಿ ಸ್ತೌತಿ ಮನ್ದಗುಣಾನಪಿ ।**
**ನಾನ್ಯದೋಷೇಷು ರಮತೇ ಸಾನಸೂಯಾ ಪ್ರಕೀರ್ತಿತಾ ॥**

ಗುಣವಂತನಲ್ಲಿರುವ ಗುಣಗಳನ್ನು ಖಂಡಿಸದೇ ಇರುವುದು ; ಅಲ್ಪ ಗುಣವುಳ್ಳವನನ್ನೂ ಪ್ರಶಂಸೆಮಾಡುವುದು ; ಇತರರ ದೋಷವನ್ನು ಹೇಳಿ ಕೊಂಡು ಸಂತೋಷಪಡದೇ ಇರುವುದು–ಇದು ಅನಸೂಯಾ ; ಅಸೂಯಾ ರಾಹಿತ್ಯ ಎಂದು ಹೇಳಲ್ಪಟ್ಟಿದೆ. ಅಸೂಯೆಯಿಂದ ರಹಿತನಾದ ನಿನಗೆ (ಅರ್ಜುನನಿಗೆ ) ಹೇಳುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ. ಗುಹ್ಯತಮವಾದುದು

ಯಾವುದು?–ವಿಜ್ಞಾನಸಹಿತವಾದ ಜ್ಞಾನ. ಹಿಂದೆಯೇ ಹೇಳಿರುವಂತೆ ಜ್ಞಾನ ಎಂದರೆ ಅನುಭವ. ವಿಜ್ಞಾನ ಎಂದರೆ ಆತ್ಮಜ್ಞಾನದ ವಿಕಾಸಜ್ಞಾನ-ತಿಳಿವಳಿಕೆ; ವಿಜ್ಞಾನ ಎಂದರೆ ಅನುಭವ ಎಂಬ ಅರ್ಥವೂ ಇದೆ.

ಇದನ್ನು ಏಕೆ ತಿಳಿದುಕೊಳ್ಳಬೇಕು? ಇದಕ್ಕೆ ಶ್ರೀಕೃಷ್ಣನೇ ಉತ್ತರ ಹೇಳುತ್ತಾನೆ.

ಯಾವುದನ್ನು ತಿಳಿಯುವುದರಿಂದ ನೀನು ಅಶುಭದಿಂದ ಮುಕ್ತಿಹೊಂದುವೆಯೋ ಅದನ್ನು ಹೇಳುತ್ತೇನೆ. ಇಲ್ಲಿ ಅಶುಭ ಎಂದರೆ ದುಃಖಕ್ಕೆ ಮೂಲಕಾರಣವಾದ ಜನನ-ಮರಣರೂಪವಾದ ಸಂಸಾರಬಂಧನ. ಅರ್ಥಾತ್ ಅಜ್ಞಾನ. ಅಜ್ಞಾನದಿಂದ ಮುಕ್ತನಾಗಿ ಜ್ಞಾನಿಯಾಗುವೆ. ಸಂಸಾರ ಬಂಧನದಿಂದ ಮುಕ್ತಿಹೊಂದಿ ಮೋಕ್ಷವನ್ನು ಪಡೆಯುವೆ.

ಅಗ್ನಿ, ಅರ್ಚಿ–ಮುಂತಾದ ಕ್ರಮಗಳಲ್ಲಿ ಕಾಲಾಂತರದಲ್ಲಿ ಬ್ರಹ್ಮವನ್ನು ಹೊಂದುವ ಅನಾವೃತ್ತಿರೂಪವಾದ ಸಗುಣಧಾರಣಾಯೋಗವನ್ನು ಎಂಟ ನೆಯ ಅಧ್ಯಾಯದಲ್ಲಿ ಹೇಳಿಯಾಯಿತು. ಆದರೆ ಮೋಕ್ಷಪ್ರಾಪ್ತಿಗೆ ಇದೊಂದೇ ಮಾರ್ಗವೇ? ಎಂಬ ಶಂಕೆಯನ್ನು ಹೋಗಲಾಡಿಸಲು ಭಗವಂತನು ಹೀಗೆ ಹೇಳುತ್ತಾನೆ.)

o o o

ಜ್ಞಾನ ಎಂದರೆ ಮುಂದೆ ಹೇಳುವ ಮತ್ತು ಹಿಂದಿನ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿರುವ ಬ್ರಹ್ಮಜ್ಞಾನ. ಈ ಯಥಾರ್ಥಜ್ಞಾನವೇ ಮೋಕ್ಷಪ್ರಾಪ್ತಿಗೆ ಸಾಕ್ಷಾತ್ ಸಾಧನ. 'ವಾಸುದೇವಃ ಸರ್ವಮಿತಿ' 'ಆತ್ಮೈವೇದಂ ಸರ್ವಂ' ಛಾಂ. ೬-೨-೧ 'ಏಕಮೇವಾದ್ವಿತೀಯಂ' ಬ್ರ. ೨.೪.೬. ಮುಂತಾದ ಶ್ರುತಿ-ಸ್ಮೃತಿಗಳು ಇದಕ್ಕೆ ಪ್ರಮಾಣ. ಅಸೂಯಾರಹಿತನಾದ ನಿನಗೆ ಅತ್ಯಂತಗೋಪ್ಯವೂ ವಿಜ್ಞಾನಾನುಭವಸಹಿತವೂ ಆದ ಆ ಜ್ಞಾನವನ್ನು ಹೇಳುವೆನು. ಅದನ್ನರಿತ ನೀನು ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದುವೆ. (ಶಂ. ಭಾ.)

ಇಲ್ಲಿ ಉಪಾಸ್ಯನಾದ ಪರಮಪುರುಷನ ಮಾಹಾತ್ಮ್ಯವನ್ನೂ ಮತ್ತು ಜ್ಞಾನಿಗಳ ವೈಶಿಷ್ಟ್ಯವನ್ನೂ ವಿವೇಚನೆಮಾಡಿ ಭಕ್ತಿರೂಪವಾದ ಉಪಾಸನೆಯ ಸ್ವರೂಪವನ್ನು ಹೇಳಲಾಗಿದೆ. ಹಿತವಾದ ಎಂದರೆ ಉಳಿದ ಎಲ್ಲಕ್ಕಿಂತಲೂ

ವಿಜಾತೀಯವಾಗಿ ಅಪರಿಮಿತವಾದ ಪ್ರಕಾಶವುಳ್ಳ ಯಾವ ನನ್ನ ಮಹಿಮೆಯನ್ನು ಕೇಳಿ, ಇದು ಹೀಗೆಯೇ ಎಂದು ತಿಳಿಯುವ ನಿನಗೆ ನಾನು ಪರಮ ರಹಸ್ಯವಾದ (ವಿಜ್ಞಾನೋಪಾಸನೆಗೆ ಸಂಬಂಧಪಟ್ಟ ವಿಶೇಷಜ್ಞಾನದಿಂದ ಕೂಡಿದ) ಭಕ್ತಿರೂಪವಾದ ಉಪಾಸನೆಯೆಂಬ ಜ್ಞಾನವನ್ನು ಹೇಳುವೆನು. ಈ ಜ್ಞಾನವನ್ನು ಅನುಷ್ಠಾನಪರ್ಯಂತವಾಗಿ ತಿಳಿದು ನೀನು ನನ್ನ ಪ್ರಾಪ್ತಿಗೆ ವಿರೋಧವಾದ ಎಲ್ಲ ಅಶುಭದೆಸೆಯಿಂದಲೂ ಬಿಡುಗಡೆಹೊಂದುವೆ.

(ರಾ. ಭಾ.)

ಅಸೂಯಾ ಎಂದರೆ ಗುಣಗಳಲ್ಲಿ ದೋಷವನ್ನು ಆವಿಷ್ಕರಿಸುವ ಚಿತ್ತವೃತ್ತಿ. ಅದಕ್ಕೆ ವಿಪರೀತವಾದುದು ಎಂದರೆ : ಗುಣಗಳಲ್ಲಿ ಗುಣವೆಂಬ ನಿಶ್ಚಯವನ್ನು ಹೊಂದುವುದು ಅನಸೂಯೆ. ಭಗವಂತನ ಮಹಿಮೆಯನ್ನು ಕೇಳಿ ಅದು ಹಾಗೆಯೇ ಎಂದು ತಿಳಿಯುವುದು.

ಅಸೂಯೆಯುಳ್ಳವನಿಗೆ ವಿದ್ಯೆಯನ್ನು ಹೇಳಕೂಡದು. '**ಅಸೂಯಕಾಯ ಮಾಂ ಮಾದಾಃ.**' – ಭಾರತ-ಮೋಕ್ಷಧರ್ಮಪರ್ವ ೩೨೮-೪೯.

ಗೀತೆಯಲ್ಲಿ ಇದನ್ನೇ–**ನಾತಪಸ್ಕಾಯ ನ ಚ ಮಾಂ ಯೋಽಭ್ಯಸೂಯತಿ**–ಎಂದು ಹೇಳಿದೆ.

**ಪ್ರವಕ್ಷ್ಯಾಮಿ** = ಚೆನ್ನಾಗಿ ಹೇಳುತ್ತೇನೆ. ಸಂಪೂರ್ಣವಾಗಿ ಆದರೆ ಸಂಕ್ಷಿಪ್ತವಾಗಿ ಮತ್ತು ಸ್ಪಷ್ಟವಾಗಿ ಹೇಳುವೆನು –(ಶ್ರೀವೇದಾಂತದೇಶಿಕರು.)

ಏಳನೆಯ ಅಧ್ಯಾಯದಲ್ಲಿ ಹೇಳಿರುವ ವಿಷಯವನ್ನು ಈ ಅಧ್ಯಾಯ ದಲ್ಲಿ ಭಗವಂತನು ಸ್ಪಷ್ಟಪಡಿಸುತ್ತಾನೆ. (ಮ. ಭಾ.)

**ಓಂ ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥೨॥**

ಇದು ರಾಜವಿದ್ಯೆ ; ರಾಜಗುಹ್ಯ ; ಪವಿತ್ರವಾದುದು ; ಉತ್ತಮವಾದುದು ; ಪ್ರತ್ಯಕ್ಷವಾಗಿ ತಿಳಿಯಲು ಸಾಧ್ಯವಾಗತಕ್ಕುದು ; ಧರ್ಮಸಮ್ಮತವಾದುದು ; ಆಚರಿಸಲು ಬಹುಸುಲಭವಾದುದು ಮತ್ತು ಶಾಶ್ವತವಾಗಿ ಇರುವುದು.

* * *

(ಶ್ರೀಕೃಷ್ಣನು ಈ ಆಧ್ಯಾತ್ಮವಿದ್ಯೆಯನ್ನು ರಾಜವಿದ್ಯೆ ಎಂದು ಕರೆದಿ

ದ್ದಾನೆ. ಇದು ಬ್ರಹ್ಮವಿದ್ಯೆಯೂ ಹೌದು, ರಾಜವಿದ್ಯೆಯೂ ಹೌದು. ಅಥವಾ ಬ್ರಹ್ಮವಿದ್ಯೆಯಾದುದರಿಂದಲೇ ಇದು ರಾಜವಿದ್ಯೆ. ನಮ್ಮ ಭಾರತದಲ್ಲಿ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ, ಎಲ್ಲಕ್ಕಿಂತಲೂ ಶ್ರೇಷ್ಠವಾದ, ಎಲ್ಲಕ್ಕಿಂತಲೂ ಹಿರಿಯದಾದ ವಿದ್ಯೆಯಾದುದರಿಂದ ಇದು ರಾಜವಿದ್ಯೆ. ವಿದ್ಯೆಗಳಿಗೆಲ್ಲಾ ರಾಜನಾಗಿ ವಿರಾಜಿಸುತ್ತಿರುವ ವಿದ್ಯೆ.

ಅಥವಾ ರಾಜವಿದ್ಯೆ ಎಂಬುದಕ್ಕೆ ಹೀಗೂ ಅರ್ಥಮಾಡಬಹುದಾಗಿದೆ : **ರಾಜೃ** ಎಂಬ ಧಾತುವಿನಿಂದ ರಾಜನ್ ಶಬ್ದವು ಹುಟ್ಟಿದೆ. ರಾಜೃಧಾತುವು ಪ್ರಕಾಶ ಎಂಬ ಅರ್ಥದಲ್ಲಿದೆ. **ರಾಜೃ-ದೀಪ್ತೌ**-ಅರ್ಥಾತ್ ರಾಜಶಬ್ದಕ್ಕೆ ದೀಪ್ತಿ ಎಂಬ ಅರ್ಥವೂ ಇದೆ. ದೀಪ್ತಿಯ ವಿದ್ಯೆ ಅಥವಾ ಬೆಳಕಿನ ವಿದ್ಯೆ ಎಂದೂ ಅರ್ಥವಾಗುತ್ತದೆ. ಒಟ್ಟಿನಲ್ಲಿ ಇದು ರಾಜವಿದ್ಯೆ. ಇದಕ್ಕೆ ಸಮಾನವಾದ ವಿದ್ಯೆಯು ವಿಶ್ವದಲ್ಲಿಯೇ ಮತ್ತೊಂದಿಲ್ಲ.

ರಾಜರ ವಿದ್ಯೆ ಎಂದೂ ಕೆಲವರು ವ್ಯಾಖ್ಯಾನಿಸುವುದುಂಟು. **ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್**-ಎಂದು ಹಿಂದೆ ಶ್ರೀಕೃಷ್ಣನೇ ಹೇಳಿದ್ದಾನೆ. ವಿವಸ್ವಂತ, ಮನು, ಇಕ್ಷ್ವಾಕು-ಇವರೆಲ್ಲರೂ ಕ್ಷತ್ರಿಯರೇ ಮತ್ತು ರಾಜರೇ ಆಗಿದ್ದಾರೆ-ಎಂಬ ಕಾರಣವನ್ನು ಅವರು ಕೊಡುತ್ತಾರೆ.

ಆದರೆ ಭಗವಂತನು ಉಪದೇಶಿಸುವ ಬ್ರಹ್ಮವಿದ್ಯೆಯು ಮನುಷ್ಯಮಾತ್ರಕ್ಕೇ ಅನ್ವಯಿಸುವುದರಿಂದ ಅದು ರಾಜರಿಗೇ ಸೀಮಿತವಾದ ವಿದ್ಯೆ ಎಂದು ಅರ್ಥೈಸುವುದು ಸರಿಯಲ್ಲ.

ಆದರೆ ಈಗ ಭೌತಿಕವಿಜ್ಞಾನವನ್ನೇ ಮಹಾವಿದ್ಯೆಯೆಂದು ಪರಿಗಣಿಸಿ ಅದನ್ನೇ ಅರಸಿಕೊಂಡು ಹೋಗಲಾಗುತ್ತಿದೆ. ರಾಜವಿದ್ಯೆಯನ್ನು, ಶ್ರೇಷ್ಠವಾದ ವಿದ್ಯೆಯನ್ನು, ನಾವು ಮರೆಯುತ್ತಾ ಬಂದಿದ್ದೇವೆ. 'ವಿದ್ಯೆ' ಎಂಬ ಪದಕ್ಕೆ ಪರಿಪೂರ್ಣಾರ್ಥವನ್ನು ಕೊಡುವ ಮಹಾಜ್ಞಾನವನ್ನೇ ನಾವಿಂದು ಮರೆಯುತ್ತಿದ್ದೇವೆ. ಇದರ ಫಲವನ್ನು ಶ್ರೀಕೃಷ್ಣನೇ ಮುಂದಿನ ಶ್ಲೋಕದಲ್ಲಿ ಹೇಳಿದ್ದಾನೆ.

ಶ್ರೀಕೃಷ್ಣನು ಈ ಮಹಾವಿದ್ಯೆಯನ್ನು 'ರಾಜವಿದ್ಯೆ' ಎಂದು ಘೋಷಿಸಿದನಂತರ 'ರಾಜಗುಹ್ಯ' ಎನ್ನುತ್ತಾನೆ. ರಾಜಗುಟ್ಟು ಎಂಬುದನ್ನು ನಾವು ಕೇಳಿದ್ದೇವೆ. ನಾಲ್ಕು ಕಿವಿಗಳನ್ನು ಬಿಟ್ಟು ಐದನೆಯ ಕಿವಿಗೆ ಬಿದ್ದರು

ವುದಿಲ್ಲ. ಅಂತಹ ರಹಸ್ಯವಿಷಯಕ್ಕೆ ರಾಜಗುಟ್ಟು ಎಂದು ಹೇಳುವ ವಾಡಿಕೆಯಿದೆ. ಅಂತಹ ರಾಜವಿದ್ಯೆಯ ರಹಸ್ಯವನ್ನು ಹೇಳಿದರೂ ಇದರ ರಹಸ್ಯವನ್ನರಿಯುವುದು ಬಹುಕಷ್ಟ. ಹೃದಯಕಮಲಮಧ್ಯದಲ್ಲಿ ವೇದಸಾರವಾದ ಇದು ದೀಪದಂತೆ ಬೆಳಗುತ್ತಿದೆ–ಎಂದು ಆತ್ಮರಹಸ್ಯವನ್ನು ಉಪನಿಷತ್ತುಗಳು ಘೋಷಿಸುತ್ತವೆ. ಇದನ್ನು ತಿಳಿಯುವ ಬಗೆ ಹೇಗೆ? ಹೃದಯವನ್ನು ಸೀಳಿ ಇದನ್ನು ಕಂಡುಕೊಂಡವರಿಲ್ಲ. ಆಧ್ಯಾತ್ಮವಿರುವ ಹೃದಯವನ್ನು (ಎದೆಯ ಬಲಭಾಗವನ್ನು spiritual heart) ಸೀಳಿದರೆ ಸಿಕ್ಕುವುದು ರಕ್ತ-ಮಾಂಸಗಳು ಮಾತ್ರವೇ. ಆದರೆ ಅದು ಇರುವುದು ಸುಳ್ಳೇ?–ಸುಳ್ಳಲ್ಲ, ನಿಶ್ಚಯವಾಗಿಯೂ ಇದು ಅಲ್ಲಿಯೇ ಇದೆ. ಬಹುಗೂಢವಾಗಿದೆ. ಈ ಕಣ್ಣುಗಳಿಂದ ಇದನ್ನು ನೋಡುವ ಸಾಧ್ಯತೆಯಿಲ್ಲ. ಗುಪ್ತವಾದ ಮತ್ತೊಂದು ಕಣ್ಣನ್ನು ತೆರೆದೇ ಇದನ್ನು ನೋಡಬೇಕು. ಮುತ್ತು-ರತ್ನಗಳನ್ನು ತೆಗೆಯಬೇಕಾದರೆ ಸಮುದ್ರದ ಆಳಕ್ಕೇ ಹೋಗಬೇಕು. ಬಹಳ ಕಷ್ಟಪಟ್ಟು ಒಳಕ್ಕೆ ಮುಳುಗಬೇಕು. ಅದರಂತೆ ಮನಸ್ಸನ್ನು ಹೃದಯಗುಹೆಯೊಳಕ್ಕೆ ಇಳಿಸಬೇಕು. ಆಳಕ್ಕೆ ಮುಳುಗಿ ಸಮುದ್ರದ ಮುತ್ತು-ರತ್ನಗಳನ್ನು ಹೊರತರಬಹುದು. ಆದರೆ ಆತ್ಮವನ್ನು ಹೃದಯದ ಸಾಗರದಲ್ಲಿ ಅಡಗಿರುವ ಆತ್ಮಜ್ಞಾನವೆಂಬ ಕಣ್ಣಿನಿಂದ ಮಾತ್ರವೇ ನೋಡಲು ಸಾಧ್ಯ. ಅಷ್ಟು ಗುಟ್ಟಾದುದು ಬ್ರಹ್ಮತತ್ತ್ವ. ಆದುದರಿಂದಲೇ ಇದಕ್ಕೆ ರಾಜಗುಹ್ಯ ಎಂದು ಹೆಸರು. ವಿಶ್ವದಲ್ಲಿಯೇ ಇದಕ್ಕಿಂತಲೂ ಗುಹ್ಯವಾದುದು ಮತ್ತೊಂದಿಲ್ಲ.

ಪವಿತ್ರಂ = ಅತ್ಯಂತಪವಿತ್ರವಾದುದು ; ಪವಿತ್ರವೆಂದರೆ ತಾನೂ ಪರಿಶುದ್ಧವಾಗಿರುತ್ತದೆ. ಮತ್ತೊಬ್ಬರನ್ನೂ ಪಾವನಗೊಳಿಸುತ್ತದೆ. ದರ್ಭೆ ಪವಿತ್ರವಾದುದು. ಅದನ್ನು ಧರಿಸಿದವರನ್ನೂ ಪವಿತ್ರಗೊಳಿಸುತ್ತದೆ. ಗಂಗೆಯು ಪವಿತ್ರವಾದುದು. ಅದರಲ್ಲಿ ಮಿಂದವರನ್ನೂ ಪವಿತ್ರಗೊಳಿಸುತ್ತದೆ. ಇಂತಹ ಅನೇಕ ಪವಿತ್ರವಸ್ತುಗಳಿಗೆಲ್ಲಕ್ಕೂ ಪವಿತ್ರವಾದುದು ಬ್ರಹ್ಮಜ್ಞಾನ. ಇದರ ಪವಿತ್ರತೆಯು ಎಷ್ಟೆಂದರೆ ಬ್ರಹ್ಮಜ್ಞಾನವಾದೊಡನೆಯೇ ಜನ್ಮ-ಜನ್ಮಾಂತರಗಳ ಪಾಪ-ಪುಣ್ಯಗಳನ್ನು ಸುಟ್ಟುಹಾಕಿಬಿಡುತ್ತದೆ. ಸ್ಪರ್ಶಶಿಲೆಯಿಂದ ಚಿನ್ನವಾದ ಕಬ್ಬಿಣವು ಪುನಃ ಯಾವುದೇ ಕಾರಣದಿಂದಲೂ ಕಬ್ಬಿಣವಾಗಿ ಪರಿವರ್ತನೆ ಹೊಂದದಂತೆ–ಬ್ರಹ್ಮಜ್ಞಾನದಿಂದ ಪೂತನಾದವನಿಗೆ ಯಾವುದೇ

ಕಾರಣದಿಂದಲೂ ಪಾಪ-ಪುಣ್ಯಗಳ ಸೋಂಕಿರುವುದಿಲ್ಲ. ಆದುದರಿಂದ ಈ ಬ್ರಹ್ಮಜ್ಞಾನವು ಎಲ್ಲ ಪವಿತ್ರವಸ್ತುಗಳಿಗೂ ಪವಿತ್ರವಾದುದು.

**ಪ್ರತ್ಯಕ್ಷಾವಗಮಂ** = ಭಗವಂತನ ಈ ಪದಪ್ರಯೋಗವು ಬಹುಮುಖ್ಯ ವಾದುದು. ಬ್ರಹ್ಮವಿದ್ಯೆಯ ಜ್ಞಾನವೆಂದರೆ ಕಟ್ಟುಕಥೆಯಲ್ಲ. ಪ್ರತ್ಯಕ್ಷಾನುಭವಕ್ಕೆ ಸಿಕ್ಕತಕ್ಕುದು. ಆತ್ಮಾನುಭವವನ್ನು ಈ ಜನ್ಮದಲ್ಲಿಯೇ ಈ ಶರೀರದಲ್ಲಿಯೇ ಪಡೆದುಕೊಳ್ಳಬಹುದು. ಅನಂತರವೇ ಇದನ್ನು ಪರಮಪವಿತ್ರವಾದು ದೆಂಬುದನ್ನು ಒಪ್ಪಿಕೊಳ್ಳಬಹುದು. ಶ್ರೀಕೃಷ್ಣನು ಹೇಳಿದನೆಂಬ ಮಾತ್ರಕ್ಕೆ ಒಪ್ಪಿಕೊಳ್ಳಬೇಕಾದ ಅವಶ್ಯಕತೆಯಿಲ್ಲ. ಅವನು ಹೇಳಿರುವ ಮಾರ್ಗದಲ್ಲಿ ಹೋಗಿ ಯಾವನಾದರೂ ಈ ಮಾತಿನ ಸತ್ಯಾಸತ್ಯತೆಯನ್ನು ಅರಿಯ ಬಹುದಾಗಿದೆ.

**ಧರ್ಮ್ಯಂ**= ಧರ್ಮಮೂಲವಾಗಿಯೇ ಇರತಕ್ಕುದು. ಧರ್ಮಾತೀತ ವಾದುದು. ಆದರೆ ಧರ್ಮಕ್ಕೆ ವಿರೋಧಿಯಲ್ಲ.

ಇಂತಹ ಮಹಾವಿದ್ಯೆಯಾದರೂ ಸಹ ಬ್ರಹ್ಮವಿದ್ಯೆಯು ಸಾಧಿಸಲು ಸುಲಭವಾದುದು.

ಶ್ರೀಕೃಷ್ಣನ ಈ ಮಾತು ಅನೇಕರಿಗೆ ಅಚ್ಚರಿಯನ್ನುಂಟುಮಾಡಬಹುದು. ಸ್ವಲ್ಪ ವಿವೇಚಿಸಿದರೆ ಶ್ರೀಕೃಷ್ಣನ ಆ ಮಾತಿನಿಂದ ನಾವು ಅಚ್ಚರಿ ಗೊಳ್ಳಬೇಕಾಗಿಲ್ಲ. ನಾವು ಜೀವಿಕೆಯ ವಿದ್ಯಾಭ್ಯಾಸವನ್ನು ಹದಿನೈದು ವರ್ಷ ಗಳ ಕಾಲ ಮಾಡುತ್ತೇವೆ. ಹದಿನೈದು ವರ್ಷಗಳ ಪರ್ಯಂತವಾಗಿ ಮಾಡಿ ದರೂ ಉತ್ತಮದರ್ಜೆಯಲ್ಲಿ ತೇರ್ಗಡೆಹೊಂದುತ್ತೇವೆಂಬ ಭರವಸೆಯಿಲ್ಲ. ಶಾಲೆಗೆ ಹೋಗುವ ವೇಳೆ, ವ್ಯಾಸಂಗಮಾಡುವ ವೇಳೆಗಳಲ್ಲಿ ಕೇವಲ ಅರ್ಧ ಭಾಗ ವೇಳೆಯನ್ನು ಅಥವಾ ಕಾಲುಭಾಗ ವೇಳೆಯನ್ನು ಪರಮಾತ್ಮನ ಧ್ಯಾನ ಕಾರ್ಯಕ್ಕಾಗಿ ವಿನಿಯೋಗಿಸಿದರೆ ಅವನು ಖಂಡಿತವಾಗಿಯೂ ಒಲಿದೇ ತೀರುತ್ತಾನೆ. ನಾವು ಅವನನ್ನು ತಿಳಿದುಕೊಳ್ಳುವ ಪ್ರಯತ್ನವನ್ನೇ ಮಾಡದೇ ಅವನು ಇರುವನೋ–ಇಲ್ಲವೋ ಎಂಬ ಸಂಶಯವನ್ನು ತಳೆದು ಮೂಢ ರಾಗಿದ್ದೇವೆ. ಎಂಟು ವರ್ಷಕ್ಕೆ ಬ್ರಹ್ಮೋಪದೇಶವನ್ನು ಮಾಡಿದೊಡನೆಯೇ ಗಾಯತ್ರಿಯ ಮೂಲಕವಾಗಿ ಆತ್ಮಧ್ಯಾನದ ಕಾರ್ಯವು ಆರಂಭವಾಗುತ್ತದೆ. ವೇದಾಭ್ಯಾಸದ ಜೊತೆಯಲ್ಲೇ ಆತ್ಮಧ್ಯಾನವೂ ಸೇರಿಕೊಂಡೇ ಬ್ರಹ್ಮಚಾರಿಯ ಜೀವನವು ಸಾಗುತ್ತದೆ. ವಿದ್ಯಾಭ್ಯಾಸವು ಮುಗಿಯುವವೇಳೆಗೆ ವೇದಪ್ರತಿ

ಪಾದ್ಯನಾದ ಪರಮಾತ್ಮನನ್ನೂ ಸಹ ಬ್ರಹ್ಮಚಾರಿಯು ತನ್ನ ಹೃದಯಾಂತರಾಳದಲ್ಲಿ ಕಂಡುಕೊಂಡಿರುತ್ತಾನೆ. ಬ್ರಹ್ಮಚರ್ಯಾಶ್ರಮದ ಉದ್ದೇಶವೇ ಇದಾಗಿರುತ್ತದೆ. ಪರಮಾತ್ಮನನ್ನು ಕಂಡುಕೊಳ್ಳುವುದಕ್ಕಾಗಿಯೇ ಪ್ರಯತ್ನಿಸಿದರೆ ಜೀವಿಕೆಯ ವಿದ್ಯಾಭ್ಯಾಸಕ್ಕಿಂತಲೂ ಅವನನ್ನು ಕಂಡುಕೊಳ್ಳುವುದು ಎಷ್ಟು ಸುಲಭವೆಂಬುದರ ಅರಿವುಂಟಾಗುತ್ತದೆ. ಆದರೆ ಪರಮಾತ್ಮನನ್ನು ಕಂಡುಕೊಳ್ಳಲು ಹೋಗುವಾಗ ಸ್ವೇಚ್ಛಾಚಾರಕ್ಕೆ ಅವಕಾಶವಿಲ್ಲ. ಮನೋನಿಗ್ರಹವಿರಬೇಕು. ಯುಕ್ತಾಹಾರನಾಗಿರಬೇಕು. ಬ್ರಹ್ಮಚಾರಿಗೆ ಇವೆಲ್ಲವೂ ಉಕ್ತನಿಯಮಗಳೇ ಆಗಿವೆ. ಯಮ-ನಿಯಮಗಳೇ ಕಷ್ಟವೆಂದು ಭಾವಿಸುವುದಾದರೆ ಅದಕ್ಕೆ ಅನ್ಯಮಾರ್ಗವಿಲ್ಲ. ಬ್ರಹ್ಮಚರ್ಯಾಶ್ರಮದ ಸಂಸ್ಕಾರವೇ ಈಗ ಲುಪ್ತವಾಗಿಹೋಗಿರುವುದರಿಂದ ಬ್ರಹ್ಮತತ್ತ್ವದ ಮಾರ್ಗವು ಮಸುಕಾಗಿ ಹೋಗಿದೆ. ಬಾಲ್ಯದಿಂದಲೇ ಅಭ್ಯಾಸಮಾಡಿದರೆ, ಶ್ರೀಕೃಷ್ಣನು ಹೇಳಿರುವಂತೆ ಇದು ಸಾಧಿಸಲು ಸುಖವಾದುದು ಮತ್ತು ಸುಲಭವಾದುದು-ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಸಾಧನೆಗೆ ಸುಖವಾದುದರಿಂದ ಹೆಚ್ಚು ದಿನ ಇದು ಉಳಿಯದೆಂಬ ಭಯವಿಲ್ಲ. ಇದು ಶಾಶ್ವತವಾಗಿ ಉಳಿಯತಕ್ಕುದು. ಆತ್ಮವನ್ನು ಕಂಡುಕೊಂಡ ನಂತರ ಆತ್ಮದರ್ಶನದ ಆನಂದವನ್ನು ಕಳೆದುಕೊಳ್ಳಲು ಯಾವನೂ ಸಿದ್ಧನಾಗಿರುವುದಿಲ್ಲ. ಅನುಭವಿಸುವುದರಿಂದ ಇತರ ಪ್ರಾಪಂಚಿಕವಸ್ತುಗಳಂತೆ ಆತ್ಮವಸ್ತುವು ವ್ಯಯಿಸಿ ಅಥವಾ ಕ್ಷಯಿಸಿ ಹೋಗುವುದಿಲ್ಲ. ನೋಡುತ್ತಿದ್ದಷ್ಟೂ ಮಹಾನಂದವನ್ನೇ ಕೊಡುತ್ತಿರುತ್ತದೆ. ಇಂತಹ ಪ್ರತ್ಯಕ್ಷಗೋಚರವಾದ, ಪಡೆಯಲು ಸುಲಭವಾದ, ಧರ್ಮಸಮ್ಮತವಾದ, ಪವಿತ್ರತಮವಾದ, ಅತ್ಯಂತ ರಹಸ್ಯವಾದ ರಾಜವಿದ್ಯೆಯನ್ನು ಎಲ್ಲರೂ ತಿಳಿಯಬೇಕು.

ರಾಜವಿದ್ಯಾ : ವಿದ್ಯೆಗಳ ರಾಜ. ಅತ್ಯಂತಪ್ರಕಾಶದಿಂದ ಕೂಡಿರುವುದರಿಂದ ವಿದ್ಯೆಗಳಲ್ಲೆಲ್ಲಾ ಇದು ಅತ್ಯಂತ ದೇದೀಪ್ಯಮಾನವಾದುದು ಎಂಬುದು ಪ್ರಸಿದ್ಧವೇ ಆಗಿದೆ. ಪವಿತ್ರಂ = ಸಾವಿರಾರು ಜನ್ಮಗಳಲ್ಲಿ ಸಂಪಾದಿಸಲ್ಪಟ್ಟಿರುವ ಪುಣ್ಯ-ಪಾಪಾದಿ ಕರ್ಮಗಳನ್ನೆಲ್ಲಾ ಮೂಲಸಹಿತವಾಗಿ ಕ್ಷಣಮಾತ್ರದಲ್ಲಿ ಸುಟ್ಟುಹಾಕಿಬಿಡುವ ಈ ವಿದ್ಯೆಯ ಪವಿತ್ರತೆಯನ್ನು ಹೇಳತಕ್ಕದ್ದೇನು?

o o o

**ಪ್ರತ್ಯಕ್ಷಾವಗಮಂ** = ಸುಖ, ದುಃಖ–ಮುಂತಾದುವುಗಳಂತೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವುದು. **ಅವ್ಯಯಂ** = ಕರ್ಮಗಳಂತೆ ಇದು ಫಲನಾಶದಿಂದ ತಾನು ನಾಶಹೊಂದುವುದಿಲ್ಲ. ಆದುದರಿಂದ ಶ್ರದ್ಧೆಗೆ ಯೋಗ್ಯವಾದುದು ಈ ಆತ್ಮಜ್ಞಾನ. (ಶಂ. ಭಾ.)

ಇದು ವಿದ್ಯೆಗಳ ರಾಜ ಮತ್ತು ರಾಜಗುಹ್ಯ ಎಂದರೆ ಅತ್ಯಂತರಹಸ್ಯವಾಗಿರಬೇಕಾಗಿರುವುದರಲ್ಲೂ ರಾಜ ಎಂದರೆ ಶ್ರೇಷ್ಠ. ಅಥವಾ ರಾಜವಿದ್ಯಾ ಎಂದರೆ ರಾಜರ ವಿದ್ಯೆ. ರಾಜರೆಂದರೆ ವಿಸ್ತಾರವೂ, ಅಗಾಧವೂ ಆದ ಮನಸ್ಸುಳ್ಳವರು. ಅಂತಹ ಮಹಾಮನಸ್ಸುಳ್ಳವರ ವಿದ್ಯೆ. ಮಹಾಮನಸ್ಸುಳ್ಳವರು ತಾನೇ ಗೋಪನೀಯವಾದ ವಿಷಯಗಳನ್ನು ಗುಟ್ಟಾಗಿಡುವುದರಲ್ಲಿ ಸಮರ್ಥರಾಗಿರುತ್ತಾರೆ! ಆದುದರಿಂದ ಅವರಿಗೇ ಗುಹ್ಯವಾಗಿರುವುದು ಇದು. ಇದು ಉತ್ತಮ ಮತ್ತು ಪವಿತ್ರ. ನನ್ನ ಪ್ರಾಪ್ತಿಗೆ ವಿರೋಧವಾದ ಎಲ್ಲ ಕಲ್ಮಷಗಳನ್ನೂ ತೊಲಗಿಸುವುದು. **ಪ್ರತ್ಯಕ್ಷಾವಗಮಂ**= ಪ್ರತ್ಯಕ್ಷವಾದ ವಿಷಯವುಳ್ಳ ಜ್ಞಾನ. ಭಕ್ತಿರೂಪವಾದ ಉಪಾಸನೆಯಿಂದ ನನ್ನನ್ನು ಉಪಾಸನೆ ಮಾಡುತ್ತಿದ್ದರೆ ನಾನು ಆ ಉಪಾಸಕನಿಗೆ ಆಗಲೇ ಪ್ರತ್ಯಕ್ಷನಾಗಿಬಿಡುತ್ತೇನೆ. ಇದು ಧರ್ಮಸಮ್ಮತವಾದುದು. ಶ್ರೇಯಸ್ಸಿಗೆ ಸಾಧನವಾದುದೇ ಧರ್ಮ. ಸ್ವರೂಪದಿಂದಲೇ ಅತ್ಯಂತಪ್ರಿಯವಾಗಿರುವುದರಿಂದಲೂ, ಒಡನೆಯೇ ನನ್ನ ದರ್ಶನವನ್ನು ಉಂಟುಮಾಡಿಕೊಡುವುದರಿಂದಲೂ, ಸ್ವಯಂ ಮಹಾ ಶ್ರೇಯಸ್ಸಿನ ರೂಪವಾಗಿದ್ದರೂ ನನ್ನ ಪ್ರಾಪ್ತಿಗೆ ಅತ್ಯಂತಸಾಧನವೂ ಆಗಿದೆ. ಆದುದರಿಂದಲೇ ಇದನ್ನು ಸುಖವಾಗಿ ಆಚರಿಸಬಹುದು ಮತ್ತು ಇದು **ಅವ್ಯಯ** =ಅಕ್ಷಯವಾದುದು. ನನ್ನನ್ನು ದೊರಕಿಸಿಕೊಟ್ಟಾದ ಬಳಿಕವೂ ಸ್ವತಃ ಕ್ಷಯಹೊಂದುವುದಿಲ್ಲ. ಇಂತಹ ಉಪಾಸನೆಯನ್ನು ಮಾಡುವವನಿಗೆ ನನ್ನನ್ನೇ ನಾನು ಕೊಟ್ಟುಕೊಂಡರೂ ನಾನು ಅವನಿಗೆ ಏನನ್ನೂ ಕೊಟ್ಟಿಲ್ಲವೆಂದೇ ನನಗನ್ನಿಸುತ್ತದೆ.

**ಏವಂರೂಪಮುಪಾಸನಂ ಕುರ್ವತಃ ಮತ್ಪ್ರದಾನೇ–ಕೃತೇಽಪಿ ನ ಕಿಂಚಿತ್ಕೃತಂ ಮಯಾ ಅಸ್ಯ ಇತಿ ಮಮ ಪ್ರತಿಭಾತಿ.** (ರಾ. ಭಾ.)

**ರಾಜವಿದ್ಯಾ**–ಪ್ರಧಾನವಾದ ವಿದ್ಯೆ. ಪ್ರತ್ಯಕ್ಷಾವಗಮಂ–ಎಂಬ

ಶಬ್ದದಿಂದ ಇದು ಅಪರೋಕ್ಷಜ್ಞಾನಕ್ಕೆ ಸಾಧನ–ಎಂಬುದನ್ನು ಹೇಳಿದಂತಾಗುತ್ತದೆ.

**ಪ್ರತ್ಯಕ್ಷಾವಗಮಶಬ್ದೇನ ಅಪರೋಕ್ಷಜ್ಞಾನಸಾಧನತ್ವಂ ಉಕ್ತಂ. (ಮ. ಭಾ.)**

**ಓಂ ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ॥೩॥**

ಪರಂತಪನೇ! ಈ ಧರ್ಮದಲ್ಲಿ ಶ್ರದ್ಧೆಯನ್ನಿಡದ ಜನರು ನನ್ನನ್ನು ಹೊಂದದೇ ಮೃತ್ಯುಸಂಸಾರಮಾರ್ಗಕ್ಕೆ ಹಿಂದಿರುಗುತ್ತಾರೆ. (ಸಂಸಾರದಲ್ಲೇ ತೊಳಲುತ್ತಾರೆ.)

* * *

(ಅರ್ಜುನ! ಆತ್ಮಧರ್ಮದ ವಿಷಯವನ್ನು ನಾನು ಇಷ್ಟು ಸ್ಪಷ್ಟವಾಗಿ ಹೇಳಿದರೂ ಸಹ ಈ ಧರ್ಮದ ವಿಷಯದಲ್ಲಿ ಅನೇಕರಿಗೆ ನಂಬಿಕೆಯೇ ಉಂಟಾಗುವುದಿಲ್ಲ. ಈ ವಿಷಯದಲ್ಲಿ ಅವರಿಗೆ ಶ್ರದ್ಧೆಯೇ ಹುಟ್ಟುವುದಿಲ್ಲ. ಅವರು ಕ್ಷುದ್ರಜೀವಿಗಳು.

ಶ್ರೀಜ್ಞಾನೇಶ್ವರರ ಮಾತಿನಲ್ಲಿ : ಹಸುವಿನ ಕೆಚ್ಚಲಿನಲ್ಲಿ ಯಥೇಚ್ಛವಾಗಿ ಹಾಲಿದೆ. ಆದರೆ ಕೆಚ್ಚಲಿನ ಮೇಲೆ ಅಂಟಿಕೊಂಡಿರುವ ಉಣ್ಣೇಹುಳುವು ಕೆಚ್ಚಲಿನ ರಕ್ತವನ್ನು ಹೀರುವುದೇ ಹೊರತು ಅದಕ್ಕೆ ಕೆಚ್ಚಲೊಳಗಿರುವ ಹಾಲು ಬೇಕಾಗಿಲ್ಲ. ಕಪ್ಪೆ ಮತ್ತು ಕಮಲಗಳು ಒಂದೇ ಕೊಳದಲ್ಲಿರುತ್ತವೆ. ಆದರೆ ಕಮಲಪುಷ್ಪದ ಸವಿಯನ್ನು ದುಂಬಿಯು ಸೇವಿಸುತ್ತದೆಯೇ ಹೊರತು ಕಪ್ಪೆಯು ಸೇವಿಸುವುದಿಲ್ಲ. ದುರ್ದೈವಿಯಾದ ಮನುಷ್ಯನ ಮನೆಯಲ್ಲಿ ಅವನ ಪೂರ್ವಜರು ಸಾವಿರಾರು ಚಿನ್ನದ ಮೊಹರುಗಳನ್ನು ಹೂತಿಟ್ಟಿರುವರು. ಆದರೆ ದುರ್ದೈವಿಯು ಅದರ ಮೇಲೆಯೇ ಕುಳಿತು ಉಪವಾಸಮಾಡುವನು.

ಶ್ರೀಕೃಷ್ಣನು ತಾನು ಹೃದಯಾಂತರಾಳದಲ್ಲಿರುವುದಾಗಿಯೂ ತನ್ನನ್ನು ಸಂದರ್ಶಿಸುವುದು ಬಹುಸುಲಭವೆಂದೂ ಸಾರಿ-ಸಾರಿ ಹೇಳುತ್ತಾನೆ. ಆದರೆ ದುರ್ದೈವಿಗಳಾದವರು ಅವನ ಮಾತಿನ ಕಡೆಗೆ ಗಮನವನ್ನೇ ಕೊಡುವುದಿಲ್ಲ. ಇಂತಹವರನ್ನು ಶ್ರೀಕೃಷ್ಣನು ತನ್ನ ಮಾತಿನಲ್ಲಿ ಶ್ರದ್ಧೆಯಿಲ್ಲದವರು, ನಂಬಿಕೆಯಿಲ್ಲದವರು–ಎಂದು ಹೇಳುತ್ತಾನೆ. ಅವನ ಮಾತು ಕೇಳದೇ

ಇದ್ದುದರಿಂದ ದುರ್ದೈವಿಗಳಾದ ಮನುಷ್ಯರಿಗೆ ಆಗುವ ಅನರ್ಥವೇನು? **ಅಪ್ರಾಪ್ಯ ಮಾಂ ನಿವರ್ತನ್ತೇ** = ನನ್ನನ್ನು ಪಡೆದುಕೊಳ್ಳದೆಯೇ ಅವರು ಹಿಂದಿರುಗುತ್ತಾರೆ. ಎಲ್ಲಿಗೆ?–**ಮೃತ್ಯುಸಂಸಾರವರ್ತ್ಮನಿ**–ಸಂಸಾರವನ್ನೇ ಶ್ರೀಕೃಷ್ಣನು ಮೃತ್ಯು ಎಂದು ಕರೆದಿದ್ದಾನೆ. ಅಥವಾ ಮೃತ್ಯುಯುಕ್ತವಾದ ಸಂಸಾರವಾದರೂ ಆಗಬಹುದು. ಹುಟ್ಟಿಬಂದೊಡನೆಯೇ ಸಾವೆಂಬುದು ಇದ್ದೇ ಇರುತ್ತದೆ. ಸಾವಾದೊಡನೆಯೇ ಪುನಃ ಜನ್ಮವಿದ್ದೇ ಇದೆ. **ಪುನರಪಿ ಜನನಂ ಪುನರಪಿ ಮರಣಂ**= ನನ್ನ ಮಾತಿನಲ್ಲಿ ನಂಬಿಕೆಯಿಡದವರು ಈ ಮೃತ್ಯುಮಾರ್ಗಕ್ಕೆ ಹಿಂದಿರುಗುತ್ತಾರೆ. ಸಂಸಾರಚಕ್ರದಲ್ಲಿ ಪುನಃ-ಪುನಃ ಸಿಕ್ಕಿಬೀಳುತ್ತಿರುತ್ತಾರೆ.

O O O

**ಅಶ್ರದ್ದಧಾನಾಃ ಪುರುಷಾಃ** = ಆತ್ಮಜ್ಞಾನರೂಪವಾದ ಈ ಧರ್ಮದ ಸ್ವರೂಪ ಮತ್ತು ಫಲಗಳಲ್ಲಿ ನಂಬಿಕೆಯಿಲ್ಲದ ನಾಸ್ತಿಕರು. ಪಾಪಕಾರಿಗಳು, ದೇಹವನ್ನೇ ಆತ್ಮವೆಂಬುದಾಗಿ ತಿಳಿಯುವ ಅಸುರರ ಸಿದ್ಧಾಂತವನ್ನು ಅವಲಂಬಿಸಿದವರು. ಇವರು ನನ್ನನ್ನು ಹೊಂದುವುದಿಲ್ಲ. ಪರಮೇಶ್ವರನಾದ ನನ್ನನ್ನು ಹೊಂದುವ ವಿಷಯದಲ್ಲಿ ಯೋಚನೆಯನ್ನೂ ಮಾಡುವುದಿಲ್ಲ. ನನ್ನನ್ನು ಹೊಂದುವ ದಾರಿಗೆ ಸಾಧನವಾಗಿರುವ ಭೇದಭಕ್ತಿಯನ್ನೂ ಸಹ ತಿಳಿಯದೇ ನಿಶ್ಚಯವಾಗಿ ಹಿಂದಿರುಗಿಬಿಡುತ್ತಾರೆ. (ಶಂ. ಭಾ.)

**ಅಶ್ರದ್ದಧಾನಾಃ** = ವಿಶ್ವಾಸಪೂರ್ವಕವಾದ ತ್ವರೆಯಿಲ್ಲದವರಾಗಿ. ಪರಮನಿಃಶ್ರೇಯಸಸ್ವರೂಪನಾದ ನನ್ನನ್ನು ಹೊಂದುವ ಸಾಧನವಾಗಿ ಅವ್ಯಯ ವಾಗಿರುವ ಈ ನನ್ನ ಉಪಾಸನೆ ಎಂಬ ಧರ್ಮವನ್ನು ಗ್ರಹಿಸಲು ಯೋಗ್ಯ ವಾದ ತಿಳಿವಳಿಕೆ ಇದ್ದರೂ ಕೂಡ, ಅದರಲ್ಲಿ ವಿಶ್ವಾಸಪೂರ್ವಕವಾದ ತ್ವರೆ ಯಿಂದ ಸಾಧನೆಮಾಡದೇ ನನ್ನನ್ನು ತಲುಪದೇ ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲೇ ಇದ್ದುಬಿಡುತ್ತಾರೆ. ಇದು ಎಂತಹ ದೊಡ್ಡ ಆಶ್ಚರ್ಯ?

(ರಾ.ಭಾ.)

ಅಶ್ರದ್ಧೆಗೆ ಕಾರಣವಾದ ಒಳಗಿನ ಶತ್ರುಗಳನ್ನೂ ಕೂಡ ನೀನು ನಿರಾಕರಿಸಬೇಕು–ಎಂಬುದನ್ನು ಸೂಚಿಸಲು ಅರ್ಜುನನನ್ನು **ಪರಂತಪ** ಎಂದು ಸಂಬೋಧಿಸಿದ್ದಾನೆ. –(ಶ್ರೀವೇದಾಂತದೇಶಿಕರು.)

**ಓಂ ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥೪॥**

ಅರ್ಜುನ! ಈ ಜಗತ್ತೆಲ್ಲವೂ ಅವ್ಯಕ್ತಸ್ವರೂಪನಾದ ನನ್ನಿಂದ ವ್ಯಾಪ್ತವಾಗಿದೆ. ಎಲ್ಲ ಭೂತಗಳೂ ನನ್ನಲ್ಲಿರುವುವು. ಆದರೆ ನಾನು ಅವುಗಳಲ್ಲಿರುವುದಿಲ್ಲ.

* * *

(ಅವ್ಯಕ್ತಮೂರ್ತಿಯಾದ ನನ್ನಿಂದ ಈ ಜಗತ್ತು ವಿಸ್ತಾರಗೊಂಡಿದೆ ಅಥವಾ ವ್ಯಾಪ್ತವಾಗಿದೆ–ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಸರ್ವತ್ರ ವ್ಯಾಪ್ತನಾಗಬೇಕಾದರೆ ಆಕಾಶದಂತೆ ಅವ್ಯಕ್ತಮೂರ್ತಿಯಾಗಬೇಕೇ ಹೊರತು ವ್ಯಕ್ತಮೂರ್ತಿಯಾದರೆ ಸರ್ವತ್ರ ವ್ಯಾಪಕತ್ವವಿರುವುದಿಲ್ಲ. ಅವ್ಯಕ್ತಮೂರ್ತಿಯೆಂದರೆ ಪುರುಷಸೂಕ್ತಪ್ರತಿಪಾದ್ಯನಾದ ಮಹಾಪುರುಷ. ಆ ಮಂತ್ರ ದಲ್ಲಿಯೇ ಅವ್ಯಕ್ತಮೂರ್ತಿಯ ವ್ಯಾಪಕತ್ವವನ್ನು ಸ್ಪಷ್ಟವಾಗಿ ಹೇಳಿದೆ.

**ಸಹಸ್ರಶೀರ್ಷಾಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ।**
**ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಙ್ಗುಲಮ್ ।**

ಸಹಸ್ರಶೀರ್ಷನಾದ, ಸಹಸ್ರಾಕ್ಷನಾದ, ಸಹಸ್ರಪಾದಗಳುಳ್ಳ ಪುರುಷನು ಈ ಭೂಮಿಯನ್ನು ಸರ್ವತ್ರ ಆವರಿಸಿ ಇದನ್ನೂ ಮೀರಿ ಹತ್ತು ಅಂಗುಲದಷ್ಟು ಮೇಲೆ ಇದ್ದಾನೆ. ಅವ್ಯಕ್ತಮೂರ್ತಿಯಾದ ಪರಮಪುರುಷನು ಸರ್ವತ್ರ ವ್ಯಾಪಿಸಿರುವುದರಿಂದ ಎಲ್ಲ ಪ್ರಾಣಿಗಳೂ ಈ ವಿರಾಟ್ಪುರುಷನ ಮಡಿಲಿನಲ್ಲಿಯೇ ಇದ್ದಂತಾಯಿತು. ಅರ್ಥಾತ್ ಪರಮಾತ್ಮನಲ್ಲಿ ಅಖಂಡಬ್ರಹ್ಮಾಂಡವೂ ಇದೆ. ಆದರೆ ನಾನು ಮಾತ್ರ ಅವುಗಳಲ್ಲಿ–ಈ ಪ್ರಾಣಿಗಳಲ್ಲಿ ಇಲ್ಲ ಎನ್ನುತ್ತಾನೆ, ಶ್ರೀಕೃಷ್ಣ. ಅವನು ಸರ್ವಾಂತರ್ಯಾಮಿ. ಎಲ್ಲದರಲ್ಲಿಯೂ ಅವನಿದ್ದಾನೆ. ಎಂಬುದಾಗಿ ನಾವು ಇದುವರೆಗೂ ತಿಳಿಯುತ್ತಾ ಬಂದಿದ್ದೇವೆ. ಆದರೆ ಇಲ್ಲಿ ಶ್ರೀಕೃಷ್ಣನು **ನ ಚಾಹಂ ತೇಷ್ವವಸ್ಥಿತಃ** =ಅವುಗಳಲ್ಲಿ ನಾನು ಇರುವುದಿಲ್ಲ ಎಂದು ಹೇಳುತ್ತಾನೆ. ಹೀಗೆ ಹೇಳಿದರೆ ವಿರೋಧವಾಗುತ್ತದಲ್ಲವೇ?– ಎಂದರೆ ನಿಜವಾದ ವಿರೋಧವಿಲ್ಲ. ಏಕೆಂದರೆ : **ಅವಸ್ಥಿತ** ಎಂಬ ಪದಕ್ಕೆ ಅವಲಂಬಿಸಿರುವ, ಆಶ್ರಯಿಸಿರುವ ಎಂಬ ಅರ್ಥವೂ ಆಗುತ್ತದೆ.

**ಮಯಿ ಸೃಷ್ಟಿರ್ಹಿ ಲೋಕಾನಾಂ ರಕ್ಷಾ ಯುಷ್ಮಾಸ್ವವಸ್ಥಿತಾ ॥**

ಕುಮಾರಸಂಭವ ೨-೨೬

'ಲೋಕಗಳ ಸೃಷ್ಟಿಯು ನನ್ನಲ್ಲಿದೆ. ನಾನು ಆ ಕಾರ್ಯವನ್ನು ಮಾಡುತ್ತೇನೆ. ಆದರೆ ಸೃಷ್ಟಿಸಿದ ಪ್ರಾಣಿಗಳ ರಕ್ಷಣೆಯ ಕಾರ್ಯವಾದರೋ ನಿಮ್ಮನ್ನೇ ಅವಲಂಬಿಸಿದೆ.'

ಹೀಗೆ ಅವಸ್ಥಿತ ಎಂಬ ಪದಕ್ಕೆ ಆಶ್ರಯಿಸಿರುವ ಎಂದು ಅರ್ಥಮಾಡುವುದರಿಂದ ಭಗವಂತನ 'ನ ಚಾಹಂ ತೇಷ್ವವಸ್ಥಿತಃ' ಎಂಬ ಮಾತಿಗೆ ಈ ಅರ್ಥವಾಗುತ್ತದೆ. 'ಎಲ್ಲ ಪ್ರಾಣಿಗಳೂ ನನ್ನಲ್ಲಿವೆ. ನನ್ನ ಆಶ್ರಯವನ್ನು ಪಡೆದಿವೆ. ಆದರೆ ನಾನು ಅವುಗಳಲ್ಲಿ ಆಶ್ರಯವನ್ನು ಪಡೆದಿರುವುದಿಲ್ಲ. ಅವು ಗಳೆಲ್ಲವೂ ನನ್ನನ್ನು ಅವಲಂಬಿಸಿವೆ. ನಾನು ಅವುಗಳನ್ನು ಅವಲಂಬಿಸಿಲ್ಲ.'

ನೀರಿನಿಂದ ಬುರುಗು ಹುಟ್ಟುತ್ತದೆ. ಬುರುಗು ಹುಟ್ಟಲು ನೀರಿನ ಆಶ್ರಯವು ಬೇಕು. ಆದರೆ ನೀರಿನ ಅಸ್ತಿತ್ವಕ್ಕೆ ಬುರುಗಿನ ಆಶ್ರಯವು ಬೇಕಾಗಿಲ್ಲ. ಸಮುದ್ರದಲ್ಲಿ ಅಲೆಗಳು ಏಳುತ್ತಿರುತ್ತವೆ. ಅಲೆಗಳ ಹುಟ್ಟಿಗೆ ಸಮುದ್ರವಿರಬೇಕು. ಆದರೆ ಸಮುದ್ರದ ಇರುವಿಕೆಗೆ ಅಲೆಗಳು ಬೇಕಾಗುವುದಿಲ್ಲ. ಅದೇ ರೀತಿಯಲ್ಲಿ ಸರ್ವಪ್ರಾಣಿಗಳ ಅಸ್ತಿತ್ವಕ್ಕೆ ಪರಮಾತ್ಮನು ಬೇಕು. ಅವನಿಂದಲೇ ಈ ಪ್ರಪಂಚವು ವಿಸ್ತಾರಗೊಂಡಿದೆ. ಆದರೆ ಅವನ ಅಸ್ತಿತ್ವಕ್ಕೆ ಪ್ರಾಣಿಗಳ ಆವಶ್ಯಕತೆಯಿಲ್ಲ. ಪ್ರಾಣಿಗಳನ್ನವನು ಅವಲಂಬಿಸಿಲ್ಲ. ಪ್ರಾಣಿಗಳಿಲ್ಲದಿದ್ದರೂ ಇರುತ್ತಾನೆ. ಪ್ರಾಣಿಗಳ ಅಂತರಾತ್ಮನಾಗಿರುವನೆಂಬುದು ನಿಶ್ಚಯವಾದರೂ ಪ್ರಾಣಿಗಳ ಅವಲಂಬನೆಯಿಂದ ಅವನು ಉಳಿದುಕೊಂಡಿಲ್ಲ. ಪ್ರಾಣಿಗಳು ಅಳಿದಮಾತ್ರಕ್ಕೆ ಪರಮಾತ್ಮನಿಲ್ಲದೇ ಇರುವುದಿಲ್ಲ.

ಪ್ರಾಣಿಗಳನ್ನಾಗಲೀ ಜಗತ್ತನ್ನಾಗಲೀ ಅವಲಂಬಿಸಿ ಪರಮಾತ್ಮನಿಲ್ಲ. ಜಗತ್ತು ಇದ್ದರೂ ಪರಮಾತ್ಮನಿರುತ್ತಾನೆ. ಜಗತ್ತು ನಾಶಹೊಂದಿದರೂ ಪರಮಾತ್ಮನಿದ್ದೇ ಇರುತ್ತಾನೆ. ಸರ್ವಾಂತರ್ಯಾಮೀ ಎನಿಸಿಕೊಂಡ ಇವನು ಜಗತ್ತು ವಿನಾಶಹೊಂದಿದರೆ ಅದರೊಡನೆಯೇ ವಿನಾಶಹೊಂದುವುದಿಲ್ಲ.

O O O

**ಅವ್ಯಕ್ತಮೂರ್ತಿನಾ**= ಮನಸ್ಸು, ಬುದ್ಧಿ, ಇಂದ್ರಿಯಗಳೆಂಬ ಕರಣಗಳಿಗೆ ಗೋಚರವಾಗದ ಸ್ವರೂಪವುಳ್ಳ.

ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲ ಭೂತಗಳೂ ಅಂತಹ ಅವ್ಯಕ್ತಮೂರ್ತಿಯಾದ ನನ್ನಲ್ಲಿ ಇವೆ ಎಂದರೆ ಪರಮಾತ್ಮನಾದ ನನ್ನನ್ನೇ ಆತ್ಮ

ವನ್ನಾಗಿ ಹೊಂದಿವೆ. ನಾನಿಲ್ಲದೇ ಅವುಗಳಿಗೆ ವ್ಯವಹಾರಸಾಮರ್ಥ್ಯವೇ ಇಲ್ಲ. ಹೀಗೆ ನಾನು ಅವುಗಳಿಗೆ ಆತ್ಮವಾಗಿದ್ದರೂ ನಾನು ಅವುಗಳಲ್ಲಿಲ್ಲ. ಮೂಢ ಬುದ್ಧಿಯುಳ್ಳವರು ಮಾತ್ರ ನಾನು ಅವುಗಳಲ್ಲಿ ಇದ್ದೇನೆ–ಎಂದು ತಿಳಿಯು ತ್ತಾರೆ. ಆದರೆ ಸಾಕಾರವಸ್ತುಗಳಂತೆ ನನಗೆ ಸಂಸರ್ಗದೋಷವಿಲ್ಲ. ಆದುದ ರಿಂದ ಸೂಕ್ಷ್ಮಭಾವದಿಂದ ನಾನು ಆಕಾಶದೊಳಗೂ ವ್ಯಾಪಿಸಿರತಕ್ಕವನು. ಸಂಸರ್ಗವಿಲ್ಲದ ವಸ್ತುವು ಎಲ್ಲಿಯೂ ಆಧೇಯವಾಗುವುದಿಲ್ಲ. ಅದಕ್ಕೆ ಯಾವುದೂ ಆಧಾರವಾಗದು. ನಾನು ಸಂಸರ್ಗರಹಿತನಾದುದರಿಂದ ಯಾವು ದನ್ನೂ ಆಧಾರವಾಗಿ ಹೊಂದಿಲ್ಲ. (ಶಂ. ಭಾ.)

ಚೇತನಾಚೇತನಾತ್ಮಕವಾದ ಈ ಜಗತ್ತೆಲ್ಲವೂ ಅವ್ಯಕ್ತಮೂರ್ತಿಯಾದ ಎಂದರೆ ಅಪ್ರಕಾಶವಾದ ಸ್ವರೂಪವುಳ್ಳ ಅಂತರ್ಯಾಮಿಯಾದ ನನ್ನಿಂದ ವ್ಯಾಪಿಸಲ್ಪಟ್ಟಿದೆ. ಈ ಜಗತ್ತನ್ನು ಧರಿಸಿ, ನಿಯಮಿಸುವುದಕ್ಕಾಗಿ ನಾನು ಶೇಷಿಯಾಗಿ ವ್ಯಾಪಿಸಿದ್ದೇನೆ.

**ಯಃ ಪೃಥಿವ್ಯಾಂ ತಿಷ್ಠನ್ ಯಂ ಪೃಥಿವೀ ನ ವೇದ ಯ ಆತ್ಮನಿ ತಿಷ್ಠನ್ ಯಮಾತ್ಮಾ ನ ವೇದ** -ಬೃ.೫-೭

ಎಂದು ಬೃಹದಾರಣ್ಯಕವು ಹೇಳುವಂತೆ ಜಗತ್ತಿಗೆ ಕಾಣದಿರುವ ಅದೃಶ್ಯ ನಾದ ಅಂತರ್ಯಾಮಿಯು ಎಲ್ಲವನ್ನೂ ವ್ಯಾಪಿಸಿದ್ದಾನೆ. ಆದುದರಿಂದ ಅವು ನನ್ನಲ್ಲಿವೆ. ಅವುಗಳ ಸ್ಥಿತಿ ಮತ್ತು ನಿಯಮನಗಳು ನನಗೆ ಅಧೀನವಾಗಿವೆ. ಆದರೆ ನಾನು ಅವುಗಳಲ್ಲಿ ಇಲ್ಲ ಎಂದರೆ ನನ್ನ ಸ್ಥಿತಿಯು ಅವುಗಳಿಗೆ ಅಧೀನ ವಲ್ಲ. ನನ್ನ ಸ್ಥಿತಿಗೆ ಅವುಗಳಿಂದ ಯಾವ ಉಪಕಾರವೂ ಇಲ್ಲ. (ರಾ. ಭಾ.)

ಹಿಂದೆ ಪ್ರತಿಜ್ಞೆಮಾಡಿದ ಜ್ಞಾನವೇ ಮುಂತಾದುವುಗಳನ್ನು ಇಲ್ಲಿ ಭಗವಂತನು ಹೇಳುತ್ತಾನೆ.

ಹಾಗೆ ಅವನು ಸರ್ವವ್ಯಾಪಿಯಾಗಿದ್ದಾನೆ. ಏತಕ್ಕೆ ಕಾಣುವುದಿಲ್ಲ ಎಂದರೆ ಅವನು ಅವ್ಯಕ್ತಮೂರ್ತಿಯಾಗಿರುವುದರಿಂದ (ಮ. ಭಾ.)

**ಓಂ ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥೫॥**

ಪ್ರಾಣಿಗಳು ನನ್ನಲ್ಲಿರುವುದೂ ಇಲ್ಲ. ಈಶ್ವರಸಂಬಂಧವಾದ ನನ್ನ

ಯೋಗವನ್ನು ನೋಡು. ಭೂತಭಾವನನಾದ ನನ್ನ ಆತ್ಮವು ಎಲ್ಲ ಭೂತಗಳಿಗೂ ಧಾರಕವಾಗಿದೆ. ಆದರೆ ಭೂತಗಳಲ್ಲಿ ಇಲ್ಲ.

* * *

(ಹಿಂದಿನ ಶ್ಲೋಕದಲ್ಲಿ ಮತ್ಸ್ಥಾನಿ ಸರ್ವಭೂತಾನಿ = ನನ್ನಲ್ಲಿ ಸರ್ವಭೂತಗಳೂ ಅಡಗಿವೆ–ಎಂದು ಹೇಳಿ ನ ಚ ಮತ್ಸ್ಥಾನಿ ಭೂತಾನಿ–ನನ್ನಲ್ಲಿ ಪ್ರಾಣಿಗಳಾವುದೂ ಇಲ್ಲ ಎಂದು ಇಲ್ಲಿ ಹೇಳಿದ್ದಾನೆ.

ಈ ಮಾತುಗಳು ಪರಸ್ಪರವಿರುದ್ಧವಾಗಿರುವಂತೆ ಕಂಡುಬರುತ್ತವೆ. ಆದರೆ ಭೂತಗಳು ನನ್ನಲ್ಲಿ ಇಲ್ಲ–ಎಂಬುದಕ್ಕೆ ಭೂತಗಳ ಗುಣ-ದೋಷಗಳ ಸಂಬಂಧವು ನನಗೆ ಇಲ್ಲ. ನಾನು ನಿರ್ಲಿಪ್ತನಾದುದರಿಂದ ಅವು ನನ್ನಲ್ಲಿ ಇಲ್ಲ–ಎಂಬ ಭಾವವನ್ನು ತೆಗೆದುಕೊಂಡರೆ ಯಾವ ವಿರೋಧವೂ ಇಲ್ಲ.

ಭೂತಭೃತ್= ಮರಳುಕಾಡಿನಲ್ಲಿ ಸೂರ್ಯಕಿರಣದ ಆಧಾರದಿಂದ ದೂರದಲ್ಲಿ ಮೃಗಜಲವು ಕಾಣಿಸಿಕೊಳ್ಳುವುದು. ನಿಜವಾಗಿಯೂ ಅಲ್ಲಿ ಜಲ ವಿರುವುದಿಲ್ಲ. ಅದರಂತೆ ಪರಮಾತ್ಮನ ಯೋಗಮಾಯೆಯಿಂದ ಈ ವಿಶ್ವದ ಸೃಷ್ಟಿಯಾಗಿದೆ. ನಿಜವಾಗಿ ನೋಡಿದರೆ ವಿಶ್ವವು ಬೇರೇ, ಅವನು ಬೇರೇ ಅಲ್ಲ. ಸೂರ್ಯ ಮತ್ತು ಸೂರ್ಯಕಿರಣಗಳು ಬೇರೆಯಾಗುವ ಸಾಧ್ಯತೆಯಿಲ್ಲ. ಸಾಯಂಕಾಲವಾಗುತ್ತಲೇ ಸೂರ್ಯನ ಕಿರಣಗಳು ಅವನಲ್ಲಿಯೇ ಲಯಹೊಂದುತ್ತವೆ.

ಆದುದರಿಂದ ಭಗವಂತನು ಭೂತಗಳನ್ನು ಧರಿಸಿದ್ದರೂ ಅವುಗಳಲ್ಲಿ ಆಸಕ್ತಿಯಿಲ್ಲದವನಾಗಿರುವುದರಿಂದ ಅವನು ಅವುಗಳಲ್ಲಿ ಇಲ್ಲವೆಂದೇ ಹೇಳ ಬೇಕು. ಈ ವಿರೋಧಗಳು ಸಮನ್ವಯವಾಗುವುದಕ್ಕೆ ಕಾರಣ ಭಗವಂತನ ಅದ್ಭುತವಾದ ಯೋಗಮಾಯಾಶಕ್ತಿ. ಅಂತಹ ಅದ್ಭುತವಾದ ಯೋಗಶಕ್ತಿ ಯನ್ನು ಗಮನಿಸಬೇಕೆಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳುತ್ತಾನೆ. ಭಗವಂತನ ಆತ್ಮವು ಎಲ್ಲ ಭೂತಗಳನ್ನೂ ಸೃಷ್ಟಿಸಿ ಬೆಳೆಸುವುದರಿಂದ ಅದು ಭೂತಭಾವನ. ಇಲ್ಲಿ ಆತ್ಮಾ ಎಂದರೆ ಅವನಿಗೆ ಅವನಿಂದ ಬೇರೆಯಾದ ಆತ್ಮವಿದೆಯೆಂದು ಗ್ರಹಿಸಬಾರದು. ಅವನ ಮನೋಮಯವಾದ ಸಂಕಲ್ಪವೇ ಅವನ ಆತ್ಮ. ಅದರಿಂದಲೇ ಭೂತಗಳ ಸೃಷ್ಟಿ.

ಜ್ಞಾನೇಶ್ವರರು–ನ ಚ ಮತ್ಸ್ಥಾನಿ ಭೂತಾನಿ–ಎಂಬುದಕ್ಕೆ ಕೊಟ್ಟಿ

ರುವ ಉದಾಹರಣೆಗಳು ಹೃದಯಂಗಮವಾಗಿವೆ. ಗಡಿಗೆ-ಮಡಿಕೆಗಳು ಸ್ವಾಭಾವಿಕವಾಗಿ ಭೂಮಿಯಲ್ಲಿ ಮೊಳಕೆಯೊಡೆದು ಬೆಳೆಯುವುದಿಲ್ಲ. ಅವು ಕುಂಬಾರನ ಬುದ್ಧಿಯೊಳಗಿನ ಕಲ್ಪನೆ. ಸಮುದ್ರದ ನೀರಿನಲ್ಲಿ ತರಂಗಗಳ ಖನಿಯಿಲ್ಲ. ಆದರೆ ಈ ಅವಾಂತರಕೃತ್ಯವು ಗಾಳಿಯದು. ಹತ್ತಿಯಲ್ಲಿ ಬಟ್ಟೆಯಿಲ್ಲ. ಹತ್ತಿಯನ್ನು ಬಳಸುವವರ ದೃಷ್ಟಿಯಿಂದ ಅದು ಬಟ್ಟೆಯಾಗಿದೆ. ಬಂಗಾರದಿಂದ ಒಡವೆಗಳನ್ನು ಮಾಡಿದಾಗ್ಯೂ ಬಂಗಾರತನ (ಸ್ವರ್ಣತ್ವ) ವೆಂಬುದು ಹೋಗುವುದಿಲ್ಲ. ಅವನ್ನು ಧರಿಸುವವರ ದೃಷ್ಟಿಯಿಂದ ಅವು ಅಲಂಕಾರವಸ್ತುಗಳಾಗಿ ಮೇಲೆ ಮೇಲೆ ಭಾಸವಾಗುವುವು. ಅದರಂತೆ ನನ್ನ ಶುದ್ಧಸ್ವರೂಪದಲ್ಲಿ ಭೂತಗಳ ಕಲ್ಪನೆಯನ್ನು ಆರೋಪಿಸುವವನಿಗೆ ಆತನ ಸಂಕಲ್ಪದೃಷ್ಟಿಯಿಂದ ಭೂತಗಳು ಭಾಸವಾಗುವುವು. ಅದೇ ಕಲ್ಪನಾರೂಪ. ಪ್ರಕೃತಿಯು ಇಲ್ಲದಂತಾಗಲು ಈ ಭೂತಾಭಾಸವು ಮೊದಲೇ ಇರಲಿಲ್ಲವೆಂಬ ನಿಶ್ಚಯವುಂಟಾಗುವುದು. ಅನಂತರ ಕೇವಲ ನನ್ನ ಶುದ್ಧಸ್ವರೂಪವೇ ಉಳಿಯುವುದು.

ಪರಮಾತ್ಮನು ಅಸಂಗನಾದುದರಿಂದ ಭೂತಗಳು ಅವನಲ್ಲಿ ಇಲ್ಲ. ಅಸಙ್ಗೋ ನ ಹಿ ಸಜ್ಜತೇ. —ಬೃಹದಾರಣ್ಯಕ.

ಹೀಗೆ ಅಸಂಗನಾಗಿದ್ದರೂ ಆತನು ಭೂತಗಳನ್ನು ಧರಿಸಿದ್ದಾನೆ. ಆದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥದಲ್ಲಿ ಅವನು ಭೂತಗಳಲ್ಲಿಲ್ಲ ಎಂದು ಹೇಳಬೇಕು. ಈಶ್ವರಸಂಬಂಧವಾದ ಈ ಯೋಗವನ್ನು ಎಂದರೆ ಆತ್ಮದ ಯಾಥಾತ್ಮ್ಯವನ್ನು ಅರಿಯಬೇಕೆಂದು ಭಗವಂತನು ಅರ್ಜುನನಿಗೆ ಹೇಳುತ್ತಾನೆ.

o o o

**ಮಮ** ಆತ್ಮಾ ಎಂದು ಭಗವಂತನು ಹೇಳುವುದಕ್ಕೆ ಕಾರಣ : ಲೌಕಿಕ ಬುದ್ಧಿಯನ್ನು ಅನುಕರಿಸಿ ದೇಹಾದಿ ಸಂಘಾತವನ್ನು ಆತ್ಮದಿಂದ ಪ್ರತ್ಯೇಕಿಸಿ ಅದರಲ್ಲಿ ಅಹಂಕಾರವನ್ನು ಅಧ್ಯಾರೋಪಮಾಡಿ ಭಗವಂತನು ನನ್ನ ಆತ್ಮಾ ಎಂದು ಹೇಳಿದ್ದಾನೆ. (ಶಂ. ಭಾ.)

ಭೂತಗಳು ನನ್ನಲ್ಲಿ ಇಲ್ಲ ಎಂದರೆ : ಕೊಡ ಮುಂತಾದುವುಗಳು, ನೀರು ಮುಂತಾದುವುಗಳನ್ನು ಧರಿಸಿರುವಂತೆ ನಾನು ಭೂತಗಳನ್ನು ಧರಿಸಿಲ್ಲ. ಮತ್ತೆ ಯಾವುದರಿಂದ ಧರಿಸಿದ್ದಾನೆ? ಬೇರೆ ಎಲ್ಲೂ ಅಸಂಭವವಾಗಿರುವ ತನ್ನ

ಅಸಾಧಾರಣವಾದ, ಆಶ್ಚರ್ಯಕರವಾದ ಯೋಗವನ್ನು ನೋಡಲು ಹೇಳುತ್ತಾನೆ. ಆ ಯೋಗವು ಯಾವುದೆಂದರೆ : **ಭೂತಭೃತ್ ಭೂತಭಾವನಃ** ಎಲ್ಲ ಭೂತಗಳನ್ನೂ ಭರಿಸಿರುವವನು ನಾನು. ಆದರೆ ಅವುಗಳಿಂದ ನನಗೆ ಯಾವ ಉಪಕಾರವೂ ಇಲ್ಲ. ನನ್ನ ಆತ್ಮವೇ ಎಂದರೆ ಮನೋಮಯವಾದ ಸಂಕಲ್ಪವೇ ಭೂತಗಳನ್ನು ಧರಿಸಿ ನಿಯಮಿಸುತ್ತಿರುವುದು. (ರಾ. ಭಾ.)

ಭೂತಗಳೆಲ್ಲವೂ ನನ್ನಲ್ಲಿದ್ದರೂ ಕೂಡ ಅವು ನನ್ನಲ್ಲಿ ಇಲ್ಲ. ಏಕೆಂದರೆ : ಅವು ಭೂಮಿಯನ್ನು ಸ್ಪರ್ಶಿಸಿಕೊಂಡು ಇರುವಂತೆ ನನ್ನಲ್ಲಿ ಇಲ್ಲ. ಭೂತಗಳು ಸ್ಪರ್ಶೇಂದ್ರಿಯದಿಂದ ಭೂಮಿಯನ್ನು ತಿಳಿದು ಅವುಗಳಿಗೂ-ಪೃಥಿವಿಗೂ ಪರಸ್ಪರವಾಗಿ ಧರ್ಮಸಂಪರ್ಕವಾಗುವಂತೆ (ಒಂದರ ಧರ್ಮವು ಮತ್ತೊಂದಕ್ಕೆ ಸಂಪರ್ಕಹೊಂದುವಂತೆ) ನನಗೂ ನನ್ನಲ್ಲಿರುವ ಭೂತಗಳಿಗೂ ಪರಸ್ಪರ ಧರ್ಮಸಂಕ್ರಮಣವಿಲ್ಲ.

**ನ ದೃಶ್ಯಶ್ಚಕ್ಷುಷಾ ಚಾಸೌ ನ ಸ್ಪೃಶ್ಯಃ ಸ್ಪರ್ಶನೇನ ಚ ।**

ನನಗೂ ಅವುಗಳಿಗೂ ಪರಸ್ಪರ ಸ್ಪರ್ಶವಿಲ್ಲವಾದುದರಿಂದ ಅವು ನನ್ನಲ್ಲಿ ಇಲ್ಲ. **ಸ್ಪೃಷ್ಟ್ವಾ ಸ್ಪರ್ಶನೇನ್ದ್ರಿಯೇಣ ತಾಂ ಜ್ಞಾತ್ವಾ ಅನ್ಯೋನ್ಯ ಧರ್ಮಸಂಪ್ರಾಪ್ತಿಮಾಸಾದ್ಯ ಚ.**

**ಮಮಾತ್ಮಾ ಭೂತಭಾವನಃ**=ಇಲ್ಲಿ ಆತ್ಮಾ ಎಂದರೆ ದೇಹ. ನನ್ನ ದೇಹವೇ ಎಲ್ಲ ಭೂತಗಳನ್ನೂ ಭಾವಿಸುತ್ತದೆ. ಇದು ನನ್ನ ದೇಹದ ಲಕ್ಷಣ.

ಈ ಮಾತುಗಳು ಪರಸ್ಪರವಿರೋಧದಂತೆ ಕಂಡುಬರುತ್ತವೆ. ಆದರೆ ಭೂತಗಳು ನನ್ನಲ್ಲಿ ಇಲ್ಲ ಎಂಬುದಕ್ಕೆ ಭೂತಗಳ ಗುಣ-ದೋಷಗಳ ಸಂಬಂಧವು ನನಗೆ ಇಲ್ಲ. ನಾನು ನಿರ್ಲಿಪ್ತನಾದುದರಿಂದ ಅವು ನನ್ನಲ್ಲಿ ಇಲ್ಲ–ಎಂಬ ಭಾವವನ್ನು ತೆಗೆದುಕೊಂಡರೆ ಯಾವ ವಿರೋಧವು ಇಲ್ಲ. (ಮ. ಭಾ.)

**ಓಂ ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥೬॥**

ಹಿಂದಿನ ಎರಡು ಶ್ಲೋಕಗಳಲ್ಲಿ ಹೇಳಿದ ವಿಷಯವನ್ನು ಇಲ್ಲಿ ದೃಷ್ಟಾಂತದ ಮೂಲಕ ಭಗವಂತನು ನಿರೂಪಿಸುತ್ತಾನೆ.

ಎಲ್ಲೆಡೆಗಳಲ್ಲಿಯೂ ಸಂಚರಿಸುವ ಮಹಾವಾಯುವು ಯಾವಾಗಲೂ ಆಕಾಶದಲ್ಲಿ ಹೇಗೆ ಇರುವುದೋ–ಹಾಗೆ ಎಲ್ಲ ಭೂತಗಳೂ ನನ್ನಲ್ಲಿವೆಯೆಂದು ನಿಶ್ಚಯವಾಗಿ ತಿಳಿ.

* * *

(ಎಲ್ಲೆಲ್ಲಿಯೂ ಸಂಚರಿಸುವ ವಾಯುವು ಆಕಾಶದಲ್ಲಿದ್ದರೂ ಕೂಡ ಅದು ಆಕಾಶಕ್ಕೆ ಅಂಟಿಕೊಂಡಿರುವುದಿಲ್ಲ. ಹಾಗೆಯೇ ಎಲ್ಲ ಭೂತಗಳೂ ಸರ್ವವ್ಯಾಪಿಯಾಗಿರುವ ನನ್ನಲ್ಲಿ ಇದ್ದರೂ ನನಗೆ ಅಂಟಿಕೊಳ್ಳದೇ ನಿರ್ಲಿಪ್ತ ವಾಗಿರುತ್ತವೆ. ಆಕಾಶವು ಸರ್ವವ್ಯಾಪಕವಾಗಿರುವಂತೆ ಭಗವಂತನು ಸರ್ವ ವ್ಯಾಪಕ. ಆಕಾಶವು ಸರ್ವಸಂಚಾರಿಯಾದ ಮತ್ತು ಅತಿದೊಡ್ಡದಾದ ವಾಯು ವಿಗೆ ಆಧಾರವಾಗಿರುವಂತೆ ಸಮಸ್ತಭೂತಕೋಟಿಗಳಿಗೂ ನಾನು ಆಧಾರ ವಾಗಿದ್ದೇನೆ. ಆಕಾಶವು ಎಲ್ಲಕ್ಕೂ ಆಧಾರವಾಗಿದ್ದರೂ ಅದಕ್ಕೂ ಅದನ್ನಾ ಶ್ರಯಿಸಿರುವ ವಾಯುವಿಗೂ ಪರಸ್ಪರ ಲೇಪವಿಲ್ಲ. ಅಂತೆಯೇ ಸರ್ವತ್ರ ಪರಿಪೂರ್ಣನಾಗಿರುವ ಪರಮಾತ್ಮನಾದ ನನ್ನಲ್ಲಿ ಎಲ್ಲ ಭೂತಕೋಟಿಗಳೂ ನಿರ್ಲಿಪ್ತಭಾವದಿಂದ ನೆಲೆಸಿವೆ.

ವಾಯುವಿರಬೇಕಾದರೆ ಆಕಾಶವಿದ್ದೇ ಇರಬೇಕು. ವಾಯುವಿಗೆ ಆಕಾಶವೇ ಆಧಾರ. ಅದೇ ರೀತಿಯಲ್ಲಿ ಪ್ರಾಣಿಗಳಿಗೆ ಪರಮಾತ್ಮನೇ ಆಧಾರ. ವಾಯುವಿಲ್ಲದೇ ಆಕಾಶವಿರಲು ಸಾಧ್ಯ. ether (ಶುದ್ಧಾಕಾಶ). ಪರ ಮಾತ್ಮನು ಆಕಾಶದಂತೆ ಶುದ್ಧವಸ್ತು. ವಾಯುವಾದರೋ ಪ್ರಕೃತಿಯ ನಾನಾ ವಾಸನೆಗಳಿಂದ ಕೂಡಿದುದಾಗಿರುತ್ತದೆ.

ವಾಯುವಿನ ನ್ಯೂನಾತಿರೇಕಗಳು ಆಕಾಶದ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಚಂಡಮಾರುತವು ಬೀಸಿದರೆ ಆಕಾಶವು ಪ್ರಕಂಪಿಸುವುದಿಲ್ಲ. ಆಕಾಶದಲ್ಲಿ ವಾಯುವಿರುವಿಕೆಯೆಂಬುದು ನಿತ್ಯವಾದುದು. ಆಕಾಶವನ್ನು ಬಿಟ್ಟು ಬೇರೆ ಕಡೆ ವಾಯುವಿರಲು ಸಾಧ್ಯವೇ ಇಲ್ಲ. ವಾಯುವು ಎಲ್ಲ ಕಡೆಗಳಿಗೂ ಹೋಗುವ ಸ್ವಭಾವವುಳ್ಳದ್ದು ಮತ್ತು ಬೃಹತ್ತಾದುದು. ಅಂತೆಯೇ ಪ್ರಾಣಿಗಳೂ ಸಹ ವಿಶ್ವದಲ್ಲಿ ಸರ್ವತ್ರ ವ್ಯಾಪಿಸಿವೆ. ಪ್ರಕೃತಿಯು ಬಹುದೊಡ್ಡದಾಗಿ ಬೆಳೆದಿದೆ. ಆಕಾಶದಲ್ಲಿ ನಿತ್ಯವೂ

ಸರ್ವತ್ರ ಗಮನವಿರುವ ಮಹಾನ್‌ವಾಯುವು ಇರುವಂತೆ ಎಲ್ಲ ಭೂತಗಳೂ ನನ್ನಲ್ಲಿ ಸ್ಥಾನಮಾಡಿಕೊಂಡಿವೆ. ಆಕಾಶದಲ್ಲಿ ವಾಯುವಿದ್ದರೂ ವಾಯುವಿನೊಡನೆ ಆಕಾಶವು ಅಂಟಿಕೊಂಡಿರುವುದಿಲ್ಲ. ಆಕಾಶದಲ್ಲಿ ವಾಯುವಿದೆಯೆಂಬ ಭಾವನೆಯೂ ಆಗುವುದಿಲ್ಲ. ಅದೇ ರೀತಿಯಲ್ಲಿ ಎಲ್ಲ ಪ್ರಾಣಿಗಳೂ ಸಹ ಪರಮಾತ್ಮನಲ್ಲಿದ್ದರೂ ಸಹ ಶುದ್ಧಾಕಾಶದಂತಿರುವ ಪರಮಾತ್ಮನು ಪ್ರಾಣಿಗಳಿಗೆ ಅಂಟಿಕೊಂಡಿರುವುದಿಲ್ಲ. ಪ್ರಾಣಿಗಳು ತನ್ನ ಸಂಸರ್ಗದಲ್ಲಿರುವುವೆಂಬ ಭಾವನೆಯೂ ಅವನಿಗಿರುವುದಿಲ್ಲ. ಸಮುದ್ರದಲ್ಲಿ ನೊರೆಯು ಹುಟ್ಟುತ್ತದೆ. ಅದಕ್ಕಾಗಿ ಸಮುದ್ರವೇನೂ ಪ್ರಯತ್ನಮಾಡುವುದಿಲ್ಲ. ತನ್ನಿಂದಲೇ ಹುಟ್ಟಿದ ನೊರೆಯ ವಿಷಯವಾಗಿ ಅದು ಸಂಬಂಧವನ್ನು ಹುಟ್ಟಿಸಿಕೊಳ್ಳುವುದಿಲ್ಲ. ತರಂಗಗಳು ತಾನೇ ತಾನಾಗಿ ಮೇಲೇಳುತ್ತಿರುತ್ತವೆ ; ಕೆಳಕ್ಕೆ ಬೀಳುತ್ತಿರುತ್ತವೆ. ತೆರೆಗಳಿಗೆ ಅಲೆಗಳೆಂದು ಹೆಸರಿದ್ದರೂ ಸಹ ಅದೂ ಸಮುದ್ರದ ನೀರೇ ಆಗಿರುತ್ತದೆ. ಕ್ಷಣಮಾತ್ರ ಅಲೆಯಾಗಿದ್ದು ಮರುಕ್ಷಣದಲ್ಲಿಯೇ ಸಮುದ್ರದೊಡನೆ ಸೇರಿಹೋಗುತ್ತದೆ. ಅದೇ ರೀತಿಯಲ್ಲಿ ಪರಮಾತ್ಮನಿಂದ ಅಲೆಯರೂಪದಲ್ಲಿ ಪ್ರಕೃತಿಯು ಪ್ರಕಟವಾಗುತ್ತಲೇ ಇರುತ್ತದೆ. ಲಯವಾಗುತ್ತಲೇ ಇರುತ್ತದೆ. ಪರಮಾತ್ಮನು ಮಾತ್ರ ಪ್ರಕೃತಿಗೆ ಅಂಟಿಕೊಳ್ಳದೇ ಅಕ್ಷೋಭ್ಯನೂ, ಅಚಿಂತ್ಯನೂ, ನಿರ್ವಿಕಾರನೂ ಆಗಿರುತ್ತಾನೆ.)

o o o

**ಸರ್ವಾಣಿ....ಉಪಧಾರಯ** =ಆಕಾಶದಂತೆ ಸರ್ವತ್ರ ಪರಿಪೂರ್ಣನಾಗಿರುವ ನನ್ನಲ್ಲಿ ಎಲ್ಲ ಭೂತಕೋಟಿಗಳೂ ಅಂಟಿಕೊಳ್ಳದೇ ಇವೆ.

**ಆಕಾಶವತ್ ಸರ್ವಗತೇ ಮಯಿ ಅಸಂಶ್ಲೇಷೇಣೈವ ಸ್ಥಿತಾನಿ.**

(ಶಂ. ಭಾ.)

ಎಲ್ಲ ಭೂತಕೋಟಿಗಳ ಸ್ಥಿತಿ-ಪ್ರವೃತ್ತಿಗಳೂ ತನ್ನ ಸಂಕಲ್ಪಕ್ಕೆ ಅಧೀನವಾಗಿವೆ–ಎಂಬುದಕ್ಕೆ ಇಲ್ಲಿ ಭಗವಂತನು ನಿದರ್ಶನವನ್ನು ಕೊಡುತ್ತಾನೆ.

ನಿರಾಲಂಬನವಾದ ಆಕಾಶದಲ್ಲಿ ಇದ್ದುಕೊಂಡು ಮಹಾವಾಯುವು ಎಲ್ಲ ಕಡೆಗಳಲ್ಲೂ ಸಂಚರಿಸುತ್ತದೆ. ವಾಯುವು ನಿರಾಲಂಬನವಾಗಿ ಹೇಗಿರುತ್ತದೆ? ಎಂದರೆ : ಅದನ್ನು ನಾನೇ ಧರಿಸಿದ್ದೇನೆ. ಅದರ ಸ್ಥಿತಿಯು ನನಗೆ ಅಧೀನ ಎಂದು ಅವಶ್ಯವಾಗಿ ತಿಳಿದುಕೊಳ್ಳಬೇಕು. ಹಾಗೆಯೇ ಎಲ್ಲ ಭೂತ

ಕೋಟಿಗಳೂ ಅವುಗಳ ಕಣ್ಣಿಗೆ ಕಾಣದೇ ಇರುವ ನನ್ನಲ್ಲಿಯೇ ಇದ್ದು ನನ್ನಿಂದಲೇ ಧರಿಸಲ್ಪಟ್ಟಿವೆ–ಎಂದು ತಿಳಿ.

**ಮೇಘೋದಯಃ ಸಾಗರಸಂಧಿವೃತ್ತಿಃ**
**ಇನ್ದೋರ್ವಿಭಾಗಃ ಸ್ಫುರಿತಾನಿ ವಾಯೋಃ ।**
**ವಿದ್ಯುದ್ವಿಭಙ್ಗೋ ಗತಿರುಷ್ಣರಶ್ಮೇಃ**
**ವಿಷ್ಣೋರ್ವಿಚಿತ್ರಾಃ ಪ್ರಭವನ್ತಿ ಮಾಯಾಃ ॥**

ಎಂದು ವೇದವಿದರು ಹೇಳುತ್ತಾರೆ.

ಮೇಘದ ಪ್ರಾದುರ್ಭಾವ ಮುಂತಾದುವುಗಳೆಲ್ಲವೂ ವಿಷ್ಣುವಿನ ಸಂಕಲ್ಪದಿಂದ ಉಂಟಾಗುವ ಅಸಾಧಾರಣವಾದ ಮಹಾಶ್ಚರ್ಯಗಳು.

**ಭೀಷಾಸ್ಮಾದ್ವಾತಃ ಪವತೇ** ಆರಣ್ಯಕ-೮ (ರಾ. ಭಾ.)

ಭೂತಗಳು ತನ್ನಲ್ಲಿ ಇಲ್ಲ ಎಂದು ಹಿಂದೆ ಹೇಳಿರುವುದಕ್ಕೆ ಇಲ್ಲಿ ಭಗವಂತನು ದೃಷ್ಟಾಂತವನ್ನು ಹೇಳುತ್ತಾನೆ. ಆಕಾಶದಲ್ಲಿ ಇರುವ ವಾಯುವು ಸ್ಪರ್ಶ ಮುಂತಾದುವುಗಳನ್ನು ಪಡೆಯುವುದಿಲ್ಲ. ಆಕಾಶ-ವಾಯುಗಳಿಗೆ ಒಂದರ ಧರ್ಮ ಮತ್ತೊಂದಕ್ಕೆ ಅಂಟುವುದಿಲ್ಲ. ಹಾಗೆಯೇ ಭಗವಂತನಿಗೂ ಮತ್ತು ಅವನನ್ನು ಆಧರಿಸಿರುವ ಭೂತಕೋಟಿಗಳಿಗೂ. (ಮ. ಭಾ.)

**ಓಂ ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥೭॥**

ಕೌಂತೇಯ! ಕಲ್ಪವು ಕೊನೆಗೊಂಡಾಗ ಎಲ್ಲ ಪ್ರಾಣಿಗಳೂ ನನ್ನ ಪ್ರಕೃತಿಯನ್ನೇ ಸೇರುತ್ತವೆ. ಕಲ್ಪದ ಪ್ರಾರಂಭದಲ್ಲಿ ಮತ್ತೆ ಅವುಗಳನ್ನು ನಾನು ಸೃಷ್ಟಿಮಾಡುತ್ತೇನೆ.

* * *

(ಎಲ್ಲ ಪ್ರಾಣಿಗಳೂ ಕಲ್ಪಕ್ಷಯದಲ್ಲಿ ನನ್ನದಾದ ಪ್ರಕೃತಿಯನ್ನೇ ಸೇರುತ್ತವೆ ಎನ್ನುತ್ತಾನೆ ಶ್ರೀಕೃಷ್ಣ. ಬ್ರಹ್ಮನ ಒಂದು ದಿವಸಕ್ಕೆ ಅಂದರೆ ೮,೬೪,೦೦,೦೦,೦೦೦ ಸೌರವರ್ಷಕ್ಕೆ ಒಂದು ಕಲ್ಪವೆಂದು ಹೆಸರು. ಇದರಲ್ಲಿ ಬ್ರಹ್ಮನ ಹಗಲು-ರಾತ್ರಿಗಳೆರಡೂ ಸೇರುತ್ತವೆ. ಬ್ರಹ್ಮನ ಹಗಲಿನಲ್ಲಿ ಸೃಷ್ಟಿಯ ಕಾರ್ಯವೂ, ರಾತ್ರಿಯಲ್ಲಿ ಪ್ರಲಯವೂ ನಡೆಯುತ್ತದೆ. ಬ್ರಹ್ಮನ ಈ ಒಂದು

ಹಗಲಿನಲ್ಲಿ ಹದಿನಾಲ್ಕು ಮಂದಿ ಇಂದ್ರರೂ, ಹದಿನಾಲ್ಕು ಮಂದಿ ಮನುಗಳೂ ದೇವಲೋಕವನ್ನಾಳುವರು. ಬ್ರಹ್ಮನ ಒಂದು ದಿನದಲ್ಲಿ ಹಗಲು ಕಳೆದೊಡನೆಯೇ ಅಥವಾ ಅರ್ಧಕಲ್ಪವು ಮುಗಿದೊಡನೆಯೇ ಪ್ರಲಯವಾಗುವುದು. ಇದಕ್ಕೆ ನಿತ್ಯಪ್ರಲಯವೆಂದು ಹೆಸರು. ಮಹಾಪ್ರಲಯವಲ್ಲ. ಇದೇ ಕಾಲಮಾನದ ಪ್ರಕಾರ ಬ್ರಹ್ಮನಿಗೆ ನೂರು ವರ್ಷಗಳು ತುಂಬಿದಾಗ ಮಹಾ ಪ್ರಲಯವಾಗುತ್ತದೆ.

ಈ ನಿತ್ಯಪ್ರಲಯದ ವಿಷಯವಾಗಿ ಶ್ರೀಕೃಷ್ಣನು ಹೇಳುತ್ತಿದ್ದಾನೆ. ಎಲ್ಲ ಪ್ರಾಣಿಗಳೂ ನನ್ನ ಪ್ರಕೃತಿಯೊಳಗೆ ಸೇರಿಕೊಳ್ಳುತ್ತವೆ. ಪ್ರಲಯದಲ್ಲಿ ಪ್ರಾಣಿಗಳೆಲ್ಲವೂ ನಾಶಹೊಂದುವುವು. ಆದರೆ ಅವು ಬ್ರಹ್ಮನಲ್ಲಿ ಐಕ್ಯವಾಗುವುದಿಲ್ಲ. ಅವುಗಳ ವಾಸನೆಯು ಅವುಗಳ ಕಾರಣಶರೀರದಲ್ಲೇ ಉಳಿದಿರುವುದು. ವೃಕ್ಷವೊಂದು ಬೀಜರೂಪದಲ್ಲಿ ಸೂಕ್ಷ್ಮವಾಗಿರುವಂತೆ ಪ್ರಾಣಿಗಳು ತಮ್ಮ-ತಮ್ಮ ವಾಸನೆಗಳೊಡನೆ ಬೀಜರೂಪವಾಗಿ ಪರಬ್ರಹ್ಮನ ಪ್ರಕೃತಿ ಯೊಳಗೆ ಸೇರಿಕೊಂಡಿರುತ್ತವೆ. ಪ್ರಲಯವೆಂದರೆ ಪ್ರಾಣಿಗಳ ವಿನಾಶವಾಗಿ ಬಿಡುವುದಿಲ್ಲ. ಅವು ಸೂಕ್ಷ್ಮರೂಪವನ್ನು ಹೊಂದುತ್ತವೆ. ಮನುಷ್ಯನಿಗೆ ನಿದ್ರೆಯಲ್ಲಿ ಕಾಣುವ ಕನಸು ಪುನಃ ಮನುಷ್ಯನೊಳಗೇ ಸೇರಿಹೋಗಿರುವಂತೆ ಪ್ರಾಣಿಗಳೆಲ್ಲವೂ ಸೂಕ್ಷ್ಮರೂಪದಲ್ಲಿ ಪರಮಾತ್ಮನ ಯೋಗಮಾಯೆಯೊಡನೆ ಪರಮಾತ್ಮನಲ್ಲಿಯೇ ಇರುತ್ತವೆ. ಮನುಷ್ಯನ ನೆಳಲಿನಂತೆ ಪರಮಾತ್ಮನ ಯೋಗಮಾಯೆಯಿರುತ್ತದೆ. ಸತ್ತ್ವ-ರಜಸ್ತಮೋಗುಣರೂಪವಾದುದೇ ಈ ಯೋಗಮಾಯೆ. ಐಂದ್ರಜಾಲಿಕನ ಮಾಯೆಯು ಇತರರನ್ನು ಮುಗ್ಧಗೊಳಿಸುವಂತೆ–ಪರಮಾತ್ಮನ ಯೋಗಮಾಯೆಯು ಪ್ರಾಣಿಗಳನ್ನು ಮುಗ್ಧಗೊಳಿಸುತ್ತದೆ. ಐಂದ್ರಜಾಲಿಕನ ಮಾಯೆಯು ಅವನ ನಿಯಂತ್ರಣಕ್ಕೆ ಒಳಪಟ್ಟಿರುವಂತೆ ಯೋಗಮಾಯೆಯು ಪರಮಾತ್ಮನ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಪ್ರಲಯಕಾಲದಲ್ಲಿ ಅವನ ಇಚ್ಛೆಯಂತೆ ಯೋಗಮಾಯೆಯಲ್ಲಿ ಐಕ್ಯವಾದ ಪ್ರಾಣಿಗಳ ಕಾರಣಶರೀರಗಳು ಕಲ್ಪವು ಪ್ರಾರಂಭವಾದೊಡನೆ ಅವನ ಇಚ್ಛೆಯಿಂದಲೇ ಯೋಗಮಾಯೆಯಿಂದ ವಿಸೃಷ್ಟವಾಗುತ್ತವೆ.

ಶ್ರೀಕೃಷ್ಣನಿಲ್ಲಿ **ಕಲ್ಪಾದೌ ವಿಸೃಜಾಮ್ಯಹಮ್** ಎಂದು ಹೇಳಿದ್ದಾನೆ. ಮಾಯೆಯ ಮೂಲಕವಾಗಿ ಸಂಗ್ರಹಿಸಿಟ್ಟಿದ್ದನ್ನು ಪುನಃ ಬಿಟ್ಟು

ಬಿಡುತ್ತೇನೆ ಎನ್ನುತ್ತಾನೆ. ಒಂದರ್ಥದಲ್ಲಿ ಇದು ಸೃಷ್ಟಿಯೆನಿಸಿದರೂ ಪ್ರಾಣಿಗಳ ಪುನರ್ವಿಸರ್ಜನವೆಂಬುದೇ ಸಮಂಜಸವಾಗಿ ಕಾಣುತ್ತದೆ. ಇಲ್ಲದೇ ಇರುವುದನ್ನು ಸೃಷ್ಟಿಸಹೋಗುವುದಿಲ್ಲ. ತನ್ನ ಪ್ರಕೃತಿಯೊಳಗೆ ಅಥವಾ ಯೋಗಮಾಯೆಯಲ್ಲಿ ಅಡಗಿಸಿಕೊಂಡಿದ್ದನ್ನು ಬ್ರಹ್ಮನ ರಾತ್ರಿಯು ಕಳೆದು ಬೆಳಗಾಗುತ್ತಲೇ ಬಿಟ್ಟುಬಿಡುತ್ತಾನೆ. ಇದನ್ನೇ ವೇದಗಳು **ಧಾತಾ ಯಥಾ ಪೂರ್ವಮಕಲ್ಪಯತ್** ಎಂದು ಹೇಳುತ್ತವೆ. ಚತುರ್ಮುಖನು ಹಿಂದಿದ್ದಂತೆಯೇ ವಿಶ್ವವನ್ನು ರಚನೆಮಾಡುತ್ತಾನೆ.)

O O O

**ಮಾಮಿಕಾಂ ಪ್ರಕೃತಿಂ ಯಾನ್ತಿ**=ತ್ರಿಗುಣಾತ್ಮಕವೂ ನಿಕೃಷ್ಟವೂ ಆದ ನನ್ನ ಪ್ರಕೃತಿಯನ್ನು ಪ್ರಲಯಕಾಲದಲ್ಲಿ ಎಲ್ಲ ಪ್ರಾಣಿಗಳೂ ಹೊಂದುತ್ತವೆ.

(ಶಂ. ಭಾ.)

ಭಗವಂತನ ಸಂಕಲ್ಪದಿಂದಲೇ ಎಲ್ಲ ಪ್ರಾಣಿಗಳ ಸ್ಥಿತಿ ಮತ್ತು ಪ್ರವೃತ್ತಿಗಳು ಉಂಟಾಗುತ್ತವೆಯೆಂದು ಹಿಂದೆ ಹೇಳಿದೆ. ಹಾಗೆಯೇ ಎಲ್ಲರ ಉತ್ಪತ್ತಿ ಮತ್ತು ಪ್ರಲಯಗಳೂ ನನ್ನ ಸಂಕಲ್ಪದಿಂದಲೇ ಆಗುತ್ತದೆ–ಎಂದು ಇಲ್ಲಿ ಪ್ರತಿಪಾದಿಸುತ್ತಾನೆ. ಕಲ್ಪದ ಕೊನೆಯಲ್ಲಿ (ಚತುರ್ಮುಖನ ಅವಸಾನಕಾಲದಲ್ಲಿ) ಸ್ಥಾವರ-ಜಂಗಮಾತ್ಮಕವಾದ ಎಲ್ಲ ಪ್ರಾಣಿಗಳೂ ನಾಮ-ರೂಪಗಳ ವಿಭಾಗವಿಲ್ಲದೇ ನನಗೆ ಶರೀರಭೂತವಾಗಿರುವ ತಮಸ್ಸು ಎಂಬ ಹೆಸರಿನಿಂದ ಕರೆಯಲ್ಪಡುವ ಪ್ರಕೃತಿಯಲ್ಲಿ ಸೇರಿಕೊಂಡುಬಿಡುತ್ತವೆ. ಅದೇ ಭೂತಗಳನ್ನೇ ಕಲ್ಪದ ಪ್ರಾರಂಭದಲ್ಲಿ ನಾನು ಮತ್ತೆ ಸೃಷ್ಟಿಸುತ್ತೇನೆ.

**ಆಸೀದಿದಂ ತಮೋಭೂತಂ ಸೋಽಭಿಧ್ಯಾಯ ಶರೀರಾತ್ಸ್ವಾತ್**

ಮನು ೧-೫

**ಯಾಸ್ಯಾವ್ಯಕ್ತಂ ಶರೀರಂ। ಅವ್ಯಕ್ತಮಕ್ಷರೇ ಲೀಯತೇ। ಅಕ್ಷರಂ ತಮಸಿ ಲೀಯತೇ।** ಸುಬಾಲೋಪನಿಷತ್ತು.

**ತಮ ಆಸೀತ್ತಮಸಾ ಗೂಢಮಗ್ರೇ ಪ್ರಕೇತಂ।** ನಾಸದೀಯಸೂಕ್ತ.

(ರಾ. ಭಾ.)

ಜ್ಞಾನವನ್ನು ತೋರಿಸುವುದಕ್ಕೋಸ್ಕರ ಭಗವಂತನು ಇಲ್ಲಿ ಪ್ರಲಯ

ಮುಂತಾದುವುಗಳನ್ನು ವಿಸ್ತರಿಸುತ್ತಾನೆ. ಪ್ರಲಯ, ಸೃಷ್ಟಿ–ಇವುಗಳಿಗೆ ತಾನೇ ಕಾರಣ ಎಂದು ನಿರೂಪಿಸುತ್ತಾನೆ.

**ಜ್ಞಾನಪ್ರದರ್ಶನಾರ್ಥಂ ಪ್ರಲಯಾದಿ ಪ್ರಪಂಚಯತಿ (ಮ. ಭಾ.)**

**ಓಂ ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥೮॥**

ಪ್ರಕೃತಿಗೆ ವಶವಾಗಿ ಅಸ್ವತಂತ್ರವಾಗಿರುವ ಈ ಎಲ್ಲ ಪ್ರಾಣಿಗಳ ಸಮೂಹವನ್ನೂ ನಾನು ನನ್ನ ಪ್ರಕೃತಿಯನ್ನು ಆಶ್ರಯಿಸಿಕೊಂಡು ಪುನಃ ಪುನಃ ಸೃಷ್ಟಿಸುತ್ತೇನೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಕಲ್ಪಕ್ಷಯದಲ್ಲಿ ಪ್ರಾಣಿಗಳು ನನ್ನ ಪ್ರಕೃತಿಯೊಡನೆ ಸೇರುತ್ತವೆ. ಕಲ್ಪದ ಪ್ರಾರಂಭದಲ್ಲಿ ನಾನು ಪ್ರಕೃತಿಯಲ್ಲಡಗಿರುವ ಪ್ರಕೃತಿಯ ಮಡಿಲಿನಲ್ಲಿರುವ ಅವುಗಳನ್ನು ಬಿಟ್ಟುಬಿಡುತ್ತೇನೆ ಎಂದು ಹೇಳಿದ್ದಾನೆ. ಈ ಶ್ಲೋಕದಲ್ಲವನು ಗ್ರಹಣ-ವಿಸರ್ಜನಗಳು ಒಂದೇ ಕಲ್ಪಕ್ಕೆ ಸೀಮಿತವಾದುವಲ್ಲವೆಂಬುದನ್ನು ಸ್ಪಷ್ಟಪಡಿಸುತ್ತಾನೆ.

ಈ ಕಾರ್ಯವನ್ನವನು ತನ್ನ ಯೋಗಮಾಯೆಯ ಮೂಲಕವಾಗಿ ಮಾಡುತ್ತಾನೆ. ಹೀಗೆ ಮಾಡಲು ಕಾರಣವೇನು? ಪ್ರಾಣಿಗಳ ಮೇಲೆ ಪರಮಾತ್ಮನಿಗೆ ದ್ವೇಷವೇ?–ಹಾಗೆಂದಿಗೂ ಇಲ್ಲ. ಈ ವಿಧವಾದ ಗ್ರಹಣ-ವಿಸರ್ಜನಗಳಿಗೆ ಪ್ರಾಣಿಗಳೇ ಕಾರಣ. ಸತ್ತ್ವ-ರಜಸ್ತಮೋಗುಣಗಳ ಅಥವಾ ಪ್ರಕೃತಿಯ ಆವಿರ್ಭಾವದಿಂದಾಗಿ ಪ್ರಾಣಿಗಳು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡುಬಿಟ್ಟಿರುತ್ತವೆ. ಅವುಗಳಿಗೆ ತಮ್ಮದೇ ಆದ ನೆಲೆಯನ್ನು ಕಂಡುಕೊಳ್ಳಲು ಅವಕಾಶವೇ ಇರುವುದಿಲ್ಲ ಅಥವಾ ಅವುಗಳು ಅದಕ್ಕಾಗಿ ಪ್ರಯತ್ನಿಸುವುದೂ ಇಲ್ಲ. ಪರಮಾತ್ಮನ ಯೋಗಮಾಯೆಯು ದಾಟಲಸಾಧ್ಯವಾದುದು. ಆ ಮಾಯೆಯಿಂದ ಅಥವಾ ಗುಣತ್ರಯಗಳ ಪರಸ್ಪರಮಿಶ್ರಣದಿಂದ ಪ್ರಭಾವಿತವಾದ ಪ್ರಾಣಿಗಳು ಜನನ-ಮರಣಗಳೆಂಬ ಚಕ್ರದಲ್ಲಿ ಸಿಕ್ಕಿ ನರಳುತ್ತಿರುತ್ತವೆ. ಪ್ರತಿಯೊಂದು ಕಲ್ಪ ದಲ್ಲಿಯೂ ಬೀಜರೂಪವಾಗಿ ಪರಮಾತ್ಮನ ಯೋಗಮಾಯೆಯಲ್ಲಿ ಸೇರಿಕೊಳ್ಳುವ ಈ ಪ್ರಾಣಿಗಳ ಸಮೂಹವನ್ನು ಪರಮಾತ್ಮನು ಪುನಃ

ಪುನಃ ಪ್ರಪಂಚಕ್ಕೆ ಎಸೆಯುತ್ತಲೇ ಇರುತ್ತಾನೆ. ಈ ಕಾರ್ಯವು ಅನೇಕ ಕಲ್ಪಗಳವರೆಗೂ ನಡೆಯುತ್ತಲೇ ಇರುತ್ತದೆ. ಹಾವು ಮೊಟ್ಟೆಗಳನ್ನು ಹಾಕಿಕೊಂಡು ಹೋಗಿ ಮೊಟ್ಟೆಗಳನ್ನಿಟ್ಟಿದ್ದು ಮುಗಿದನಂತರ ಹಿಂದಿರುಗಿ, ತಾನು ಹಾಕಿದ ಮೊಟ್ಟೆಗಳನ್ನೇ ತಿನ್ನಲುಪಕ್ರಮಿಸುತ್ತದೆ. ಆಗ ಅದರ ಬಾಯಿಗೆ ಸಿಕ್ಕದೇ ಚದುರಿಹೋದ ಒಂದೆರಡು ಮೊಟ್ಟೆಗಳು ಮಾತ್ರವೇ ಒಡೆದು ಮರಿಯಾಗುತ್ತವೆ. ಅದೇ ರೀತಿಯಲ್ಲಿ ಪ್ರತಿಯೊಂದು ಕಲ್ಪಗಳ ಕಡೆಯಲ್ಲಿ ವಿಸರ್ಜಿಸುವ ಪ್ರಾಣಿಗಳ ಸಮೂಹದಲ್ಲಿ ಕೆಲವು ಮಾತ್ರವೇ ಪ್ರಕೃತಿಯ ಬಂಧನದಿಂದ ಬಿಡಿಸಿಕೊಂಡು ಪರಮಾತ್ಮನನ್ನು ಸೇರಿಕೊಳ್ಳಬಹುದು.)

O O O

**ಸ್ವಾಂ ಪ್ರಕೃತಿಂ ಅವಷ್ಟಭ್ಯ** = ತನ್ನ ಪ್ರಕೃತಿಯನ್ನು ವಶಪಡಿಸಿಕೊಂಡು. **ಅವಶಂ ಭೂತಗ್ರಾಮಂ** = ಅವಿದ್ಯೆಯೇ ಮುಂತಾದ ದೋಷಗಳಿಗೆ ಪರವಶವಾಗಿ ಅಸ್ವತಂತ್ರವಾಗಿರುವ ಭೂತಸಮುದಾಯವನ್ನು.

(ಶಂ. ಭಾ.)

ವಿಚಿತ್ರವಾದ ಪರಿಣಾಮಹೊಂದುವ ನನ್ನ ಈ ಪ್ರಕೃತಿಯನ್ನು (ಎಂಟು ಬಗೆಯಾಗಿ) ಪರಿಣಾಮಗೊಳಿಸಿ ಮೋಹಕವಾದ ತ್ರಿಗುಣಮಯವಾದ ನನ್ನ ಪ್ರಕೃತಿಗೆ ವಶವಾಗಿರುವುದರಿಂದ ಪರಾಧೀನವಾಗಿರುವ ದೇವ-ತಿರ್ಯಕ್-ಮನುಷ್ಯ-ಸ್ಥಾವರಗಳೆಂಬ ನಾಲ್ಕು ಬಗೆಯಾಗಿರುವ ಭೂತಕೋಟಿಗಳನ್ನು ನಾನು ಮತ್ತೆ ಮತ್ತೆ ಕಾಲ-ಕಾಲದಲ್ಲಿ ಸೃಷ್ಟಿಸುತ್ತಿರುತ್ತೇನೆ.

ವಿಸೃಜಾಮಿ = ಬಗೆ-ಬಗೆಯಾಗಿ ಸೃಷ್ಟಿಸುತ್ತೇನೆ. ವಿಚಿತ್ರವಾದ ನಾಮ, ರೂಪ, ದೇಶ, ಕಾಲ, ಭೋಗ ಮುಂತಾದುವುಗಳಿಂದ ಕೂಡಿರುವಂತೆ ಮಾಡುತ್ತೇನೆ. (ರಾ. ಭಾ.)

ಸರ್ವಸಮರ್ಥನಾದ ಪರಮಾತ್ಮನಿಗೆ ಪ್ರಕೃತಿಯ **ಅವಷ್ಟಂಭ** (ಆಶ್ರಯ) ಎಂದರೆ ಕಾಲಿನಲ್ಲಿ ನಡೆಯುವ ಸಾಮರ್ಥ್ಯವಿರುವ ಮನುಷ್ಯನೂ ಕೂಡ ಆಟಕ್ಕೋಸ್ಕರ ಕೋಲನ್ನು ಹಿಡಿದು ನಡೆಯುವಂತೆ ಭಗವಂತನು ಲೀಲೆಯಿಂದ ಪ್ರಕೃತಿಯನ್ನು ಕಾಲವಿಶೇಷದಲ್ಲಿ ಆಶ್ರಯಿಸುತ್ತಾನೆ.

**ಯಥಾ ಕಶ್ಚಿತ್ಸಮರ್ಥೋಽಪಿ ಪಾದೇನ ಗನ್ತುಂ ಲೀಲಯಾ ದಣ್ಡಮವಷ್ಟಭ್ಯ ಗಚ್ಛತಿ.**

ಇದಕ್ಕೆ ಪ್ರಮಾಣವಾಕ್ಯಗಳು :

ನ ಕುತ್ರಚಿಚ್ಛಕ್ತಿರನನ್ತರೂಪಾ
ವಿಹನ್ಯತೇ ತಸ್ಯ ಮಹೇಶ್ವರಸ್ಯ ।
ತಥಾಪಿ ಮಾಯಾಮಧಿರುಹ್ಯ ದೇವಃ
ಪ್ರವರ್ತತೇ ಸೃಷ್ಟಿವಿಲಾಪನೇಷು ॥ (ಋಗ್ವೇದ ಖಿಲಮಂತ್ರ)

ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ–ತೈತ್ತಿರೀಯಸಂಹಿತಾ
(ಮ. ಭಾ.)

ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನು ಪ್ರಕೃತಿಂ ಸ್ವಾಮವಷ್ಟಭ್ಯ ಎಂದು ಹೇಳಿರುವುದರಿಂದ ಪ್ರಕೃತಿಯನ್ನು ತನ್ನದೆಂದು ಹೇಳಿಕೊಂಡರೂ ಸಹ ಅದಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತಾ ಮುಂದೆ ಹೇಳುತ್ತಾನೆ :

ಓಂ ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಂಜಯ ।
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥೯॥

ಧನಂಜಯ! ಆ ಕರ್ಮಗಳಲ್ಲಿ ಉದಾಸೀನನಾಗಿ ಅಸಕ್ತನಾಗಿರುವ ನನ್ನನ್ನು ಆ ಕರ್ಮಗಳು ಬಂಧಿಸುವುದಿಲ್ಲ.

* * *

(ಪ್ರಕೃತಿಯ ಆಶ್ರಯವನ್ನು ಪಡೆದು ಅಥವಾ ನನ್ನ ಯೋಗಮಾಯೆಯಿಂದ ಭೂತಗ್ರಾಮಗಳ ಗ್ರಹಣ-ವಿಸರ್ಜನಗಳನ್ನು ಮಾಡುತ್ತಿರುವುದೇನೋ ನಿಜ. ಆದರೆ ಆ ಕರ್ಮಗಳು ನನ್ನನ್ನು ಯಾವ ಕಾರಣದಿಂದಲೂ ಬಂಧಿತನನ್ನಾಗಿ ಮಾಡುವುದಿಲ್ಲ.

ನಾನು ನನ್ನ ಪ್ರಕೃತಿಯನ್ನು ಆಶ್ರಯಿಸಿ ಅದರ ಮೂಲಕ ಭೂತಕೋಟಿಗಳ ಸೃಷ್ಟಿ-ಸಂಹಾರಗಳನ್ನು ನಡೆಸುತ್ತಿದ್ದೇನೆ–ಎಂದು ಹಿಂದಿನ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ. ಹೀಗೆ ಮಾಡಿದರೆ ಅದರ ಸಂಬಂಧವಾದ ಕರ್ಮಲೇಪವು ಅವನಿಗೆ ಒದಗುವುದಿಲ್ಲವೇ?–ಎಂಬ ಪ್ರಶ್ನೆಗೆ ಭಗವಂತನು ಇಲ್ಲಿ ಉತ್ತರಿಸುತ್ತಾನೆ. ಮೇಲ್ಕಂಡ ವ್ಯಾಪಾರಗಳಲ್ಲಿ ಭಗವಂತನ ನೇರವಾದ ಪಾತ್ರವಿಲ್ಲ. ತನ್ನ ಸಂಕಲ್ಪಶಕ್ತಿಯನ್ನು ಅವನು ಹರಿಸಿದ್ದರಿಂದಲೇ ಆ ಕರ್ಮಗಳು ನಡೆಯುತ್ತವೆ. ಆ ವ್ಯಾಪಾರಗಳಿಗೆ ಅವನು ಅಧ್ಯಕ್ಷ

ಅಥವಾ ಸಾಕ್ಷೀ. ಉದಾಸೀನನಾದ ವ್ಯಕ್ತಿಯಂತೆ ಅವನು ಪ್ರಪಂಚದ ಆಗು-ಹೋಗುಗಳಲ್ಲಿ ಅವಿಕಾರಿಯಾಗಿದ್ದುಬಿಡುತ್ತಾನೆ. ಇದನ್ನು ತಾನು ಮಾಡುತ್ತಿದ್ದೇನೆ ಎಂಬ ಅಭಿಮಾನವೂ ಅವನಿಗೆ ಇಲ್ಲವಾದುದರಿಂದ ಅವುಗಳ ಸಂಗ ಲೇಪವು ಅವನಿಗೆ ಬರುವುದಿಲ್ಲ.

ಭೂತಗಳ ಸೃಷ್ಟಿ-ಲಯಗಳನ್ನು ಮಾಡಿದ್ದರಿಂದ ಭಗವಂತನಿಗೆ ಆಗಬೇಕಾದ ಪ್ರಯೋಜನವೂ ಯಾವುದೂ ಇಲ್ಲ. ಅದರ ಫಲದಲ್ಲಿ ಅವನಿಗೆ ಆಸಕ್ತಿಯಿಲ್ಲ. ಆದುದರಿಂದ ಅವನು ಕರ್ಮಗಳ ವಿಷಯದಲ್ಲಿ ಉದಾಸೀನನಂತೆ ಇರಲು ಸಾಧ್ಯವಾಗುತ್ತದೆ. ಅವನು ಉದಾಸೀನನಂತೆ ಇದ್ದಾನೆಯೇ ಹೊರತು ಉದಾಸೀನನಾಗಿಲ್ಲ. ಅವನು ಉದಾಸೀನನಾಗಿಬಿಟ್ಟರೆ ಪ್ರಪಂಚವೇ ನಡೆಯುವುದಿಲ್ಲ. ತಾನೇ ಎಲ್ಲಕ್ಕೂ ಕಾರಣನಾಗಿದ್ದರೂ ತನಗದು ಸಂಬಂಧವೇ ಇಲ್ಲದಂತೆ ನಿರ್ಲಿಪ್ತನಾಗಿ ಇದ್ದುಬಿಟ್ಟಿದ್ದಾನೆ.)

O O O

ಭೂತಕೋಟಿಗಳನ್ನು ವಿಷಮವಾಗಿ ರಚಿಸಿದ್ದ ಕಾರಣದಿಂದ ಭಗವಂತನಿಗೆ ಬಂಧನವುಂಟಾಗುವುದಿಲ್ಲವೇ? ಅದರಿಂದ ಅವನಿಗೆ ಧರ್ಮಾಧರ್ಮಗಳ ಸಂಬಂಧವುಂಟಾಗುವುದಿಲ್ಲವೇ?—ಇಲ್ಲ. ಏಕೆಂದರೆ : ಪರಮಾತ್ಮನು ನಿರ್ವಿಕಾರನಾದುದರಿಂದ ಆ ಕರ್ಮಗಳ ಬಗೆಗೆ ಉದಾಸೀನನಂತೆ ಇರುತ್ತಾನೆ ಮತ್ತು ಅವುಗಳ ಫಲದಲ್ಲಿ ಆಸಕ್ತಿಯಿಲ್ಲದೇ ಅಭಿಮಾನರಹಿತನಾಗಿಯೂ ಇರುವುದರಿಂದ ಕರ್ಮಗಳು ಅವನನ್ನು ಕಟ್ಟಿಹಾಕಲಾರವು.

ಇದರಿಂದ ತಿಳಿದುಬರುವುದೇನೆಂದರೆ : ಕರ್ತೃತ್ವದ ಅಭಿಮಾನವಿಲ್ಲದೇ ಮತ್ತು ಫಲಸಂಬಂಧವಾದ ಆಸಕ್ತಿಯಿಲ್ಲದೇ ಯಾರೇ ಕರ್ಮಮಾಡಿದರೂ ಅವರಿಗೆ ಬಂಧನವುಂಟಾಗುವುದಿಲ್ಲ. ಅದನ್ನು ಬಿಟ್ಟು ಬೇರೆಯ ರೀತಿಯಲ್ಲಿ (ಫಲಾಶೆಯಿಂದ) ಕರ್ಮಮಾಡುವ ಮೂಢರು ರೇಷ್ಮೆಹುಳುವಿನಂತೆ ಬಂಧನಕ್ಕೆ ಸಿಕ್ಕಿಬೀಳುತ್ತಾರೆ. (ಶಂ. ಭಾ.)

ಕೆಲವರನ್ನು ಸುಖಿಗಳನ್ನಾಗಿ, ಕೆಲವರನ್ನು ದುಃಖಿಗಳನ್ನಾಗಿ, ಕೆಲವರನ್ನು ದೇವತೆಗಳನ್ನಾಗಿ, ಕೆಲವರನ್ನು ಮನುಷ್ಯರನ್ನಾಗಿ ಸೃಷ್ಟಿಸುವಿಕೆಯೇ ಮುಂತಾದ ವಿಷಮತೆಯಿಂದ ಭಗವಂತನಿಗೆ ನಿಷ್ಕರುಣತೆಯ ದೋಷವುಂಟಾಗಿ ಬಂಧನವು ಒದಗುವುದಿಲ್ಲವೇ?—ಎಂದರೆ ಆ ವಿಷಮಸೃಷ್ಟಿಯೇ ಮುಂತಾದ

ಕರ್ಮಗಳು ಭಗವಂತನಲ್ಲಿ ನಿಷ್ಕರುಣತೆಯೇ ಮುಂತಾದ ದೋಷಗಳನ್ನು ಉಂಟುಮಾಡುವುದಿಲ್ಲ. ಏಕೆಂದರೆ : ದೇವ-ಮನುಷ್ಯ, ಸುಖ-ದುಃಖ ಮುಂತಾದ ವೈಷಮ್ಯಕ್ಕೆ ಕಾರಣ ಆಯಾ ಜೀವಿಗಳು ಹಿಂದೆ ಮಾಡಿದ ಕರ್ಮಗಳು. ಆ ವೈಷಮ್ಯದಲ್ಲಿ ಸಂಗವಿಲ್ಲದೇ ಭಗವಂತನು ಉದಾಸೀನನಂತೆ ಇರುತ್ತಾನೆ. ಬ್ರಹ್ಮಸೂತ್ರಗ್ರಂಥದಲ್ಲಿ **ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್, ನ ಕರ್ಮಾವಿಭಾಗಾದಿತಿ ಚೇತ್ ನಾನಾದಿತ್ವಾತ್** ಎಂಬ ಸೂತ್ರಗಳು ಈ ಅಭಿಪ್ರಾಯವನ್ನು ಹೇಳುತ್ತವೆ. (ರಾ. ಭಾ.)

ಭಗವಂತನು ಉದಾಸೀನನಂತೆ ಇರುತ್ತಾನೆಯೇ ಹೊರತು ನಿಜವಾಗಿಯೂ ಉದಾಸೀನನಲ್ಲ. ಆದುದರಿಂದ ಅದರ ಅರ್ಥವನ್ನು ವಿವರಿಸಲು **ಅಸಕ್ತಂ** ಎಂಬ ವಿಶೇಷಣವನ್ನು ಕೊಟ್ಟಿದೆ. ಯಾವನಿಗೆ ಸಂಗವೇ ಇಲ್ಲದೇ ಎಲ್ಲ ಕರ್ಮಗಳನ್ನು ಮಾಡುವ ಶಕ್ತಿಯಿದೆಯೋ ಅವನಿಗೆ ಯಾವುದೇ ಕರ್ಮಸಂಬಂಧವಾದರೂ ಹೇಗೆ ಬಂದೀತು?

**ನ ಕರ್ಮಣಾ ವರ್ಧತೇ ನೋ ಕನೀಯಾನ್ ।**

ಕರ್ಮಗಳನ್ನು ಯಾವನು ನಿಯಮಿಸುತ್ತಾನೆಯೋ ಅವನನ್ನು ಕರ್ಮಗಳು ಹೇಗೆ ಕಟ್ಟಿಹಾಕಿಯಾವು? (ಮ. ಭಾ.)

**ಓಂ ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ವಿಪರಿವರ್ತತೇ ॥೧೦॥**

ಅಧ್ಯಕ್ಷನಾದ ನನ್ನ ಸಾನ್ನಿಧ್ಯದಿಂದಾಗಿ ಪ್ರಕೃತಿಯು ಚರಾಚರವೆಲ್ಲವನ್ನೂ ಪ್ರಸವಿಸುತ್ತದೆ. ಈ ಕಾರಣದಿಂದಲೇ ಅರ್ಜುನ! ಜಗತ್ತು ವಿಶೇಷವಾಗಿ ಪರಿವರ್ತನೆಹೊಂದುತ್ತಿರುವುದು.

* * *

(ನಾನು ಅಧ್ಯಕ್ಷಸ್ವಾಮಿಯಾಗಿರುವಲ್ಲಿ ಪ್ರಕೃತಿಯು ಚರಾಚರಗಳನ್ನು ಪ್ರಸವಿಸುತ್ತದೆ. ಪರಮಾತ್ಮನು ಕೇವಲ ಅಧ್ಯಕ್ಷನಾಗಿ ಅಥವಾ ಸಾಕ್ಷಿಯಾಗಿ ಇರುವುದಷ್ಟರಿಂದಲೇ ಪ್ರಕೃತಿಯು ತನ್ನ ಕಾರ್ಯವನ್ನು ತನ್ನಷ್ಟಕ್ಕೆ ತಾನೇ ಮಾಡಿಕೊಂಡು ಹೋಗುತ್ತಿರುತ್ತದೆ. ಪ್ರಕೃತಿಯ ಕೆಲಸಕ್ಕೂ ಅಧ್ಯಕ್ಷನಿಗೂ ಇನ್ನಾವ ಸಂಬಂಧವೂ ಇಲ್ಲ. ಅವನು ಪ್ರಕೃತಿಯ ಕಾರ್ಯಕ್ಕೆ ಸಾಕ್ಷಿ

ಮಾತ್ರನಾಗಿರುತ್ತಾನೆ. ಸೂರ್ಯನು ಹುಟ್ಟಿದೊಡನೆಯೇ ಪ್ರಾಣಿಗಳು ಕಾರ್ಯವನ್ನು ಆರಂಭಿಸುತ್ತವೆ. ಪ್ರೇರಕನಾಗಿದ್ದರೂ ಅವನು ಕೇವಲ ಸಾಕ್ಷಿ ಮಾತ್ರನಾಗಿರುತ್ತಾನೆ. ಪ್ರಾಣಿಗಳು ಮಾಡುವ ಶುಭಾಶುಭಕರ್ಮಗಳು, ಅದರ ಲಾಭ-ನಷ್ಟಗಳು ಮುಂತಾದ ಸೋಂಕು ಸೂರ್ಯನಿಗೆ ಕಿಂಚಿತ್ತಾದರೂ ಇರುವುದಿಲ್ಲ. ಅಂತೆಯೇ ಪರಮಾತ್ಮನೂ ಸಹ ಅಧ್ಯಕ್ಷನಾಗಿರುತ್ತಾನೆ. ಪ್ರಕೃತಿಯು ತನ್ನ ಸೃಷ್ಟಿ-ಲಯಗಳನ್ನು ಅನುಕ್ರಮವಾಗಿ ನಡೆಸುತ್ತಲೇ ಇರುತ್ತದೆ. ಕರ್ಮದ ಸೋಂಕು ಪ್ರಭುವಿಗೆ ಕಿಂಚಿತ್ತಾದರೂ ಇರುವುದಿಲ್ಲ.

ಇವನು ಕರ್ಮಾಧ್ಯಕ್ಷನೆಂದು ಶ್ವೇತಾಶ್ವತರೋಪನಿಷತ್ತು ಹೊಗಳಿದೆ :

**ಏಕೋ ದೇವಃ ಸರ್ವಭೂತೇಷು ಗೂಢಃ**
**ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ ।**
**ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ**
**ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥೬-೧೧॥**

**ಏಕೋ ವಶೀ ನಿಷ್ಕ್ರಿಯಾಣಾಂ ಬಹೂನಾ-**
**ಮೇಕಂ ಬೀಜಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾ-**
**ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥೬-೧೨॥**

ಅದ್ವಿತೀಯದೇವನೂ, ಸರ್ವಪ್ರಾಣಿಗಳಲ್ಲಿಯೂ ನಿಗೂಢನಾಗಿರುವವನೂ, ಸರ್ವವ್ಯಾಪಿಯೂ, ಸರ್ವಪ್ರಾಣಿಗಳ ಅಂತರಾತ್ಮನೂ, ಕರ್ಮಾಧ್ಯಕ್ಷನೂ, ಸರ್ವಪ್ರಾಣಿಗಳಲ್ಲಿಯೂ ವಾಸಿಸುತ್ತಿರುವವನೂ, ಎಲ್ಲಕ್ಕೂ ಕೇವಲ ಸಾಕ್ಷಿಯಾಗಿರತಕ್ಕವನೂ, ನಿರುಪಾಧಿಕನೂ, ಸತ್ವಾದಿಗುಣರಹಿತನೂ, ನಿಷ್ಕ್ರಿರಾದ ಬಹುಜೀವರಲ್ಲಿ ಒಬ್ಬನೇ ಒಬ್ಬ ಸರ್ವತಂತ್ರಸ್ವತಂತ್ರನೂ ಆಗಿರುವ ಯಾವನು ಒಂದೇ ಬೀಜವನ್ನೇ ಬಹುಪ್ರಕಾರವಾಗಿ ಮಾಡುತ್ತಾ ನೆಯೋ ಮತ್ತು ಎಲ್ಲರ ಬುದ್ಧಿಯಲ್ಲೂ ಇರುವನೋ ಅಂತಹ ಪರಮೇಶ್ವರ ನನ್ನು ಯಾವ ಬುದ್ಧಿವಂತರು ಸಾಕ್ಷಾತ್ಕರಿಸಿಕೊಳ್ಳುವರೋ–ಅಂತಹ ಧೀರರಿಗೆ ಶಾಶ್ವತವಾದ ಸುಖವು ಲಭಿಸುತ್ತವೆ. ಬೇರೆಯವರಿಗೆ ಸಿಕ್ಕುವುದಿಲ್ಲ.

ಅಧ್ಯಕ್ಷ ಎಂಬುದಕ್ಕೆ ಸರ್ವವ್ಯಾಪೀ–ಎಂದೂ ಅರ್ಥವಾಗುತ್ತದೆ.

**ಅಧಿ = ಉಪರಿ, ಅಕ್ಷ್ಣೋತಿ = ವ್ಯಾಪ್ನೋತಿ ಇತಿ ಅಧ್ಯಕ್ಷಃ**

O O O

ಪ್ರಕೃತಿಯು ಚರಾಚರಗಳನ್ನು ಪ್ರಸವಿಸುತ್ತಲೂ ವಿನಾಶಗೊಳಿಸುತ್ತಲೂ ಇರುವುದರಿಂದ ಪ್ರಪಂಚವು ಬಗೆ-ಬಗೆಯಾಗಿ ರೂಪಗೊಳ್ಳುತ್ತಿರುತ್ತದೆ. ಕಾಲಕಾಲಕ್ಕೆ ವ್ಯತ್ಯಾಸವನ್ನು ಹೊಂದುತ್ತಿರುತ್ತದೆ.

ಭೂತಸಮುದಾಯವನ್ನು ಸೃಷ್ಟಿಸುತ್ತೇನೆ ಎಂದು ಹೇಳಿ ಉದಾಸೀನನಂತೆ ಇರುತ್ತೇನೆ ಎಂದು ಹೇಳಿರುವುದು ಪರಸ್ಪರವಿರುದ್ಧವಲ್ಲವೇ?– ಎಂದರೆ ಅದಕ್ಕೆ ಪರಿಹಾರವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. ಎಲ್ಲ ಕಡೆಯಲ್ಲೂ ಸಾಕ್ಷಿಮಾತ್ರಸ್ವರೂಪನಾಗಿ ನಿರ್ವಿಕಾರನಾಗಿ ಅಧ್ಯಕ್ಷನಾಗಿರುವ ನನ್ನಿಂದ ತ್ರಿಗುಣಾತ್ಮಕವೂ ಅವಿದ್ಯಾರೂಪವೂ ಆದ ನನ್ನ ಮಾಯೆಯು ಚರಾಚರಜಗತ್ತನ್ನು ಪ್ರಸವಿಸುತ್ತದೆ. ನನ್ನ ಈ ಅಧ್ಯಕ್ಷತ್ವದಿಂದಲೇ ವ್ಯಕ್ತಾವ್ಯಕ್ತ ರೂಪವಾದ ಈ ಜಗತ್ತು ಎಲ್ಲ ಅವಸ್ಥೆಗಳಲ್ಲಿಯೂ ಪರಿವರ್ತನೆಹೊಂದುತ್ತಿರುತ್ತದೆ. ಲೋಕದಲ್ಲಿ ಜಗತ್ತಿನ ಎಲ್ಲ ಪ್ರವೃತ್ತಿಗಳೂ ಚೇತನನ ಜ್ಞಾನಕ್ಕೆ ವಿಷಯವಾಗಿರುವುದಕ್ಕೋಸ್ಕರವೇ ಇರುವುದು. (ಶಂ. ಭಾ.)

ಕ್ಷೇತ್ರಜ್ಞನ ಕರ್ಮಾನುಗುಣವಾಗಿ ನನ್ನ ಪ್ರಕೃತಿಯು–ಸತ್ಯಸಂಕಲ್ಪನಾಗಿ ಅಧ್ಯಕ್ಷನಾಗಿರುವ ನನ್ನ ಸಾಕ್ಷಿತ್ವದಲ್ಲಿ ಚರಾಚರಜಗತ್ತನ್ನು ಪ್ರಸವಿಸುತ್ತದೆ. ಹೀಗೆ ಕ್ಷೇತ್ರಜ್ಞನ ಕರ್ಮಾನುಗುಣವಾಗಿ ನಾನು ಅಧ್ಯಕ್ಷತೆ ವಹಿಸುವುದರಿಂದ ಜಗತ್ತು ಪರಿವರ್ತನೆಹೊಂದುತ್ತಿದೆ ಎಂದು ನನ್ನ ಸ್ವಾಮ್ಯ, ನಾನು ಸತ್ಯ ಸಂಕಲ್ಪನಾಗಿರುವಿಕೆ, ನಿರ್ಘೃಣತೆ ಮುಂತಾದ ದೋಷಹೊಂದದಿರುವಿಕೆ– ಇವೇ ಮುಂತಾದ ನನ್ನ ಈಶ್ವರಯೋಗವನ್ನು ನೋಡು.

**ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್**
**ತಸ್ಮಿಂಶ್ಚಾನ್ಯೋ ಮಾಯಯಾ ಸಂನಿರುದ್ಧಃ ।**
**ಮಾಯಾಂ ತು ಪ್ರಕೃತಿಂ ವಿದ್ಯಾತ್**
**ಮಾಯಿನಂ ತು ಮಹೇಶ್ವರಮ್** ಶ್ವೇ. ೪-೯ (ರಾ. ಭಾ.)

ಉದಾಸೀನನಂತೆ ಇದ್ದಾನೆ ಎಂದರೆ ಪ್ರಕೃತಿಯು ತಾನಾಗಿಯೇ ಜಗತ್ತನ್ನು ಪ್ರಸವಿಸುತ್ತದೆ–ಎಂಬ ಅರ್ಥವಾಗಿಬಿಡುತ್ತದೆ. ಅದು ಹಾಗಲ್ಲವೆಂದು ತಿಳಿಸಲು ಈ ಶ್ಲೋಕ. ಪ್ರಕೃತಿಪ್ರಸವವನ್ನು ನೋಡುವ ಕರ್ತೃವು ನಾನೇ ಎಂದು ಶ್ಲೋಕದ ಭಾವ.

**ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಂ ।** ಎಂಬ ಶ್ರುತಿಯು ಇದನ್ನು ಹೇಳುತ್ತದೆ. (ಮ. ಭಾ.)

**ಓಂ ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥೧೧॥**

ಪ್ರಾಣಿಗಳಿಗೆ ಈಶ್ವರನಾಗಿರುವ ನನ್ನ ಪರಭಾವವನ್ನು ಅರಿಯದೇ ಮೂಢರಾದವರು ಮನುಷ್ಯಶರೀರವನ್ನು ಆಶ್ರಯಿಸಿರುವ ನನ್ನನ್ನು ಅಸಡ್ಡೆ ಮಾಡುತ್ತಾರೆ.

* * *

(ಸಕಲಪ್ರಾಣಿಗಳಿಗೂ ಚರಾಚರಗಳಿಗೂ ಹೆಚ್ಚೇಕೆ ಅಖಂಡಬ್ರಹ್ಮಾಂಡಕ್ಕೂ ನಾನೇ ಈಶ್ವರ. ಅರ್ಜುನ! ದುಷ್ಟಶಿಕ್ಷಣ-ಶಿಷ್ಟಪರಿಪಾಲನೆಗಳಿಗಾಗಿ ನಾನು ಸ್ವೇಚ್ಛೆಯಿಂದ ಒಮ್ಮೊಮ್ಮೆ ಅವತರಿಸುತ್ತೇನೆ. ಮಾನವಾತೀತವಾದ ಕಾರ್ಯಗಳನ್ನೂ ಮಾಡುತ್ತೇನೆ. ಆದರೂ ಸಹ ಮೂಢರಾದವರು ನನ್ನ ಶ್ರೇಷ್ಠವಾದ ಭಾವವನ್ನು–ನನ್ನ ಪರಮೋತ್ಕೃಷ್ಟತೆಯನ್ನು–ಪರಮಾತ್ಮ ಭಾವವನ್ನು ತಿಳಿದವರಾಗಿಲ್ಲ. 'ಅವ್ಯಕ್ತಾದ್ವ್ಯಕ್ತಮಾಪನ್ನಂ' ಹಿಂದೆ ಏನೋ ಆಗಿದ್ದನು ; ಈಗ ವಸುದೇವನ ಮಗನಾಗಿ ಹುಟ್ಟಿದ್ದಾನೆ ; ಮುಂದೆ ಸತ್ತನಂತರ ಕರ್ಮಾನುಸಾರವಾಗಿ ಏನೋ ಆಗುತ್ತಾನೆ'–ಹೀಗೆಂದು ಹೇಳಿಕೊಂಡು ನನ್ನನ್ನು ಅಲ್ಲಗಳೆಯುವವರೇ ಹೆಚ್ಚು. ಕಾಮಾಲೆರೋಗವಿರುವವನಿಗೆ ಚಂದ್ರನ ಬೆಳದಿಂಗಳು ಹಳದಿಯಾಗಿ ಕಾಣುತ್ತದೆ. ಜ್ವರಬಂದ ರೋಗಿಗೆ ಹಾಲು ವಿಷವಾಗಿ ಪರಿಣಮಿಸುತ್ತದೆ. ಅದೇ ರೀತಿಯಲ್ಲಿ ನನ್ನ ಯೋಗಮಾಯೆಯಿಂದ ಆವೃತರಾದ ಮನುಷ್ಯರಿಗೆ ನನ್ನ ನಿಜಸ್ವರೂಪವು ವ್ಯತ್ಯಾಸವಾಗಿ ತಿಳಿಯುತ್ತದೆ.

ಅವತಾರಪುರುಷರನ್ನು ಪತ್ತೆಹಚ್ಚುವುದು ಯಾವ ಕಾಲಕ್ಕೂ ಬಹು ಕಷ್ಟವೇ ಸರಿ. ಅವತಾರಪುರುಷರು ಯಾರೆಂಬುದನ್ನು ತಿಳಿಯಬೇಕಾದರೆ ನಮ್ಮ ಜ್ಞಾನದ ಮಟ್ಟವೂ ಉನ್ನತವಾಗಿಯೇ ಇರಬೇಕು. ದ್ವಾಪರದಲ್ಲಿಯೂ ಸಹ ಮಹಾಜ್ಞಾನಿಗಳೆನಿಸಿದ ಭೀಷ್ಮ, ಉದ್ಧವ, ನಾರದರು, ವ್ಯಾಸರು, ವಿದುರ-ಮುಂತಾದ ಕೆಲವರು ಮಾತ್ರವೇ ಶ್ರೀಕೃಷ್ಣನನ್ನು ಪರಮಾತ್ಮನೆಂದೂ

ಪರಂಧಾಮನೆಂದೂ ತಿಳಿದಿದ್ದರು. ದುರ್ಯೋಧನನು ಅವನನ್ನು ಐಂದ್ರ ಜಾಲಿಕನೆಂದೇ ಕರೆದನು. ಎಲ್ಲರೂ ಸಹ ಶ್ರೀಕೃಷ್ಣನು ಪರಮಾತ್ಮನೆಂದೇ ಭಾವಿಸಿದ್ದರೆ ಯುದ್ಧವೇ ನಡೆಯುತ್ತಿರಲಿಲ್ಲ.)

O O O

**ಪರಂ ಭಾವಂ** = ಆಕಾಶಕ್ಕಿಂತಲೂ ಅತ್ಯಂತಸೂಕ್ಷ್ಮವಾಗಿ ಅತ್ಯಂತ ಒಳಗಿರುವ ನನ್ನ–**ಆಕಾಶಾಲ್ಪಂ ಆಕಾಶಾದಪಿ ಅನ್ತರತಮಂ**–ಎಲ್ಲ ಭೂತಗಳಿಗೂ ಪರಮೇಶ್ವರಸ್ವರೂಪವಾಗಿರುವ ಪರಮಾತ್ಮತತ್ತ್ವವನ್ನು ಅರಿಯದವರಾಗಿ, ನನ್ನನ್ನು ಅರಿಯದೇ ತಿರಸ್ಕಾರಭಾವದಿಂದ ಬಡಿಯಲ್ಪಟ್ಟ ಅವರು ಬಡಪಾಯಿಗಳೇ ಸರಿ.

**ಮಮ ಅವಜ್ಞಾನಭಾವನೇನ ಆಹತಾಃ ವರಾಕಾಃ ತೇ** (ಶಂ. ಭಾ.)

ನಾನು ಭೂತಗಳ ಮಹೇಶ್ವರ ; ಸರ್ವಜ್ಞ; ಸತ್ಯಸಂಕಲ್ಪ. ಎಲ್ಲರ ಗತಿಗೂ ಏಕಕಾರಣ. ಆದರೆ ಅಪಾರವಾದ ಕರುಣೆ, ಔದಾರ್ಯ, ಸೌಶೀಲ್ಯ, ವಾತ್ಸಲ್ಯಗಳಿಂದ ಮನುಷ್ಯರು ನನ್ನನ್ನು ಆಶ್ರಯಿಸಲಿ–ಎಂಬುದಕ್ಕಾಗಿ ಮಾನವದೇಹವನ್ನು ತಳೆದಿದ್ದೇನೆ. ಆದರೆ ಪಾಪಕರ್ಮಗಳಿಂದ ಮೂಢರಾದ ವರು ನಾನು ಮನುಷ್ಯರೂಪವನ್ನು ಹೊಂದಿರುವುದಕ್ಕೆ ಕಾರಣವೇನೆಂಬುದನ್ನು ತಿಳಿಯದೇ ಇತರರಂತೆ ನಾನೂ ಒಬ್ಬ ಮನುಷ್ಯನೆಂದು ಭಾವಿಸಿ ತಿರಸ್ಕರಿಸುತ್ತಾರೆ. (ರಾ. ಭಾ.)

ಹಾಗಾದರೆ ಕೆಲವರು ನಿನ್ನನ್ನು ಏಕೆ ದ್ವೇಷಿಸುತ್ತಾರೆ? ಅವರ ಗತಿ ಏನು?–ಎಂಬುದಕ್ಕೆ ಭಗವಂತನು ಈ ಶ್ಲೋಕಗಳಲ್ಲಿ ಉತ್ತರಹೇಳುತ್ತಾನೆ. **ಮಾನುಷೀಂ ತನುಂ** = ಮೂಢರಿಗೆ ಮನುಷ್ಯದೇಹದಂತೆ ಕಂಡುಬರುವ ನನ್ನ ಶರೀರವನ್ನು. ನನ್ನ ಶರೀರವು ನಿಜವಾಗಿಯೂ ಮನುಷ್ಯರೂಪದ್ದಲ್ಲ.

**ಈಶ್ವರೋ ಹಿ ಜಗತ್ಸ್ರಷ್ಟಾ ಪ್ರಭುರ್ನಾರಾಯಣೋ ವಿರಾಟ್ ।**

ಎಂದು ಹಯಗ್ರೀವಾವತಾರದ ಪ್ರಸಂಗದಲ್ಲಿ ಆ ಅವತಾರವನ್ನೂ ಭಗ ವಂತನೆಂದೇ ಕರೆದಿದೆ. ಉಳಿದ ಅವತಾರಗಳೂ ಅದರಂತೆಯೇ ಅಪ್ರಾಕೃತ ವಾದುವುಗಳು.

**ನಾವತಾರಾಃ ಪೃಥಕ್ ಶಜ್ಕ್ಯಾಃ**

ಆದುದರಿಂದ ಅವುಗಳನ್ನು ಮನುಷ್ಯ, ಮೃಗ ಮೊದಲಾಗಿ ಭಾವಿಸುವುದಕ್ಕೆ ಭ್ರಾಂತಿಯಲ್ಲದೇ ಬೇರೆ ಯಾವುದೂ ಕಾರಣವಾಗುವುದಿಲ್ಲ. ಭೂತ ಮಹೇಶ್ವರಂ ಪರಮಾತ್ಮನ ಭಾವವು ಭೂತವೂ, ಮಹತ್ತೂ, ಈಶ್ವರನೂ ಮೂರೂ ಆಗಿದೆ. ಭೂತಂ ಮಹತ್ ಈಶ್ವರಂ ಚ (ಮ. ಭಾ.)

**ಓಂ ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

ಈ ಮೂಢರು ವ್ಯರ್ಥವಾದ ಆಶೆಗಳುಳ್ಳವರು. ವ್ಯರ್ಥವಾದ ಕರ್ಮಗಳುಳ್ಳವರು. ವ್ಯರ್ಥವಾದ ಜ್ಞಾನವುಳ್ಳವರು ; ವಿವೇಕವಿಲ್ಲದವರು. ಮೋಹಕವಾದ ರಾಕ್ಷಸೀಪ್ರಕೃತಿಯನ್ನೂ ಆಸುರೀಪ್ರಕೃತಿಯನ್ನೂ–ಆಶ್ರಯಿಸಿದವರು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಮೂಢರ ವರ್ಣನೆಯನ್ನು ಮಾಡುತ್ತಾನೆ.

ಈ ಮೂಢರು ವ್ಯರ್ಥವಾದ ಆಶೆಯುಳ್ಳವರಾಗಿರುತ್ತಾರೆ. ಸುಖವನ್ನು ಪಡೆಯಬೇಕು, ನೆಮ್ಮದಿಯನ್ನು ಹೊಂದಬೇಕು–ಎಂಬುದು ಎಲ್ಲ ಜೀವಿಗಳ ಆಶೆ. ಸುಖ-ಶಾಂತಿಸಮೃದ್ಧನಾಗಿರುವ ಭಗವಂತನನ್ನು ತಿರಸ್ಕರಿಸುವುದರಿಂದ ಇವರ ಆಶೆಯು ಹೇಗೆ ಸಫಲವಾದೀತು? ಅಥವಾ ಮೂಢರಾದವರ ಆಶೆಗೆ ಕೊನೆ-ಮೊದಲೆಂಬುದಿರುವುದಿಲ್ಲ. ಯಾವುದು ಎಷ್ಟೇ ಸಿಕ್ಕಿದರೂ ಇವರಿಗೆ ತೃಪ್ತಿಯೆಂಬುದೇ ಇರುವುದಿಲ್ಲ. ಸಿಕ್ಕಿದುದರಲ್ಲಿ ತೃಪ್ತಿಹೊಂದಿದರೆ ಆಶೆಗೆ ಸಾರ್ಥಕ್ಯವು ದೊರೆತಂತಾಗುತ್ತದೆ. ಸರ್ವದಾ ಅತೃಪ್ತಿಯಿಂದಲೇ ಇರುವುದರಿಂದ ಇವರ ಆಶೆಯೆಲ್ಲವೂ ವ್ಯರ್ಥವಾದಂತೆಯೇ ಸರಿ. ಇವರು ವಿಧಿ-ನಿಯಮಗಳನ್ನನುಸರಿಸಿ ಕರ್ಮಮಾಡದೇ ಕೇವಲ ದಾಂಭಿಕವಾಗಿ ಕರ್ಮಮಾಡುವುದರಿಂದ ಇವರು ಮಾಡಿದ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವೆ. ಫಲದಾಯಕಗಳಾಗುವುದಿಲ್ಲ. ಯಾವಾಗ ಇವರ ಜ್ಞಾನವು ಸತ್ಯಾನ್ವೇಷಣೆಗೆ ಸಾಧಕವಾಗುವುದಿಲ್ಲವೋ, ಆತ್ಮಸಾಕ್ಷಾತ್ಕಾರಕ್ಕೆ ದಾರಿದೀಪವಾಗುವುದಿಲ್ಲವೋ, ಪ್ರಪಂಚದ ವ್ಯವಹಾರದಲ್ಲಿಯೇ ನಿಷ್ಠವಾಗಿರುತ್ತದೆಯೋ– ಅಂತಹ ಜ್ಞಾನವೂ ವ್ಯರ್ಥವೇ ಸರಿ.

ಮೂಢರು ಅಂತಹ ನಿರರ್ಥಕವಾದ ಜ್ಞಾನವುಳ್ಳವರಾಗಿರುತ್ತಾರೆ. ಅವರ ಬುದ್ಧಿಯು ಋಜುಮಾರ್ಗದಲ್ಲಿ ಯಾವಾಗಲೂ ಹೋಗುವುದಿಲ್ಲ. ಡೊಂಕು-ಡೊಂಕಾಗಿಯೇ ಹೋಗುತ್ತಿರುತ್ತದೆ. ಅವರು ವಕ್ರಬುದ್ಧಿಯವರು ಅರ್ಥಾತ್ ಅವಿವೇಕಿಗಳಾಗಿರುತ್ತಾರೆ. ಇತರರನ್ನು ಕಾರಣವಿಲ್ಲದೇ ದ್ವೇಷಿಸುವುದು ; ಇತರರಿಗೆ ಅನಿಷ್ಟವನ್ನು ಕೋರುವುದು ; ಯಾವುದಾದರೂ ನಿಮಿತ್ತದಿಂದ ಇತರರಿಗೆ ಉಪಟಳಕೊಡುವುದು ; ಲೋಭಪರವಶರಾಗಿ ಸ್ವಾರ್ಥಕ್ಕಾಗಿ ಇತರರಿಗೆ ಕ್ಲೇಶವನ್ನುಂಟುಮಾಡುವುದು ; ಇತರರಿಗೆ ಕಷ್ಟಕೊಟ್ಟಾದರೂ ತಾವು ಸುಖವಾಗಿರಬೇಕೆಂದು ಅಪೇಕ್ಷಿಸುವುದು–ಇವು ರಾಕ್ಷಸೀಪ್ರಕೃತಿಗಳು. ದೇಹಾತ್ಮಬುದ್ಧಿಯುಳ್ಳವರು, ಇಂದ್ರಿಯಗಳ ಸುಖವೇ ಶಾಶ್ವತವಾದ ಮತ್ತು ನಿಜವಾದ ಸುಖವೆಂದು ನಂಬಿರುವವರು–ಅಸುರರು. ಇಂತಹ ಪ್ರಕೃತಿಯು ಮೋಹಕರವೂ ಆಗಿರುತ್ತದೆ.)

O O O

**ಮೋಘಕರ್ಮಾಣಃ** = ತಮ್ಮ ಆತ್ಮನೇ ಆಗಿರುವ ಭಗವಂತನನ್ನು ತಿರಸ್ಕರಿಸಿದುದರಿಂದ ಅವರು ಆಚರಿಸಬಹುದಾದ ಅಗ್ನಿಹೋತ್ರವೇ ಮೊದಲಾದ ಕರ್ಮಗಳೂ ನಿಷ್ಫಲವೇ ಆಗುತ್ತವೆ.

ರಾಕ್ಷಸೀಂ.....ಶ್ರಿತಾಃ = ಅವರು ಮೋಹವನ್ನುಂಟುಮಾಡುವವರು. ದೇಹಾತ್ಮಮೂಲವಾದ ರಾಕ್ಷಸರ ಮತ್ತು ಅಸುರರ ಸ್ವಭಾವವನ್ನು ಆಶ್ರಯಿಸಿದವರಾಗುತ್ತಾರೆ. 'ಕಡಿ, ಹೊಡಿ, ಕುಡಿ, ತಿನ್ನು, ಇತರರದನ್ನು ಕೊಳ್ಳೆಹೊಡಿ'–ಇವೇ ಮುಂತಾಗಿ ಹೇಳಿಕೊಂಡು ಜೀವನವನ್ನು ಕಳೆಯುತ್ತಾರೆ. (ಶಂ. ಭಾ.)

ಮನುಷ್ಯತ್ವದ ಬಗೆಗೆ ಯೋಚಿಸುವಾಗ ಅದು ನನ್ನ ಪರಮಕರುಣೆಯೇ ಮುಂತಾದುವುಗಳಿಂದ ಉಂಟಾಗಿದೆಯೆಂಬ ಸತ್ಯಾರ್ಥವನ್ನು ಮುಚ್ಚುವ ರಾಕ್ಷಸಿಯೂ ಆಸುರಿಯೂ ಆದ ಮೋಹಕವಾದ ಪ್ರಕೃತಿಯುಳ್ಳವರ ಇಷ್ಟಗಳು ವ್ಯರ್ಥವಾಗುತ್ತವೆ. ಪ್ರಾರಂಭಗಳು ವ್ಯರ್ಥವಾಗುತ್ತವೆ. ನನ್ನ ಎಲ್ಲ ಚರಾಚರವಿಷಯಗಳಲ್ಲಿಯೂ ಅವರಿಗೆ ವಿಪರೀತಜ್ಞಾನವಿರುವುದರಿಂದ ಅವರ

ಜ್ಞಾನವು ನಿಷ್ಫಲ. ಯಾವ ವಿಷಯದಲ್ಲಿಯೂ ಅವರಿಗೆ ಯಾಥಾತ್ಮ್ಯಜ್ಞಾನವಿರುವುದಿಲ್ಲ. ಇಂತಹವರು ಸರ್ವೇಶ್ವರನಾದ ನನ್ನನ್ನು ಇತರರಿಗೆ ಸಮನೆಂದು ಭಾವಿಸಿ–ಯಾವುದನ್ನು ನನ್ನ ವಿಷಯದಲ್ಲಿ ಮಾಡಲು ಬಯಸುತ್ತಾರೆಯೋ, ಯಾವುದನ್ನು ಉದ್ದೇಶಿಸಿ ಆರಂಭಗಳನ್ನು ಮಾಡುತ್ತಾರೆಯೋ– ಅವೆಲ್ಲವೂ ವ್ಯರ್ಥವೇ ಆಗುತ್ತವೆ. (ರಾ. ಭಾ.)

**ರಾಕ್ಷಸೀ ಪ್ರಕೃತಿಃ** = ರಾಕ್ಷಸರಿಗೆ ಸಂಬಂಧಪಟ್ಟುದು ತಾಮಸೀ ಪ್ರಕೃತಿ. **ಆಸುರೀ** = ಅಸುರರಿಗೆ ಸಂಬಂಧಪಟ್ಟಿದ್ದು, ಕ್ರೋಧ-ಲೋಭಾದಿ ಮಯವಾದುದು, ರಾಜಸಪ್ರಕೃತಿ. –ಶ್ರೀವೇದಾಂತದೇಶಿಕರು.

ಭಗವಂತನನ್ನು ತಿರಸ್ಕರಿಸುವವರು ಹೊಂದುವ ಫಲವನ್ನು ಈ ಶ್ಲೋಕವು ಹೇಳುತ್ತದೆ. ಅವರು ವ್ಯರ್ಥವಾದ ಆಶೆಯುಳ್ಳವರು. ಭಗವಂತ ನನ್ನು ದ್ವೇಷಿಸುವವರು ಯಾವುದನ್ನು ಆಶಿಸಿದರೂ ಅದು ಅವರಿಗೆ ದೊರಕು ವುದಿಲ್ಲ. ಅವರ ಯಜ್ಞಾದಿ ಕರ್ಮಗಳೂ ಮತ್ತು ಜ್ಞಾನವೂ ಕೂಡ ವ್ಯರ್ಥವೇ. ಅವರು ಯಾವುದರಿಂದಲೂ, ಬ್ರಹ್ಮ-ರುದ್ರಾದಿಗಳಲ್ಲಿ ಭಕ್ತಿಯನ್ನಿಡುವ ಉಪಾಯದಿಂದಲೂ ಕೂಡ ಯಾವ ಪುರುಷಾರ್ಥವನ್ನೂ ಆಮುಷ್ಮಿಕಫಲವನ್ನೂ ಹೊಂದುವುದಿಲ್ಲ.

**ತಾನಹಂ ದ್ವಿಷತಃ ಕ್ರೂರಾನ್....**
**ಮಜ್ಜನ್ತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ**

ಎಂದು ಹೇಳಿರುವಂತೆ ಭಗವಂತನನ್ನು ದ್ವೇಷಿಸುವವರಿಗೆ ಮತ್ತು ಅವರ ಪಿತೃಗಳಿಗೆ ನರಕ. ಭಗವದ್ದ್ವೇಷವು ಎಲ್ಲರಿಗೂ ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಪ್ರಾಪ್ತಾಃ ದ್ವೇಷ್ಯಾತ್ ಚೈದ್ಯಾದಯೋ ನೃಪಾಃ–ಶಿಶುಪಾಲನೇ ಮುಂತಾದ ರಾಜರು ಭಗವಂತನನ್ನು ದ್ವೇಷಿಸಿದ್ದರಿಂದ ಮೋಕ್ಷವನ್ನು ಪಡೆದರು–ಮುಂತಾದ ವಾಕ್ಯಗಳೂ ಕೂಡ ಭಗವಂತನು ಭಕ್ತಪ್ರಿಯ, ಸದಾ ಅವನ ಧ್ಯಾನ-ಸ್ತೋತ್ರಗಳನ್ನು ಮಾಡಬೇಕು–ಎಂಬ ಅರ್ಥವನ್ನೇ ಜ್ಞಾಪಿಸುತ್ತವೆ. ತನ್ನ ಭಕ್ತನು ಎಂದಾದರೂ ಶಾಪಫಲದಿಂದ ತನ್ನಲ್ಲಿ ದ್ವೇಷವನ್ನು ಹೊಂದಿದ್ದರೂ ಅವನಿಗೆ ಭಗವಂತನು ಭಕ್ತಿಫಲವನ್ನೇ ಕೊಡುತ್ತಾನೆ. ಉದಾಹರಣೆಗೆ ಶಿಶುಪಾಲನೇ–ಮುಂತಾದವರು ಜನ್ಮಾಂತರದಲ್ಲಿ ಭಗವಂತನ

ಭಕ್ತರೇ ಆಗಿದ್ದರು. ಶಾಪದಿಂದ ಶತ್ರುಗಳಾದರು. ಅಂತಹವರಿಗೂ ಭಗವಂತನು ಭಕ್ತಿಭಾವವನ್ನು ಕೊಡುವಾಗ, ಇನ್ನು ಯಾವ ಉಪಾಧಿಯೂ ಇಲ್ಲದೇ ಅವನನ್ನು ಭಜಿಸುವವರ ವಿಷಯದಲ್ಲಿ ಹೇಳತಕ್ಕದ್ದೇನು?

(ಮ. ಭಾ.)

**ಓಂ ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥**

ಆದರೆ ಮಹಾತ್ಮರು ದೈವೀಪ್ರಕೃತಿಯನ್ನು ಆಶ್ರಯಿಸಿದವರಾಗಿ ನನ್ನನ್ನು ಅವ್ಯಯನೆಂದೂ ಎಲ್ಲ ಪ್ರಾಣಿಗಳಿಗೂ ಆದಿಕಾರಣನೆಂದೂ ತಿಳಿದು ಅನನ್ಯಚಿತ್ತರಾಗಿ ಭಜಿಸುತ್ತಾರೆ.

* * *

(ಹಿಂದಿನ ಶ್ಲೋಕದಲ್ಲಿ ಮೂಢರು ರಾಕ್ಷಸೀಪ್ರಕೃತಿಯನ್ನೂ ಆಸುರೀ ಪ್ರಕೃತಿಯನ್ನೂ ಆಶ್ರಯಿಸುತ್ತಾರೆ–ಎಂಬುದಾಗಿ ಶ್ರೀಕೃಷ್ಣನು ಹೇಳಿದನು. ಈ ಶ್ಲೋಕದಲ್ಲಿ ಮಹಾತ್ಮರು ದೈವೀಪ್ರಕೃತಿಯನ್ನು ಆಶ್ರಯಿಸುತ್ತಾರೆ–ಎಂದು ಹೇಳುತ್ತಾನೆ. ದೈವೀಪ್ರಕೃತಿಯೆಂದರೆ ದೇವತೆಗಳ ಪ್ರಕೃತಿ ಅರ್ಥಾತ್ ಸಾತ್ತ್ವಿಕಪ್ರಕೃತಿ. ದೇವತೆಗಳು ಸಾತ್ತ್ವಿಕರೆಂದೂ ಅಸುರ-ರಾಕ್ಷಸರು ರಾಜಸ-ತಾಮಸರೆಂದೂ ಹೇಳುತ್ತಾರೆ. ಸಾತ್ತ್ವಿಕಪ್ರಕೃತಿಯೆಂದರೆ ಶಮ-ದಮ-ದಯೆ-ಶ್ರದ್ಧೆ–ಇವುಗಳಿಂದ ಯುಕ್ತವಾಗಿರುವಿಕೆ. ದೈವೀಪ್ರಕೃತಿಯನ್ನು ಆಶ್ರಯಿಸಿರ ತಕ್ಕವರು ಮಹಾತ್ಮರು. ಅಥವಾ ಮಹಾತ್ಮರು ದೈವೀಪ್ರಕೃತಿಯನ್ನು ಹೊಂದಿರುತ್ತಾರೆ. ಮಹಾತ್ಮರಲ್ಲಿ ಈ ದೈವೀಪ್ರಕೃತಿಯು ಸ್ವಭಾವಗುಣವಾಗಿರುತ್ತದೆ. ಇಂತಹ ಮಹಾತ್ಮರು ನನ್ನನ್ನು ಗುರುತಿಸಬಲ್ಲರು. ಗುರುತಿಸಿ ನಾನು ಸಕಲಪ್ರಾಣಿಗಳಿಗೂ ಮತ್ತು ಪಂಚಭೂತಗಳಿಗೂ ಆದಿಯೆಂದೂ, ಅಕ್ಷರನೆಂದೂ ತಿಳಿದುಕೊಂಡು ಅನನ್ಯಚಿತ್ತರಾಗಿ ಏಕಾಗ್ರತೆಯಿಂದ ಅನನ್ಯ ಶರಣರಾಗಿ ನನ್ನನ್ನೇ ಭಜಿಸುತ್ತಾರೆ. ನನ್ನನ್ನೇ ಧ್ಯಾನಮಾಡುತ್ತಿರುತ್ತಾರೆ.)

O O O

**ಮಹಾತ್ಮಾನಃ** = ಕ್ಷುದ್ರವಲ್ಲದ ಚಿತ್ತವುಳ್ಳವರು, ಶ್ರದ್ಧೆಯಿಂದ ಭಗವದ್ಭಕ್ತಲಕ್ಷಣವಾದ ಮೋಕ್ಷಮಾರ್ಗದಲ್ಲಿ ತೊಡಗಿರುವವರು. **ದೈವೀಂ ಪ್ರಕೃತಿಂ ಆಶ್ರಿತಾಃ** = ಶಮ-ದಮ-ದಯೆ-ಶ್ರದ್ಧೆ ಮುಂತಾದ ಲಕ್ಷಣವುಳ್ಳ ದೈವೀಸ್ವಭಾವವನ್ನು ಅವಲಂಬಿಸಿದವರು. (ಶಂ. ಭಾ.)

**ಮಹಾತ್ಮಾನಃ...ಆಶ್ರಿತಾಃ** = ತಮ್ಮ ಪುಣ್ಯಕರ್ಮಗಳ ಫಲವಾಗಿ ನನ್ನನ್ನು ಶರಣುಹೊಂದಿ ಎಲ್ಲ ಪಾಪಬಂಧನಗಳನ್ನೂ ಧ್ವಂಸಮಾಡಿಕೊಂಡು ದೈವೀಪ್ರಕೃತಿಯನ್ನು ಹೊಂದಿರುವ ಮಹಾತ್ಮರು.

**ಮಾಂ ಭಜನ್ತೇ** = ನನಗೆ ಪ್ರಿಯನಾಗಿಲ್ಲದಿದ್ದರೆ, ನನ್ನನ್ನು ಭಜಿಸದಿದ್ದರೆ–ತಮ್ಮ ಮನಸ್ಸು, ಆತ್ಮ ಮತ್ತು ಹೊರಗಡೆಯ ಕರಣಗಳಿಗೆ ಧಾರಣೆಯೇ ಇಲ್ಲವೆಂದು ತಿಳಿದು ನನ್ನ ಭಜನೆಯೊಂದನ್ನೇ ಪ್ರಯೋಜನವನ್ನಾಗಿ ಹೊಂದಿರುತ್ತಾರೆ. (ರಾ. ಭಾ.)

ಇತರರು ನನ್ನನ್ನು ದ್ವೇಷಿಸುವುದಿಲ್ಲ ಎಂದು ತಿಳಿಸಲು ದೈವೀಪ್ರಕೃತಿಯುಳ್ಳವರ ವಿಷಯವನ್ನು ಭಗವಂತನು ಇಲ್ಲಿ ಹೇಳುತ್ತಾನೆ. (ಮ. ಭಾ.)

**ಓಂ ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥೧೪॥**

ಯಾವಾಗಲೂ ನನ್ನನ್ನು ಕೀರ್ತನೆಮಾಡುತ್ತಲೂ, (ನನ್ನ ಪ್ರಾಪ್ತಿಗಾಗಿ) ಸರ್ವದಾ ಪ್ರಯತ್ನಿಸುತ್ತಲೂ, ದೃಢವ್ರತರಾಗಿ ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ ನಿತ್ಯಯುಕ್ತರಾಗಿ ಉಪಾಸನೆಮಾಡುತ್ತಾರೆ.

* * *

(ಶ್ರೀಕೃಷ್ಣನು ಈ ಶ್ಲೋಕದಲ್ಲಿ ಮಹಾತ್ಮರಾದ ದೈವೀಪ್ರಕೃತಿಯುಳ್ಳ ತನ್ನ ಭಕ್ತರು ಮಾಡುವ ಉಪಾಸನಾಕ್ರಮವನ್ನು ಹೇಳುತ್ತಾನೆ :

ನನ್ನ ನಾಮವನ್ನು, ನನ್ನ ಚರಿತ್ರೆಯನ್ನು, ನನ್ನ ಅದ್ಭುತಕಾರ್ಯಗಳನ್ನು ಮಹಾತ್ಮರಾದ ಭಕ್ತರು ಯಾವಾಗಲೂ ಸಂಕೀರ್ತನಮಾಡುತ್ತಿರು ತ್ತಾರೆ. ನನ್ನನ್ನು ಕೀರ್ತನೆಮಾಡುತ್ತಲೇ ಅವರು ಮೈಮರೆಯುತ್ತಾರೆ. ಅವರು ಯಾವಾಗಲೂ ಪ್ರಯತ್ನಶೀಲರು. ಇಂದ್ರಿಯನಿಗ್ರಹಾದಿಗಳಿಂದ ತಮ್ಮ ಮನಸ್ಸು ವಿಷಯವಸ್ತುಗಳ ಕಡೆಗೆ ಚಲಿಸದಂತೆ ಸತತವಾಗಿ ಪ್ರಯತ್ನ ಮಾಡುತ್ತಿರುತ್ತಾರೆ. ಸತತಪ್ರಯತ್ನವಿಲ್ಲದಿದ್ದರೆ ನನ್ನ ಕಡೆಗೆ ಮನಸ್ಸನ್ನು ಸೆಳೆದು ತರಲಾಗುವುದಿಲ್ಲ. ಇವರು ದೃಢವ್ರತರು. ಅಹಿಂಸೆ, ಸತ್ಯ, ಬ್ರಹ್ಮಚರ್ಯ–ಇವೇ ಮೊದಲಾದ ವ್ರತಗಳನ್ನು ಎಂದಿಗೂ ತಪ್ಪದಂತೆ ಕಟ್ಟುನಿಟ್ಟಾಗಿ ಪರಿಪಾಲಿಸುವವರು. ನನ್ನನ್ನು ಭಕ್ತಿಯಿಂದ ಸದಾಕಾಲದಲ್ಲಿಯೂ ನಮಸ್ಕರಿ

ಸುತ್ತಲೇ ಇರುತ್ತಾರೆ. ನನಗೆ ಯಾವಾಗಲೂ ವಿನೀತರಾಗಿರುತ್ತಾರೆ. ತಮ್ಮ ತನವನ್ನು ಸಂಪೂರ್ಣವಾಗಿ ತೊರೆದಿರುತ್ತಾರೆ. ಇವರು ಯಾವಾಗಲೂ ನನ್ನಲ್ಲಿ ಯೋಗವನ್ನು ಹೊಂದಿ ನನ್ನನ್ನು ಉಪಾಸನೆಮಾಡುತ್ತಾರೆ. ಸದಾ ಕಾಲದಲ್ಲಿಯೂ ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿರುತ್ತಾರೆ. ನನ್ನ ಸ್ಮರಣೆ, ಕೀರ್ತನೆ, ಧ್ಯಾನ, ಜಪ–ಇತ್ಯಾದಿಗಳಲ್ಲಿ ಸರ್ವದಾ ಆಸಕ್ತರಾಗಿದ್ದುಕೊಂಡು ಅನನ್ಯಭಕ್ತಿಯಿಂದ ಅನನ್ಯಶರಣತೆಯಿಂದ ನನ್ನನ್ನು ಉಪಾಸನೆಮಾಡುತ್ತಾರೆ. ನೀರಿನಲ್ಲಿ ಮುಳುಗಿಸಿದ ಬಿಂದಿಗೆಯ ಒಳಗೂ ಹೊರಗೂ ನೀರೇ ಇರುವಂತೆ ನನ್ನ ಭಕ್ತರ ಹೃದಯಗಳಲ್ಲಿಯೂ ನಾನೇ ಇರುತ್ತೇನೆ ; ಹೊರಗಿನ ಎಲ್ಲ ವಸ್ತುಗಳಲ್ಲಿಯೂ ಅವರು ನನ್ನನ್ನೇ ಕಾಣುತ್ತಿರುತ್ತಾರೆ.)

O O O

**ಮಾಂ** = ಭಗವಂತನಾದ ಬ್ರಹ್ಮಸ್ವರೂಪನಾದ ನನ್ನನ್ನು **ಯತನ್ತಃ** = ಇಂದ್ರಿಯಗಳ ಉಪಸಂಹಾರ, ಶಮ, ದಮ, ದಯೆ, ಅಹಿಂಸೆ–ಮುಂತಾದ ಧರ್ಮಗಳಿಂದ ಕೂಡಿ ಪ್ರಯತ್ನಮಾಡುವವರಾದ. **ದೃಢವ್ರತಾಃ** = ಸ್ಥಿರವೂ ಅಚಲವೂ ಆದ ; ನಿಶ್ಚಯವುಳ್ಳವರಾದ. (ಶಂ. ಭಾ.)

ನಾನು ಇವರಿಗೆ ವರ್ಣಿಸಲಾಗದಷ್ಟು ಪ್ರಿಯನಾಗಿರುವುದರಿಂದ ಇವರಿಗೆ ನನ್ನ ಕೀರ್ತನ-ನಮಸ್ಕಾರಾದಿಗಳನ್ನು ಬಿಟ್ಟರೆ ಕ್ಷಣಕಾಲವೂ ಅಣುಮಾತ್ರವೂ ಆತ್ಮಧಾರಣೆಯಿರುವುದಿಲ್ಲ. ನನ್ನ ಗುಣವಿಶೇಷಣಗಳನ್ನು ಹೇಳುವ ಹೆಸರು ಗಳನ್ನು ನೆನೆದು ರೋಮಾಂಚಿತರಾಗಿ, ಆನಂದದಿಂದ ಗದ್ಗದವಾದ ಕಂಠವುಳ್ಳ ವರಾಗಿ ನಾರಾಯಣ, ಕೃಷ್ಣ, ವಾಸುದೇವ–ಮುಂತಾದ ನನ್ನ ಹೆಸರುಗಳನ್ನು ಸದಾ ಕೀರ್ತಿಸುತ್ತಾ ಹಾಗೆಯೇ ಪ್ರಯತ್ನಮಾಡುತ್ತಾರೆ. ನನ್ನ ಕರ್ಮವಾದ ಪೂಜೆಯೇ ಮುಂತಾದುವುಗಳಲ್ಲಿಯೂ, ಅದಕ್ಕೆ ಉಪಕಾರಕವಾದ ದೇವಾ ಲಯ-ಉದ್ಯಾನವನನಿರ್ಮಾಣ ಮುಂತಾದುವುಗಳಲ್ಲಿಯೂ ದೃಢವಾದ ಸಂಕಲ್ಪವುಳ್ಳವರಾಗಿ ; ದೃಢಸಂಕಲ್ಪದಿಂದ ಪ್ರಯತ್ನಿಸುತ್ತಾ, ಭಕ್ತಿಭಾವದಿಂದ ಬಗ್ಗಿದ ಮನಸ್ಸು, ಬುದ್ಧಿ, ಅಭಿಮಾನ, ಕೈಕಾಲುಗಳು, ತಲೆ–ಎಂಬ ಎಂಟು ಅಂಗಗಳಿಂದಲೂ ಭೂಮಿಯಲ್ಲಿರುವ ಧೂಳು, ಕೆಸರು, ಕಲ್ಲು ಮುಂತಾದು ವನ್ನೂ ಗಮನಿಸದೇ ಅಲ್ಲಿಯೇ ನನಗೆ ದೀರ್ಘದಂಡಪ್ರಣಾಮಮಾಡುತ್ತಾ,

ಯಾವಾಗಲೂ ನನ್ನಲ್ಲಿ ನಿತ್ಯಯೋಗವನ್ನು ಬಯಸುತ್ತಾ ಸದಾ ನನ್ನ ದಾಸ್ಯದಲ್ಲಿ ವ್ಯವಸಾಯವುಳ್ಳವರಾಗಿ ಉಪಾಸನೆಮಾಡುತ್ತಾರೆ.

**ಮನೋಬುದ್ಧ್ಯಭಿಮಾನೇನ ಸಂನ್ಯಸ್ಯ ಚ ಧರಾತಲೇ ।**
**ಕೂರ್ಮವಚ್ಚತುರಃ ಪಾದಾನ್ ಶಿರಸ್ತತ್ರೈವ ಪಞ್ಚಮಮ್ ॥**

ಮನಸ್ಸು, ಬುದ್ಧಿ ಮತ್ತು ಅಭಿಮಾನಗಳೊಡನೆ ಭೂಮಿಯಲ್ಲಿ ಆಮೆಯಂತೆ ದೇಹವನ್ನಿರಿಸಿ ಎರಡು ಕೈಗಳೂ, ಎರಡು ಪಾದಗಳೂ ಮತ್ತು ಐದನೆಯದಾಗಿ ತಲೆ–ಇವುಗಳಿಂದ ಕೂಡಿ ಮಾಡುವುದು ಸಾಷ್ಟಾಂಗದೀರ್ಘದಂಡನಮಸ್ಕಾರ. (ರಾ.ಭಾ.)

**ಓಂ ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋ ಮುಖಮ್ ॥೧೫॥**

ಮತ್ತೆ ಕೆಲವರು ಜ್ಞಾನಯಜ್ಞದಿಂದಲೂ ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುತ್ತಾರೆ. ಏಕತ್ವದಿಂದಲೂ, ಪ್ರತ್ಯೇಕತ್ವಭಾವದಿಂದಲೂ, ವಿಶ್ವತೋಮುಖನೆಂದು ಬಹುಪ್ರಕಾರವಾಗಿಯೂ ಉಪಾಸನೆಮಾಡುತ್ತಾರೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು **ಸತತಂ ಕೀರ್ತಯನ್ತೋ ಮಾಂ** ಮುಂತಾಗಿ ಭಕ್ತರ ಉಪಾಸನಾಕ್ರಮವನ್ನು ಹೇಳಿದನು. ಈ ಶ್ಲೋಕದಲ್ಲಿ ಅವನು ಜ್ಞಾನಿಯ ವಿಷಯವನ್ನು ಹೇಳುತ್ತಾನೆ.

ಬೇರೆಯವರು ಎಂದರೆ ಜ್ಞಾನಿಗಳು. ಜ್ಞಾನಯಜ್ಞದಿಂದಲೇ ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುತ್ತಾರೆ ಎನ್ನುತ್ತಾನೆ ಶ್ರೀಕೃಷ್ಣ.

ಆತ್ಮಾನಾತ್ಮವಿವೇಕವನ್ನು ತಿಳಿದ ಈ ಜ್ಞಾನಯಾಜಿಗಳು ಏಕತ್ವೇನ ನನ್ನನ್ನು ಅವಿನಾಶಿಯಾದ ಸನಾತನನಾದ ಒಬ್ಬನೇ ಒಬ್ಬ ಪರಬ್ರಹ್ಮವಸ್ತು ಏಕಮೇವಾದ್ವಿತೀಯಂ ಬ್ರಹ್ಮ ಎಂದು ತಿಳಿದು ಪರಬ್ರಹ್ಮೋಪಾಸನೆಮಾಡುತ್ತಾರೆ. ಭಿನ್ನ-ಭಿನ್ನವಾಗಿ ಕಾಣುವ ಇಂದ್ರ, ಚಂದ್ರ, ಸೂರ್ಯಾದಿ ದೇವತೆಗಳೆಲ್ಲರೂ ನನ್ನ ಶರೀರ ಅಥವಾ ನನ್ನ ರೂಪವೇ ಎಂದು ಇವರು ನಿಶ್ಚಯಿಸಿ ದೇವತಾಂತರಗಳನ್ನು ಪೂಜಿಸುವಾಗಲೂ ನಾನೇ ಎಲ್ಲರ ಅಂತರ್ಯಾಮಿ

ಯಾಗಿರುವೆನೆಂಬ ನಿಶ್ಚಯಜ್ಞಾನದಿಂದಲೇ ಪೂಜಿಸುತ್ತಾರೆ. ಬಹುಪ್ರಕಾರ ವಾಗಿ ವಿಶ್ವರೂಪನಾಗಿ ಇರತಕ್ಕವನೂ, ಎಲ್ಲೆಲ್ಲಿಯೂ ಮುಖವುಳ್ಳವನೂ ಸಹ ನಾನೇ ಎಂದು ಇವರು ತಮ್ಮ ಜ್ಞಾನದೀವಿಗೆಯಿಂದ ತಿಳಿದುಕೊಂಡು ಸರ್ವತ್ರವ್ಯಾಪ್ತನಾಗಿರುವ ನನ್ನನ್ನು ಆರಾಧಿಸುತ್ತಾರೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ನಿಶ್ಚಯಬುದ್ಧಿಯು ಇವರಿಗಿರುತ್ತದೆ.

**ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ**
**ವಿಶ್ವತೋ ಹಸ್ತ ಉತ ವಿಶ್ವತಸ್ಪಾತ್ ।**
**ಸಂಬಾಹುಭ್ಯಾಂ ನಮತಿ ಸಂಪತತ್ರೈ-**
**ರ್ದ್ಯಾವಾಪೃಥಿವೀ ಜನಯನ್ದೇವ ಏಕಃ ॥**

ಎಂಬ ಶ್ರುತಿವಚನದಂತೆ ಎಲ್ಲೆಲ್ಲಿಯೂ ಕಣ್ಣುಗಳುಳ್ಳವನೂ, ಎಲ್ಲೆಲ್ಲಿಯೂ ಮುಖವುಳ್ಳವನೂ, ಎಲ್ಲೆಲ್ಲಿಯೂ ಕೈಗಳುಳ್ಳವನೂ ಒಬ್ಬನೇ ದೇವನಾದ ನಾನೇ ಎಂಬುದನ್ನು ಜ್ಞಾನಯಾಜಿಗಳು ತಿಳಿದಿರುತ್ತಾರೆ. ಹೀಗೆ ನನ್ನನ್ನು ಅವರು ತಮ್ಮ ಹೃದಯಗುಹೆಯಲ್ಲಿ ಕಾಣುತ್ತಾ, ಎಲ್ಲ ದೇವತೆಗಳಲ್ಲಿಯೂ ನನ್ನನ್ನೇ ನೋಡುತ್ತಾ, **ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ**–ನನ್ನನ್ನು ಎಲ್ಲ ಪ್ರಾಣಿಗಳಲ್ಲಿಯೂ ಇರುವವನನ್ನಾಗಿಯೂ ಎಂದರೆ ಚೈತನ್ಯರೂಪನಾದ ನಾನು ಎಲ್ಲ ಪ್ರಾಣಿಗಳಿಗೂ ಆತ್ಮನಾದ ಚೈತನ್ಯವಾಗಿರುವೆನೆಂದೂ, ನನ್ನಲ್ಲಿ ಎಲ್ಲ ಚರಾಚರವಸ್ತುಗಳೂ ಇರುವುವೆಂದೂ ತಿಳಿಯುತ್ತಾ ನನ್ನನ್ನೇ ಸದಾಕಾಲದಲ್ಲಿಯೂ ಉಪಾಸನೆಮಾಡುತ್ತಾರೆ.)

o o o

**ಏಕತ್ವೇನ** = ಒಂದೇ ಪರಬ್ರಹ್ಮವೇ ಎಂಬ ಪರಮಾರ್ಥದರ್ಶನದಿಂದ ಪೂಜಿಸುತ್ತಾ ನನ್ನನ್ನು ಉಪಾಸನೆಮಾಡುತ್ತಾರೆ. ಇದೇ ಜ್ಞಾನಯಜ್ಞ. **ಪೃಥಕ್ತ್ವೇನ** = ಕೆಲವರು ಭಗವಂತನಾದ ವಿಷ್ಣುವು ಆದಿತ್ಯನೇ ಮುಂತಾದ ರೂಪದಲ್ಲಿದ್ದಾನೆ–ಎಂದು ಉಪಾಸನೆಮಾಡುತ್ತಾರೆ.

**ಬಹುಧಾ ವಿಶ್ವತೋ ಮುಖಮ್**= ಮತ್ತೆ ಕೆಲವರು ಬಹುರೂಪದಲ್ಲಿರುವ ಆ ಭಗವಂತನೇ ಎಲ್ಲೆಲ್ಲಿಯೂ ಮುಖವುಳ್ಳ ವಿಶ್ವರೂಪನು–ಎಂದು

ವಿಶ್ವರೂಪನೂ ಸರ್ವತೋಮುಖನೂ ಆದ ನನ್ನನ್ನು ನಾನಾಪ್ರಕಾರಗಳಿಂದ ಉಪಾಸನೆಮಾಡುತ್ತಾರೆ. (ಶಂ. ಭಾ.)

ಮತ್ತೆ ಕೆಲವು ಮಹಾತ್ಮರು ಹಿಂದೆ ಹೇಳಿದ ಕೀರ್ತನೆ ಮುಂತಾದುವುಗಳೊಡನೆ ಜ್ಞಾನವೆಂಬ ಯಜ್ಞದಿಂದಲೂ ಕೂಡ ಪೂಜಿಸುತ್ತಾ ನನ್ನನ್ನು ಉಪಾಸಿಸುತ್ತಾರೆ. ಹೇಗೆ ಉಪಾಸಿಸುತ್ತಾರೆ ಎಂದರೆ : ಬಹುರೂಪದಲ್ಲಿ ಜಗದಾಕಾರವಾಗಿ ವಿಶ್ವಪ್ರಕಾರನಾಗಿರುವ ನನ್ನನ್ನು ಏಕತ್ವಭಾವದಿಂದ ಉಪಾಸನೆ ಮಾಡುತ್ತಾರೆ. ನಾಮ-ರೂಪವಿಭಾಗಗಳಿಗೆ ಯೋಗ್ಯವಲ್ಲದ ಅತಿಸೂಕ್ಷ್ಮವಾದ ಚಿದಚಿದ್ವಸ್ತುಶರೀರವುಳ್ಳವನಾಗಿ ಸತ್ಯಸಂಕಲ್ಪನಾಗಿರುವ ಭಗವಂತನಾದ ವಾಸುದೇವನೇ ವಿವಿಧನಾಮ-ರೂಪವಿಭಾಗವುಳ್ಳ ಸ್ಥೂಲವಾದ ಚಿದಚಿದ್ವಸ್ತುಶರೀರಕನಾಗಬೇಕೆಂದು ಸಂಕಲ್ಪಮಾಡಿ ದೇವತೆಗಳು–ತಿರ್ಯಕ್ ಪ್ರಾಣಿ-ಮನುಷ್ಯ-ಸ್ಥಾವರಗಳೆಂಬ ವಿಚಿತ್ರವಾದ ಜಗತ್ತಿನ ದೇಹವುಳ್ಳವನಾಗಿದ್ದಾನೆ–ಎಂದು ಅನುಸಂಧಾನಮಾಡುತ್ತಾ ನನ್ನನ್ನು ಉಪಾಸನೆಮಾಡುತ್ತಾರೆ. (ರಾ. ಭಾ.)

'ಎಲ್ಲ ಕಡೆಗಳಲ್ಲಿಯೂ ಒಬ್ಬನೇ ಆದ ನಾರಾಯಣನಿದ್ದಾನೆ' ಎಂದು ಏಕತ್ವದಿಂದಲೂ 'ಎಲ್ಲಕ್ಕಿಂತಲೂ ವಿಲಕ್ಷಣನಾದವನು' ಎಂಬುದಾಗಿ ಪೃಥಕ್ಕಾಗಿಯೂ ಬಹುರೂಪದಲ್ಲಿಯೂ ನನ್ನನ್ನು ಉಪಾಸನೆಮಾಡುತ್ತಾರೆ. ಅವನ ರೂಪವಾದರೋ **'ಶುಕ್ಲಮಿವ ಲೋಹಿತಮಿವ'** ಎಂದು ಸನತ್ಸುಜಾತರು ಹೇಳುವಂತೆ ಬಹುರೂಪವಾಗಿದೆ. ಅಥವಾ **ದೈವಮೇವಾಪರೇ ಯಜ್ಞಂ** ಎಂಬುದಾಗಿ ಗೀತೆಯಲ್ಲಿ ಹೇಳಿರುವಂತೆ ಬಹುಪ್ರಕಾರಗಳಾದ ಯಜ್ಞಭೇದಗಳಿಂದ ಉಪಾಸಕರು ನನ್ನನ್ನು ಉಪಾಸನೆಮಾಡುತ್ತಾರೆ. (ಮ. ಭಾ.)

ಜ್ಞಾನಯಜ್ಞವನ್ನು ಶ್ರೀಜ್ಞಾನೇಶ್ವರರು ಒಂದು ರೂಪಕವಾಗಿಯೇ ನಿರೂಪಿಸಿದ್ದಾರೆ. ಆದಿಸಂಕಲ್ಪವೇ ಅದರ ಯಜ್ಞಸ್ತಂಭ. ಪಂಚಮಹಾಭೂತಗಳೇ ಯಜ್ಞಮಂಟಪ. ಜೀವೇಶ್ವರಭೇದವೇ ಬಲಿಯಾಗುವ ಪಶು. ಪಂಚಮಹಾಭೂತಗಳ ಶಬ್ದ-ಸ್ಪರ್ಶಾದಿ ವಿಶೇಷಗುಣಗಳು ಅಥವಾ ಇಂದ್ರಿಯಗಳು ಮತ್ತು ಪ್ರಾಣ ಇವೆಲ್ಲವೂ ಆ ಯಜ್ಞದ ಸಾಮಗ್ರಿಗಳು. ಅಜ್ಞಾನವೆಂಬುದೇ ತುಪ್ಪ. ಅಲ್ಲಿ ಮನೋಬುದ್ಧಿಯೆಂಬ ಯಜ್ಞಕುಂಡದಲ್ಲಿ ಪ್ರದೀಪ್ತ

ವಾದ ಜ್ಞಾನವೇ ಅಗ್ನಿ. ಚಿತ್ತಸಮತೆಯು ಯಜ್ಞದ ವೇದಿಕೆ. ಆತ್ಮಾನಾತ್ಮಗಳನ್ನು ವಿಚಾರಮಾಡುವ ಬುದ್ಧಿಯ ಕುಶಲತೆಯೇ ಯಜ್ಞದೊಳಗಿನ ಮಂತ್ರ. ವಿದ್ಯೆಯ ಮಹತ್ತ್ವ ಮತ್ತು ಶಾಂತಿ ಇವು ಸ್ರುಕ್‌ಸ್ರುವ ಎಂಬ ಹೆಸರಿನ ಹವನ ಪಾತ್ರೆಗಳು. ಜೀವನು ಈ ಯಜ್ಞದ ಕರ್ತನು. ಅವನು ತನ್ನ ಅನುಭವರೂಪದ ಪಾತ್ರೆಯನ್ನು ತೆಗೆದುಕೊಂಡು ಆತ್ಮವಿಚಾರವೆಂಬ ಮಹಾಮಂತ್ರದಿಂದ ಜ್ಞಾನರೂಪವಾದ ಅಗ್ನಿಯಲ್ಲಿ ಭೇದವನ್ನು ಹೋಮಮಾಡುವನು. ಅಲ್ಲಿ ಅಜ್ಞಾನವೆಂಬ ತುಪ್ಪವು ನಾಶವಾಗುವುದು. ಯಜ್ಞ ಮತ್ತು ಯಜ್ಞಕರ್ತೃ ಎಂಬ ಭೇದವೇ ಉಳಿಯುವುದಿಲ್ಲ. ಯಜ್ಞಕರ್ತನು ಆತ್ಮಸಾಮರಸ್ಯವೆಂಬ ನೀರಿನಿಂದ ಅವಭೃಥಸ್ನಾನಮಾಡಿದಾಗ ಪಂಚಮಹಾಭೂತಗಳೂ, ಶಬ್ದಾದಿ ವಿಷಯಗಳೂ, ಇಂದ್ರಿಯಗಳೂ ಇವೆಲ್ಲವನ್ನೂ ಬೇರೆ-ಬೇರೆಯಾಗಿ ಭಾವಿಸದೇ ಜ್ಞಾನಯಾಜಿಯು ಆತ್ಮಬುದ್ಧಿಯಿಂದ ಎಲ್ಲವೂ ಒಂದೇ ಎಂದು ತಿಳಿಯುವನು.

**ಓಂ ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮನ್ತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥೧೬॥**

ನಾನೇ ಕ್ರತು, ನಾನೇ ಯಜ್ಞ, ನಾನೇ ಸ್ವಧೆ, ಔಷಧವೂ ನಾನೇ, ನಾನೇ ಮಂತ್ರ, ತುಪ್ಪವೂ ನಾನೇ, ನಾನೇ ಅಗ್ನಿ. ನಾನೇ ಹೋಮಮಾಡಲ್ಪಟ್ಟ ವಸ್ತು ಅಥವಾ ಹೋಮವೆಂಬ ಕರ್ಮ.

* * *

(ಭಗವಂತನು ಬಹುಪ್ರಕಾರವಾಗಿ ವಿಶ್ವತೋಮುಖನಾಗಿ ಬಹುಪ್ರಕಾರ ಗಳಿಂದ ಹೇಗೆ ಉಪಾಸನೆಮಾಡಲ್ಪಡುತ್ತಾನೆ?–ಎಂಬುದನ್ನು ಶ್ರೀಕೃಷ್ಣನು ಪ್ರತಿಪಾದಿಸುತ್ತಾನೆ. ನಾನೇ ಕ್ರತು ಎನ್ನುತ್ತಾನೆ. ಅಗ್ನಿಷ್ಟೋಮಾದಿಗಳು ಕ್ರತುಗಳು.

**ಅಗ್ನಿಷ್ಟೋಮಾದಯಃ ಸಪ್ತಸಂಸ್ಥಾಃ ಕ್ರತವ ಈರಿತಾಃ ।**
**ಆರಾಧ್ಯಃ ಕ್ರಿಯತೇ ತೈಸ್ತೈರಿತಿ ಕ್ರತುರುದೀರಿತಃ ॥** – ನಿರುಕ್ತ

ಅಗ್ನಿಷ್ಟೋಮಾದಿ ಸಪ್ತಸಂಸ್ಥೆಗಳಿಗೆ ಕ್ರತುಗಳೆಂದು ಹೆಸರು. ಪೂಜೆಗೆ ಯೋಗ್ಯನಾದವನನ್ನು ಇವುಗಳ ಮೂಲಕ ಪೂಜೆಮಾಡುವುದರಿಂದ ಇದಕ್ಕೆ **ಕ್ರತು** ಎಂದು ಹೆಸರುಬಂದಿದೆ.

ದೇವಯಜ್ಞಾದಿ ಪಂಚಮಹಾಯಜ್ಞಗಳು, ಔಪಾಸನಾದಿ ಸಪ್ತಪಾಕ ಯಜ್ಞಗಳು–ಇವುಗಳಿಗೆ ಯಜ್ಞವೆಂದು ಹೆಸರು. ಕ್ರತು ಮತ್ತು ಯಜ್ಞ ನಾನೇ ಎನ್ನುತ್ತಾನೆ ಶ್ರೀಕೃಷ್ಣ.

**ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂ ಗತಿಃ ।**

ವಿಷ್ಣುಸಹಸ್ರನಾಮದಲ್ಲಿ ಭಗವಂತನನ್ನು ಯಜ್ಞ ಮತ್ತು ಕ್ರತು ಎಂಬ ಎರಡು ಹೆಸರುಗಳಿಂದ ಕರೆದಿದ್ದಾರೆ.

ಪಿತೃಗಳಿಗೆ ಕೊಡುವ ಅನ್ನಕ್ಕೆ ಸ್ವಧಾ ಎಂದು ಹೆಸರು. ಪಿತೃಭ್ಯಃ ಸ್ವಧಾ–ಈ ಸ್ವಧೆಯೂ ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಔಷಧವೂ ನಾನೇ ಎನ್ನುತ್ತಾನೆ. ಔಷಧ ಎಂದರೆ ಮೂಲಿಕೆಗಳು. ಯಜ್ಞಾರ್ಥವಾಗಿ ಉಪ ಯೋಗಿಸುವ ಸೋಮಲತೆಯೂ ಆಗಬಹುದು. **'ಔಷಧಂ ಜಗತಃ ಸೇತುಃ'** ಎಂದು ವಿಷ್ಣುಸಹಸ್ರನಾಮದಲ್ಲಿ ಪರಮಾತ್ಮನನ್ನು ಔಷಧ ಎಂದೂ ಕರೆದಿದ್ದಾರೆ. **'ಮನ್ತ್ರೋಽಹಂ'** ಕ್ರತುಗಳಲ್ಲಿ ಅಥವಾ ಯಜ್ಞಗಳಲ್ಲಿ ಹೇಳುವ ಮಂತ್ರಗಳೂ ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಮಂತ್ರದ ಮೂಲಕವಾಗಿ ಸ್ವಾಹಾಕಾರಗಳಿಂದ ದೇವತೆಗಳಿಗೆ ಅರ್ಪಿಸುವ ಆಜ್ಯವೂ ನಾನೇ ಆಗಿದ್ದೇನೆ. ದೇವತೆಗಳ ಮುಖನಾದ ಅಗ್ನಿಯೂ ನಾನೇ ಆಗಿದ್ದೇನೆ. ಅಗ್ನಿಯಲ್ಲಿ ಅರ್ಪಿಸುವ ಸಮಿತ್ತು, ತುಪ್ಪ ಮುಂತಾದ ಹೋಮದ್ರವ್ಯಗಳೂ ಮತ್ತು ಹವನ ಕರ್ಮವೂ ಸಹ ನಾನೇ ಆಗಿದ್ದೇನೆ.

ಇದೇ ಶ್ಲೋಕದ ಅರ್ಥವನ್ನೇ ವಿಷ್ಣುಸಹಸ್ರನಾಮದಲ್ಲಿ ಇನ್ನೂ ಸ್ಪಷ್ಟವಾಗಿ ಹೇಳಿದೆ.

**ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಙ್ಗೋ ಯಜ್ಞವಾಹನಃ ।**
**ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ ।**
**ಯಜ್ಞಾನ್ತಕೃದ್ಯಜ್ಞಗುಹ್ಯಮನ್ನಮನ್ನಾದ ಏವ ಚ ॥)**

o o o

**ಕ್ರತುಃ** = ಶ್ರೌತವಾದ ಯಜ್ಞಕರ್ಮವಿಶೇಷಗಳು. **ಯಜ್ಞಃ** = ಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಕರ್ಮವಿಶೇಷಗಳು. **ಸ್ವಧಾ** = ಪಿತೃಗಳಿಗೆ

ಕೊಡಲ್ಪಡುವ ಅನ್ನ. ಅಥವಾ ಸ್ವಧಾ ಎಂದರೆ ಎಲ್ಲ ಪ್ರಾಣಿಗಳಿಗೂ ಸಾಮಾನ್ಯವಾಗಿ ಆಹಾರವಾಗಿರುವ ಅನ್ನ. **ಔಷಧಂ** = ಎಲ್ಲ ಪ್ರಾಣಿಗಳಿಂದಲೂ ತಿನ್ನಲ್ಪಡುವ ಪದಾರ್ಥ ಅಥವಾ ರೋಗವನ್ನು ಶಮನಮಾಡುವ ಪದಾರ್ಥ. **ಮನ್ತ್ರಃ** = ಯಾವುದರಿಂದ ದೇವತೆಗಳಿಗೂ ಮತ್ತು ಪಿತೃಗಳಿಗೂ ಹವಿಸ್ಸು ಕೊಡಲ್ಪಡುತ್ತದೆಯೋ ಅದು ಮಂತ್ರ. **ಹುತಂ** = ಹವನವೆಂಬ ಕರ್ಮ. (ಶಂ. ಭಾ.)

ವಿಶ್ವಶರೀರವಾಗಿ ನಾನೇ ಇದ್ದೇನೆ ಎಂಬುದನ್ನು ಭಗವಂತನು ಇಲ್ಲಿ ಪ್ರತಿಪಾದಿಸುತ್ತಾನೆ. **ಕ್ರತು** ಎಂದರೆ ಜ್ಯೋತಿಷ್ಟೋಮವೇ ಮುಂತಾದ ಕರ್ಮಗಳು. ಯಜ್ಞವೆಂದರೆ ಮಹಾಯಜ್ಞಗಳು. **ಸ್ವಧಾ** ಎಂದರೆ ಪಿತೃಗಣಗಳಿಗೆ ಪುಷ್ಟಿಯನ್ನುಂಟುಮಾಡುವ ಪದಾರ್ಥಗಳು. **ಔಷಧಂ** ಎಂದರೆ ಹವಿಸ್ಸು. ಇವೆಲ್ಲವೂ ನಾನೇ. ಮಂತ್ರವೂ ಮತ್ತು ತುಪ್ಪವೂ ನಾನೇ. ಸೋಮರಸವೇ ಮುಂತಾದ ಹವಿಸ್ಸೂ ನಾನೇ. ಆಹವನೀಯವೇ ಮುಂತಾದ ಅಗ್ನಿಯೂ ನಾನೇ ಮತ್ತು ಹೋಮವೂ ಕೂಡ ನಾನೇ. (ರಾ. ಭಾ.)

ಅಗ್ನಿ ಎಂದರೆ ಪಂಚಮಹಾಭೂತಗಳಲ್ಲಿ ಮೂರನೆಯದು ಎಂಬ ಸಾಮಾನ್ಯವಾದ ಅರ್ಥವಲ್ಲ. ಆಹವನೀಯವೇ ಮುಂತಾದ ಅಗ್ನಿವಿಶೇಷಗಳು. –ವೇದಾಂತದೇಶಿಕರು.

**ಜ್ಞಾನಂ ವಿಜ್ಞಾನಸಹಿತಂ** ಎಂಬುದಾಗಿ ಪ್ರತಿಜ್ಞೆಮಾಡಿದ್ದ ವಿಜ್ಞಾನವನ್ನು ಭಗವಂತನು ಇಲ್ಲಿ ನಿರೂಪಿಸುತ್ತಾನೆ.

**ಕ್ರತುಃ** = ಅಗ್ನಿಷ್ಟೋಮವೇ ಮುಂತಾದುವುಗಳು. ಯಜ್ಞವೆಂದರೆ ದೇವತೆಗಳನ್ನು ಉದ್ದೇಶಿಸಿ ದ್ರವ್ಯಗಳನ್ನು ಪರಿತ್ಯಾಗಮಾಡುವಿಕೆ.

**ಉದ್ದಿಶ್ಯ ದೇವಾನ್ದ್ರವ್ಯಾಣಾಂ ತ್ಯಾಗೋ ಯಜ್ಞ ಇತೀರಿತಃ ।**

(ಮ. ಭಾ.)

**ಓಂ ಪಿತಾಮಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥೧೭॥**

ಈ ಜಗತ್ತಿಗೆ ತಂದೆ, ತಾಯಿ, ಧಾತೃ, ಅಜ್ಜ, ವೇದ್ಯ (ತಿಳಿಯಬೇಕಾದ

ಪದಾರ್ಥ) ಪವಿತ್ರ, ಓಂಕಾರ, ಋಕ್ಕು, ಸಾಮ ಮತ್ತು ಯಜಸ್ಸೂ ನಾನೇ ಆಗಿದ್ದೇನೆ.

*  *  *

(ಸಾಮಾನ್ಯವಾಗಿ ಪ್ರಪಂಚದಲ್ಲಿ ತಂದೆ, ತಾಯಿ, ಅಜ್ಜ–ಇವರು ಮಕ್ಕಳನ್ನು ಬಹುವಾಗಿ ಪ್ರೀತಿಸಿ ಲಾಲಿಸುತ್ತಿರುತ್ತಾರೆ. ಮಕ್ಕಳ ಪ್ರೀತಿಗೆ ಪಾತ್ರ ರಾದವರು ತಂದೆ, ತಾಯಿ ಮತ್ತು ಅಜ್ಜ. ಇಲ್ಲಿ ಭಗವಂತನು ನಾನೇ ತಂದೆ, ನಾನೇ ತಾಯಿ, ನಾನೇ ಅಜ್ಜ ಎನ್ನುತ್ತಾನೆ. ಮಿಗಿಲಾಗಿ ನಾನೇ ರಕ್ಷಣೆ ಮಾಡುವವನು ಎನ್ನುತ್ತಾನೆ. ಅವನನ್ನು ಹುಡುಕಿಕೊಂಡು ಹೊರಟವರಿಗೆ ಇದು ಅವನ ಅಭಯಪ್ರದಾನ. ಅವನನ್ನು ಅರಸಲು ಹೊರಟವನನ್ನು ತಂದೆ ಯಂತೆಯೂ, ತಾಯಿಯಂತೆಯೂ, ಅಜ್ಜನಂತೆಯೂ ನೋಡಿಕೊಳ್ಳುತ್ತಾನೆ ಮತ್ತು ರಕ್ಷಿಸುತ್ತಾನೆ. ತಂದೆ-ತಾಯಿಗಳ ರಕ್ಷಣೆಯಲ್ಲಿ ಬೆಳೆಯುವುದು ಸ್ವಭಾವವಾಗಿರುವುದರಿಂದ ಪರಮಾತ್ಮನ ಮಾತಾಪಿತೃತ್ವದ ಭಾವವನ್ನು ನಾವು ಅರಿತವರಾಗಿಲ್ಲ. ತಂದೆ-ತಾಯಿಗಳಿಲ್ಲದ ಅನೇಕ ಮಕ್ಕಳು ಪ್ರಪಂಚದಲ್ಲಿದ್ದಾರೆ. ಅವರೆಲ್ಲರಿಗೂ ರಕ್ಷಕರೆಂಬುವರೊಬ್ಬರಿದ್ದಾರೆಂದು ನಮಗೆ ಕಂಡರೂ ಅನಾಥ ಮಕ್ಕಳನ್ನು ಅವರ ರಕ್ಷಣೆಗೆ ಒಪ್ಪಿಸಿದವನು ಭಗವಂತನೇ ಎಂಬುದನ್ನು ನಾವು ಮರೆಯಬಾರದು. ಆದುದರಿಂದ ಹುಟ್ಟಿದ ಪ್ರಾಣಿಗಳನ್ನು ರಕ್ಷಿಸತಕ್ಕವನು ಮತ್ತು ಪೋಷಿಸತಕ್ಕವನು ಅವನೇ ಆಗಿರುತ್ತಾನೆ. ಅವನನ್ನು ಅರಸಿಕೊಂಡು ಹೊರಟ ಜ್ಞಾನಿಗಳಿಗೂ ಸಹ ಅವರ ತಂದೆ- ತಾಯಿ ಮತ್ತು ಅಜ್ಜ–ಈ ಮೂವರ ವಾತ್ಸಲ್ಯವೂ ಇವನೊಬ್ಬನಲ್ಲಿಯೇ ತುಂಬಿದೆ. ಇದಕ್ಕಾಗಿ ಮೂವರನ್ನು ಪ್ರತ್ಯೇಕವಾಗಿ ಆಶ್ರಯಿಸಬೇಕಾಗಿಯೇ ಇಲ್ಲ. ಈ ಕಾರಣದಿಂದಲೇ ನಾನು ವೇದ್ಯನು–ತಿಳಿದುಕೊಳ್ಳಲ್ಪಡತಕ್ಕವನು ಎನ್ನುತ್ತಾನೆ ಶ್ರೀಕೃಷ್ಣ. ಪ್ರಪಂಚಕ್ಕೆ ಮಾತಾ-ಪಿತೃ ಮತ್ತು ಪಿತಾಮಹನೂ ಆಗಿರುವ ನನ್ನನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು.

ಪವಿತ್ರಂ= ಪರಿಶುದ್ಧತೆಯನ್ನುಂಟುಮಾಡುವ ವಸ್ತುಗಳು ಪ್ರಪಂಚದಲ್ಲಿ ಅನೇಕವುಂಟು. ಗಂಗೆಯೇ ಮುಂತಾದ ನದಿಗಳು, ದರ್ಭೆ, ಹಸು ಮುಂತಾ ದುವುಗಳು ಸ್ಪರ್ಶಮಾತ್ರದಿಂದ ಮನುಷ್ಯನನ್ನು ಪರಿಶುದ್ಧಗೊಳಿಸುವ ವಸ್ತುಗಳು. ಈ ಎಲ್ಲವೂ ಪರಮಾತ್ಮನ ಸ್ವರೂಪಗಳೇ ಆಗಿವೆ. ಅಥವಾ ಭಗವಂತನ ಸಕೃನ್ನಾಮಸ್ಮರಣೆಯೂ ಸಹ ಮನುಷ್ಯನನ್ನು ಪರಿಶುದ್ಧಗೊಳಿಸು

ತ್ತದೆ. ಸ್ಪರ್ಶಶಿಲೆಯು ಯಾವುದೇ ಲೋಹವನ್ನಾದರೂ ಚಿನ್ನವನ್ನಾಗಿ ಮಾಡಿಬಿಡುವಂತೆ ಪರಮಾತ್ಮನ ಸ್ಮರಣೆಯು ಮನುಷ್ಯನನ್ನು ಪರಿಶುದ್ಧನನ್ನಾಗಿ ಮಾಡಿಬಿಡುತ್ತದೆ.

ಓಂಕಾರವೇ ನಾನು ಎನ್ನುತ್ತಾನೆ ಶ್ರೀಕೃಷ್ಣ. ಓಂಕಾರವು ಅಕ್ಷರಬ್ರಹ್ಮ ಎಂಬುದು ಈ ಹಿಂದೆಯೇ ಬಂದಿದೆ. ಓಂಕಾರವೇ ಪರಮಾತ್ಮಾ. ಓಂಕಾರದ ಹೊಟ್ಟೆಯಲ್ಲಿ ಅ-ಉ-ಮ (ಅಕಾರ-ಉಕಾರ-ಮಕಾರಗಳು) ಹುಟ್ಟುವುವು ಮತ್ತು ಅವು ಹುಟ್ಟುವಾಗಲೇ ಋಗ್ಯಜುಸ್ಸಾಮಗಳೆಂಬ ಮೂರು ವೇದಗಳನ್ನೂ ಕರೆದುಕೊಂಡೇ ಹೊರಬೀಳುವುವು. ಆದುದರಿಂದ ಈ ಮೂರು ವೇದಗಳೂ ಸಹ ನಾನೇ ಎನ್ನುತ್ತಾನೆ ಶ್ರೀಕೃಷ್ಣ.)

O O O

ವಿಧಾತಾ = ಪ್ರಾಣಿಗಳಿಗೆ ಕರ್ಮಫಲಗಳನ್ನು ವಿಧಾನಮಾಡುವವನು. **ವೇದ್ಯಂ** = ತಿಳಿಯಲ್ಪಡಬೇಕಾದ ಪದಾರ್ಥ. **ಪವಿತ್ರಂ** = ಪಾವನವಾದುದು. ಹಾಗೆಯೇ ಓಂಕಾರ ಮತ್ತು ಋಕ್-ಸಾಮ-ಯಜುರ್ವೇದ–ಇವುಗಳೂ ಭಗವಂತನೇ. (ಶಂ. ಭಾ.)

ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚಕ್ಕೆ ಆಯಾ ಜಾಗಗಳಲ್ಲಿ ತಂದೆ-ತಾಯಿ-ವಿಧಾತಾ ಮುಂತಾದ ರೂಪದಲ್ಲಿರುವವನೂ ನಾನೇ. ಧಾತೃ ಶಬ್ದವು ತಂದೆ-ತಾಯಿಗಳಿಂದ ಬೇರೆಯಾದ ಮತ್ತು ಉತ್ಪತ್ತಿಗೆ ಕಾರಣವಾದ ಚೇತನವಿಶೇಷ. **ವೇದ್ಯಂ..... ಓಂಕಾರಃ** =ಜಗತ್ತಿನಲ್ಲಿ ತಿಳಿಯಲ್ಪಡಬೇಕಾಗಿರುವ ಪವಿತ್ರವೂ ನಾನೇ. ಅರಿವನ್ನು ಕೊಡುವ ವೇದಬೀಜವಾದ ಪ್ರಣವವೂ ನಾನೇ. ಋಕ್ಕು-ಸಾಮ-ಯಜೂರೂಪವಾದ ವೇದವೂ ನಾನೇ. ಪ್ರಣವವು ಋಗ್ಯಜುಸ್ಸಾಮಗಳಲ್ಲೇ ಸೇರಿದ್ದರೂ ವೇದಗಳಿಗೆ ಬೀಜವಾದುದರಿಂದ ಅದನ್ನು ಪ್ರತ್ಯೇಕವಾಗಿ ಹೇಳಿದೆ. (ರಾ. ಭಾ.)

**ಓಂ ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥**

ಗತಿಯು, ಭರ್ತನು, ಪ್ರಭುವು, ಸಾಕ್ಷಿಯು, ನಿವಾಸಸ್ಥಾನವು, ಆಶ್ರಯವು, ಸ್ನೇಹಿತನು, ಉತ್ಪತ್ತಿಯು, ಪ್ರಲಯವು, ಸ್ಥಾನವು, ಭಂಡಾರವು ಮತ್ತು ಅವ್ಯಯವಾದ ಬೀಜವೂ ನಾನೇ ಆಗಿದ್ದೇನೆ.

* * *

(ಪ್ರಪಂಚದ ಜೀವಿಗಳೆಲ್ಲರಿಗೂ ನಾನೇ ಗತಿಯು, ಪರಮಗತಿಯು ಅಥವಾ ದಿಕ್ಕು ; ಹೊಂದುವ ಸ್ಥಾನ–ಎನ್ನುತ್ತಾನೆ ಶ್ರೀಕೃಷ್ಣ. ಪ್ರಾಣಿಗಳಿಗೆ ನನ್ನನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. ಭರ್ತಾ ಎಂದರೆ ಗಂಡ. ಪೋಷಣೆ ಮಾಡತಕ್ಕವನು. ಪ್ರಭುವು. ಈಶ್ವರನಿಗೂ ಈಶ್ವರನು. ಚಕ್ರವರ್ತಿ, ಸಾರ್ವಭೌಮ. ಇವನ ಪ್ರಭುತ್ವದ ವಿಷಯವಾಗಿ ಶ್ವೇತಾಶ್ವತರೋಪನಿಷತ್ತಿನಲ್ಲಿ ಹೀಗೆ ಹೊಗಳಿದೆ :

**ತಮೀಶ್ವರಾಣಾಂ ಪರಮಂ ಮಹೇಶ್ವರಂ**
**ತಂ ದೇವತಾನಾಂ ಪರಮಂ ಚ ದೈವತಮ್ ।**
**ಪತಿಂ ಪತೀನಾಂ ಪರಮಂ ಪರಸ್ತಾ-**
**ದ್ವಿದಾಮ ದೇವಂ ಭುವನೇಶಮೀಡ್ಯಮ್ ॥೬-೭॥**

ಈಶ್ವರರಿಗೆ (ವೈವಸ್ವತ-ಯಮ ಮೊದಲಾದವರಿಗೆ) ಪರಮಮಹೇಶ್ವರನಾದ, ದೇವತೆಗಳಿಗೆ (ಇಂದ್ರಾದಿಗಳಿಗೆ) ಪರಮದೈವತನಾದ, ಪತಿಗಳಿಗೆ (ಪ್ರಜಾಪತಿಗಳಿಗೆ) ಪತಿಯಾದ, ಪರವಾದುದಕ್ಕಿಂತಲೂ ಶ್ರೇಷ್ಠನಾದ, ಭುವನೇಶ್ವರನಾದ, ಸ್ತುತ್ಯರ್ಹನಾದ ಆ ದೇವನನ್ನು ನಾವು ಅರಿತಿದ್ದೇವೆ.

**ಸಾಕ್ಷೀ**=ಆರ್ತರಾದವರ ಪೀಡೆಯನ್ನು ಪರಿಹರಿಸುವವನು, ಎಲ್ಲ ಪ್ರಾಣಿಗಳ ಹೃದಯಾಂತರಾಳದಲ್ಲಿಯೂ ಇದ್ದು ಪ್ರಾಣಿಗಳು ಮಾಡುವ ಪಾಪ-ಪುಣ್ಯಕರ್ಮಗಳನ್ನು ನೋಡುತ್ತಿರತಕ್ಕವನು. ತಂದೆ-ತಾಯಿ-ಪಿತಾಮಹ ಎಲ್ಲವೂ ಆಗಿರುವ ವಿರಾಟ್ಪುರುಷನ ತೊಡೆಯ ಮೇಲೆ ನಾವೆಲ್ಲರೂ ಆಡುತ್ತಿದ್ದೇವೆ. ಅವನ ರಕ್ಷಣೆಯಲ್ಲಿದ್ದೇವೆ. **ಶರಣಂ**–ಎಂದರೆ ಆಶ್ರಯನು. ಆರ್ತರನ್ನು ಕೈಬಿಡತಕ್ಕವನಲ್ಲ. ಆರ್ತರಿಗೆ ಅಭಯಪ್ರದಾನಮಾಡಿ ಅವರನ್ನು ಕಷ್ಟದಿಂದ ಉದ್ಧರಿಸತಕ್ಕವನು.

**ಸುಹೃತ್** = ಪ್ರತ್ಯುಪಕಾರಾಪೇಕ್ಷೆಯಿಲ್ಲದೇ ಸಮಯವರಿತು ಯೋಗ್ಯವಾದ ಸಹಾಯಮಾಡುವ ಒಳ್ಳೆಯ ಹೃದಯವುಳ್ಳ ಗೆಳೆಯನು. ಶರಣಾಗತನ ರಕ್ಷಣೆಯ ಭಾರವು ಅವನ ಮೇಲೆಯೇ ಇರುವುದರಿಂದ ಅಪಾಯದ ಅರಿವು ಶರಣಾಗತನಾದವನಿಗಿಲ್ಲದಿದ್ದರೂ ಅವನಿಗೆ ಒದಗುವ ಅಪಾಯವನ್ನು ತಾನೇ ಗಮನಿಸಿ ಉದ್ಧರಿಸತಕ್ಕವನು. **ಪ್ರಭವಃ** = ಜಗದುತ್ಪತ್ತಿಗೆ ಕಾರಣ

ನಾದವನು. ಅಂತೆಯೇ ಈ ಜಗತ್ತಿನ ಲಯಕ್ಕೂ ಸಹ ನಾನೇ ಕಾರಣನು ಎನ್ನುತ್ತಾನೆ ಶ್ರೀಕೃಷ್ಣ.

ಈ ವಿಶ್ವಕ್ಕೆ ಆಸರೆಯಾದ ಸ್ಥಾನವೂ ಭಗವಂತನೇ ಆಗಿದ್ದಾನೆ. ಅವನ ಆಸರೆಯಿಂದಲೇ ಈ ಬ್ರಹ್ಮಾಂಡದ ಪ್ರಭವ ಮತ್ತು ಪ್ರಲಯಗಳಾಗುತ್ತವೆ. ಇವನು ನಿಧಾನ. ಎಲ್ಲಕ್ಕೂ ನೆಲೆಯಾದವನು. ಪ್ರಾಣಿಗಳು ಅನುಭವಿಸ ಬೇಕಾಗಿರುವ ಸುಖ-ದುಃಖಗಳಿಗೆ ನಿಕ್ಷೇಪರೂಪನಾಗಿದ್ದಾನೆ. ಕರ್ಮಾಧ್ಯಕ್ಷ ನಾದ ಇವನಿಂದಲೇ ಪ್ರಾಣಿಗಳು ಮಾಡಿದ ಪಾಪ-ಪುಣ್ಯಕರ್ಮಗಳಿಗೆ ಅನು ರೂಪವಾದ ಫಲವು ಜನ್ಮ-ಜನ್ಮಾಂತರಗಳಲ್ಲಿ ಲಭ್ಯವಾಗುವುದು. ಇವನು ಅವ್ಯಯನಾದ ಬೀಜ. ನಾಶರಹಿತನಾದ ಬೀಜ. ಬೀಜವು ಮೊಳಕೆಯಾಗಿ ಮರವಾಗುತ್ತದೆ. ಪುನಃ ಅದೇ ಬೀಜರೂಪವಾಗುತ್ತದೆ. ವೃಕ್ಷ-ಬೀಜಗಳ ವ್ಯವಹಾರವು ಎಂದಿನಿಂದ ಪ್ರಾರಂಭವಾಯಿತೆಂಬುದು ತಿಳಿಯದು. ಎಂದಿಗೆ ಮುಕ್ತಾಯವೆಂಬುದೂ ತಿಳಿಯದು. ಇದನ್ನು ಅವಿನಾಶಿ ಎಂದೇ ಭಗವಂತನು ಹೇಳಿದ್ದಾನೆ. ಅರ್ಥಾತ್ ಅವಾಂತರಪ್ರಲಯದಲ್ಲೂ ಸಹ ಈ ಬೀಜವು ನಾಶಹೊಂದುವುದಿಲ್ಲ. ಆಗಲೂ ಅದು ಪರಮಾತ್ಮನಲ್ಲಿಯೇ ಇರುತ್ತದೆ.)

o o o

**ಗತಿಃ** = ಕರ್ಮಫಲ. ನಿಧಾನಂ =ನಿಕ್ಷೇಪ. ಪ್ರಾಣಿಗಳು ಕಾಲಾಂತರದಲ್ಲಿ ಭೋಗಿಸಬೇಕಾದ ಕರ್ಮಗಳಿಗೆಲ್ಲಾ ಭಂಡಾರವಾಗಿರುವವನು.

**ನಿಕ್ಷೇಪಃ ಕಾಲಾನ್ತರೋಪಭೋಗ್ಯಂ ಪ್ರಾಣಿನಾಮ್ ।**

**ಅವ್ಯಯಂ ಬೀಜಂ** = ಉತ್ಪತ್ತಿಶೀಲವಾದ ವಸ್ತುಗಳ ಉತ್ಪತ್ತಿಗೆ ಅಳಿವು ಇಲ್ಲದ ಕಾರಣ ಸಂಸಾರವು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಅದರ ಬೀಜವು ಅವಶ್ಯವಾಗಿ ಇದ್ದೇ ಇರುತ್ತದೆ. ಆದುದರಿಂದ ಬೀಜವನ್ನು ಅವಿನಾಶಿ ಎಂದು ಕರೆದಿದೆ. ಏಕೆಂದರೆ : ಬೀಜವಿಲ್ಲದೇ ಯಾವುದೂ ಹುಟ್ಟುವುದಿಲ್ಲ. ಉತ್ಪತ್ತಿಯನ್ನು ಸದಾ ನಾವು ನೋಡುತ್ತಿರುವುದರಿಂದ ಬೀಜದ ಪರಂಪರೆಗೂ ನಾಶವಿಲ್ಲವೆಂದು ತಿಳಿಯಬೇಕು. **ಯಾವತ್ಸಂಸಾರ ಭಾವಿತ್ವಾತ್ ಅವ್ಯಯಂ ನ ಹಿ ಅಬೀಜಂ ಕಿಂಚಿತ್ ಪುರೋಹತಿ** (ಶಂ. ಭಾ.)

**ಗತಿಃ** ಎಂದರೆ ಹೊಂದಬೇಕಾದ ಸ್ಥಾನ. **ಗಮ್ಯತೇ ಇತಿ ಗತಿಃ।** **ಸಾಕ್ಷೀ**=ಸಾಕ್ಷಾತ್ತಾಗಿ ನೋಡುತ್ತಿರುವವನು. **ಶರಣಂ**=ಇಷ್ಟವಸ್ತುವನ್ನು ದೊರಕಿಸುವುದಕ್ಕೂ ಬೇಕಾದ ಚೈತನ್ಯ. ಇವೆಲ್ಲವೂ ಪರಮಾತ್ಮನೇ. **ಸುಹೃತ್** = ಎಂದರೆ ಹಿತೈಷಿ. ಶೋಭನವಾದ ಹೃದಯವುಳ್ಳವನು ಸುಹೃತ್. ಹಿತವನ್ನು ಬಯಸುವುದೇ ಹೃದಯದ ಶೋಭನತ್ವ. ಎಲ್ಲೆಲ್ಲಿ ಯಾವುದು ಯಾವುದಿದೆಯೋ ಅದೆಲ್ಲಕ್ಕೂ ಉತ್ಪತ್ತಿ ಮತ್ತು ಪ್ರಲಯಗಳ ಸ್ಥಾನವಾಗಿರುವವನು. ಮತ್ತು ನಿಧಾನ ಎಂದರೆ ಯಾವುದು ಯಾವುದು ಹುಟ್ಟುತ್ತದೆಯೋ ಮತ್ತು ಯಾವುದು ಯಾವುದು ಲಯಹೊಂದುತ್ತದೆಯೋ ಅದೆಲ್ಲವೂ ಇರಿಸಲ್ಪಟ್ಟಿರುವ ಜಾಗ ; ಎಲ್ಲ ಜಾಗಗಳಲ್ಲಿಯೂ ಅಳಿವಿಲ್ಲದೇ ಇರುವ ಕಾರಣ.
(ರಾ. ಭಾ.)

**ಗತಿಃ** ಎಂದರೆ ಮುಮುಕ್ಷುಗಳಿಂದ ಹೊಂದಲ್ಪಡುವವನು.

**ಗಮ್ಯತೇ ಮುಮುಕ್ಷುಭಿರಿತಿ ಗತಿಃ। ಅಥ ಕಸ್ಮಾದುಚ್ಯತೇ ಗತಿರಿತಿ। ಬ್ರಹ್ಮೈವ ಗತಿರಿತಿ । ತದ್ಧಿ ಗಮ್ಯತೇ ಪಾಪವಿಮುಕ್ತೈರಿತಿ ।**

**ಸಾಕ್ಷೀ**=ಸಾಕ್ಷಾತ್ತಾಗಿ ನೋಡುವವನು.

**ಸ ಸಾಕ್ಷಾದಿದಮದ್ರಾಕ್ಷೀತ್ ತತ್ಸಾಕ್ಷಿಣಃ ಸಾಕ್ಷಿತ್ವಂ।**

**ಶರಣಂ**=ಸಂಸಾರದಿಂದ ಭೀತರಾದವರಿಗೆ ಆಶ್ರಯನಾದವನು, ಪರಾಯಣ.

**ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್ ।**

**ನಿಧಾನಂ** = ಸಂಹಾರಕಾಲದಲ್ಲಿ ಪ್ರಕೃತಿಯಿಂದ ಜಗತ್ತು ಇವನಲ್ಲಿ ಇರಿಸಲ್ಪಡುತ್ತದೆ. (ಮ. ಭಾ.)

**ಓಂ ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥**

ಅರ್ಜುನ! ನಾನು ತಪಿಸುವೆನು, ನಾನು ಮಳೆಯನ್ನು ಹಿಂದಕ್ಕೆ ಸೆಳೆದುಕೊಳ್ಳುವೆನು ಮತ್ತು ಬಿಡುವೆನು. ನಾನು ಅಮೃತವು ಮತ್ತು ಮೃತ್ಯುವು. ಸತ್ ಮತ್ತು ಅಸತ್ ಎರಡೂ ನಾನೇ ಆಗಿದ್ದೇನೆ.

*　　*　　*

(ಶ್ರೀಕೃಷ್ಣನು ಈ ಶ್ಲೋಕದಲ್ಲಿ ತನ್ನ ಸರ್ವವ್ಯಾಪಕತ್ವವನ್ನೂ, ವಿಶ್ವದಲ್ಲಿ ತಾನು ಹಾಸು-ಹೊಕ್ಕಾಗಿರುವುದನ್ನೂ, ಪ್ರಪಂಚದ ಉತ್ಪತ್ತಿ-ಲಯಗಳಿಗೆ ತಾನೇ ಕಾರಣನಾಗಿರುವುದನ್ನೂ ಹೇಳುತ್ತಾನೆ.

**ತಪಾಮಿ** = ನಾನೇ ತಾಪವನ್ನುಂಟುಮಾಡುತ್ತೇನೆ. ನಾನೇ ಸೂರ್ಯನಾಗಿ ಬಿಸಿಲಿನಿಂದ ಪ್ರಪಂಚವನ್ನು ತಾಪಗೊಳಿಸುತ್ತೇನೆ. ಆದರೆ ತಾಪಗೊಳಿಸುವುದೊಂದೇ ನನ್ನ ಕಾರ್ಯವಲ್ಲ. ಪರ್ಜನ್ಯನಾಗಿ ಮಳೆಯನ್ನೂ ಸುರಿಸುತ್ತೇನೆ. ಸುರಿಸಿದ ಮಳೆಯನ್ನು ಪುನಃ ನನ್ನ ಪ್ರಚಂಡಕಿರಣಗಳಿಂದ ಸೆಳೆದುಕೊಳ್ಳುತ್ತೇನೆ. ಪುನಃ ಬೇಕಾದಾಗ ಬಿಡುತ್ತೇನೆ. ಅಗ್ನಿ (ಸೂರ್ಯ) ಮತ್ತು ನೀರಿನ ಸೃಷ್ಟಿಯಾದನಂತರವೇ ಜಗತ್ತಿನ ಸೃಷ್ಟಿ. ವಿಶ್ವಕ್ಕೆ ನೀರೇ ಆಧಾರವಾಗಿದೆ. **ಅಗ್ನೇರಾಪಃ। ಅದ್ಭ್ಯಃ ಪೃಥಿವೀ ।** (ಶ್ರುತಿಃ)

ಪ್ರಾಣಿಗಳ ಜೀವನಕ್ಕೆ ಮುಖ್ಯಕಾರಣಗಳಾದ ಬಿಸಿಲು ಮತ್ತು ಮಳೆಗಳು ನನ್ನ ಅಧೀನವಾಗಿರುವುದರಿಂದ ವಿಶ್ವವೇ ನನ್ನ ಅಧೀನವಾಗಿದೆ. ನಾನೇ ಅಮೃತ ಮತ್ತು ನಾನೇ ಮೃತ್ಯು ಎನ್ನುತ್ತಾನೆ ಶ್ರೀಕೃಷ್ಣ. ಎರಡೂ ಒಬ್ಬನೇ ಆಗಲು ಹೇಗೆ ಸಾಧ್ಯ?–ಪರಮಾತ್ಮನ ವಿಷಯದಲ್ಲಿ ಸಾಧ್ಯ. ಇಲ್ಲಿ ಶ್ರೀಕೃಷ್ಣನು ಹೇಳಿರುವುದು ಮೃತ್ಯುವನ್ನೇ ಜಯಿಸುವ ಅಮೃತ. ಅಮೃತವನ್ನು ಕುಡಿದ ದೇವತೆಗಳಿಗೂ ವಿನಾಶವೆಂಬುದಿದೆ. ಆದರೆ ಪರಮಾತ್ಮನನ್ನೇ ಸೇರಿದವರಿಗೆ ವಿನಾಶವಿಲ್ಲ. ತನ್ನನ್ನು ಸೇರಿದವರನ್ನು ಅಮೃತರನ್ನಾಗಿ ಮಾಡುವುದರಿಂದ ಪರಮಾತ್ಮನು ಅಮೃತ. ಮೃತ್ಯುವೂ ತಾನೇ ಎಂದು ಹೇಳಿಕೊಂಡಿದ್ದಾನೆ.

ಇವನು ಮಹಾಕಾಲ. ಅಜ್ಞಾನಿಗಳನ್ನು ಪುನರಪಿ ಮರಣ–ಪುನರಪಿ ಜನನದಲ್ಲಿ ತೊಡಗಿಸುತ್ತಲೇ ಇರುತ್ತಾನೆ. ಅಂತಹವರಿಗಿವನು ಮೃತ್ಯುವೇ ಆಗುತ್ತಾನೆ. ವಜ್ರದ ಉಂಗುರವು ಶ್ರೇಷ್ಠವಾದ ಆಭರಣವೆಂಬುದೇನೋ ನಿಜ. ಆದರೆ ಅದೇ ವಜ್ರವನ್ನೇ ಅರೆದು ಕುಡಿದರೆ ವಿಷವೆಂಬುದೂ ನಿಜ. ಅದೇ ರೀತಿಯಲ್ಲಿ ಪರಮಾತ್ಮನು ತನ್ನ ಉಪಾಸಕರಿಗೆ ಅಮೃತನು, ತನ್ನನ್ನು ಉಪಾಸನೆ ಮಾಡದವರಿಗೆ ಮೃತ್ಯುಸ್ವರೂಪನು.

**ಸತ್** ಮತ್ತು **ಅಸತ್** ಎರಡೂ ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಸತ್ ಎಂದರೆ ಸದ್ವಸ್ತು–ಬ್ರಹ್ಮವಸ್ತು.

**ಏಕಂ ಸದ್ವಿಪ್ರಾ ಬಹುಧಾ ವದನ್ತಿ**–ಏಕಮಾತ್ರ ಸತ್ಯ. ಒಂದೇ ಸದ್ವಸ್ತುವನ್ನು ಬಹುಪ್ರಕಾರವಾಗಿ ವಿದ್ವಾಂಸರು ಹೇಳುತ್ತಾರೆ–ಎಂದು ಶ್ರುತಿಯು ಸಾರುತ್ತದೆ.

**ಅಸತ್**= ಸದ್ವಸ್ತುವಲ್ಲದೇ ಇರುವ ಬ್ರಹ್ಮಾಂಡವೂ ನಾನೇ. ಅವಿನಾಶಿಯಾದ ಬ್ರಹ್ಮವಸ್ತುವೂ ನಾನೇ. ವಿನಾಶವಾಗುವ ಗುಣವಿರುವ ಅನಿತ್ಯವಾದ ವಿಶ್ವವೂ ನಾನೇ. ಅರ್ಥಾತ್ ನನ್ನನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ಕಾರಣನೂ ನಾನೇ–ಕಾರ್ಯವೂ ನಾನೇ.

ಇದನ್ನು ತಿರುಗು-ಮುರುಗಾಗಿಯೂ ಹೇಳಬಹುದು. **ಸತ್** ಎಂದರೆ ಕಣ್ಣಿಗೆ ಕಾಣುತ್ತಿರುವ ಪ್ರಪಂಚ. **ಅಸತ್** ಎಂದರೆ ಅವ್ಯಕ್ತನಾದ ಪರಮಾತ್ಮ. **ಸತ್** ಎನ್ನುವುದು ಕಾರ್ಯ, **ಅಸತ್** ಎನ್ನುವುದು ಕಾರಣ. ಅಸತ್ತಿನಿಂದ ಸತ್ತಿನ ಪ್ರಾದುರ್ಭಾವ. ಎರಡೂ ನಾನೇ ಆಗಿದ್ದೇನೆ. ಬೀಜವೂ ನಾನೇ, ವೃಕ್ಷವೂ ನಾನೇ. ಯಾವುದಿಂದು ಹೆಮ್ಮರವಾಗಿ ಕಾಣುತ್ತಿದೆಯೋ ಅದು ಸೂಕ್ಷ್ಮಾತಿಸೂಕ್ಷ್ಮವಾದ ಬೀಜರೂಪವಾಗುತ್ತದೆ. ಆದುದರಿಂದ ಬೀಜ-ವೃಕ್ಷಗಳೆರಡೂ ಒಂದೇ. ಅದೇ ರೀತಿಯಲ್ಲಿ ಕಣ್ಣಿಗೆ ಕಾಣಿಸುತ್ತಿರುವ ಪ್ರಪಂಚ ಮತ್ತು ಈ ಪ್ರಪಂಚಕ್ಕೆ ಕಾರಣನಾದ **ಅಸತ್** ಎಂದರೆ ಅವ್ಯಕ್ತ–ಎರಡೂ ಒಂದೇ ಆಗಿರುತ್ತದೆ. ವಿಕಾಸಗೊಂಡಿರುವ ಸತ್ ಅಸತ್ತಿನಲ್ಲಿ ಒಮ್ಮೆ ಹೋಗಿ ಸೇರಿಕೊಳ್ಳುತ್ತದೆ. ಅದೇ ಅಸತ್ತಿನಿಂದ ಅಥವಾ ಅವ್ಯಕ್ತದಿಂದ ಜಗದ್ಬೀಜವು ಪುನಃ ವಿಕಾಸಗೊಳ್ಳುತ್ತದೆ. ಆದುದರಿಂದ ಈ ಎಲ್ಲಕ್ಕೂ ಮೂಲರೂಪನಾಗಿರುವವನು ಅವಿನಾಶಿಯಾದ, ನಿತ್ಯನಾದ, ಸನಾತನನಾದ ಪರಮಾತ್ಮ. )

o o o

**ವರ್ಷಂ ನಿಗೃಹ್ಣಾಮಿ ಉತ್ಸೃಜಾಮಿ** = ಆದಿತ್ಯನಾಗಿ ಕೆಲವು ತೀಕ್ಷ್ಣವಾದ ಕಿರಣಗಳಿಂದ ಎಲ್ಲವನ್ನೂ ತಪಿಸುತ್ತೇನೆ. ಕೆಲವು ಕಿರಣಗಳಿಂದ ಮಳೆಯನ್ನೂ ಸುರಿಸುತ್ತೇನೆ ಮತ್ತೆ ಕೆಲವು ಕಿರಣಗಳಿಂದ ಎಂಟು ತಿಂಗಳುಗಳ

ಕಾಲ ನೀರನ್ನು ಶೋಷಿಸುತ್ತೇನೆ. ಅನಂತರ ವರ್ಷಾಕಾಲವು ಬಂದಾಗ ಮತ್ತೆ ಮಳೆಯನ್ನು ಸುರಿಸುತ್ತೇನೆ. **ಅಮೃತಂ-ಮೃತ್ಯುಶ್ಚ**=ದೇವತೆಗಳಿಗೆ ಅಮೃತವೂ ಮತ್ತು ಮರ್ತ್ಯಲೋಕದಲ್ಲಿ ವಾಸಿಸುವ ಮನುಷ್ಯರಿಗೆ ಮೃತ್ಯುವೂ ನಾನೇ. **ಸತ್-ಅಸತ್**='ಸತ್' ಎಂದರೆ ಯಾವುದರ ಸಂಬಂಧದಿಂದ ಎಲ್ಲವೂ ಇರುತ್ತದೆಯೋ ಅದು. ಮತ್ತು ಅದಕ್ಕೆ ವಿರುದ್ಧವಾದುದು ಅಸತ್. ಅಥವಾ ಸತ್-ಅಸತ್ ಎಂದರೆ ಕಾರ್ಯ ಮತ್ತು ಕಾರಣಗಳು. (ಶಂ. ಭಾ.)

**ಅಮೃತಂ ಚೈವ ಮೃತ್ಯುಶ್ಚ**=ಯಾವುದರಿಂದ ಲೋಕವು ಜೀವಿಸಿದೆಯೋ ಅದು ಅಮೃತ ಮತ್ತು ಯಾವುದರಿಂದ ನಾಶಹೊಂದುತ್ತದೆಯೋ ಅದು ಮೃತ್ಯು. ಎರಡೂ ಪರಮಾತ್ಮಸ್ವರೂಪವೇ. ಹೆಚ್ಚೇಕೆ? **ಸತ್** ಮತ್ತು **ಅಸತ್** ಕೂಡ ಅವನೇ. ಸತ್ ಎಂದರೆ ಈಗ ಇರುವುದು. ಅಸತ್ ಎಂದರೆ ಹಿಂದೆ ಇದ್ದುದು ಮತ್ತು ಇನ್ನೂ ಬರದೇ ಇರುವುದು. ಹೀಗೆ ಎಲ್ಲ ಅವಸ್ಥೆಗಳಲ್ಲಿಯೂ ಇರುವ **ಚಿತ್-ಅಚಿತ್** ವಸ್ತುಗಳು ನನ್ನ ಶರೀರವಾಗಿರುವುದರಿಂದ ಆಯಾ ಪ್ರಕಾರಗಳಲ್ಲಿ ಇರುವವನು ನಾನೇ. ಹೀಗೆ ಬಹುಪ್ರಕಾರವಾಗಿ ಇರುವವನು ನಾನೇ ಎಂಬ ಏಕತ್ವಜ್ಞಾನದಿಂದ ಅನುಸಂಧಾನಮಾಡುತ್ತಾ ಭಕ್ತರು ನನ್ನನ್ನೇ ಉಪಾಸನೆಮಾಡುತ್ತಾರೆ. (ರಾ. ಭಾ.)

**ಸದಸತ್ ಚ ಅಹಮೇವ** = ಸತ್ ಎಂದರೆ ಕಾರ್ಯ, ಅಸತ್ ಎಂದರೆ ಕಾರಣ. ಏಕೆಂದರೆ : ಕಾರ್ಯವು ಅಭಿವ್ಯಕ್ತವಾಗುವುದರಿಂದ ಸತ್. ಅವ್ಯಕ್ತರೂಪವಾಗಿರುವುದರಿಂದ ಕಾರಣವು ಅಸತ್.

**ಸದಭಿವ್ಯಕ್ತರೂಪತ್ವಾತ್ ಕಾರ್ಯಮಿತ್ಯುಚ್ಯತೇ ಬುಧೈಃ ।**
**ಅಸದವ್ಯಕ್ತರೂಪತ್ವಾತ್ ಕಾರಣಂ ಚಾಪಿ ಶಬ್ದಿತಮ್ ॥** (ಮ. ಭಾ.)

**ಓಂ ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕ-**
**ಮಶ್ನನ್ತಿ ದಿವ್ಯಾನ್ದಿವಿ ದೇವಭೋಗಾನ್ ॥೨೦॥**

ಯಜ್ಞದಲ್ಲಿ ಸೋಮಪಾನಮಾಡಿ ಪೂತಾತ್ಮರಾಗಿರುವ ತ್ರೈವಿದ್ಯರು

(ವೇದಗಳನ್ನರಿತವರು) ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗವಾಸವನ್ನು ಪ್ರಾರ್ಥಿಸುತ್ತಾರೆ. ಅವರು ದಿವ್ಯವಾದ ದೇವೇಂದ್ರಲೋಕವನ್ನು ಸೇರಿ ಸ್ವರ್ಗದಲ್ಲಿ ದಿವ್ಯವಾದ ದೇವಭೋಗಗಳನ್ನು ಅನುಭವಿಸುತ್ತಾರೆ. ತ್ರೈವಿದ್ಯರು ಎಂದರೆ ಋಗ್ಯಜುಸ್ಸಾಮಗಳನ್ನು ಬಲ್ಲವರು.

**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ।**

ಸ್ವರ್ಗಕಾಮನಾದವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು. ಸ್ವರ್ಗಫಲವನ್ನು ಸಂಕಲ್ಪಿಸಿ ಜ್ಯೋತಿಷ್ಟೋಮವನ್ನು ಮಾಡಿದರೆ ಅವನಿಗೆ ಸ್ವರ್ಗವು ಸಿಕ್ಕುವುದು ನಿಶ್ಚಯ. ಇವರು ಸೋಮಪರು. ಆದರಿಂದಲೇ ಪಾಪರಹಿತರೂ ಆಗಿರುತ್ತಾರೆ. (ಸೋಮವಲ್ಲೀ ಎಂಬುದೊಂದು ಬಳ್ಳಿ. ಅದರ ಎಲೆಗಳು ಶುಕ್ಲಪಕ್ಷದಲ್ಲಿ ಹುಟ್ಟಿ ಕೃಷ್ಣಪಕ್ಷದಲ್ಲಿ ಉದುರಿಹೋಗುತ್ತವೆ. ಬಳ್ಳಿಯಿಂದ ರಸವನ್ನು ತೆಗೆದು ವೈದಿಕಾಗ್ನಿಯಲ್ಲಿ ಹೋಮಮಾಡಿ ಹೋಮ ಶೇಷವಾದ ಸೋಮರಸವನ್ನು ಪ್ರಾಶನಮಾಡುತ್ತಾರೆ.)

(ಭಗವಂತನು ಹೇಳುತ್ತಾನೆ : 'ತ್ರೈವಿದ್ಯೆಗಳಲ್ಲಿ ನಿಷ್ಣಾತರಾದ ವೇದ ಮಾರ್ಗಾವಲಂಬಿಗಳು ಅಥವಾ ವೇದಗಳನ್ನು ಬಲ್ಲ ವಿದ್ವಾಂಸರು ಸ್ವರ್ಗಕ್ಕೆ ಒಯ್ಯುವ ಯಜ್ಞಗಳನ್ನು ಮಾಡಿ ಅದರ ಅಂಗವಾಗಿ ಸೋಮಪಾನವನ್ನು ಮಾಡುತ್ತಾರೆ. ಅದರಿಂದ ತಮ್ಮ ಪಾಪಗಳೆಲ್ಲವನ್ನೂ ಕಳೆದುಕೊಂಡು ಸ್ವರ್ಗ ಲೋಕವನ್ನು ನನ್ನಿಂದಲೇ ಪ್ರಾರ್ಥಿಸುತ್ತಾರೆ.'

ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು 'ಪರಿತಾಪವನ್ನು ಉಂಟುಮಾಡು ವವನೂ, ಮಳೆಯನ್ನು ಸುರಿಸುವವನೂ, ಮಳೆಯನ್ನು ತಡೆಯುವವನೂ ನಾನೇ ಆಗಿದ್ದೇನೆ'–ಎಂದು ಹೇಳಿರುತ್ತಾನೆ. ಹಿಂದೆ ಯಜ್ಞವೂ ನಾನೇ ಎಂದಿದ್ದಾನೆ. ಆದುದರಿಂದ ಯಜ್ಞಕ್ಕೆ ಅಧಿದೇವತೆಯಾದ ಇಂದ್ರನೂ ಇವನೇ ಆಗಿರುತ್ತಾನೆ. ಈ ಕಾರಣದಿಂದಲೇ ಭಗವಂತನು–'ಇಂದ್ರಾದಿದೇವತೆಗಳ ಮೂಲಕವಾಗಿ ನನ್ನನ್ನೇ ಪ್ರಾರ್ಥಿಸುತ್ತಾರೆ'–ಎಂದು ಹೇಳಿದ್ದಾನೆ.

ಹೀಗೆ ಸ್ವರ್ಗಕಾಮರಾಗಿ ಯಜ್ಞಮಾಡಿದವರು ಅವಸಾನಾನಂತರದಲ್ಲಿ ಪುಣ್ಯತಮವಾದ ಸುರೇಂದ್ರಲೋಕವನ್ನು ಹೊಂದಿದವರಾಗಿ ಅಲ್ಲಿ ದಿವ್ಯವಾದ ದೇವತಾಭೋಗಗಳನ್ನು ಅನುಭವಿಸುತ್ತಾರೆ.

ಸ್ವರ್ಗಸುಖವು ಮನುಷ್ಯಲೋಕದ ಸುಖಕ್ಕಿಂತಲೂ ಅತ್ಯುತ್ಕೃಷ್ಟವಾದುದೇನೋ ನಿಜ. ಸ್ವರ್ಗದಲ್ಲಿ ಹಸಿವು-ಬಾಯಾರಿಕೆಗಳಿರುವುದಿಲ್ಲ. ಮುಪ್ಪಿನ ಭಯವಿಲ್ಲ. ರೋಗ-ರುಜಿನಾದಿಗಳ ಭಯವಿಲ್ಲ. ಸುಖ-ದುಃಖಗಳ ಆವೃತ್ತಿಯಿರುವುದಿಲ್ಲ. ಕಾಮಧೇನು-ಕಲ್ಪವೃಕ್ಷಗಳು ಕೇಳಿ-ಕೇಳಿದುದನ್ನು ಕೊಡಲು ಸರ್ವದಾ ಸಿದ್ಧವಾಗಿರುತ್ತವೆ. ಉಪಚರಿಸಲು ಅಪ್ಸರೆಯರಿರುತ್ತಾರೆ. ಭೂಲೋಕದವರ ಊಹೆಗೂ ಸಿಲುಕದ ಇಷ್ಟೊಂದು ಸುಖ-ಸಂಪತ್ತುಗಳು ಸ್ವರ್ಗದಲ್ಲಿದ್ದರೂ ಅದರಲ್ಲಿ ಒಂದು ದೊಡ್ಡ ದೋಷವೂ ಇದೆ. ಅದನ್ನೇ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.)

o o o

**ಮಾಂ**=ವಸುಗಳೇ ಮುಂತಾದ ದೇವತೆಗಳ ರೂಪದಲ್ಲಿರುವ ಪರಮಾತ್ಮನಾದ ನನ್ನನ್ನು. (ಶಂ. ಭಾ.)

**ತ್ರೈವಿದ್ಯಾಃ** = ತ್ರೈವಿದ್ಯಂ ಎಂದರೆ ಋಕ್-ಯಜುಸ್-ಸಾಮಗಳೆಂಬ ಮೂರು ವಿದ್ಯೆಗಳು. ಅವುಗಳಲ್ಲಿ ಮಾತ್ರ ನಿಷ್ಠರಾಗಿ ತ್ರಯ್ಯಂತದಲ್ಲಿ (ವೇದಾಂತದಲ್ಲಿ ) ನಿಷ್ಠೆಯಿಲ್ಲದವರನ್ನು ಇಲ್ಲಿ ತ್ರೈವಿದ್ಯರೆಂದು ಕರೆದಿದೆ. ತ್ರಯ್ಯಂತನಿಷ್ಠರಾದ ಮಹಾತ್ಮರಾದರೋ ಹಿಂದೆ ಹೇಳಿದ ರೀತಿಯಲ್ಲಿ ಸರ್ವವೇದವೇದ್ಯನಾದ ನನ್ನನ್ನೇ ಅತ್ಯಂತಭಕ್ತಿಪೂರ್ವಕವಾದ ಸಂಕೀರ್ತನಾದಿಗಳಿಂದಲೂ, ಜ್ಞಾನಯಜ್ಞದಿಂದಲೂ ನನ್ನನ್ನೇ ಹೊಂದುವ ಆಶೆಯುಳ್ಳವರಾಗಿ ಉಪಾಸನೆಮಾಡುತ್ತಾರೆ. ತ್ರೈವಿದ್ಯೆ (ವೇದ )ಗಳಲ್ಲಿ ಹೇಳಲ್ಪಡುವ ಕೇವಲ ಯಾಗಗಳನ್ನಾಚರಿಸಿ ಅದರ ಪ್ರಸಾದವಾದ ಸೋಮವನ್ನು ಪಾನಮಾಡುತ್ತಾ ಸ್ವರ್ಗಾದಿಪ್ರಾಪ್ತಿಗೆ ವಿರೋಧವಾದ ಪಾಪಗಳನ್ನು ಕಳೆದುಕೊಂಡು, ಕೇವಲ ಇಂದ್ರಾದಿದೇವತೆಗಳಿಗೆ ಸಂಬಂಧಪಟ್ಟುವುಗಳೆಂದು ಭಾವಿಸಿದ ಯಜ್ಞಗಳಿಂದ ವಾಸ್ತವವಾಗಿ ಇಂದ್ರಾದಿದೇವತಾರೂಪನಾದ ನನ್ನನ್ನೇ ಪೂಜಿಸಿ, ಆ ರೂಪದಲ್ಲಿರುವ ನನ್ನನ್ನು ಅರಿಯದೇ ಸ್ವರ್ಗವೆಂಬ ಗತಿಯನ್ನು ಪ್ರಾರ್ಥಿಸುತ್ತಾರೆ. ಅವರು ದುಃಖಮಿಶ್ರವಿಲ್ಲದ ದೇವೇಂದ್ರಲೋಕವನ್ನು ಹೊಂದಿ ಅಲ್ಲಿ ದಿವ್ಯವಾದ ಭೋಗಗಳನ್ನು ಅನುಭವಿಸುತ್ತಾರೆ. (ರಾ. ಭಾ.)

ಭಗವಂತನೇ ಎಲ್ಲ ಯಜ್ಞಗಳ ಭೋಕ್ತೃ. ಹಾಗಿದ್ದರೂ ಇತರ

ದೇವತೆಗಳನ್ನು ಭಜಿಸುವುದಕ್ಕಿಂತಲೂ ತನ್ನನ್ನು ಭಜಿಸುವುದೇ ಶ್ರೇಷ್ಠ–ಎಂದು ತ್ರೈವಿದ್ಯಾಃ ಮೊದಲಾದ ಶ್ಲೋಕಗಳಲ್ಲಿ ಭಗವಂತನು ನಿರೂಪಿಸುತ್ತಾನೆ. ಭಗವಂತನೇ ಎಲ್ಲ ಯಜ್ಞಗಳ ಭೋಕ್ತೃವಾಗಿರುವುದರಿಂದ ತ್ರೈವಿದ್ಯರಿಗೂ ಮತ್ತು ಭಗವದ್ಭಕ್ತರಿಗೂ ಫಲದಲ್ಲಿ ಸಾಮ್ಯವಿರಬಹುದಲ್ಲವೇ?– ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಭಗವಂತನು ಹೇಳುತ್ತಾನೆ.

ದಿವ್ಯಾನ್ ಎಂಬ ಶಬ್ದವು ದೇವತೆಗಳ ಲೋಕಗಳನ್ನೂ ಮಾತ್ರ ವಲ್ಲದೇ–ಪಿತೃಗಳು ಮುಂತಾದವರ ಲೋಕಗಳನ್ನೂ ಸೂಚಿಸುತ್ತದೆ.

(ಮ.ಭಾ.)

**ಓಂ ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥೨೧॥**

ಅವರು ಅಂತಹ ವಿಶಾಲವಾದ ಸ್ವರ್ಗಲೋಕವನ್ನು (ಸ್ವರ್ಗಸುಖ ವನ್ನು ) ಅನುಭವಿಸಿ ಅವರ ಪುಣ್ಯವು ಕ್ಷಯಿಸಲಾಗಿ ಪುನಃ ಮರಣಧರ್ಮವುಳ್ಳ ಮನುಷ್ಯಲೋಕಕ್ಕೇ ಬರುತ್ತಾರೆ. ಈ ರೀತಿಯಾಗಿ ವೈದಿಕಕರ್ಮದ ಧರ್ಮವನ್ನು ಆಶ್ರಯಿಸಿದಲ್ಲಿ ಮತ್ತೆ ಮತ್ತೆ ಹೋಗುವಿಕೆ-ಬರುವಿಕೆಗಳನ್ನು ವಿಷಯಾಭಿಲಾಷಿಗಳು ಹೊಂದುತ್ತಾರೆ.

* * *

(ಅನುಪಮೇಯವಾದ ಸ್ವರ್ಗಸುಖವನ್ನು ಅನುಭವಿಸುತ್ತಾ ಅವರು ಅಲ್ಲಿಯೇ ಇದ್ದುಬಿಡುವುದಕ್ಕೆ ಆಗುವುದಿಲ್ಲ. ಪುಣ್ಯವೆಂಬುದೂ ಸಹ ಮಗನ ಯೋಗಕ್ಷೇಮಕ್ಕೆಂದು ತಂದೆಯು ಗಳಿಸಿಟ್ಟುಕೊಟ್ಟ ಕುಡಿಕೆಯ ಹಣದಂತೆ. ವೇದೋಕ್ತವಾದ ಸ್ವರ್ಗಪ್ರಾಪಕವಾದ ಯಜ್ಞವನ್ನು ಮಾಡಿದವನು ಪುಣ್ಯದ ಬುತ್ತಿಯೊಡನೆ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ವಿಶಾಲವಾದ ಎಂದರೆ ಅನೇಕ ಬಗೆಯ ಸುಖಗಳನ್ನು ಅನುಭವಿಸಿಕೊಂಡಿದ್ದು ಬುತ್ತಿರೂಪವಾದ ಪುಣ್ಯವು ತೀರಿದೊಡನೆಯೇ ಭೂಲೋಕಕ್ಕೆ ಮರಳಿ ಬಂದುಬಿಡುತ್ತಾನೆ. ಬಂದೇ ತೀರ ಬೇಕಾಗುತ್ತದೆ. ಪುಣ್ಯವು ತೀರಿದನಂತರ ಸ್ವರ್ಗಲೋಕವು ಅವನನ್ನು ಕೆಳಗಿಳಿಸಿಬಿಡುತ್ತದೆ. ಸಕಾಮನಾಗಿ ಪುಣ್ಯಕರ್ಮಗಳನ್ನು ಮಾಡಿದವನು ಒಲ್ಲೆನೆಂದರೂ ಸ್ವರ್ಗಲೋಕಕ್ಕೆ ಹೋಗಿಯೇ ತೀರಬೇಕಾಗುವುದು. ಪುಣ್ಯವು

ತೀರಿದ ಬಳಿಕ ಇನ್ನಷ್ಟು ಕಾಲ ಅಲ್ಲಿಯೇ ಇರುವೆನೆಂದು ಇಚ್ಛಿಸಿದರೂ ಸಹ ಸಾಧ್ಯವಿಲ್ಲದೇ ಭೂಲೋಕಕ್ಕೇ ಬಂದುಬಿಡಬೇಕಾಗುವುದು. ಆದುದರಿಂದ ಸಕಾಮಕರ್ಮಿಗಳಿಗೆ ಸ್ವಾತಂತ್ರ್ಯವೆಂಬುದೇ ಇಲ್ಲ. ಈ ರೀತಿಯಾಗಿ ವೇದ ಧರ್ಮಾನುಯಾಯಿಗಳಾದ, ಯಜ್ಞ-ಯಾಗಾದಿಗಳನ್ನೇ ಆಶ್ರಯವಾಗಿ ಹೊಂದಿರುವ, ಕಾಮೋಪಭೋಗಗಳಲ್ಲಿಯೇ ಅಭಿಲಾಷೆಯುಳ್ಳ ಮಾನವರು ಹೋಗುವುದು-ಬರುವುದು ; ಬರುವುದು-ಹೋಗುವುದು ಈ ಅವಸ್ಥೆಯನ್ನೇ ಹೊಂದುತ್ತಾರೆ. ಆಗಮ-ನಿರ್ಗಮಗಳೆಂಬ ಸುರುಳಿಯಿಂದ ತಪ್ಪಿಸಿಕೊಳ್ಳಲು ಅವರಿಗೆ ಸಾಧ್ಯವೇ ಆಗುವುದಿಲ್ಲ.

ವೇದಮಾರ್ಗವನ್ನು ಬಿಡಬೇಕೆಂದಾಗಲೀ, ವೇದವಿಹಿತವಾದ ಕರ್ಮಗಳನ್ನು ಮಾಡಬಾರದೆಂದಾಗಲೀ–ಇದರ ಅಭಿಪ್ರಾಯವಲ್ಲ. ಎಲ್ಲ ಕರ್ಮಗಳನ್ನೂ ಫಲಾಭಿಸಂಧಿಯಿಲ್ಲದೇ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಬೇಕೆಂಬುದೇ ಮುಖ್ಯವಾದ ಅಭಿಪ್ರಾಯ.

ಮೂಢರಾದವರು ಯಜ್ಞ-ಯಾಗಾದಿಗಳನ್ನು ಮಾತ್ರವೇ ಮಾಡುತ್ತಾರೆಂದು–ಆತ್ಮಜ್ಞಾನವೇ ಮುಖ್ಯಪ್ರತಿಪಾದನೆಯಾಗಿ ಉಳ್ಳ ಉಪನಿಷತ್ತುಗಳು ಸಾರುತ್ತವೆ. ಯಜ್ಞದ ವಿಷಯವಾಗಿ ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ :

**ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ**
**ಅಷ್ಟಾದಶೋಕ್ತಮವರಂ ಯೇಷು ಕರ್ಮ ।**
**ಏತಚ್ಛ್ರೇಯೋ ಯೇಽಭಿನನ್ದನ್ತಿ ಮೂಢಾ**
**ಜರಾಮೃತ್ಯುಂ ತೇ ಪುನರೇವಾಪಿ ಯಾನ್ತಿ ॥೧-೨-೭॥**

ಯಜ್ಞರೂಪವಾದ ಈ ದೋಣಿಗಳು ದೃಢತ್ವವಿಲ್ಲದುವು. (ಸಂಸಾರ ಸಾಗರವನ್ನು ದಾಟಿಸಲು ಅಸಮರ್ಥವಾದುವುಗಳು.) ಈ ಯಜ್ಞಗಳು ಹದಿನೆಂಟು ಪ್ರಕಾರಗಳಾಗಿ ಹೇಳಲ್ಪಟ್ಟಿವೆ. ಇವುಗಳಲ್ಲಿ ಮಾಡುವ ಕರ್ಮಗಳೂ ಸಹ ಕೆಳಮಟ್ಟದವೇ ಆಗಿವೆ. ಇಂತಹ ಯಜ್ಞಕರ್ಮಗಳನ್ನು ಶ್ರೇಯಸ್ಸಿಗೆ ಕಾರಣವೆಂದು ಯಾರು ಹೊಗಳುತ್ತಾರೆಯೋ–ಅವರು ಮೂಢರೇ ಸರಿ. ಅಂತಹವರು ಜನನ-ಮರಣಗಳ ಸುಳಿಯಲ್ಲಿ ಸಿಕ್ಕಿಬೀಳುತ್ತಾರೆ.)

o o o

**ಕಾಮಕಾಮಾಃ** = ಕಾಮಗಳನ್ನು ಬಯಸುವವರು, ವಿಷಯವಾಸನೆಯುಳ್ಳ ಮನುಷ್ಯರು. ಇವರು ಮತ್ತೆ ಮತ್ತೆ ಗಮನಾಗಮನಗಳನ್ನೇ ಹೊಂದುತ್ತಾರೆ. ಎಲ್ಲಿಯೂ ಇವರಿಗೆ ಸ್ವಾತಂತ್ರ್ಯವಿರುವುದಿಲ್ಲ.

**ಗತಾಗತಂ ಏವ ಲಭನ್ತೇ । ನ ತು ಸ್ವಾತನ್ತ್ರ್ಯಂ ಕ್ವಚಿಲ್ಲಭನ್ತೇ**

(ಶಂ. ಭಾ.)

ವೈದಿಕಕರ್ಮಕಾಂಡದಲ್ಲಿಯೇ ನಿಷ್ಠರಾದವರು ಹಿಂದೆ ಹೇಳಿದಂತೆ ವಿಸ್ತಾರವಾದ ದಿವ್ಯಭೋಗಗಳನ್ನು ಅನುಭವಿಸಿ ಆ ಅನುಭವಕ್ಕೆ ಕಾರಣವಾದ ಪುಣ್ಯವು ಕ್ಷಯಿಸಲು ಮತ್ತೆ ಮನುಷ್ಯಲೋಕವನ್ನು ಪ್ರವೇಶಿಸುತ್ತಾರೆ. ಹೀಗೆ ವೇದಾಂತಸಿದ್ಧಾಂತಜ್ಞಾನವಿಲ್ಲದವರು ಕಾಮ್ಯವಾದ ಸ್ವರ್ಗಾದಿ ಕಾಮನೆಗಳನ್ನು ಹೊಂದಿರುತ್ತಾರೆ. ವೇದಾಂತ (ತ್ರಯ್ಯಂತ) ರಹಿತವಾದ ತ್ರಯೀಧರ್ಮವನ್ನು ಅನುಸರಿಸಿದವರು ಹೀಗೆ ಗತಾಗತಗಳನ್ನು ಹೊಂದುತ್ತಾರೆ. (ರಾ. ಭಾ.)

ಹಾಗಾದರೆ ಏನು ಮಾಡಬೇಕು? ಈ ಜನನ-ಮರಣಗಳಿಂದ ತಪ್ಪಿಸಿಕೊಳ್ಳಲು ಏನು ಉಪಾಯವಿದೆ?–ಎಂಬುದಕ್ಕೆ ಪರಮಾತ್ಮನು ಹೇಳುತ್ತಾನೆ :

**ಓಂ ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ**
**ವಹಾಮ್ಯಹಮ್ ॥೨೨॥**

ಯಾವ ಜನರು ಅನನ್ಯಭಾವದಿಂದ ನನ್ನನ್ನೇ ಚಿಂತಿಸುತ್ತಾ ಚೆನ್ನಾಗಿ ಉಪಾಸನೆಮಾಡುತ್ತಲಿರುವರೋ ಸದಾ ನನ್ನಲ್ಲಿ ಯೋಗನಿಷ್ಠೆಯುಳ್ಳ ಅಂತಹ ಜನರ ಯೋಗಕ್ಷೇಮವನ್ನು ನಾನೇ ವಹಿಸುತ್ತೇನೆ.

* * *

(ಪರಮಾತ್ಮನ ಅಭಯಪ್ರದಾನದ ಶ್ಲೋಕವಿದು. ಮಹತ್ತ್ವಪೂರ್ಣವಾದುದು. ಆದರೆ ಈ ಶ್ಲೋಕದ ಮಹತ್ತ್ವವು ಈಗ ಕರ್ಮಾರಂಭದಲ್ಲಿ ಮಂತ್ರದಂತೆ ಹೇಳುವುದರಲ್ಲಿ ಮಾತ್ರವೇ ಉಳಿದಿದೆ. ಅರ್ಥಾನುಸಂಧಾನದಲ್ಲಿರುವುದಿಲ್ಲ. ಶ್ರೀಕೃಷ್ಣನು ಈ ಹಿಂದೆ ಅರ್ಜುನನಿಗೆ ಜ್ಞಾನಿಯಾಗುವಂತೆ ಉಪದೇಶಮಾಡುವಾಗ ನಿರ್ಯೋಗಕ್ಷೇಮನಾಗು. ಇಲ್ಲದುದನ್ನು ಪಡೆಯುವ ಮತ್ತು ಇದ್ದುದನ್ನು ಕಾಪಾಡುವ ಹೊಣೆಯನ್ನು ಭಗವಂತನಿಗೇ ಅರ್ಪಿಸಿ ನಿಶ್ಚಿಂತನಾಗಿರು.

**ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

೨-೪೫

ಎಂದು ಹೇಳಿದ್ದನು. ನಿತ್ಯಸತ್ತ್ವಸ್ಥನಾದ ಅಥವಾ ಈ ಶ್ಲೋಕದಲ್ಲಿ ಹೇಳಿರುವಂತೆ ನಿತ್ಯಾಭಿಯುಕ್ತನಾದ ಯೋಗಿಗೆ ಯೋಗಕ್ಷೇಮವು ಹೇಗೆ ನಡೆಯುತ್ತದೆ–ಎಂಬುದಕ್ಕೆ ಈ ಶ್ಲೋಕದಲ್ಲಿ ಶ್ರೀಕೃಷ್ಣನು ಉತ್ತರಹೇಳುತ್ತಾನೆ.

**ಅನನ್ಯಾಃ**= ವಾಸುದೇವನನ್ನು ಬಿಟ್ಟು ಬೇರೊಬ್ಬ ದೇವನಿದ್ದಾನೆ–ಎಂಬ ವಿಷಯವೇ ಮನಸ್ಸಿಗೆ ಬರಬಾರದು ; ಎಲ್ಲವೂ ವಾಸುದೇವಮಯವಾಗಿಯೇ ಕಾಣಬೇಕು ; ಎಲ್ಲ ದೇವರಲ್ಲೂ ವಾಸುದೇವನೊಬ್ಬನ ಹೊರತಾಗಿ ಬೇರೊಬ್ಬ ದೇವತೆಯನ್ನು ಕಾಣಬಾರದು–ಈ ರೀತಿಯಾಗಿ ಯಾವಾಗಲೂ ನನ್ನನ್ನೇ ಚಿಂತಿಸುತ್ತಿರಬೇಕು–ಎನ್ನುತ್ತಾನೆ ಶ್ರೀಕೃಷ್ಣ. ಕಣಜವು ಒಮ್ಮೆ ಅವರೇಹುಳುವನ್ನು ಕುಟುಕಿ ಹೋಗಿಬಿಟ್ಟರೆ ತಾನೂ ಕಣಜವೇ ಆಗುವವರೆಗೂ ಆ ಹುಳುವು ಕಣಜದ ಧ್ಯಾನವನ್ನು ನಿಲ್ಲಿಸುವುದೇ ಇಲ್ಲವಂತೆ. ಈ ಪ್ರಕಾರ ಶ್ರೀಕೃಷ್ಣನನ್ನು ಧ್ಯಾನಮಾಡಬೇಕು. ಈ ರೀತಿಯಲ್ಲಿ ಯಾವ ಜನರು ನನ್ನನ್ನು ಅನವರತವಾಗಿ ಧ್ಯಾನಮಾಡುತ್ತಿರುವರೋ–ಅಂತಹ ನಿತ್ಯಾಭಿಯುಕ್ತರಾದ ಭಕ್ತರ ಯೋಗ-ಕ್ಷೇಮವನ್ನು ನಾನೇ ವಹಿಸುತ್ತೇನೆ–ಎಂದು ಶ್ರೀಕೃಷ್ಣನು ಅಭಯಸಂದೇಶವನ್ನು ಉದ್ಘೋಷಿಸುತ್ತಾನೆ.

**ಅಭಿಯುಕ್ತ**–ಎಂದರೆ ತತ್ಪರ. **ನಿತ್ಯಾಭಿಯುಕ್ತ** ಎಂದರೆ ನಿತ್ಯವೂ ವಾಸುದೇವನಲ್ಲಿಯೇ ತತ್ಪರನಾಗಿರತಕ್ಕವನು. **ಯೋಗಕ್ಷೇಮ** ಎಂದರೆ ಹಿಂದೆ ಹೇಳಿರುವಂತೆ–**ಅಲಬ್ಧಸ್ಯ ಲಾಭಃ ಯೋಗಃ । ಲಬ್ಧಸ್ಯ ಪರಿಪಾಲನಂ ಕ್ಷೇಮಃ** –ಸಿಕ್ಕದೇ ಇರುವುದು ಸಿಕ್ಕುವುದು ಯೋಗ. ಸಿಕ್ಕಿದುದನ್ನು ಸಂರಕ್ಷಿಸುವುದೇ ಕ್ಷೇಮ. ಅನನ್ಯಚಿಂತಕರಾದ ತನ್ನ ಭಕ್ತರಿಗೆ ಆವಶ್ಯಕವಾದ ಲಾಭವನ್ನೂ, ಹಾಗೆ ಒದಗಿಸಿದ್ದುದರ ರಕ್ಷಣೆಯನ್ನೂ ಅವನೇ ಮಾಡುತ್ತಾನೆ.

'ಭಕ್ತರಿಗೆ ಬೇಕಾದುದು ಭಗವತ್ಪ್ರಾಪ್ತಿ' ಭಗವತ್ಪ್ರಾಪ್ತಿಯೇ ಯೋಗ. ಅದು ಅಚ್ಚಳಿಯದಂತೆ ಸಂರಕ್ಷಿಸುವುದೇ ಕ್ಷೇಮ. ಭಗವಂತನು ಭಕ್ತರಿಗೆ ಇದನ್ನು ಅನುಗ್ರಹಿಸುತ್ತಾನೆ.

ಪರಮಾತ್ಮನು ಭಕ್ತರ ಯೋಗಕ್ಷೇಮವನ್ನು ಮಾತ್ರವೇ ನೋಡಿಕೊಳ್ಳು

ತ್ತಾನೆಯೋ? ಇತರರ ಯೋಗಕ್ಷೇಮವೂ ಅವನಿಗೆ ಸೇರಿದುದಲ್ಲವೇ?–ಎಂದರೆ : ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಿಗೆ ಅವನೇ ಕಾರಣನೆಂಬುದು ನಿಜ. ಅದು ಅವನ ಇಚ್ಛೆಯಂತೆ ತಾನೇ ತಾನಾಗಿ ನಡೆಯುತ್ತಿರುತ್ತದೆ. ಅವನ ಯೋಗಮಾಯೆಯಿಂದಾಗಿ ಪ್ರತಿಯೊಬ್ಬನೂ ತನ್ನ ಸುಖ-ದುಃಖಗಳಿಗೆ ತಾನೇ ಕಾರಣನೆಂದು ಭಾವಿಸಿರುತ್ತಾನೆ. ಸುಖಪ್ರಾಪ್ತಿಗೂ ದುಃಖನಿವಾರಣೆಗೂ ಪ್ರಯತ್ನವನ್ನು ನಡೆಸುತ್ತಿರುತ್ತಾನೆ. ಅವನ ಪ್ರಯತ್ನದಿಂದ ಸುಖವೂ ಸಿಕ್ಕಬಹುದು ; ದುಃಖದ ನಿವಾರಣೆಯೂ ಆಗಬಹುದು. ಅಂತಹವನ ಗೋಜಿಗೆ ಪರಮಾತ್ಮನು ಹೋಗುವುದಿಲ್ಲ. ಮಗುವು ತಾಯಿಯ ಮೇಲೆ ಭರವಸೆಯನ್ನಿಟ್ಟಿರುವವರೆಗೂ ಕಾಲ-ಕಾಲಕ್ಕೆ ಬೇಕಾಗುವುದನ್ನೆಲ್ಲಾ ಅವಳೇ ನಿರ್ವಹಿಸುತ್ತಿರುತ್ತಾಳೆ. ಮಗುವು ಆಹಾರವನ್ನು ತಾನಾಗಿಯೇ ತೆಗೆದುಕೊಳ್ಳಲು ಪ್ರಾರಂಭಿಸಿದ ಮೇಲೆ ತಾಯಿಯ ಹೊಣೆಯು ಕಡಿಮೆಯಾಗುತ್ತದೆ. ರೆಕ್ಕೆಗಳು ಹುಟ್ಟುವವರೆಗೂ ತಾಯಿಹಕ್ಕಿಯು ಪುಟ್ಟ ಹಕ್ಕಿಗೆ ಕಾಲ-ಕಾಲಕ್ಕೆ ಆಹಾರವನ್ನು ತಂದುಕೊಡುತ್ತಿರುತ್ತದೆ. ರೆಕ್ಕೆಯು ಬಲಿಯಿತೆಂದರೆ ತಾಯಿಹಕ್ಕಿಯು ಆಹಾರವನ್ನು ತಂದುಕೊಡುವುದನ್ನು ನಿಲ್ಲಿಸುತ್ತದೆ.

'ಪರಮಾತ್ಮನೇ ತಾಯಿ-ತಂದೆ ; ಸರ್ವಸ್ವವೂ ಅವನೇ ; ನನ್ನ ಯೋಗಕ್ಷೇಮವನ್ನು ಅವನೇ ನೋಡಿಕೊಳ್ಳುತ್ತಾನೆ'–ಎಂದು ದೃಢವಾಗಿ ನಂಬಿ ಅವನ ಉಪಾಸನೆಯಲ್ಲಿ ಸರ್ವದಾ ಕಾಲಕಳೆಯುತ್ತಿದ್ದರೆ ಪರಮಾತ್ಮನಿಗೆ ತನ್ನ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅನಿವಾರ್ಯವೇ ಆಗುತ್ತದೆ. ಅತಿಮಾನುಷವಾದ ರೀತಿಯಲ್ಲಿ ; ಮಾನವನ ಬುದ್ಧಿಗೆ ಎಟುಕದ ರೀತಿಯಲ್ಲಿ ಭಕ್ತನ ಯೋಗಕ್ಷೇಮವನ್ನು ಅವನು ನೋಡಿಕೊಳ್ಳುತ್ತಾನೆ. ಇದು ಸಾರ್ವಕಾಲಿಕಸತ್ಯ. ಆದರೆ ಅನುಭವೈಕವೇದ್ಯ.

ಹಾಗಾದರೆ ಇಂತಹ ಉಪಾಸಕನು ಅಕರ್ಮಣ್ಯನಾಗಿರಬೇಕು–ಎಂಬ ನಿಯಮವೇನೂ ಇಲ್ಲ. ಅವನು ಭಕ್ತಿಪ್ರಧಾನವಾಗಿ ಭಗವದಾಜ್ಞಾರೂಪವಾದ ಕರ್ಮಗಳನ್ನು ಮಾಡುತ್ತಿರುವಾಗ ಬರುವ ಫಲವೂ ಪರಮಾತ್ಮನ ಅನುಗ್ರಹದಿಂದಲೇ ಬಂದುದು ; ತನ್ನ ಕರ್ಮದ ಪ್ರಭಾವದಿಂದಲ್ಲ. ಏಕೆಂದರೆ : ತನ್ನ ಸರ್ವೇಂದ್ರಿಯಗಳು ಮತ್ತು ಬುದ್ಧಿ ಎಲ್ಲಕ್ಕೂ ನಿಯಾಮಕನು ಆ ಸರ್ವೇಶ್ವರನೇ ಎಂಬ ದೃಢವಿಶ್ವಾಸವು ಅವನಿಗಿರುತ್ತದೆ. ತನ್ನ ಯೋಗಕ್ಷೇಮದ

ಗೊಡವೆಗೆ ತಲೆಯನ್ನು ಕೆಡಿಸಿಕೊಳ್ಳದೇ ಭಗವದ್ಧ್ಯಾನ-ಕೀರ್ತನ-ಸೇವಾ ರಾಧನಗಳಲ್ಲಿಯೇ ಅವನು ಮಗ್ನನಾಗಿರುತ್ತಾನೆ. ಅವನ ಎಲ್ಲ ವ್ಯಾಪಾರಗಳೂ ಭಗವದಾರಾಧನೆಯೇ. ಅವನಿಗೆ ಬರುವ ಲಾಭವೆಲ್ಲವೂ ಭಗವದನುಗ್ರಹ ರೂಪವೇ. ಈ ಯೋಗಕ್ಷೇಮವು ಲೌಕಿಕವಾಗಿರಲಿ ಅಥವಾ ಪರಮಾರ್ಥ ವಸ್ತುವಿನ ಲಾಭ ಅಥವಾ ರಕ್ಷಣಾರೂಪವಾಗಿರಲಿ–ಯಾವ ಬಗೆಯ ಯೋಗ ಕ್ಷೇಮವನ್ನು ತನ್ನ ಯಾವ ಭಕ್ತನಿಗೆ ಹೇಗೆ ಅನುಗ್ರಹಿಸಬೇಕು–ಎಂಬುದು ಭಗವಂತನ ಸಂಕಲ್ಪಕ್ಕೆ ಸೇರಿದ್ದು. ಅದರ ಚಿಂತೆಯನ್ನು ಅನನ್ಯಭಕ್ತನು ಮಾಡುವುದಿಲ್ಲ.)

O O O

ಜ್ಞಾನಿಯು ಭಗವಂತನಿಗೆ ಆತ್ಮನಾಗಿಬಿಟ್ಟಿದ್ದಾನೆ. ಆತ್ಮಭೂತ ಮತ್ತು ಪ್ರಿಯತಮ. ಹಾಗಾದರೆ ಭಗವಂತನು ಇತರ ಭಕ್ತರ ಯೋಗಕ್ಷೇಮವನ್ನು ನಡೆಸುವುದಿಲ್ಲವೇ? ಎಂದರೆ ನಡೆಸುತ್ತಾನೆ. ಆದರೆ ವಿಶೇಷವೇನೆಂದರೆ ಉಳಿದ ಭಕ್ತರು ತಾವೂ ಕೂಡ ತಮಗೋಸ್ಕರ ಯೋಗ-ಕ್ಷೇಮಗಳ ಕೆಲಸವನ್ನು ಮಾಡುತ್ತಾರೆ. ಆದರೆ ಇಲ್ಲಿ ಹೇಳಿರುವ ಅನನ್ಯದರ್ಶಿಗಳಾದರೋ ತಮಗೋಸ್ಕರ ಯೋಗ-ಕ್ಷೇಮಗಳ ಪ್ರಯತ್ನವನ್ನು ಮಾಡುವುದಿಲ್ಲ. ಅವರು ಜೀವನದಲ್ಲಾಗಲೀ ಅಥವಾ ಮರಣದಲ್ಲಾಗಲೀ ತಮ್ಮ ಆಶೆಯನ್ನು ಇಟ್ಟುಕೊಂಡಿರುವುದಿಲ್ಲ. ಭಗವಂತನನ್ನು ಮಾತ್ರ ಅವಲಂಬಿಸಿರುತ್ತಾರೆ. ಆದುದರಿಂದ **ಅನನ್ಯಾಃ ಚಿನ್ತಯನ್ತಃ**–ನನ್ನಿಂದ ಬೇರ್ಪಡದೇ ಪರಮದೇವ ನಾರಾಯಣನಾದ ನನ್ನನ್ನೇ ಆತ್ಮರೂಪವೆಂದು ಚಿಂತಿಸುತ್ತಾ ಉಪಾಸನೆ ಮಾಡುವ ಸಂನ್ಯಾಸಿಗಳು ಯಾರುಂಟೋ–ಅಂತಹ ಪರಮಾರ್ಥದರ್ಶಿಗಳ ಯೋಗಕ್ಷೇಮವನ್ನು ಸ್ವಯಂ ಭಗವಂತನೇ ನೋಡಿಕೊಳ್ಳುತ್ತಾನೆ.

ಅತಃ ಭಗವಾನೇವ ತೇಷಾಂ ಯೋಗಕ್ಷೇಮಂ ವಹತಿ. ಯೋಗವೆಂದರೆ ಅಪ್ರಾಪ್ಯವಸ್ತುವಿನ ಪ್ರಾಪ್ತಿ. ಕ್ಷೇಮವೆಂದರೆ ಅದರ ರಕ್ಷಣೆ.

(ಶಂ. ಭಾ.)

**ಅನನ್ಯಾಃ ಉಪಾಸತೇ** =ಬೇರೆ ಯಾವ ಪ್ರಯೋಜನವೂ ಇಲ್ಲದೇ, ನನ್ನ ಚಿಂತನೆಯನ್ನು ಬಿಟ್ಟರೆ ಆತ್ಮಧಾರಣೆಯೇ ಇಲ್ಲವಾದುದರಿಂದ ನನ್ನ ಚಿಂತನೆಯನ್ನೇ ಪ್ರಯೋಜನವನ್ನಾಗಿ ಭಾವಿಸಿ, ನನ್ನನ್ನೇ ಚಿಂತಿಸುತ್ತಾ

ಯಾವ ಮಹಾತ್ಮರು ಪರ್ಯುಪಾಸತೇ–ಸರ್ವಕಲ್ಯಾಣಗುಣಪರಿಪೂರ್ಣನೂ, ಸರ್ವವಿಭೂತಿಯುಕ್ತನೂ ಆದ ನನ್ನನ್ನು ಯಾವ ಕುಂದು-ಕೊರತೆಗಳೂ ಇಲ್ಲದೇ ಉಪಾಸನೆಮಾಡುತ್ತಾರೆಯೋ ನನ್ನಲ್ಲಿ ನಿತ್ಯಾಭಿಯೋಗವನ್ನು ಬಯಸುವ ಅಂತಹ ಮಹಾತ್ಮರ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ. ಯೋಗವೆಂದರೆ ಅವರಿಗೆ ನನ್ನ ಲಾಭ ; ನನ್ನ ಪ್ರಾಪ್ತಿ. ಕ್ಷೇಮವೆಂದರೆ ಇಲ್ಲಿಂದ (ನನ್ನ ಬಳಿಯಿಂದ) ಪುನರಾವೃತ್ತಿರಹಿತವಾದ ಮೋಕ್ಷರೂಪವಾದ ಕ್ಷೇಮ.

**ಅಹಂ ಮತ್ಪ್ರಾಪ್ತಿಲಕ್ಷಣಂ ಭೋಗಂ ಅಪುನರಾವೃತ್ತಿರೂಪಂ ಕ್ಷೇಮಂ ಚ ವಹಾಮಿ** (ರಾ. ಭಾ.)

**ಅನನ್ಯಾಃ ಚಿನ್ತಯನ್ತಃ** = ಬೇರೆ ಯಾವುದನ್ನೂ ಚಿಂತಿಸದೇ ಭಗವಂತ ನನ್ನೇ ಚಿಂತಿಸುತ್ತಾ.

**ಸರ್ವಂ ಪರಿತ್ಯಜ್ಯ ಮನೋಗತಂ ಯತ್**
**ವಿನಾ ದೇವಂ ಕೇವಲಂ ಶುದ್ಧಮಾದ್ಯಮ್ ।**
**ಯೇ ಚಿನ್ತಯನ್ತೀಹ ತ ಏವ ಧೀರಾಃ**
**ಅನನ್ಯಾಸ್ತೇ ದೇವಮೇವಾವಿಶನ್ತಿ ॥** (ಗೌತಮಖಿಲಮಂತ್ರ)

**ನಿತ್ಯಾಭಿಯುಕ್ತಾನಾಂ**=ಸದಾಕಾಲದಲ್ಲಿಯೂ ಎಲ್ಲ ಕಡೆಯಿಂದಲೂ ನನ್ನಲ್ಲಿ ಯುಕ್ತರಾಗಿರುವ ಅಥವಾ ಶರೀರ, ಇಂದ್ರಿಯ, ಮನಸ್ಸು–ಇವುಗಳೆಲ್ಲದರಿಂದಲೂ ನನ್ನನ್ನೇ ಹೊಂದಿರುವ. (ಮ. ಭಾ.)

**ಓಂ ಯೇಽಪ್ಯನ್ಯದೇವತಾ ಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥೨೩॥**

ಕೌಂತೇಯ! ಯಾರು ಇತರದೇವತೆಗಳ ಭಕ್ತರಾಗಿ ಆ ದೇವತೆಗಳನ್ನು ಶ್ರದ್ಧೆಯಿಂದ ಕೂಡಿದವರಾಗಿ ಪೂಜಿಸುತ್ತಾರೆಯೋ–ಅವರೂ ನನ್ನನ್ನೇ ಅವಿಧಿಪೂರ್ವಕವಾಗಿ ಪೂಜಿಸುತ್ತಾರೆ.

* * *

(ನನ್ನಿಂದಲೇ ಪ್ರಾದುರ್ಭಾವಹೊಂದಿರುವ ಇಂದ್ರಾದಿ ದೇವತೆಗಳ ಭಕ್ತರೂ ಸಹ ಶ್ರದ್ಧಾಯುಕ್ತರಾಗಿ ಆ ದೇವತೆಗಳನ್ನು ಪೂಜಿಸುತ್ತಾರೆ. ಅವರು ಹಾಗೆ ಮಾಡುವುದರಿಂದ ಅವರೂ ಸಹ ನನ್ನನ್ನೇ ಪೂಜಿಸಿದಂತಾಗುತ್ತದೆ.

ಆದುದರಿಂದಲೇ ನಾನು ಅವರು ಅಪೇಕ್ಷಿಸುವ ಕಾಮನೆಗಳನ್ನು ನನ್ನ ಅಂಶ ರೂಪರಾಗಿರುವ ದೇವತೆಗಳ ಮೂಲಕ ಈಡೇರಿಸುತ್ತೇನೆ. ಯದ್ಯಪಿ ದೇವತೆಗಳ ಮೂಲಕವಾಗಿ ಅವರು ನನ್ನನ್ನೇ ಪೂಜಿಸಿದರೂ ಸಹ ದೇವದೇವನಾದ ವಾಸುದೇವನನ್ನು ತನ್ನ ಆರಾಧ್ಯದೇವತೆಯ ಮೂಲಕವಾಗಿ ಪೂಜಿಸುತ್ತಿದ್ದೇವೆಂಬ ಭಾವನೆಯು ಆ ಅನ್ಯದೇವತಾಭಕ್ತರಿಗೆ ಇರುವುದಿಲ್ಲ. ತಮ್ಮ ಅಜ್ಞಾನದಿಂದಾಗಿ ಅವರು ಹೀಗೆ ಮಾಡುತ್ತಾರೆ. ಇದೇ ಅವಿಧಿ ಅಥವಾ ಅಜ್ಞಾನ. ಹಣ್ಣು-ಹೂವುಗಳನ್ನು ಪಡೆದುಕೊಳ್ಳಲು ಬೇರಿಗೆ ನೀರೆರೆಯುತ್ತಾರೆ. ಅದರಂತೆ ಯಾವ ಫಲವೇ ಬೇಕಾದರೂ ಸರ್ವದೇವಮೂಲನಾದ ನನ್ನನ್ನೇ ಆರಾಧಿಸಬೇಕು. ಆದರೆ ಅವರು ತಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವವನು ಸನಾತನನಾದ ವಾಸುದೇವನೆಂದು ಭಾವಿಸುವುದಿಲ್ಲ. ವಾಸುದೇವನೇ ಸರ್ವಸ್ವವೂ–ಎಂದು ಭಾವಿಸಿ ಪೂಜಿಸಿದರೆ ಸಕಲದೇವತೆಗಳ ಪೂಜೆಯೂ ಆದಂತಾಯಿತೆಂದು ಅವರು ಭಾವಿಸುವುದಿಲ್ಲ.

ರಂತಿದೇವನು ತನ್ನ ಬಳಿಗೆ ಬಂದ ಅತಿಥಿ-ಅಭ್ಯಾಗತರನ್ನು ಸಾಕ್ಷಾತ್ ಪರಮಾತ್ಮಸ್ವರೂಪರೆಂದೇ ಭಾವಿಸಿ ನಿಷ್ಕಾಮಭಾವನೆಯಿಂದ ಅವರನ್ನು ಆದರಿಸಿ ಉಪಚರಿಸುತ್ತಿದ್ದನು. ಇದರಿಂದವನು ಭಗವಂತನನ್ನೇ ಪಡೆದುಕೊಂಡನು. ಈಗಲೂ ಸಹ ಈ ನಾಗರಿಕತೆಯೇನೋ ನಮ್ಮಲ್ಲಿದೆ. 'ಶ್ರೀಕೃಷ್ಣಾರ್ಪಣಮಸ್ತು' ಎಂದು ಎಲ್ಲ ಶುಭಕಾರ್ಯಗಳ ಕಡೆಯಲ್ಲೂ ಹೇಳುತ್ತೇವೆ. ಯಾವ ದೇವರಿಗೆ ನಮಸ್ಕಾರಮಾಡಿದರೂ **ಯಾನಿ ಕಾನಿ ಚ** ಹೇಳಿ, **ನಾರಾಯಣಾಯೇತಿ ಸಮರ್ಪಯಾಮಿ** ಎನ್ನುತ್ತೇವೆ. **ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ । ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥** ಎಂಬ ಉಪನಿಷನ್ಮಂತ್ರವನ್ನೂ ಸಹ ಸಂಧ್ಯಾವಂದನಾದಿಗಳಲ್ಲಿ ಹೇಳುತ್ತೇವೆ. ಆದರೆ ಇದರ ಹಿಂದೆ ಆ ಭಾವವಿದ್ದರೆ ಉದ್ಧಾರವಾಗುತ್ತೇವೆ. ಇಲ್ಲದಿದ್ದರೆ ಅದೊಂದು ಗಿಳಿಪಾಠದ ಪರಿಣಾಮವೇ ಆಗುತ್ತದೆ.)

o o o

ಶ್ರದ್ಧಾ = ಆಸ್ತಿಕ್ಯಬುದ್ಧಿ. ಅವಿಧಿಪೂರ್ವಕಂ = ಅಜ್ಞಾನಪೂರ್ವಕವಾಗಿ.

(ಶಂ. ಭಾ.)

ಇಂದ್ರಾದಿ ದೇವತೆಗಳ ಭಕ್ತರಾಗಿ ವೈದಿಕಕರ್ಮಕಾಂಡದಲ್ಲಿ ನಿಷ್ಠೆಯುಳ್ಳವರಾಗಿ, ಇಂದ್ರಾದಿಗಳನ್ನು ಪೂಜಿಸುವವರೂ ಕೂಡ ಹಿಂದೆ ಹೇಳಿದ ನ್ಯಾಯದಂತೆ ವಸ್ತುತಃ ನನ್ನನ್ನೇ ಪೂಜಿಸುತ್ತಾರೆ. ಏಕೆಂದರೆ : ಎಲ್ಲವೂ ನನ್ನ ಶರೀರ. ನಾನೇ ಎಲ್ಲಕ್ಕೂ ಆತ್ಮ. ಅಲ್ಲದೇ ಇಂದ್ರಾದಿ ಶಬ್ದಗಳೂ ನನಗೇ ವಾಚಕವಾಗಿವೆ. ಆದರೆ ಅವರು ಅವಿಧಿಪೂರ್ವಕವಾಗಿ ನನ್ನನ್ನು ಪೂಜಿಸುತ್ತಾರೆ. ವೇದಾಂತವಾಕ್ಯಗಳು ಇಂದ್ರಾದಿದೇವತೆಗಳಿಗೆ ಹೇಳಿರುವ ಆರಾಧ್ಯತೆಗೆ ಪರಮಾತ್ಮನಲ್ಲೇ ಅನ್ವಯ–ಎಂಬುದನ್ನು ತಿಳಿಯದೇ ಯಾಗಮಾಡುತ್ತಾರೆ. ವೇದಾಂತಗಳ ಪ್ರಕಾರ ಭಗವಂತನಿಗೆ ಶರೀರವಾಗಿರುವ ಇಂದ್ರಾದಿದೇವತೆಗಳ ಆರಾಧನೆಯು ಅವರನ್ನು ಸೃಷ್ಟಿಸಿರುವ ಮತ್ತು ಅವರಿಗೆ ಆತ್ಮಭೂತನಾಗಿರುವ ಪರಮಪುರುಷನ ಆರಾಧನೆಯೇ ಆಗಿದೆ. ಅವನು ಆತ್ಮನಾಗಿರುವುದರಿಂದಲೇ ಅವನ ಶರೀರವಾಗಿರುವ ಇಂದ್ರಾದಿಗಳಿಂದ ಕರ್ಮಗಳು ಫಲಗಳನ್ನು ಪಡೆಯುತ್ತವೆ.

**ಚತುರ್ಹೋತಾರೋ ಯತ್ರ ಸಂಪದಂ ಗಚ್ಛನ್ತಿ ದೇವೈಃ** (ರಾ. ಭಾ.)

ಹಾಗಾದರೆ ಅಹಂ ಕ್ರತುಃ ನಾನೇ ಕ್ರತುವು, ನಾನೇ ಯಜ್ಞವು–ಎಂದು ಮೊದಲಾಗಿ ಭಗವಂತನು ಹೇಳಿದ್ದು ಅಸತ್ಯವೇ?–ಎಂದರೆ ಅಲ್ಲ. ಉಳಿದ ದೇವತೆಗಳನ್ನು ಪೂಜಿಸುವವರೂ ಫಲವನ್ನು ಪಡೆಯುವುದು ಸರ್ವಪ್ರಭುವಾದ ಭಗವಂತನಿಂದಲೇ. (ಮ. ಭಾ.)

ಶ್ರೀಕೃಷ್ಣನು ಎಲ್ಲ ದೇವತೆಗಳೂ ತಾನೇ ಎಂಬುದನ್ನು ಪುನಃ ಪ್ರತಿಪಾದಿಸುತ್ತಾನೆ.

**ಓಂ ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥೨೪॥**

ಎಲ್ಲ ಯಜ್ಞಗಳಿಗೂ ಭೋಕ್ತೃವೂ, ಪ್ರಭುವೂ ನಾನೇ ಅಲ್ಲವೇ? ಆದರೆ ಅವರು ತತ್ತ್ವದಿಂದ ನನ್ನನ್ನು ತಿಳಿಯರು. ಆದುದರಿಂದ ಅವರು ಜಾರಿಬೀಳುವರು.

* * *

(ನಾನು ಎಲ್ಲ ಯಜ್ಞಗಳ ಭೋಕ್ತೃವಾಗಿದ್ದೇನೆ. ಎಲ್ಲ ಯಜ್ಞಗಳಿಂದಲೂ ನನ್ನನ್ನೇ ಆರಾಧಿಸುತ್ತಾರೆ. ಇಂದ್ರಾಯ ಸ್ವಾಹಾ–ಎಂದರೂ

ಆ ಹವಿಸ್ಸು ನನ್ನನ್ನೇ ಸೇರುತ್ತದೆ ; **ಅಗ್ನಯೇ ಸ್ವಾಹಾ**–ಎಂದರೂ ಅದು ನನ್ನನ್ನೇ ಸೇರುತ್ತದೆ. ಎಲ್ಲ ಯಜ್ಞಗಳಿಗೂ ನಾನೇ ಪ್ರಭುವು ; ಸ್ವಾಮಿಯು.

**ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ** (ವಿಷ್ಣುಸಹಸ್ರನಾಮ) ಯಜ್ಞವನ್ನು ಮಾಡುವವನೂ ಅವನೇ ; ಧರಿಸಿರುವವನೂ ಅವನೇ. ಆದುದರಿಂದಲೇ ಅವನು ಯಜ್ಞ. ಯಜ್ಞಭೋಕ್ತೃವೂ, ಯಜ್ಞಸಾಧನನೂ ಅವನೇ ಆಗಿದ್ದಾನೆ. ಆದರೆ ಇಂದ್ರನೂ ಅವನೇ, ಅಗ್ನಿಯೂ ಅವನೇ ಎಂಬ ತತ್ತ್ವವನ್ನವರು ತಿಳಿದವರಾಗಿಲ್ಲ. ಅವಿಧಿಪೂರ್ವಕವಾಗಿ ನನ್ನನ್ನು ಪೂಜಿಸು ತ್ತಾರೆ. ಆದುದರಿಂದಲೇ ಅವರು ಜಾರಿ ಕೆಳಗೆ ಬೀಳುತ್ತಾರೆ. ಆಗಮ-ನಿರ್ಗಮಚಕ್ರದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ ಅವರಿಗೆ ಪುನರಾವೃತ್ತಿರಹಿತವಾದ ಮಹಾಫಲವು ಸಿಕ್ಕುವುದಿಲ್ಲವೇ ಹೊರತು ಅವರ ಕರ್ಮಕ್ಕೆ ತಕ್ಕ ಒಳ್ಳೆಯ ಫಲವಿದ್ದೇ ಇದೆ.)

o o o

ಸರ್ವಯಜ್ಞಾನಾಂ= ಶ್ರೌತ ಮತ್ತು ಸ್ಮಾರ್ತಗಳಾದ ಎಲ್ಲ ಯಜ್ಞಗಳೂ ನಾನೇ. ನಾನೇ ಎಲ್ಲ ಯಜ್ಞಗಳಿಗೂ ಸ್ವಾಮಿಯು. ಅಧಿಯಜ್ಞೋಽಹ-ಮೇವಾತ್ರ । (ಶಂ. ಭಾ.)

**ತ್ರೈವಿದ್ಯರು** ತಾವು ಮಾಡುವ ಕರ್ಮಗಳು ಇಂದ್ರಾದಿ ಶರೀರನಾದ ಪರಮಪುರುಷನ ಆರಾಧನಾರೂಪವಾದುವು–ಎಂದು ತಿಳಿದಿಲ್ಲವಾದುದ ರಿಂದ ಅವರಿಗೆ ದೊರೆಯುವುದು ಪರಿಮಿತವಾದ ಫಲ ಮಾತ್ರ. ಮತ್ತು ಭಾವನೆಯು ಅವರಿಗೆ ಸ್ವಾಭಾವಿಕವಾಗುತ್ತದೆ.

**ಪ್ರಭುರೇವ ಚ** = ಆಯಾ ಯಜ್ಞಗಳಲ್ಲಿ ಫಲವನ್ನು ದಯಪಾಲಿಸು ವವನೂ ನಾನೇ. (ರಾ. ಭಾ.)

**ಅನ್ಯದೇವತಾಯಾಜಿಗಳ** ಯಜ್ಞವು ಅವಿಧಿಪೂರ್ವಕವಾಗುವುದಕ್ಕೆ ಅವರ ಭಗವದಜ್ಞಾನವೇ ಕಾರಣ ಎಂದು ಇಲ್ಲಿ ನಿರೂಪಿಸಿದೆ. (ಮ. ಭಾ.)

**ಓಂ ಯಾನ್ತಿ ದೇವವ್ರತಾ ದೇವಾನ್ಪಿತೄನ್ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ**
**ಮಾಮ್ ॥**

ದೇವವ್ರತರಾದವರು ದೇವತೆಗಳನ್ನು ಸೇರುತ್ತಾರೆ. ಪಿತೃವ್ರತರಾದವರು ಪಿತೃಗಳನ್ನು ಸೇರುವರು. ಭೂತಗಳನ್ನು ಪೂಜಿಸುವವರು ಭೂತಗಳನ್ನೇ ಸೇರುತ್ತಾರೆ ಮತ್ತು ನನ್ನನ್ನು ಕುರಿತು ಯಾಗಮಾಡುವವರು ನನ್ನನ್ನೇ ಸೇರುತ್ತಾರೆ.

* * *

(ದೇವತೆಗಳನ್ನು ನಿಯಮದಿಂದಲೂ ಭಕ್ತಿಯಿಂದಲೂ ಯಾರು ಆರಾಧಿಸುತ್ತಾರೆಯೋ ಅವರು ದೇವವ್ರತರು. ಭಕ್ತಿ-ಶ್ರದ್ಧೆಗಳಿಂದ ಯಾವ ದೇವತೆಯನ್ನೇ ಆರಾಧಿಸಿದರೂ ಸಹ ಆಯಾ ದೇವತಾನುಗ್ರಹದಿಂದ ಆಯಾ ದೇವತೆಗಳಿಗೆ ಸಂಬಂಧಿಸಿದ ಪುಣ್ಯಲೋಕಗಳನ್ನೇ ಭಕ್ತನಾದವನು ಹೊಂದುತ್ತಾನೆ. ಶ್ರಾದ್ಧ-ತರ್ಪಣಾದಿಗಳಿಂದ ಪಿತೃಗಳನ್ನು ಪೂಜಿಸುವವರು ಪಿತೃದೇವತೆಗಳ ಅನುಗ್ರಹದಿಂದ ಅಗ್ನಿಷ್ವಾತ್ತರೇ ಮೊದಲಾದ ಪಿತೃದೇವತೆಗಳನ್ನು ಸೇರುವರು. ಭೂತಗಣಗಳನ್ನು ಎಂದರೆ ವಿನಾಯಕನೇ ಮುಂತಾದ ಗಣದೇವತೆಗಳನ್ನು ಪೂಜಿಸುವವರು ಆಯಾ ಭೂತಗಣಗಳನ್ನೇ ಸೇರುತ್ತಾರೆ. ಯಜ್ಞ, ಜಪ-ತಪ-ಕೀರ್ತನಾದಿಗಳಿಂದ ನನ್ನನ್ನು ಪೂಜಿಸುವವರು ನನ್ನನ್ನೇ ಹೊಂದುತ್ತಾರೆ.

ಆದರೆ ಪರಮಾತ್ಮನನ್ನು ಹೊಂದಲು ಬಯಸುವವರು ದೇವತೋದ್ದೇಶಕಗಳಾದ ಯಜ್ಞಗಳನ್ನೂ, ಪಿತೃಗಳ ತೃಪ್ತಿಗಾಗಿ ಮಾಡುವ ಶ್ರಾದ್ಧಾದಿಗಳನ್ನೂ ಬಿಟ್ಟುಬಿಡಬೇಕೆ? ಎಂದರೆ ಹಾಗಲ್ಲ. ಪಂಚಮಹಾಯಜ್ಞಗಳೂ, ಶ್ರಾದ್ಧ-ತರ್ಪಣಾದಿಗಳೂ ನಿತ್ಯ-ನೈಮಿತ್ತಿಕಕರ್ಮಗಳೇ ಆಗಿರುವುದರಿಂದ ಅವುಗಳನ್ನು ಬಿಡಬಾರದು. ಅವುಗಳನ್ನು ಮಾಡುವಾಗಲೆಲ್ಲಾ ದೇವತೆಗಳ ಮತ್ತು ಪಿತೃಗಳ ಆತ್ಮನಲ್ಲಿಯೂ ಇರುವ ವಾಸುದೇವನನ್ನೇ ನೆನೆಯಬೇಕು. ದೇವ-ಪಿತೃಗಳಿಗೆ ಮಾಡುವ ಪೂಜೆಯೂ ಸಹ ವಾಸುದೇವನಿಗೇ ಸೇರತಕ್ಕುದೆಂದು ಭಾವಿಸಬೇಕು. ಈ ಕಾರಣದಿಂದಲೇ ಶ್ರಾದ್ಧದಲ್ಲಿಯೂ ಸಹ **'ಪಿತೃರೂಪೀ ಶ್ರೀಜನಾರ್ದನಃ ಪ್ರೀಯತಾಂ । ಪ್ರೀಯತಾಂ** ಜನಾರ್ದನಃ ।' ಎಂದು ಹೇಳುತ್ತಾರೆ.

ಕರ್ಮಗಳನ್ನು ಫಲಾಭಿಸಂಧಿಯಿಲ್ಲದೇ ಮಾಡಬೇಕು. ಹೀಗೆ ಮಾಡಿದರೆ ಅದು ವಾಸುದೇವನಿಗೇ ಸೇರುತ್ತದೆ. ನಿಷ್ಕಾಮಕರ್ಮಗಳನ್ನು ಮಾಡತಕ್ಕವನು ವಾಸುದೇವನನ್ನೇ ಸೇರುತ್ತಾನೆ.)

**ಮದ್ಯಾಜಿನೋಽಪಿ ಮಾಂ ಯಾನ್ತಿ**=ನನ್ನನ್ನು ಕುರಿತು ಯಾಗಮಾಡುವ ಸ್ವಭಾವವುಳ್ಳ ವೈಷ್ಣವರೂ ನನ್ನನ್ನೇ ಹೊಂದುತ್ತಾರೆ. ಅನ್ಯದೇವತೆಗಳ ಉಪಾಸನೆ ಮತ್ತು ನನ್ನ ಉಪಾಸನೆ–ಎರಡಕ್ಕೂ ಶ್ರಮಪಡುವುದು ಒಂದೇ ಸಮ. ಹಾಗಿದ್ದರೂ ಮೇಲೆ ಹೇಳಿದ ದೇವವ್ರತರೇ ಮುಂತಾದವರು ತಮ್ಮ ಅಜ್ಞಾನದಿಂದ ನನ್ನನ್ನು ಪ್ರೀತಿಸುವುದಿಲ್ಲ. ಆದುದರಿಂದ ಅವರು ಅಲ್ಪಫಲಕ್ಕೆ ಭಾಗಿಗಳಾಗುತ್ತಾರೆ. (ಶಂ. ಭಾ.)

ಎಂತಹ ವಿಚಿತ್ರವಿದು! ಹಲವರು ಒಂದೇ ಕರ್ಮವನ್ನೇ ಆಚರಿಸುತ್ತಿದ್ದರೂ ಅದರ ಸಂಕಲ್ಪವು ಮಾತ್ರ ಬೇರೆ-ಬೇರೆಯಾಗುವುದರಿಂದ ಕೆಲವರಿಗೆ ಅಲ್ಪಫಲ ಮತ್ತು ತತ್ವದಿಂದ ಜಾರಿಕೆ ಉಂಟಾಗುತ್ತದೆ ; ಮತ್ತೆ ಕೆಲವರಿಗೆ ಎಣೆಯಿಲ್ಲದ ಆನಂದರೂಪನಾದ ಪರಮಾತ್ಮನ ಪ್ರಾಪ್ತಿ ಎಂಬ ಫಲ ಮತ್ತು ಪುನರಾವೃತ್ತಿಯಿಲ್ಲದಿರುವಿಕೆ–ಇವು ಉಂಟಾಗುತ್ತವೆ ಎಂದು ಇಲ್ಲಿ ಭಗವಂತನು ನಿರೂಪಿಸುತ್ತಾನೆ. ಇಲ್ಲಿರುವ ವ್ರತಶಬ್ದಕ್ಕೆ ಸಂಕಲ್ಪ ಎಂದು ಅರ್ಥ. ದೇವವ್ರತಾಃ = ಎಂದರೆ ದರ್ಶ-ಪೂರ್ಣಮಾಸಾದಿಕರ್ಮಗಳಿಂದ ಇಂದ್ರಾದಿಗಳನ್ನು ಪೂಜಿಸುವ ಸಂಕಲ್ಪವುಳ್ಳವರು. ಅವರು ಇಂದ್ರಾದಿದೇವತೆಗಳನ್ನು ಹೊಂದುತ್ತಾರೆ. ಹೀಗೆಯೇ ಪಿತೃಯಾಜಿಗಳು ಪಿತೃಗಳನ್ನೂ, ಯಕ್ಷ-ರಾಕ್ಷಸ-ಪಿಶಾಚಾದಿ ಭೂತಗಳನ್ನು ಪೂಜಿಸುವವರು ಅವರುಗಳನ್ನೇ ಹೊಂದುತ್ತಾರೆ. ಆದರೆ ಯಾರು ಅದೇ ಯಜ್ಞಗಳಿಂದಲೇ ದೇವ-ಪಿತೃ-ಭೂತಗಳನ್ನು ಶರೀರವನ್ನಾಗಿ ಹೊಂದಿರುವ ಪರಮಾತ್ಮನಾದ ಭಗವಾನ್ ವಾಸುದೇವನನ್ನು ಪೂಜಿಸುತ್ತಾರೆಯೋ ಅವರು ನನ್ನನ್ನೇ ಹೊಂದುತ್ತಾರೆ. ದೇವಾದಿ ವ್ರತವುಳ್ಳವರು ದೇವಾದಿಗಳನ್ನು ಹೊಂದಿ ಅವರೊಡನೆ ಪರಿಮಿತವಾದ ಭೋಗಗಳನ್ನು ಅನುಭವಿಸಿ ಅವರು ನಾಶಹೊಂದುವ ಸಮಯದಲ್ಲಿ ಅವರೊಡನೆ ತಾವೂ ನಾಶಹೊಂದುತ್ತಾರೆ. ಆದರೆ ನನ್ನನ್ನು ಪೂಜಿಸುವವರು ಆದ್ಯಂತಶೂನ್ಯನೂ, ಸರ್ವಜ್ಞನೂ, ಸತ್ಯಸಂಕಲ್ಪನೂ, ಅನಂತನಿಸ್ಸೀಮ ಕಲ್ಯಾಣಗುಣಸಾಗರನೂ, ಅನವಧಿಕಾತಿಶಯಾನಂದಸ್ವರೂಪನೂ ಆದ ನನ್ನನ್ನೇ ಹೊಂದಿ ಪುನರಾವೃತ್ತಿರಹಿತರಾಗುತ್ತಾರೆ. (ರಾ. ಭಾ.)

ದೇವವ್ರತರೂ, ಪಿತೃವ್ರತರೂ, ಭೂತವ್ರತರೂ ಮತ್ತು ಭಗವಂತನನ್ನು ಕುರಿತು ಪೂಜಿಸುವವರೂ ಹೊಂದುವ ಬೇರೆ-ಬೇರೆ ಫಲಗಳನ್ನು ವಿವೇಕದಿಂದ ವಿಶ್ಲೇಷಣೆಮಾಡಿ ಇಲ್ಲಿ ಹೇಳುತ್ತಾನೆ.

ಫಲಂ ವಿವಿಚ್ಯಾಹ ಯಾನ್ತೀತಿ (ಮ. ಭಾ.)

ಪರಮಾತ್ಮನ ಪೂಜೆಗೆ ನಿಷ್ಕಲ್ಮಷವಾದ ಭಕ್ತಿಯೇ ಮುಖ್ಯ ; ಸಾಮಗ್ರಿಗಳಲ್ಲ.

ಓಂ ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೨೬॥

ಯಾವನು ನನಗೆ ಪತ್ರವನ್ನೂ, ಪುಷ್ಪವನ್ನೂ, ಫಲವನ್ನೂ, ನೀರನ್ನೂ ಭಕ್ತಿಯಿಂದ ಕೊಡುವನೋ ಸಂಯಮಿಯಾದ ಅವನು ಭಕ್ತಿಯಿಂದ ಕೊಟ್ಟ ಅದನ್ನು ನಾನು ಉಪಭುಂಜಿಸುವೆನು.

* * *

(ಭಾಗವತದಲ್ಲಿಯೂ ಶ್ರೀಕೃಷ್ಣನು ಇದೇ ಶ್ಲೋಕವನ್ನೇ ಸುದಾಮನಿಗೆ ಹೇಳುತ್ತಾನೆ. ಸುದಾಮನು ಶ್ರೀಕೃಷ್ಣನ ಬಾಲ್ಯಸ್ನೇಹಿತನಾಗಿದ್ದನು. ಇಬ್ಬರೂ ಸಹ ಸಾಂದೀಪನಿ ಎಂಬ ಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದರು. ವಿದ್ಯಾಭ್ಯಾಸವು ಮುಗಿದ ಬಳಿಕ ಇಬ್ಬರೂ ತಮ್ಮ ತಮ್ಮ ಊರುಗಳಿಗೆ ತೆರಳಿದರು. ಸುದಾಮನು ವೇದ-ವೇದಾಂಗಪಾರಂಗತನಾಗಿದ್ದನು. ಶಾಂತನಾಗಿಯೂ, ಜಿತೇಂದ್ರಿಯನಾಗಿಯೂ ಇದ್ದನು. ಆದರೂ ದಟ್ಟ ದಾರಿದ್ರ್ಯವು ಅವನನ್ನು ಕಾಡುತ್ತಿದ್ದಿತು. ಅವನ ಹೆಂಡತಿಗೆ ತನ್ನ ಪತಿಯು ಶ್ರೀಕೃಷ್ಣನ ಆಪ್ತಮಿತ್ರನೆಂಬುದು ತಿಳಿದಿತ್ತು. ದಾರಿದ್ರ್ಯವನ್ನು ಸಹಿಸಲಾರದೆ ಒಂದು ದಿನ ತನ್ನ ಪತಿಯನ್ನು ಶ್ರೀಕೃಷ್ಣನಲ್ಲಿಗೆ ಅರ್ಥಾರ್ಥಿಯಾಗಿ ಹೋಗಿಬರುವಂತೆ ಹೇಳಿದಳು. ಸುದಾಮನಿಗೆ ಶ್ರೀಕೃಷ್ಣನಲ್ಲಿ ಅಪಾರವಾದ ಭಕ್ತಿಯಿದ್ದಿತು. ಆದರೂ ಸಹ ಅರ್ಥಾರ್ಥಿಯಾಗಿ ಅವನಲ್ಲಿಗೆ ಹೋಗುವ ಇಚ್ಛೆಯಿರಲಿಲ್ಲ. ಬ್ರಾಹ್ಮಣನಾದವನು ಹಣಕ್ಕಾಗಿ ಮತ್ತೊಬ್ಬರನ್ನು ಆಶ್ರಯಿಸಕೂಡದೆಂಬುದೇ ಅವನ ಅಭಿಪ್ರಾಯವಾಗಿತ್ತು. ನಾಲ್ಕು ಮನೆಗಳಲ್ಲಿ ಭಿಕ್ಷೆಬೇಡಿದರೆ ಹೊಟ್ಟೆ ತುಂಬುತ್ತದೆ ಎಂದು ತನ್ನ ಪತ್ನಿಯೊಡನೆ ಹೇಳಿದನು. "ನಾವೀಗ ಭಿಕ್ಷೆ

ಯನ್ನು ಪಡೆಯುವ ಅದೃಷ್ಟವನ್ನೂ ಕಳೆದುಕೊಂಡಿದ್ದೇವೆ. ಈಗ ನಮಗೆ ಭಿಕ್ಷೆಯೂ ಸಿಗುತ್ತಿಲ್ಲ. ಮಕ್ಕಳು ಉಪವಾಸದಿಂದಿದ್ದಾರೆ. ಆದುದರಿಂದ ನೀವು ನಿಮ್ಮ ಮಿತ್ರನಾದ ಶ್ರೀಕೃಷ್ಣನಲ್ಲಿಗೆ ಹೋಗಿಬನ್ನಿರಿ. ಅವನಿಂದ ನೀವು ರಾಜ್ಯವನ್ನು ಕೇಳುವ ಅಗತ್ಯವಿಲ್ಲ. ಹೋಗಿ ಅವನ ಸಂದರ್ಶನವನ್ನು ಮಾಡಿ ಬನ್ನಿರಿ"–ಎಂದು ಬಲಾತ್ಕರಿಸಿದಳು.

ಶ್ರೀಕೃಷ್ಣನನ್ನು ಸಂದರ್ಶಿಸಬೇಕೆನ್ನುವ ಆಸೆಯೇನೋ ಸುದಾಮನಿಗೂ ಸಂಪೂರ್ಣವಾಗಿತ್ತು. ಆದುದರಿಂದ ಹೆಂಡತಿಯ ಸಲಹೆಗೆ ಒಪ್ಪಿ ಶ್ರೀಕೃಷ್ಣನಿಗೆ ಕೊಡಲು ಏನಾದರೂ ಕೊಡುವಂತೆ ಕೇಳಿದನು. ಮನೆಯಲ್ಲಿ ಒಂದು ಕಾಳು ಅಕ್ಕಿ ಸಹ ಇರಲಿಲ್ಲ. ಪಕ್ಕದ ಮನೆಯವರು ಕೊಡುವರೆಂಬ ನಂಬಿಕೆಯೂ ಇರಲಿಲ್ಲ. ಆದರೆ ಏನಾದರೂ ಬೇಕೇಬೇಕೆಂಬುದು ಸುದಾಮನ ಹಠ. ಬರಿಗೈಯಲ್ಲಿ ಹೋಗಲು ಸುದಾಮನು ಸಿದ್ಧನಾಗಿರಲಿಲ್ಲ. ಸುದಾಮನ ಪತ್ನಿಯು ಅನ್ಯಥಾ ಮಾರ್ಗವಿಲ್ಲದೇ ಪಕ್ಕದ ಮನೆಗೆ ಹೋಗಿ ಬೇಡಿದಳು. ಒಂದಿಷ್ಟು ಅವಲಕ್ಕಿಯು ಸಿಕ್ಕಿತು. ಹರಿದು ಚಿಂದಿಯಾಗಿದ್ದ ಹಳೆಯ ಬಟ್ಟೆಯೊಂದರಲ್ಲಿ ಅದನ್ನು ಕಟ್ಟಿ ಸುದಾಮನ ಕೈಗಿಟ್ಟಳು. ಸುದಾಮನು ತನ್ನ ಮಿತ್ರನನ್ನು ಕಾಣಲು ಹೊರಟನು. ಬಹಳ ದಿನಗಳು ಪ್ರಯಾಣಮಾಡಿ ದ್ವಾರವತಿಯನ್ನೂ ಸೇರಿದನು. ತನ್ನ ಅರಮನೆಯ ಬಾಗಿಲಿಗೆ ಸುದಾಮನು ಬಂದಿರುವನೆಂದು ತಿಳಿದೊಡನೆಯೇ ಪೀತಾಂಬರವನ್ನೂ ಸರಿಮಾಡಿಕೊಳ್ಳದೇ ಅವಸರದಿಂದ ಶ್ರೀಕೃಷ್ಣನು ಅರಮನೆಯ ಮಹಾದ್ವಾರಕ್ಕೆ ಬಂದು ಸುದಾಮನನ್ನು ಬಾಚಿ ತಬ್ಬಿಕೊಂಡು ಅರಮನೆಯೊಳಕ್ಕೆ ಕರೆದೊಯ್ದು ಸಿಂಹಾಸನದ ಮೇಲೆ ಕುಳ್ಳಿರಿಸಿ, ಅರ್ಘ್ಯ-ಪಾದ್ಯಾದಿಗಳಿಂದ ಯಥೋಚಿತವಾಗಿ ಸತ್ಕರಿಸಿದನು. ರುಕ್ಮಿಣಿಯೂ ಸಹ ರತ್ನಖಚಿತವಾದ ಬೀಸಣಿಗೆಯಿಂದ ಗಾಳಿಬೀಸುವುದರ ಮೂಲಕ ಶ್ರೀಕೃಷ್ಣನ ಆಪ್ತಮಿತ್ರನಾದ ಸುದಾಮನ ಸೇವೆಯನ್ನು ಮಾಡುತ್ತಿದ್ದಳು.

ಶ್ರೀಕೃಷ್ಣನನ್ನು ಕಂಡೊಡನೆಯೇ ಅವನಿಗೆ ಕೊಡಬೇಕೆಂದು ತಂದಿದ್ದ ಪಾರಿತೋಷಿಕವನ್ನು ಕುಚೇಲನು ಸಂಕೋಚದಿಂದಾಗಿ ಇನ್ನೂ ಕೊಟ್ಟಿರಲಿಲ್ಲ. ಇದನ್ನು ತಿಳಿದ ಶ್ರೀಕೃಷ್ಣನು ಸುದಾಮನನ್ನು ಕುರಿತು ಹೇಳುತ್ತಾನೆ :

**ಕಿಮುಪಾಯನಮಾನೀತಂ ಬ್ರಹ್ಮನ್ಮೇ ಭವತಾ ಗೃಹಾತ್ ।**

**ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್ ।**
**ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ॥೨॥**

೧೦-೧೮-೩

"ಬ್ರಾಹ್ಮಣ! ನನಗೆ ಕಾಣಿಕೆಯಾಗಿ ನಿನ್ನ ಮನೆಯಿಂದ ಏನನ್ನು ತಂದಿರುವೆ? ನನಗೆ ಭಕ್ತರಾದವರು ಪ್ರೀತಿಯಿಂದ ಅಣುವಿನಷ್ಟು ಕಾಣಿಕೆ ಯನ್ನು ಅರ್ಪಿಸಿದರೂ ಸಹ ಅದನ್ನು ನಾನು ಮಹತ್ತಾದ ಉಪಾಯನವೆಂದು ಭಾವಿಸುವೆನು. ಭಕ್ತರಲ್ಲದವರು ಲೋಕದೃಷ್ಟಿಯಲ್ಲಿ ಅಮೂಲ್ಯವಾದ ಪಾರಿ ತೋಷಿಕವನ್ನೇ ಕೊಟ್ಟರೂ ಸಹ ಅದರಿಂದ ನಾನು ಸಂತೋಷಪಡುವುದಿಲ್ಲ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥೪॥**

ಆದುದರಿಂದ ನೀನು ಏನನ್ನು ನನಗೆ ಕೊಡಬೇಕೆಂದು ತಂದಿರುವೆಯೋ ಅದನ್ನು ಸಂಕೋಚವಿಲ್ಲದೇ ಕೊಡು"–ಎಂದು ಶ್ರೀಕೃಷ್ಣನು ಹೇಳುತ್ತಾನೆ. ಭಾಗವತಕಥೆಯ ಈ ಶ್ಲೋಕವು ಶ್ರೀಕೃಷ್ಣನಿಂದಲೇ ಹೇಳಲ್ಪಟ್ಟಿದೆ.

ಪತ್ರವನ್ನು ( ಅಕ್ಷಯಪಾತ್ರೆಯಲ್ಲಿ ಅಂಟಿಕೊಂಡಿದ್ದ ಸೊಪ್ಪಿನ ಚೂರನ್ನು) ತಿನ್ನಲು ಕೊಟ್ಟ ದ್ರೌಪದೀ, ಹೂವನ್ನು ಕೊಟ್ಟ ಗಜೇಂದ್ರ, ರುಚಿನೋಡಿ ತೆಗೆದಿಟ್ಟ ಹಣ್ಣುಗಳನ್ನು ಭಗವಂತನಿಗೆ ಅರ್ಪಿಸಿದ ಶಬರೀ–ಇವರೆಲ್ಲರೂ ಕೇವಲ ಭಕ್ತಿಯಿಂದ ಪರಮಾತ್ಮನ ಒಲುಮೆಯನ್ನು ಪಡೆದರೆಂಬುದು ಪ್ರಸಿದ್ಧವಾಗಿಯೇ ಇದೆ. ಶ್ರೀಕೃಷ್ಣನ ಮಾತಿನಂತೆ ಈಗ ನಾವು ಪೂಜೆಮಾಡುತ್ತಿರುವುದೂ ಸಹ ಈ ನಾಲ್ಕು ಸಾಮಗ್ರಿಗಳಿಂದಲೇ ಪತ್ರೆ, ಹೂವು, ಹಣ್ಣು, ನೀರು. ಪತ್ರ-(ತುಳಸೀ-ಬಿಲ್ವಪತ್ರಾದಿಗಳು) ಪುಷ್ಪಗಳಿಂದ ಪೂಜಿಸುತ್ತೇವೆ. ನೀರಿನಿಂದ ಅಭಿಷೇಕಮಾಡುತ್ತೇವೆ. ಫಲವನ್ನು ನಿವೇದನೆ ಮಾಡುತ್ತೇವೆ. ಕೇಶವಾದಿ ತರ್ಪಣಗಳಿಗೂ, ಬ್ರಹ್ಮಯಜ್ಞದಲ್ಲಿ ಋಷಿ-ದೇವತಾ-ಪಿತೃತರ್ಪಣಗಳಿಗೂ ಮತ್ತು ಸಂಧ್ಯಾರ್ಘ್ಯಕ್ಕೂ ಸಹ ನೀರನ್ನೇ ಬಳಸುತ್ತೇವೆ. ದಾಸರು ಹೇಳಿರುವಂತೆ ಕೆರೆಯ ನೀರನ್ನು ಕೆರೆಗೇ ಚೆಲ್ಲುತ್ತೇವೆ. ಆದರೆ ನಮ್ಮಲ್ಲಿ ನ್ಯೂನತೆಯಿರುವುದು ಭಕ್ತಿಯಲ್ಲಿ ಮಾತ್ರ. ಉಳಿದ ಕರ್ಮ ಗಳೆಲ್ಲವೂ ಸಂಪ್ರದಾಯಬದ್ಧವಾಗಿ ನಡೆಯುತ್ತಲೇ ಇವೆ. ಶ್ರೀಕೃಷ್ಣನು ಇಲ್ಲಿ

**ಭಕ್ತ್ಯಾ ಪ್ರಯಚ್ಛತಿ। ಭಕ್ತ್ಯುಪಹೃತಮಶ್ನಾಮಿ**–ಎಂದು ಬಹುಸ್ಪಷ್ಟವಾಗಿ ಹೇಳಿದ್ದಾನೆ. ಭಕ್ತಿಯಿಂದ ಕೊಟ್ಟರೆ 'ತಿನ್ನುತ್ತೇನೆ' ಎಂದೇ ಹೇಳಿದ್ದಾನೆ : ಯಜ್ಞ-ಯಾಗಾದಿಗಳಿಗಿಂತಲೂ ಭಕ್ತಿಮಾರ್ಗವು ಸುಲಭವೇನೋ ನಿಜ. ಆದರೆ ತನ್ನತನವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು ಅನನ್ಯಭಕ್ತಿಯಿಂದ, ಪತಿವ್ರತೆಯು ಗಂಡನನ್ನು ಸೇವಿಸುವ ರೀತಿಯಲ್ಲಿ–ಅವನ ಸೇವೆಮಾಡಬೇಕು. ಅರ್ಥಾತ್ ಅವನ ಪೂಜೆಮಾಡಬೇಕು. ಭಾವನಾಪೂರ್ವಕವಾಗಿ ಭಕ್ತಿಯುಕ್ತ ರಾಗಿ ಕೆರೆಯ ನೀರನ್ನು ಕೆರೆಗೇ ಚೆಲ್ಲಿದರೂ ನೀರನ್ನು ಚೆಲ್ಲಿದಂತಾಗುವುದಿಲ್ಲ. ಪರಮಾತ್ಮನನ್ನು ತೃಪ್ತಿಪಡಿಸಿದಂತಾಗುತ್ತದೆ.)

o o o

ತನ್ನ ಭಕ್ತರಿಗೆ ಅಪುನರಾವೃತ್ತಿರೂಪವಾದ ಅನಂತಫಲವು ದೊರಕುವುದಷ್ಟೇ ಅಲ್ಲ ; ತನ್ನನ್ನು ಆರಾಧಿಸುವುದೂ ಅತಿಸುಲಭ–ಎಂದು ಭಗವಂತನು ಇಲ್ಲಿ ಪ್ರತಿಪಾದಿಸುತ್ತಾನೆ.

ಪ್ರಯತಾತ್ಮನಃ= ಶುದ್ಧವಾದ ಬುದ್ಧಿಯುಳ್ಳವನು (ಶಂ. ಭಾ.)

ಸರ್ವಸುಲಭನಾದ ನನಗೆ ಪತ್ರವನ್ನೇ ಆಗಲೀ, ಪುಷ್ಪವನ್ನೇ ಆಗಲೀ, ಹಣ್ಣನ್ನೇ ಆಗಲೀ, ನೀರನ್ನೇ ಆಗಲೀ–ಯಾವನು ಭಕ್ತಿಯಿಂದ ಎಂದರೆ ನಾನು ಅವನಿಗೆ ಅತ್ಯಂತಪ್ರಿಯನಾಗಿರುವುದರಿಂದ ಅದನ್ನು ನನಗೆ ಅರ್ಪಿಸದಿದ್ದರೆ ಆತ್ಮಧಾರಣೆಯೇ ಇಲ್ಲವೆಂದು ಭಾವಿಸಿ ಆ ಅರ್ಪಣೆಯನ್ನೇ ಏಕಮಾತ್ರ ಪ್ರಯೋಜನವೆಂದು ತಿಳಿದು ಸಮರ್ಪಿಸುತ್ತಾನೆಯೋ–ಅಂತಹ ಪರಿಶುದ್ಧ ವಾದ ಮನಸ್ಸುಳ್ಳವನ ಭಕ್ತಿಯಿಂದ ಅರ್ಪಿತವಾದ ಪದಾರ್ಥವನ್ನು ನಾನು ಸರ್ವೇಶ್ವರನೂ, ಅವಾಪ್ತಸಮಸ್ತಕಾಮನೂ, ನಿರವಧಿಕಾನಂದಾನುಭವವುಳ್ಳ ವನೂ ಆಗಿದ್ದರೂ ಕೂಡ ಮನೋರಥದ ಮಾರ್ಗಕ್ಕೆ ಎಟುಕದೇ ಅತ್ಯಂತ ದೂರದಲ್ಲಿರುವ ಪ್ರಿಯವಾದ ಪದಾರ್ಥವನ್ನು ಹೇಗೋ ಹಾಗೆ ಪರಮಾದರ ದಿಂದ ಭುಂಜಿಸುತ್ತೇನೆ.

**ಯಾಃ ಕ್ರಿಯಾಃ ಸಂಪ್ರಯುಕ್ತಾಃ ಸ್ಯುರೇಕಾನ್ತಗತಬುದ್ಧಿಭಿಃ ।**
**ತಾಃ ಸರ್ವಾಃ ಶಿರಸಾ ದೇವಃ ಪ್ರತಿಗೃಹ್ಣಾತಿ ವೈ ಸ್ವಯಮ್ ॥**

–ಮೋಕ್ಷಧರ್ಮ

ಪರಮೈಕಾಂತಿಗಳು ಸಮರ್ಪಿಸುವ ಎಲ್ಲ ಕರ್ಮಗಳನ್ನೂ ಭಗವಂತನು ಅತ್ಯಂತಪ್ರೀತ್ಯಾದರಗಳಿಂದ ಶಿರಸ್ಸಿನಿಂದಲೇ ಸ್ವೀಕರಿಸುತ್ತಾನೆ.

**ಪತ್ರೇಷು ಪುಷ್ಪೇಷು ಫಲೇಷು ತೋಯೇ-**
**ಷ್ವಕ್ರೀತಲಭ್ಯೇಷು ಸದೈವ ಸತ್ಸು ।**
**ಭಕ್ತ್ಯೇಕಲಭ್ಯೇ ಪುರುಷೇ ಪುರಾಣೇ**
**ಮುಕ್ತ್ಯೈ ಕಿಮರ್ಥಂ ಕ್ರಿಯತೇ ನ ಯತ್ನಃ ॥**

ಗರುಡಪುರಾಣ ೨೧೯-೪೨

**ಪರಿಪೂರ್ಣೋಽಪಿ ಭಗವಾನ್ಭಕ್ತ್ಯೈರ್ಯತ್ಕಿಂಚಿದೀರಿತಮ್ ।**
**ಸಾಪೇಕ್ಷವತ್ತದಾದತ್ತೇ ತೇನ ಪ್ರೀತೋ ದದಾತ್ಯಲಮ್ ॥**

ಅಶ್ನಾಮಿ ಎಂಬುದಕ್ಕೆ–'ಅದು ನನ್ನ ಉಪಭೋಗಕ್ಕೆ ವಿಷಯವಾಗುತ್ತದೆ'–ಎಂಬ ಅರ್ಥವಿಸ್ತಾರವನ್ನು ತೆಗೆದುಕೊಳ್ಳಬೇಕು. ಆದುದರಿಂದ ಬೇರೆ ನೈವೇದ್ಯವಿಲ್ಲದಿದ್ದರೆ ಪತ್ರೆ ಮುಂತಾದುವುಗಳನ್ನಾದರೂ ನಿವೇದಿಸಬೇಕು ಎಂದು ಧ್ವನಿತವಾಗುತ್ತದೆ. ಅರ್ಥಾರ್ಥಿಗಳು ಸಮರ್ಪಿಸಿದ ಪದಾರ್ಥಗಳು ಭಗವಂತನ ಪಾದಗಳನ್ನು ಸೇರುತ್ತವೆ.

**ತತ್ಸರ್ವಂ ದೇವದೇವಸ್ಯ ಚರಣಾವುಪತಿಷ್ಠತೇ ॥** (ರಾ. ಭಾ.)

ನೀನು ತುಂಬ ದೊಡ್ಡವನಾದುದರಿಂದ ದುರ್ಬಲರು ನಿನ್ನನ್ನು ಪೂಜಿಸಲು ಸಾಧ್ಯವಿಲ್ಲ–ಎಂಬ ಆಶಂಕೆಗೆ ಭಗವಂತನು ಇಲ್ಲಿ ಉತ್ತರ ಹೇಳುತ್ತಾನೆ.

ಪತ್ರಂ ಪುಷ್ಪಂ ಫಲಂ ತೋಯಂ–ಆದರೆ ಭಗವಂತನಿಗೆ ವಿಹಿತವಲ್ಲದೇ ಇರುವ ಪತ್ರೆ ಮುಂತಾದುವನ್ನು ಸಮರ್ಪಿಸಬಾರದು. ಹಾಗೆ ಮಾಡುವುದು ಅಪರಾಧವೆಂದು ವರಾಹ ಮುಂತಾದ ಪುರಾಣಗಳಲ್ಲಿ ಹೇಳಿದೆ.

'ಅವನ ಭಕ್ತಿಯಿಂದಲೇ ನಾನು ತೃಪ್ತಿಪಡುತ್ತೇನೆ'–ಎಂಬ ಭಾವ.

**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**

ಏತಾವಾನೇವ ಗೋವಿನ್ದೇ ಪುಂಸಃ ಸ್ವಾರ್ಥಃ ಪರಃ ಸ್ಮೃತಃ ।
ಏಕಾನ್ತಭಕ್ತಿರ್ಗೋವಿನ್ದೇ ಯತ್ಸರ್ವತ್ರಾತ್ಮದರ್ಶನಮ್ ॥

(ಮ. ಭಾ.)

ಓಂ ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥೨೭॥

ಕೌಂತೇಯ! ಯಾವುದನ್ನು ಮಾಡುವೆಯೋ, ಯಾವುದನ್ನು ತಿನ್ನುವೆಯೋ, ಯಾವುದನ್ನು ಹೋಮಮಾಡುವೆಯೋ, ಯಾವುದನ್ನು ದಾನ ಮಾಡುವೆಯೋ, ಯಾವ ತಪಸ್ಸುಮಾಡುವೆಯೋ–ಅದನ್ನು ನನಗೇ ಅರ್ಪಣ ಮಾಡು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಕರ್ಮಯೋಗದ ತತ್ತ್ವವನ್ನೇ ಹೇಳಿರುತ್ತಾನೆ. ಲೌಕಿಕವಾದ ಕರ್ತವ್ಯವನ್ನೇ ಮಾಡಿದರೂ ನನಗೇ ಅರ್ಪಿಸಿಬಿಡು ಎನ್ನುತ್ತಾನೆ. ಯಾವುದೇ ಲೌಕಿಕವಾದ ಕರ್ತವ್ಯವನ್ನೂ ದೇವರ ಕೆಲಸವೆಂದು ಭಾವಿಸಿದರೆ ಕೆಲಸದಲ್ಲಿ ಶ್ರದ್ಧೆಯು ಹೆಚ್ಚುತ್ತದೆ. ಅನೈತಿಕವ್ಯವಹಾರಗಳಿಗೆ ಅವಕಾಶವಿರುವುದಿಲ್ಲ. ಶುದ್ಧವಾದ ಚಾರಿತ್ರ್ಯವು ಬೆಳೆಯಲು ಅವಕಾಶವಾಗುತ್ತದೆ. ತಿನ್ನುವುದನ್ನೂ ನನಗೇ ಅರ್ಪಿಸು ಅಥವಾ ನನಗೆ ನಿವೇದನೆ ಮಾಡಿ ತಿನ್ನು ಎನ್ನುತ್ತಾನೆ. ತುತ್ತಿಗೊಮ್ಮೆ 'ಗೋವಿಂದ' ಎಂದುಕೊಂಡು ಊಟಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಪರಮಾತ್ಮನಿಗೆ ಅರ್ಪಿಸಿ ತಿನ್ನಬೇಕೆನ್ನುವ ನಿಯಮವನ್ನಿಟ್ಟುಕೊಂಡರೆ ಸಿಕ್ಕಿ-ಸಿಕ್ಕಿದುದನ್ನೆಲ್ಲಾ ಕಂಡ-ಕಂಡಾಗ ತಿನ್ನಲು ಸಾಧ್ಯವಾಗುವುದಿಲ್ಲ. ಆಹಾರವು ತಾನೇತಾನಾಗಿ ನಿಯತವಾಗುವುದಲ್ಲದೇ ಪರಮಾತ್ಮನಿಗೆ ನಿವೇದನೆಮಾಡುವುದರಿಂದ ಆಹಾರ ಶುದ್ಧಿಯೂ ಆಗಿ ಸತ್ತ್ವಶುದ್ಧಿಯೂ ಆಗುತ್ತದೆ. ಹೋಮಗಳು ಆಯಾ ಕರ್ಮಗಳಿಗೆ ಸಂಬಂಧಿಸಿದಂತೆ ಯಾವ ದೇವತೆಗಾದರೂ ಆಗಬಹುದು. ಆದರೆ ಕಡೆಯಲ್ಲಿ ಭಾವನಾಪೂರ್ವಕವಾಗಿ 'ಶ್ರೀಕೃಷ್ಣಾರ್ಪಣಮಸ್ತು'–ಎಂದು ಹೇಳಿ ನನಗೇ ಅರ್ಪಿಸಿಬಿಡು ಎನ್ನುತ್ತಾನೆ ಶ್ರೀಕೃಷ್ಣ. ದಾನಕೊಡುವಾಗ ನನಗೆ ಪ್ರೀತಿಯಾಗಲೆಂದು ದಾನಕೊಡು. ದಾನವನ್ನು ಯಾರಿಗೆ ಕೊಡುತ್ತಿಯೋ ಅವರನ್ನು ನಾನೇ ಎಂದು ಭಾವಿಸಿಕೊಡು. ಅಂತಹ ದಾನವು

ನನಗೇ ಸೇರುತ್ತದೆ. ಯಾವ ತಪಸ್ಸನ್ನು ಬೇಕಾದರೂ ಮಾಡು. ನನ್ನ ಪ್ರೀತ್ಯರ್ಥವಾಗಿ ಮಾಡು. ಮಾಡಿದ ತಪಸ್ಸನ್ನು ನನಗೆ ಅರ್ಪಿಸಿಬಿಡು. ತಪಃಫಲವು ಬೇಕೆಂಬ ಅಭಿಲಾಷೆಯಿಂದ ತಪಸ್ಸನ್ನು ಮಾಡಬೇಡ. ಫಲಾಕಾಂಕ್ಷೆಯು ನಿನಗೆ ಯಾವಾಗಲೂ ಇಲ್ಲದಿರಲಿ. ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳಲು ನಾನಿದ್ದೇನೆ. ಆದುದರಿಂದ ಯಾವುದೇ ಕಾರ್ಯಮಾಡಿದರೂ ನಿಷ್ಕಾಮನೆಯಿಂದ ಭಗವತ್ಪ್ರೀತ್ಯರ್ಥವಾಗಿ ಮಾಡು. ಹೀಗೆ ಮಾಡುವುದರಿಂದ ನಿನಗೆ ಲಭ್ಯವಾಗುವ ಫಲವು ಅಪಾರ.)

O O O

**ಯತ್ಕರೋಷಿ** =ಸ್ವತಃ ಪ್ರಾಪ್ತವಾದ ಯಾವ ಕರ್ಮವನ್ನು ಮಾಡುತ್ತೀಯೋ ಅದನ್ನು. (ಶಂ. ಭಾ.)

ದೇಹಯಾತ್ರೆಗೆ ಬೇಕಾದ ಯಾವ ಲೌಕಿಕಕರ್ಮವನ್ನು ಮಾಡುತ್ತೀಯೋ, ದೇಹಧಾರಣೆಗೋಸ್ಕರ ಏನನ್ನು ತಿನ್ನುತ್ತೀಯೋ ಮತ್ತು ವೈದಿಕವಾದ ಹೋಮ, ದಾನ, ತಪಸ್ಸು–ಮುಂತಾದ ಯಾವ ನಿತ್ಯ-ನೈಮಿತ್ತಿಕಕರ್ಮಗಳನ್ನು ಆಚರಿಸುತ್ತೀಯೋ ಅವೆಲ್ಲವನ್ನೂ ನನಗೇ ಅರ್ಪಿಸು. ಲೌಕಿಕ ಮತ್ತು ವೈದಿಕವಾದ ಎಲ್ಲ ಕರ್ಮಗಳ ಕರ್ತೃತ್ವ, ಭೋಕ್ತೃತ್ವ ಮತ್ತು ಆರಾಧ್ಯತ್ವಗಳೆಲ್ಲವೂ ಭಗವಂತನಿಗೇ ಅರ್ಪಿತವಾಗುವಂತೆ ಮಾಡು.

ಯಾಗ, ದಾನ–ಮುಂತಾದುವುಗಳಲ್ಲಿ ಆರಾಧ್ಯರೆಂದು ಕಂಡುಬರುವ ದೇವತೆಗಳೂ, ಕರ್ಮದ ಕರ್ತೃವೂ, ಭೋಕ್ತೃವೂ ನಾನು ; ಎಲ್ಲರೂ ನನ್ನವರು. ಅವರ ಸ್ವರೂಪ-ಸ್ಥಿತಿ-ಪ್ರವೃತ್ತಿಗಳೆಲ್ಲವೂ ನನ್ನ ಸಂಕಲ್ಪಕ್ಕೇ ಅಧೀನ. ಆದುದರಿಂದ ಪರಮಶೇಷಿಯೂ ಪರಮಕರ್ತೃವೂ ಆಗಿರುವ ನನ್ನಲ್ಲಿ ಕರ್ತೃವೂ, ಭೋಕ್ತೃವೂ, ಆರಾಧಕನೂ ಆದ ನಿನ್ನನ್ನೂ, ಆರಾಧ್ಯವಾದ ದೇವತೆಯನ್ನೂ, ಆರಾಧನಾರೂಪವಾದ ಕ್ರಿಯಾಕಲಾಪವನ್ನೂ ಸಮರ್ಪಿಸಿಬಿಡು. (ರಾ. ಭಾ.)

ಸಂಯಮಿಯಾದ ಭಕ್ತನು ಭಕ್ತಿಯಿಂದ ಸಮರ್ಪಿಸಿದ (ವಿಹಿತವಾದ) ಪತ್ರ-ಪುಷ್ಪಾದಿಗಳನ್ನು ಭಗವಂತನು ಸ್ವೀಕರಿಸುವುದರಿಂದ ಈ ಶ್ಲೋಕದಲ್ಲಿ ಹೇಳಿರುವಂತೆ ಎಲ್ಲ ಕರ್ಮಗಳನ್ನೂ ಅವನಿಗೇ ಅರ್ಪಿಸಬೇಕು.

**ಅತೋ ಯತ್ಕರೋಷಿ (ಮ. ಭಾ.)**

**ಓಂ ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥**

ಹೀಗೆ ಮಾಡಿದರೆ ಶುಭಾಶುಭಫಲಗಳುಳ್ಳ ಕರ್ಮಬಂಧನಗಳಿಂದ ಬಿಡುಗಡೆ ಹೊಂದುವೆ. ಸಂನ್ಯಾಸಯೋಗದಿಂದ ಕೂಡಿದ ಮನಸ್ಸುಳ್ಳವನಾಗಿ ವಿಮುಕ್ತನಾಗಿ ನನ್ನ ಬಳಿಗೆ ಬರುವೆ.

* * *

(ಎಲ್ಲ ಕರ್ಮಗಳನ್ನೂ ಅಥವಾ ಕರ್ಮಫಲಗಳನ್ನೂ ನನಗೇ ಅರ್ಪಿಸಿ ಬಿಡುವುದರಿಂದ ನಿನ್ನಲ್ಲಿ ಶುಭಾಶುಭಫಲಗಳಾವುವೂ ಉಳಿದುಕೊಳ್ಳುವುದಿಲ್ಲ. ಆದುದರಿಂದ ನಿನಗೆ ಪಾಪ-ಪುಣ್ಯಗಳ ಸೋಂಕೂ ಇರುವುದಿಲ್ಲ. ಕರ್ಮಗಳನ್ನು ನನಗರ್ಪಿಸುವುದೆಂದರೆ ಬೀಜವನ್ನು ಬೆಂಕಿಯಲ್ಲಿ ಹಾಕಿದಂತೆಯೇ ಸರಿ. ನಿನಗಾಗಿ ನೀನು ಕರ್ಮಗಳನ್ನು ಮಾಡಿದರೆ ಅದಕ್ಕೆ ಬೀಜದ ಸಾಧರ್ಮ್ಯವಿರುತ್ತದೆ. ವೃಕ್ಷರೂಪವಾದ ಪಾಪ-ಪುಣ್ಯಗಳನ್ನೂ ಕೊಟ್ಟು ಮನುಷ್ಯನನ್ನು ಸಂಸಾರದಲ್ಲಿ ಬಂಧಿಸಿಬಿಡುತ್ತದೆ. ಅದೇ ಕರ್ಮಗಳನ್ನು ನನಗೆ ಅರ್ಪಿಸಿದರೆ ಅವು ಹುರಿದ ಬೀಜದಂತಾಗಿ ನಿನಗೆ ಯಾವ ಪುಣ್ಯ-ಪಾಪ ಗಳನ್ನೂ ಕೊಡುವುದಿಲ್ಲ. ಇದರಿಂದಾಗಿ ನೀನು ಕರ್ಮಬಂಧನಗಳಿಂದ ವಿಮುಕ್ತನಾಗುವೆ. ಸಂನ್ಯಾಸಯೋಗಯುಕ್ತಾತ್ಮನಾಗಿ ವಿಮುಕ್ತನಾಗಿ ನನ್ನನ್ನೇ ಸೇರುವೆ. ಇಲ್ಲಿ ಸಂನ್ಯಾಸವೆಂದರೆ ಕರ್ಮಗಳೆಲ್ಲವನ್ನೂ ಅವನಲ್ಲಿಯೇ ಸಮ್ಯಕ್ ನ್ಯಾಸಮಾಡುವುದು ; ಇಟ್ಟುಬಿಡುವುದು ಅಥವಾ ಅವನಿಗೇ ಅರ್ಪಿಸಿಬಿಡು ವುದು. ಇದೇ ಯೋಗ. ಅರ್ಥಾತ್ ಇದು ಕರ್ಮಯೋಗವೂ ಆಗಬಹುದು. ಭಕ್ತಿಯೋಗವೂ ಆಗಬಹುದು. ಈ ಯೋಗದಿಂದ ಯುಕ್ತವಾದ ಆತ್ಮವುಳ್ಳವ ನಾಗಿ ; ಎಲ್ಲ ಕರ್ಮಗಳನ್ನೂ ಪರಮಾತ್ಮನಲ್ಲಿಯೇ ಪ್ರತಿಷ್ಠಾಪಿಸುವ, ಅವನಿಗೇ ಭಕ್ತಿಪೂರ್ವಕವಾಗಿ ಸಮರ್ಪಣೆಮಾಡುವ ಅಂತಃಕರಣವುಳ್ಳವನಾಗಿ ಎಂದರ್ಥ. ಹೀಗೆ ಮಾಡುವುದರಿಂದಾಗುವ ಪ್ರಯೋಜನ–'ಮುಕ್ತಾತ್ಮನಾಗು ವುದು,' 'ಸಂಸಾರಬಂಧನದಿಂದ ತಪ್ಪಿಸಿಕೊಳ್ಳುವುದು' ಸಂಸಾರಬಂಧನದಿಂದ ತಪ್ಪಿಸಿಕೊಂಡನಂತರ ಆಗುವ ಪರಿಣಾಮ-ಮಾಮುಪೈಷ್ಯಸಿ ನನ್ನನ್ನು

ಸೇರುವೆ. ಕರ್ಮವನ್ನು ಭಗವಂತನಿಗೆ ಸಮರ್ಪಣೆಮಾಡುತ್ತಲೇ ಇರುವವನಿಗೆ ಭಗವತ್ಪ್ರಾಪ್ತಿಯೇ ಫಲವಾಗುವುದು.)

O O O

ವಿಮುಕ್ತಃ ಮಾಮುಪೈಷ್ಯಸಿ =ಜೀವಂತನಾಗಿರುವಾಗಲೇ ಕರ್ಮ ಬಂಧನದಿಂದ ಬಿಡುಗಡೆ ಹೊಂದಿ ಈ ಶರೀರವು ನಾಶಹೊಂದಿದನಂತರ ನನ್ನನ್ನೇ ಹೊಂದಿಬಿಡುವೆ. (ಶಂ. ಭಾ.)

ಎಲ್ಲ ಕರ್ಮಗಳನ್ನೂ ನನ್ನ ಆರಾಧನೆಯೆಂದು ಅನುಸಂಧಾನ ಮಾಡುತ್ತಾ, ಆಯಾ ಲೌಕಿಕ ಮತ್ತು ವೈದಿಕಕರ್ಮಗಳನ್ನು ಆಚರಿಸುತ್ತಾ ; ನನಗೆ ವಿರೋಧಿಗಳಾಗಿರುವ ಮತ್ತು ಶುಭಾಶುಭಫಲಗಳನ್ನು ಕೊಡುವ ಅನಂತವಾದ ಎಲ್ಲ ಪ್ರಾಚೀನಕರ್ಮಗಳಿಂದಲೂ ಬಿಡುಗಡೆ ಹೊಂದುವೆ. ಅವುಗಳಿಂದ ಹಾಗೆ ಬಿಡುಗಡೆಹೊಂದಿ ನನ್ನನ್ನೇ ಬಂದು ಸೇರುವೆ. (ರಾ. ಭಾ.)

**ಓಂ ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥**

ನಾನು ಎಲ್ಲ ಭೂತಗಳಲ್ಲಿಯೂ ಸಮನಾಗಿರುವೆನು. ನನಗೆ ದ್ವೇಷ್ಯನೂ ಇಲ್ಲ ; ಪ್ರಿಯನೂ ಇಲ್ಲ. ಆದರೆ ಯಾರು ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರು ನನ್ನಲ್ಲಿರುವರು ಮತ್ತು ನಾನು ಅವರಲ್ಲಿರುವೆನು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ನನಗೆ ಯಾರ ಮೇಲೂ ಪಕ್ಷಪಾತವಿಲ್ಲ ಎನ್ನುತ್ತಾನೆ. ಸರ್ವಪ್ರಾಣಿಗಳಲ್ಲಿಯೂ ನಾನು ಸಮನಾಗಿದ್ದೇನೆ. ನನಗೆ ದ್ವೇಷಿಯಾಗಲೀ–ಪ್ರಿಯನಾಗಲೀ ಯಾರೂ ಇಲ್ಲ ಎನ್ನುತ್ತಾನೆ. ಎಲ್ಲರಲ್ಲಿಯೂ ಅವನು ಅಂತರ್ಯಾಮಿಯಾಗಿದ್ದಾನೆ.

ಸಮಸ್ತಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ಅವನಿಗೆ ದ್ವೇಷ್ಯ ರಾಗಲೀ–ಪ್ರಿಯರಾಗಲೀ ಇರುವುದಿಲ್ಲ. ಎಲ್ಲರಲ್ಲಿಯೂ ಅಂತರ್ಯಾಮಿ ಯಾಗಿದ್ದು ಅವರವರ ಕರ್ಮಗಳಿಗೆ ಸಾಕ್ಷೀಭೂತನಾಗಿರುತ್ತಾನೆ. ಅವನನ್ನು ದ್ವೇಷಿಸುವವರಲ್ಲಿಯೂ ಅವನಿರುತ್ತಾನೆ. ದ್ವೇಷಿಸುತ್ತಿದ್ದಾನೆಂದು ಬಗೆದು ಅವ ನನ್ನು ಬಿಟ್ಟೋಡುವುದಿಲ್ಲ. ಆಸ್ತಿಕರಲ್ಲಿ, ನಾಸ್ತಿಕರಲ್ಲಿ ಅವನು ಸರ್ವಸಮನಾಗಿ

ದ್ದಾನೆ. ಸೂರ್ಯನಂತೆ ಇದ್ದಾನೆ. ಸೂರ್ಯನ ಕಿರಣಗಳು ಕೊಳಚೇ ಪ್ರದೇಶದಲ್ಲಿಯೂ ದೇವಾಲಯದ ಪ್ರದೇಶದಲ್ಲಿಯೂ ಸಮವಾಗಿಯೇ ಬೀಳುತ್ತವೆ. ತಾರತಮ್ಯ ಮಾಡುವುದಿಲ್ಲ. ಆದರೆ ನನ್ನನ್ನು ಯಾರು ಭಕ್ತಿಯಿಂದ ಭಜಿಸುತ್ತಾರೆಯೋ ಅವರಲ್ಲಿ ನಾನೇ ಇದ್ದೇನೆ. ನನ್ನಲ್ಲಿ ಅವರಿದ್ದಾರೆ. ಭಕ್ತನು ಕರ್ತೃತ್ವಾಭಿಮಾನವನ್ನು ತೊರೆದು ನನ್ನ ಭಾವವನ್ನೇ ಸಂಪೂರ್ಣವಾಗಿ ತುಂಬಿಕೊಂಡರೆ ಅವನಲ್ಲಿ ನಾನೇ ಇದ್ದಂತಾಯಿತು. ನನ್ನನ್ನೇ ಸರ್ವದಾ ಪ್ರಾರ್ಥನೆಮಾಡುತ್ತಿರುವ ಭಕ್ತನ ಅನುಸ್ಮರಣೆಯೂ ನನಗೆ ಯಾವಾಗಲೂ ಇರುವುದರಿಂದ ಅವನು ನನ್ನಲ್ಲಿಯೇ ಇದ್ದಂತಾಯಿತು. ನನ್ನನ್ನು ಸ್ಮರಣೆ ಮಾಡುತ್ತಿರುವವರನ್ನು ನಾನೂ ಸ್ಮರಣೆಮಾಡುತ್ತಲೇ ಇರುತ್ತೇನೆ. ಪರಸ್ಪರ ಸ್ಮರಣೆಯ ಅನವರತವಾದ ಅನುಸಂಧಾನದಿಂದಾಗಿ ನಾನು ಭಕ್ತನಾಗಿಬಿಡುತ್ತೇನೆ. ಭಕ್ತನು ನಾನಾಗಿಬಿಡುತ್ತಾನೆ. ಪರಸ್ಪರ ಸೇರಿಕೊಂಡುಬಿಡುತ್ತೇವೆ. ಅಳುವ ಮಗುವಿನ ಸಮೀಪದಲ್ಲಿ ತಾಯಿಯಾದವಳು ಇರುವಂತೆ ನನಗಾಗಿ ಸರ್ವಕಾಲದಲ್ಲಿಯೂ ಪ್ರಾರ್ಥಿಸುವ ಭಕ್ತರ ಸಮೀಪದಲ್ಲಿ ನಾನು ಯಾವಾಗಲೂ ಇರುತ್ತೇನೆ. **ಮದ್ಭಕ್ತಾ ಯತ್ರ ಗಾಯನ್ತಿ ತತ್ರ ತಿಷ್ಠಾಮಿ ನಾರದ । ಸಾಧವೋ ಹೃದಯಂ ಮಹ್ಯಂ ಸಾಧೂನಾಂ ಹೃದಯಂ ತ್ವಹಮ್ । ಮದನ್ಯತ್ತೇ ನ ಜಾನನ್ತಿ ನಾಹಂ ತೇಭ್ಯೋ ಮನಾಗಪಿ ॥**

ಭಾಗವತ ೯-೪-೯೮

ಭಕ್ತರು ನನ್ನ ಹೃದಯ. ಭಕ್ತರ ಹೃದಯವು ನಾನೇ. ನನ್ನನ್ನು ಬಿಟ್ಟು ಬೇರೇ ಅವರಿಗೆ ಏನೂ ತಿಳಿಯದು. ನನಗೂ ಸಹ ಅವರ ವಿಷಯವನ್ನುಳಿದು ಬೇರೆಯವರ ವಿಷಯವು ತಿಳಿಯದು.)

O O O

ನಾನು ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸಮ. ದ್ವೇಷಕ್ಕೆ ಪಾತ್ರನಾದವನು ನನಗೆ ಯಾವನೂ ಇಲ್ಲ. ಪ್ರೇಮಕ್ಕೆ ಪಾತ್ರನಾದವನೂ ಯಾವನೂ ಇಲ್ಲ. ನಾನು ಅಗ್ನಿಯಂತೆ. ಅಗ್ನಿಯು ತನ್ನಿಂದ ದೂರದಲ್ಲಿರುವ ಪ್ರಾಣಿಗಳ ಶೀತವನ್ನು ಹೋಗಲಾಡಿಸುವುದಿಲ್ಲ. ಹತ್ತಿರ ಬರುವವರ ಶೀತವನ್ನು ಮಾತ್ರ ಹೋಗಲಾಡಿಸುತ್ತದೆ. ಹಾಗೆಯೇ ನಾನು ನನ್ನನ್ನು ಭಜಿಸುವವರ ಮೇಲೆ ಅನುಗ್ರಹವನ್ನು ತೋರುತ್ತೇನೆ. ಇತರರ ಮೇಲೆ ಇಲ್ಲ. ಯಾವ

ಭಕ್ತರು ನನ್ನನ್ನು ಪ್ರೇಮದಿಂದ ಭಜಿಸುತ್ತಾರೆಯೋ ಅವರು ಸ್ವಭಾವವಾಗಿಯೇ ನನ್ನಲ್ಲಿ ಇರುತ್ತಾರೆ ಮತ್ತು ನಾನೂ ಕೂಡ ಸ್ವಾಭಾವಿಕವಾಗಿಯೇ (ವಿಶೇಷವಾದ ಆಸಕ್ತಿಯಿಂದ) ಅವರಲ್ಲಿರುತ್ತೇನೆ. ಇತರರಲ್ಲಿ ದ್ವೇಷವಿದೆಯೆಂದು ತಿಳಿಯಬಾರದು. (ಶಂ. ಭಾ.)

ದೇವತೆಗಳು, ತಿರ್ಯಕ್‌ಪ್ರಾಣಿಗಳು, ಮನುಷ್ಯರು—ಮುಂತಾದ ನಾನಾ ಯೋನಿಗಳಲ್ಲಿ ಜೀವಗಳು ಉಂಟು. ಅವುಗಳ ಜಾತಿ-ಆಕಾರ-ಸ್ವಭಾವಗಳು ಬೇರೆ ಬೇರೆ ಇರಬಹುದು. ಜ್ಞಾನದಲ್ಲಿಯೂ ಅವರಲ್ಲಿ ಅತ್ಯಂತೋತ್ಕೃಷ್ಟರೂ ನೀಚರೂ ಇರಬಹುದು. ಆದರೆ ಆ ವಿವಿಧಭೂತಗಳಿಗೂ ನನ್ನನ್ನು ಆಶ್ರಯಿಸುವ ವಿಷಯದಲ್ಲಿ ನಾನು ಸಮನಾಗಿದ್ದೇನೆ. ಜಾತಿ-ಆಕಾರ-ಸ್ವಭಾವ-ಜ್ಞಾನ ಮುಂತಾದುವುಗಳಲ್ಲಿ ಅವರು ನಿಕೃಷ್ಟರೆಂದು ದ್ವೇಷವನ್ನಾಗಲೀ, ಉತ್ಕೃಷ್ಟರೆಂದು ಪ್ರೇಮವನ್ನಾಗಲೀ ಇಟ್ಟುಕೊಂಡು ಅವರಿಗೆ ಆಶ್ರಯ ನೀಡುವ ವಿಷಯದಲ್ಲಿ ಯಾವ ಭೇದವನ್ನೂ ಮಾಡುವುದಿಲ್ಲ. ಆದರೆ ನನ್ನನ್ನು ಅತ್ಯಂತ ಪ್ರಿಯನನ್ನಾಗಿ ಭಾವಿಸಿ ನನ್ನ ಭಜನೆಯನ್ನೇ ಪ್ರಯೋಜನವೆಂದಾಗಿ ಭಾವಿಸಿ ಭಜಿಸುವವರು ಜಾತಿ ಮುಂತಾದುವುಗಳಿಂದ ಉತ್ಕೃಷ್ಟರಾಗಲೀ ನೀಚರಾಗಲೀ ಐಕರಸ್ಯದಿಂದ (ಏಕರಸದ ಭಾವ) ನನ್ನಲ್ಲಿಯೇ ಇರುತ್ತಾರೆ. ನಾನೂ ಕೂಡ ಉತ್ಕೃಷ್ಟರಾದವರಲ್ಲಿ ಹೇಗೋ ಹಾಗೆ ಅವರನ್ನು ಸಂಭಾವಿಸುತ್ತೇನೆ. ಅದರಿಂದವರು 'ನಾನು ಪರಮೇಶ್ವರ ; ತುಂಬ ದೊಡ್ಡವನು'—ಮುಂತಾದ ಕಾರಣಗಳಿಂದ ಉಂಟಾದ ಭಯವನ್ನು ತೊರೆದು ನನ್ನನ್ನು ಸೇವಿಸುತ್ತಾರೆ.

(ರಾ. ಭಾ.)

'ಹಾಗಾದರೆ ನಿನಗೂ ಸ್ನೇಹ ಮುಂತಾದುವುಗಳು ಇರುವುದರಿಂದ ನೀನು ಕೆಲವು ಅಲ್ಪಭಕ್ತರಿಗೂ ಬಹುಫಲವನ್ನು ಕೊಡುವೆ. ಅಲ್ಪದ್ವೇಷಿಗಳಿಗೂ ದುಃಖರೂಪವಾದ ಬಹುಫಲವನ್ನು ಕೊಡುವೆ—ಎಂದು ಅಭಿಪ್ರಾಯವಾಗುತ್ತದೆ. ನಿನ್ನಲ್ಲಿ ವೈಷಮ್ಯ-ನಿರ್ಘೃಣತೆ ಎಂಬ ದೋಷಗಳು ಇವೆ ಎಂದಾಗುತ್ತದೆಯಲ್ಲವೇ?'—ಎಂಬುದಕ್ಕೆ ಭಗವಂತನು ಉತ್ತರ ಹೇಳುತ್ತಾನೆ.

ತಾನು ಎಲ್ಲ ಭೂತಗಳಲ್ಲಿಯೂ ಸಮ. ತನಗೆ ದ್ವೇಷಕ್ಕೆ ವಿಷಯರಾದವರಾಗಲೀ ಪ್ರೇಮಕ್ಕೆ ವಿಷಯರಾದವರಾಗಲೀ ಯಾರೂ ಇಲ್ಲ—ಎಂಬುದು

ಭಗವಂತನ ಉತ್ತರ. ಹಾಗಾದರೆ ಭಕ್ತಿಗೆ ಪ್ರಯೋಜನವೇ ಇಲ್ಲವೇ? ಎಂದರೆ ನನ್ನನ್ನು ಭಕ್ತಿಯಿಂದ ಭಜಿಸುವವರಲ್ಲಿ ನಾನು ಇದ್ದೇನೆ ಮತ್ತು ಅವರು ನನ್ನಲ್ಲಿ ಇದ್ದಾರೆ ಎಂದರೆ ಅಧೀನ ಎಂದು ಅಭಿಪ್ರಾಯ.

**ಯೇ ವೈ ಭಜನ್ತೇ ಪರಮಂ ಪುಮಾಂಸಂ**
**ತೇಷಾಂ ವಶಃ ಸ ತು ತೇ ತದ್ವಶಾಶ್ಚ ॥**

ಎಲ್ಲರೂ ಅವನಿಗೆ ವಶರೇ ಆದರೂ ಕೆಲವರು ಬುದ್ಧಿಪೂರ್ವಕವಾಗಿ ಅವನಿಗೆ ವಶರಾಗಿರುತ್ತಾರೆ. ಮತ್ತೆ ಕೆಲವರು ತಾವು ಅವನಿಗೆ ವಶರಾಗಿರುವುದನ್ನು ತಿಳಿದುಕೊಂಡಿಲ್ಲ. ಮೊದಲನೆಯವರಿಗೆ ಉದ್ಧವನೂ, ಎರಡನೆಯವರಿಗೆ ಶಿಶುಪಾಲನೂ ಉದಾಹರಣೆ. ಅಬುದ್ಧಿಪೂರ್ವಕವಾಗಿ ಅವನಿಗೆ ವಶನಾಗಿರುವವನು ಅವನನ್ನು ಧ್ಯಾನಮಾಡಿದರೆ ಬುದ್ಧಿಪೂರ್ವಕವಾಗಿ ಮತ್ತೆ ವಶನಾಗುತ್ತಾನೆ–ಎಂದು ಆ ಕಥೆಯಲ್ಲಿ ಹೇಳಿದೆ.

**ಅಬುದ್ಧಿಪೂರ್ವಾದ್ಯೋ ವಶಸ್ತಸ್ಯ**
**ಧ್ಯಾನಾತ್ಪುನರ್ವಶೋ ಭವತಿ ಬುದ್ಧಿಪೂರ್ವಮ್ ॥** (ಮ. ಭಾ.)

**ಓಂ ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥೩೦॥**

ಅತ್ಯಂತದುರಾಚಾರಿಯಾದವನೂ ನನ್ನನ್ನು ಅನನ್ಯಭಾವದಿಂದ ಭಜಿಸುತ್ತಿದ್ದರೆ ಅವನನ್ನು ಸಾಧುವೆಂದೇ ತಿಳಿಯಬೇಕು. ಏಕೆಂದರೆ : ಅವನು ಸರಿಯಾದ ನಿಶ್ಚಯವುಳ್ಳವನಾಗಿರುತ್ತಾನೆ.

* * *

(ಕೇವಲ ದುರಾಚಾರಿಯು ಮಾತ್ರವಲ್ಲ. ಅತ್ಯಂತದುರಾಚಾರಿ. ಮಾಡಬಾರದುದೆಲ್ಲವನ್ನೂ ಮಾಡುತ್ತಿರುವವನು. ಮಹಾಪಾಪಿಷ್ಠನೆಂಬ ಹೆಸರುಗಳಿಸಿದವನು. ಇಂತಹವನಿಗೂ ಭಕ್ತಪ್ರಿಯನಾದ ಭಗವಂತನು ಅವನಲ್ಲಿ ಪ್ರಾಮಾಣಿಕವಾದ ಅನನ್ಯಭಕ್ತಿಯಿದ್ದರೆ ಅದರ ಮಹಾಮೌಲ್ಯವನ್ನು ಪರಿಗಣಿಸುತ್ತಾ ಅಭಯಪ್ರದಾನಮಾಡಿದ್ದಾನೆ. ಎಂತಹ ದುರಾಚಾರಿಯೇ ಆಗಿದ್ದರೂ ಸಹ ಅವನು ಕಾಲ-ಕರ್ಮಸಂಯೋಗದಿಂದ ಭಗವಂತನ ಕಡೆಗೆ ತಿರುಗಿ ಪತಿತಪಾವನನಾದ ಅವನನ್ನು ಅನನ್ಯಭಕ್ತಿಯಿಂದ ಭಜಿಸುತ್ತಿದ್ದರೆ ಅಂತಹವನನ್ನು

ಸಾಧುವೆಂದೇ ತಿಳಿಯಬೇಕು. ಅವನ ಹಿಂದಿನ ದುರಾಚಾರವನ್ನು ಎತ್ತಿ ಮಾತನಾಡಬಾರದು–ಎಂಬ ಅಭಿಪ್ರಾಯ. ಏಕೆಂದರೆ–ಅವನು **ಸಮ್ಯಗ್ವ್ಯವಸಿತಃ** ಭಗವಂತನೇ ಶರಣ್ಯನೆಂಬ ನಿಶ್ಚಯಬುದ್ಧಿಯು ಅವನಿಗೆ ಉಂಟಾಗಿದೆ. ಆ ಸಿದ್ಧಾಂತದ ನಿಷ್ಠೆ ಮತ್ತು ಭಗವದ್ಭಜನೆಗಳಿಂದ ಅವನ ಎಲ್ಲ ದೋಷಗಳೂ ಕಳೆದುಹೋಗಿ ಅವನು ಶೀಘ್ರದಲ್ಲಿಯೇ ಸಾಧುವಾಗುವನು.

ಅನನ್ಯಭಕ್ತಿಯು ಅದಕ್ಕೆ ಅನುಗುಣವಾದ ಆತ್ಮಗುಣಗಳನ್ನು ಕೊಡುತ್ತದೆ. ಆ ಗುಣಗಳಿಗೆ ಅನುಗುಣವಾದ ನಡೆ-ನುಡಿಗಳೂ ಅವನಲ್ಲಿ ಉಂಟಾಗುತ್ತವೆ. ಈ ನಡೆ-ನುಡಿಗಳೇ ಸದಾಚಾರ. ಅನನ್ಯಭಕ್ತನು ಶೀಘ್ರಕಾಲದಲ್ಲಿಯೇ ಸದಾಚಾರಸಂಪನ್ನನಾಗುವುದರಿಂದ **ವರ್ತಮಾನಸಾಮಿಪ್ಯೇ ವರ್ತಮಾನವದ್ವಾ** ಎಂಬ ನ್ಯಾಯದಂತೆ ಸಾಧುವೆಂದೇ ಕರೆಯಬಹುದು. ಒಳಗಡೆಯ ನಿಶ್ಚಯದ ದೃಷ್ಟಿಯಿಂದ ಅವನು ಸಾಧುವಾಗಿಯೇ ಇದ್ದಾನೆ. ಆ ಸಾಧುತ್ವವು ಅವನ ಹೊರಗಡೆಯ ಆಚರಣೆಯಲ್ಲಿಯೂ ಹರಿದು ಬರುವುದಕ್ಕೆ ಸ್ವಲ್ಪಕಾಲವು ಬೇಕಾಗುತ್ತದೆ. ಈ ಮಧ್ಯಕಾಲದಲ್ಲಿ ಅವನ ಹೊರಗಡೆಯ ಆಚರಣೆಯನ್ನು ನೋಡಿ ದುರಾಚಾರಿಯೆಂದು ಅವನನ್ನು ಅವಹೇಳನ ಮಾಡಬಾರದು.

'ದುರಾಚಾರವಿದ್ದರೂ ಅದರಿಂದ ಭಗವತ್ಪ್ರಾಪ್ತಿಗೆ ವಿರೋಧವಿಲ್ಲ. ಅಂತಹವರಿಗೂ ಗೀತೆಯು ರಿಯಾಯಿತಿಯನ್ನು ತೋರಿಸುತ್ತದೆ'–ಎಂಬ ಕುತ್ಸಿತವಾದ ಅರ್ಥವನ್ನು ಗ್ರಹಿಸಬಾರದು. ಭಕ್ತಿಯ ಮಾಹಾತ್ಮ್ಯವನ್ನು ಉದ್ಘೋಷಿಸುವುದರಲ್ಲಿ ಮಾತ್ರ ಇದಕ್ಕೆ ತಾತ್ಪರ್ಯ. ಭಕ್ತಿಯ ಪ್ರಭಾವದಿಂದ ಶೀಘ್ರಕಾಲದಲ್ಲಿಯೇ ಆತನ ಸಿದ್ಧಾಂತದಲ್ಲಿ ಮಾತ್ರವಲ್ಲದೇ ಆಚಾರ-ವ್ಯವಹಾರಗಳಲ್ಲಿಯೂ ಸಾಧುತ್ವವುಂಟಾಗಿ, ಆತನು ನಿತ್ಯವಾದ ನೆಮ್ಮದಿಯನ್ನು ಪಡೆಯುವನು–ಎಂದು ಭಗವಂತನು ಮುಂದಿನ ಶ್ಲೋಕದಲ್ಲಿ ಹೇಳುವು ದನ್ನೂ ಗಮನಿಸಬೇಕು. ಇಂತಹ ಭಕ್ತರಿಗೆ ಉದಾಹರಣೆಯಾಗಿ ಶ್ರೀರಾಮಕೃಷ್ಣಪರಮಹಂಸರ ಶಿಷ್ಯರಾಗಿದ್ದ ಶ್ರೀಗಿರೀಶಚಂದ್ರಘೋಷ್‌ರನ್ನು ನಾವು ಸ್ಮರಿಸಬಹುದು.

ಗಿರೀಶನು ಒಬ್ಬ ನಟ. ಭಗವಂತನ ಅಸ್ತಿತ್ವವನ್ನು ನಾಟಕವೆಂದು ಭಾವಿಸಿ ಗೇಲಿಮಾಡುತ್ತಿದ್ದವನು. ಧರ್ಮ ಮತ್ತು ನೀತಿಗಳಿಗೆ ವಿರೋಧವಾದ

ಅನೇಕಾಚರಣೆಗಳನ್ನಿಟ್ಟುಕೊಂಡಿದ್ದವನು. "ನಾನು ಕುಡಿದ ಸಾರಾಯಿಬುಡ್ಡಿಗಳನ್ನು ಒಂದರ ಮೇಲೆ ಒಂದನ್ನು ಇಟ್ಟರೆ ಗೌರೀಶಂಕರಶಿಖರದಷ್ಟು ಎತ್ತರ ಹೋಗುವುದು. ನಾನು ಮಾಡದ ಪಾಪದ ಕೆಲಸವೇ ಇಲ್ಲ"–ಎಂದು ಅವನೇ ಹೇಳಿಕೊಳ್ಳುತ್ತಿದ್ದನು. ಆದರೆ ಪ್ರಾಚೀನಪುಣ್ಯದಿಂದ ಅವನಿಗೆ ಮಹಾಯೋಗಿಗಳಾದ ಭಗವಾನ್ ಶ್ರೀರಾಮಕೃಷ್ಣಪರಮಹಂಸರಲ್ಲಿ ಆಕರ್ಷಣೆಯುಂಟಾಗಿ ಅವರ ದರ್ಶನವನ್ನು ಬಾರಿ-ಬಾರಿಗೂ ಪಡೆಯುತ್ತಿದ್ದನು. ಅವರು ಆತನ ಮೇಲೆ ತಮ್ಮ ಅನುಗ್ರಹದೃಷ್ಟಿಯನ್ನು ಬೀರುತ್ತಾ ಜಗನ್ಮಾತೆಯ ಆದೇಶದಂತೆ ಆತನಲ್ಲಿ ತಮ್ಮ ಯೋಗಬೀಜವನ್ನು ಬಿತ್ತಿದರು. ಅವನು ಅತ್ಯಂತದುರಾಚಾರಿಯೆಂದು ಅನೇಕ ಮಂದಿ ಹೇಳುತ್ತಿದ್ದರೂ ಅವರು ಭಗವತಿಯ ಆದೇಶವನ್ನು ಪಾಲನೆಮಾಡಿದರು. ಅವನ ಆತ್ಮಯೋಗಕ್ಷೇಮದ ಹೊಣೆಯನ್ನು ತಾವೇ ಹೊತ್ತು ಅವನನ್ನು ಶುದ್ಧಚೈತನ್ಯದ ಕಡೆಗೆ ಅಂತರಂಗದಲ್ಲಿ ಒಯ್ಯುತ್ತಿದ್ದರು. ಅದರಿಂದಾಗಿ ಅವನ ದುರ್ವಾಸನೆಗಳು ಕ್ರಮ-ಕ್ರಮವಾಗಿ ಕಡಿಮೆಯಾಗುತ್ತಾ ಕೊನೆಗೆ ಆತನು ಮಹಾಭಕ್ತಶ್ರೇಷ್ಠನಾಗಿಬಿಟ್ಟನು. ಅವನ ಉದ್ಧಾರಕ್ಕೆ ಕಾರಣ– ಅವನ ಭಕ್ತಿ ಮತ್ತು ಮಹಾಗುರುವಿನ ಅನುಗ್ರಹಗಳೇ.)

O O O

**ಸುದುರಾಚಾರಃ** = ಅತ್ಯಂತಕುತ್ಸಿತವಾದ ಆಚಾರವುಳ್ಳವನು. **ಸಮ್ಯಕ್ ವ್ಯವಸ್ಥಿತಃ** = ಸಾಧುವಾದ ನಿಶ್ಚಯವುಳ್ಳವನು. (ಶಂ. ಭಾ.)

ಸುದುರಾಚಾರಃ = ಆಯಾ ಜಾತಿಗಳಲ್ಲಿ ಹುಟ್ಟಿದವರಿಗೆ ಇಂತಹ ಆಚಾರಗಳನ್ನು ಮಾಡಬೇಕು. ಇಂತಹುದನ್ನು ತೊರೆಯಬೇಕು ಎಂಬ ನಿಯಮವುಂಟು. ಅದನ್ನು ಮೀರಿದವನು ದುರಾಚಾರಿ. ಅಂತಹವನೂ ಕೂಡ ಭಜನೆಯೊಂದನ್ನೇ ಪ್ರಯೋಜನವನ್ನಾಗಿಟ್ಟುಕೊಂಡು ನನ್ನನ್ನು ಭಜಿಸಿದರೆ ಅವ ನನ್ನು ಸಾಧುವೆಂದೇ (ವೈಷ್ಣವಾಗ್ರೇಸರನೆಂದೇ) ಪರಿಗಣಿಸಿ ಗೌರವಿಸಬೇಕು. ಅವನು ಹಿಂದೆ ಹೇಳಿದ ಸಾಧುಗಳಿಗೆ ಸಮ. ಏಕೆಂದರೆ ಅವನ ನಿಶ್ಚಯವು ಶ್ರೇಷ್ಠವಾದುದು. ಅಖಿಲಜಗತ್ತಿಗೆ ಏಕಕಾರಣನಾದ ಪರಬ್ರಹ್ಮನೂ ಭಗವಂತನೂ ಆದ ನಾರಾಯಣನು ಚರಾಚರಗಳಿಗೆ ಅಧಿಪತಿ, ನನಗೆ ಸ್ವಾಮಿ, ಗುರು, ಗೆಳೆಯ, ಪರಮಭೋಗ್ಯ–ಎಂಬ ಸರ್ವರಿಗೂ ದುರ್ಲಭವಾಗಿರುವ ವ್ಯವಸಾಯವನ್ನು ಅವನು ಮಾಡಿದ್ದಾನೆ. ಅದರ ಕಾರ್ಯವಾದ ನಿರ್ವ್ಯಾಜ

ವಾದ ನಿರಂತರಭಜನೆಯನ್ನೂ ಮಾಡುತ್ತಿದ್ದಾನೆ. ಆದುದರಿಂದ ಅವನು ಸಾಧುವೇ. ಗೌರವಕ್ಕೆ ಯೋಗ್ಯನೇ. ಈ ನಿಶ್ಚಯವು ಮತ್ತು ಅದರ ಕಾರ್ಯ ವಾದ ಭಜನೆಯು ಅವನಿಂದ ನೆರವೇರಿದರೆ–ಅವನು ಆಚಾರವನ್ನು ಮೀರಿದ್ದು ಮುಂತಾದ ಅಲ್ಪವಾದ ಕುಂದುಕೊರತೆಗಳ ಅಷ್ಟೇ ಕಾರಣದಿಂದ ಅವನನ್ನು ಅನಾದರಿಸಬಾರದು. ಗೌರವಿಸಬೇಕು. (ರಾ. ಭಾ.)

ಸಾಮಾನ್ಯವಾಗಿ ಅವನ ಭಕ್ತನು ಸುದುರಾಚಾರಿಯಾಗಿ ಇರುವುದೇ ಇಲ್ಲ. ಆದರೂ ಕೂಡ ಬಹುಪುಣ್ಯದಿಂದ (ತನ್ನ ಯೋಗ್ಯತೆಗಿಂತಲೂ ಹೆಚ್ಚಾಗಿ ಸಂಪಾದಿಸಿದ ಪುಣ್ಯದಿಂದ) ಅವನು ಅನನ್ಯಭಕ್ತಿಯನ್ನು ಪಡೆದಿದ್ದು ದುರಾಚಾರವು ಅವನಲ್ಲಿ ಇದ್ದರೂ ಅವನನ್ನು ಸಾಧುವೆಂದೇ ತಿಳಿಯಬೇಕು. (ತನ್ನ ಅಧಿಕಾರಕ್ಕಿಂತಲೂ ಮೀರಿ ಪ್ರಯತ್ನಮಾಡಿದರೆ ಅದರಿಂದ ಒಂದು ದೋಷವೇ ಉಂಟಾಗುತ್ತದೆ.)

**ಸ್ವಾಧಿಕಾರಾಧಿಕೋ ಯತ್ನಃ ಕಥಂಚಿನ್ನೋಪಪದ್ಯತೇ ।**
**ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್ ॥** (ಮ. ಭಾ.)

**ಓಂ ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।**
**ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥೩೧॥**

ಅವನು ಬೇಗನೆ ಧರ್ಮಾತ್ಮನಾಗುವನು ಮತ್ತು ಶಾಶ್ವತವಾದ ಶಾಂತಿ ಯನ್ನೂ ಹೊಂದುವನು. ನನ್ನ ಭಕ್ತನು ನಾಶಹೊಂದುವುದಿಲ್ಲ. ಕೌಂತೇಯ! ಇದನ್ನು ದೃಢವಾಗಿ ತಿಳಿ.

* * *

(ನನ್ನನ್ನು ಅನನ್ಯಭಕ್ತಿಯಿಂದ ಭಜಿಸಲು ಪ್ರಾರಂಭಿಸಿದ ಸುದುರಾ ಚಾರಿಯೂ ಸಹ ಭಕ್ತಿಯ ಬಲದಿಂದ ಬಹುಶೀಘ್ರವಾಗಿಯೇ ತನ್ನ ಪಾಪ ಗಳೆಲ್ಲವನ್ನೂ ಕಳೆದುಕೊಂಡು ಧರ್ಮಾತ್ಮನಾಗಿಬಿಡುತ್ತಾನೆ. ನನ್ನ ಆಶ್ರಯವನ್ನು ಹೊಂದಿದ ಅವನಿಗೆ ಶಾಶ್ವತವಾದ ಶಾಂತಿಯೂ ಲಭಿಸುವುದು.

ಕೌಂತೇಯನ ಮೂಲಕವಾಗಿ ವಿಶ್ವಕ್ಕೇ ಪರಮಾತ್ಮನು ಭರವಸೆ ನೀಡು ತ್ತಾನೆ. ನ ಮೇ ಭಕ್ತಃ ಪ್ರಣಶ್ಯತಿ–ನನ್ನ ಭಕ್ತನು ಎಂದಿಗೂ ನಾಶ

ಹೊಂದುವುದಿಲ್ಲ. ದೇವರನ್ನು ನಂಬಿ ಕೆಟ್ಟವರಿಲ್ಲ. ಭಕ್ತಿಯು ಸುದೃಢವಾಗಿರಬೇಕು. ಸಂಶಯವೆಂಬುದು ಎಳ್ಳಷ್ಟೂ ಇರಬಾರದು. ಮನುಷ್ಯರನ್ನು ನಂಬುತ್ತೇವೆ. ಮೋಸಹೋಗುತ್ತೇವೆ. ಅನೇಕವೈದ್ಯರನ್ನು ನಂಬುತ್ತೇವೆ. ರೋಗವು ವಾಸಿಯಾಗದೆ ನರಳುತ್ತಲೇ ಇರುತ್ತೇವೆ. ಇಂತಹ ನಂಬಿಕೆಯನ್ನೂ ನಾವು ಪರಮಾತ್ಮನಲ್ಲಿಡುವುದಿಲ್ಲ. ಅವನಲ್ಲಿ ಯತ್ಕಿಂಚಿತ್ ನಂಬಿಕೆಯಿದ್ದರೂ ಅನನ್ಯಶರಣತೆಯಿಂದ ಅವನನ್ನು ನಾವು ಪ್ರಾರ್ಥಿಸಹೋಗುವುದಿಲ್ಲ. ಎಲ್ಲವನ್ನೂ ಬಿಟ್ಟು ಅವನ ಪಾದಗಳನ್ನು ಹಿಡಿಯುವುದಿಲ್ಲ. ಹಾಗೆ ಮಾಡಬಾರದು. ಅವನಿಲ್ಲಿ ಹೇಳಿರುವ ಮಾತನ್ನು ಸುದೃಢವಾಗಿ ನಂಬಬೇಕು. ಎಲ್ಲದಕ್ಕೂ ಅವನನ್ನೇ ಮೊರೆಹೋಗಬೇಕು. ಸಂಶಯಾತ್ಮನಾಗಿರಬಾರದು. ಅನನ್ಯಶರಣರಾದ ಅಂತಹ ಭಕ್ತರನ್ನು ಅವನು ಎಂದಿಗೂ ಕೈಬಿಡತಕ್ಕವನಲ್ಲ.)

o o o

ನನ್ನ ಅನನ್ಯಭಕ್ತನು ತನ್ನ ಆಂತರಿಕವಾದ, ಸಾಧುವಾದ ನಿಶ್ಚಯದ ಪ್ರಭಾವದಿಂದ ಹೊರಗಿನ ದುರಾಚಾರಗಳನ್ನು ಬಿಟ್ಟು ಶೀಘ್ರದಲ್ಲಿಯೇ ಧರ್ಮಾತ್ಮನಾಗಿ ನಿತ್ಯಶಾಂತಿಯನ್ನು ಪಡೆಯುತ್ತಾನೆ.

**ಮೇ ಭಕ್ತಃ**= ನನ್ನಲ್ಲಿ ಅಂತಃಕರಣವನ್ನು ಸಮರ್ಪಿಸಿದವನು–ಎಂದು ಭಗವಂತನು ನಿರೂಪಿಸುತ್ತಾನೆ. (ಶಂ. ಭಾ.)

**ನಾವಿರತೋ ದುಶ್ಚರಿತಾನ್ನಾಶಾನ್ತೋ ನಾಸಮಾಹಿತಃ ।**
**ನಾಶಾನ್ತಮನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥**

ಕಠ ೨-೨೩

ಮುಂತಾದ ಶ್ರುತಿಗಳು ಹೇಳುವಂತೆ ಆಚಾರವನ್ನು ಮೀರಿ ನಡೆದರೆ ಅದರಿಂದ ಮುಂದು-ಮುಂದಿನ ಭಜನೆಯ ಪ್ರವಾಹಕ್ಕೆ ತಡೆಯಾಗುತ್ತದೆ ಯಲ್ಲವೇ? ಹೀಗಿರುವಾಗ ದುರಾಚಾರಿಯೂ ಕೂಡ ಸಾಧುವೆಂದು ಭಗವಂತನು ಏಕೆ ಹೇಳಿದನು?–ಎಂಬ ಪ್ರಶ್ನೆಗೆ ಇಲ್ಲಿ ಅವನ ಉತ್ತರವನ್ನು ನೋಡಬಹುದು.

ಅವನಿಗೆ ನನ್ನಲ್ಲಿರುವ ನಿರತಿಶಯಪ್ರೇಮದಿಂದ ಅನನ್ಯಪ್ರಯೋಜನನಾಗಿ ಭಜನೆಮಾಡಿದುದರಿಂದ ಪಾಪಗಳನ್ನೆಲ್ಲಾ ಕಳೆದುಕೊಂಡಿದ್ದರಿಂದಲೇ ಆತನ ರಜಸ್ತಮೋಗುಣಗಳು ನಿರ್ಮೂಲವಾಗಿ ಆತನು ಶೀಘ್ರವಾಗಿಯೇ ಧರ್ಮಾತ್ಮನಾಗಿಬಿಡುತ್ತಾನೆ. ಉಪಾಸನೆಗೆ ಪ್ರತಿಬಂಧಕವಾದ ರಜಸ್ತಮೋಗುಣಗಳಿಂದ ಉಂಟಾದ ಪಾಪವನ್ನು ತೊಳೆದುಹಾಕುವುದಕ್ಕೇ ಆಚಾರವು ಇರುವುದು. ಆ ಪಾಪವು ನನ್ನ ಭಜನೆಯಿಂದ ಕಳೆದುಹೋಗುವುದರಿಂದ ಅವನ ಉಪಾಸನೆಗೆ ಪ್ರತಿಬಂಧವಿಲ್ಲ.

ಇಲ್ಲಿ ಧರ್ಮಶಬ್ದಕ್ಕೆ ಅನನ್ಯಭಜನೆ ಎಂದು ಅರ್ಥ. ಧರ್ಮಾತ್ಮನಾಗುತ್ತಾನೆ ಎಂದರೆ ವಿರೋಧಗಳಿಲ್ಲದ ಮತ್ತು ಸರ್ವಾಂಗಸಾಧನವಾದ ನನ್ನ ಭಜನೆಯೊಂದರಲ್ಲೇ ನೆಟ್ಟ ಮನಸ್ಸುಳ್ಳವನಾಗುತ್ತಾನೆ.

**ಶಶ್ವತ್ ಶಾನ್ತಿಂ ನಿಗಚ್ಛತಿ**=ಶಾಶ್ವತವೂ, ಪುನರಾವೃತ್ತಿಯನ್ನು ಹೋಗಲಾಡಿಸುವುದೂ ಆಗಿರುವ ನನ್ನ ಪ್ರಾಪ್ತಿಗೆ ವಿರೋಧಿಯಾದ ದುರಾಚಾರದ ನಿವೃತ್ತಿಯನ್ನು ಹೊಂದುತ್ತಾನೆ. ನನ್ನ ಭಕ್ತಿಯಲ್ಲಿ ಪ್ರಾಮಾಣಿಕವಾಗಿ ತೊಡಗಿದವನು ವಿರೋಧವಾದ ಆಚಾರದಿಂದ ಮಿಶ್ರನಾಗಿದ್ದರೂ ನಾಶ ಹೊಂದುವುದಿಲ್ಲ. ಭಕ್ತಿಯ ಮಾಹಾತ್ಮ್ಯದಿಂದ ಎಲ್ಲ ವಿರೋಧಗಳನ್ನೂ ಕಳೆದುಕೊಂಡು ಶೀಘ್ರದಲ್ಲಿಯೇ ಪರಿಪೂರ್ಣಭಕ್ತಿಯುಳ್ಳವನಾಗುತ್ತಾನೆ.

(ರಾ. ಭಾ.)

ನನ್ನಲ್ಲಿ ಯಾವನಿಗೆ ಅನನ್ಯಭಕ್ತಿಯಿದೆಯೋ ಅವನು ಒಳ್ಳೆಯ ನಿಶ್ಚಯವುಳ್ಳವನಾದುದರಿಂದ ಅವನು ಸುದುರಾಚಾರಿಯಾಗಿದ್ದರೂ ಅವನನ್ನು ಸಾಧುವೆಂದೇ ತಿಳಿಯಬೇಕು–ಎಂದು ಹಿಂದಿನ ಶ್ಲೋಕದಲ್ಲಿ ನಿರೂಪಿಸಿದೆ. ಇದು ಹೇಗೆ ಎಂದರೆ : ಅವನು ಶೀಘ್ರದಲ್ಲಿಯೇ ಧರ್ಮಾತ್ಮನಾಗಿಬಿಡುತ್ತಾನೆ ಎಂದು ಭಗವಂತನು ಉತ್ತರವನ್ನು ಹೇಳುತ್ತಾನೆ. ಹೀಗೆ ಭಕ್ತಿ ಮತ್ತು ದುರಾಚಾರಗಳು ಕೆಲವು ಕಡೆ ಒಂದೇ ವ್ಯಕ್ತಿಯಲ್ಲಿ ಕೆಲವು ಕಾಲ ಇರಬಹುದು. ಇಲ್ಲಿ ಹೇಳಿರುವುದು ಮನುಷ್ಯರಿಗೆ ಅನ್ವಯಿಸುವುದಿಲ್ಲ. ದೇವತೆಗಳಿಗೆ ಮತ್ತು ದೇವಾಂಶಪುರುಷರು–ಮುಂತಾದವರಿಗೆ ಮಾತ್ರವೇ ಅನ್ವಯಿಸುತ್ತದೆ. ಅವರನ್ನು ಬಿಟ್ಟು ಸಾಧಾರಣರಿಗಾದರೋ–ತಾವು ಭಕ್ತರೂ ಮತ್ತು ದುರಾಚಾರಿಗಳೂ ಎರಡು ಆಗಿದ್ದೇವೆ-ಎಂದು ಹೇಳಿಕೊಂಡರೆ ಅದು ಡಾಂಭಿಕವಾಗುತ್ತದೆ.

ದುರಾಚಾರಿಗಳಿಗೆ ಜ್ಞಾನಪ್ರಾಪ್ತಿಯಿಲ್ಲ. ಆಚಾರವನ್ನು ಜ್ಞಾನಸಾಧನವೆಂದು ಶಾಸ್ತ್ರಗಳು ಹೇಳುತ್ತವೆ. ಜ್ಞಾನವಿಲ್ಲದಿದ್ದರೆ ಒಳ್ಳೆಯ ಭಕ್ತಿಯು ಉಂಟಾಗುವುದಿಲ್ಲ.

**ವಿನಾ ಜ್ಞಾನಂ ಕುತೋ ಭಕ್ತಿಃ ಕುತೋ ಭಕ್ತಿರ್ವಿನಾ ಚ ತತ್ ।**

ಸಾಮಾನ್ಯವಾದ ಪಾಪವುಳ್ಳವರಿಗೂ ಸತ್ಸಂಗದ ಮಹಿಮೆಯಿಂದ ದೃಢವಾದ ಭಕ್ತಿಯುಂಟಾಗುವುದೂ ಉಂಟು. (ಮ. ಭಾ.)

**ಓಂ ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥**
**ಓಂ ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥**

ಪಾರ್ಥ! ನನ್ನನ್ನು ಆಶ್ರಯಿಸಿದರೆ ಸ್ತ್ರೀಯರೂ, ವೈಶ್ಯರೂ, ಶೂದ್ರರೂ ಮತ್ತು ಪಾಪಯೋನಿಗಳೂ ಸಹ ಪರಮಗತಿಯನ್ನು ಹೊಂದುವರು. ಹೀಗಿರುವಲ್ಲಿ ಪುಣ್ಯಯೋನಿಗಳೂ ಭಕ್ತರೂ ಆದ ಬ್ರಾಹ್ಮಣರೂ ರಾಜರ್ಷಿಗಳೂ ಪರಮಗತಿಯನ್ನು ಹೊಂದುವರೆಂದು ಹೇಳುವ ಅಗತ್ಯವೇನಿದೆ? ಅನಿತ್ಯವೂ ಅಸುಖವೂ ಆದ ಈ ಲೋಕವನ್ನು ಪಡೆದಿರುವ ನೀನು ನನ್ನನ್ನೇ ಭಜಿಸು.

* * *

(ಪಾರ್ಥ! ಪಾಪಯೋನಿಗಳಲ್ಲಿ ಹುಟ್ಟಿದವರೂ ಸಹ ನನ್ನನ್ನು ಆಶ್ರಯಿಸಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ. ಸ್ತ್ರೀಯರು, ವೈಶ್ಯರು, ಶೂದ್ರರೂ ಸಹ ಪರಮಗತಿಯನ್ನು ಹೊಂದುತ್ತಾರೆ. ಭಗವಂತನ ಒಲುಮೆಗೆ ಜಾತಿಭೇದವಾಗಲೀ–ಲಿಂಗಭೇದವಾಗಲೀ ಇಲ್ಲ. ತಮ್ಮನ್ನು ಭಗವಂತನಿಗೆ ಅರ್ಪಿಸಿಕೊಳ್ಳುವ, ಭಗವಂತನನ್ನು ಅನನ್ಯಶರಣತೆಯಿಂದ ಭಜಿಸುವ ಮನುಷ್ಯಮಾತ್ರದವರು ಪರಮಗತಿಯನ್ನು ಹೊಂದುತ್ತಾರೆ. ಭಕ್ತಿಯೆಂಬುದೊಂದು ಗಂಗಾಜಲ. ಅದರಲ್ಲಿ ಮಿಂದವರೆಲ್ಲರೂ ಪವಿತ್ರರೇ ಆಗುತ್ತಾರೆ. ಹೊಳೆ-ಹಳ್ಳಗಳೆಂಬ ಭೇದವು ಅವು ಗಂಗೆಯಲ್ಲಿ ಸಂಗಮವಾಗುವವರೆಗೆ ಮಾತ್ರ. ಒಮ್ಮೆ ಗಂಗೆಗೆ ಕೂಡಿದ ಮೇಲೆ ಅವು ಗಂಗಾರೂಪವಾಗಿಬಿಡುವುವು. ಕಟ್ಟಿಗೆಯನ್ನು ಬೆಂಕಿಯಲ್ಲಿ ಹಾಕುವವರೆಗೆ ಮಾತ್ರ ಇದು ಕಾಡುಮರ ;

ದಿಂಡಿಗ ; ಸರ್ವೇ ಸೌದೆ ; ಗಂಧದ ಮರ ; ತೇಗದ ಮರ–ಎಂಬ ಭೇದವಿರುತ್ತದೆ. ಬೆಂಕಿಗೆ ಹಾಕಿದನಂತರ ಎಲ್ಲವೂ ಕೆಂಡವೇ ಆಗಿ ಪರಿಣಮಿಸುವುದು. ರಾಜಮುದ್ರೆಯು ತೊಗಲಿನ ಮೇಲೆ ಬಿದ್ದರೂ ಬಹುಮೌಲ್ಯದ್ದಾಗುತ್ತದೆ. ಅದರಂತೆಯೇ ಭಗವಂತನ ಮುದ್ರೆಯು ಯಾವನ ಮೇಲೆ ಬಿದ್ದರೂ ಅವನು ಪವಿತ್ರಾತ್ಮನಾಗುತ್ತಾನೆ. ಈ ಕಾರಣದಿಂದಲೇ ಭಕ್ತಿಮಾರ್ಗವು ಬಹುಸುಲಭವಾದುದು. ಕಲ್ಲಿನಂತೆ ಜಡನಾಗಿರಲಿ, ಯಾವುದೇ ಜಾತಿಯಲ್ಲಿ ಹುಟ್ಟಿರಲಿ, ಹೆಂಗಸಾಗಲೀ, ಗಂಡಸಾಗಲೀ–ಪರಮಾತ್ಮನು ಆಶಿಸುವುದು ನಿಷ್ಕಳಂಕವಾದ ಅನನ್ಯಭಕ್ತಿಯನ್ನು ಮಾತ್ರ. ಸ್ಪರ್ಶಶಿಲೆಯು ಯಾವುದೇ ಲೋಹವನ್ನೂ ಸಹ ಭೇದಭಾವವಿಲ್ಲದೇ ಚಿನ್ನವನ್ನಾಗಿ ಪರಿವರ್ತಿಸುವಂತೆ ಭಗವಂತನು ಯಾವ ಮನುಷ್ಯನನ್ನೇ ಆದರೂ ಅವನು ಅವ್ಯಭಿಚಾರಿಣಿಯಾದ ಭಕ್ತಿಭಾವದಿಂದ ಕೂಡಿಬಿಟ್ಟಿದ್ದರೆ ತನ್ನೊಳಗೇ ಸೇರಿಸಿಕೊಂಡುಬಿಡುತ್ತಾನೆ. ತನ್ನವನನ್ನಾಗಿ ಮಾಡಿಕೊಂಡುಬಿಡುತ್ತಾನೆ. ಅಂತಹವರಿಗೆ ಪರಮಗತಿಯು ಕಟ್ಟಿಟ್ಟಬುತ್ತಿಯಾಗಿರುತ್ತದೆ. ಬಿರುಗಾಳಿಯಲ್ಲಿ ಆನೆಗಳೇ ಹಾರಿಹೋದುವೆಂದರೆ ಸೊಳ್ಳೆಯು ಹಾರಿಹೋಯಿತೆಂಬ ವಿಷಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಭಗವಂತನ ದಯಾಸಮುದ್ರದೊಳಗೆ ಬಿದ್ದ ಪಾಪಿಷ್ಠರೂ, ಸ್ತ್ರೀ-ವೈಶ್ಯ-ಶೂದ್ರರೂ ಪಾವನರಾಗಿ ಪರಮಗತಿಯನ್ನು ಪಡೆಯುವರೆಂದು ಹೇಳಿದನಂತರ ಪುಣ್ಯಯೋನಿಜರಾದ ಮತ್ತು ಭಕ್ತರಾದ ಬ್ರಾಹ್ಮಣರೂ ರಾಜರ್ಷಿಗಳೂ ಭಗವದನುಗ್ರಹದಿಂದ ಪರಮಪದವನ್ನು ಸೇರುತ್ತಾರೆಂಬ ವಿಷಯವನ್ನು ಪ್ರತ್ಯೇಕವಾಗಿ ಹೇಳುವ ಕಾರಣವಿಲ್ಲ. ಅವರೆಲ್ಲರೂ ಪರಮಪದವನ್ನು ಸೇರಿಯೇ ಸೇರುತ್ತಾರೆ.

ಸ್ವಾಮಿಯು ಅರ್ಜುನನಿಗೆ ಆದೇಶನೀಡುತ್ತಾನೆ :

"ಅರ್ಜುನ! ನೀನೀಗ ಅಶಾಶ್ವತವೂ ದುಃಖಮಯವೂ ಆಗಿರುವ ಭೂಲೋಕವನ್ನು ಪಡೆದಿರುವೆ. ಈ ಬಂಧನದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಈ ದುಃಖದಿಂದ ಪಾರಾಗುವುದಕ್ಕಾಗಿ ನನ್ನನ್ನು ಭಜಿಸು." )

o o o

**ಅನಿತ್ಯಂ....ಭಜಸ್ವ** = ಕ್ಷಣಭಂಗುರವೂ ಸುಖರಹಿತವೂ ಆದ ಮನುಷ್ಯಲೋಕವನ್ನು ಹೊಂದಿ ಪುರುಷಾರ್ಥಸಾಧನವೂ ದುರ್ಲಭವೂ ಆದ ಮನುಷ್ಯತ್ವವನ್ನು ಪಡೆದು ನನ್ನ ಸೇವೆಮಾಡು.

**ಪುರುಷಾರ್ಥಸಾಧನಂ ದುರ್ಲಭಮ್ । ಮನುಷ್ಯತ್ವಂ ಲಬ್ಧ್ವಾ ಸೇವಸ್ವ ಮಾಮ್ ।** (ಶಂ. ಭಾ.)

ನೀನಾದರೋ ರಾಜರ್ಷಿಯಾಗಿರುವೆ. ಅಸ್ಥಿರವೂ ತಾಪತ್ರಯಗಳಿಂದ ಕೂಡಿದ್ದು ಅಸುಖವೂ ಆದ ಈ ಲೋಕದಲ್ಲಿ ಇದ್ದೀಯೆ. ಆದುದರಿಂದ ನನ್ನನ್ನು ಸೇವಿಸು.

**ಅತಸ್ತ್ವಂ ರಾಜರ್ಷಿಃ ಅಸ್ಥಿರಂ ತಾಪತ್ರಯಾಭಿಹತತಯಾ ಅಸುಖಂ ಚ ಇಮಂ ಲೋಕಂ ಪ್ರಾಪ್ಯ ಮಾಂ ಭಜಸ್ವ** (ರಾ. ಭಾ.)

**ಓಂ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥೩೪॥**

ನನ್ನಲ್ಲಿಯೇ ಮನಸ್ಸುಳ್ಳವನಾಗು. ನನ್ನ ಭಕ್ತನಾಗು. ನನ್ನನ್ನೇ ಕುರಿತು ಯಾಗಮಾಡು. ನನ್ನನ್ನೇ ನಮಸ್ಕರಿಸು. ಈ ರೀತಿಯಲ್ಲಿ ನನ್ನನ್ನೇ ಆಶ್ರಯನನ್ನಾಗಿ ಭಾವಿಸು. ನನ್ನಲ್ಲಿ ಆಸಕ್ತನಾಗಿ–ನಿನ್ನನ್ನು ಹೀಗೆ ನನ್ನ ಉಪಾಸನೆಯಲ್ಲಿ ತೊಡಗಿಸಿದರೆ–ನನ್ನನ್ನೇ ಪಡೆಯುವೆ.

* * *

(ಭಗವಂತನನ್ನು ಪಡೆದುಕೊಳ್ಳುವ ಮಾರ್ಗವನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿಯೂ ಸೂಚಿಸುತ್ತಾನೆ. ನನ್ನಲ್ಲಿಯೇ ನೆಟ್ಟಮನಸ್ಸುಳ್ಳವನಾಗು. ನನ್ನನ್ನು ಹೊರತಾಗಿ ಬೇರೆ ಯಾವುದನ್ನೂ ಯೋಚಿಸಬೇಡ. ಎಲ್ಲದರಲ್ಲಿಯೂ ಎಲ್ಲ ಪದಾರ್ಥಗಳಲ್ಲಿಯೂ ನೀನು ನನ್ನನ್ನೇ ಕಾಣುವಂತಾಗಬೇಕು. ನಿನ್ನ ಮನಸ್ಸು ಅಷ್ಟು ಆಳದವರೆಗೆ ನನ್ನಲ್ಲಿ ನೆಟ್ಟಿರಬೇಕು. ಮದ್ಭಕ್ತಃ = ಭಕ್ತನ ಹೊರತಾಗಿ ಬೇರೆಯವನಿಗೆ ಪರಮಾತ್ಮನಲ್ಲಿ ನೆಟ್ಟಮನಸ್ಸಿರಲು ಸಾಧ್ಯವೇ ಆಗುವುದಿಲ್ಲ. ಕೇವಲ ಧ್ಯಾನಮಾತ್ರವಲ್ಲದೇ ಕೀರ್ತನ-ಗಾಯನಗಳಿಂದಲೂ ನನ್ನನ್ನು ಆರಾಧಿಸಬಹುದು ಎಂಬುದನ್ನು ಸೂಚಿಸುವುದಕ್ಕಾಗಿ ಭಕ್ತನಾಗು ಎಂದು ಭಗವಂತನು ಹೇಳುತ್ತಾನೆ. ಯಾಗಾದಿಗಳನ್ನೂ ಸಹ ನನಗಾಗಿಯೇ ಮಾಡು. ನನ್ನನ್ನೇ ಕುರಿತು ಮಾಡು. ನನ್ನ ಪ್ರೀತ್ಯರ್ಥವಾಗಿ ಮಾಡು. ಫಲಾಭಿಸಂಧಿಯಿಲ್ಲದೇ ಮಾಡು. ನನಗೆ ನಮಸ್ಕಾರಮಾಡು. ತನ್ನತನವನ್ನು ಸಂಪೂರ್ಣವಾಗಿ ತ್ಯಾಗಮಾಡು.

ಅಹಂಕಾರವನ್ನು ತೊರೆ. ಅಲೆಯು ಬಂದಾಗ ತಲೆತಗ್ಗಿಸಿ ನಿಲ್ಲಬೇಕೆನ್ನುತ್ತಾರೆ. ಸಂಸಾರವೆಂಬ ಅಲೆಯಿಂದ ತಪ್ಪಿಸಿಕೊಳ್ಳಲು ನತಶಿರನಾಗಿಯೇ ಇರಬೇಕು. ಇಲ್ಲದಿದ್ದರೆ ಆ ಅಲೆಗಳೊಡನೆಯೇ ಹೋಗಿಬಿಡಬೇಕಾಗುತ್ತದೆ. ಮತ್ಪರಾಯಣನಾಗು. ನನ್ನನ್ನೇ ಆಶ್ರಯವನ್ನಾಗಿ ಮಾಡಿಕೋ. ನನ್ನ ಆಶ್ರಯವನ್ನು ಬಯಸುವವರಿಗೆ ನನ್ನ ಹೃದಯವು ಸದಾ ತೆರೆದ ಬಾಗಿಲಿನಂತಿರುತ್ತದೆ. ಹಿಂದೆ ಹೇಳಿದಂತೆ ನನ್ನ ಅನನ್ಯಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳಲು ನಾನು ಸರ್ವದಾ ಟೊಂಕಕಟ್ಟಿ ನಿಂತಿದ್ದೇನೆ. ನಿನ್ನನ್ನು ಈ ವಿಧದಲ್ಲಿ ಪರಿವರ್ತಿಸಿಕೊಂಡರೆ ಪರಮಗತಿಯನ್ನು ಹೊಂದುವೆ–ಎಂದು ಭಗವಂತನು ಅರ್ಜುನ ನನ್ನು ನೆಪಮಾಡಿಕೊಂಡು ಗೀತೆಯ ಭಕ್ತರೆಲ್ಲರಿಗೂ ಅಭಯಪ್ರದಾನವನ್ನು ಮಾಡಿದ್ದಾನೆ. ಸಂಶಯವನ್ನು ಸಂಪೂರ್ಣವಾಗಿ ತೊರೆದು ಅವನ ಉಡಿ ಯೊಳಗೆ ಸೇರಿಕೊಳ್ಳುವುದು ಎಲ್ಲರಿಗೂ ಶ್ರೇಯಸ್ಕರ.)

o o o

**ಯುಕ್ತ್ವಾ** =ಚಿತ್ತವನ್ನು ನನ್ನಲ್ಲಿ ಇರಿಸಿ. **ಮತ್ಪರಾಯಣಃ**=ನಾನೇ ಎಲ್ಲ ಭೂತಗಳಿಗೂ ಆತ್ಮವೂ ಮತ್ತು ಪರಮಗತಿಯು. ಅಂತಹ ನನ್ನನ್ನು ನೀನು ಸೇರುವೆ. (ಶಂ. ಭಾ.)

ಸರ್ವೇಶ್ವರೇಶ್ವರನೂ, ಕಲ್ಯಾಣಗುಣಪರಿಪೂರ್ಣನೂ, ಪರಬ್ರಹ್ಮಪುರು ಷೋತ್ತಮನೂ ಆದ ನನ್ನಲ್ಲಿ ಮನಸ್ಸನ್ನಿರಿಸು. ತೈಲಧಾರೆಯಂತೆ ಅವಿಚ್ಛಿನ್ನ ವಾದ ಮನಸ್ಸಿನ ಪ್ರವಾಹವನ್ನು ನನ್ನಲ್ಲಿ ಹರಿಸುತ್ತಿರು. ಅತ್ಯಂತಪ್ರಿಯ ನಾಗಿ ನನ್ನಲ್ಲಿ ಯುಕ್ತನಾಗು. ನಿರತಿಶಯಪ್ರೇಮಾನುಭವದಿಂದ ಪ್ರೇರಿತನಾಗಿ ನನ್ನನ್ನು ಕುರಿತು ಯಾಗಮಾಡುವುದರಲ್ಲಿ ಆಸಕ್ತನಾಗು. ಯಾಗವೆಂದರೆ ಪರಿಪೂರ್ಣವಾದ ಶೇಷವೃತ್ತಿ. ನನ್ನಲ್ಲಿ ಅತ್ಯಂತನಮ್ರಭಾವದಿಂದಿರು. ನನ್ನನ್ನೇ ಶ್ರೇಷ್ಠವಾದ ಅಯನವನ್ನಾಗಿ ಹೊಂದು. ನನ್ನನ್ನು ಬಿಟ್ಟು ಆತ್ಮ ಧಾರಣೆಯೇ ಇಲ್ಲವೆಂದು ತಿಳಿದು ನನ್ನನ್ನಾಶ್ರಯಿಸು. ಹೀಗೆ ಮನಸ್ಸನ್ನು ನನ್ನಲ್ಲಿ ಜೋಡಿಸಿ ನನ್ನಲ್ಲಿ ಪರಾಯಣನಾಗಿ ನಿರತಿಶಯಪ್ರೀತಿಯಿಂದ ನನ್ನನ್ನು ಅನುಭವಿಸಲು ಸಮರ್ಥವಾದ ಮನಸ್ಸನ್ನು ಪಡೆದು ನನ್ನನ್ನೇ ಹೊಂದುವೆ. ಈ ಶ್ಲೋಕದಲ್ಲಿರುವ ಆತ್ಮಶಬ್ದಕ್ಕೆ ಮನಸ್ಸು ಎಂದು ಅರ್ಥ. ಈ ರೂಪದ

ಮನಸ್ಸಿನಿಂದ ನನ್ನನ್ನು ಧ್ಯಾನಿಸಿ ಅನುಭವಿಸಿ ನನ್ನನ್ನು ಪೂಜಿಸುತ್ತಾ ನನ್ನನ್ನೇ ಹೊಂದುವೆ–ಎಂಬ ಅರ್ಥ. (ರಾ. ಭಾ.)

**ಇತಿ ಶ್ರೀಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ ಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾ ರಾಜಗುಹ್ಯೋ ನಾಮ ನವಮೋಽಧ್ಯಾಯಃ**

೩೩ನೆಯ ಅಧ್ಯಾಯವು ಮುಗಿಯಿತು.

**ಭಗವದ್ಗೀತೆಯಲ್ಲಿ ೯ನೆಯ ಅಧ್ಯಾಯವು ಮುಗಿಯಿತು.**

# ಭಗವದ್ಗೀತಾ–೧೦ನೆಯ ಅಧ್ಯಾಯ

೩೪ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಭಗವಂತನ ವಿಭೂತಿಯೋಗ ಮತ್ತು ಪ್ರಭಾವಸಹಿತವಾದ ಭಕ್ತಿಯೋಗದ ಕಥನ : ಪುನಃ ಪ್ರಶ್ನಿಸಿದ ಅರ್ಜುನನಿಗೆ ತನ್ನ ವಿಭೂತಿಗಳನ್ನೂ ಮತ್ತುಯೋಗಶಕ್ತಿಯನ್ನೂ ಭಗವಂತನು ವರ್ಣಿಸಿದುದು

**ಶ್ರೀಭಗವಾನುವಾಚ :**

**ಓಂ ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥**

ಭಗವಂತನು ಹೇಳುತ್ತಾನೆ :

ಮಹಾಬಾಹೋ! ಶ್ರೇಷ್ಠವಾದ ನನ್ನ ಮಾತನ್ನು ಪುನಃ ಕೇಳು. ನನ್ನ ವಿಷಯದಲ್ಲಿ ಪ್ರೀತನಾಗಿರುವ ನಿನಗೆ ಹಿತವನ್ನು ಉಂಟುಮಾಡುವ ಅಪೇಕ್ಷೆಯಿಂದ ಹೇಳುತ್ತೇನೆ.

* * *

(‘ಪುನಃ ನನ್ನ ಶ್ರೇಷ್ಠವಾದ ಉಪದೇಶವನ್ನು ಕೇಳು’ ಎಂದು ಶ್ರೀಕೃಷ್ಣನು ಹೇಳಿದ್ದರಿಂದ ಹಿಂದೆ ಹೇಳಿದುದನ್ನೇ ಪುನಃ ವಿಸ್ತರಿಸಿ ಹೇಳು ತ್ತೇನೆ–ಎಂದಂತಾಯಿತು. ಅಧ್ಯಾತ್ಮವಿಷಯಗಳು ಸುಲಭವಾಗಿ ಬುದ್ಧಿಗೆ

ಅಂಟಿಕೊಳ್ಳುವುದಿಲ್ಲ. ಹೇಳಿದುದನ್ನೇ ಒಂದಲ್ಲ ; ನಾಲ್ಕಾರು ಬಾರಿ ಹೇಳ ಬೇಕು. ಆಗಲೇ ಅದು ಮನದಟ್ಟಾದೀತು. ನಮ್ಮ ಬುದ್ಧಿಯು ಕುಸಂಸ್ಕಾರದಲ್ಲಿ ಮುಳುಗಿಹೋಗಿರುವುದರಿಂದ ಅದನ್ನು ಶುದ್ಧಿಗೊಳಿಸಿ ಅಧ್ಯಾತ್ಮಬುದ್ಧಿಯನ್ನಾಗಿ ಪರಿವರ್ತನೆಮಾಡಬೇಕಾದರೆ ಜನ್ಮಾಂತರದ ರೋಗವನ್ನು ವಾಸಿ ಮಾಡುವುದಕ್ಕಿಂತಲೂ ಹೆಚ್ಚು ಕಷ್ಟವಿದೆ. ಜನ್ಮಾಂತರದ ರೋಗವನ್ನು ಗುಣಪಡಿಸಬೇಕಾದರೆ ಅನೇಕ ದಿವಸಗಳವರೆಗೆ ಔಷಧವನ್ನು ಕೊಡಬೇಕಾಗು ತ್ತದೆ. ಹಾಗೆಯೇ ಆಧ್ಯಾತ್ಮಿಕ ವಿಷಯಗಳು ಮನದಟ್ಟಾಗಬೇಕಾದರೆ ಪುನಃ ಪುನಃ ಹೇಳಲೇಬೇಕಾಗುತ್ತದೆ. ಏಕೆ ಮನದಟ್ಟುಮಾಡಿಸಬೇಕು? ಒಮ್ಮೆ ಹೇಳಿ ಮುಗಿಸಬಾರದೇ?–ಎಂಬುದಕ್ಕೆ ಶ್ರೀಕೃಷ್ಣನೇ ಉತ್ತರಿಸುತ್ತಾನೆ : 'ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ನಿನಗೆ ಹಿತಮಾಡಬೇಕೆಂಬುದೇ ನನ್ನ ಇಚ್ಛೆಯಾಗಿದೆ. ಆದುದರಿಂದ ಪುನಃ ಹೇಳುತ್ತೇನೆ'–ಎನ್ನುತ್ತಾನೆ ಶ್ರೀಕೃಷ್ಣ. ಶಿಷ್ಯನನ್ನು ಕಂಡರೆ ಶ್ರೀಕೃಷ್ಣನಿಗೆ ಅಷ್ಟೊಂದು ಅಕ್ಕರೆ. ಅರ್ಜುನನಾದರೋ–**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್**–ಎಂದು ಹೇಳಿ ತನ್ನನ್ನೇ ಶ್ರೀಕೃಷ್ಣನಿಗೆ ಅರ್ಪಿಸಿಕೊಂಡುಬಿಟ್ಟಿದ್ದಾನೆ. ಇಂತಹ ಶಿಷ್ಯನ ಹಿತವನ್ನು ಬಯಸಿ ಶ್ರೀಕೃಷ್ಣನು ಪುನಃ ಹಿಂದೆ ಹೇಳಿದುದನ್ನೇ ಮತ್ತಷ್ಟು ವಿಸ್ತರಿಸಿ ಮನದಟ್ಟಾಗುವಂತೆ ಹೇಳಲು ಉಪಕ್ರಮಿಸಿದ್ದಾನೆ.

ಶತಶ್ಲೋಕಿಯಲ್ಲಿ ಶ್ರೀಶಂಕರಭಗವತ್ಪಾದರು ಹೇಳಿರುವಂತೆ ಬಹಳ ಕಾಲದಿಂದಲೂ ಅಳುತ್ತಾ ಚಂಡಿಹಿಡಿದಿರುವ ಮಗುವನ್ನು ಸಮಾಧಾನಕ್ಕೆ ತರುವುದಕ್ಕೋಸ್ಕರ ತಾಯಿಯು ಅದರ ಮುಂದೆ ದ್ರಾಕ್ಷಿ, ಖರ್ಜೂರ, ಮಾವು, ಬಾಳೇಹಣ್ಣು–ಮುಂತಾದ ನಾನಾಪದಾರ್ಥಗಳನ್ನು ಇಡುತ್ತಾಳೆ. ಹಾಗೆಯೇ ಅನೇಕ ಜನ್ಮ-ಜನ್ಮಾಂತರಗಳಿಂದ ಅನುಸರಿಸಿಕೊಂಡು ಬಂದಿರುವ ಮೌಢ್ಯಸಂಸ್ಕಾರದಿಂದ ಅತ್ಯಂತಮೂಢವಾಗಿಬಿಟ್ಟಿರುವ ಮನಸ್ಸನ್ನು ನೆಮ್ಮದಿಗೆ ತರಬೇಕಾದರೆ ಉಪನಿಷತ್ತು, ಭಗವದ್ಗೀತೆ ಇವುಗಳು ಅನೇಕಮಾರ್ಗ ಗಳನ್ನು ಅವಲಂಬಿಸುತ್ತವೆ. ಹೇಳಿದ್ದ ವಿಷಯವನ್ನೇ ಮತ್ತೆ ಮತ್ತೆ ಬೇರೆ-ಬೇರೆ ಪ್ರಕಾರಗಳಲ್ಲಿ ಹೇಳುತ್ತವೆ. ಆತ್ಮತತ್ತ್ವವನ್ನು ತಿಳಿಯುವುದು ಅತಿಕಷ್ಟ. ನಮ್ಮ ಬುದ್ಧಿಯು ಅತ್ಯಂತಮೂಢವಾದುದು. ಇಂತಹ ನಮಗೆ

ಭಗವಂತನು ಅರ್ಜುನನಿಗೆ ಉಪದೇಶಮಾಡುವ ನೆಪದಲ್ಲಿ ನಾನಾಪ್ರಕಾರಗಳಿಂದ ತತ್ತ್ವವನ್ನು ಬೋಧಿಸುತ್ತಿದ್ದಾನೆ–ಎಂದು ತಿಳಿಯಬೇಕು.

**ಸ್ವಂ ಬಾಲಂ ರೋದಮಾನಂ ಚಿರತರಸಮಯಂ**
**ಶಾನ್ತಿಮಾನೇತುಮಗ್ರೇ**
**ದ್ರಾಕ್ಷಂ ಖಾರ್ಜೂರಮಾಮ್ರಂ**
**ಸುಕದಲಮಥವಾ ಯೋಜಯತ್ಯಮ್ಬಿಕಾಸ್ಯ ।**
**ತದ್ವಚ್ಚೇತೋತಿಮೂಢಂ ಬಹುಜನನಭವಾತ್**
**ಮೌಢ್ಯಸಂಸ್ಕಾರಯೋಗಾತ್**
**ಬೋಧೋಪಾಯೈರನೇಕೈರವಶಮುಪ-**
**ನಿಷದ್ಬೋಧಯಾಮಾಸ ಸಮ್ಯಕ್ ॥** (ಶತಶ್ಲೋಕೀ)

o o o

ಏಳನೆಯ ಮತ್ತು ಒಂಬತ್ತನೆಯ ಅಧ್ಯಾಯಗಳಲ್ಲಿ ಭಗವಂತನ ತತ್ತ್ವ ಮತ್ತು ವಿಭೂತಿಗಳನ್ನು ವರ್ಣಿಸಿಯಾಯಿತು. ಈಗ ಭಗವಂತನನ್ನು ಯಾವ ಯಾವ ಭಾವಗಳಲ್ಲಿ ಚಿಂತಿಸುವುದು ಯೋಗ್ಯವೋ ಆ ಭಾವಗಳನ್ನು ಹೇಳಬೇಕಾಗಿದೆ ಮತ್ತು ಭಗವಂತನ ತತ್ತ್ವವನ್ನು ಹೇಳಬೇಕು. ಅವುಗಳನ್ನು ಹಿಂದೆ ಹೇಳಿದ್ದರೂ ಕೂಡ ತಿಳಿಯುವುದು ತುಂಬ ಕಷ್ಟವಾದುದರಿಂದ ಮತ್ತೆ ಅದನ್ನು ವರ್ಣಿಸಬೇಕಾಗಿದೆ.

**ಪರಮಂ ವಚಃ** = ನಿರತಿಶಯವಸ್ತುವನ್ನು ಪ್ರಕಾಶಪಡಿಸುವ ಶ್ರೇಷ್ಠವಾದ ಮಾತನ್ನು ; **ಪ್ರೀಯಮಾಣಾಯ ತೇ**= ನನ್ನ ಮಾತನ್ನು ಕೇಳಿ ನೀನು ತುಂಬ ಸಂತೋಷಪಡುವೆ. ಅಮೃತಪಾನಮಾಡುತ್ತಿರುವವನಂತೆ ತುಂಬ ಆನಂದಪಡುವೆ. (ಶಂ. ಭಾ.)

ಹಿಂದೆ ಪರಿಕರಸಹಿತವಾದ ಭಕ್ತಿಯೋಗವನ್ನು ಹೇಳಿಯಾಯಿತು. ಈಗ ಭಕ್ತಿಯ ಉತ್ಪತ್ತಿ ಮತ್ತು ಅಭಿವೃದ್ಧಿಗಳಿಗಾಗಿ ಭಗವಂತನು ಅನಂತವಾದ ನಿರಂಕುಶೈಶ್ವರ್ಯವೇ ಮುಂತಾದ ಕಲ್ಯಾಣಗುಣಗಳನ್ನು ಹೊಂದಿರುವ ಮತ್ತು ಸಂಪೂರ್ಣಜಗತ್ತು ಅವನಿಗೆ ಶರೀರವಾಗಿ ಆತ್ಮಭೂತನಾದ ಅವನಿಂದ ನಡೆಸಲ್ಪಡುವ ವಿಷಯವನ್ನು ವಿವರಿಸಲಾಗಿದೆ.

ನನ್ನ ಮಾಹಾತ್ಮ್ಯವನ್ನು ಕೇಳಿ ಸಂತೋಷಪಡುತ್ತಿರುವ ನಿನಗೆ ನನ್ನ

ಭಕ್ತಿಯ ಉತ್ಪತ್ತಿ ಮತ್ತು ವೃದ್ಧಿ ಎಂಬ ಹಿತವು ಉಂಟಾಗಲೆಂಬ ಇಷ್ಟದಿಂದ ಮತ್ತೆ ನನ್ನ ಮಾಹಾತ್ಮ್ಯವನ್ನು ವಿಸ್ತಾರಪಡಿಸುವ ಶ್ರೇಷ್ಠವಾದ ಮಾತನ್ನು ಹೇಳುತ್ತೇನೆ. ಸಾವಧಾನದ ಮನಸ್ಸಿನಿಂದ ಅದನ್ನು ಕೇಳು. (ರಾ. ಭಾ.)

ಉಪಾಸನೆಗೋಸ್ಕರ ತನ್ನ ವಿಭೂತಿಗಳನ್ನು ಭಗವಂತನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾನೆ. (ವಿಭೂತಿ ಎಂದರೆ ವಿಶಿಷ್ಟವಾಗಿ ಇರುವಿಕೆ. ವಿಶಿಷ್ಟಭವನಂ = ವಿಭೂತಿಃ–ಯಾವ ವಿಷ್ಣುಸ್ವರೂಪಗಳ ಸಾನ್ನಿಧ್ಯದಿಂದ ಇತರ ವಸ್ತುಗಳಲ್ಲಿ ಅವುಗಳ ಜಾತಿಗಳಲ್ಲಿ ವಿಶಿಷ್ಟತೆಯು ಉಂಟಾಗುತ್ತದೆಯೋ–ಅವುಗಳಿಗೆ ವಿಭೂತಿಗಳು ಎಂದು ಹೆಸರು.

**ಯೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು ।**
**ವಿಶಿಷ್ಟತ್ವಂ ಸ್ವಜಾತೇಃ ಸ್ಯಾತ್ ವಿಭೂತ್ಯಾಖ್ಯಾನಿ ತಾನಿ ವೈ ॥**

ಎಂದು ಶ್ರೀಗೀತಾತಾತ್ಪರ್ಯನಿರ್ಣಯದಲ್ಲಿ ನಿರೂಪಿಸಲಾಗಿದೆ.

**ಪ್ರೀಯಮಾಣಾಯ**= ಕೇಳಿ ಸಂತೋಷಗೊಳ್ಳುತ್ತಿರುವ (ಹಿಂದೆ ಬಂಧುಸ್ನೇಹದಿಂದ ಅರ್ಜುನನಿಗೆ ಉಂಟಾಗಿದ್ದ ಶೋಕವನ್ನು ಹೇಳಿದೆ. ಈಗ ಭಗವಂತನ ಮಾತುಗಳನ್ನು ಕೇಳಿದುದರಿಂದ ಉಂಟಾದ ಸಂತೋಷಪ್ರಾಪ್ತಿಯನ್ನು ಹೇಳಲಾಗಿದೆ. ಅವನಿಗೆ ಒಳ್ಳೆಯ ಶ್ರೋತೃತ್ವಸಂಪತ್ತು ಇದೆ–ಎಂದು ಪ್ರತಿಪಾದಿಸಲು **ಪ್ರೀಯಮಾಣಾಯ**–ಸಂತೋಷಗೊಳ್ಳುತ್ತಿರುವ ಎಂಬ ಪದವನ್ನು ಉಪಯೋಗಿಸಿದೆ.) (ಮ. ಭಾ.)

**ಓಂ ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥೨॥**

ನನ್ನ ಹುಟ್ಟನ್ನು ದೇವತೆಗಳ ಸಮೂಹವಾಗಲೀ ಮಹರ್ಷಿಗಳಾಗಲೀ ಅರಿಯರು. ಏಕೆಂದರೆ : ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲ ರೀತಿಯಿಂದಲೂ ನಾನೇ ಆದಿಯಾಗಿರುವೆನು.

* * *

(ಅರ್ಜುನ! ನಾನು ಯಾವಾಗ ಹುಟ್ಟಿದೆನೆಂಬುದನ್ನು ದೇವತೆಗಳಾಗಲೀ ಮಹರ್ಷಿಗಳಾಗಲೀ ತಿಳಿದವರಾಗಿಲ್ಲ. ನಾನು ಹುಟ್ಟು-ಸಾವುಗಳೆರಡಕ್ಕೂ ಅತೀತನು. ಏಕೆಂದರೆ : ಸರ್ವಪ್ರಕಾರದಿಂದಲೂ ದೇವತೆಗಳಿಗೂ ಮಹರ್ಷಿ

ಗಳಿಗೂ ನಾನೇ ಮೊದಲಿಗನು. (ದೇವತೆಗಳು ಮತ್ತು ಮಹರ್ಷಿಗಳು ಭಗವಂತನ ಸೃಷ್ಟಿಕ್ರಮಕ್ಕೆ ಸೇರಿದವರು. ಅವನಾದರೋ ದೇವತೆಗಳ ಮತ್ತು ಋಷಿಗಳ ಸೃಷ್ಟಿಕರ್ತನಾದ ಪಿತಾಮಹನಿಗೂ ಹಿಂದಿನವನು. ಸನಾತನನು. ಈ ಕಾರಣದಿಂದಲೇ ಭಗವಂತನ ಸೃಷ್ಟಿಕ್ರಮದೊಳಗೆ ಸೇರಿದ ದೇವತೆಗಳಾಗಲೀ ಮಹರ್ಷಿಗಳಾಗಲೀ ಭಗವಂತನ ಆದಿಯು ಯಾವಾಗ ಎಂಬುದನ್ನು ತಿಳಿದಿಲ್ಲ. ಅವನಿಗೆ ಹುಟ್ಟು-ಸಾವುಗಳಿದ್ದರಲ್ಲವೇ ಯಾವಾಗ ಹುಟ್ಟಿದನೆಂಬುದನ್ನು ತಿಳಿಯಲು ಅವರಿಗೆ ಸಾಧ್ಯವಾಗುವುದು?) ನನ್ನ ಹುಟ್ಟಿನ ವಿಷಯವು ಸಾಮಾನ್ಯಮನುಷ್ಯರಿಗಿರಲಿ ; ಅತೀಂದ್ರಿಯಜ್ಞಾನಸಂಪನ್ನರಾದ ದೇವತೆಗಳಿಗೂ ಮಹರ್ಷಿಗಳಿಗೂ ಸಹ ತಿಳಿಯದು–ಎನ್ನುತ್ತಾನೆ ಶ್ರೀಕೃಷ್ಣ.)

o o o

ನನ್ನ ಪ್ರಭಾವವನ್ನು ಎಂದರೆ ಪ್ರಭುತ್ವಶಕ್ತ್ಯತಿಶಯವನ್ನು ಅಥವಾ ಉತ್ಪತ್ತಿಯನ್ನು ಬ್ರಹ್ಮಾದಿ ದೇವತೆಗಳಾಗಲೀ ಭೃಗುವೇ ಮುಂತಾದ ಮಹರ್ಷಿಗಳಾಗಲೀ–ಅರಿಯರು. ಏಕೆಂದರೆ : ಅವರಿಬ್ಬರಿಗೂ ಎಲ್ಲ ಪ್ರಕಾರಗಳಿಂದಲೂ ನಾನೇ ಕಾರಣನು. (ಶಂ. ಭಾ.)

**ಪ್ರಭವಂ**= ಪ್ರಭಾವವನ್ನು–ನಾಮ, ಕರ್ಮಸ್ವರೂಪ, ಸ್ವಭಾವ–ಮುಂತಾದುವುಗಳನ್ನು. ಅತೀಂದ್ರಿಯವಿಷಯಗಳನ್ನು ನೋಡಬಲ್ಲವರಾದ ಅತ್ಯಧಿಕಜ್ಞಾನವುಳ್ಳ ದೇವತೆಗಳೂ ಮತ್ತು ಮಹರ್ಷಿಗಳೂ ನನ್ನ ಪ್ರಭಾವವನ್ನು ಅರಿಯರು. ಏಕೆಂದರೆ : ಆ ದೇವತೆಗಳಿಗೆ ಮತ್ತು ಮಹರ್ಷಿಗಳಿಗೆ ಎಲ್ಲ ಪ್ರಕಾರದಿಂದಲೂ ನಾನೇ ಆದಿಯು. ಅವರ ಸ್ವರೂಪಕ್ಕೂ, ಜ್ಞಾನ-ಶಕ್ತಿ ಮುಂತಾದುವುಗಳಿಗೂ ಕೂಡ ನಾನೇ ಆದಿಯು. ಅವರುಗಳಿಗೆ ದೇವತ್ವ ಮತ್ತು ದೇವರ್ಷಿತ್ವ–ಮುಂತಾದುವುಗಳಿಗೆ ಕಾರಣವಾದ ಪುಣ್ಯಕ್ಕೆ ಅನುಗುಣವಾಗಿ ನಾನು ಕೊಟ್ಟಿರುವ ಜ್ಞಾನವು ಪರಿಮಿತವಾದುದು. ಆದುದರಿಂದ ಪರಿಮಿತವಾದ ಜ್ಞಾನವುಳ್ಳ ಅವರು ನನ್ನ ಸ್ವರೂಪವೇ ಮುಂತಾದುವುಗಳನ್ನು ಯಥಾವತ್ತಾಗಿ ಅರಿಯರು. (ರಾ. ಭಾ.)

ಪ್ರಭವಂ=ಪ್ರಭಾವವನ್ನು ಅಥವಾ ಉತ್ಪತ್ತಿಯನ್ನು, ನನ್ನದಾಗಿರುವ (ನನ್ನ ವಶದಲ್ಲಿರುವ) ಜಗತ್ತಿನ ಉತ್ಪತ್ತಿಯನ್ನು.

**ಪ್ರಭವಂ=ಪ್ರಭಾವಂ, ಮದೀಯಾಂ ಜಗದುತ್ಪತ್ತಿಂ ವಾ**– ಜಗದುತ್ಪತ್ತಿಯು ಅವನಿಗೆ ವಶವಾಗಿರುವುದರಿಂದ **ಮೇ**–ನನ್ನ ಎಂದು ಷಷ್ಠೀವಿಭಕ್ತಿಯನ್ನು ಹೇಳಿದೆ. ಅವನಿಗೆ ಉತ್ಪತ್ತಿಯಿದ್ದ ಪಕ್ಷದಲ್ಲಿ ದೇವತೆಗಳು ಮುಂತಾದವರು ಸರ್ವಜ್ಞರಾದುದರಿಂದ ಅವರಿಗೆ ಅದು ತಿಳಿಯುತ್ತಿತ್ತು. ಅವರಿಗೂ ತಿಳಿದಿಲ್ಲವಾದುದರಿಂದ ಅವನಿಗೆ ಉತ್ಪತ್ತಿಯೇ ಇಲ್ಲ.

**ಅಹಮಾದಿಃ**= ದೇವತೆಗಳಿಗೂ ಮಹರ್ಷಿಗಳಿಗೂ ನಾನೇ ಆದಿ ಎಂದು ಹೇಳಿರುವಂತೆ ಉತ್ಪತ್ತಿಯೇ ಯಾವನಿಗೆ ವಶವಾಗಿದೆಯೋ ಅವನಿಗೆ ಉತ್ಪತ್ತಿ ಎಲ್ಲಿಂದ ಬಂತು?–ಎಂದು ಜ್ಞಾಪಿಸಲು ಇದನ್ನು ಹೇಳಿದೆ.

**ಅಹಂ ಸರ್ವಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ।**

ಎಂದು ಭಗವಂತನು ತನ್ನ ಸರ್ವಕಾರಣತ್ವವನ್ನು ಹೇಳಿದ್ದಾನೆ. ಇದೆಲ್ಲವನ್ನೂ ಶ್ರುತಿಯೂ ಹೇಳುತ್ತದೆ.

**ಕೋ ಅದ್ಧಾವೇದ ಕ ಇಹ ಪ್ರವೋಚತ್ । ಕುತ ಆಜಾತಾ ಕುತ ಇಯಂ ವಿಸೃಷ್ಟಿಃ । ಅರ್ವಾಗ್ದೇವಾ ಅಸ್ಯ ವಿಸರ್ಜನೇನ । ಅಥಾ ಕೋ ವೇದ ಯತ ಆಬಭೂವ।ಇಯಂ ವಿಸೃಷ್ಟಿರ್ಯತ ಆಬಭೂವ ॥**

–ನಾಸದೀಯಸೂಕ್ತ

**ನ ತತ್ಪ್ರಭಾವಮೃಷಯಶ್ಚ ದೇವಾಃ**
**ವಿದುಃ ಕುತೋಽನ್ಯೇಽಲ್ಪಧೃತಿಪ್ರಮಾಣಾಃ ।**

ಅವನ ಪ್ರಭಾವವನ್ನು ಋಷಿಗಳೂ ದೇವತೆಗಳೂ ಕೂಡ ಅರಿಯರು. ಅಲ್ಪವಾದ ಧೃತಿ ಮತ್ತು ಪ್ರಮಾಣಗಳುಳ್ಳ ಇತರರು ಹೇಗೆ ತಿಳಿದಾರು? ಎಂದು ಋಗ್ವೇದಖಿಲದಲ್ಲಿ ಹೇಳಿದೆ. ಪ್ರಭವ ಎಂಬುದಕ್ಕೆ ಇರುವ ಮತ್ತೊಂದು ಅರ್ಥವು ಯೋ ಮಾಮಜಮನಾದಿಂ ಚ–ಎಂಬ ವಾಕ್ಯದಿಂದ ತಿಳಿದುಬರುತ್ತದೆ.

**ಓಂ ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥೩॥**

ಯಾವನು ನನ್ನನ್ನು ಅಜನೆಂದೂ, ಅನಾದಿಯೆಂದೂ, ಲೋಕಗಳ

ಮಹೇಶ್ವರನೆಂದೂ ತಿಳಿಯುತ್ತಾನೆಯೋ–ಆತನು ಮನುಷ್ಯರಲ್ಲಿ ಮೋಹ ರಹಿತನು. ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

* * *

(ಯದ್ಯಪಿ ಧರ್ಮಸಂಸ್ಥಾಪನೆಗಾಗಿ, ದುಷ್ಟಶಿಕ್ಷಣ-ಶಿಷ್ಟರಕ್ಷಣೆಗಳಿಗಾಗಿ ಅವತಾರಮಾಡಿದ್ದರೂ ಸಹ ನನ್ನನ್ನು ಹುಟ್ಟು-ಸಾವುಗಳಿಲ್ಲದವನೆಂದು ತಿಳಿಯಬೇಕು. ಅಜ ಎಂದರೆ ಹುಟ್ಟು ಇಲ್ಲದವನು. ಹುಟ್ಟೇ ಇಲ್ಲವೆಂದ ಮೇಲೆ ಸಾವಿನ ಪ್ರಶ್ನೆಯೇ ಇಲ್ಲ. ಅನಾದಿ ಎಂದು ತಿಳಿಯಬೇಕು. ಅವನು ಅನಾದಿ. ಲೋಕಕ್ಕೇ ದೊಡ್ಡ ಈಶ್ವರ. ಇಂದ್ರಾದಿ ಲೋಕಪಾಲರೆಲ್ಲರಿಗೂ ಇವನೇ ಈಶ್ವರ. ನಿಯಂತೃ, ಪ್ರೇರಕ, ಕರ್ತಾ, ಹರ್ತಾ ಭರ್ತಾ–ಎಲ್ಲವೂ ಇವನೇ ಆಗಿದ್ದಾನೆ. ಧಾರಣ-ಪೋಷಣ-ಸಂರಕ್ಷಣೆಗಳನ್ನು ಮಾಡುವವನೂ ಇವನೇ. ಹೀಗೆ ನನ್ನನ್ನು ಯಾವನು ತಿಳಿದುಕೊಳ್ಳುತ್ತಾನೆಯೋ ಅವನು ಮನುಷ್ಯರಲ್ಲಿ ಅಸಮ್ಮೂಢ ; ಸಮ್ಮೂಢ ಎಂದರೆ ಮಹಾಮೂರ್ಖ. ಅಸಮ್ಮೂಢ ಎಂದರೆ ಮಹಾಮೂರ್ಖನಲ್ಲದವನು ಜ್ಞಾನೀ. ಇಂತಹ ಜ್ಞಾನಸಂಪಾದನೆಯಿಂದಲೇ ಅವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ.)

O O O

ಅಜಂ ಅನಾದಿಂ ಚ= ನಾನು ದೇವತೆಗಳಿಗೂ ಮಹರ್ಷಿಗಳಿಗೂ ಆದಿ ಯಾದುದರಿಂದ ನನಗೆ ಆದಿಯಿಲ್ಲ. ಆದುದರಿಂದ ನಾನು ಅಜ–ಹುಟ್ಟಿಲ್ಲ ದವನು ಮತ್ತು ಅನಾದಿ=ಆದಿಯಿಲ್ಲದವನು. ಅನಾದಿಯಾಗಿರುವುದು ಅಜ ತ್ವಕ್ಕೆ ಕಾರಣ. ಲೋಕಮಹೇಶ್ವರಃ=ಲೋಕಗಳ ದೊಡ್ಡ ಈಶ್ವರ, ತುರೀ ಯನು. ಅಜ್ಞಾನ ಮತ್ತು ಅದರ ಕಾರ್ಯಗಳಿಲ್ಲದವನು.

**ಸರ್ವಪಾಪೈಃ**= ತಿಳಿದೋ-ತಿಳಿಯದೆಯೋ ಮಾಡಿದ ಎಲ್ಲ ಪಾಪಗಳ ದೆಸೆಯಿಂದಲೂ. (ಶಂ. ಭಾ.)

ದೇವತೆಗಳಿಗೂ ಅಚಿಂತ್ಯನಾದ ಭಗವಂತನ ಯಾಥಾತ್ಮ್ಯ–ಎಂಬ ವಿಷಯವಾದ ಜ್ಞಾನವು ಭಕ್ತಿಯ ಉತ್ಪತ್ತಿಗೆ ವಿರೋಧಿಯಾದ ಪಾಪವನ್ನು ವಿಮೋಚನೆಮಾಡುವ ಉಪಾಯವೆಂಬುದನ್ನು ಇಲ್ಲಿ ಭಗವಂತನು ಹೇಳು ತ್ತಾನೆ. ಭಗವಂತನು ಅಜ. ಜನನವಿಲ್ಲದವನು. ಇದರಿಂದ ಭಗವಂತನು ವಿಕಾರಿದ್ರವ್ಯವಾದ ಅಚೇತನಕ್ಕಿಂತಲೂ ಮತ್ತು ಅದರ ಸಂಬಂಧಹೊಂದಿರುವ

ಸಂಸಾರಿಚೇತನಕ್ಕಿಂತಲೂ ವಿಜಾತೀಯನು–ಎಂಬುದು ಸ್ಪಷ್ಟವಾಗುತ್ತದೆ. ಕರ್ಮಕೃತವಾದ ಅಚಿತ್ಸಂಬಂಧ (ಪ್ರಕೃತಿ) ದಿಂದ ಜನ್ಮವುಂಟಾಗುವುದು ಸಂಸಾರಿಚೇತನಕ್ಕೇ ಅಲ್ಲವೇ? ಇದಲ್ಲದೇ ಭಗವಂತನು ಅನಾದಿ. ಆದಿಯಿಲ್ಲ ದವನು–ಈ ಪದವನ್ನು ಹೇಳಿರುವುದರಿಂದ ಅಜನಾಗಿದ್ದರೂ ಹಿಂದೆ ಆದಿ ಯನ್ನು ಹೊಂದಿದ್ದ ಮುಕ್ತಾತ್ಮನಿಗಿಂತಲೂ ಭಗವಂತನು ವಿಜಾತೀಯನೆಂದು ಸ್ಪಷ್ಟಪಡುತ್ತದೆ.

ಮುಕ್ತಾತ್ಮನು ಅಜನಾಗಿದ್ದರೂ ಅವನಿಗೆ ಆದಿಯುಂಟು. ಹೀಗೆ ಭಗವಂತನು ಹೇಯಸಂಬಂಧವೇ ಇಲ್ಲದ ಸ್ವರೂಪವುಳ್ಳವನು. ಲೋಕೇಶ್ವರ ರಿಗೂ ಈಶ್ವರ ಎಂಬುದನ್ನು ಮನುಷ್ಯರಲ್ಲಿ ಮೂಢನಲ್ಲದೇ ಇರುವ ಯಾವನು ಅರಿಯುತ್ತಾನೆಯೋ–ಅವನು ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಸಮ್ಮೂಢ ಎಂದರೆ ಭಗವಂತನು ಇತರರಿಗೆ ಸಜಾತೀಯ ನೆಂದು ಅವನನ್ನು ಇತರರೊಡನೆ ಏಕೀಕರಿಸುವುದು. ಅದು ಇಲ್ಲದವನು ಅಸಮ್ಮೂಢ. ಅವನು ನನ್ನ ಭಕ್ತಿಯ ಉತ್ಪತ್ತಿಗೆ ವಿರೋಧಿಗಳಾದ ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ. (ರಾ. ಭಾ.)

ಭಗವಂತನು ಅಜ ಮತ್ತು ಅನಾದಿ. ಅಜ ಎಂದರೆ ಎಲ್ಲಕ್ಕೂ ಚೇಷ್ಟೆ ಯನ್ನುಂಟುಮಾಡುವವನು ಮತ್ತು ಆದಿಯಾದವನು.

**ಅನಶ್ಚೇಷ್ಟಯಿತಾ ಆದಿಶ್ಚ ಸರ್ವಸ್ಯ ಇತ್ಯನಾದಿ ।**

ಭಗವಂತನು ಕಾರಣರಹಿತ ಎಂಬುವುದು ಅಜಃ ಎಂಬುದರಿಂದಲೇ ಸಿದ್ಧವಾಗಿರುವುದರಿಂದ ಅನಾದಿ ಎಂಬುದಕ್ಕೆ ಹೀಗೇ ಅರ್ಥವನ್ನು ಹೇಳಬೇಕು. (ಮ. ಭಾ.)

**ಓಂ ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥**

**ಓಂ ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥೫॥**

ಬುದ್ಧಿ, ಜ್ಞಾನ, ಸಮ್ಮೋಹವಿಲ್ಲದಿರುವುದು, ಕ್ಷಮೆ, ದಮ, ಸತ್ಯ, ಶಮ, ಸುಖ, ದುಃಖ, ಹುಟ್ಟುವುದು, ಹುಟ್ಟದೇ ಇರುವುದು, ಭಯ,

ಅಭಯ, ಅಹಿಂಸೆ, ಸಮತೆ, ತುಷ್ಟಿ, ತಪಸ್ಸು, ದಾನ, ಯಶಸ್ಸು, ಅಯಶಸ್ಸು– ಈ ಬೇರೆ-ಬೇರೆಯ ಪ್ರಕಾರದ ಭಾವಗಳು ಪ್ರಾಣಿಗಳಿಗೆ ನನ್ನಿಂದಲೇ ಆಗುವುವು.

* * *

(ಕರ್ತವ್ಯ-ಅಕರ್ತವ್ಯ, ಗ್ರಾಹ್ಯ-ಅಗ್ರಾಹ್ಯ, ಒಳ್ಳೆಯದು-ಕೆಟ್ಟುದು ಇವುಗಳನ್ನು ವಿವೇಚಿಸಿ ನಿರ್ಣಯಿಸುವುದೇ **ಬುದ್ಧಿ**. ವಸ್ತುವನ್ನು ನಿಶ್ಚಯಿಸುವ ಸಾಮರ್ಥ್ಯ, ಪದಾರ್ಥಗಳ ಸ್ವರೂಪವನ್ನು ಅಳಿಯುವುದು, ಆತ್ಮನ ಸ್ವರೂಪವನ್ನು ಬುದ್ಧಿಯ ವಿವೇಚನೆಯಿಂದ ತಿಳಿಯುವುದು **ಜ್ಞಾನ**. ಆತ್ಮಾನುಭವಕ್ಕೂ ಜ್ಞಾನವೆನ್ನುತ್ತಾರೆ : **ಅಸಮ್ಮೋಹಃ**–ಸ್ಮೃತಿವಿಭ್ರಮಕ್ಕೆ ಸಮ್ಮೋಹವೆಂದು ಹೆಸರು. ತೋರಿಕೆಯ ಮತ್ತು ಅಶಾಶ್ವತವಾದ ಸಾಂಸಾರಿಕ ಸುಖವನ್ನು ಶಾಶ್ವತವೆಂದು ಭಾವಿಸುವುದೇ ಮೋಹ ಅಥವಾ ಸಮ್ಮೋಹ. ಅಂತಹ ಮೋಹಕ್ಕೆ ಒಳಗಾಗದಿರುವುದು ಅಸಮ್ಮೋಹ. ಅಪಮಾನ, ನಿಂದನೆ, ನಷ್ಟ, ಅಪಘಾತ–ಇತ್ಯಾದಿಗಳು ಸಂಭವಿಸಿದಾಗ ಮನಸ್ಸಿನ ಸ್ಥೈರ್ಯವನ್ನು ಕಳೆದುಕೊಳ್ಳದೇ ಇರುವುದು **ಕ್ಷಮೆ**. ಕಂಡಿದ್ದನ್ನು ಕಂಡಂತೆ, ಕೇಳಿದ್ದನ್ನು ಕೇಳಿದಂತೆ, ಅನುಭವಿಸಿದ್ದನ್ನು ಅನುಭವಿಸಿದಂತೆ ಹೇಳುವುದಕ್ಕೆ **ಸತ್ಯ**ವೆನ್ನುತ್ತಾರೆ. **ದಮ** ಎಂದರೆ ಹೊರಗಿನ ಇಂದ್ರಿಯಗಳನ್ನು ಬಿಗಿಹಿಡಿಯುವುದು. **ಶಮ** ಎಂದರೆ ಒಳಗಿನ ಇಂದ್ರಿಯಗಳ ನಿಗ್ರಹ. ಪ್ರಿಯವಸ್ತುವಿನ ಸಂಯೋಗ, ಅಪ್ರಿಯವಸ್ತುವಿನ ವಿಯೋಗ–ಅವುಗಳಿಂದಾಗುವ ಮನಸ್ಸಿನ ಪರಿಣಾಮಕ್ಕೆ **ಸುಖ**ವೆಂದೂ, ಪ್ರಿಯವಸ್ತುವಿನ ವಿಯೋಗ–ಅಪ್ರಿಯವಸ್ತುವಿನ ಸಂಯೋಗ ಇವುಗಳಿಂದಾಗುವ ಮನಸ್ಸಿನ ಪರಿಣಾಮಕ್ಕೆ **ದುಃಖ**ವೆಂದೂ ಹೆಸರು. ಸೃಷ್ಟಿ ಕಾಲದಲ್ಲಿ ಸಮಸ್ತಪ್ರಾಣಿಗಳ ಆವಿರ್ಭಾವಕ್ಕೆ **ಭವ** ಎಂದೂ ಪ್ರಲಯಕಾಲ ದಲ್ಲಾಗುವ ಸಮಸ್ತಪ್ರಾಣಿಗಳ ಲಯಕ್ಕೆ **ಅಭಾವ** ಎಂದೂ ಹೆಸರು. **ಭವ** ಇರುವಿಕೆ. **ಅಭಾವ** ಇಲ್ಲದಿರುವಿಕೆ. ಯಾವುದೋ ಅಪಾಯವನ್ನು ನೆನೆ ದಾಗ, ನೋಡಿದಾಗ ಆಗುವ ಮನಸ್ಸಿನ ಪರಿಣಾಮ **ಭಯ**. ಪರಮೇಶ್ವರ ನನ್ನು ಆಶ್ರಯಿಸಿರುವುದರಿಂದ ಯಾವ ವಿಧವಾದ ಭಯಕ್ಕೂ ಕಾರಣವಿಲ್ಲ ವೆಂದು ದೃಢವಾಗಿ ನಂಬಿರುವುದೇ **ಅಭಯ**. ಯಾವ ಪ್ರಾಣಿಗೇ ಆಗಲೀ ; ಯಾವ ಸಮಯದಲ್ಲೇ ಆಗಲೀ ; ಯಾವ ರೀತಿಯಲ್ಲೇ ಆಗಲೀ ಅರ್ಥಾತ್ ಮಾತಿನ ಮೂಲಕವಾಗಲೀ, ಕೃತಿಯ ಮೂಲಕವಾಗಲೀ–ಕಷ್ಟಕೊಡದಿರು

ವುದೇ ಅಹಿಂಸೆ. ಸುಖ-ದುಃಖ, ಲಾಭ-ನಷ್ಟ, ಜಯಾಪಜಯ, ನಿಂದಾಸ್ತುತಿ, ಮಾನಾಪಮಾನ–ಈ ದ್ವಂದ್ವಗಳನ್ನು ಸಮವಾಗಿ ಕಾಣುವುದು, ಒಂದು ಬಂದಾಗ ಹಿಗ್ಗದೇ ಮತ್ತೊಂದು ಬಂದಾಗ ಕುಗ್ಗದೇ ಇರುವುದು ಮತ್ತು ಶತ್ರು-ಮಿತ್ರರಿಬ್ಬರನ್ನೂ ಪ್ರೇಮದೃಷ್ಟಿಯಿಂದ ಕಾಣುವುದು–ಇದಕ್ಕೆ **ಸಮತಾ** ಎಂದು ಹೆಸರು. ಭಗವಂತನ ದಯೆಯಿಂದ ಮತ್ತು ನಾವು ಮಾಡಿದ ಪ್ರಾರಬ್ಧಕರ್ಮಾನುಸಾರವಾಗಿ ಯಾವ ಸಮಯದಲ್ಲಿ ಯಾವುದು ಸಿಕ್ಕುತ್ತದೆಯೋ ಅದರಿಂದಲೇ ತೃಪ್ತಿಹೊಂದುವುದಕ್ಕೆ **ತುಷ್ಟಿ** ಎಂದು ಹೆಸರು. ಸ್ವಧರ್ಮಪಾಲನೆಗಾಗಿ ಕಷ್ಟವನ್ನು ಸಹಿಸುವುದಕ್ಕೆ **ತಪಸ್ಸು** ಎಂದು ಹೆಸರು. ತನ್ನಲ್ಲಿರುವ ಐಶ್ವರ್ಯವನ್ನು ಪರರ ಹಿತಕ್ಕಾಗಿ ಯಾವುದಾದರೂ ರೂಪದಲ್ಲಿ ಹಂಚಿಕೊಡುವುದಕ್ಕೆ **ದಾನ**ವೆಂದು ಹೆಸರು. ಕೀರ್ತಿಯನ್ನು ಗಳಿಸುವುದೇ **ಯಶಸ್ಸು**. ಅಪಕೀರ್ತಿಯೇ **ಅಯಶಸ್ಸು**. ಈ ರೀತಿಯಾಗಿ ಬಗೆ-ಬಗೆಯ ಭಾವಗಳು ಪ್ರಾಣಿಗಳಿಗೆ ಉಂಟಾಗುತ್ತವೆ. ಈ ಭಾವಗಳೆಲ್ಲವೂ ನನ್ನಿಂದಲೇ ಹುಟ್ಟಿ ಪ್ರಾಣಿಗಳಿಗೆ ಅವುಗಳ ಕರ್ಮಾನುಸಾರವಾಗಿ ಕೊಡಲ್ಪಡುತ್ತವೆ.)

O O O

ಈ ಕೆಳಗೆ ಕಂಡ ಕಾರಣಗಳಿಂದಲೂ ಕೂಡ ನಾನು ಲೋಕಗಳಿಗೆ ಮಹೇಶ್ವರ. ಭೂತಗಳಿಗೆ ಈಶ್ವರನಾದ ನನ್ನಿಂದಲೇ ಅವರವರ ಕರ್ಮಾನುರೂಪವಾಗಿ ಬುದ್ಧಿಯೇ ಮುಂತಾದ ಬಗೆ-ಬಗೆಯ ಭಾವಗಳು ಉಂಟಾಗುತ್ತವೆ. ಸೂಕ್ಷ್ಮವೇ ಮುಂತಾದ ಪದಾರ್ಥಗಳನ್ನು ತಿಳಿಯುವ ಅಂತಃಕರಣದ ಜ್ಞಾನಶಕ್ತಿಯೇ ಬುದ್ಧಿ. ಅದು ಉಳ್ಳವನೇ ಬುದ್ಧಿವಂತ ಎನಿಸುತ್ತಾನೆ. **ಜ್ಞಾನಂ**=ಆತ್ಮನೇ ಮುಂತಾದ ಪದಾರ್ಥಗಳ ಅರಿವು. **ಅಸಮ್ಮೋಹಃ**= ತಿಳಿಯಲ್ಪಡಬೇಕಾದ ಪದಾರ್ಥಗಳು ಒದಗಿರುವಾಗ ಅವುಗಳಲ್ಲಿ ವಿವೇಕ ಪೂರ್ವಕವಾಗಿ ನಡೆಯುವುದು. ಕ್ಷಮಾ=ನಿಂದೆ, ಅಪವಾದ ಮುಂತಾದುವು ಉಂಟಾದರೂ ಚಿತ್ತದಲ್ಲಿ ವಿಕಾರವಿಲ್ಲದೇ ಇರುವುದು. ಸತ್ಯಂ=ಕಂಡಿದ್ದು ಕೇಳಿದ್ದು ಆದ ಆತ್ಮಾನುಭವವನ್ನು ಇತರರ ಬುದ್ಧಿಗೆ ಪ್ರವೇಶಮಾಡಿಸಲು ಯಥಾವತ್ತಾಗಿ ಉಚ್ಚರಿಸುವ ಮಾತು. **ದಮಃ**=ಹೊರಗಡೆಯ ಇಂದ್ರಿಯಗಳ ಶಾಂತಿ. **ಶಮಃ** =ಅಂತಃಕರಣದ ಶಾಂತಿ. **ಸುಖಂ**=ಆಹ್ಲಾದ. **ದುಃಖಂ** = ಸಂತಾಪ. **ಭವಃ**=ಉತ್ಪತ್ತಿ. **ಅಭಾವಃ**=ವಿನಾಶ. **ಭಯಂ**=ಹೆದರಿಕೆ **ಅಭಯಂ**=

ನಿರ್ಭಯತೆ. ಅಹಿಂಸಾ=ಪ್ರಾಣಿಗಳನ್ನು ಪೀಡಿಸದೇ ಇರುವಿಕೆ. ಸಮತಾ= ಚಿತ್ತದ ಸಮಭಾವ. **ತುಷ್ಟಿಃ**= ಸಿಕ್ಕಿದಷ್ಟನ್ನೇ ಯಥೇಚ್ಛವನ್ನಾಗಿ ತಿಳಿಯುವುದು. **ತಪಃ**=ಇಂದ್ರಿಯಸಂಯಮಪೂರ್ವಕವಾಗಿ ಶರೀರವನ್ನು ದಂಡಿಸುವುದು. ದಾನಂ=ಶಕ್ತಿಗೆ ಅನುಸಾರವಾಗಿ ತನ್ನ ಪದಾರ್ಥವನ್ನು ಇತರರೊಡನೆ ಹಂಚಿಕೊಳ್ಳುವುದು. ಯಶಃ=ಧರ್ಮನಿಮಿತ್ತವಾದ ಕೀರ್ತಿ. **ಅಯಶಃ**= ಅಧರ್ಮದಿಂದ ಉಂಟಾದ ಅಪಕೀರ್ತಿ. (ಶಂ. ಭಾ.)

ತನ್ನ ಐಶ್ವರ್ಯ ಮತ್ತು ಕಲ್ಯಾಣಗುಣಗಣಗಳ ವಿಸ್ತಾರವನ್ನು ಅನುಸಂಧಾನಮಾಡುವುದರಿಂದ ಭಕ್ತಿಯು ವೃದ್ಧಿಹೊಂದುವ ಪ್ರಕಾರವನ್ನು ಇಲ್ಲಿ ಹೇಳಿದೆ. ಬುದ್ಧಿ=ಮನಸ್ಸಿನ ನಿರೂಪಣಾಸಾಮರ್ಥ್ಯ. ಜ್ಞಾನಂ=ಚಿತ್ ಮತ್ತು ಅಚಿದ್ವಸ್ತುವಿಷಯಕವಾದ ನಿಶ್ಚಯ.

**ಅಸಮ್ಮೋಹಃ**= ಹಿಂದೆ ನೋಡಿದ್ದ ಬೆಳ್ಳಿ ಮುಂತಾದುವುಗಳಿಗಿಂತಲೂ ಬೇರೆ ಜಾತಿಗೆ ಸೇರಿದ ಕಪ್ಪೆಚಿಪ್ಪು ಮುಂತಾದ ವಸ್ತುಗಳಲ್ಲಿ ಅವೆರಡೂ ಒಂದೇ ಜಾತಿಯದು ಎಂಬ ಭ್ರಮೆಯು ತೊಲಗಿರುವಿಕೆ. **ಕ್ಷಮಾ**=ಮನಸ್ಸನ್ನು ವಿಕಾರಗೊಳಿಸುವ ಕಾರಣವಿದ್ದರೂ ಕೂಡ ವಿಕಾರವಿಲ್ಲದ ಮನಸ್ಸನ್ನು ಹೊಂದಿರುವಿಕೆ. **ಸತ್ಯಂ**=ಭೂತಗಳಿಗೆ ಹಿತವಾದ ಮತ್ತು ಕಂಡದ್ದನ್ನು ಕಂಡಂತೆ ಹೇಳುವ ಮಾತು. ಅದಕ್ಕೆ ಅನುಗುಣವಾದ ಮನೋವೃತ್ತಿ. **ದಮಃ**=ಹೊರಗಿನ ಇಂದ್ರಿಯಗಳನ್ನು ಅನರ್ಥಕಾರಕವಾದ ವಿಷಯಗಳಿಂದ ಹಿಂದಕ್ಕೆ ಎಳೆದುಕೊಳ್ಳುವಿಕೆ. **ಶಮಃ** = ಅಂತಃಕರಣವನ್ನು ಹಾಗೆಯೇ ಹಿಂದಕ್ಕೆ ಎಳೆದುಕೊಳ್ಳುವಿಕೆ. ಸುಖಂ=ಆತ್ಮಕ್ಕೆ ಅನುಕೂಲವಾದ ಅನುಭವ. **ದುಃಖಂ**= ಆತ್ಮಕ್ಕೆ ಪ್ರತಿಕೂಲವಾದ ಅನುಭವ. **ಭವಃ** = ಆಗುವಿಕೆ. **ಅಭಾವಃ**=ಅನುಕೂಲವಾದ ಅನುಭವಕ್ಕೆ ಕಾರಣವಾದ ಮನಸ್ಸಿನ ನಾಶ. **ಭಯಂ** = ಮುಂದೆ ಬರುವ ದುಃಖದ ಕಾರಣವನ್ನು ಕಂಡಿದ್ದರಿಂದ ಉಂಟಾಗುವ ದುಃಖ. ಅದರ ತೊಲಗುವಿಕೆಯೇ **ಅಭಯ**. **ಅಹಿಂಸಾ**=ಇತರರ ದುಃಖಕ್ಕೆ ಕಾರಣನಾಗದೇ ಇರುವಿಕೆ. ಸಮತಾ=ತನ್ನಲ್ಲಿ, ಗೆಳೆಯರಲ್ಲಿ, ಶತ್ರುಗಳಲ್ಲಿ, ಅರ್ಥಗಳಲ್ಲಿ ಮತ್ತು ಅನರ್ಥಗಳಲ್ಲಿ ಸಮವಾದ ಮನಸ್ಸನ್ನು

ಹೊಂದುವಿಕೆ. ತುಷ್ಟಿಃ=ಎಲ್ಲ ಆತ್ಮಗಳನ್ನು ಕಂಡಾಗಲೂ ಸಂತೋಷಪಡುವ ಸ್ವಭಾವವನ್ನು ಹೊಂದಿರುವಿಕೆ. ತಪಃ=ಶಾಸ್ತ್ರೀಯವಾದ ಭೋಗಗಳನ್ನು ಸಂಕೋಚಪಡಿಸಿಕೊಳ್ಳುವ ಶರೀರದ ಕ್ಲೇಶ. ದಾನಂ=ತನ್ನದಾಗಿರುವ ಮತ್ತು ತನಗೆ ಭೋಗ್ಯವಾಗಿರುವ ಪದಾರ್ಥಗಳನ್ನು ಇತರರಿಗೆ ಕೊಡುವಿಕೆ. ಯಶಃ = ಗುಣಶಾಲೀ ಎಂಬ ಕೀರ್ತಿ. ಅಯಶಃ =ನಿರ್ಘೃಣ ಎಂಬ ಅಪ ಕೀರ್ತಿ. ಕೀರ್ತಿ-ಅಪಕೀರ್ತಿಮಯವಾದ ಈ ಎರಡು ಮನೋವೃತ್ತಿಗಳು, ತಪಸ್ಸು ಮತ್ತು ದಾನ–ಅವುಗಳಿಗೆ ಅನುಗುಣವಾದ ಮನೋವೃತ್ತಿಗಳು– ಇವೇ ಮೊದಲಾದ ಎಲ್ಲ ಭೂತಗಳ ಭಾವಗಳೂ ಎಂದರೆ ಪ್ರವೃತ್ತಿ ಮತ್ತು ನಿವೃತ್ತಿಗಳಿಗೆ ಕಾರಣವಾದ ಮನೋವೃತ್ತಿಗಳೂ ನನ್ನಿಂದಲೇ ಉಂಟಾಗುತ್ತವೆ. ಎಂದರೆ ನನ್ನ ಸಂಕಲ್ಪಕ್ಕೇ ಅಧೀನವಾಗಿವೆ. (ರಾ. ಭಾ.)

ಬುದ್ಧಿರುಪಲಬ್ಧಿಃ ಜ್ಞಾನಮಿತ್ಯನರ್ಥಾನ್ತರಮ್ –ಎಂದು ಗೌತಮರು ಬುದ್ಧಿ-ಉಪಲಬ್ಧಿ-ಜ್ಞಾನ ಈ ಮೂರನ್ನೂ ಪರ್ಯಾಯವಾಗಿ ಹೇಳುತ್ತಾರೆ. ಆದರೆ ಅವುಗಳಿಗೆ ಸೂಕ್ಷ್ಮವಾದ ಅರ್ಥವ್ಯತ್ಯಾಸವುಂಟು. ಬುದ್ಧಿ ಎಂದರೆ ಕಾರ್ಯ ಮತ್ತು ಅಕಾರ್ಯಗಳನ್ನು ನಿಶ್ಚಯಿಸುವುದು. ಜ್ಞಾನಂ ಎಂದರೆ ತೋರುವಿಕೆ ; ಪ್ರತೀತಿ. ಜ್ಞಾನಂ ಪ್ರತೀತಿರ್ಬುದ್ಧಿಸ್ತು ಕಾರ್ಯಾಕಾರ್ಯವಿನಿಶ್ಚಯಃ । ದಮಃ= ಇಂದ್ರಿಯಗಳ ನಿಗ್ರಹ. ಶಮಃ= ಪರಮಾತ್ಮನಲ್ಲಿ ನಿಷ್ಠೆ. ಶಮೋ ಮನ್ನಿಷ್ಠತಾ ಬುದ್ಧೇಃ ದಮ ಇನ್ದ್ರಿಯನಿಗ್ರಹಃ। ಭಾಗ ೧೧-೧೯-೩೭

ತುಷ್ಟಿಃ= ಸಾಕು ಎಂಬ ತೃಪ್ತಿರೂಪವಾದ ಬುದ್ಧಿ.

ಅಲಂಬುದ್ಧಿಸ್ತಥಾ ತುಷ್ಟಿಃ. ಭಗವಂತನ ಸರ್ವಾಧಿಕತ್ವವನ್ನು ಈ ಶ್ಲೋಕಗಳಲ್ಲಿ ವಿಸ್ತಾರಪಡಿಸಿದೆ. (ಮ. ಭಾ.)

**ಓಂ ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥**

ಮೊದಲಿಗರಾದ ಏಳು ಮಹರ್ಷಿಗಳೂ ಮತ್ತು ನಾಲ್ಕು ಮನುಗಳೂ

ನನ್ನ ಭಾವವನ್ನೇ ಹೊಂದಿದವರಾಗಿ ನನ್ನ ಮಾನಸಪುತ್ರರಾಗಿ ಹುಟ್ಟಿದರು. ಲೋಕದಲ್ಲಿರುವ ಈ ಪ್ರಜೆಗಳು ಅವರಿಗೆ ಸೇರಿದವರೇ ಆಗಿದ್ದಾರೆ.

* * *

(ಶ್ರೀಕೃಷ್ಣನು ಈ ಶ್ಲೋಕದಲ್ಲಿ ಪರಂಪರೆಯು ಹೇಗೆ ಪ್ರಾರಂಭ ವಾಯಿತೆಂಬುದನ್ನು ಹೇಳುತ್ತಾನೆ.

ಮೊದಲಿಗರಾದ ಈ ಸಪ್ತಮಹರ್ಷಿಗಳು ಯಾರು? ಎಂದರೆ ಭೃಗು, ಮರೀಚಿ, ಅತ್ರಿ, ಪುಲಸ್ತ್ಯ , ಪುಲಹ, ಕ್ರತು ಮತ್ತು ವಸಿಷ್ಠ ಎಂಬುವರು–ಎಂದು ಶ್ರೀಶಂಕರರ ಮತ್ತು ಶ್ರೀರಾಮಾನುಜರ ಅಭಿಪ್ರಾಯ. ಗೀತೆಯಲ್ಲಿ ಮುಂದೆ **ಮಹರ್ಷೀಣಾಂ ಭೃಗುರಹಂ**–ಎಂದು ಭೃಗುವಿಗೆ ಪ್ರಾಧಾನ್ಯವನ್ನು ಹೇಳಿದೆ. ವಿಷ್ಣುಪುರಾಣದಲ್ಲಿಯೂ **ಸಪ್ತ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ** ಎಂದು ಹೇಳಿದೆ. ಈ ಮನ್ವಂತರಕ್ಕೆ ಸೇರಿದ ಏಳು ಋಷಿಗಳು ಇವರೇ. ಶ್ರೀಮಧ್ವಾಚಾರ್ಯರ ಅಭಿಪ್ರಾಯದಂತೆ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠ–ಇವರು ಸಪ್ತರ್ಷಿಗಳು. ಇಲ್ಲಿ ಹೇಳಿರುವ ಅತ್ರಿ ಮೊದಲಿಗರಾದ ಏಳು ಋಷಿಗಳು ಮಹಾಭಾರತದ ಮೋಕ್ಷಧರ್ಮದಲ್ಲಿ ಮತ್ತು ಪುರಾಣಗಳಲ್ಲಿ ಸಪ್ತರ್ಷಿಗಳೆಂದು ಪ್ರಸಿದ್ಧರಾಗಿದ್ದಾರೆ. **ಪೂರ್ವೇ** ಎಂದರೆ ಮೊದಲನೇ ಮನ್ವಂತರಕ್ಕೆ ಸೇರಿದವರು. ಅವರು ಮರೀಚಿ ಮುಂತಾದವರೇ–ಎಂದು ಶ್ರೀಜಯತೀರ್ಥರು ಉಪಪತ್ತಿಯನ್ನು ಹೇಳುತ್ತಾರೆ.

**ಮರೀಚಿರಙ್ಗಿರಾಶ್ಚಾತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ।**
**ವಸಿಷ್ಠ ಇತಿ ಸಪ್ತೈತೇ ಮಾನಸಾ ನಿರ್ಮಿತಾ ಹಿ ತೇ ॥**
**ಏತೇ ವೇದವಿದೋ ಮುಖ್ಯಾ ವೇದಾಚಾರ್ಯಾಶ್ಚ ಕಲ್ಪಿತಾಃ ।**
**ಪ್ರವೃತ್ತಿಧರ್ಮಿಣಶ್ಚೈವ ಪ್ರಾಜಾಪತ್ಯೇ ಚ ಕಲ್ಪಿತಾಃ ॥**

ಶಾಂತಿಪರ್ವ ೩೪೦-೬೯-೭೦

ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ , ಪುಲಹ, ಕ್ರತು ಮತ್ತು ವಸಿಷ್ಠ ಈ ಏಳು ಮಹರ್ಷಿಗಳು ಬ್ರಹ್ಮಮಾನಸಪುತ್ರರು ಅರ್ಥಾತ್ ಪರಮಾತ್ಮನ ಸಂಕಲ್ಪದಿಂದಲೇ ಹುಟ್ಟಿದವರು. ಇವರೆಲ್ಲರೂ ವೇದವಿದರು. ಇವರು ಮುಖ್ಯರಾದ ವೇದಾಚಾರ್ಯರೆಂದು ಕಲ್ಪಿತರಾಗಿರುತ್ತಾರೆ. ಇವರು

ಪ್ರವೃತ್ತಿಧರ್ಮವುಳ್ಳವರು. ನನ್ನ ಇಚ್ಛೆಯಂತೆಯೇ ಇವರು ಸೃಷ್ಟಿಕಾರ್ಯದಲ್ಲಿ ನಿಯುಕ್ತರಾಗಿರತಕ್ಕವರು.

ಮನುಗಳು ಹದಿನಾಲ್ಕು ಮಂದಿ. ಅವರಲ್ಲಿ ಮುಖ್ಯರಾದ ನಾಲ್ಕು ಮಂದಿಯನ್ನು ಇಲ್ಲಿ ಭಗವಂತನು ಹೇಳುತ್ತಾನೆ. ಆ ನಾಲ್ಕು ಮಂದಿ ಯಾರು ಎಂದರೆ ನಾಲ್ಕು ಸಾವರ್ಣಿಗಳೆಂದು ಶ್ರೀಶಂಕರರು ಮತ್ತು ಶ್ರೀರಾಮಾನುಜರು ಹೇಳುತ್ತಾರೆ. (ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ಧರ್ಮಸಾವರ್ಣಿ, ದಕ್ಷಸಾವರ್ಣಿ). ಇವರಲ್ಲಿ ಭೃಗ್ವಾದಿಗಳು ನಿತ್ಯಸೃಷ್ಟಿಪ್ರವರ್ತಕರು ಮತ್ತು ಸಾವರ್ಣಿಕರು ನಿತ್ಯಸ್ಥಿತಿಪ್ರವರ್ತಕರು–ಎಂದೂ ಶ್ರೀರಾಮಾನುಜರು ಹೇಳುತ್ತಾರೆ. ಶ್ರೀಮನ್ಮಧ್ವಾಚಾರ್ಯರ ಅಭಿಪ್ರಾಯದಲ್ಲಿ, ಸ್ವಾಯಂಭುವ, ಸ್ವಾರೋಚಿಷ, ರೈವತ ಮತ್ತು ಉತ್ತಮ–ಈ ನಾಲ್ಕು ಮಂದಿಗಳೂ ಇಲ್ಲಿ ಹೇಳಿರುವ ನಾಲ್ಕು ಮನುಗಳು. (ತಾಮಸನು ಭಗವಂತನ ಅವತಾರವಾದುದರಿಂದ ಅವನ ಹೆಸರನ್ನು ಇಲ್ಲಿ ಬಿಡಲಾಗಿದೆ.) ಇವರೆಲ್ಲರೂ ಬ್ರಹ್ಮನ ಮಾನಸಪುತ್ರರು ಎಂದು ಸೌಬಾಲಿ ಮತ್ತು ಭಾಗವತದಲ್ಲಿ ಹೇಳಿದೆ. **ಸ ಮಾನಸಾನ್ ಸಪ್ತ ಪುತ್ರಾನಸೃಜತ್** (ಸೌಬಾಲೋಪನಿಷತ್) **ತತೋ ಮನೂನ್ಸಸರ್ಜಾನ್ತೇ ಮನಸಾ ಲೋಕಭಾವನಾನ್** (ಭಾಗವತ) ೨-೨೧-೪೯ ಈ ಮನುಗಳು ಬ್ರಹ್ಮನಿಂದ ಹುಟ್ಟಿದರೂ ಬ್ರಹ್ಮಾಂತರ್ಯಾಮಿಯಾದ ನಾರಾಯಣನಿಂದಲೇ ಹುಟ್ಟಿದವರು. ಬ್ರಹ್ಮನು ದ್ವಾರಮಾತ್ರ ಎಂದು ಶ್ರೀಜಯತೀರ್ಥರು ಉಪಪತ್ತಿಯನ್ನು ಹೇಳುತ್ತಾರೆ.

**ಮತ್ತ ಏವ ಬ್ರಹ್ಮಾನ್ತರ್ಯಾಮಿಣಃ, ಬ್ರಹ್ಮಾ ತು ದ್ವಾರಮಾತ್ರಮ್**

ಜಗತ್ತಿನಲ್ಲಿರುವ ಸ್ಥಾವರ-ಜಂಗಮಪ್ರಾಣಿಗಳೆಲ್ಲವೂ ಸಾಕ್ಷಾತ್ ಅಥವಾ ಪರಂಪರಾಸಂಬಂಧಗಳಿಂದ ಬ್ರಹ್ಮಪುತ್ರರಾದ ಇವರ ಸಂತಾನಗಳೇ ಆಗಿವೆ.)

o o o

**ಪೂರ್ವೇ ಚತ್ವಾರಃ** ಎಂಬುದಕ್ಕೆ ಬ್ರಹ್ಮನ ಪ್ರಥಮಮಾನಸಪುತ್ರರಾದ ಸನತ್ಕುಮಾರ, ಸನಕ, ಸನಂದನ, ಸನಾತನ (ಸನತ್ಸುಜಾತ)–ಎಂದು ಕೆಲವರು ಅರ್ಥ ಹೇಳುತ್ತಾರೆ. ಆದರೆ ಈ ನಾಲ್ವರೂ ಕೇವಲ ನಿವೃತ್ತಿಮಾರ್ಗಿಗಳು ಮತ್ತು ಸೃಷ್ಟಿಗೆ ಕೈಹಾಕದೇ ಇದ್ದವರು–ಎಂದು ಪುರಾಣಗಳು

ಹೇಳುತ್ತವೆ. ಆದರೆ ಕೆಲವರ ಅಭಿಪ್ರಾಯದಂತೆ ನಿವೃತ್ತಿಮಾರ್ಗಿಗಳಾಗಿದ್ದುದರಿಂದ ಇವರಿಗೆ ಭೌತಿಕಸಂತಾನವಿಲ್ಲದಿದ್ದರೂ ವಿದ್ಯಾಸಂತಾನವು ಇತ್ತು. **ನಾನಾವಿಧಂ ಯೋಗಮಾರ್ಗಂ ಸಸೃಜುಸ್ತೇ ಮಹೌಜಸಃ** ಎಂದು ಮೌದ್ಗಲವು ಹೇಳುವಂತೆ ಇವರು ಯೋಗಮಾರ್ಗರೂಪವಾದ ವಿದ್ಯಾಸಂತಾನವನ್ನು ಪಡೆದರು.

ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ–ಎಂಬ ಭಗವಂತನ ನಾಲ್ಕು ವ್ಯೂಹಗಳೇ ಈ ನಾಲ್ಕು ಮಂದಿ–ಎಂದು ಕೆಲವರ ಅಭಿಪ್ರಾಯ. ಇದಕ್ಕೆ ಆಧಾರವಾಗಿ ಅವರು ಮಹಾಭಾರತವನ್ನೇ ಉದ್ಧರಿಸುತ್ತಾರೆ.

**ಯೋ ವಾಸುದೇವೋ ಭಗವಾನ್ಕ್ಷೇತ್ರಜ್ಞೋ ನಿರ್ಗುಣಾತ್ಮಕಃ ।**
**ಜ್ಞೇಯಃ ಸ ಏವ ರಾಜೇನ್ದ್ರ ಜೀವಃ ಸಂಕರ್ಷಣಃ ಪ್ರಭುಃ ॥೪೦॥**

**ಸಂಕರ್ಷಣಾಚ್ಚ ಪ್ರದ್ಯುಮ್ನೋ ಮನೋಭೂತಃ ಸ ಉಚ್ಯತೇ ।**
**ಪ್ರದ್ಯುಮ್ನಾದ್ಯೋಽನಿರುದ್ಧಸ್ತು ಸೋಽಹಙ್ಕಾರಃ ಸ ಈಶ್ವರಃ ॥೪೧॥**

ಶಾಂತಿಪರ್ವ ೩೩೯ನೆಯ ಅಧ್ಯಾಯ

ಯಾವನು ಭಗವಂತನಾದ, ಕ್ಷೇತ್ರಜ್ಞನಾದ, ನಿರ್ಗುಣಾತ್ಮಕನಾದ ವಾಸುದೇವನೋ ಅವನನ್ನೇ ಜೀವನೆಂದು ತಿಳಿಯತಕ್ಕದ್ದು. ಅವನೇ ಪ್ರಭುವಾದ ಸಂಕರ್ಷಣ. ಸಂಕರ್ಷಣನಿಂದ ಪ್ರದ್ಯುಮ್ನನು ಹುಟ್ಟಿದನು. ಅವನನ್ನು ಮನೋಮಯನೆನ್ನುತ್ತಾರೆ. ಪ್ರದ್ಯುಮ್ನನಿಂದ ಅನಿರುದ್ಧನು ಹುಟ್ಟಿದನು. ಅವನೇ ಅಹಂಕಾರ ಮತ್ತು ಈಶ್ವರ.

ಈ ನಾಲ್ವರನ್ನು ಚತುರ್ವ್ಯೂಹವೆಂದೂ ಕರೆದಿದ್ದಾರೆ. ಆದುದರಿಂದ **ಪೂರ್ವೇ ಚತ್ವಾರಃ** ಎಂದರೆ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರು. ಇವರಿಂದಲೇ ಮುಂದೆ ಮರೀಚ್ಯಾದಿ ಸಪ್ತರ್ಷಿಗಳೂ ಪ್ರಾದುರ್ಭಾವಹೊಂದುತ್ತಾರೆ. ಅನಿರುದ್ಧ ಇತಿ ಪ್ರೋಕ್ತೋ ಲೋಕಸರ್ಗಕರಃ ಪ್ರಭುಃ ಈ ಪದ್ಧತಿಗೆ ಅನುಸಾರವಾಗಿ ಲೋಕವನ್ನು ಸೃಷ್ಟಿ ಮಾಡುವ ಪ್ರಭಾವಶಾಲಿಯಾದ ಪುರುಷನಿಗೆ ಅನಿರುದ್ಧನೆಂದು ಹೆಸರು. ಇವನು ಚತುರ್ವ್ಯೂಹದಲ್ಲಿ ಒಬ್ಬನಾಗಿದ್ದಾನೆ.

ಆದರೆ ಇವರಲ್ಲಿ ಮೊದಲನೆಯವನಾದ ವಾಸುದೇವನು ಸಾಕ್ಷಾತ್ ಪರಮಾತ್ಮನೆಂದೇ ಶಾಸ್ತ್ರಗಳು ಹೇಳುವುದರಿಂದ ಅವನನ್ನು ಭಗವಂತನ ಸೃಷ್ಟಿ ಎಂದು ಹೇಳುವುದು ಹೊಂದಿಕೆಯಾಗುವುದಿಲ್ಲ–ಎಂದು ಮತ್ತೆ ಕೆಲವರ ಅಭಿಪ್ರಾಯವಾಗಿದೆ.

**ಮನವಃ** ಎಂದರೆ ಪುರಾಣಗಳಲ್ಲಿ ಪ್ರಸಿದ್ಧರಾದ ಹದಿನಾಲ್ಕು ಮನುಗಳು ಎಂದು ಕೆಲವರು ಹೇಳುತ್ತಾರೆ. ಪ್ರಾಚೀನರಾದ ಮನುಗಳು ನಾಲ್ಕು ಮಂದಿ ಮಾತ್ರವೇ. ಋಗ್ವೇದದಲ್ಲಿ ಹೇಳಿರುವ ಮೂವರು :

**ಯಥಾ ಮನೌ ಸಾಂವರಣೌ** ಋ. ೬-೪-೧೮

**ಯಥಾ ಮನೌ ವಿವಸ್ವತೀ** ಋ. ೬-೪-೨೦

**ಸಾವರ್ಣೇರ್ದೇವಾಃ ಪ್ರತಿರನ್ತ್ವಾಯುಃ** ಋ. ೮-೨-೨

ನಾಲ್ಕನೆಯವನ ಹೆಸರು ಮನುಸ್ಮೃತಿಯಲ್ಲಿ ಬಂದಿದೆ.

**ಮನುಃ ಸ್ವಾಯಮ್ಭುವೋಽಬ್ರವೀತ್** ಋ. ೩-೪-೨

ಶ್ರುತಿಯನ್ನು ಅನುಸರಿಸುವ ಗೀತೆಯೂ ಈ ನಾಲ್ವರನ್ನೇ ಹೇಳುತ್ತದೆ.

ಹದಿನಾಲ್ಕು ಮನುಗಳ ಕಲ್ಪನೆಯು ಪುರಾಣಗಳಿಗೆ ಸಂಬಂಧಪಟ್ಟುದು ಎಂಬುದು ಇವರ ಅಭಿಪ್ರಾಯವಾಗಿದೆ.

ಇಲ್ಲಿ ಹೇಳಿರುವ ಮನುಗಳು ಜ್ಞಾನಾಧಿಕರಾದ ಬ್ರಹ್ಮಾದಿದೇವತೆಗಳು. ಅವರಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಬಗೆಗಳೆಂದು ಕೆಲವರ ಮತ.

**ಮನವಃ** ಎಂದರೆ ಓಂಕಾರ, ವಷಟ್ಕಾರ, ವ್ಯಾಹೃತಿ, ಸಾವಿತ್ರಿಗಳೆಂಬ ಮಂತ್ರಗಳು ಅಥವಾ ನಾಲ್ಕು ವೇದಗಳು–ಎಂದು ಕೆಲವರು ಹೇಳುತ್ತಾರೆ.

ನಾಲ್ಕು ಎಂಬುದು ಉಪಲಕ್ಷಣ. ಅದು ಹದಿನಾಲ್ಕನ್ನು ಸೂಚಿಸುತ್ತದೆ. ಆದುದರಿಂದ ಇಲ್ಲಿ ಹೇಳಿರುವ ಮನುಗಳು ಹದಿನಾಲ್ಕು ಮಂದಿಗಳೇ ಎಂದೂ, ನಾಲ್ಕು ಮಂದಿಯನ್ನೇ ಪ್ರತ್ಯೇಕಿಸಲು ಕಾರಣವಿಲ್ಲವೆಂದೂ ಕೆಲವರು ಗಮನಿಸುತ್ತಾರೆ. ಆದರೆ ನಾಲ್ಕು ಮಂದಿಗಳೇ ಮೊದಲಿಗರು. ಉಳಿದ

ಹತ್ತು ಮಂದಿಗಳು ಇವರ ವಿಸ್ತಾರ ಎಂದು ಕೆಲವರು ಇದಕ್ಕೆ ಉತ್ತರ ನೀಡಿದ್ದಾರೆ.

o o o

ಸಪ್ತರ್ಷಿಗಳ ಮತ್ತು ಮನುಗಳ ಪಟ್ಟಿಯು ಕಲ್ಪಭೇದದಿಂದ ಮನ್ವಂತರಭೇದದಿಂದ ಬೇರೆ-ಬೇರೆಯಾಗಿರುವುದಾದರೂ ಸ್ಥಾವರ-ಜಂಗಮಾತ್ಮಕವಾದ ಎಲ್ಲ ಪ್ರಪಂಚವೂ ಇವರ ಸೃಷ್ಟಿ. ಬ್ರಹ್ಮನ ಅನಂತರದ ಸೃಷ್ಟಿಕರ್ತರು ಇವರೇ. ಆದರೆ ಇವರೆಲ್ಲರೂ ಭಗವಂತನ ಮಾನಸಪುತ್ರರೇ ಆಗಿರುವುದರಿಂದ ಭಗವಂತನೇ ಎಲ್ಲರಿಗೂ ಮೂಲಸೃಷ್ಟಿಕರ್ತ (ಮೂಲ ಕಾರಣ.)

ನಾಲ್ಕುಮಂದಿ ಮನುಗಳು—ವ್ಯಷ್ಟಿಗಳಾದ ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ.

**ಚತುರಶ್ಚಾಪರಾನ್ಪುತ್ರಾನ್ ದೇಹಾತ್ಪೂರ್ವಂ ಮಹಾನೃಷಿಃ ।**
**ತೇ ವೈ ಪಿತೄಣಾಂ ಪಿತರಃ ಶ್ರೂಯನ್ತೇ ರಾಜಸತ್ತಮ ॥**

ಮ. ೧೨-೩೧೧-೮

ಏಳು ಋಷಿಗಳು ಎಂದರೆ ಏಳು ಇಂದ್ರಿಯಗಳು. ತಲೆಯಲ್ಲಿರುವ ಏಳು ಬಿಲಗಳು (ಕಣ್ಣುಗಳು, ಕಿವಿಗಳು ಮೂಗು ಮತ್ತು ಬಾಯಿ) ಅಧಿಷ್ಠಾತೃಶಕ್ತಿಗಳು.

**ಸಪ್ತಋಷಯಃ ಪ್ರತಿಹಿತಾಃ ಶರೀರೇತಿ** (ವಾಜಸನೇಯ)

೧೦-೨೬-೫೫

**ತಿರ್ಯಗ್ಬಿಲಶ್ಚ ಮನಃ....ಅತ್ರಾಸತ ಋಷಯಃ ಸಪ್ತಸಾರಂ ಯೇ ಅಸ್ಯ ಗೋಪಾ ಮಹತೋ ಬಭೂವುಃ** ಅಥರ್ವ ೧೦-೨೬-೯

ಎಂಬ ಆಧ್ಯಾತ್ಮಿಕವಾದ ಅರ್ಥವನ್ನು ಇಲ್ಲಿ ಅನುಸಂಧಾನಮಾಡಬಹುದಾಗಿದೆ.

**ಓಂ ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಮ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥೭॥**

ಈ ನನ್ನ ವಿಭೂತಿಯನ್ನೂ ಮತ್ತು ಯೋಗವನ್ನೂ ಯಾವನು ತತ್ತ್ವತಃ ತಿಳಿದುಕೊಳ್ಳುವನೋ–ಅವನು ಸುದೃಢವಾದ ಭಕ್ತಿಯೋಗದಿಂದ ಕೂಡಿದವನಾಗುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

* * *

(ವಿಭೂತಿಯೆಂದರೆ ಹಿಂದಿನ ಮೂರು ಶ್ಲೋಕಗಳಲ್ಲಿ ಹೇಳಿರುವ ಸರ್ವಕಾರಣನಾದ ಭಗವಂತನ ಸೃಷ್ಟಿವಿಸ್ತಾರಯೋಗ, ಎಂದರೆ ಯೋಗ ಮಾಯೆ ; ಯೋಗೈಶ್ವರ್ಯ. ಇದನ್ನು ತತ್ತ್ವತಃ ತಿಳಿದುಕೊಳ್ಳಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ. ಮುಖ್ಯವಾಗಿ ತಿಳಿಯಬೇಕಾದುದು ಪರಮಾತ್ಮನ ನಿಜಸ್ವರೂಪ. ಕರ್ತಾ, ಹರ್ತಾ, ಸರ್ವಶಕ್ತಿಮಾನ್, ಸರ್ವೇಶ್ವರ, ಸರ್ವಾ ಧಾರ, ಪರಮದಯಾಳು, ನಿರ್ವಿಕಲ್ಪ, ನಿರಾಕಾರ, ಪರಂಜ್ಯೋತಿ, ಸರ್ವಾಂತ ರ್ಯಾಮಿ, ಪ್ರಪಂಚದ ಹುಟ್ಟಿಗೆ ಕಾರಣನಾದರೂ ಪ್ರಪಂಚದೊಡನೆ ಸಂಬಂಧವಿಲ್ಲದವನು ; ಸನಾತನ ; ಅವಿನಾಶಿಯಾದ ಅವ್ಯಕ್ತ–ಇತ್ಯಾದಿ ಅನೇಕಗುಣಗಣಗಳಿಂದ ಕೂಡಿದ ಪರಮಾತ್ಮನನ್ನು ಯಥಾವತ್ತಾಗಿ ತಿಳಿದುಕೊಳ್ಳಬೇಕು. ಅವನು ಧ್ಯಾನಯೋಗ, ಕರ್ಮಯೋಗ ಮತ್ತು ಭಕ್ತಿ ಯೋಗಗಳಿಗೆ ಸಿಕ್ಕತಕ್ಕವನೆಂದು ತಿಳಿದುಕೊಳ್ಳಬೇಕು. ಪಾಪ-ಪುಣ್ಯಗಳಿಂದ ಅತೀತನಾದವನೆಂದು ತಿಳಿಯಬೇಕು. ಅಜ, ಅನಾದಿ, ಲೋಕಮಹೇಶ್ವರ– ಎಂದು ಅವನನ್ನು ತಿಳಿಯಬೇಕು. ಮಹಾದುರಾಚಾರಿಯಾದರೂ ಭಗವಂತ ನನ್ನು ಅನನ್ಯಶರಣ್ಯನನ್ನಾಗಿ ಆಶ್ರಯಿಸಿದರೆ ಅಂತಹ ಭಕ್ತನನ್ನು ಉದ್ಧಾರ ಮಾಡುತ್ತಾನೆಂಬುದನ್ನು ತಿಳಿಯಬೇಕು. ಪ್ರತ್ಯಕ್ಷವಾಗಿ ಅವನನ್ನು ಇದೇ ಶರೀರದಲ್ಲಿ ಕಂಡುಕೊಳ್ಳಬಹುದೆಂಬುದನ್ನು ತಿಳಿಯಬೇಕು. ಇದಲ್ಲದೇ ಮೇಲೆ ಹೇಳಿದ ಪರಮಾತ್ಮನ ವಿಭೂತಿಯನ್ನೂ ವಿಸ್ತಾರವಾದ ಸೃಷ್ಟಿಯನ್ನೂ ತಿಳಿಯಬೇಕು. ಯೋಗ ಎಂದರೆ ಯೋಗಮಾಯೆ. ಇವನ ಯೋಗಮಾಯೆ ಯಿಂದಲೇ ಈ ಪ್ರಪಂಚವು ಸಾಗುತ್ತಿದೆ. ಸತ್ತ್ವ-ರಜಸ್ತಮೋಗುಣಗಳೇ ಯೋಗಮಾಯೆಯ ಸ್ವರೂಪ. ಇದರಿಂದಲೇ ಮನುಷ್ಯರು ಮೋಹಿತ ರಾಗಿರುತ್ತಾರೆ. ಈ ಯೋಗಮಾಯೆಯನ್ನು ದಾಟಬೇಕಾದರೆ ಪರಮಾತ್ಮನ ಅನುಗ್ರಹವಿರಬೇಕು. ಇದನ್ನು ದಾಟದಿದ್ದರೆ ಪರಮಾತ್ಮನು ಸಿಕ್ಕುವುದಿಲ್ಲ.

ಈ ಆಧ್ಯಾತ್ಮಿಕತತ್ತ್ವವನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳ

ಬೇಕು. ಅಂತಹವನಿಗೆ ಸುದೃಢವಾದ ಯೋಗಸಮಾಧಿಯು ಸಿದ್ಧಿಸುತ್ತದೆ. ಆತ್ಮಾನಾತ್ಮವಿವೇಕವಿಲ್ಲದಿದ್ದರೆ ಯೋಗಮಾರ್ಗದಲ್ಲಿ ಹೋಗುವ ಸಾಧ್ಯತೆಯಿಲ್ಲ. 'ನನ್ನನ್ನೂ-ನನ್ನ ಯೋಗಮಾಯೆಯನ್ನೂ ತಿಳಿದುಕೊಂಡರೆ ನಿಃಸಂಶಯವಾಗಿ **ಯೋಗೇನ ಯುಜ್ಯತೇ**–ಯೋಗದಿಂದ ಕೂಡಿದವನಾಗುತ್ತಾನೆ. **ಅವಿಕಮ್ಪೇನ ಯುಜ್ಯತೇ**–ಸುದೃಢವಾಗಿ ಡೋಲಾಯಮಾನವಾದ ಮನಸ್ಸಿಲ್ಲದೇ ಯೋಗಮಾರ್ಗವನ್ನು ಹಿಡಿದು ಹೋಗುತ್ತಾನೆ. ಅಥವಾ ನನ್ನನ್ನು ನಿಃಸಂಶಯವಾಗಿ ಸೇರುತ್ತಾನೆ'–ಎಂದು ಶ್ರೀಕೃಷ್ಣನು ಪದೇ-ಪದೇ ಪ್ರತಿಜ್ಞೆಮಾಡುತ್ತಲೇ ಇದ್ದಾನೆ. ಆದರೂ ಈ ಮಾರ್ಗವನ್ನು ಹಿಡಿದು ಹೋಗುವವರು ಅತಿವಿರಳ.)

o o o

**ವಿಭೂತಿ** ಎಂದರೆ ವಿಸ್ತಾರ. ವಿವಿಧಾ ಭೂತಿಃ–ಭವನಂ, ವೈಭವಂ. ಬುದ್ಧಿ ಮುಂತಾದುವುಗಳಿಗೆ ಉಪಾದಾನವಾಗಿರುವ ಬಗೆ-ಬಗೆಯಾದ ವೈಭವ. ಸರ್ವಾತ್ಮಕತ್ವ. –ಆನಂದಗಿರಿ.

**ಯೋಗ** ಎಂದರೆ ಯುಕ್ತಿ. ಆತ್ಮನ ಘಟನೆ. ಅಥವಾ ಯೋಗೈಶ್ವರ್ಯದ ಸಾಮರ್ಥ್ಯ, ಯೋಗದಿಂದ ಉಂಟಾದ ಸರ್ವಜ್ಞತ್ವ–ಇವೆರಡನ್ನೂ ತಾತ್ತ್ವಿಕವಾಗಿ ತಿಳಿದವನು ಅಳ್ಳಾಡದೇ ಇರುವ ಸಮ್ಯಕ್‌ದರ್ಶನವನ್ನು-ಸ್ಥೈರ್ಯರೂಪವಾದ ಯೋಗವನ್ನು ಹೊಂದುತ್ತಾನೆ. (ಶಂ. ಭಾ.)

ಈ ವಿಭೂತಿಯನ್ನು (ಐಶ್ವರ್ಯವನ್ನು) ಎಲ್ಲದರ ಉತ್ಪತ್ತಿ-ಸ್ಥಿತಿ-ಪ್ರವೃತ್ತಿಗಳು ನನಗೆ ಅಧೀನ–ಎಂಬ ರೂಪವಾದ ಈಶ್ವರಭಾವವನ್ನು ಮತ್ತು ನನ್ನ (ಕಲ್ಯಾಣಗುಣಗಣರೂಪವಾದ) ಯೋಗವನ್ನು ಯಾವನು ಯಥಾವತ್ತಾಗಿ ತಿಳಿಯುತ್ತಾನೆಯೋ ಅವನು ನಿಶ್ಚಲವಾದ ಭಕ್ತಿಯೋಗವನ್ನು ಸೇರುತ್ತಾನೆ. ನನ್ನ ವಿಭೂತಿವಿಷಯಕವಾದ ಮತ್ತು ಕಲ್ಯಾಣಗುಣಗಣವಿಷಯಕವಾದ ಜ್ಞಾನವು ಭಕ್ತಿಯೋಗವನ್ನು ವೃದ್ಧಿಪಡಿಸುತ್ತದೆ–ಎಂಬುದನ್ನು ನೀನೇ ನೋಡುವೆ. (ರಾ. ಭಾ.)

**ಓಂ ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥೮॥**

ನಾನು ಎಲ್ಲಕ್ಕೂ ಕಾರಣನು. ನನ್ನಿಂದ ಎಲ್ಲವೂ ತೊಡಗಿಸಲ್ಪಡುವುದು–ಹೀಗೆಂದು ತಿಳಿದ ವಿದ್ವಾಂಸರು ಭಾವದಿಂದ ಕೂಡಿದವರಾಗಿ ನನ್ನನ್ನು ಭಜಿಸುತ್ತಾರೆ.

* * *

(ಅಖಂಡಬ್ರಹ್ಮಾಂಡದ ಪ್ರಭವನು ಎಂದರೆ ಉತ್ಪತ್ತಿಗೆ ಕಾರಣನು ನಾನೇ ಎಂಬುದನ್ನೂ, ನನ್ನಿಂದಲೇ ಈ ಎಲ್ಲ ಎಂಟು ಬಗೆಯಾದ ಪ್ರಕೃತಿಯು ತನ್ನ ವ್ಯಾಪಾರದಲ್ಲಿ ತೊಡಗಿದೆಯೆಂಬುದನ್ನೂ–ಭಕ್ತಿಭಾವದಿಂದ ಕೂಡಿರತಕ್ಕ, ಪರಮಾರ್ಥತತ್ತ್ವದಲ್ಲಿಯೇ ಹೆಚ್ಚಿನ ಭಕ್ತಿಭಾವವುಳ್ಳ ಪಂಡಿತರು ತಿಳಿದವರಾಗಿ ನನ್ನನ್ನು ಅತಿಶಯವಾಗಿ ಸ್ತೋತ್ರಮಾಡುತ್ತಾರೆ.

ಈ ತಿಳಿವಳಿಕೆಯು ಅಜ್ಞಾನಿಗಳಿಗೆಂದಿಗೂ ಬರುವುದಿಲ್ಲ. ಅಜ್ಞಾನಿಗಳಾದವರು ಯಾವುದೋ ಕಾರಣದಿಂದ ಯಾವಾಗಲಾದರೊಮ್ಮೆ ಸ್ವಾಮಿಗೆ ಕೈಮುಗಿಯಬಹುದು. ಆದರೆ ಅವರಿಗೆ ಪರಮಾತ್ಮನೇ ಎಲ್ಲಕ್ಕೂ ಕಾರಣನೆಂಬ ಭಾವನೆಯಾಗಲೀ, ಅವನಿಂದಲೇ ಎಲ್ಲವೂ ಆಗುತ್ತದೆಯೆಂಬ ಜ್ಞಾನವಾಗಲೀ ಇರುವುದಿಲ್ಲ. ಅವನಿಂದಲೇ ಇದೆಲ್ಲವೂ ನಡೆಯುತ್ತಿದೆ. ಆದುದರಿಂದ ಎಲ್ಲಕ್ಕೂ ಮೂಲಕಾರಣನಾದ ಅವನನ್ನು ಕಂಡುಕೊಳ್ಳುವುದೇ ನಮ್ಮ ಕರ್ತವ್ಯ–ಎಂದು ಭಾವಿಸುವವರು ಜ್ಞಾನಿಗಳು ಮತ್ತು ತದೇಕಚಿತ್ತರಾದ ಭಕ್ತರು. ಆದುದರಿಂದಲೇ ಭಗವಂತನು **ಬುಧಾ ಭಾವಸಮನ್ವಿತಾಃ** ಎಂದು ಹೇಳಿದ್ದಾನೆ.

O O O

**ಸರ್ವಂ**=ಸ್ಥಿತಿನಾಶಕ್ರಿಯಾರೂಪವಾದ ಕರ್ಮಫಲ. ಭೋಗವೆಂಬ ವಿಕಾರರೂಪವಾದ ಇಡೀ ಜಗತ್ತು. ಬುಧಾಃ = ತತ್ತ್ವಾರ್ಥವನ್ನು ಪಡೆದವರು.

**ಭಾವಸಮನ್ವಿತಾಃ** = ಪರಮಾರ್ಥತತ್ತ್ವದ ಧಾರೆಯಿಂದ ಕೂಡಿದವರು.

(ಶಂ. ಭಾ.)

**ಸರ್ವಸ್ಯ** = ವಿಚಿತ್ರವಾದ ಚಿದಚಿತ್ಪ್ರಪಂಚಕ್ಕೆ. **ಮತ್ವಾ** = ನನ್ನ

ಸ್ವಾಭಾವಿಕವಾದ ನಿರಂಕುಶವಾದ ಐಶ್ವರ್ಯವನ್ನೂ ಮತ್ತು ಸೌಶೀಲ್ಯ-ಸೌಂದರ್ಯ-ವಾತ್ಸಲ್ಯಗಳೇ ಮುಂತಾದ ಕಲ್ಯಾಣಗುಣಗಳ ಯೋಗವನ್ನೂ ತಿಳಿದು. **ಭಾವಃ ಮನೋವೃತ್ತಿವಿಶೇಷಃ ಏತತ್ಸಮನ್ವಿತಾಃ** = ನನ್ನಲ್ಲಿ ಆಶೆಯುಳ್ಳವರಾಗಿ. ಭಜನ್ತೇ ನನ್ನನ್ನು ಸೇವಿಸುತ್ತಾರೆ. (ರಾ. ಭಾ.)

ನನ್ನನ್ನು ಭಜಿಸುವವರು ಕೆಲವರು ಇದ್ದಾರೆ–ಎಂದು **ಅಹಂ ಸರ್ವಸ್ಯ** ಮುಂತಾದ ಶ್ಲೋಕಗಳಲ್ಲಿ ಭಗವಂತನು ಹೇಳುತ್ತಾನೆ. (ಮ. ಭಾ.)

ಭಗವಂತನು ತನ್ನ ಭಕ್ತರ ಲಕ್ಷಣಗಳನ್ನು ಹೇಳುತ್ತಾನೆ :

**ಓಂ ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥೯॥**

ನನ್ನಲ್ಲಿ ಮನಸ್ಸನ್ನು ಇರಿಸಿದವರಾಗಿ, ನನ್ನಲ್ಲಿಯೇ ಪ್ರಾಣಗಳನ್ನು ನೆಲೆಗೊಳಿಸಿ, ಒಬ್ಬರಿಗೊಬ್ಬರಿಗೆ ಯಾವಾಗಲೂ ನನ್ನ ವಿಷಯವನ್ನೇ ಹೇಳುತ್ತಾ, ಅದರಿಂದಲೇ ಸಂತೋಷಪಡುವರು ಮತ್ತು ರಮಿಸುವರು.

* * *

(ಪರಮಭಕ್ತರಾದವರು ಯಾವಾಗಲೂ ನನ್ನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿರುತ್ತಾರೆ. ಅವರ ಮನಸ್ಸು ನನ್ನನ್ನು ಬಿಟ್ಟು ಬೇರೆಯ ಕಡೆಗೆ ಹೋಗುವುದೇ ಇಲ್ಲ. ನನ್ನ ಮಹಿಮೆಯನ್ನು ಸ್ಮರಿಸುವುದು ; ಆನಂದಪಡುವುದು ; ನನ್ನ ಸಂಕೀರ್ತನಗಳನ್ನು ಹಾಡಿ-ಪಾಡಿ ಕುಣಿಯುವುದು ಇದೇ ಅವರ ದೈನಂದಿನಕಾರ್ಯವಾಗಿರುತ್ತದೆ. ಮದ್ಗತಪ್ರಾಣಾಃ= ನನ್ನ ಕ್ಷಣಮಾತ್ರದ ವಿಯೋಗವನ್ನೂ ಅವರು ಸಹಿಸರು. ಎಲ್ಲ ಪ್ರಾಣಿಗಳಿಗೂ ಅತ್ಯಂತಪ್ರಿಯವಾದ ಪ್ರಾಣಗಳನ್ನೇ ಪರಮಾತ್ಮನಿಗೆ ಅರ್ಪಿಸಿಬಿಟ್ಟಿರುತ್ತಾರೆ. ಏಕೆಂದರೆ : ಪ್ರಾಣಗಳಿಗೆ ನಿಜವಾದ ಕ್ರೀಡಾಸ್ಥಾನವು ಪರಮಾತ್ಮನೇ ಆಗಿದ್ದಾನೆ. **ಸತ್ಯಾತ್ಮಪ್ರಾಣಾರಾಮಂ ಮನ ಆನನ್ದಂ.** ಅಥವಾ **ಮಚ್ಚಿತ್ತಾಃ ಮದ್ಗತಪ್ರಾಣಾಃ**–ಎಂಬುದಕ್ಕೆ ಹೀಗೂ ಅರ್ಥಮಾಡಬಹುದಾಗಿದೆ : **ಮಚ್ಚಿತ್ತಾಃ** = ಹೃದಯಕಮಲದ ಮಧ್ಯದಲ್ಲಿರುವ ನನ್ನಲ್ಲಿಯೇ ಮನಸ್ಸನ್ನು

ಲೀನಗೊಳಿಸಿಬಿಟ್ಟಿರುತ್ತಾರೆ. ಮನಸ್ಸಿರುವ ಕಡೆಯೇ ಪ್ರಾಣಗಳೂ ಇರುತ್ತವೆ. ಆದುದರಿಂದ ಪ್ರಾಣಗಳೂ ಸಹ ಊರ್ಧ್ವಮುಖವಾಗಿದ್ದು ಪರಮಾತ್ಮ ನಲ್ಲಿಯೇ ಲೀನವಾಗಿಬಿಟ್ಟಿರುತ್ತವೆ.

ನನ್ನ ಅದ್ಭುತಕಾರ್ಯಗಳನ್ನು ಪರಸ್ಪರ ಹೇಳಿಕೊಂಡು ಸಂತೋಷಿಸು ವರು. ನನ್ನ ಕೀರ್ತನೆಯಿಂದಲೇ ಅವರು ತುಷ್ಟರಾಗುತ್ತಾರೆ ಮತ್ತು ಆನಂದ ಭರಿತರಾಗುತ್ತಾರೆ. ನನ್ನ ದಿವ್ಯನಾಮಗಳನ್ನು ಅವರು ಅಮೃತದಂತೆ ಸವಿ ಯುತ್ತಿರುತ್ತಾರೆ.

ಶ್ರೀಮದ್ಭಾಗವತದಲ್ಲಿ ಹೇಳುವಂತೆ ಭಗವಂತನ ಕಥಾಮೃತವು ತಾಪ ತ್ರಯಗಳಲ್ಲಿ ಬೆಂದ ಜೀವಿಗಳಿಗೆ ಪರಮೌಷಧವಾಗಿರುತ್ತದೆ.

**ತವ ಕಥಾಮೃತಂ ತಪ್ತಜೀವನಂ**
**ಕವಿಭಿರೀಡಿತಂ ಕಲ್ಮಷಾಪಹಮ್ ।**
**ಶ್ರವಣಮಙ್ಗಳಂ ಶ್ರೀಮದಾತತಂ**
**ಭುವಿ ಗೃಣನ್ತಿ ಯೇ ಭೂರಿದಾ ಜನಾಃ ॥**

o o o

**ಮದ್ಗತಪ್ರಾಣಾಃ** = ಕಣ್ಣು ಮುಂತಾದ ಇಂದ್ರಿಯಗಳ ರೂಪವಾದ ಪ್ರಾಣಗಳನ್ನು ನನ್ನಲ್ಲಿ ಇರಿಸಿರುವವರು. ನನ್ನಲ್ಲಿ ಕರಣಗಳನ್ನು ಉಪ ಸಂಹಾರಮಾಡಿರುವವರು ಅಥವಾ ತಮ್ಮ ಜೀವನವನ್ನು ನನಗೆ ಅರ್ಪಿಸಿ ಬಿಟ್ಟಿರುವವರು. (ಶಂ. ಭಾ.)

**ಮದ್ಗತಪ್ರಾಣಾಃ**= ಜೀವನವನ್ನು ನನಗೇ ಅರ್ಪಿಸಿಬಿಟ್ಟಿರುವವರು, ನನ್ನನ್ನು ಬಿಟ್ಟು ಆತ್ಮಧಾರಣೆಯೇ ಇಲ್ಲದವರು. ಇವರು ತಾವು ಅನುಭವಿಸಿದ ನನ್ನ ಗುಣಗಳನ್ನು ಪರಸ್ಪರ ಹೇಳಿಕೊಳ್ಳುತ್ತಾರೆ. ದಿವ್ಯವೂ ರಮಣೀಯವೂ ಆದ ನನ್ನ ಕರ್ಮಗಳನ್ನೂ ಹೇಳಿಕೊಳ್ಳುತ್ತಾರೆ. ಅದರಿಂದ ಇವರಿಗೆ ಆನಂದ ಮತ್ತು ರತಿ ಉಂಟಾಗುತ್ತದೆ. ಇದನ್ನು ಹೇಳುವವರು ಅನನ್ಯಪ್ರಯೋಜನವಾದ ಆ ಹೇಳಿಕೆಯಿಂದ ಸಂತೋಷಪಡುತ್ತಾರೆ. ಕೇಳುವವರು ನಿರತಿಶಯಪ್ರಿಯವಾದ ಅದನ್ನು ಕೇಳಿ ರಮಿಸುತ್ತಾರೆ. (ರಾ. ಭಾ.)

**ಓಂ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥**

ಸದಾ ನನ್ನಲ್ಲಿ ಯೋಗಹೊಂದಿ ಪ್ರೀತಿಪೂರ್ವಕವಾಗಿ ಯಾರು ಭಜಿಸುತ್ತಾರೆಯೋ ಅವರಿಗೆ ಬುದ್ಧಿಯೋಗವನ್ನು ಕೊಡುವೆನು. ಅದರಿಂದ ಅವರು ನನ್ನನ್ನೇ ಸೇರುವರು.

* * *

(ಯಾವಾಗಲೂ ನನ್ನನ್ನೇ ಅಂಟಿಕೊಂಡಿರುವ, ಸದಾಕಾಲದಲ್ಲಿಯೂ ನನ್ನನ್ನೇ ಸ್ಮರಿಸುವ, ಪ್ರೀತಿಪೂರ್ವಕರಾಗಿ ನನ್ನನ್ನೇ ಭಜನೆಮಾಡುವ, ನನ್ನ ಕೀರ್ತನೆಗಳನ್ನೇ ಸರ್ವಕಾಲದಲ್ಲಿಯೂ ಹಾಡಿ-ಪಾಡಿ ನಲಿಯುವ ನನ್ನ ಭಕ್ತರಿಗೆ ನಾನು ಜ್ಞಾನಯೋಗವನ್ನು ದಯಪಾಲಿಸುತ್ತೇನೆ. ಆ ಜ್ಞಾನಯೋಗದಿಂದಲೇ ಅವರು ನನ್ನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಧ್ಯಾನಯೋಗಕ್ಕೆ ಮನಸ್ಸನ್ನು ಒಗ್ಗಿಸುವುದು ಬಹುಕಷ್ಟ. ಕೆಲವು ಕ್ಷಣಗಳೂ ಕೂಡ ಮನಸ್ಸು ನಿಯತ ಧ್ಯಾನವಸ್ತುವಿನ ಮೇಲೆ ಇರಲಾರದು. ಎಲ್ಲೆಲ್ಲಿಗೋ ಹಾರಿಕೊಂಡು ಹೋಗುತ್ತಿರುತ್ತದೆ. ಭಕ್ತಿಯೋಗದಲ್ಲಾದರೆ ಮನಸ್ಸನ್ನು ಒಗ್ಗಿಸಿಕೊಳ್ಳಲು ನಾಲ್ಕಾರು ಉಪಕರಣಗಳಿರುತ್ತವೆ. ನಾಮಜಪ, ಭಜನೆ–ಇತ್ಯಾದಿಗಳು ಮನಸ್ಸನ್ನು ಬಲಾತ್ಕಾರವಾಗಿಯೇ ಆದರೂ ಪರಮಾತ್ಮನ ಬಳಿಗೆ ಸೆಳೆಯಬಲ್ಲವು. ಪೂಜೆ, ಭಜನೆ, ಜಪ–ಇತ್ಯಾದಿಗಳನ್ನು ಸತತವಾಗಿ ಮಾಡುತ್ತಿದ್ದರೆ ಪಾದರಸದಂತಹ ಮನಸ್ಸೂ ಸಹ ಕ್ಷಣಕಾಲ ಇತರ ಕರಣಗಳೊಡನೆ ಸೇರಿ ಪರಮಾತ್ಮನನ್ನು ಸೇವಿಸಲೇ ಬೇಕಾಗುತ್ತದೆ. ಈ ಅಭ್ಯಾಸವು ಅನವರತವಾಗಿ ನಡೆದರೆ ಅದರಿಂದ ಸುಪ್ರಸನ್ನನಾದ ಭಗವಂತನು ಅಂತಹ ಪರಮಭಕ್ತರಿಗೆ ಬುದ್ಧಿಯೋಗವನ್ನು ಅರ್ಥಾತ್ ಜ್ಞಾನಯೋಗವನ್ನು ದಯಪಾಲಿಸುತ್ತಾನೆ.)

o o o

**ಪ್ರೀತಿಪೂರ್ವಕಂ** =ಅರ್ಥಿತ್ವವೇ ಮುಂತಾದ ಕಾರಣವಿಲ್ಲದೇ ಸ್ನೇಹದಿಂದ ನನ್ನನ್ನು ಪೂಜಿಸುವವರಿಗೆ. **ಬುದ್ಧಿಯೋಗಂ**=ನನ್ನ ಸಮ್ಯಗ್ದರ್ಶನರೂಪವಾದ, ನನ್ನ ತತ್ತ್ವದ ವಿಷಯವಾದ ಯೋಗವನ್ನು. **ಯೇನ.... ತೇ**= ಸಮ್ಯಗ್ದರ್ಶನರೂಪವಾದ ಈ ಬುದ್ಧಿಯೋಗದಿಂದ ಅವರು ಪರಮೇಶ್ವರನ ಆತ್ಮಭೂತನಾದ ನನ್ನನ್ನು ತಮ್ಮ ಆತ್ಮನೆಂದು ತಿಳಿದುಕೊಳ್ಳುತ್ತಾರೆ.

(ಶಂ. ಭಾ.)

ನನ್ನಲ್ಲಿ ನಿತ್ಯಯೋಗವನ್ನು ಬಯಸುತ್ತಾ ನನ್ನನ್ನು ಭಜಿಸುವ ಅವರಿಗೆ ನಾನು ಪರಿಪಾಕದಶೆಯಲ್ಲಿರುವ ಬುದ್ಧಿಯೋಗವನ್ನು ದಯಪಾಲಿಸುತ್ತೇನೆ. ಅದರಿಂದ ಅವರು ನನ್ನನ್ನು ಹೊಂದುತ್ತಾರೆ. (ರಾ. ಭಾ.)

**ಓಂ ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥೧೧॥**

ಅವರ ಮೇಲೆ ದಯೆಯನ್ನು ತೋರಿಸುವುದಕ್ಕಾಗಿಯೇ ನಾನು ಅವರ ಅಂತಃಕರಣದಲ್ಲಿಯೇ ಇದ್ದುಕೊಂಡು ಪ್ರಕಾಶಮಾನವಾದ ಜ್ಞಾನದೀಪದಿಂದ ಅವರ ಅಜ್ಞಾನದಿಂದುಂಟಾದ ಕತ್ತಲೆಯನ್ನು ನಾಶಗೊಳಿಸುತ್ತೇನೆ.

* * *

(ಬುದ್ಧಿಯೋಗವನ್ನು ಭಕ್ತರಿಗೆ ಕೊಡುವುದು ಏಕೆಂದರೆ ಅವರ ಮೇಲಿನ ಕರುಣೆಯಿಂದ. ಪ್ರಕಾಶಮಾನವಾಗಿರುವ ಜ್ಞಾನದೀಪದಿಂದ ಅಥವಾ ಬುದ್ಧಿಯೋಗದಿಂದ ಅವರ ಅಜ್ಞಾನವೆಂಬ ಕತ್ತಲನ್ನು ಹೋಗಲಾಡಿಸುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ. ಆತ್ಮಭಾವಸ್ಥಃ= ನಾನು ಅವರ ಆತ್ಮಭಾವವನ್ನು ಹೊಂದಿ ಹೀಗೆ ಮಾಡುತ್ತೇನೆ. ಭಕ್ತಿಯ ಪರಾಕಾಷ್ಠೆಯಿಂದಾಗಿ ಭಕ್ತನು ತನ್ನ ಪ್ರಿಯಸ್ವಾಮಿಯನ್ನು ಎಲ್ಲೆಲ್ಲೂ ಕಾಣುತ್ತಾನೆ. ಅವನಿಗೆ ಎಲ್ಲವೂ ಶ್ರೀಕೃಷ್ಣಮಯವಾಗಿಯೇ ಕಾಣುತ್ತದೆ. ಕಣ್ಣುಮುಚ್ಚಿದರೆ ಅಲ್ಲಿಯೂ ಅವನು ಕಾಣುತ್ತಾನೆ. ಕಡೆಗೆ ಪರಮಾತ್ಮನ ದಿವ್ಯಾನುಗ್ರಹದಿಂದಾಗಿ ಜ್ಞಾನಯೋಗವನ್ನು ಪಡೆದು ತನ್ನ ಹೃದಯಕಮಲದಲ್ಲಿಯೇ ಆ ದಿವ್ಯಮೂರ್ತಿಯನ್ನು ಕಾಣುತ್ತಾನೆ. ತನ್ಮೂಲಕವಾಗಿ ಆತ್ಮದರ್ಶನವಾಯಿತೆಂದರೆ ಅಜ್ಞಾನದ ವಿನಾಶವಾದಂತೆಯೇ ಸರಿ. ಆದುದರಿಂದಲೇ ಶ್ರೀಕೃಷ್ಣನಿಲ್ಲಿ ಭಾಸ್ವತಾ ಜ್ಞಾನದೀಪೇನ– ಪರಮಪ್ರಕಾಶದಿಂದ ಕೂಡಿರುವ ಜ್ಞಾನದೀಪದಿಂದ ಹೃದಿಸ್ಥನಾದ ಪರಮಾತ್ಮನನ್ನು ಕಾಣಿಸಿಕೊಟ್ಟು ತನ್ಮೂಲಕವಾಗಿ ಅಜ್ಞಾನವನ್ನು ತೊಡೆದುಹಾಕುತ್ತೇನೆ ಎನ್ನುತ್ತಾನೆ. ಆತ್ಮಸೂರ್ಯನ ದರ್ಶನವಾಯಿತೆಂದರೆ ಅಜ್ಞಾನವೆಂಬ ತಮಸ್ಸಿಗೆ ಅವಕಾಶವೇ ಇಲ್ಲ. ಸಾಧನಭಕ್ತಿಯು ಕರ್ಮಯೋಗದಂತೆ ಜ್ಞಾನಯೋಗದಲ್ಲಿ ಪರ್ಯವಸಾನಹೊಂದಿದರೆ ಅದು ಪೂರ್ಣತೆಯನ್ನು ಹೊಂದುತ್ತದೆ.)

o o o

**ಅಜ್ಞಾನಜಂ ತಮಃ** = ಅವಿವೇಕದಿಂದುಂಟಾದ ಮಿಥ್ಯಾಪ್ರತೀತಿ ರೂಪವಾದ ಮೋಹಮಯವಾದ ಕತ್ತಲನ್ನು. **ಆತ್ಮಭಾವಸ್ಥಃ** = ಅಂತಃ ಕರಣಸ್ಥಾನದಲ್ಲಿದ್ದು ಈ ಜ್ಞಾನದೀಪವು ಭಕ್ತಿಯ ಪ್ರಸಾದವೆಂಬ ಎಣ್ಣೆಯಿಂದ ಉರಿಯುವುದಾಗಿದೆ. ನನ್ನ ಸ್ವರೂಪದ ಭಾವನೆಯ ಅಭಿನಿವೇಶವೆಂಬ ಗಾಳಿ ಯಿಂದ ಅದು ಉರಿಯುತ್ತದೆ. ಬ್ರಹ್ಮಚರ್ಯವೇ ಮುಂತಾದ ಸಾಧನಗಳ ಸಂಸ್ಕಾರದಿಂದ ಕೂಡಿದ ಬುದ್ಧಿಯೇ ಅದರ ಬತ್ತಿ. ವಿರಕ್ತವಾದ ಅಂತಃಕರಣವು ಅದಕ್ಕೆ ಆಧಾರ. ವಿಷಯಗಳಿಂದ ಹಿಂದಿರುಗಿದ ಮತ್ತು ರಾಗ- ದ್ವೇಷಗಳೆಂಬ ಕಾಲುಷ್ಯರಹಿತವಾದ ಚಿತ್ತವೆಂಬ ಗಾಳಿಯಿಲ್ಲದ ಆವರಣದೊಳಗೆ ಈ ಜ್ಯೋತಿಯು ಇದೆ. ನಿರಂತರವಾಗಿ ಅಭ್ಯಾಸಮಾಡಲ್ಪಟ್ಟ ಏಕಾಗ್ರತೆಯೆಂಬ ಧ್ಯಾನದಿಂದುಂಟಾದ ಪೂರ್ಣಜ್ಞಾನಸ್ವರೂಪವಾದ ಪ್ರಕಾಶದಿಂದ ಕೂಡಿದ ಇಂತಹ ಜ್ಞಾನದೀಪದಿಂದ ನಾನು ಅವರ ಮೋಹವನ್ನು ನಾಶಮಾಡುತ್ತೇನೆ.

**ಭಕ್ತಿಪ್ರಸಾದಸ್ನೇಹಾಭಿಷಿಕ್ತೇನ ಮದ್ಭಾವನಾಭಿನಿವೇಶವಾತೇರಿತೇನ ಬ್ರಹ್ಮಚರ್ಯಾದಿಸಾಧನಸಂಸ್ಕಾರವತ್ಪ್ರಜ್ಞಾವರ್ತಿನಾ ವಿರಕ್ತಾಂತಃ-ಕರಣಾಧಾರೇಣ ವಿಷಯವ್ಯಾವೃತ್ತಚಿತ್ತರಾಗದ್ವೇಷಾಕಲುಷಿತನಿವಾತಾ ಪವಾರಕಸ್ಥೇನ ನಿತ್ಯಪ್ರವೃತ್ತೈಕಾಗ್ರ್ಯಧ್ಯಾನಜನಿತ ಸಮ್ಯಗ್ದರ್ಶನಭಾಸ್ವತಾ ಜ್ಞಾನದೀಪೇನ ಇತ್ಯರ್ಥಃ** (ಶಂ. ಭಾ.)

ಅವರನ್ನು ಅನುಗ್ರಹಿಸುವುದಕ್ಕೋಸ್ಕರವೇ ನಾನು ಅವರ ಮನೋವೃತ್ತಿಗೆ ವಿಷಯವಾಗಿದ್ದು ನನ್ನ ಕಲ್ಯಾಣಗುಣಗಳನ್ನು ಪ್ರಕಾಶಪಡಿಸಿ ; ನನ್ನ ವಿಷಯವಾದ ಜ್ಞಾನವೆಂಬ ಉಜ್ಜ್ವಲವಾದ ದೀಪದಿಂದ ಜ್ಞಾನವಿರೋಧಿ ಯಾದ, ಪ್ರಾಚೀನಕರ್ಮರೂಪವಾದ ಅಜ್ಞಾನದಿಂದ ಉಂಟಾದ, ನನಗೆ ವ್ಯತಿರಿಕ್ತವಾಗಿ ಅವರು ಹಿಂದೆ ಅಭ್ಯಾಸಮಾಡಿರುವ ವಿಷಯಪ್ರವಣತೆಯೆಂಬ ಕತ್ತಲನ್ನು ನಾಶಪಡಿಸುತ್ತೇನೆ. (ರಾ. ಭಾ.)

ಶ್ರೀಕೃಷ್ಣನ ಈ ದಿವ್ಯವಾಣಿಯನ್ನು ಕೇಳಿ ಅರ್ಜುನನು ತೃಪ್ತಿಹೊಂದದೇ ಪುನಃ ಪ್ರಶ್ನಿಸುತ್ತಾನೆ.

**ಅರ್ಜುನ ಉವಾಚ :**

**ಓಂ ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥೧೨॥**

**ಓಂ ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥**

ಅರ್ಜುನನು ಹೇಳುತ್ತಾನೆ :

"ನೀನು ಪರಬ್ರಹ್ಮ, ಪರಮಧಾಮ, ಪರಮಪವಿತ್ರ, ಶಾಶ್ವತನಾದ ಪುರುಷ, ದಿವ್ಯ, ಆದಿದೇವ, ಅಜ, ವಿಭು—ಎಂಬುದಾಗಿ ಎಲ್ಲ ಋಷಿಗಳೂ ಹೇಳುತ್ತಾರೆ. ದೇವರ್ಷಿಗಳಾದ ನಾರದರೂ, ಅಸಿತರೂ, ದೇವಲರೂ, ವ್ಯಾಸರೂ ಹೇಳುತ್ತಾರೆ. ನೀನೂ ಹಾಗೆಂದೇ ಹೇಳುತ್ತಿರುವೆ.

* * *

(ನೀನು ಪರಬ್ರಹ್ಮ, ನಿರಂಜನ, ಸಚ್ಚಿದಾನಂದ, ಪರಮಧಾಮ, ತೇಜಃಪುಂಜ, ಜ್ಯೋತಿಸ್ವರೂಪ, ಪವಿತ್ರ, ಪರ, ಪಾವನ, ಪತಿತಪಾವನ, ತೀರ್ಥಗಳಿಗೆ ತೀರ್ಥತ್ವವನ್ನು ದಯಪಾಲಿಸುವ ಮತ್ತು ಅವುಗಳನ್ನು ಸಂಸ್ಪರ್ಶಮಾತ್ರದಿಂದ ಪವಿತ್ರವನ್ನಾಗಿ ಮಾಡುವ ಮಹಾನುಭಾವ, ಶಾಶ್ವತ ನಾದ ಪುರುಷ. ಶಾಶ್ವತವಾಗಿ ದೇಹವೆಂಬ ಪುರದಲ್ಲಿರತಕ್ಕವನು ; ಮಹಾ ಪುರುಷ, ಪರಮಪುರುಷ, ಪೂರ್ಣನಾದವನು, ದಿವ್ಯಪರಮಪದದಲ್ಲಿರತಕ್ಕ ವನು, ದಿವ್ಯಮಂಗಳವಿಗ್ರಹ, ದಿವ್ಯವಾದ ರೂಪವುಳ್ಳವನು, ಆದಿದೇವ ; ದೇವತೆಗಳಿಗೆಲ್ಲಾ ಮೊದಲಿಗನು, ಅಜ ; ಹುಟ್ಟಿಲ್ಲದವನು, ಜನನ-ಮರಣ ಗಳಿಂದ ಅತೀತನಾದವನು, ವಿಭು, ಸರ್ವವ್ಯಾಪಕ, ಸರ್ವತ್ರ ಇರತಕ್ಕವನು— ಎಂಬುದಾಗಿ ಎಲ್ಲ ಋಷಿಗಳೂ ಹೇಳುತ್ತಾರೆ.

ಋಷಿಗಳೆಂದರೆ ಯಾರು?

**ಋಷೀತ್ಯೇಷ ಗತೌ ಧಾತುಃ ಶ್ರುತೌ ಸತ್ಯೇ ತಪಸ್ಯಥ ।**
**ಏತತ್ಸನ್ನಿಯತಂ ಯಸ್ಮಿನ್ಬ್ರಹ್ಮಣಾ ಸ ಋಷಿಃ ಸ್ಮೃತಃ ॥**
**ಗತ್ಯರ್ಥಾದೃಷತೇರ್ಧಾತೋರ್ನಾಮನಿರ್ವೃತ್ತಿರಾದಿತಃ ।**
**ಯಸ್ಮಾದೇಷ ಸ್ವಯಮ್ಭೂತಸ್ತಸ್ಮಾಚ್ಚ ಋಷಿತಾ ಸ್ಮೃತಾ ।**

ವಾಯುಪುರಾಣ ೫೯-೭೯-೮೧

ಋಷ್-ಧಾತುವು ಗಮನ (ಜ್ಞಾನ), ಶ್ರವಣ, ಸತ್ಯ ಮತ್ತು ತಪ–ಇಷ್ಟು ಅರ್ಥಗಳಲ್ಲಿದೆ. ಜ್ಞಾನ, ಶ್ರವಣ, ಸತ್ಯ ಮತ್ತು ತಪಸ್ಸುಗಳು ಯಾವನಲ್ಲಿ ಸನ್ನಿಹಿತವಾಗಿವೆಯೋ ಅಂತಹವನನ್ನು ಋಷಿ ಎಂದು ಬ್ರಹ್ಮನು ಕರೆದನು. ಗತ್ಯರ್ಥಕ ಋಷ್–ಧಾತುವಿನಿಂದ ಋಷಿಶಬ್ದದ ನಿಷ್ಪತ್ತಿಯಾಗಿದೆ. ಆದಿಕಾಲದಲ್ಲಿ ಇವರು ಸ್ವಯಂಜಾತರಾಗಿದ್ದುದರಿಂದ ಇವರಿಗೆ ಋಷಿ ಸಂಜ್ಞೆಯು ಬಂದಿರುತ್ತದೆ. ವಸಿಷ್ಠರೇ ಮೊದಲಾದವರು ಋಷಿಗಳು.

**ಭೂತಭವ್ಯಭವಜ್ಜ್ಞಾನಂ ಸತ್ಯಾಭಿವ್ಯಾಹೃತಂ ತಥಾ ।**
**ಸಮ್ಬುದ್ಧಾಸ್ತು ಸ್ವಯಂ ಯೇ ತು ಸಮ್ಬುದ್ಧಾ ಯೇ ಚ**
**ವೈ ಸ್ವಯಮ್ ॥**
**ತಪಸೇಹ ಪ್ರಸಿದ್ಧಾ ಯೇ ಗರ್ಭೇ ಯೈಶ್ಚ ಪ್ರಣೋದಿತಮ್ ।**
**ಮನ್ತ್ರವ್ಯಾಹರಿಣೋ ಯೇ ಚ ಐಶ್ವರ್ಯಾತ್ಸರ್ವಗಾಶ್ಚ ಯೇ ।**
**ಇತ್ಯೇತೇ ಋಷಿಭಿರ್ಯುಕ್ತಾ ದೇವದ್ವಿಜನೃಪಾಸ್ತು ಯೇ ॥**

ವಾಯುಪುರಾಣ ೬೨-೮೮, ೯೦, ೯೧, ೯೨

ಇದು ದೇವರ್ಷಿಗಳ ಲಕ್ಷಣ.

ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದಿರತಕ್ಕವರು, ಸತ್ಯನಿಷ್ಠರು, ತಮ್ಮ ಇಚ್ಛೆಯಿಂದಲೇ ಸಂಸಾರದಲ್ಲಿರತಕ್ಕವರು. ತಪಶ್ಚರಣೆಯಿಂದಲೇ ವಿಶ್ವದಲ್ಲಿ ವಿಖ್ಯಾತಿಯನ್ನು ಹೊಂದಿರತಕ್ಕವರು. ಗರ್ಭದಲ್ಲಿರುವ ಶಿಶುವಿಗೂ ಉಪದೇಶಕೊಡಲು ಸಾಮರ್ಥ್ಯವಿರುವವರು. ಮಂತ್ರವಕ್ತಾರರು. ಅಣಿಮಾದಿಸಿದ್ಧಿಗಳನ್ನು ಪಡೆದು ಅಡೆತಡೆಯೇ ಇಲ್ಲದೇ ಎಲ್ಲ ಲೋಕಗಳಲ್ಲಿಯೂ ಪ್ರಯಾಣಮಾಡುವವರು. ಯಾವಾಗಲೂ ಋಷಿಗಳ ಸಮೂಹದಲ್ಲಿಯೇ ಇರತಕ್ಕವರು–ಇಂತಹವರು ದೇವತೆಗಳಲ್ಲಿದ್ದರೂ, ದ್ವಿಜರಲ್ಲಿದ್ದರೂ, ರಾಜರಲ್ಲಿದ್ದರೂ ದೇವರ್ಷಿಗಳೆಂದೇ ಕರೆಯಲ್ಪಡುತ್ತಾರೆ. ನಾರದರೇ ಮೊದಲಾದವರು ದೇವರ್ಷಿಗಳು. ಇವರು 'ಭಗವಂತನ ಮನಸ್ಸು' ಎಂದು ಪ್ರಸಿದ್ಧಿಹೊಂದಿದ್ದಾರೆ.

ನಾರದರು ಪರಮತತ್ತ್ವಜ್ಞರು, ಪರಮಪ್ರೇಮಿಗಳು ಮತ್ತು ಊರ್ಧ್ವ

ರೇತಸ್ಕರಾದ ಬ್ರಹ್ಮಚಾರಿಗಳು. ಭಕ್ತರಿಗೆ ಇವರೇ ಪ್ರಧಾನಾಚಾರ್ಯರು. ಭಕ್ತಿಪಂಥಕ್ಕೇ ಇವರು ಮೂಲಭೂತರಾಗಿದ್ದು ಪ್ರಪಂಚಕ್ಕೆ ಹೆಚ್ಚು ಉಪಕಾರ ಮಾಡಿರುತ್ತಾರೆ. ಪ್ರಹ್ಲಾದ, ಧ್ರುವ, ಅಂಬರೀಷ–ಮೊದಲಾದವರಿಗೆ ಭಕ್ತಿಪಂಥದ ದಾರಿಯನ್ನು ತೋರಿಸಿಕೊಟ್ಟವರೇ ಇವರು. ಶ್ರೀಮದ್ಭಾಗವತ ಮತ್ತು ರಾಮಾಯಣಗಳು ಇವರ ಕೃಪಾವಿಶೇಷದಿಂದಲೇ ಪ್ರಪಂಚಕ್ಕೆ ಲಭಿಸಿರುವುವು. ಶುಕದೇವನಂತಹ ಪರಮಜ್ಞಾನಿಗೂ ಉಪದೇಶಮಾಡಿದ ಮಹಾನುಭಾವರಿವರು. ಇವರು ಶ್ರೀಕೃಷ್ಣನ ವಿಷಯವಾಗಿ ಅನೇಕ ಪ್ರಾರ್ಥನೆಗಳನ್ನು ಮಾಡಿದ್ದಾರೆ.

ದ್ರೌಪದಿಯ ಮಾತಿನಲ್ಲಿ :

**ಸಾಧ್ಯಾನಾಮಪಿ ದೇವಾನಾಂ ಶಿವಾನಾಮೀಶ್ವರೇಶ್ವರ ।**
**ಭೂತಭಾವನ ಭೂತೇಶ ಯಥಾ ತ್ವಾಂ ನಾರದೋಽಬ್ರವೀತ್ ॥**

ವನ-೧೨-೫೩

ಸಾಧ್ಯರಿಗೂ, ದೇವತೆಗಳಿಗೂ, ಏಕಾದಶರುದ್ರರಿಗೂ ಸ್ವಾಮಿಯಾದ ಸರ್ವೇಶ್ವರನೇ! ನೀನು ಆಕಾಶಾದಿ ಪಂಚಭೂತಗಳ ಸೃಷ್ಟಿಗೆ ಕಾರಣನೆಂದೂ ಅವುಗಳ ನಿಯಾಮಕನೂ ಸಹ ನೀನೇ ಎಂದೂ ನಾರದರು ಹೇಳುತ್ತಾರೆ.

ಋಷಿಗಳು ಶ್ರೀಕೃಷ್ಣನ ವಿಷಯವಾಗಿ ಹೇಳಿದುದು–ದ್ರೌಪದಿಯ ಮಾತಿನಲ್ಲಿ :

**ಋಷಯಸ್ತ್ವಾಂ ಕ್ಷಮಾಮಾಹುಃ ಸತ್ಯಂ ಚ ಪುರುಷೋತ್ತಮ ॥**

ವನ-೧೨-೫೨

ಪುರುಷೋತ್ತಮನೇ! ಕ್ಷಮಾರೂಪನೂ ಸತ್ಯರೂಪನೂ ನೀನೇ ಎಂದು ಋಷಿಗಳು ಹೇಳುತ್ತಾರೆ.

ಮಹರ್ಷಿಗಳಾದ ಅಸಿತ ಮತ್ತು ದೇವಲರು ತಂದೆ-ಮಕ್ಕಳು. ಇವರ ಹುಟ್ಟಿನ ಕಥೆಯು ಕೂರ್ಮಪುರಾಣದಲ್ಲಿ ಹೀಗೆ ಬರುತ್ತದೆ :

**ಕಶ್ಯಪಃ ಪುತ್ರಕಾಮಸ್ತು ಚಚಾರ ಸುಮಹತ್ತಪಃ ।**
**ತಸ್ಯೈವಂ ತಪತೋಽತ್ಯರ್ಥಂ ಪ್ರಾದುರ್ಭೂತೌ ಸುತಾವಿಮೌ ।**

**ವತ್ಸರಶ್ಚಾಸಿತಶ್ಚೈವ ತಾವುಭೌ ಬ್ರಹ್ಮವಾದಿನೌ ।**
**ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ ।**
**ನಾಮ್ನಾ ವೈ ದೇವಲಃ ಪುತ್ರೋ ಯೋಗಾಚಾರ್ಯೋ ಮಹಾತಪಾಃ ॥**

೧೯-೧-೨-೫

ಕಶ್ಯಪನು ಪುತ್ರಕಾಮನಾಗಿ ಮಹಾತಪಸ್ಸನ್ನು ಮಾಡಿದನು. ಉಗ್ರವಾಗಿ ತಪಸ್ಸುಮಾಡುತ್ತಿದ್ದ ಅವನಿಗೆ ವತ್ಸರ ಮತ್ತು ಅಸಿತ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರಿಬ್ಬರೂ ಬ್ರಹ್ಮವಿದರಾಗಿದ್ದರು. ಅಸಿತನ ಪತ್ನಿಯಾದ ಏಕಪರ್ಣೆಯಲ್ಲಿ ಮಹಾತಪಸ್ವಿಯಾದ, ಯೋಗಾಚಾರ್ಯನಾದ, ವೇದ ನಿಷ್ಣಾತನಾದ ದೇವಲನೆಂಬ ಮಗನು ಹುಟ್ಟಿದನು. ಆ ಇಬ್ಬರೂ ಸಹ ಋಗ್ವೇದಮಂತ್ರದ್ರಷ್ಟಾರರು. ದೇವಲನು ಶಿವನನ್ನು ಆರಾಧನೆಮಾಡಿ ಸಿದ್ಧಿಯನ್ನು ಪಡೆದುಕೊಂಡಿದ್ದನು. ಅಸಿತ-ದೇವಲರು ಸಕಲಶಾಸ್ತ್ರಪ್ರವೀಣರು ಮತ್ತು ಪ್ರಾಚೀನಮಹರ್ಷಿಗಳು.

ಶ್ರೀಕೃಷ್ಣನ ವಿಷಯದಲ್ಲಿ ಅಸಿತ-ದೇವಲರ ಅಭಿಪ್ರಾಯವು ದ್ರೌಪದಿಯ ಮಾತಿನಲ್ಲಿ :

**ಪೂರ್ವೇ ಪ್ರಜಾಭಿಸರ್ಗೇ ತ್ವಾಮಾಹುರೇಕಂ ಪ್ರಜಾಪತಿಮ್ ।**
**ಸ್ರಷ್ಟಾರಂ ಸರ್ವಲೋಕಾನಾಮಸಿತೋ ದೇವಲೋಽಬ್ರವೀತ್ ॥**

ವನ-೧೨-೫೦

ಸೃಷ್ಟಿಗೆ ಮೊದಲು ನೀನೊಬ್ಬನೇ ಇದ್ದೆಯೆಂದೂ, ಸರ್ವಲೋಕಗಳನ್ನೂ ಸೃಷ್ಟಿಸಿದ ಪ್ರಜಾಪತಿಯೂ ಸಹ ನೀನೇ ಎಂದೂ ಅಸಿತ-ದೇವಲರು ಹೇಳುತ್ತಾರೆ.

ವ್ಯಾಸರನ್ನು ಭಗವಂತನ ಅವತಾರವೆಂದೇ ಹೇಳುತ್ತಾರೆ.

**ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ।**

ಒಂದು ದ್ವೀಪದಲ್ಲಿ ಇವರು ಹುಟ್ಟಿದರು. ಇವರ ಬಣ್ಣವು ಕಪ್ಪು. ಆದುದರಿಂದ ಇವರು ಕೃಷ್ಣದ್ವೈಪಾಯನರಾದರು. ವೇದಗಳ ವಿಭಾಗವನ್ನು ಮಾಡಿದ್ದರಿಂದ ವೇದವ್ಯಾಸರಾದರು. ಇವರು ಪರಾಶರರ ಮಕ್ಕಳು. ಇವರ

ತಾಯಿಯ ಹೆಸರು ಸತ್ಯವತೀ. ಇವರು ಹುಟ್ಟಿದೊಡನೆಯೇ ತಪಸ್ಸಿಗೆ ಹೊರಟುಹೋದರು. ಇವರು ಭಗವತ್ತತ್ತ್ವವನ್ನು ಪೂರ್ಣವಾಗಿ ತಿಳಿದಿರ ತಕ್ಕವರು. ಬ್ರಹ್ಮಸೂತ್ರ, ಮಹಾಗ್ರಂಥವಾದ ಮಹಾಭಾರತ, ಅಷ್ಟಾದಶ ಪುರಾಣಗಳು, ಉಪಪುರಾಣಗಳು, ಭಾಗವತ, ಕೆಲವು ಸ್ಮೃತಿಗಳು–ಈ ಎಲ್ಲವನ್ನೂ ರಚಿಸಿದವರು ಇವರೇ ಆಗಿದ್ದಾರೆ. ಇವರು ಶ್ರೀಕೃಷ್ಣನ ವಿಷಯ ವಾಗಿ ಅನೇಕಕಡೆಗಳಲ್ಲಿ ಅನೇಕರೀತಿಯಲ್ಲಿ ಹೇಳಿದ್ದಾರೆ. ನಾನಾಪ್ರಕಾರವಾಗಿ ಕೀರ್ತನೆ ಮಾಡಿದ್ದಾರೆ.

**ಪವಿತ್ರಾಣಾಂ ಹಿ ಗೋವಿನ್ದಃ ಪವಿತ್ರಂ ಪರಮುಚ್ಯತೇ ।**
**ಪುಣ್ಯಾನಾಮಪಿ ಪುಣ್ಯೋಽಸೌ ಮಙ್ಗಲಾನಾಂ ಚ ಮಙ್ಗಲಮ್ ॥**
**ತ್ರೈಲೋಕ್ಯೇ ಪುಣ್ಡರೀಕಾಕ್ಷೋ ದೇವದೇವಃ ಸನಾತನಃ ।**
**ಅವ್ಯಯಾತ್ಮಾ ವ್ಯಯಾತ್ಮಾ ಚ ಕ್ಷೇತ್ರಜ್ಞಃ ಪರಮೇಶ್ವರಃ ।**
**ಆಸ್ತೇ ಹರಿರಚಿನ್ತ್ಯಾತ್ಮಾ ತತ್ರೈವ ಮಧುಸೂದನಃ ॥**

ವನ-೮೮-೨೬-೨೭

ಗೋವಿಂದನು ಪವಿತ್ರವಾದ ವಸ್ತುಗಳಲ್ಲೆಲ್ಲಾ ಪರಮಪವಿತ್ರನಾದವನು. ಪುಣ್ಯವಸ್ತುಗಳಿಗೆಲ್ಲಾ ಪುಣ್ಯತಮನಾದವನು. ಮಂಗಳದಾಯಕವಾದ ವಸ್ತುಗಳಲ್ಲೆಲ್ಲಾ ಮಂಗಳದಾಯಕನಾದವನು. ಮೂರು ಲೋಕಗಳಲ್ಲಿಯೂ ಪುಂಡರೀಕಾಕ್ಷನಾದ ದೇವದೇವನಾದ ಶ್ರೀಕೃಷ್ಣನೊಬ್ಬನೇ ಆದಿಪುರುಷನಾದ ಸನಾತನನು. ಅವ್ಯಯಾತ್ಮನೂ (ಅಕ್ಷರರೂಪಿಯೂ) ವ್ಯಯಾತ್ಮನೂ (ಕ್ಷರರೂಪಿಯೂ) ಸಹ ಅವನೇ ಆಗಿದ್ದಾನೆ. ಕ್ಷೇತ್ರಜ್ಞನಾದ ಜೀವಾತ್ಮನೂ ಪರಮೇಶ್ವರನಾದ ಪರಮಾತ್ಮನೂ ಸಹ ಅವನೇ ಆಗಿದ್ದಾನೆ. ಮಧುಹಂತಕ ನಾದ, ಅಚಿಂತ್ಯನಾದ, ಅಪ್ರಮೇಯನಾದ, ಶ್ರೀಕೃಷ್ಣರೂಪಿಯಾದ ಶ್ರೀಹರಿಯು ದ್ವಾರಾವತಿಯಲ್ಲಿ ವಾಸಮಾಡುತ್ತಿದ್ದಾನೆ.

ನಾರದ, ಅಸಿತ, ದೇವಲ, ವ್ಯಾಸ ಮತ್ತು ಋಷಿಗಳು ಹೇಳಿರುವ ವಿಷಯಗಳನ್ನೇ ನೀನೂ ಸಹ ಈ ಹಿಂದೆ ಹೇಳಿರುವೆ.

o o o

**ಪರಂ ಧಾಮ=** ಪರಮತೇಜಸ್ಸು. **ವಿಭುಃ**=ವಿಭವನಶೀಲ, ವ್ಯಾಪಕ.

(ಶಂ. ಭಾ.)

ಶ್ರುತಿಗಳು ಯಾರನ್ನು ಪರಂ ಬ್ರಹ್ಮ, ಪರಂ ಧಾಮ, ಪರಮಪವಿತ್ರ ಎಂದು ಕರೆಯುತ್ತವೆಯೋ ಅವನೇ ನೀನು.

**ಯತೋ ವಾ ಇಮಾನಿ ಭೂತಾನಿ ಜಾಯನ್ತೇ ।** ತೈ. ಭೃಗುವಲ್ಲಿ
**ಬ್ರಹ್ಮವಿದಾಪ್ನೋತಿ ಪರಮ್ ।** ತೈ. ಆನಂದವಲ್ಲಿ
**ತಂ ದೇವಾ ಜ್ಯೋತಿಷಾಂ ಜ್ಯೋತಿಃ।** ಬೃ.೬-೪-೧೬
**ಸ ಯೋ ಹ ವೈ ತತ್ಪರಮಂ ಬ್ರಹ್ಮವೇದ ।** ಬ್ರಹ್ಮೈವ ಭವತಿ
–ಮುಂಡಕ

ಅಂತೆಯೇ ನೀನು ಪರಮಪಾವನನು. ಸ್ಮರಣೆಮಾಡತಕ್ಕವರಿಗೆ ಯಾವ ಕಲ್ಮಷವೂ ಅಂಟದಂತೆ ಮಾಡುವವನು ಮತ್ತು ಕಲ್ಮಷವನ್ನು ಧ್ವಂಸ ಮಾಡುವವನು.

**ಯಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯನ್ತೇ ಏವಮೇವಂ ವಿದ್ಧಿ ।**
**ಪಾಪಂ ಕರ್ಮ ಚ ನ ಶ್ಲಿಷ್ಯತೇ ।** ಛಾಂ ೪-೧೪-೩
**ತದ್ಯಥೇಷೀಕಾ ತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ**
**ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ** ಛಾಂ ೫-೨೪-೩

ಪರಾಪರತತ್ತ್ವವನ್ನು ಬಲ್ಲ ಋಷಿಗಳೆಲ್ಲರೂ ನಿನ್ನನ್ನೇ ಶಾಶ್ವತನು, ದಿವ್ಯನು, ಆದಿಪುರುಷ, ಆದಿದೇವ ಮತ್ತು ಅಜ–ಎಂದು ಕರೆಯುತ್ತಾರೆ.

**ಏಷ ನಾರಾಯಣಃ ಶ್ರೀಮಾನ್ ಕ್ಷೀರಾರ್ಣವನಿಕೇತನಃ ।**
**ನಾಗಪರ್ಯಙ್ಕಮುತ್ಸೃಜ್ಯ ಹ್ಯಾಗತೋ ಮಥುರಾಂ ಪುರೀಮ್ ॥**
(ವಿ. ಪುರಾಣ)

ಹಾಗೆಯೇ ನೀನೂ ಕೂಡ **ಭೂಮಿರಾಪೋಽ**ನಲೋ ವಾಯುಃ ೭-೪ **ಅಹಂ....ಪ್ರವರ್ತತೇ** ೧೦-೮ ಎಂಬ ವಾಕ್ಯಗಳಲ್ಲಿ ಇದೇ ಅಭಿಪ್ರಾಯವನ್ನು ಹೇಳಿರುವೆ. (ರಾ. ಭಾ.)

ಬ್ರಹ್ಮ = ಪರಿಪೂರ್ಣನಾದವನು. **ಅಥ ಕಸ್ಮಾದುಚ್ಯತೇ**

**ಪರಂಬ್ರಹ್ಮ . ಬೃಹತಿ ಬ್ರಹ್ಮಯತೀತಿ ಶ್ರುತಿಃ । ಬೃಹತಿ=ಪೂರ್ಣವಾಗಿದೆ. ಬ್ರಹ್ಮಯತಿ = ಉಳಿದ ಎಲ್ಲವನ್ನೂ ತುಂಬುತ್ತದೆ. ಪರಮಂ ಯೋ ಮಹದ್ಬ್ರಹ್ಮ .**

ವಿಭುಃ = ವಿವಿಧವಾಗಿ ಆಗುವವನು. ಅನೇಕ ರೂಪಗಳನ್ನು ಹೊಂದುವವನು. ವಿವಿಧಮಾಸೀದಿತಿ ವಿಭುಃ. ವಿವಿಧಂ ಅನೇಕರೂಪತ್ವೇನ ಅಭವತ್ **(ಮ. ಭಾ.)**

ಈ ಕಾರಣದಿಂದ

**ಓಂ ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥**

ಕೇಶವ! ನೀನು ಯಾವುದನ್ನು ನನಗೆ ಹೇಳುತ್ತಿರುವೆಯೋ ಅದೆಲ್ಲವನ್ನೂ ನಿಜವೆಂದೇ ತಿಳಿಯುತ್ತೇನೆ. ಭಗವನ್! ನಿನ್ನ ಉತ್ಪತ್ತಿಯನ್ನು ಅಥವಾ ಅಭಿವ್ಯಕ್ತವಾಗಿರುವ ಪ್ರಕಾರವನ್ನು ದೇವತೆಗಳಾಗಲೀ-ದಾನವರಾಗಲೀ ಅರಿಯರು.

* * *

(ಕೇಶವ! ನೀನು ಹೇಳುತ್ತಿರುವುದೆಲ್ಲವನ್ನೂ ನಾನು ನಿಜವೆಂದೇ ಭಾವಿಸಿದ್ದೇನೆ. ಋಷಿಗಳೂ ದೇವರ್ಷಿಗಳೂ ನೀನು ಹೇಳಿದುದನ್ನೇ ಹೇಳಿದ್ದಾರೆ. ಆದುದರಿಂದ ನಿನ್ನ ಮಾತುಗಳಲ್ಲಿ ಸಂಶಯಪಡುವ ಕಾರಣವೇ ಇಲ್ಲ. ನಿನ್ನ ವ್ಯಕ್ತಿತ್ವವನ್ನೂ ಪ್ರಭಾವವನ್ನೂ ದೇವ-ದಾನವರೇ ಆದಿಯಾಗಿ ಯಾರೂ ತಿಳಿಯರು. ದೇವತೆಗಳಿಗೇ ನಿನ್ನ ನಿಜಸ್ವರೂಪವು ತಿಳಿಯದೆಂದ ಮೇಲೆ ಮನುಷ್ಯರ ವಿಷಯವಾಗಿ ಹೇಳಬೇಕಾಗಿಯೇ ಇಲ್ಲ.

ಇಲ್ಲಿ ಶ್ರೀಕೃಷ್ಣನನ್ನು ಅರ್ಜುನನು 'ಭಗವನ್' ಎಂದೇ ಸಂಬೋಧಿಸಿದ್ದಾನೆ. ತನ್ನ ಗೆಳೆಯನೆಂಬ ಭಾವನೆಯು ಅರ್ಜುನನ ಮನಸ್ಸಿನಿಂದ ಅಳಿಸಿ ಹೋಗಿದೆ.

ಭಗವಂತ ಎಂಬುದರ ಲಕ್ಷಣವನ್ನು ವಿಷ್ಣುಪುರಾಣದಲ್ಲಿ ಹೀಗೆ ಹೇಳಿದೆ :

**ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ ।**
**ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತಿ ಸ್ಮೃತಃ ॥** ೬-೫-೭೮

ಸಂಪೂರ್ಣೈಶ್ವರ್ಯ, ಸಂಪೂರ್ಣಧರ್ಮ, ಸಂಪೂರ್ಣಯಶಸ್ಸು, ಸಂಪೂರ್ಣಶ್ರೀ, ಸಂಪೂರ್ಣಜ್ಞಾನ ಮತ್ತು ಸಂಪೂರ್ಣವೈರಾಗ್ಯ–ಇವಕ್ಕೆ ಭಗ ಎಂದು ಹೆಸರು. ಇವುಗಳಿರುವವನು ಭಗವಂತ.

**ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಮ್ ।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**

ಉತ್ಪತಿ-ಪ್ರಲಯ, ಪ್ರಾಣಿಗಳ ಆಗಮನ-ನಿರ್ಗಮನ, ವಿದ್ಯೆ-ಅವಿದ್ಯೆ ಇವುಗಳನ್ನು ಯಾವನು ತಿಳಿದಿರುತ್ತಾನೆಯೋ–ಅವನೇ ಭಗವಚ್ಛಬ್ದಕ್ಕೆ ವಾಚ್ಯನಾದವನು.)

O O O

**ಸರ್ವಮೇತತ್**=ಋಷಿಗಳಿಂದಲೂ ಮತ್ತು ನಿನ್ನಿಂದಲೂ ಮೇಲೆ ಹೇಳಿದ ಪ್ರಕಾರ ಏನೇನು ಹೇಳಲ್ಪಟ್ಟಿದೆಯೋ ಆ ಎಲ್ಲ ಮಾತುಗಳನ್ನೂ. **ತೇ ವ್ಯಕ್ತಿಂ** = ನಿನ್ನ ಪ್ರಭವವನ್ನು (ಉತ್ಪತ್ತಿಯನ್ನು ) (ಶಂ. ಭಾ.)

ಇದೆಲ್ಲವೂ ಯಥಾವತ್ತಾದ ಸತ್ಯಾರ್ಥದ ಹೇಳಿಕೆ–ಎಂದು ನಾನು ತಿಳಿಯುತ್ತೇನೆ. ಪ್ರಶಂಸೆ ಮುಂತಾದುವುಗಳಲ್ಲಿ ಅಭಿಪ್ರಾಯವಿಲ್ಲದೇ ಇದ್ದು ದನ್ನು ಇದ್ದಂತೆ ಹೇಳುವ ಮಾತು ಎಂದು ತಿಳಿಯುತ್ತೇನೆ.

**ಭಗವನ್** = ನಿರತಿಶಯವಾದ ಜ್ಞಾನ, ಶಕ್ತಿ, ಬಲೈಶ್ವರ್ಯ, ವೀರ್ಯ ಮತ್ತು ತೇಜಸ್ಸುಗಳಿಗೆ ನಿಧಿಯಾದವನೇ! ನೀನು ಪ್ರಕಾಶಗೊಂಡಿರುವ ಪ್ರಕಾರವನ್ನು ಪರಿಮಿತವಾದ ಜ್ಞಾನವುಳ್ಳ ದೇವತೆಗಳೂ-ದಾನವರೂ ತಿಳಿಯರು. (ರಾ. ಭಾ.)

**ಓಂ ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥೧೫॥**

ಪುರುಷೋತ್ತಮ! ಭೂತಭಾವನ! ಭೂತೇಶ! ದೇವದೇವ! ಜಗತ್ಪತೇ! ನಿನ್ನನ್ನು ನೀನೇ ನಿನ್ನಿಂದಲೇ ತಿಳಿದುಕೊಂಡಿರುವೆ.

* * *

(ದೇವತೆಗಳಿಗೂ ಗೊತ್ತಿಲ್ಲ ; ದಾನವರಿಗೂ ಗೊತ್ತಿಲ್ಲ. ಪರಮಾತ್ಮನ ಸ್ವರೂಪವು ಮತ್ತಾರಿಗೆ ಗೊತ್ತಿದೆ?–ಎಂಬುದಕ್ಕೆ ಅರ್ಜುನನೇ ಹೇಳುತ್ತಾನೆ.

**"ಭೂತಭಾವನ!** ಸಮಸ್ತಪ್ರಾಣಿಗಳ ಉತ್ಪತ್ತಿಗೂ ಕಾರಣನಾದವನೇ! **ಭೂತೇಶ!** ಎಲ್ಲ ಪ್ರಾಣಿಗಳನ್ನೂ ನಿಯಂತ್ರಿಸುವವನೇ! **ದೇವದೇವ!** ದೇವತೆಗಳಿಗೆಲ್ಲಾ ದೇವನೇ! **ಜಗತ್ಪತೇ!** ಪ್ರಪಂಚಕ್ಕೇ ಸ್ವಾಮಿಯಾಗಿರ ತಕ್ಕವನೇ! **ಕ್ಷರ-ಅಕ್ಷರ** ಎರಡಕ್ಕೂ ಶ್ರೇಷ್ಠನಾದವನು ಪುರುಷೋತ್ತಮ. ನಿನ್ನ ಗುಣ, ಪ್ರಭಾವ, ಲೀಲೆ, ಮಾಹಾತ್ಮ್ಯ, ರಹಸ್ಯ, ಸ್ವರೂಪ-ಇವುಗಳನ್ನು ಬೇರೆಯವರಿಂದ ತಿಳಿಯಲು ಸಾಧ್ಯವಾಗುವುದೇ ಇಲ್ಲ. ನಿನ್ನ ಸ್ವರೂಪವು ನಿನಗೊಬ್ಬನಿಗೆ ತಿಳಿದಿರುವುದೇ ಹೊರತು ಬೇರೆಯವರಿಗೆ ತಿಳಿದಿಲ್ಲ.)

o o o

**ಸ್ವಯಮೇವ ಆತ್ಮನಾ ಆತ್ಮಾನಂ**

ನೀನು ನಿನ್ನಿಂದಲೇ ನಿನ್ನನ್ನು ಅರಿತಿರುವೆ. ಎಂದರೆ ನಿರತಿಶಯವಾದ ಜ್ಞಾನ, ಐಶ್ವರ್ಯ, ಬಲ, ಸಾಮರ್ಥ್ಯ ಮುಂತಾದ ಶಕ್ತಿಯುಳ್ಳ ಈಶ್ವರ ನೆಂಬುದನ್ನು ತಿಳಿದಿದ್ದೀಯೆ. ಭೂತಭಾವನ = ಭೂತಗಳನ್ನು ಉತ್ಪತ್ತಿ ಮಾಡುವವನು. (ಶಂ. ಭಾ.)

**ದೇವದೇವ** =ದೇವತೆಗಳಿಗೂ ಪರಮದೇವತೆಯಾದವನೇ! ದೇವತೆ ಗಳು, ಮನುಷ್ಯ, ಮೃಗ, ಪಕ್ಷಿ, ಸರ್ಪ-ಮುಂತಾದುವುಗಳನ್ನು ಸೌಂದರ್ಯ-ಸೌಶೀಲ್ಯ ಮುಂತಾದ ಕಲ್ಯಾಣಗುಣಗಳಿಂದ ಮೀರಿಸಿರುವಂತೆಯೇ ನೀನು ಆ ಗುಣಗಳಿಂದ ಆ ದೇವತೆಗಳೆಲ್ಲರನ್ನೂ ಮೀರಿಸಿರುವೆ. (ರಾ. ಭಾ.)

**ಓಂ ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥**

ಯಾವ ವಿಭೂತಿಗಳಿಂದ ಈ ಲೋಕಗಳನ್ನು ನೀನು ವ್ಯಾಪಿಸಿ ಕೊಂಡಿರುವೆಯೋ ಅಂತಹ ದಿವ್ಯವಾದ ನಿನ್ನ ವಿಭೂತಿಗಳನ್ನು ಒಂದೂ ಬಿಡದಂತೆ ಹೇಳುವವನಾಗು.

* * *

(ಮಹಾನುಭಾವ! ನೀನೇ ಈ ಲೋಕಗಳನ್ನು ವಿಭೂತಿಗಳ ಮೂಲಕ ವ್ಯಾಪಿಸಿಕೊಂಡುಬಿಟ್ಟಿರುವೆ. ನೀನು ಹೇಳಿದಂತೆಯೇ ಚಂದ್ರ, ಸೂರ್ಯ, ಇಂದ್ರರೇ ಮೊದಲಾದ ನಾನಾರೂಪಗಳಿಂದ ವ್ಯಾಪಿಸಿರುವ ನಿನ್ನ ದಿವ್ಯವಾದ

ಮಹಿಮಾವಿಶೇಷದಿಂದ ಕೂಡಿರುವ ಎಲ್ಲ ವಸ್ತುಗಳನ್ನೂ ನೀನು ಒಂದೂ ಬಿಡದಂತೆ ಹೇಳಬೇಕು–ಎನ್ನುತ್ತಾನೆ ಅರ್ಜುನ. ಅವನು ಸರ್ವಾಂತ ರ್ಯಾಮೀ ; ಎಲ್ಲೆಲ್ಲೂ ಇದ್ದಾನೆ ಎಂಬುದು ನಿಜ. ಆದರೆ ಅವನ ಮಹಿಮೆಯು ಎಲ್ಲೆಲ್ಲಿ ವಿಶೇಷವಾಗಿ ಬೆಳಗುತ್ತದೆ–ಎಂಬುದನ್ನು ತಿಳಿದು ಕೊಳ್ಳಬೇಕೆಂಬ ಆಶೆ ಅರ್ಜುನನಿಗೆ. ಅವನು ಸರ್ವಾಂತರ್ಯಾಮೀ. ಕಲ್ಲಿ ನಲ್ಲೂ ಇದ್ದಾನೆ, ಮಣ್ಣಿನಲ್ಲೂ ಇದ್ದಾನೆ, ಮರದಲ್ಲೂ ಇದ್ದಾನೆ. ಆದರೆ ಅವನ ಮಹಿಮಾವಿಶೇಷಗಳು ಕೆಲವು ವಸ್ತುಗಳಲ್ಲಿ ಕೆಲವು ಕಾಲಗಳಲ್ಲಿ ವಿಶೇಷವಾಗಿ ಪ್ರಕಾಶಕ್ಕೆ ಬರುತ್ತವೆ. ಅದನ್ನೇ ತಿಳಿಯಬೇಕೆಂಬುದು ಅರ್ಜುನನ ಆಶಯವಾಗಿದೆ.

O O O

ವಿಭೂತಿಭಿಃ = ನಿನ್ನ ಮಾಹಾತ್ಮ್ಯದ ವಿಸ್ತಾರಗಳಿಂದ. **ಆತ್ಮನೋ ಮಾಹಾತ್ಮ್ಯವಿಸ್ತರೈಃ** (ಶಂ. ಭಾ.)

ವಿಭೂತಿಭಿಃ = ಅನಂತವಾದ ನಿಯಮನವಿಶೇಷಗಳಿಂದ.

**ಅನನ್ತಾಭಿಃ ವಿಭೂತಿಭಿಃ ನಿಯಮನವಿಶೇಷೈಃ ॥** (ರಾ. ಭಾ.)

ವಿಭೂತಯಃ = ವಿವಿಧಾಃ ಭೂತಯಃ ಅನೇಕವಾಗಿರುವ ರೂಪಗಳು. **ನಾನಾಭೂತಾನಿ ರೂಪಾಣಿ** (ಮ. ಭಾ.)

**ಓಂ ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ಮಯಾ ॥೧೭॥**

ಮಹಾಯೋಗಿಯೇ! ಸರ್ವಕಾಲದಲ್ಲಿಯೂ ನಿನ್ನನ್ನೇ ಚಿಂತಿಸುತ್ತಾ ನಾನು ನಿನ್ನನ್ನು ತಿಳಿಯುವ ಬಗೆ ಯಾವುದು? ಯಾವ ಯಾವ ಭಾವಗಳಲ್ಲಿ ನಿನ್ನನ್ನು ನಾನು ಚಿಂತಿಸಬೇಕು?

* * *

(ನೀನು ಹೇಳಿದಂತೆ ಸರ್ವಕಾಲದಲ್ಲಿಯೂ ನಿನ್ನನ್ನು ಚಿಂತಿಸುತ್ತಿದ್ದು ನಿನ್ನನ್ನು ಧ್ಯಾನಮಾಡುತ್ತಿದ್ದರೆ ನಿನ್ನನ್ನು ತಿಳಿದುಕೊಳ್ಳಲು ಸಾಧ್ಯ. ಆದರೆ ನಿನ್ನನ್ನು ಚಿಂತಿಸುವುದು ಹೇಗೆ?

ಯಾವುದನ್ನು ಕುರಿತು ಚಿಂತಿಸಲಿ? ಧ್ಯಾನದ ಮೂರ್ತಿಯು ಯಾವುದಾಗಬಹುದು? ನಿನ್ನ ಯಾವ ಯಾವ ಭಾವಗಳಲ್ಲಿ ನಾನು ನಿನ್ನನ್ನು

ಚಿಂತಿಸಲಿ? ಇಲ್ಲಿ ಭಾವಗಳು ಎಂದರೆ ವಸ್ತುಗಳು. ಯಾವ ಯಾವ ವಸ್ತುಗಳಲ್ಲಿ ನಿನ್ನ ಸಾನ್ನಿಧ್ಯವು ಅಧಿಕವಾಗಿರುವುದು?–ಈ ಎಲ್ಲ ವಿಷಯ ಗಳನ್ನೂ ವಿವರಿಸಿ ಹೇಳು.)

O O O

ಭಾವೇಷು = ವಸ್ತುಗಳಲ್ಲಿ. ಚಿನ್ತ್ಯಃ ಅಸಿ =ಧ್ಯಾನಮಾಡಲು ಯೋಗ್ಯನಾಗಿರುವೆ. (ಶಂ. ಭಾ.)

ಯೋಗಿನ್ ಎಂಬುದರ ಬದಲು ಯೋಗೀ ಎಂಬ ಪಾಠಕ್ಕೆ–ನಾನು ಭಕ್ತಿಯೋಗನಿಷ್ಠನಾಗಿ ಭಕ್ತಿಯಿಂದ ನಿನ್ನನ್ನು ಸದಾ ಚಿಂತಿಸಲು ತೊಡಗಿ, ಚಿಂತನೀಯವಾದ ಪರಿಪೂರ್ಣವಾದ ಐಶ್ವರ್ಯವೇ ಮುಂತಾದ ಕಲ್ಯಾಣ ಗುಣಗಳುಳ್ಳ (ನಿನ್ನನ್ನು ) ಹೇಗೆ ತಿಳಿಯಲಿ?–ಎಂದು ಭಾಷ್ಯಮಾಡಿದ್ದಾರೆ.

ಹಿಂದೆ ಹೇಳಿದ ಬುದ್ಧಿ-ಜ್ಞಾನಗಳೇ ಮುಂತಾದ ಭಾವಗಳನ್ನು ಬಿಟ್ಟು ನೀನು ಹೇಳದೇ ಇರುವ ಬೇರೆ ಯಾವ ಯಾವ ಭಾವಗಳಲ್ಲಿ ನನ್ನಿಂದ ನೀನು ಚಿಂತಿಸಲ್ಪಡಬೇಕು? (ರಾ. ಭಾ.)

**ಓಂ ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥**

ಜನಾರ್ದನ! ನಿನ್ನ ಯೋಗವನ್ನೂ ವಿಭೂತಿಯನ್ನೂ ಇನ್ನೂ ವಿಸ್ತರವಾಗಿ ಹೇಳು. ಏಕೆಂದರೆ : ಈ ಅಮೃತವನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲ.

* * *

(ಯೋಗವೆಂದರೆ ಯೋಗೈಶ್ವರ್ಯ. ಪರಮಾತ್ಮನ ಸಾಮರ್ಥ್ಯವಿಶೇಷ. ವಿಭೂತಿ ಎಂದರೆ ಧ್ಯಾನಕ್ಕೆ ಯೋಗ್ಯವಾಗಿರುವ ಮಹಿಮಾವಿಶೇಷ ಗಳಿರುವ ವಸ್ತುಸಮುದಾಯ. ಇವುಗಳನ್ನು ಇನ್ನೂ ವಿಸ್ತರವಾಗಿ ಪುನಃ ಹೇಳು ಎಂದು ಬೇಡುತ್ತಾನೆ, ಅರ್ಜುನ. ಹಿಂದೆ ಸಂಕ್ಷೇಪವಾಗಿ ಹೇಳಿದ್ದಾನೆ. ಅಷ್ಟು ಸಾಲದು. ಸವಿಸ್ತರವಾಗಿ ಕೇಳಬೇಕೆಂಬ ಆಸೆ ಅರ್ಜುನನಿಗೆ. ಇದಕ್ಕೆ ಕಾರಣವನ್ನು ನಿರೂಪಿಸುತ್ತಾ ಅರ್ಜುನನು ಹೇಳುತ್ತಾನೆ. ಅಮೃತಂ ಶೃಣ್ವತಃ ತೃಪ್ತಿರ್ನಾಸ್ತಿ = ಅಮೃತವನ್ನು ಕೇಳುತ್ತಿದ್ದರೆ ತೃಪ್ತಿಯೆಂಬುದೇ ಇಲ್ಲ. ಅಮೃತವೆಂಬುದು ಪ್ರಾಶನಯೋಗ್ಯವಾದುದೆಂದು ಕೇಳಿದ್ದೇವೆ. ಆದರೆ

ಶ್ರೀಕೃಷ್ಣನ ವಾಣಿಯನ್ನೇ ಅರ್ಜುನನು ಅಮೃತವೆಂದು ಹೇಳಿದ್ದಾನೆ. ಶ್ರೀಕೃಷ್ಣನ ಉಪದೇಶಾಮೃತವನ್ನು ಸವಿದವರಿಗೆ ಪುನರ್ಜನ್ಮವೇ ಇಲ್ಲ. ಅದನ್ನು ಸೇವಿಸಿದ ಪುಣ್ಯಪುರುಷನು ಅಮೃತನೇ ಆಗುವನು. ಅಂತಹ ದಿವ್ಯಾಮೃತವನ್ನು ಸವಿಯುತ್ತಿದ್ದಷ್ಟೂ ತೃಪ್ತಿಯಿಲ್ಲವೆಂದು ಅರ್ಜುನನು ಹೇಳಿರುವುದು ಸ್ವಾಭಾವಿಕವೇ ಆಗಿದೆ.)

o o o

**ವಿಭೂತಿಂ** = ಧ್ಯೇಯಪದಾರ್ಥಗಳ ವಿಸ್ತಾರವನ್ನು. **ಯೋಗಂ** ಯೋಗೈಶ್ವರ್ಯವನ್ನು ; ವಿಶೇಷಶಕ್ತಿಗಳನ್ನು. **ಜನಾರ್ದನ** ಎಂಬುದು ಗಮನಾರ್ಥಕವಾದ (ಗಮನವನ್ನು ಕರ್ಮವಾಗಿ ಹೊಂದಿರುವ) ಅರ್ದ-ಧಾತುವಿನಿಂದಾಗಿದೆ. ದೇವತೆಗಳಿಗೆ ಪ್ರತಿಪಕ್ಷರಾದ ಜನರನ್ನು (ಅಸುರರನ್ನು ) ನರಕವೇ ಮುಂತಾದ ಸ್ಥಾನಗಳಿಗೆ ಹೋಗುವಂತೆ ಮಾಡುವುದರಿಂದ ಇವನಿಗೆ ಜನಾರ್ದನ ಎಂದು ಹೆಸರು. ಅಥವಾ ಎಲ್ಲ ಜನರಿಂದಲೂ ಅಭ್ಯುದಯ (ಲೌಕಿಕವಾದ ಉನ್ನತಿ) ಮತ್ತು ನಿಃಶ್ರೇಯಸ್ಸು (ಆತ್ಮಕಲ್ಯಾಣ) ಈ ಎರಡು ಪುರುಷಾರ್ಥಗಳೆಂಬ ಪ್ರಯೋಜನವನ್ನು ಯಾಚಿಸಲ್ಪಡುವುದರಿಂದ ಇವನು ಜನಾರ್ದನ. (ಶಂ. ಭಾ.)

**ಅಹಂ ಸರ್ವಸ್ಯ ಪ್ರಭವಃ** ಎಂಬಲ್ಲಿ ನೀನು ನಿನ್ನ ಸೃಷ್ಟಿಕರ್ತೃತ್ವವೇ ಮುಂತಾದ ಯೋಗವನ್ನೂ ಮತ್ತು ವಿಭೂತಿಯನ್ನೂ (ನಿಯಮನವನ್ನೂ ) ಸಂಕ್ಷೇಪವಾಗಿ ಹೇಳಿರುವೆ. ಅದನ್ನು ಮತ್ತೆ ಸವಿಸ್ತರವಾಗಿ ಹೇಳು. ನಿನ್ನ ಮುಖಚಂದ್ರನಿಂದ ಬರುತ್ತಿರುವ ನಿನ್ನ ಮಾಹಾತ್ಮ್ಯವೆಂಬ ಅಮೃತವನ್ನು ಕೇಳುತ್ತಿದ್ದರೆ ನನಗೆ ತೃಪ್ತಿಯೇ ಉಂಟಾಗುವುದಿಲ್ಲ. ನನ್ನ ಅತೃಪ್ತಿಯು ನಿನಗೆ ತಿಳಿದೇ ಇದೆ. (ರಾ. ಭಾ.)

**ಜನಾರ್ದನ** = ಪ್ರತಿಕೂಲರಾದ ಜನರನ್ನು ನರಕಾದಿಗಳಿಗೆ ಒಯ್ಯುವುದರಿಂದ ಅಥವಾ ಅನುಕೂಲರಾದ ಜನರಿಂದ ಇಷ್ಟಾರ್ಥವನ್ನು ಯಾಚಿಸಲ್ಪಡುವುದರಿಂದ ಅವನು ಜನಾರ್ದನ. –ವೇದಾಂತದೇಶಿಕರು

ಜನಾರ್ದನ ಎಂದರೆ ಹುಟ್ಟದೇ ಇರುವವನು. ಅಥವಾ ಸಂಸಾರವನ್ನು ನಾಶಪಡಿಸುವವನು. ನ ಜಾಯತೇ ಅರ್ದಯತಿ ಚ ಸಂಸಾರಮಿತಿ ಜನಾರ್ದನಃ

**ಸ ಭೂತಃ ಸ ಜನಾರ್ದನಃ ।**
**ಸ ಹ್ಯಾಸೀತ್ಸ ನಾಸೀತ್ ಸೋರ್ದಯತ್** (ಇತಿ ಬಾಭ್ರವೀಶಾಖಾ)

(ಮ. ಭಾ.)

ಅರ್ಜುನನ ಭಕ್ತಿಪೂರ್ವಕವಾದ ಈ ಬೇಡಿಕೆಯನ್ನು ಕೇಳಿ ದಯಾಮಯನಾದ ಭಗವಂತನು ಉತ್ತರಿಸುತ್ತಾನೆ :

**ಶ್ರೀಭಗವಾನುವಾಚ :**

**ಓಂ ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥೧೯॥**

ಭಗವಂತನು ಹೇಳುತ್ತಾನೆ :

"ಕುರುಶ್ರೇಷ್ಠ! ದಿವ್ಯವಾದ ನನ್ನ ವಿಭೂತಿಗಳಲ್ಲಿ ಮುಖ್ಯವಾದುವು ಗಳನ್ನು ನಿನಗೆ ಹೇಳುತ್ತೇನೆ. ನನ್ನ ವಿಸ್ತಾರವಾದ ವಿಭೂತಿಗಳಿಗೆ ಕೊನೆ ಎಂಬುದೇ ಇಲ್ಲ.

* * *

(ದಿವ್ಯವಾದ ತೇಜೋವಿಶೇಷದಿಂದ ಕೂಡಿರುವ ನನ್ನ ಮಹಿಮಾ ವಿಶೇಷವುಳ್ಳ ವಸ್ತುಸಮುದಾಯವನ್ನು ಹೇಳುತ್ತೇನೆ. ಆದರೆ ಅದರಲ್ಲಿ ಮುಖ್ಯವಾದುದನ್ನು ಮಾತ್ರವೇ ಹೇಳುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ.

ನನ್ನ ವಿಸ್ತರಕ್ಕೆ ಅಂತವೇ ಇಲ್ಲ. ಎಲ್ಲೆಲ್ಲಿಯೂ ನಾನೇ ಇದ್ದೇನೆ. ನನ್ನ ಮಹಿಮಾವಿಶೇಷವೇ ಸರ್ವತ್ರ ವ್ಯಾಪಿಸಿದೆ. ಆದುದರಿಂದ ಎಲ್ಲವನ್ನೂ ಹೇಳಹೋಗುವುದಿಲ್ಲ. ಪ್ರಧಾನವಾಗಿರತಕ್ಕುವುಗಳನ್ನು ಮಾತ್ರವೇ ಹೇಳುತ್ತೇನೆ.

ವಿಷ್ಣುಪುರಾಣದಲ್ಲಿ ಪರಮಾತ್ಮನ ವಿಭೂತಿಗಳ ವಿಷಯವಾಗಿ ಹೀಗೆ ಹೇಳಿದ್ದಾರೆ :

**ಸರ್ವೇ ಚ ದೇವಾ ಮನವಃ ಸಮಸ್ತಾಃ**
**ಸಪ್ತರ್ಷಯೋ ಯೇ ಮನುಸೂನವಶ್ಚ ।**
**ಇನ್ದ್ರಶ್ಚ ಯೋಽಯಂ ತ್ರಿದಶೇಶಭೂತೋ**
**ವಿಷ್ಣೋರನೇಕಾಸ್ತು ವಿಭೂತಯಸ್ತಾಃ ॥** ೩-೧-೪೩

ಎಲ್ಲ ದೇವತೆಗಳು, ಎಲ್ಲ ಮನುಗಳು, ಸಪ್ತರ್ಷಿಗಳು, ಮನುಪುತ್ರರು, ದೇವತೆಗಳಿಗೆ ಅಧಿಪತಿಯಾದ ಇಂದ್ರ–ಇವರೆಲ್ಲರೂ ವಿಷ್ಣುವಿನ ವಿಭೂತಿಗಳು. ವಿಷ್ಣುವಿನ ಮಹಿಮಾವಿಶೇಷವುಳ್ಳವರು.)

O O O

**ಪ್ರಾಧಾನ್ಯತಃ.... ನಾಸ್ತ್ಯನ್ತೋ ವಿಸ್ತರಸ್ಯ ಮೇ**= ಸಂಪೂರ್ಣವಾಗಿ ನನ್ನ ವಿಭೂತಿಗಳನ್ನು ಹೇಳಲು ನೂರಾರು ವರ್ಷಗಳಾದರೂ ಸಾಧ್ಯವಾಗುವುದಿಲ್ಲ. ಏಕೆಂದರೆ : ನನ್ನ ಆ ವಿಭೂತಿಗಳಿಗೆ (ವಿಸ್ತಾರಗಳಿಗೆ) ಕೊನೆಯೇ ಇಲ್ಲ. (ಶಂ. ಭಾ.)

ವಿಭೂತಿತ್ವ ಎಂದರೆ ನಿಯಮ್ಯವಾಗಿರುವಿಕೆ. ಏಕೆಂದರೆ : ಎಲ್ಲ ಭೂತಗಳ ಬುದ್ಧಿ ಮುಂತಾದುವುಗಳೂ ಬಗೆ-ಬಗೆಯ ಭಾವಗಳೂ ನನ್ನಿಂದಲೇ ಉಂಟಾಗಿವೆ–ಎಂದು ಹೇಳಿ, ಏತಾಂ ವಿಭೂತಿಂ ಎಂದು ಭಗವಂತನು ಪ್ರತಿಪಾದಿಸಿದ್ದಾನೆ. ಇದಲ್ಲದೇ ಅಲ್ಲಿ ಯೋಗ ಎಂಬ ಶಬ್ದದಿಂದ ನಿರ್ದಿಷ್ಟವಾಗಿರುವ ಸ್ರಷ್ಟೃತ್ವ ಮುಂತಾದುವುಗಳು ವಿಭೂತಿಶಬ್ದದಿಂದ ನಿರ್ದೇಶಿಸಲ್ಪಟ್ಟಿವೆ. ಅದು ಭಗವಂತನಿಂದ ನಿಯಮಿಸಲ್ಪಡುವಿಕೆ ಎಂಬ ಅರ್ಥದಲ್ಲಿ ಹೇಳಲ್ಪಟ್ಟಿದೆ. ಮತ್ತೆ ಅಹಂ ಸರ್ವಸ್ಯ.... ಸಮನ್ವಿತಾಃ ಎಂದೂ ಹೇಳಿದೆ.

**ಪ್ರಾಧಾನ್ಯತಃ** =‘ಪ್ರಧಾನ’ ಎಂಬ ಶಬ್ದವು ಉತ್ಕರ್ಷವನ್ನು ಹೇಳುತ್ತದೆ. **ಪುರೋಧಸಾಂ ಚ ಮುಖ್ಯಂ ಮಾಂ** ಎಂದು ಮುಂದೆ ಹೇಳಿರುವುದರಿಂದ. (ರಾ. ಭಾ.)

**ಓಂ ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥೨೦॥**

ಗುಡಾಕೇಶನೇ! ಭೂತಗಳ ಆಶಯ (ಹೃದಯ) ದಲ್ಲಿರುವ ಆತ್ಮನು ನಾನು. ಎಲ್ಲ ಭೂತಗಳಿಗೆ ಆದಿಯೂ, ಮಧ್ಯವೂ, ಅಂತವೂ ನಾನೇ.

* * *

(ಗುಡಾಕೇಶ ಎಂದರೆ ನಿದ್ರೆಯನ್ನು ಜಯಿಸಿರತಕ್ಕವನು. ಗುಡಾಕ ಎಂದರೆ ನಿದ್ರೆ, ಈಶ ಎಂದರೆ ಸ್ವಾಮಿ. ನಿದ್ರೆಗೆ ಸ್ವಾಮಿ. ನಿದ್ರೆಯ ವಶದಲ್ಲಿ ಇವನಿಲ್ಲ. ನಿದ್ರೆಯು ಇವನ ವಶದಲ್ಲಿದೆ. ನಿದ್ರೆಯು ಅಜ್ಞಾನಸ್ವರೂಪ. ಶ್ರೀಕೃಷ್ಣನ ಉಪದೇಶದಿಂದಾಗಿ ಅಜ್ಞಾನವನ್ನು ಹೋಗಲಾಡಿಸಿಕೊಂಡವನು–

ಎಂದಾದರೂ ಅರ್ಥಮಾಡಬಹುದು. ದಟ್ಟವಾದ ತಲೆಗೂದಲುಳ್ಳವನೆಂದೂ ಅರ್ಥವಾಗುತ್ತದೆ. ಗುಡದಂತಹ ಕೇಶವಿರತಕ್ಕವನು.

ಸರ್ವಪ್ರಾಣಿಗಳ ಹೃದಯಗುಹೆಯಲ್ಲಿರುವ ಆತ್ಮನೂ ನಾನೇ ಆಗಿರುತ್ತೇನೆ–ಎನ್ನುತ್ತಾನೆ ಶ್ರೀಕೃಷ್ಣ. ಆಶಯ ಎಂದರೆ ಚಿತ್ತ-ಮನಸ್ಸು-ಹೃದಯ. ನಾನೇ ಆದಿ. ಸಕಲಚರಾಚರಪ್ರಾಣಿಗಳ ಹುಟ್ಟಿಗೆ ಕಾರಣನು. ಮಧ್ಯನೂ ನಾನೇ. ಎಂದರೆ : ಅವುಗಳ ಸಂರಕ್ಷಕನೂ ನಾನೇ. ಅವುಗಳ ಅಂತವೂ ನಾನೇ. ಅವುಗಳ ಸಂಹಾರಕನೂ ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಪ್ರಾಣಿಗಳ ಒಳಗೂ ಇದ್ದಾನೆ. ಅವುಗಳ ಹುಟ್ಟು, ಬೆಳವಣಿಗೆ ಮತ್ತು ಸಾವುಗಳಿಗೂ ಇವನೇ ಕಾರಣನು. ಸಮುದ್ರದ ಅಲೆಗಳು ಕ್ಷಣ-ಕ್ಷಣಕ್ಕೂ ಹುಟ್ಟುತ್ತಿರುತ್ತವೆ. ಕೆಳಕ್ಕೆ ಬೀಳುತ್ತಿರುತ್ತವೆ. ಹುಟ್ಟಿದ ಅಲೆಗಳಲ್ಲಿ ಸಮುದ್ರದ ಅಂಶವಿದೆ. ಅಲೆಗಳ ಹುಟ್ಟು ಮತ್ತು ವಿನಾಶಗಳಿಗೆ ಸಮುದ್ರನೇ ಕಾರಣನಾಗಿರುತ್ತಾನೆ. ರೈತನೊಬ್ಬನು ಬೀಜಬಿತ್ತುವನು. ಅದು ಹುಟ್ಟುತ್ತಲೇ ಅದಕ್ಕೆ ಬೇಕಾದ ಗೊಬ್ಬರ ಮುಂತಾದುವನ್ನು ಹಾಕಿ ಬೆಳೆಯನ್ನು ರಕ್ಷಿಸುವನು. ಅನಂತರ ಅದೇ ರೈತನು ಕುಡುಗೋಲಿನಿಂದ ತಾನು ಸಾಕಿ ಸಲಹಿದ ಬೆಳೆಯನ್ನು ಪಕ್ವವಾದಾಗ ಕತ್ತರಿಸಿಬಿಡುವನು. ಇದೇ ರೀತಿಯಲ್ಲಿ ಪರಮಾತ್ಮನ ಸೃಷ್ಟಿ-ಸ್ಥಿತಿ-ಲಯಕಾರ್ಯಗಳು ಅನವರತವಾಗಿ ನಡೆಯುತ್ತಿರುತ್ತವೆ.)

O O O

**ಗುಡಾಕೇಶ=ಗುಡಾಕಾ–ನಿದ್ರಾ ತಸ್ಯಾಃ ಈಶಃ** ನಿದ್ರೆಯನ್ನು ಜಯಿಸಿದವನು ಅಥವಾ ಘನವಾದ ಕೇಶವುಳ್ಳವನು. (ಶಂ. ಭಾ.)

**ಸರ್ವಭೂತಾಶಯಸ್ಥಿತಃ** =ನನಗೆ ಶರೀರದಂತೆ ಇರುವ ಎಲ್ಲ ಭೂತಗಳ ಹೃದಯಗಳಲ್ಲಿ ಆತ್ಮವಾಗಿ ನಾನು ನೆಲೆಸಿದ್ದೇನೆ. ಆತ್ಮವು ಶರೀರಕ್ಕೆ ಎಲ್ಲ ರೀತಿಗಳಲ್ಲೂ ಆಧಾರ. ನಿಯಂತೃ ಮತ್ತು ಶೇಷಿ ಆಗಿರುತ್ತದೆ.

**ಸರ್ವಸ್ಯ ಚಾಹಂ.... ಅಪೋಹನಂ ಚ** ೧೫-೧೫

**ಈಶ್ವರಃ.......ಮಾಯಯಾ** ೧೮-೬೧

**ಯಃ ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯಃ ಅನ್ತರೋ ಯಃ ಸರ್ವಾಣಿ ಭೂತಾನಿ ನ ವಿದುರ್ಯಸ್ಯ ಸರ್ವಾಣಿ ಭೂತಾನಿ ಶರೀರಂ ಯಃ ಸರ್ವಾಣಿ ಭೂತಾ**

ನ್ಯನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ಬೃ.೩-೭-೧೫ **ಯಸ್ಯಾತ್ಮಾ ಶರೀರಂ । ಯ ಆತ್ಮಾನಮನ್ತರೋ ಯಮಯತಿ । ಸ ತ ಆತ್ಮಾ ಅನ್ತರ್ಯಾಮ್ಯಮೃತಃ** (ಶತ ೧೫-೫-೩೦) ಎಲ್ಲ ಭೂತಗಳ ಆತ್ಮವಾಗಿರುವ ನಾನು ಅದರ ಆದಿ-ಮಧ್ಯಾಂತವಾಗಿದ್ದೇನೆ. ಉತ್ಪತ್ತಿ-ಸ್ಥಿತಿ-ಪ್ರಲಯಗಳಿಗೆ ಕಾರಣನಾಗಿದ್ದೇನೆ. (ರಾ. ಭಾ.)

**ಓಂ ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥೨೧॥**

ನಾನು ಆದಿತ್ಯರಲ್ಲಿ ವಿಷ್ಣು. ಜ್ಯೋತಿಗಳಲ್ಲಿ ಅಂಶುಮಂತನಾದ ರವಿ. ಮರುತ್ತುಗಳಲ್ಲಿ ಮರೀಚಿ. ನಕ್ಷತ್ರಗಳಲ್ಲಿ ನಾನು ಚಂದ್ರನು.

* * *

(ಆದಿತ್ಯರಲ್ಲಿ ನಾನು ವಿಷ್ಣು ಎನ್ನುತ್ತಾನೆ ಶ್ರೀಕೃಷ್ಣ.

**ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಸ್ತ್ವಂಶ ಏವ ಚ ।**
**ಭಗೋ ವಿವಸ್ವಾನ್ಪೂಷಾ ಚ ಸವಿತಾ ದಶಮಸ್ತಥಾ ॥**

**ಏಕಾದಶಸ್ತಥಾ ತ್ವಷ್ಟಾ ದ್ವಾದಶೋ ವಿಷ್ಣುರುಚ್ಯತೇ ।**
**ಜಘನ್ಯಜಸ್ತು ಸರ್ವೇಷಾಮಾದಿತ್ಯಾನಾಂ ಗುಣಾಧಿಕಃ ॥**

ಧಾತಾ, ಮಿತ್ರ, ಅರ್ಯಮಾ, ಶಕ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷಾ, ಸವಿತ, ತ್ವಷ್ಟಾ ಮತ್ತು ವಿಷ್ಣು—ಇವರೇ ಅದಿತಿಯ ಮಕ್ಕಳಾದ ದ್ವಾದಶಾದಿತ್ಯರು. ಇವರಲ್ಲಿ ಕಡೆಯವನಾದ ವಿಷ್ಣುವು ಗುಣಗಳಲ್ಲಿ ಅಧಿಕನು. ವಿಷ್ಣುವೇ ನಾನು ಎಂದು ಹೇಳಿರುತ್ತಾನೆ. ಭಗವಂತ.

ಜ್ಯೋತಿಷಾಂ ಎಂದರೆ ಕಿರಣಗಳುಳ್ಳವುಗಳಲ್ಲಿ ನಾನು ರವಿಯ ರೂಪದಲ್ಲಿದ್ದೇನೆ. ಕಿರಣಗಳುಳ್ಳವುಗಳೆಂದರೆ ರವಿ, ಸೋಮ, ನಕ್ಷತ್ರಗಳು, ಅಗ್ನಿ, ಮಿಂಚು—ಇವುಗಳೇ ಮೊದಲಾದುವು. ಇವುಗಳಲ್ಲಿ ಭಗವಂತನು ರವಿಯ ರೂಪದಲ್ಲಿರುತ್ತಾನೆ. ಆದುದರಿಂದಲೇ ಸೂರ್ಯನನ್ನು ಸೂರ್ಯನಾರಾಯಣ ಎಂದು ಕರೆಯುವ ವಾಡಿಕೆಯಿದೆ.

ಮರೀಚಿರ್ಮರುತಾಮಸ್ಮಿ = ಮರುತ್ತುಗಳಲ್ಲಿ ನಾನು ಮರೀಚಿಯಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ.

ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿಯೂ ಮತ್ತು ಇನ್ನೂ ಅನೇಕ ಪುರಾಣಗಳಲ್ಲಿಯೂ ಮರುತ್ತುಗಳ ವಿಷಯವು ಬರುತ್ತದೆ. ಪುರಾಣಾಂತರಗಳಲ್ಲಿ ಮರುತ್ತುಗಳ ಏಳು ಹೆಸರುಗಳು ಸಿಕ್ಕುತ್ತವೆ.

**ಗಗನಃ ಸ್ಪರ್ಶನೋ ವಾಯುರನಿಲಶ್ಚ ತಥಾಪರಃ ।**
**ಪ್ರಾಣಃ ಪ್ರಾಣೇಶ್ವರೋ ಜೀವ ಇತ್ಯೇತೇ ಸಪ್ತಮಾರುತಾಃ ॥**

ಗಗನ, ಸ್ಪರ್ಶನ, ವಾಯು, ಅನಿಲ, ಪ್ರಾಣ, ಪ್ರಾಣೇಶ್ವರ, ಜೀವ–ಇವು ಸಪ್ತಮರುತ್ತುಗಳು. ವಿಷ್ಣುಪುರಾಣದಲ್ಲಿ ಸಪ್ತಮರುತ್ತುಗಳನ್ನು ಬೇರೆ ಹೆಸರುಗಳಿಂದ ಕರೆದಿರುತ್ತಾರೆ.

ಆವಹ, ಪ್ರವಹ, ಸಂವಹ, ಉದ್ವಹ, ವಿವಹ, ಪರಿವಹ, ಪರಾವಹ.

ಇಂದ್ರನು ಅದಿತಿಯ ಹೊಟ್ಟೆಯಲ್ಲಿದ್ದ ಗರ್ಭಪಿಂಡವನ್ನು ಮೊದಲು ಏಳು ವಿಭಾಗಗಳಾಗಿ ಕತ್ತರಿಸಿ ಅವುಗಳು ರೋದನಮಾಡಲು 'ಮಾ ರುದಃ' ಎಂದು ಹೇಳುತ್ತಾ ಪುನಃ ಒಂದೊಂದನ್ನೂ ಸಹ ಏಳು ಭಾಗಗಳಾಗಿ ಕತ್ತರಿಸಿದನೆಂದೂ ಪುರಾಣಾಂತರದ ಕಥೆಗಳಲ್ಲಿ ಬರುತ್ತದೆ. ೪೯ ಮರುತ್ತುಗಳ ಹೆಸರುಗಳು ಹೀಗಿವೆ :

ಸತ್ವಜ್ಯೋತಿ, ಆದಿತ್ಯ, ಸತ್ಯಜ್ಯೋತಿ, ತಿರ್ಯಗ್‌ಜ್ಯೋತಿ, ಸಜ್ಯೋತಿ, ಜ್ಯೋತಿಷ್ಮಾನ್, ಹರಿತ, ಋತಜಿತ್, ಸತ್ಯಜಿತ್, ಸುಷೇಣ, ಸೇನಜಿತ್, ಸತ್ಯಮಿತ್ರ, ಅಭಿಮಿತ್ರ, ಹರಿಮಿತ್ರ, ಕೃತ, ಸತ್ಯ, ಧ್ರುವ, ಧರ್ತಾ, ವಿಧರ್ತಾ, ವಿಧಾರಯ, ಧ್ವಾಂತ, ಧುನಿ, ಉಗ್ರ, ಭೀಮ, ಅಭಿಯು, ಸಾಕ್ಷಿಪ, ಈದೃಕ್, ಅನ್ಯಾದೃಕ್, ಯಾದೃಕ್, ಪ್ರತಿಕೃತ್, ಋಕ್, ಸಮಿತಿ, ಸಂರಂಭ, ಈದೃಕ್ಷ, ಪುರುಷ, ಅನ್ಯಾದೃಕ್ಷ, ಚೇತಸ, ಸಮಿತಾ, ಸಮಿದೃಕ್ಷ, ಪ್ರತಿದೃಕ್ಷ, ಮರುತಿ, ಸರತ, ದೇವ, ದಿಶ, ಯಜುಸ್, ಅನುದೃಕ್, ಸಾಮ, ಮಾನುಷ ಮತ್ತು ವಿಶ್. – ವಾಯುಪುರಾಣ ಅಧ್ಯಾಯ ೬೭-ಶ್ಲೋಕ ೧೨೩-೧೩೦

ಆದರೆ ಈ ೪೯ ಹೆಸರುಗಳಲ್ಲಾಗಲೀ, ಹಿಂದೆ ಹೇಳಿದ ಏಳು ಹೆಸರುಗಳಲ್ಲಾಗಲೀ ಮರೀಚಿ ಎಂಬ ಹೆಸರಿಲ್ಲ. ಆದುದರಿಂದ ಕೆಲವು ವ್ಯಾಖ್ಯಾನಕಾರರು ಮರುತ್ತುಗಳಲ್ಲಿ ಮರೀಚಿ ಎಂದರೆ ಕಾಂತಿಯು ಅಥವಾ ಪ್ರಕಾಶವು–

ಎಂದು ಅರ್ಥಮಾಡಿರುತ್ತಾರೆ. ಮತ್ತೊಬ್ಬರು ವ್ಯಾಖ್ಯಾನಕಾರರು ಋಗ್ವೇದ ದಲ್ಲಿ ಸಪ್ತಮರುತ್ತುಗಳ ವಿಷಯವು ಬರುವುದೆಂದೂ, ಮರುತ್ತುಗಳು ರುದ್ರನ ಮಕ್ಕಳೆಂದೂ ಅವರಲ್ಲಿ ಮರೀಚಿಯು ಪ್ರಧಾನನೆಂದೂ ಹೇಳಿರುತ್ತಾರೆ. ಆದರೆ ಪುರಾಣಗಳಲ್ಲಿ ಮರೀಚಿ ಎಂಬ ಹೆಸರಿಲ್ಲದಿದ್ದರೂ ಮರುದ್ವರ್ಗದಲ್ಲಿ ಭಗವದ್ಗೀತೆಗೆ ಸಮ್ಮತವಾಗಿರುವ ಮರೀಚಿ ಎಂಬ ಹೆಸರಿನ ಮುಖ್ಯವಾದ ಮರುದ್ದೇವತೆ ಇದ್ದೇ ಇರಬೇಕು. ಏಕೆಂದರೆ : ಆದಿತ್ಯರ ಗುಂಪಿನಲ್ಲಿ ವಿಷ್ಣು ಎಂಬ ಸಂಜ್ಞೆಯ ದೇವನನ್ನು ಹೇಳಿ ಅದೇ ಪ್ರಸಂಗದಲ್ಲೇ ಮರುದ್ದೇವತೆಗಳ ವಿಷಯವನ್ನೂ ಹೇಳಿದೆ.

**ನಕ್ಷತ್ರಾಣಾಮಹಂ ಶಶೀ**=ನಕ್ಷತ್ರಗಳಲ್ಲಿ ನಾನು ಚಂದ್ರನಾಗಿದ್ದೇನೆ ಎನ್ನುತ್ತಾನೆ. ನಕ್ಷತ್ರಗಳೆಂದರೆ ಅಶ್ವಿನ್ಯಾದಿ ಇಪ್ಪತ್ತೇಳು ನಕ್ಷತ್ರಗಳು. ಇತರ ನಕ್ಷತ್ರಕೋಟಿಯೂ ಆಗಬಹುದು. ಚಂದ್ರನನ್ನು ನವಗ್ರಹಗಳಲ್ಲಿ ಸೇರಿಸಿದೆ. ಗ್ರಹ-ನಕ್ಷತ್ರಗಳೆರಡೂ ಜ್ಯೋತಿಗಳಾದುದರಿಂದ ಇವೆರಡನ್ನೂ ಕೆಲವು ಕಡೆ ಪರ್ಯಾಯವಾಗಿ ಬಳಸಿರುವುದೂ ಉಂಟು. ಗಮನಧರ್ಮವನ್ನು ಹೊಂದಿರುವುದರಿಂದ ಗ್ರಹಗಳು ನಕ್ಷತ್ರಗಳಾಗುತ್ತವೆ.

**ನಕ್ಷನ್ತಿ=ಗಚ್ಛನ್ತಿ ಇತಿ ನಕ್ಷತ್ರಂ। ಯೋ ವಾ ಇಹ ಯಜತೇ। ಅಮುಗ್ಂ ಸ ಲೋಕನ್ನಕ್ಷತೇ। ತನ್ನಕ್ಷತ್ರಾಣಾಂ ನಕ್ಷತ್ರತ್ವಂ।**

ಆದುದರಿಂದ ನಕ್ಷತ್ರಗಳ ಅಧಿಪತಿಯಾದ ಚಂದ್ರನೇ ನಾನಾಗಿದ್ದೇನೆ, ಎನ್ನುತ್ತಾನೆ ಭಗವಂತ.)

o o o

ಭಗವಂತನ ವಿಭೂತಿಗಳಾದ ಎಲ್ಲದರಲ್ಲಿಯೂ ಭಗವಂತನು ಆತ್ಮ ನಾಗಿರುವುದರಿಂದ ವಿಭೂತಿವಾಚಕವಾದ ಶಬ್ದಗಳನ್ನು ಭಗವಂತನ ಪರ ವಾಗಿಯೇ ಹೇಳಬೇಕು. ಎಲ್ಲಕ್ಕೂ ಭಗವಂತನು ಆತ್ಮನಾಗಿರುವುದರಿಂದ ಎಲ್ಲ ಶಬ್ದಗಳೂ ಅವನಲ್ಲಿಯೇ ಪರ್ಯವಸಾನಹೊಂದುತ್ತವೆ. (ಶಂ. ಭಾ.)

**ನಕ್ಷತ್ರಾಣಾಮಹಂ ಶಶೀ** = ನಕ್ಷತ್ರಗಳ ಪತಿಯಾದ ಯಾವ ಚಂದ್ರ ನುಂಟೋ ಅವನು ನಾನೇ. (ರಾ. ಭಾ.)

ವಿಷ್ಣುಃ = ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ, ಪ್ರವೇಶಿಸಿರುವುದರಿಂದ ಭಗವಂತನು ವಿಷ್ಣು. ವಿಷಲ್ಯ-ವ್ಯಾಪ್ತೌ, ವಿಶ-ಪ್ರವೇಶನೇ ಎಂಬ ಧಾತುಗಳಿಂದ ಈ ನಿಷ್ಪತ್ತಿಯಾಗುತ್ತದೆ.

**ಗತಿಶ್ಚ ಸರ್ವಭೂತಾನಾಂ ಪ್ರಜನಶ್ಚಾಪಿ ಭಾರತ ।**
**ವ್ಯಾಪ್ತಾ ಮೇ ರೋದಸೀ ಪಾರ್ಥ ಕಾನ್ತಿಶ್ಚಾಭ್ಯಧಿಕಾ ಮಮ ॥**

**ಅಧಿಭೂತಾನಿ ಚಾನ್ತೇಷು ತದಿಚ್ಛಂಶ್ಚಾಸ್ಮಿ ಭಾರತ ।**
**ಕರ್ಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ ॥**

ಮಹಾಭಾರತ–ಮೋಕ್ಷಧರ್ಮ–೧೨-೩೪೧-೪೨-೪೩

ಎಲ್ಲ ಭೂತಗಳಿಗೂ ಮತ್ತು ಪ್ರಜೆಗಳಿಗೂ ಗತಿಯಾಗಿರುವಿಕೆ, ಉತ್ಪತ್ತಿಗೆ ಸ್ಥಾನವಾಗಿರುವಿಕೆ, ದ್ಯಾವಾಪೃಥಿವಿಗಳನ್ನು ವ್ಯಾಪಿಸಿರುವಿಕೆ, ಅತ್ಯಧಿಕವಾದ ಕಾಂತಿಯನ್ನು ಹೊಂದಿರುವಿಕೆ, ಸಕಲಪ್ರಾಣಿಗಳೂ ಅಂತ್ಯಕಾಲದಲ್ಲಿ ಯಾವ ಬ್ರಹ್ಮನನ್ನು ಸೇರಲಿಚ್ಛಿಸುತ್ತವೆಯೋ ಅದೇ ನಾನಾಗಿರುವಿಕೆ ಮತ್ತು ಎಲ್ಲವನ್ನೂ ಆಕ್ರಮಿಸಿರುವಿಕೆ–ಇವುಗಳಿಂದ ನಾನು ವಿಷ್ಣು ಎಂಬ ಸಂಜ್ಞೆಯನ್ನು ಹೊಂದಿರುವೆನು. (ಮ. ಭಾ.)

**ಓಂ ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥**

ವೇದಗಳಲ್ಲಿ ಸಾಮವೇದವಾಗಿರುವೆನು. ದೇವತೆಗಳಲ್ಲಿ ಇಂದ್ರನಾಗಿರುವೆನು. ಇಂದ್ರಿಯಗಳಲ್ಲಿ ಮನಸ್ಸಾಗಿರುವೆನು ಮತ್ತು ಪ್ರಾಣಿಗಳಲ್ಲಿ ಚೇತನವಾಗಿರುವೆನು.

* * *

(**ವೇದಾನಾಂ ಸಾಮವೇದೋಽಸ್ಮಿ** = ವೇದಗಳಲ್ಲಿ ನಾನು ಸಾಮವೇದವಾಗಿದ್ದೇನೆ. ಅನುಶಾಸನಪರ್ವದಲ್ಲಿಯೂ ಹೀಗೆಯೇ ಹೇಳಿದ್ದಾರೆ :

**ಸಾಮವೇದಶ್ಚ ವೇದಾನಾಂ ಯಜುಷಾಂ ಶತರುದ್ರಿಯಮ್ ॥**

೧೩-೩೧೭

ಇದಲ್ಲದೇ ಉಳಿದ ವೇದಗಳಲ್ಲಿರುವುದಕ್ಕಿಂತಲೂ ಹೆಚ್ಚು ಸಂಖ್ಯೆಯ ಶಾಖೆಗಳುಳ್ಳದ್ದು ಸಾಮವೇದ. **ಸಹಸ್ರವರ್ತ್ಮಾ ಸಾಮವೇದಃ ಸಾಮ ಜ್ಯಾಯಾನ್ ವಾ ಅತೋ ಮಮ ಮಹಿಮಾ** ಎಂದು ಐತರೇಯಬ್ರಾಹ್ಮ

ಣವೂ, ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ ಎಂದು ತೈತ್ತಿರೀಯ ಬ್ರಾಹ್ಮಣವೂ ಹೇಳುತ್ತದೆ. ಆದುದರಿಂದಲೇ ಸಾಮವೇದದ ಶ್ರೇಷ್ಠತ್ವ. ಈಗ ಹೇಳುತ್ತಿರುವುದು ಭಕ್ತಿಯೋಗ. ಭಕ್ತಿಯೋಗವು ಸಂಗೀತಪ್ರಧಾನವಾದುದು. ರಸಪ್ರಧಾನವಾದ ಸಂಗೀತವು ಹುಟ್ಟಿದ್ದು ಸಾಮವೇದದಿಂದ ಅಥವಾ ಸಾಮವೇದದ ಉಪವೇದವಾದ ಗಾಂಧರ್ವವೇದದಿಂದ. ನಾಟ್ಯಶಾಸ್ತ್ರ ದಲ್ಲಿಯೂ ಸಹ–ಸಾಮವೇದದಿಂದ ಸಂಗೀತಶಾಸ್ತ್ರವು ಹುಟ್ಟಿತೆಂದೂ, ಯಜುರ್ವೇದದಿಂದ ತಾಳಶಾಸ್ತ್ರವು ಹುಟ್ಟಿತೆಂದೂ–ಹೇಳಿದೆ. ಆದುದರಿಂದ ಸಂಗೀತಕ್ಕೆ ಮೂಲವಾಗಿ ರಸಪ್ರಧಾನವಾಗಿರುವುದರಿಂದ ಸಾಮವೇದದಲ್ಲಿ ಭಗವಂತನಿದ್ದಾನೆ.

ಆದರೆ ತನ್ನ ವಿಭೂತಿಯೋಗವನ್ನೇ ಹೇಳುವಾಗ ಗೀತೆಯ ಏಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಪ್ರಣವಃ ಸರ್ವವೇದೇಷು–ಸರ್ವವೇದ ಗಳಲ್ಲಿಯೂ ಓಂಕಾರನು ನಾನೇ ಆಗಿದ್ದೇನೆ–ಎಂದು ಹೇಳಿದ್ದಾನೆ. ಓಂಕಾರ ಮತ್ತು ಸಾಮವೇದ ಎರಡೂ ಒಂದೇ ಆಗುತ್ತದೆಯೇ?

ಓಂಕಾರವನ್ನು ಛಾಂದೋಗ್ಯದಲ್ಲಿ ಉದ್ಗೀಥ ಎಂದು ಕರೆದು ಇದೊಂದು ಸಾಮವೆಂದೇ ಹೇಳಿದೆ. ಸಾಮವೇದದ ಐದು ಭಕ್ತಿಗಳಲ್ಲಿ ಎರಡನೆಯ ಭಕ್ತಿಯು ಉದ್ಗೀಥವೆನಿಸುತ್ತದೆ.

**ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ಓಮಿತಿ ಹ್ಯುದ್ಗಾಯತಿ**
**ತಸ್ಯೋಪವ್ಯಾಖ್ಯಾನಮ್ ॥** ೧-೧-೧

ಉದ್ಗೀಥಶಬ್ದವಾಚಕವಾದ ಓಂ ಎಂಬ ಅಕ್ಷರವನ್ನು ಉಪಾಸಿಸಬೇಕು. ಏಕೆಂದರೆ ಉದ್ಗಾತೃವು ಓಂಕಾರದಿಂದ ಪ್ರಾರಂಭಿಸಿಯೇ ಹಾಡುತ್ತಾನೆ.

**ಪುರುಷಸ್ಯ ವಾಗ್ರಸೋ ವಾಚ ಋಗ್ರಸ ಋಚಃ ಸಾಮ ರಸಃ ಸಾಮ್ನ**
**ಉದ್ಗೀಥೋ ರಸಃ** ೧-೧-೨

ವಾಗಿಂದ್ರಿಯವು ಪುರುಷನ ಅವಯವಗಳ ರಸವು. ಏಕೆಂದರೆ ಪುರುಷನ ಅವಯವಗಳಲ್ಲಿ ವಾಕ್ಕು ಸಾರಭೂತವೂ ಆಗಿದೆ. ಋಕ್ಕು ವಾಗಿಂದ್ರಿಯದ ರಸವು. ಏಕೆಂದರೆ ವಾಗಿಂದ್ರಿಯದಿಂದಲೇ ಇದು ಉಚ್ಚರಿಸಲ್ಪಡುವುದು. ಸಾಮವು ಋಕ್ಕಿನ ರಸವು. ಏಕೆಂದರೆ ಇದು ಉದ್ಗಾತೃವಿಗೂ ಶ್ರೋತೃವಿಗೂ

ಆನಂದವನ್ನು ಕೊಡುವುದು. ಉದ್ಗೀಥವು ಸಾಮದ ರಸವು. ಏಕೆಂದರೆ ಉದ್ಗೀಥವೆಂಬ ಓಂಕಾರದಲ್ಲಿ ಸಮಸ್ತಶಬ್ದಗಳೂ ಅಂತರ್ಗತವಾಗಿವೆ. ಅದರಿಂದಾಗಿ ಓಂಕಾರವೆಂದರೇ ಸಾಮವೆಂದಂತಾಯಿತು. ಆದುದರಿಂದ ಭಗವಂತನು **ಸಾಮವೇದೋಽಸ್ಮಿ** ಎಂದು ಹೇಳಿದ್ದಾನೆ.

ದೇವಾನಾಮಸ್ಮಿ ವಾಸವಃ = ಸೂರ್ಯನೇ ಮೊದಲಾದ ದೇವತೆಗಳೆಲ್ಲರಿಗೂ ರಾಜನು ಇಂದ್ರ. ಅವನೇ ದೇವತೆಗಳ ಶಾಸಕ. ಆದುದರಿಂದ ಭಗವಂತನು ಇಂದ್ರನ ರೂಪದಲ್ಲಿ ತಾನಿದ್ದೇನೆಂದು ಹೇಳಿದ್ದಾನೆ.

ಇನ್ದ್ರಿಯಾಣಾಂ ಮನಶ್ಚಾಸ್ಮಿ= ಇಂದ್ರಿಯಗಳು ಹತ್ತು. ಐದು ಜ್ಞಾನೇಂದ್ರಿಯಗಳು ; ಐದು ಕರ್ಮೇಂದ್ರಿಯಗಳು. ಇವುಗಳು ಕಾರ್ಯದಲ್ಲಿ ಪ್ರವೃತ್ತವಾಗಬೇಕಾದರೆ ಇವುಗಳ ಹಿಂದೆ ಮನಸ್ಸು ಇರಲೇಬೇಕು. ಮನಸ್ಸಿಲ್ಲದಿದ್ದರೆ ಇವುಗಳು ಯಾವ ಕಾರ್ಯವನ್ನೂ ಮಾಡುವುದಿಲ್ಲ. ಕಣ್ಣು ನೋಡಲಾರದು. ಕಿವಿಯು ಕೇಳಿಸಿಕೊಳ್ಳಲಾರದು. ಆದುದರಿಂದ ಈ ಹತ್ತು ಇಂದ್ರಿಯಗಳಿಗೂ ಮನಸ್ಸೇ ರಾಜ. ಆದುದರಿಂದ ಭಗವಂತನು ಇಂದ್ರಿಯಗಳಲ್ಲಿ ಮನಸ್ಸೇ ನಾನು ಎಂದು ಹೇಳಿರುತ್ತಾನೆ.

**ಭೂತಾನಾಮಸ್ಮಿ ಚೇತನಾ**= ಯಾವುದರ ಮೂಲಕವಾಗಿ ಪ್ರಾಣಿಗಳಿಗೆ ಸುಖ-ದುಃಖಗಳ ಅನುಭವವಾಗುವುದೋ ಅಂತಹ ಜ್ಞಾನಶಕ್ತಿಗೆ ಚೇತನಾ ಎಂದು ಹೆಸರು. ಅರ್ಥಾತ್ ಬುದ್ಧಿ, ಜ್ಞಾನ ಅಥವಾ ಪ್ರಜ್ಞೆ, ಅನುಭವಗಳಿಗೆ ಹೇತುಭೂತವಾದ ಪ್ರಧಾನಶಕ್ತಿ. ಇದೂ ಸಹ ಭಗವಂತನ ವಿಭೂತಿಯೇ ಆಗಿರುತ್ತದೆ.)

O O O

**ದೇವಾನಾಂ** = ರುದ್ರರು, ಆದಿತ್ಯರು ಮುಂತಾದ ದೇವತೆಗಳಿಗೆ.

**ಮನಃ** = ಸಂಕಲ್ಪ-ವಿಕಲ್ಪಾತ್ಮಕವಾದುದು. **ಚೇತನಾ**=ಕಾರ್ಯ-ಕಾರಣ ಸಂಘಾತದಲ್ಲಿ ಸದಾ ಅಭಿವ್ಯಕ್ತವಾಗಿರುವ ಬುದ್ಧಿವೃತ್ತಿ. (ಶಂ. ಭಾ.)

ಇನ್ದ್ರಿಯಾಣಾಂ **ಮನಶ್ಚಾಸ್ಮಿ** = ಹನ್ನೊಂದು ಇಂದ್ರಿಯಗಳಲ್ಲಿ ಉತ್ಕೃಷ್ಟವಾದ ಮನಸ್ಸೆಂಬ ಇಂದ್ರಿಯವು ನಾನೇ. ಇನ್ದ್ರಿಯಾಣಿ

**ದಶೈಕಂ ಚ ಏಕಾದಶಂ ಮನಶ್ಚಾತ್ರ**–ಇತ್ಯಾದಿಗಳು ಮನಸ್ಸೂ ಒಂದು ಇಂದ್ರಿಯವೇ ಆಗಿದೆ ಎಂದು ಹೇಳುತ್ತವೆ. (ರಾ. ಭಾ.)

**ವೇದಾನಾಂ...ಅಸ್ಮಿ** = ಗೀತಪ್ರಧಾನವಾಗಿರುವಿಕೆ, ಸಾವಿರ ಶಾಖೆಗಳನ್ನು ಹೊಂದಿರುವಿಕೆ–ಮುಂತಾದ ಕಾರಣಗಳಿಂದ ಸಾಮವೇದಕ್ಕೆ ಪ್ರಾಧಾನ್ಯ. ಇಷ್ಟೇ ಹೊರತು ವೇದಗಳ ಪ್ರಾಮಾಣ್ಯದಲ್ಲಿ ತಾರತಮ್ಯವಿಲ್ಲ.

–ವೇದಾಂತದೇಶಿಕರು.

**ದೇವಾನಾಮಸ್ಮಿ ವಾಸವಃ** = ಇಲ್ಲಿ ದೇವತೆಗಳು ಎಂದರೆ ಸ್ವರ್ಗ ವಾಸಿಗಳು. ಬ್ರಹ್ಮಾದಿಗಳು ಸೇರುವುದಿಲ್ಲ. (ಮ. ಭಾ.)

**ಓಂ ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥೨೩॥**

ರುದ್ರರಲ್ಲಿ ಶಂಕರನಾಗಿರುವೆನು. ಯಕ್ಷ-ರಾಕ್ಷಸರಲ್ಲಿ ಕುಬೇರನಾಗಿರುವೆನು. ವಸುಗಳಲ್ಲಿ ಪಾವಕನಾಗಿರುವೆನು. ಪರ್ವತಗಳಲ್ಲಿ ಮೇರುವಾಗಿರುವೆನು.

* * *

(**ರುದ್ರಾಣಾಂ ಶಂಕರಶ್ಚಾಸ್ಮಿ** = ಏಕಾದಶರುದ್ರರು :– ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕೀ, ಅಪರಾಜಿತ, ಋತ, ಪಿತೃರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಹವನ, ಈಶ್ವರ. –ಅನುಶಾಸನ ೧೫೦-೧೩

ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದೀ, ರೈವತ, ಮೃಗವ್ಯಾಧ, ಶರ್ವ, ಕಪಾಲೀ.

–ಹರಿವಂಶ ಮತ್ತು ಬ್ರಹ್ಮಪುರಾಣ.

ಅಜೈಕಪಾತ್, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸಾವಿತ್ರ, ಜಯಂತ, ಪಿನಾಕೀ, ಅಪರಾಜಿತ.

–ಪದ್ಮಪುರಾಣ.

ಇವುಗಳಲ್ಲಿ ಶಂಕರನೆಂಬ ಹೆಸರಿಲ್ಲ.

**ಶಂ ಕರೋತೀತಿ = ಶಂಕರಃ** ಮಂಗಳವನ್ನುಂಟುಮಾಡುವವನು. ಶಂ ಭವತೀತಿ = ಶಂಭುಃ ಮಂಗಳವು ಇವನಿಂದ ಉಂಟಾಗುತ್ತದೆ. ಆದುದರಿಂದ ಶಂಭುವೇ ಶಂಕರ–ಎಂಬುದು ಕೆಲವರ ಅಭಿಮತವಾಗಿದೆ.

ರುದ್ರರು ತಾಮಸರು. ಅವರ ಮಧ್ಯೆ ಎಲ್ಲರಿಗೂ ಭಕ್ತಿ-ಜ್ಞಾನಗಳನ್ನು ಉಪದೇಶಮಾಡಿರುವುದರಿಂದ ಶಂ=ಸುಖಕರನಾದ ಶಂಕರನು ನಾನು (ಕೃಷ್ಣ) ಎಂದು ಪುರುಷೋತ್ತಮರ ವ್ಯಾಖ್ಯಾನ.

ಶಂಕರನೆಂಬುವನು ಏಕಾದಶರುದ್ರರ ಅಧಿಪತಿ. **ರುದ್ರಾಣಾಂ** ಎಂಬಲ್ಲಿ ಸಂಬಂಧಸಾಮಾನ್ಯಷಷ್ಠೀ ಎಂದು ಕೆಲವರು ವಿವರಣೆ ಕೊಟ್ಟಿರುತ್ತಾರೆ.

ಆದರೆ ಶಂಕರನನ್ನು ಒಳಗೊಂಡಿರುವ ಏಕಾದಶರುದ್ರರ ಬೇರೊಂದು ವರ್ಗವು ಗೀತಾಚಾರ್ಯನಿಗೆ ಸಮ್ಮತವಾಗಿದೆ ಎಂದು ಭಾವಿಸಬಹುದಾಗಿದೆ.

**ವಿತ್ತೇಶೋ ಯಕ್ಷರಕ್ಷಸಾಂ** = ಯಕ್ಷ-ರಾಕ್ಷಸರಲ್ಲಿ ನಾನು ವಿತ್ತೇಶನಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಮಣಿಮಂತಾದಿಗಳು ಯಕ್ಷರು. ಹೇತಿ ಮುಂತಾದವರು ರಾಕ್ಷಸರು. ವಿತ್ತೇಶ ಎಂದರೆ ಕುಬೇರ. ಅವನು ಪುಲಸ್ತ್ಯ ಋಷಿಯ ಪೌತ್ರ. ವಿಶ್ರವಸನ ಔರಸಪುತ್ರ. ಭರದ್ವಾಜನ ಮಗಳಾದ ದೇವವರ್ಣಿನೀ ಎಂಬುವಳೇ ಇವನ ತಾಯಿ. ಕುಬೇರನು ದೀರ್ಘಕಾಲದ ವರೆಗೆ ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸುಮಾಡಿ ತಾನು ವಿಶ್ವದಲ್ಲಿ ಧನಾಧ್ಯಕ್ಷನಾಗಬೇಕೆಂಬ ವರವನ್ನು ಕೇಳಿದನು. ಬ್ರಹ್ಮನು ಅವನನ್ನು ವಿತ್ತೇಶನನ್ನಾಗಿ ಮಾಡಿದುದೂ ಅಲ್ಲದೇ ನಾಲ್ಕನೆಯ ಲೋಕಪಾಲನನ್ನಾಗಿಯೂ ಮಾಡಿದನು. ಪ್ರಪಂಚದಲ್ಲಿರುವ ಧನಕ್ಕೆಲ್ಲಾ ಅವನೇ ಅಧ್ಯಕ್ಷ. ಅವನೇ ತಾನು ಎನ್ನುತ್ತಾನೆ ಶ್ರೀಕೃಷ್ಣ.

**ವಸೂನಾಂ ಪಾವಕಶ್ಚಾಸ್ಮಿ**=ವಸುಗಳು ಎಂಟು ಮಂದಿ :-

**ಧರೋ ಧ್ರುವಶ್ಚ ಸೋಮಶ್ಚ ಅಹಶ್ಚೈವಾನಿಲೋಽನಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥**

ಮಹಾಭಾರತ ಆದಿ ೬೬-೧೮

ಧರ, ಧ್ರುವ, ಸೋಮ, ಅಹಸ್, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ. ಇವರಲ್ಲಿ ಅನಲ ಎಂದರೆ ಉತ್ಕೃಷ್ಟನಾದ ಪಾವಕನೇ ಭಗವಂತ.

**ಮೇರುಃ ಶಿಖರಿಣಾಮಹಮ್** = ಶಿಖರಿಗಳು ಎಂದರೆ ದೊಡ್ಡ-

ದೊಡ್ಡ ಶಿಖರಗಳುಳ್ಳ ಪರ್ವತಗಳು. ಸಮಸ್ತಪರ್ವತಗಳಲ್ಲಿ ನಾನು ಸ್ವರ್ಣ ಮಯವಾಗಿರುವ ಮೇರುಪರ್ವತವಾಗಿದ್ದೇನೆ ಎನ್ನುತ್ತಾನೆ. ಮೇರುಪರ್ವತವು ಹೆಚ್ಚಿನ ಪ್ರಭಾವವುಳ್ಳದ್ದೆಂದು ಮಹಾಭಾರತದಲ್ಲಿ ಅನೇಕ ಕಡೆ ಇದರ ವರ್ಣನೆಯು ಬರುತ್ತದೆ.

ಇದೊಂದು ದಿವ್ಯವಾದ ಸುವರ್ಣಪರ್ವತ. ಬುಡದಿಂದ ಹಿಡಿದು ಶಿಖರಪರ್ಯಂತವಾಗಿ ಸುವರ್ಣಮಯವೇ ಆಗಿದೆ. (ಸುವರ್ಣ-ರತ್ನಗಳ ಭಂಡಾರವಾಗಿದೆ.) ಇದು ತೇಜಃಪುಂಜವಾಗಿದೆ. ಇದರ ಶಿಖರವು ಸೂರ್ಯನ ಪ್ರಭೆಗಿಂತಲೂ ಹೆಚ್ಚು ಪ್ರಭೆಯುಳ್ಳದ್ದಾಗಿದೆ. ಇದರ ಮೇಲೆ ದೇವತೆಗಳು ಮತ್ತು ಗಂಧರ್ವರು ವಾಸಮಾಡುತ್ತಾರೆ. ಇದರ ಸುತ್ತಲೂ ಭಯಂಕರಸರ್ಪಗಳಿವೆ. ದಿವ್ಯವಾದ ಓಷಧಿಲತೆಗಳಿವೆ. ಈ ಪರ್ವತವು ಸ್ವರ್ಗವನ್ನೂ ವ್ಯಾಪಿಸಿ ಕೊಂಡಿದೆ. ಇದು ಇಲಾವೃತಖಂಡದ ಮಧ್ಯಭಾಗದಲ್ಲಿದೆ. ಬ್ರಹ್ಮವಿದರು ಮಾತ್ರವೇ ಈ ಪರ್ವತವನ್ನು ಹತ್ತಬಲ್ಲರು. ಈ ಪರ್ವತದಲ್ಲಿಯೇ ಬ್ರಹ್ಮನ ಸಭಾಭವನವಿದೆ. ಸಮಸ್ತಪ್ರಾಣಿಗಳ ಸೃಷ್ಟಿಯನ್ನೂ ಮಾಡುತ್ತಾ ಬ್ರಹ್ಮನು ಇಲ್ಲಿಯೇ ಇದ್ದುಬಿಟ್ಟಿದ್ದಾನೆ. ಬ್ರಹ್ಮನ ಮಾನಸಪುತ್ರರೂ ಇಲ್ಲಿಯೇ ಇದ್ದಾರೆ. ವಸಿಷ್ಠಾದಿ ಸಪ್ತರ್ಷಿಗಳೂ ಇಲ್ಲಿಯೇ ಇದ್ದಾರೆ. ಮೇರುವಿನ ಉತ್ತರಭಾಗದ ಶಿಖರವು ಧೂಳಿನಿಂದ ರಹಿತವಾಗಿದೆ. ಬ್ರಹ್ಮಲೋಕಕ್ಕೂ ಮೇಲಿರುವ ಶ್ರೀಮನ್ನಾರಾಯಣನ ಪ್ರತಿಷ್ಠಾನವೂ ಇಲ್ಲಿಯೇ ಇದೆ. ವಿಷ್ಣುವಿನ ಆ ಸ್ಥಾನವು ಸೂರ್ಯನ ಪ್ರಕಾಶಕ್ಕಿಂತಲೂ ಹೆಚ್ಚು ಪ್ರಕಾಶಮಾನವಾಗಿದೆ. ನಾರಾಯಣನ ಆ ಧಾಮಕ್ಕೆ ಬ್ರಹ್ಮರ್ಷಿಗಳೂ ಹೋಗಲಾರರು. ಭಕ್ತಿಯ ಪ್ರಭಾವದಿಂದ ಮನನಶೀಲರಾದ ಮಹಾತ್ಮರು ಮಾತ್ರವೇ ನಾರಾಯಣನ ಧಾಮಕ್ಕೆ ಹೋಗ ಬಲ್ಲರು. ಅಲ್ಲಿಗೆ ಹೋದನಂತರ ಮನುಷ್ಯನಿಗೆ ಪುನರ್ಜನ್ಮವಿಲ್ಲ. ನಕ್ಷತ್ರ ಸಹಿತರಾದ ಸೂರ್ಯ-ಚಂದ್ರರು ಪ್ರತಿನಿತ್ಯವೂ ನಿಯತವಾಗಿ ಈ ಮೇರು ಪರ್ವತವನ್ನು ಪ್ರದಕ್ಷಿಣೆಮಾಡುತ್ತಿರುತ್ತಾರೆ. ಮಾಲ್ಯವತ್ಪರ್ವತಕ್ಕೂ ಗಂಧ ಮಾದನಪರ್ವತಕ್ಕೂ ಮಧ್ಯದಲ್ಲಿ ಮಂಡಲಾಕಾರವಾದ ಈ ಪರ್ವತವಿದೆ. ಭೂಮಿಯ ಮೇಲೂ ಸಹ ಇದು ೮೪ ಸಾವಿರ ಯೋಜನಗಳಷ್ಟು ಎತ್ತರ ವಾಗಿದೆ. ಭೂಮಿಯ ಕೆಳಗೂ ಸಹ ೮೪ ಸಾವಿರ ಯೋಜನಗಳಷ್ಟು ವ್ಯಾಪಿ ಸಿದೆ. ಬ್ರಹ್ಮ-ರುದ್ರೇಂದ್ರರು ಇಲ್ಲಿ ಯಾಗಮಾಡುತ್ತಿರುತ್ತಾರೆ. ತುಂಬುರು,

ನಾರದ, ವಿಶ್ವಾವಸುಗಳು ಈ ಪರ್ವತವನ್ನು ಸ್ತೋತ್ರಮಾಡುತ್ತಿರುತ್ತಾರೆ. ಶುಕ್ರಾಚಾರ್ಯರೂ ದೈತ್ಯರೊಡನೆ ಇಲ್ಲಿಯೇ ಇದ್ದಾರೆ. ಈ ಪರ್ವತದ ಮೇಲಿನಿಂದ ಹಾಲಿನಂತೆ ಬಿಳುಪಾದ ನೀರಿನಿಂದ ಕೂಡಿದ ಗಂಗೆಯು ವೇಗವಾಗಿ ಪ್ರವಹಿಸುತ್ತಾ ಬಂದು ಚಂದ್ರಹ್ರದದಲ್ಲಿ ಬೀಳುತ್ತದೆ. ತ್ರಿಪುರಸಂಹಾರ ಕಾಲದಲ್ಲಿ ಪರಶಿವನು ಈ ಮೇರುಪರ್ವತವನ್ನೇ ತನ್ನ ಧ್ವಜದ ದಂಡವನ್ನಾಗಿ ಮಾಡಿಕೊಂಡಿದ್ದನು. ವ್ಯಾಸರೂ ಸಹ ತಮ್ಮ ಶಿಷ್ಯರೊಡನೆ ಈ ಮೇರು ಪರ್ವತದಲ್ಲಿಯೇ ಇದ್ದಾರೆ. ಇಂತಹ ಅಗಣ್ಯಗುಣಭರಿತವಾದ ಮೇರುವೆಂಬ ತತ್ತ್ವರೂಪಪರ್ವತವು (ಮೇರುದಂಡವು) ನಾನೇ ಎನ್ನುತ್ತಾನೆ ಶ್ರೀಕೃಷ್ಣ.

ಶಿಖರ ಎಂದರೆ ರತ್ನವಿಶೇಷಗಳು. ಅವುಗಳನ್ನು ಹೊಂದಿರುವುವುಗಳಲ್ಲಿ ಮೇರುವು ಶ್ರೀಕೃಷ್ಣನ ವಿಭೂತಿ ಎಂದು ನೀಲಕಂಠರು ಹೇಳುತ್ತಾರೆ.

**ಓಂ ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕನ್ದಃ ಸರಸಾಮಸ್ಮಿ ಸಾಗರಃ ॥೨೪॥**

ಪಾರ್ಥ! ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯೇ ನಾನೆಂದು ತಿಳಿ. ಸೇನಾಪತಿಗಳಲ್ಲಿ ನಾನು ಸ್ಕಂದನು. ಸರಸ್ಸುಗಳಲ್ಲಿ ಸಾಗರನಾಗಿರುವೆನು.

* * *

(ಬೃಹಸ್ಪತಿಯು ಅಂಗಿರಸನ ಮಗ. ಸ್ವಾರೋಚಿಷಮನ್ವಂತರದಲ್ಲಿ ಸಪ್ತರ್ಷಿಗಳಲ್ಲಿ ಬೃಹಸ್ಪತಿಯೇ ಪ್ರಧಾನನಾಗಿದ್ದನು. ಅವನು ದೇವತೆಗಳ ಪುರೋಹಿತ. ಬೃಹಸ್ಪತಿಯ ಲೋಕವು ಇಂದ್ರನ ಲೋಕಕ್ಕಿಂತಲೂ ದೊಡ್ಡದು ಮತ್ತು ಮೇಲಿದೆ. ಪ್ರಜಾಪತಿಯ ಲೋಕಕ್ಕಿಂತಲೂ ಕೆಳಗಿನದು. ಅವನ ಅಂಶದಿಂದಲೇ ದ್ರೋಣರು ಹುಟ್ಟಿದುದು. ದೇವತೆಗಳಿಗೆ ಬೃಹಸ್ಪತಿಯು ಪುರೋಹಿತನಾದುದರಿಂದಲೇ ಪುರೋಹಿತರಲ್ಲೆಲ್ಲಾ ಮುಖ್ಯನು. ಅಂತಹ ಬೃಹಸ್ಪತಿಯೇ ತಾನೆಂದು ಶ್ರೀಕೃಷ್ಣನು ಹೇಳಿದ್ದಾನೆ.

**ಪುರೋಧಸಾಂ ಮುಖ್ಯಂ** = ಪುರೋಹಿತರಲ್ಲಿ ಪ್ರಧಾನನಾದ.

ಬೃಹಸ್ಪತಿಯು ವಾಣಿಗಳಿಗೆಲ್ಲಾ ಅಧಿಪತಿ. ಗೀಷ್ಪತಿ. **ಬೃಹತಾಂ ಪತಿಃ= ಬೃಹಸ್ಪತಿಃ** ಎಂದು ವ್ಯುತ್ಪತ್ತಿ.

**ಬೃಹತಾ ತಪಸಾನೇನ ಬೃಹತಾಂ ಪತಿರಪ್ಯಹೋ ।**
**ನಾಮ್ನಾ ಬೃಹಸ್ಪತಿರಿತಿ ಗ್ರಹೇಷ್ವರ್ಚ್ಯೋ ಭವಿಷ್ಯತಿ ॥**

ದೊಡ್ಡ ತಪಸ್ಸಿನಿಂದ ಕೂಡಿ ದೊಡ್ಡವರಿಗೂ ಪತಿಯಾಗಿರುವುದರಿಂದ ಈತನು ಬೃಹಸ್ಪತಿ–ಎಂದು ಸ್ಕಾಂದಪುರಾಣದ ನಿರ್ವಚನ.

ಬೃಹತ್, ಬ್ರಹ್ಮ ಮತ್ತು ಮಹತ್–ಇವು ಮೂರೂ ಪರ್ಯಾಯ ವಾಚಕಗಳು. ಈ ಗುಣಗಳಿಂದ ಕೂಡಿದ ವಿದ್ವಾಂಸನು ಬೃಹಸ್ಪತಿ.

**ಬೃಹದ್ಬ್ರಹ್ಮ ಮಹಚ್ಚೇತಿ ಶಬ್ದಾಃ ಪರ್ಯಾಯವಾಚಕಾಃ ।**
**ಏಭಿಃ ಸಮನ್ವಿತೋ ರಾಜನ್ಗುಣೈರ್ವಿದ್ವಾನ್ಬೃಹಸ್ಪತಿಃ ॥**

ಎಂದು ಮಹಾಭಾರತದಲ್ಲಿ ಹೇಳಿದೆ.

**ಸೇನಾನೀನಾಮಹಂ ಸ್ಕನ್ದಃ** = ಸ್ಕಂದನ ಕಥೆಯು ಮಹಾಭಾರತದಲ್ಲಿ ಈ ಹಿಂದೆ ವಿಸ್ತಾರವಾಗಿಯೇ ಬಂದಿದೆ.

ಸ್ಕಂದನು ಅಗ್ನಿಯ ತೇಜಸ್ಸಿನಿಂದ ಸ್ವಾಹಾದೇವಿಯಲ್ಲಿ ಹುಟ್ಟಿದವನು. ಕೃತ್ತಿಕಾನಕ್ಷತ್ರಾಧಿದೇವತೆಗಳಿಂದ ರಕ್ಷಿತನಾದವನು. ಆದುದರಿಂದಲೇ ಕಾರ್ತಿಕೇಯನು. ಇವನನ್ನು ಷಾಣ್ಮಾತುರನೆಂದೂ ಕರೆಯುತ್ತಾರೆ. ಇವನು ದೇವತೆಗಳ ಸೇನಾಪತಿ. ತಾರಕಾಸುರನನ್ನು ಸಂಹಾರಮಾಡಿದವನು. ವಿಶ್ವದಲ್ಲಿರುವ ಸಮಸ್ತಸೇನಾಪತಿಗಳಲ್ಲಿ ಸ್ಕಂದನು ನಾನು ಎಂದು ಭಗವಂತನು ಹೇಳಿದ್ದಾನೆ.

**ದಾನವಾನಾಂ ವಿನಾಶಾಯ ದೇವಾನಾಮರ್ಥಸಿದ್ಧಯೇ ।**
**ಗೋಬ್ರಾಹ್ಮಣಹಿತಾರ್ಥಾಯ ಸೇನಾಪತ್ಯೇಽಭಿಷಿಚ್ಯತಾಮ್ ॥**

ಎಂದು ಮಹಾಭಾರತದಲ್ಲಿ ಹೇಳುವಂತೆ ದಾನವರನ್ನು ಸಂಹರಿಸಿ ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕೋಸ್ಕರ ಮತ್ತು ಗೋ-ಬ್ರಾಹ್ಮಣರ ಹಿತಕ್ಕಾಗಿ ದೇವತೆಗಳ ಸೇನಾಪತಿಯಾಗಿ ಅಭಿಷೇಕಮಾಡಲ್ಪಟ್ಟವನು ಸ್ಕಂದ.

**ಸರಸಾಮಸ್ಮಿ ಸಾಗರಃ** = ಜಲಾಶಯಗಳಲ್ಲಿ ನಾನು ಸಮುದ್ರನಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ನೀರು ಅಲ್ಪವಾಗಿರುವುದಕ್ಕೆ ಸರಸ್ಸು

ಎಂದು ಹೆಸರು. ಅಗಾಧವಾಗಿರುವುದಕ್ಕೆ ಸಮುದ್ರವೆಂದು ಹೆಸರು. ಎರಡೂ ಸಹ ಸ್ವಾಭಾವಿಕವಾಗಿರಬೇಕು. ಮನುಷ್ಯಕೃತವಾಗಿರಬಾರದು.)

**ಓಂ ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥೨೫॥**

ಮಹರ್ಷಿಗಳಲ್ಲಿ ಭೃಗುವು ನಾನು. ಮಾತುಗಳಲ್ಲಿ ಒಂದು ಅಕ್ಷರ ವಾಗಿರುವೆನು. ಯಜ್ಞಗಳಲ್ಲಿ ಜಪಯಜ್ಞವು ನಾನೇ. ಸ್ಥಾವರಗಳಲ್ಲಿ ಹಿಮಾಲಯನು.

* * *

(ಈ ಹಿಂದೆ ಪ್ರಕರಣಾಂತರದಲ್ಲಿ ಋಷಿ ಮತ್ತು ದೇವರ್ಷಿಗಳ ಲಕ್ಷಣವನ್ನು ಹೇಳಲಾಗಿದೆ. ಮಹರ್ಷಿಗಳ ಲಕ್ಷಣವು ಈ ರೀತಿಯಾಗಿದೆ :

**ಈಶ್ವರಾಃ ಸ್ವಯಮುದ್ಭೂತಾ ಮಾನಸಾ ಬ್ರಹ್ಮಣಃ ಸುತಾಃ ।**
**ಯಸ್ಮಾನ್ನ ಹನ್ಯತೇ ಮಾನ್ಯೈರ್ಮಹಾನ್ಪರಿಗತಃ ಪುರಃ ॥**

**ಯಸ್ಮಾದೃಷನ್ತಿ ಯೇ ಧೀರಾ ಮಹಾನ್ತಂ ಸರ್ವತೋ ಗುಣೈಃ ।**
**ತಸ್ಮಾನ್ಮಹರ್ಷಯಃ ಪ್ರೋಕ್ತಾ ಬುದ್ಧೇಃ ಪರಮದರ್ಶಿನಃ ॥**

ಬ್ರಹ್ಮನ ಮಾನಸಪುತ್ರರು ಐಶ್ವರ್ಯವಂತರು (ಸರ್ವಸಿದ್ಧಿಸಂಪನ್ನರು.) ಸ್ವಯಂ ಸಂಜಾತರು. ಯಾರು ಅಪರಿಮೇಯರೋ, ಯಾರು ಸರ್ವತ್ರ ವ್ಯಾಪ್ತರಾಗಿದ್ದರೂ ಸಹ ಪ್ರತ್ಯಕ್ಷದಲ್ಲಿಯೂ ಕಾಣಿಸಿಕೊಳ್ಳುತ್ತಾರೆಯೋ– ಅವರು ಮಹಾಮಹಿಮರೇ ಆಗಿರುತ್ತಾರೆ. ಯಾರು ಬುದ್ಧಿಯ ಪಾರವನ್ನು ಕಂಡಿರುವರೋ, ಸರ್ವಗುಣಗಳಿಂದಲೂ ದೊಡ್ಡವನಾದ ಪರಮಾತ್ಮನನ್ನು ಯಾರು ಜ್ಞಾನದಿಂದ ತಿಳಿದುಕೊಂಡಿರುತ್ತಾರೆಯೋ–ಅವರು ಮಹರ್ಷಿಗಳು.

ಮಹರ್ಷಿಗಳು ಯಾರೆಂಬುದನ್ನು ಅದೇ ಪ್ರಕರಣದಲ್ಲಿಯೇ ಮುಂದೆ ಹೀಗೆ ಹೇಳಿದೆ :

**ಭೃಗುರ್ಮರೀಚಿರತ್ರಿಶ್ಚ ಅಙ್ಗಿರಾಃ ಪುಲಹಃ ಕ್ರತುಃ ।**
**ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚೇತಿ ತೇ ದಶ ॥**

**ಬ್ರಹ್ಮಣೋ ಮಾನಸಾ ಹ್ಯೇತ ಉದ್ಭೂತಾಃ ಸ್ವಯಮೀಶ್ವರಾಃ ।**
**ಪ್ರಾವರ್ತನ್ತ ಋಷೇರ್ಯಸ್ಮಾನ್ಮಹಾಂಸ್ತಸ್ಮಾನ್ಮಹರ್ಷಯಃ ॥**

ವಾಯುಪುರಾಣ ೫೯-೮೨-೮೩-೮೯-೯೦.

ಭೃಗು, ಮರೀಚಿ, ಅತ್ರಿ, ಅಂಗಿರಸ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ, ಪುಲಸ್ತ್ಯ—ಈ ಹತ್ತು ಮಂದಿ ಮಹರ್ಷಿಗಳು. ಬ್ರಹ್ಮನ ಮಾನಸ ಪುತ್ರರಾಗಿ ಹುಟ್ಟಿದ ಇವರು ಸ್ವಯಂ ಈಶ್ವರರಾಗಿರುತ್ತಾರೆ. ಸಿದ್ಧಿರೂಪವಾದ ಐಶ್ವರ್ಯಸಂಪನ್ನರಾಗಿರುತ್ತಾರೆ. ಋಷಿಯಾದ ಬ್ರಹ್ಮನಿಂದ ಹುಟ್ಟಿರುವುದರಿಂದ ಮತ್ತು ಹಿಂದೆ ಹೇಳಿದ ಲಕ್ಷಣವುಳ್ಳವರಾಗಿ ಮಹಾತ್ಮರಾಗಿರುವುದರಿಂದ ಇವರು ಮಹರ್ಷಿನಾಮಕರಾಗಿರುತ್ತಾರೆ.

ಈ ಮಹರ್ಷಿಗಳಲ್ಲಿ ತಾನು ಭೃಗು ಎನ್ನುತ್ತಾನೆ ಶ್ರೀಕೃಷ್ಣ. ಭೃಗು ಮಹರ್ಷಿಯು ಭಗವಂತನ ಭಕ್ತ, ಜ್ಞಾನೀ ಮತ್ತು ಮಹಾತೇಜಸ್ವೀ. ದಕ್ಷನ ಮಗಳಾದ ಖ್ಯಾತಿ ಎಂಬುವಳನ್ನು ಮದುವೆಯಾಗಿ ಅವಳಲ್ಲಿ ಧಾತಾ, ವಿಧಾತಾ ಎಂಬ ಇಬ್ಬರು ಗಂಡುಮಕ್ಕಳನ್ನೂ, ಶ್ರೀ ಎಂಬ ಹೆಸರಿನ ಮಹಾಲಕ್ಷ್ಮಿಯ ಅಂಶಭೂತಳಾದ ಕನ್ಯೆಯನ್ನೂ ಪಡೆದನು. ಸುಪ್ರಸಿದ್ಧನಾದ ಚ್ಯವನಮಹರ್ಷಿಯೂ ಸಹ ಇವರ ಪುತ್ರನೇ. ಭಗವಂತನು ಪರಶುರಾಮನಾಗಿ ಅವತರಿಸಿದ್ದೂ ಭೃಗುವಂಶದಲ್ಲಿಯೇ. ಯೋಗನಿದ್ರೆಯಿಂದ ಏಳುವ ಭಗವಂತನಿಗೆ ಸುಪ್ರಭಾತವನ್ನು ಪ್ರಾರ್ಥಿಸುವ ಮಹಾತ್ಮರಲ್ಲಿ ಒಬ್ಬನು. ಹಿಂದೆ ಹೇಳಿದ ಹತ್ತುಮಂದಿ ಮಹರ್ಷಿಗಳಲ್ಲಿ ಮನುವೊಬ್ಬನನ್ನು ಬಿಟ್ಟು ಉಳಿದವರನ್ನು ಬ್ರಹ್ಮನು ಪ್ರಜಾಸೃಷ್ಟಿಗಾಗಿಯೇ ಸೃಷ್ಟಿಸಿದನೆಂದೂ ಆದುದರಿಂದಲೇ ಇವರಿಗೆ ನವಬ್ರಹ್ಮರೆಂಬ ಹೆಸರೂ ಇದೆಯೆಂದೂ ಪುರಾಣಗಳು ಹೇಳುತ್ತವೆ.

**ಗಿರಾಮಸ್ಮ್ಯೇಕಮಕ್ಷರಮ್** = ಗೀಃ ಎಂದರೆ ಮಾತು. ಅಥವಾ ಭಾಷೆ. ಇದರಲ್ಲಿ ನಾನು ಏಕಾಕ್ಷರವಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಏಕಾಕ್ಷರ ಎಂದರೆ ಪರಬ್ರಹ್ಮ.

**ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಃ ಪರಂ ತಪಃ ।**

ಮನು ೨-೮೩

**ಪ್ರಯತಃ ಪ್ರಣವೋಂಕಾರಂ ಪ್ರಣವಂ ಪುರುಷೋತ್ತಮಮ್ ।**
**ಓಂಕಾರಂ ಪ್ರಣವಾತ್ಮಾನಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥**

ಆದುದರಿಂದ ಓಂಕಾರವೇ ಪರಬ್ರಹ್ಮ, ಓಂಕಾರವೇ ಪುರುಷೋತ್ತಮ. ಅರ್ಥಾತ್ ಶ್ರೀಕೃಷ್ಣ.

ಯಜ್ಞಾನಾಂ ಜಪಯಜ್ಞೋಽಸ್ಮಿ = ಯಜ್ಞಗಳಲ್ಲೆಲ್ಲಾ ಜಪಯಜ್ಞನು ನಾನಾಗಿದ್ದೇನೆ ಎನ್ನುತ್ತಾನೆ. ಇದುವರೆಗೂ ಶ್ರೀಕೃಷ್ಣನು ಅನೇಕ ಯಜ್ಞಗಳ ವಿಷಯವಾಗಿ ಹೇಳಿರುವನು. ದ್ರವ್ಯಯಜ್ಞ, ತಪೋಯಜ್ಞ, ಸ್ವಾಧ್ಯಾಯ-ಜ್ಞಾನಯಜ್ಞಗಳು—ಇವುಗಳ ವಿಷಯವಾಗಿ ಹೇಳಿರುವನು. ಯಜ್ಞವೂ ನಾನೇ—ಯಜ್ಞದ ಭೋಕ್ತೃವೂ ನಾನೇ ಎಂದೂ ಹೇಳಿರುವನು. ಆದರೆ ಶ್ರೀಕೃಷ್ಣನು ಇದುವರೆಗೆ ಜಪಯಜ್ಞದ ಪ್ರಶಂಸೆಯನ್ನು ಮಾಡಿರಲಿಲ್ಲ. ಈ ಪ್ರಕರಣದಲ್ಲಿ ಯಜ್ಞಗಳಲ್ಲೆಲ್ಲಾ ಜಪಯಜ್ಞನು ನಾನೇ ಆಗಿದ್ದೇನೆ ಎಂದು ಹೇಳಿದ್ದಾನೆ.

ಜಪ ಎಂದರೆ ಮಂತ್ರವನ್ನು ಆವೃತ್ತಿಮಾಡುವುದು. ಈ ಜಪರೂಪ ವಾದ ಯಾಗಕ್ಕೆ ಜಪಯಜ್ಞವೆಂದು ಹೆಸರು. ಈ ಜಪಯಜ್ಞವು ವಾಚಿಕ, ಉಪಾಂಶು ಮತ್ತು ಮಾನಸ—ಎಂದು ಮೂರು ವಿಧ.

**ಯದುಚ್ಚನೀಚೋಚ್ಚರಿತೈಃ ಶಬ್ದೈಃ ಸ್ಪಷ್ಟಪದಾಕ್ಷರೈಃ ।**
**ಮನ್ತ್ರಮುಚ್ಚಾರಯೇದ್ವಾಚಾ ಜಪಯಜ್ಞಃ ಸ ವಾಚಿಕಃ ॥**

ಅಕ್ಷರಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಮೆಲ್ಲಗೂ—ಗಟ್ಟಿಯಾಗಿಯೂ ಮಂತ್ರಗಳನ್ನು ಜಪಿಸುವುದು ವಾಚಕಜಪಯಜ್ಞ.

**ಶನೈರುಚ್ಚಾರಯನ್ಮನ್ತ್ರಂ ಕಿಞ್ಚಿದೋಷ್ಠೌ ಪ್ರಚಾಲಯೇತ್ ।**
**ಕಿಞ್ಚಿತ್ ಶ್ರವಣಯೋಗ್ಯಸ್ತು ಸ ಉಪಾಂಶುಜಪಃ ಸ್ಮೃತಃ ॥**

ತುಟಿಗಳು ಅಲುಗಾಡುವಷ್ಟು ಮಾತ್ರ ಮೆಲ್ಲಗೆ ಇತರರಿಗೆ ಕೇಳಿಸುವಂತೆ ಜಪಿಸುವುದು ಉಪಾಂಶುಜಪಯಜ್ಞ.

**ಧಿಯಾ ಪದಾಕ್ಷರಶ್ರೇಣ್ಯಾ ಅವರ್ಣಮಪದಾಕ್ಷರಮ್ ।**
**ಮನ್ತ್ರಾರ್ಥಚಿನ್ತನಾಭ್ಯಾಂ ತು ತದುಕ್ತಂ ಮಾನಸಂ ಸ್ಮೃತಮ್ ॥**
**ಸಾಲಮ್ಬಮಿತಿ ಚ ಜ್ಞೇಯಂ ಜಪಯಜ್ಞಾತ್ಮಕಂ ಶುಭಮ್ ॥**

ಶಾಂತಿ ೧೯೪-೧೦

ಮನಸ್ಸಿನಲ್ಲಿಯೇ ಮಂತ್ರಾರ್ಥಗಳನ್ನು ಮನನಮಾಡುತ್ತಾ ಇತರರಿಗೆ ಕೇಳಿಸದಂತೆ ಜಪಿಸುವುದು ಮಾನಸಜಪಯಜ್ಞ. ಜಪಯಜ್ಞವು ಆಲಂಬನ ಸಹಿತವಾದುದು ಮತ್ತು ಶುಭಕರವಾದುದು ಎಂದು ತಿಳಿಯಬೇಕು.

ಜಪಯಜ್ಞದ ಮಹತ್ತ್ವವನ್ನು ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ :

**ವಿಧಿಯಜ್ಞಾಜ್ಜಪಯಜ್ಞೋ ವಿಶಿಷ್ಟೋ ದಶಭಿರ್ಗುಣೈಃ ।**
**ಉಪಾಂಶುಃ ಸ್ಯಾಚ್ಛತಗುಣಃ ಸಾಹಸ್ರೋ ಮಾನಸಃ ಸ್ಮೃತಃ ॥** ೨-೮೫

ವಿಧಿಯಜ್ಞಕ್ಕಿಂತಲೂ ಜಪಯಜ್ಞವು ಹತ್ತುಪಟ್ಟು ಹೆಚ್ಚುಗುಣವುಳ್ಳದ್ದು. ವಾಚಿಕಜಪಯಜ್ಞಕ್ಕಿಂತಲೂ ಉಪಾಂಶುಜಪಯಜ್ಞವು ನೂರುಪಟ್ಟು ಹೆಚ್ಚಿನದು. ಉಪಾಂಶುಜಪಯಜ್ಞಕ್ಕಿಂತಲೂ ಮಾನಸಜಪಯಜ್ಞವು ಸಾವಿರ ಪಟ್ಟು ಹೆಚ್ಚಿನದು.

ಇತರ ಯಜ್ಞಗಳಲ್ಲಿ ಹಿಂಸಾದಿ ಪ್ರಸಂಗವುಂಟು. ಅಧಿಕಾರಿವಿಶೇಷಗಳ ವ್ಯವಸ್ಥೆಯುಂಟು. ಅವು ಕ್ಲೇಶಕರವಾದುವು. ಜಪಯಜ್ಞದಲ್ಲಾದರೋ ಅದರ ಪ್ರಸಂಗವಿಲ್ಲ. ವಿಲಂಬವಿಲ್ಲದೇ ಅರ್ಥವು ಗೋಚರವಾಗುವುದರಿಂದಲೂ ಸಬೀಜಯೋಗದ ಮೂಲಕ ಒಡನೆಯೇ ಸಮಾಧಿಯಲ್ಲಿ ಕೂರಿಸುವುದರಿಂದಲೂ ಉಳಿದ ಯಜ್ಞಗಳಿಗಿಂತಲೂ ಜಪಯಜ್ಞವು ಪ್ರಶಸ್ತವಾದುದು. ಅಲ್ಲದೇ ಇದು ಎಲ್ಲ ಆಶ್ರಮಗಳಿಗೂ ಸಾಧಾರಣವಾದುದು.

**ಜಪ್ಯೇನೈವ ತು ಸಂಸಿಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ ॥**
ಮನು ೨-೮೭

ವಿಧುರರೇ ಮುಂತಾದವರೂ ಕೂಡ ಈ ಜಪಯಜ್ಞದ ಮೂಲಕ ಸಿದ್ಧಿಯನ್ನು ಪಡೆಯಬಹುದು. ಈ ಕಾರಣಗಳಿಂದ ಜಪಯಜ್ಞದ ಉತ್ಕರ್ಷ– ಎಂದು ವೇದಾಂತದೇಶಿಕರು ಹೇಳುತ್ತಾರೆ.

ಶ್ರೀಶಂಕರಭಗವತ್ಪಾದರು ಕೂಡ ವಿಷ್ಣುಸಹಸ್ರನಾಮಸ್ತೋತ್ರಭಾಷ್ಯದಲ್ಲಿ ಜಪಯಜ್ಞದ ಮಹಿಮೆಯನ್ನು ನಿರೂಪಿಸಿರುತ್ತಾರೆ ಮತ್ತು ಮಹಾಭಾರತವಚನವನ್ನೂ ಉದ್ಧರಿಸಿರುತ್ತಾರೆ.

**ಜಪಸ್ತು ಸರ್ವಧರ್ಮೇಭ್ಯಃ ಪರಮೋ ಧರ್ಮ ಉಚ್ಯತೇ ।**
**ಅಹಿಂಸಯಾ ಚ ಭೂತಾನಾಂ ಜಪಯಜ್ಞಃ ಪ್ರವರ್ತತೇ ॥**

ಹಿಂಸೆಯಿಲ್ಲ. ಇತರ ಪುರುಷರ ಸಹಾಯದ ಆವಶ್ಯಕತೆಯಿಲ್ಲ. ಬೇರೆ ದ್ರವ್ಯಗಳ ಸಂಗ್ರಹಣದ ಅಗತ್ಯವಿಲ್ಲ. ದೇಶ-ಕಾಲಾಶ್ರಮಾದಿಗಳ ನಿಯಮಗಳೂ ಹೆಚ್ಚಾಗಿಲ್ಲ. ಕಾಯಾದಿ ಕ್ಲೇಶಗಳೂ ಇಲ್ಲ. ಫಲವು ಮಾತ್ರ ಅತ್ಯಧಿಕವಾಗಿದೆ. ಆದುದರಿಂದ ಜಪಯಜ್ಞದ ಅಗ್ಗಳಿಕೆ ಎಂದೂ ಅವರು ನಿರೂಪಿಸುತ್ತಾರೆ.

**ಹಿಂಸಾದಿ ಪುರುಷಾನ್ತರ ದ್ರವ್ಯಾನ್ತರ ದೇಶಾಕಾಲಾದಿ ನಿಯಮಾನಪೇಕ್ಷತ್ವಂ ಆಧಿಕ್ಯೇ ಕಾರಣಮ್ ॥**

ಜಪಯಜ್ಞದಲ್ಲಿಯೂ ನಾನಾಭೇದಗಳಿವೆ. ವೇದಮಂತ್ರಾತ್ಮಕವಾದುವು ಮತ್ತು ಬೀಜಾಕ್ಷರಗಳಿಂದ ಕೂಡಿದುವು. ಗಾಯತ್ರೀ, ಅಷ್ಟಾಕ್ಷರಿ, ಪಂಚಾಕ್ಷರಿ—ಮುಂತಾದುವು. ಇಂತಹ ಮಂತ್ರಗಳನ್ನು ಗುರುಮುಖವಾಗಿಯೇ ಪಡೆದುಕೊಳ್ಳಬೇಕು. ಮತ್ತೆ ಕೆಲವು ನಾಮಮಂತ್ರಗಳು. ಕಲಿಸಂತರಣವೇ ಮೊದಲಾದುವುಗಳು. ಇವುಗಳಿಗೆ ಉಪದೇಶದ ಆವಶ್ಯಕತೆಯಿಲ್ಲವೆಂದೂ ಯಾರು ಬೇಕಾದರೂ, ಯಾವಾಗ ಬೇಕಾದರೂ ಹೇಗೆ ಬೇಕಾದರೂ ಜಪಮಾಡಬಹುದೆಂದೂ ಹೇಳುತ್ತಾರೆ. ಜಪಮಾಡುವಾಗಲೂ ಶ್ರದ್ಧಾ-ಭಕ್ತಿಗಳು ಮುಖ್ಯ. ಕೇವಲ ಗಿಳಿಪಾಠದಂತೆ ಸಂಖ್ಯೆಯ ಮೇಲೆಯೇ ದೃಷ್ಟಿಯಿಟ್ಟು ಮಾಡಬಾರದು. ಆರಾಧ್ಯದೈವವನ್ನು ಹೃತ್ಕಮಲದಲ್ಲಿ ನಿಲ್ಲಿಸಿಕೊಂಡು ಜಪಮಂತ್ರದ ಮೂಲಕ ಮೈಗೂಡಿಸಿಕೊಳ್ಳಬೇಕು. ಜಪದ ಮಹಿಮೆಯು ಅಪಾರವಾದುದು. ಆದುದರಿಂದ ಶ್ರೀಕೃಷ್ಣನು **ಯಜ್ಞಾನಾಂ ಜಪಯಜ್ಞೋಽಸ್ಮಿ** ಎಂದು ಹೇಳಿದ್ದಾನೆ.

**ಸ್ಥಾವರಾಣಾಂ ಹಿಮಾಲಯಃ** = ಸ್ಥಾವರಗಳೆಂದರೆ ಸ್ಥಿರವಾಗಿರುವ ವಸ್ತುಗಳು. ಬೆಟ್ಟ-ಗುಡ್ಡ ಮೊದಲಾದುವುಗಳು. ಅವುಗಳಲ್ಲಿ ಹಿಮಾಲಯವು ನಾನು ಎನ್ನುತ್ತಾನೆ ಶ್ರೀಕೃಷ್ಣ. ಹಿಮಾಲಯನು ನಗಾಧಿರಾಜ. ಈಶ್ವರನ ಮಾವ. ಪಾರ್ವತಿಯ ತಂದೆ. ಪ್ರಪಂಚದಲ್ಲೇ ಅತಿದೊಡ್ಡದಾದ ಗೌರೀ ಶಂಕರ ಶಿಖರವೂ ಈ ಹಿಮಾಲಯಪರ್ವತದಲ್ಲಿಯೇ ಇದೆ. ಮಹತ್ತು-ಬೃಹತ್ತು ಎರಡರಲ್ಲಿಯೂ ಉತ್ಕೃಷ್ಟವಾದುದು ; ನಾನಾರತ್ನಗಳಿಗೆ ಆಶ್ರಯ ವಾದುದು. ಶ್ರೇಷ್ಠತಮವಾದ ತಪೋಭೂಮಿ. ಪುಣ್ಯತಮವಾದ ನದಿ

ಗಳಿಗೂ–ಆಶ್ರಮಗಳಿಗೂ ಸ್ಥಾನವಾಗಿರುವುದು. ಆದುದರಿಂದಲೇ ಇದು ಭಗವಂತನ ವಿಭೂತಿಯಾಗಿದೆ.

**ಓಂ ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗನ್ಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

ವೃಕ್ಷಗಳಲ್ಲೆಲ್ಲಾ ಅಶ್ವತ್ಥನು ನಾನು. ದೇವರ್ಷಿಗಳಲ್ಲಿ ನಾರದನು. ಗಂಧರ್ವರಲ್ಲಿ ಚಿತ್ರರಥನು. ಸಿದ್ಧರಲ್ಲಿ ಕಪಿಲಮುನಿಯು.

* * *

(ಅಶ್ವತ್ಥವೃಕ್ಷದ ಮಾಹಾತ್ಮ್ಯವು ಪುರಾಣಾಂತರಗಳಲ್ಲಿ ವಿಪುಲವಾಗಿ ವರ್ಣಿತವಾಗಿದೆ.

**ಮೂಲೇ ವಿಷ್ಣುಃ ಸ್ಥಿತೋ ನಿತ್ಯಂ ಸ್ಕನ್ಧೇ ಕೇಶವ ಏವ ಚ ।**
**ನಾರಾಯಣಸ್ತು ಶಾಖಾಸು ಪತ್ರೇಷು ಭಗವಾನ್ ಹರಿಃ ।**
**ಫಲೇಽಚ್ಯುತೋ ನ ಸನ್ದೇಹಃ ಸರ್ವದೇವೈಃ ಸಮನ್ವಿತಃ ॥**

**ಸ ಏವ ವಿಷ್ಣುರ್ದ್ರುಮ ಏವ ಮೂರ್ತೋ**
**ಮಹಾತ್ಮಭಿಃ ಸೇವಿತಪುಣ್ಯಮೂಲಃ ।**
**ಯಸ್ಯಾಶ್ರಯಃ ಪಾಪಸಹಸ್ರಹನ್ತಾ**
**ಭವೇನ್ನೃಣಾಂ ಕಾಮದುಘೋ ಗುಣಾಢ್ಯಃ ॥**

ಸ್ಕಾನ್ದಪುರಾಣ ೨೪೭-೪೧-೪೨-೪೪

ಅಶ್ವತ್ಥವೃಕ್ಷದ ಮೂಲದಲ್ಲಿ ವಿಷ್ಣುವಿದ್ದಾನೆ. ತನುವಿನಲ್ಲಿ (ಮಧ್ಯದ ಕಾಂಡದಲ್ಲಿ) ಕೇಶವನಿದ್ದಾನೆ. ಶಾಖೆಗಳಲ್ಲಿ ನಾರಾಯಣನಿದ್ದಾನೆ. ಎಲೆಗಳಲ್ಲಿ ಭಗವಂತನಾದ ಹರಿಯಿದ್ದಾನೆ. ಅದರ ಫಲಗಳಲ್ಲಿ ಅಚ್ಯುತನಿದ್ದಾನೆ. ಇದರಲ್ಲಿ ಸಂಶಯವೇ ಇಲ್ಲ. ಅವನಿಲ್ಲಿ ಸರ್ವದೇವತೆಗಳಿಂದಲೂ ಕೂಡಿಕೊಂಡಿದ್ದಾನೆ. ಈ ಅಶ್ವತ್ಥವೃಕ್ಷವು ಮಹಾವಿಷ್ಣುವಿನ ಮೂರ್ತವಾಗಿದೆ. ಸಾಕಾರಮೂರ್ತಿಯಾಗಿದೆ. ಮಹಾತ್ಮರಾದವರು ಈ ವೃಕ್ಷದ ಪುಣ್ಯತಮವಾದ ಮೂಲದಲ್ಲಿ ಆಶ್ರಯವನ್ನು ಪಡೆದಿರುತ್ತಾರೆ. ಇದನ್ನು ಆಶ್ರಯಿಸಿದವರ ಸಾವಿರ ಪಾಪಗಳನ್ನಾದರೂ ಈ ವೃಕ್ಷವು ಹೋಗಲಾಡಿಸುತ್ತದೆ. ಬಹುಗುಣಯುಕ್ತವಾದ ಈ ವೃಕ್ಷವು ಆಶ್ರಯಿಸಿದವರಿಗೆ ಸಕಲಕಾಮನೆಗಳನ್ನೂ ನೀಡುವ ಕಾಮಧೇನುವೇ ಆದೀತು.

**ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ ।**
**ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ॥**

ಎಂದು ಹೇಳಿಕೊಂಡು ಈ ವೃಕ್ಷಕ್ಕೆ ಪ್ರತಿನಿತ್ಯವೂ ಏಳು ಬಾರಿ ಪ್ರದಕ್ಷಿಣೆ ಮಾಡಿ ನಮಸ್ಕಾರಮಾಡಿದರೆ ಅನೇಕರೋಗಗಳೂ ಅನೇಕಪಾಪಗಳೂ ನಾಶವಾಗುತ್ತವೆ. ಇದಕ್ಕೆ ಅಶ್ವತ್ಥನಾರಾಯಣ ಎಂದೇ ಹೆಸರು. ಇದರ ಮೂಲಕ ಬೀಸುವ ಗಾಳಿಯಿಂದಲೇ ಅನೇಕರೋಗಗಳು ಪರಿಹಾರವಾಗುತ್ತವೆಯೆಂದು ಹೇಳುತ್ತಾರೆ. ಈ ವೃಕ್ಷದ ಮೂಲದಲ್ಲಿ ಕುಳಿತು ಧ್ಯಾನಮಾಡಿ ಅನೇಕರು ಸಿದ್ಧಿಯನ್ನು ಪಡೆದಿರುತ್ತಾರೆ. ಧ್ಯಾನಕ್ಕೆ ಇದರ ಮೂಲವು ಬಹಳ ಪ್ರಶಸ್ತವಾದುದು. ಇದರ ಎಲೆ, ಫಲ, ತೊಗಟೆ ಎಲ್ಲವೂ ರೋಗನಾಶಕಗಳೆಂದು ವೈದ್ಯಗ್ರಂಥಗಳಲ್ಲಿ ಹೇಳಿದ್ದಾರೆ. ರಕ್ತವಿಕಾರ, ಕಫ, ವಾತ, ಪಿತ್ತ, ದಾಹ, ವಮನ, ವಿಷದೋಷ, ಎದೆನೋವು, ಕುಷ್ಠ–ಇತ್ಯಾದಿ ರೋಗಗಳಿಗೂ ಈ ವೃಕ್ಷದ ಎಲೆ ಮೊದಲಾದುವುಗಳಿಂದ ಔಷಧಗಳನ್ನು ಮಾಡುತ್ತಾರೆ. ತೇಜಸೋ ವಾ ಏಷ ವನಸ್ಪತಿರಜಾಯತ ಯದಶ್ವತ್ಥಃ **।ಸಾಂ– ರಾಜ್ಯಂ ವಾ ಏತದ್ವನಸ್ಪತೀನಾಮ್ ।** ಎಂದು ಐತರೇಯಬ್ರಾಹ್ಮಣವು ಈ ವೃಕ್ಷವನ್ನು ಕೊಂಡಾಡುತ್ತದೆ. ಇಂತಹ ವೃಕ್ಷರಾಜನಾದ ಅಶ್ವತ್ಥನು ನಾನೇ ಎನ್ನುತ್ತಾನೆ ಶ್ರೀಕೃಷ್ಣ.

ಇದು ಯಜ್ಞೀಯವಾದ ಮಹಾವೃಕ್ಷಗಳಲ್ಲಿ ಒಂದು ಮತ್ತು ಗೀತಾಚಾರ್ಯನಾದ ನಾರಾಯಣನು ವಿಶ್ವವೃಕ್ಷಕ್ಕೆ ಪ್ರತೀಕವನ್ನಾಗಿ ಈ ವೃಕ್ಷವನ್ನು ನಿರೂಪಿಸಿರುತ್ತಾನೆ.

**ದೇವರ್ಷೀಣಾಂ ಚ ನಾರದಃ** = ದೇವರ್ಷಿಗಳಲ್ಲಿ ನಾರದನು ನಾನೇ ಆಗಿದ್ದೇನೆ. ದೇವರ್ಷಿಗಳ ಲಕ್ಷಣವನ್ನು ಇದೇ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ ವಿವರಿಸಲಾಗಿದೆ. ದೇವರ್ಷಿಗಳಲ್ಲಿ ನಾರದರು ಸರ್ವಶ್ರೇಷ್ಠರು ; ಭಗವಂತನ ಪರಮಭಕ್ತರು. ಮಹಾಜ್ಞಾನಿಗಳು. ಮಂತ್ರದ್ರಷ್ಟಾರರು. **ದೇವರ್ಷಿರ್ನಾರದಸ್ತಥಾ । ಅಸಿತೋ ದೇವಲೋ ವ್ಯಾಸಃ** ಎಂಬಲ್ಲಿ ಹಿಂದೆಯೂ ಈ ದೇವರ್ಷಿಶ್ರೇಷ್ಠರ ಉಲ್ಲೇಖವು ಬಂದಿರುತ್ತದೆ. ದೇವರ್ಷಿಗಳಲ್ಲಿ ನಾರದರು ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಗನ್ಧರ್ವಾಣಾಂ ಚಿತ್ರರಥಃ** = ಗಂಧರ್ವರೆಂಬುವರು ದೇವಯೋನಿ ವಿಶೇಷಗಳು. ಇವರು ದೇವಲೋಕದಲ್ಲಿ ಗಾನ-ವಾದ್ಯ-ನಾಟ್ಯಾಭಿನಯ ಗಳನ್ನು ಮಾಡಿಕೊಂಡಿರತಕ್ಕವರು. ರೂಪ-ಸೌಂದರ್ಯಸಂಪನ್ನರು. ಗುಹ್ಯಕ ಲೋಕಕ್ಕಿಂತಲೂ ಮೇಲ್ಭಾಗದಲ್ಲೂ ವಿದ್ಯಾಧರಲೋಕಕ್ಕಿಂತಲೂ ಕೆಳಭಾಗ ದಲ್ಲೂ ಗಂಧರ್ವಲೋಕವಿದೆ. ದೇವತೆಗಳಲ್ಲಿ ದೇವತೆಗಳೂ ಮತ್ತು ಕರ್ಮ ದೇವತೆಗಳೂ ಇರುವಂತೆ ಗಂಧರ್ವರಲ್ಲಿಯೂ ಮರ್ತ್ಯ ಮತ್ತು ದಿವ್ಯ ಎಂಬ ಎರಡು ಪಂಗಡಗಳಿವೆ. ಯಾರು ತಮ್ಮ ಪುಣ್ಯದಿಂದ ಮರಣಾನಂತರ ಗಂಧರ್ವಲೋಕಕ್ಕೆ ಹೋಗುತ್ತಾರೆಯೋ–ಅವರು ಮರ್ತ್ಯರು. ಕಲ್ಪದ ಆರಂಭದಿಂದಲೂ ಯಾರು ಗಂಧರ್ವಲೋಕದಲ್ಲಿಯೇ ಇರುತ್ತಾರೆಯೋ ಅವರು ದಿವ್ಯರು. ಅವರಲ್ಲಿ ಮೌನೇಯರು ಮತ್ತು ಪ್ರಾಧೇಯರು ಎಂದು ಎರಡು ಗುಂಪುಗಳಿವೆ. ಕಶ್ಯಪರ ಒಬ್ಬಳು ಪತ್ನಿಯಾದ ಮುನಿ ಎಂಬುವಳಲ್ಲಿ ಹುಟ್ಟಿದವರು ಮೌನೇಯರು. ಮತ್ತೊಬ್ಬಳು ಪತ್ನಿಯಾದ ಪ್ರಧಾ ಎಂಬು ವಳಲ್ಲಿ ಹುಟ್ಟಿದವರು ಪ್ರಾಧೇಯರು. ಭೀಮಸೇನ, ಉಗ್ರಸೇನ, ಸುಪರ್ಣ, ವರುಣ, ಗೋಪತಿ, ಧೃತರಾಷ್ಟ್ರ, ಸೂರ್ಯವರ್ಚಸ, ಸತ್ಯವಾತ, ಅರ್ಕ ಪರ್ಣ, ಪ್ರಯುತ, ಭೀಮ, ಚಿತ್ರರಥ, ಶಾಲಶಿರಸ, ಪರ್ಜನ್ಯ, ಕಲಿ ಮತ್ತು ನಾರದ ಇವರು ಮೌನೇಯರು. (ಮುನಿ ಎಂಬುವಳಲ್ಲಿ ಹುಟ್ಟಿದವರು.) ಸಿದ್ಧ, ಪೂರ್ಣ, ಬರ್ಹಿ, ಪೂರ್ಣಾಯು, ಬ್ರಹ್ಮಚಾರೀ, ರತಿಗುಣ, ಸುಪರ್ಣ, ವಿಶ್ವಾವಸು, ಸುನಂದ, ಭಾನು, ಅತಿಬಾಹು, ಹಾಹಾ, ಹೂಹೂ ಮತ್ತು ತುಂಬುರು–ಇವರು ಪ್ರಾಧೇಯರು. (ಪ್ರಧೆಯಲ್ಲಿ ಹುಟ್ಟಿದವರು.) ಇವರಲ್ಲಿ ಹಾಹಾ, ಹೂಹೂ, ವಿಶ್ವಾವಸು, ತುಂಬುರು ಮತ್ತು ಚಿತ್ರರಥ ಇವರು ಮುಖ್ಯರು. ಇವರೆಲ್ಲರಿಗೂ ಚಿತ್ರರಥನೇ ಅಧಿಪತಿ. ಚಿತ್ರರಥನು ಸಂಗೀತವಿದ್ಯೆಯಲ್ಲಿ ಪ್ರವೀಣನು. ಇವನು ಅರ್ಜುನನ ಮಿತ್ರ. ಇವನಿಗೆ ಅಂಗಾರಪರ್ಣ, ದಗ್ಧರಥ ಎಂಬ ಹೆಸರುಗಳೂ ಇವೆ. ಈ ಚಿತ್ರರಥನೇ ನಾನು ಎನ್ನುತ್ತಾನೆ ಭಗವಂತ.

ಸಿದ್ಧಾನಾಂ ಕಪಿಲೋ ಮುನಿಃ–ಸಿದ್ಧರೆಂದರೆ ಹುಟ್ಟುವಾಗಲೇ ಧರ್ಮ-ಜ್ಞಾನ-ಐಶ್ವರ್ಯ-ವೈರಾಗ್ಯಾದಿ ಶ್ರೇಷ್ಠಗುಣಪರಿಪೂರ್ಣರಾಗಿಯೇ ಹುಟ್ಟಿರತಕ್ಕವರು. ಇಂತಹ ಸಾವಿರಾರು ಸಿದ್ಧರಲ್ಲಿ ಕಪಿಲರು ಮುಖ್ಯರು.

ಪರಮಾತ್ಮನ ಇಪ್ಪತ್ತುನಾಲ್ಕು ಅವತಾರಗಳಲ್ಲಿ ಕಪಿಲರನ್ನು ಐದನೆಯ ಅಂಶಾವತಾರವೆಂದೂ ಹೇಳುತ್ತಾರೆ.

**ಪಞ್ಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।**
**ಪ್ರೋವಾಚಾಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥**

ಕರ್ದಮಮಹರ್ಷಿಯ ಪತ್ನಿಯೂ ಸ್ವಾಯಂಭುವಮನುವಿನ ಮಗಳೂ ಆದ ದೇವಹೂತಿಯು ಇವನ ತಾಯಿ. ಕಪಿಲರಿನ್ನೂ ಗರ್ಭದಲ್ಲಿರುವಾಗಲೇ ಬ್ರಹ್ಮನು ಕರ್ದಮರ ಆಶ್ರಮದ ಸಮೀಪಕ್ಕೆ ಹೋಗಿ ದೇವಹೂತಿಯನ್ನು ಕುರಿತು ಹೀಗೆ ಹೇಳಿದನು :

**ಅಯಂ ಸಿದ್ಧಗಣಾಧೀಶಃ ಸಾಂಖ್ಯಾಚಾರ್ಯಃ ಸುಸಮ್ಮತಃ ।**
**ಲೋಕೇ ಕಪಿಲ ಇತ್ಯಾಖ್ಯಾಂ ಗನ್ತಾ ತೇ ಕೀರ್ತಿವರ್ಧನಃ ॥**

ಭಾಗವತ ೩-೨೪-೧೯

ಇವನು ಸಿದ್ಧರೆಲ್ಲರಿಗೂ ಮುಖ್ಯನಾಗಿ, ಸಾಂಖ್ಯಶಾಸ್ತ್ರಕ್ಕೆ ಆಚಾರ್ಯನಾಗಿ, ಸರ್ವರಿಂದಲೂ ಸಮ್ಮಾನಿತನಾಗಿ, ನಿನ್ನ ಕೀರ್ತಿಯನ್ನು ವರ್ಧಿಸುವವನಾಗಿ ಲೋಕದಲ್ಲಿ ಕಪಿಲ ಎಂಬ ಹೆಸರಿನಿಂದ ಖ್ಯಾತನಾಗುತ್ತಾನೆ.

ಅರುಂಧತೀ, ಶ್ರದ್ಧಾ, ಹವಿರ್ಭುಕ್, ಗತಿ, ಕ್ರಿಯಾ, ಖ್ಯಾತಿ, ಶಾಂತಾ, ಅನಸೂಯಾ, ಕಲಾ–ಈ ಒಂಬತ್ತು ಮಂದಿ ಕಪಿಲನ ಸೋದರಿಯರು. ಜಗತ್ತಿನಲ್ಲಿ ಪ್ರಾಣಿಗಳು ದುಃಖಸಾಗರದಲ್ಲಿ ಬಿದ್ದು ತೊಳಲುತ್ತಿರುವುದನ್ನು ಕಂಡು ದಯಾಮಯನಾದ ಪರಮಾತ್ಮನು ಕಪಿಲನಾಗಿ ಅವತರಿಸಿ ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕಗಳೆಂಬ ದುಃಖತ್ರಯಗಳಿಂದ ಜೀವಕೋಟಿಯು ಪಾರಾಗಲು ದುಃಖ, ದುಃಖಕ್ಕೆ ಕಾರಣ, ದುಃಖನಾಶ ಮತ್ತು ಅದರ ಉಪಾಯಜ್ಞಾನ-ಎಂಬ ನಾಲ್ಕು ಭಾಗಗಳಿಂದ ಕೂಡಿದ ಸಾಂಖ್ಯಶಾಸ್ತ್ರವನ್ನು ರಚಿಸಿದನು. ಸಗರನ ಅರುವತ್ತುಸಾವಿರ ಮಕ್ಕಳನ್ನೂ ತನ್ನ ಕೋಪಾಗ್ನಿಯಿಂದ ದಹಿಸಿದವನೂ ಸಹ ಇವನೇ. ಇಂತಹ ಮಹಾನುಭಾವನಾದ ಕಪಿಲ ಮುನಿಯು ನಾನೇ ಎನ್ನುತ್ತಾನೆ ಭಗವಂತ.

ಈ ಮಹಾತ್ಮನು ನಿರೂಪಿಸಿದ ಸಾಂಖ್ಯಶಾಸ್ತ್ರವು ತೋರಿಕೆಗೆ ನಿರೀಶ್ವರ ದರ್ಶನವಾಗಿ ಕಂಡರೂ ಸರಿಯಾದ ಅರ್ಥದಲ್ಲಿ ಕಾಲವಿಶೇಷದಲ್ಲಿ ಬಳಸಿಕೊಂಡಾಗ ವೇದಾಂತದರ್ಶನಕ್ಕೆ ಸೋಪಾನವೇ ಆಗುವುದು. ಋಷಿಂ

ಪ್ರಸೂತಂ ಕಪಿಲಂ ಎಂದು ಶ್ವೇತಾಶ್ವತರೋಪನಿಷತ್ತು ಈ ಮಹಾತ್ಮನನ್ನು ಸ್ತುತಿಸುತ್ತದೆ.

ಇಲ್ಲಿ ಹೇಳಿರುವ ಮುನಿಯಾದ ಕಪಿಲನೇ ಬೇರೆ ; ಸಾಂಖ್ಯಶಾಸ್ತ್ರ ಪ್ರವರ್ತಕನಾದ ಕಪಿಲನು ಅಗ್ನಿಯ ಅವತಾರ–ಅಗ್ನಿಃ ಸ ಕಪಿಲೋ ನಾಮ ಸಾಂಖ್ಯಶಾಸ್ತ್ರಪ್ರವರ್ತಕಃ ಎಂದು ಕೆಲವರು ಹೇಳುತ್ತಾರೆ.)

o o o

ಕಪಿಲಃ = ಸುಖರೂಪನಾಗಿರುವವನು. ಜಗತ್ತು ಯಾವನಿಂದ ರಕ್ಷಿಸಲ್ಪಟ್ಟು ಲಯಹೊಂದುತ್ತದೆಯೋ ಅವನು. ಸುಖರೂಪಃ ಪಾಲ್ಯತೇ ಲೀಯತೇ ಜಗದನೇನ ಇತಿ ಕಪಿಲಃ । ಪ್ರೀತಿಃ ಸುಖಂ, ಕಂ ಆನನ್ದಃ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ ।
ಸುಖಾದನನಾತ್ ಪಾಲನಾಲ್ಲೀಯನಾಚ್ಚ ।
ಯಂ ವೈ ದೇವಂ ಕಪಿಲಮುದಾಹರನ್ತಿ ॥ (ಸಾಮವೇದ ; ಬಾಭ್ರವೀ ಶಾಖಾ.) (ಮ. ಭಾ.)

ಓಂ ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥೨೭॥

ಕುದುರೆಗಳಲ್ಲಿ–ಅಮೃತದ ಜೊತೆಯಲ್ಲಿ ಉದ್ಭವಿಸಿದ ಉಚ್ಚೈಃಶ್ರವಸ್ಸೆಂಬ ಕುದುರೆ–ಎಂದು ನನ್ನನ್ನು ತಿಳಿ. ಗಜೇಂದ್ರರಲ್ಲಿ ಐರಾವತನೆಂದೂ ನರರಲ್ಲಿ ರಾಜನೆಂದೂ ತಿಳಿ.

* * *

(ಅಶ್ವಾನಾಂ ಅಮೃತೋದ್ಭವಂ ಉಚ್ಚೈಃಶ್ರವಸಂ ಮಾಂ ವಿದ್ಧಿ

ಅಶ್ವಗಳಲ್ಲಿ ಅಮೃತೋದ್ಭವವಾದ ಉಚ್ಚೈಃಶ್ರವಸ್ಸೇ ನಾನು ಎಂದು ತಿಳಿ. ಕ್ಷೀರಸಮುದ್ರದಿಂದ ಸಮುದ್ರಮಥನಕಾಲದಲ್ಲಿ ಹುಟ್ಟಿದ ಅನರ್ಘ್ಯವಾದ ರತ್ನಗಳಲ್ಲಿ ಇದು ಒಂದು.
ಧನ್ವನ್ತರಿಸ್ತಥಾ ಮದ್ಯಂ ಶ್ರೀರ್ದೇವೀ ಕೌಸ್ತುಭೋ ಮಣಿಃ ।
ಶಶಾಙ್ಕೋ ವಿಮಲಶ್ಚಾಪಿ ಸಮುತ್ತಸ್ಥುಃ ಸಮನ್ತತಃ ।
ಉಚ್ಚೈಃಶ್ರವಾ ಹಯೋ ರಮ್ಯಃ ಪೀಯೂಷಂ ತದನನ್ತರಮ್ ॥
(ಹರಿವಂಶ)

ಧನ್ವಂತರಿ, ಮದ್ಯ, ಲಕ್ಷ್ಮೀ, ಕೌಸ್ತುಭಮಣಿ, ಚಂದ್ರ, ಉಚ್ಚೈಃಶ್ರವಸ್ಸೆಂಬ ಕುದುರೆ, ಅನಂತರ ಅಮೃತ ಇವುಗಳು ಅನುಕ್ರಮವಾಗಿ ಸಮುದ್ರದಿಂದ ಹುಟ್ಟಿದುವು. ಆ ಕುದುರೆಯನ್ನು ಇಂದ್ರನು ಪಡೆದುಕೊಂಡನು. ಶ್ರೇಷ್ಠವಾದ ಉಚ್ಚೈಃಶ್ರವಸ್ಸೆಂಬ ಕುದುರೆಯೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಗರಲಂ ಚ ಹವಿರ್ಧಾನೀ ಹಯೋ ಹಸ್ತೀ ಮಣಿಶ್ಚ ಗೌಃ ।**
**ವೃಕ್ಷೋಪ್ಸರಸ ಇನ್ದುಃ ಶ್ರೀರ್ವಾರುಣೀ ವೈದ್ಯರಾಟ್ಸುಧಾ ॥**

ವಿಷ, ಹವಿರ್ಧಾನಿ, ಉಚ್ಚೈಃಶ್ರವಸ್ಸು, ಐರಾವತ, ಕೌಸ್ತುಭ, ಕಾಮಧೇನು, ಪಾರಿಜಾತ, ಅಪ್ಸರೆಯರು, ಚಂದ್ರ, ಮಹಾಲಕ್ಷ್ಮೀ, ವಾರುಣೀ (ಮದ್ಯವಿಶೇಷ), ಧನ್ವಂತರಿ, ಅಮೃತ–ಈ ಹದಿಮೂರು ಸಮುದ್ರೋದ್ಭವ ಗಳಾದ ರತ್ನಗಳೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ಗಜೇನ್ದ್ರಾಣಾಂ ಐರಾವತಂ= ಗಜಶ್ರೇಷ್ಠರಲ್ಲಿ ನಾನು ಐರಾವತನೆಂದು ತಿಳಿ. ಗಜೇಂದ್ರರೆಂದರೆ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ–ಎಂಬ ಎಂಟು ದಿಗ್ಗಜ ಗಳು. ಅವುಗಳಲ್ಲಿ ಮೊದಲನೆಯದೇ ಐರಾವತ. ಇದೂ ಸಹ ಸಮುದ್ರ ಮಥನಕಾಲದಲ್ಲಿಯೇ ಹುಟ್ಟಿದುದು. ಇದು ಇಂದ್ರನ ಪಟ್ಟದಾನೆ. ಮಂಗಲನು ರಥಂತರಸಾಮವನ್ನು ಗಾನಮಾಡುತ್ತಿರಲು ಈ ಆನೆಯು ಹುಟ್ಟಿತೆಂದೂ, ಅದನ್ನು ಗಂಧರ್ವನು ಇರಾವತಿಗೆ ಕೊಟ್ಟನೆಂದೂ, ಅದು ಅವಳ ಮಗನಾದನಂತರ ಆ ಆನೆಗೆ ಐರಾವತವೆಂದು ಹೆಸರು ಬಂದಿತೆಂದೂ ಬ್ರಹ್ಮಾಂಡಪುರಾಣದಲ್ಲಿ ಮತ್ತೊಂದು ಕಥೆಯಿದೆ. ಇವು ತಾತ್ತ್ವಿಕವಾದ ಕಥೆ ಗಳಾದುದರಿಂದ ಪರಸ್ಪರವಿರೋಧವಿಲ್ಲ.

ನಾಗಶ್ರೇಷ್ಠವಾದ ಈ ಐರಾವತವೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ನರಾಣಾಂ ಚ ನರಾಧಿಪಮ್**–ಮನುಷ್ಯರಲ್ಲಿ ನರಾಧಿಪ ಎಂದರೆ ರಾಜ. ಅವನೇ ನಾನು. ನಾ ವಿಷ್ಣುಃ ಪೃಥಿವೀಪತಿಃ–ವಿಷ್ಣುವಿನ ಅಂಶ ವಿಲ್ಲದಿದ್ದರೆ ರಾಜನಾಗುವುದಿಲ್ಲ. ಪೃಥ್ವಿಯ ರಾಜರಲ್ಲಿ ವಿಷ್ಣುವಿನ ಅಂಶವಿದೆ.

ಭೂಲೋಕದಲ್ಲಿ ಜನರನ್ನಾಳುವ ಪ್ರಜಾಧಿಪತಿಯಾದ ರಾಜನೇ ನಾನು ಎನ್ನುತ್ತಾನೆ ಶ್ರೀಕೃಷ್ಣ.)

**ಓಂ ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕನ್ದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥೨೮॥**

ಆಯುಧಗಳಲ್ಲಿ ನಾನು ವಜ್ರವು. ಧೇನುಗಳಲ್ಲಿ ಕಾಮಧೇನುವಾಗಿರುವೆನು. ಪ್ರಜೋತ್ಪತ್ತಿಗೆ ಕಾರಣನಾದ ಕಾಮದೇವನಾಗಿರುವೆನು. ಸರ್ಪಗಳಲ್ಲಿ ವಾಸುಕಿಯಾಗಿರುವೆನು.

* * *

(**ಆಯುಧಾನಾಮಹಂ ವಜ್ರಂ** = ಆಯುಧಗಳಲ್ಲಿ ನಾನು ವಜ್ರಾಯುಧವು. ದಧೀಚಿಮಹರ್ಷಿಯು ಅಥರ್ವಮಹರ್ಷಿಯ ಮಗ. ಆ ಮಹರ್ಷಿಯು ಇಂದ್ರನ ಪ್ರಾರ್ಥನೆಯಂತೆ ಪ್ರಾಣಗಳನ್ನು ತ್ಯಜಿಸಿ ತನ್ನ ಎಲುಬುಗಳನ್ನು ಇಂದ್ರನಿಗೆ ಕೊಟ್ಟನು. ಇಂದ್ರನು ಅವುಗಳಿಂದ ವಜ್ರಾಯುಧವನ್ನು ತಯಾರಿಸಿ ಎಲ್ಲ ಅಸುರರನ್ನೂ ಸಂಹರಿಸಿದನು. ವಜ್ರಾಯುಧದ ವಿಷಯವಾಗಿ ಇಂದ್ರನ ಶತ್ರುವಾದ ವೃತ್ರನೇ ಇಂದ್ರನಿಗೆ ಹೇಳುತ್ತಾನೆ :

**ಮಾಂ ಸಂಶಯಿಷ್ಠಾ ನ ಗದೇವ ವಜ್ರಂ**= ಗದೆಯಂತೆ ವಜ್ರಾಯುಧದಲ್ಲಿಯೂ ಸಂಶಯಪಡಬೇಡ. ನಿನ್ನಿಂದ ಪ್ರಯುಕ್ತವಾದ ಗದೆಯು ನನ್ನನ್ನು ಏನು ಮಾಡಲೂ ಸಮರ್ಥವಾಗಲಿಲ್ಲವೆಂಬುದು ನಿಜ. ಆದರೆ ವಜ್ರಾಯುಧವು ಹಾಗಲ್ಲ. ಅದಕ್ಕೆ ಕಾರಣವಿಷ್ಟೆ.

**ನನ್ವೇಷ ವಜ್ರಸ್ತವ ಶಕ್ರ ತೇಜಸಾ ಹರೇರ್ದಧೀಚೇಸ್ತಪಸಾ ಚ ತೇಜಿತಃ । ತೇನೈವ ಶತ್ರುಂ ಜಹಿ–** ದೇವೀಭಾಗವತ ೬-೬-೫೭

**ವಜ್ರಮಧ್ಯೇ ಪ್ರವಿಶ್ಯಾಽಸೌ ಸಂಸ್ಥಿತೋ ಭಗವಾನ್ ಹರಿಃ ।**
**ತ್ವಷ್ಟಾ ಯದ್ವಜ್ರಂ ಸುಕೃತಂ ಹಿರಣ್ಮಯಂ ಸಹಸ್ರಭೃಷ್ಟಿಂ ಸ್ವಪಾ ಆವರ್ತಯತೇ** ಋ. ಸಂ. ೧-೬-೧

**ಅಷ್ಟಾಶ್ರಿರ್ವೈ ವಜ್ರಃ** ಐ. ಬ್ರಾ. ೨-೧-೧

'ಈ ವಜ್ರಾಯುಧವು ಹರಿಯ ತೇಜಸ್ಸಿನಿಂದಲೂ ದಧೀಚಿಮಹರ್ಷಿಯ ತಪಸ್ಸಿನ ತೇಜಸ್ಸಿನಿಂದಲೂ ಕೂಡಿದುದಾಗಿದೆ. ಆದುದರಿಂದ ವಜ್ರಾಯುಧ

ವನ್ನು ಪ್ರಯೋಗಿಸಿ ಶತ್ರುವನ್ನು (ನನ್ನನ್ನು ) ಸಂಹರಿಸು' ಎನ್ನುತ್ತಾನೆ. ಅಂತಹ ಅಮೋಘವಾದ ಆಯುಧ ವಜ್ರಾಯುಧ. ಅದೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಧೇನೂನಾಮಸ್ಮಿ ಕಾಮಧುಕ್** = ಹಸುಗಳಲ್ಲಿ ನಾನು ಕಾಮಧೇನುವಾಗಿದ್ದೇನೆ. ಕಾಮಧೇನುವು ಸಕಲೇಷ್ಟಾರ್ಥಗಳನ್ನೂ ಕೊಡುವ ಸ್ವರ್ಗಲೋಕದ ಹಸು. ದಕ್ಷನ ಪುತ್ರಿಯಾದ ಸುರಭಿಯ ಮಗಳಾದ ರೋಹಿಣಿಯಲ್ಲಿ ಹುಟ್ಟಿದ್ದು.

**ದಕ್ಷಸ್ಯ ತನಯಾ ಯಾಭೂತ್ ಸುರಭಿರ್ನಾಮ ನಾಮತಃ ।**
**ಗವಾಂ ಮಾತಾ ಮಹಾಭಾಗಾ ಸರ್ವಲೋಕೋಪಕಾರಿಣೀ ॥**

**ತಸ್ಯಾಂ ತು ತನಯಾ ಜಜ್ಞೇ ಕಶ್ಯಪಾತ್ತು ಪ್ರಜಾಪತೇಃ ।**
**ನಾಮ್ನಾ ಸಾ ರೋಹಿಣೀ ಶುಭ್ರಾ ಸರ್ವಕಾಮದುಘಾ ನೃಣಾಮ್ ॥**

**ತಸ್ಯಾಂ ಜಜ್ಞೇ ಶೂರಸೇನಾದ್ವಸೋರತಿತಮೋಜ್ಜ್ವಲಾತ್ ।**
**ಕಾಮಧೇನುರಿತಿ ಖ್ಯಾತಾ ಸರ್ವಲಕ್ಷಣಸಂಯುತಾ ॥**

ಇದೇ ಕಾಲಿಕಾಪುರಾಣದಲ್ಲಿಯೇ ಕಾಮಧೇನುವಿನ ಲಕ್ಷಣವನ್ನು ಹೀಗೆ ಹೇಳಿದೆ.

**ಸಾ ಸಿತಾಭ್ರಪ್ರತೀಕಾಶಾ ಚತುರ್ವೇದಚತುಷ್ಪದಾ ।**
**ಸ್ತನೈಶ್ಚತುರ್ಭಿರ್ಧರ್ಮಾರ್ಥಕಾಮಪ್ರಸವಕಾರಿಣೀ ॥**

ಕಾಮಧೇನುವು ಬಿಳಿಯ ಮೋಡದಂತೆ ಪ್ರಕಾಶಮಾನವಾದ ಬಣ್ಣವುಳ್ಳದ್ದಾಗಿದೆ. ನಾಲ್ಕು ವೇದಗಳೇ ಅದರ ನಾಲ್ಕು ಕಾಲುಗಳಾಗಿವೆ. ಅದರಲ್ಲಿರುವ ನಾಲ್ಕು ಮೊಲೆಗಳಿಂದ ಅದು ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಕೊಡುತ್ತದೆ. (ಧರ್ಮಾರ್ಥ-ಕಾಮ ಪ್ರಜೆಗಳನ್ನು ಕೊಡುತ್ತದೆ.)

ಕಾಮಧೇನುವಿನ ವಂಶದಲ್ಲಿ ಹುಟ್ಟಿದ ನಂದಿನೀ ಎಂಬುದೇ ವಸಿಷ್ಠ ಮಹರ್ಷಿಯ ಹೋಮಧೇನುವಾದ ಶಬಲಾ ಎಂಬುದು.

ಇಂತಹ ಅಮೋಘವಾದ ಚತುರ್ವಿಧಪುರುಷಾರ್ಥಗಳನ್ನೂ ದಯಪಾಲಿಸುವ ಕಾಮಧೇನುವೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಪ್ರಜನಶ್ಚಾಸ್ಮಿ ಕನ್ದರ್ಪಃ** = ಪ್ರಜನ ಎಂದರೆ ಪ್ರಜೆಗಳ ಉತ್ಪತ್ತಿಗೆ ಕಾರಣನಾದ ಕಂದರ್ಪನು, ಎಂದರೆ ಕಾಮದೇವನು ನಾನೇ ಎನ್ನುತ್ತಾನೆ ಶ್ರೀಕೃಷ್ಣ.

೩ನೆಯ ಅಧ್ಯಾಯದ ೧೧ನೆಯ ಶ್ಲೋಕದಲ್ಲಿ ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಎಂದೇ ಹೇಳಿದ್ದಾನೆ. ಆದುದರಿಂದ ಇಲ್ಲಿ ಪ್ರಜೆಗಳ ಉತ್ಪತ್ತಿಯಲ್ಲಿ ನಾನು ಕಂದರ್ಪನೆಂದರೆ ಧರ್ಮಾನುಕೂಲವಾದ ಸಂತಾನಕ್ಕೆ ನಾನು ಕಂದರ್ಪರೂಪನಾಗುತ್ತೇನೆ ಎಂದರ್ಥ.

**ಸರ್ಪಾಣಾಮಸ್ಮಿ ವಾಸುಕಿಃ** = ಸರ್ಪಗಳಲ್ಲಿ ನಾನು ವಾಸುಕಿಯಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ವಾಸುಕಿಯು ಸಮಸ್ತಸರ್ಪಗಳಿಗೂ ರಾಜ ಮತ್ತು ಭಗವಂತನ ಭಕ್ತ. ಇವನು ಆಸ್ತೀಕನ ಸೋದರಮಾವ. ಕಶ್ಯಪರಿಂದ ಕದ್ರುವಿನಲ್ಲಿ ಹುಟ್ಟಿದವನು. ಸಮುದ್ರಮಥನಕ್ಕಾಗಿ ಅವನನ್ನೇ ದೇವ-ದಾನವರು ಹಗ್ಗವನ್ನಾಗಿ ಮಾಡಿಕೊಂಡಿದ್ದರು. ಇಂತಹ ಮಹಾನುಭಾವನಾದ ವಾಸುಕಿಯ ರೂಪವಾಗಿದ್ದೇನೆ ಎನ್ನುತ್ತಾನೆ.)

**ಓಂ ಅನನ್ತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥**

ನಾಗಗಳಲ್ಲಿ ನಾನು ಅನಂತನಾಗಿರುವೆನು. ಜಲಚರಗಳಿಗೆ ಒಡೆಯನಾದ ವರುಣನಾಗಿರುವೆನು. ಪಿತೃಗಳಲ್ಲಿ ಅರ್ಯಮನಾಗಿರುವೆನು. ಶಾಸನ ಮಾಡುವವರಲ್ಲಿ ನಾನು ಯಮನಾಗಿರುವೆನು.

* * *

(**ಅನನ್ತಶ್ಚಾಸ್ಮಿ ನಾಗಾನಾಂ** = ಕಶ್ಯಪರಿಗೆ ಕದ್ರುವಿನಲ್ಲಿ ಹುಟ್ಟಿದ ಹಿರಿಯ ಮಗನೇ ಅನಂತ ಅಥವಾ ಶೇಷ. ಪರಮಾತ್ಮನ ಆಜ್ಞೆಯಂತೆ ಇವನು ಪೃಥಿವೀತತ್ತ್ವವನ್ನು ತನ್ನ ಸಾವಿರ ಹೆಡೆಗಳಲ್ಲಿ ಧರಿಸಿದ್ದಾನೆ.

**ಶೇಷಂ ಚಾಕಲ್ಪಯದ್ದೇವಮನನ್ತಂ ವಿಶ್ವರೂಪಿಣಮ್ ।**
**ಯೋ ಧಾರಯತಿ ಭೂತಾನಿ ಧರಾಂ ಚೇಮಾಂ ಸಪರ್ವತಾಮ್ ॥**

ಭೀಷ್ಮ ೬೭-೧೩

**ವರುಣೋ ಯಾದಸಾಮಹಮ್** = ಜಲಚರಗಳಿಗೆ ಒಡೆಯನಾದ

ವರುಣನು ನಾನೇ ಎನ್ನುತ್ತಾನೆ ಶ್ರೀಕೃಷ್ಣ. ಕಶ್ಯಪರಿಗೆ ಅದಿತಿಯಲ್ಲಿ ಹುಟ್ಟಿದವನಿವನು. ದ್ವಾದಶಾದಿತ್ಯರಲ್ಲಿ ಒಬ್ಬನಾದ ಇವನೂ ಒಬ್ಬ ಲೋಕಪಾಲ. ಅರ್ಜುನನಲ್ಲಿದ್ದ ಗಾಂಡೀವಧನುಸ್ಸು, ಅಕ್ಷಯತೂಣೀರಗಳು ಮತ್ತು ಕಪಿಧ್ವಜವಿದ್ದ ರಥ ಎಲ್ಲವೂ ವರುಣನಿಂದಲೇ ಪ್ರಾಪ್ತವಾದುವುಗಳು. ಇವನು ನೀರಿನಲ್ಲೇ ವಾಸಮಾಡಿಕೊಂಡಿರತಕ್ಕವನು. ಸತ್ಯಾನೃತಗಳಿಗೆ ಸಾಕ್ಷಿಯಾಗಿ ರುವ ಭಗವಂತನ ಸ್ವರೂಪ. ಸತ್ಯಾನೃತೇ ಅವಪಶ್ಯನ್ ಜನಾನಾಮ್ । ಅಂಶದಿಂದ ಇವನು ಜಲದೇವತೆಯೂ ಆಗಿದ್ದಾನೆ. ಇಂತಹ ಮಹಾನುಭಾವ ನಾದ ವರುಣನು ನಾನೇ ಎಂದು ಭಗವಂತನು ಹೇಳುತ್ತಾನೆ.

**ಪಿತೄಣಾಮರ್ಯಮಾ ಚಾಸ್ಮಿ** = ಪಿತೃದೇವತೆಗಳಲ್ಲಿ ನಾನು ಆರ್ಯಮಣನಾಗಿದ್ದೇನೆ.

**ಕವ್ಯವಾಹೋಽನಲಃ ಸೋಮೋ ಯಮಶ್ಚೈವಾರ್ಯಮಾ ತಥಾ ।**
**ಅಗ್ನಿಷ್ವಾತ್ತಾ ಬರ್ಹಿಷದಸ್ತ್ರಯಶ್ಚಾನ್ಯಾ ಹ್ಯಮೂರ್ತಯಃ ॥**

ಶಿವಪುರಾಣ ೬೩-೨

ಕವ್ಯವಾಹ, ಅನಲ, ಸೋಮ, ಯಮ, ಅರ್ಯಮಾ, ಅಗ್ನಿಷ್ವಾತ್ತರು ಮತ್ತು ಬರ್ಹಿಷದರು–ಇವರು ಪಿತೃದೇವತೆಗಳು. ದ್ವಾದಶಾದಿತ್ಯರಲ್ಲೊಬ್ಬ ನಾದ ಅರ್ಯಮಣನು ಇವನಲ್ಲ.

ಅರ್ಯಮಣನು ಸಮಸ್ತಪಿತೃದೇವತೆಗಳಿಗೂ ಶ್ರೇಷ್ಠನಾದುದರಿಂದ ಭಗವಂತನು ಪಿತೃದೇವತೆಗಳಲ್ಲಿ ನಾನು 'ಅರ್ಯಮಾ' ಎಂದು ಹೇಳಿದ್ದಾನೆ.

**ಯಮಃ ಸಂಯಮತಾಮಹಮ್** = ಪ್ರಾಣಿಗಳನ್ನು ನಿಯಮನ ಮಾಡುವವರಲ್ಲಿ ನಾನು ಯಮನಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಜೀವ ಕೋಟಿಯನ್ನು ನಿಯಮನಮಾಡುವುದರಲ್ಲಿ ಅವರ ಪಾಪ-ಪುಣ್ಯಗಳಿಗೆ ತಕ್ಕಂತೆ ಯಾವ ವಿಧವಾದ ದಯೆ-ದಾಕ್ಷಿಣ್ಯಗಳೂ ಇಲ್ಲದೇ ಕರ್ಮಫಲ ಗಳನ್ನು ಕೊಡುವುದರಲ್ಲಿ ಯಮನು ಪ್ರಸಿದ್ಧನಾಗಿದ್ದಾನೆ. ಇವನು ಸೂರ್ಯನ ಪುತ್ರ. ಪ್ರಾಣಿಗಳ ಶುಭಾಶುಭಕರ್ಮಗಳಿಗೆ ಸಾಕ್ಷೀಭೂತನಾಗಿರತಕ್ಕವನು. ದಿಕ್ಪಾಲಕರಲ್ಲಿ ಇವನೂ ಒಬ್ಬನಾಗಿದ್ದಾನೆ. ದಿಕ್ಪಾಲಕರು ಎಂಟು ಮಂದಿ ಅಥವಾ ಕೆಲವು ಪುರಾಣಗಳ ಪ್ರಕಾರ ಹತ್ತುಮಂದಿ–ಇಂದ್ರ, ಅಗ್ನಿ, ಯಮ,

ನಿರ್ಋತಿ, ವರುಣ, ವಾಯು, ಕುಬೇರ, ಈಶಾನ, ಬ್ರಹ್ಮಾ ಮತ್ತು ಅನಂತ. (ಬೃಹದ್ಧರ್ಮಪುರಾಣ.)

ಅಣಿಮಾಂಡವ್ಯನ ಶಾಪದಿಂದಾಗಿ ಯಮನೇ ವಿದುರನಾಗಿ ಹುಟ್ಟಿದ್ದನು. ಇವನು ನಾರಾಯಣನಿಂದ ಶಿವಸಹಸ್ರನಾಮದ ಉಪದೇಶವನ್ನು ಪಡೆದು ಅದನ್ನು ನಚೀಕೇತನಿಗೆ ಉಪದೇಶಿಸುತ್ತಾನೆ. ನಚೀಕೇತನಿಗೆ ಬ್ರಹ್ಮ ವಿದ್ಯೆಯ ಉಪದೇಶಕನು ಇವನೇ. ಇವನು ಪರಮಜ್ಞಾನೀ. ಇಂತಹ ಧರ್ಮಾತ್ಮನಾದ ಯಮನು ನಾನೇ ಎನ್ನುತ್ತಾನೆ ಭಗವಂತ.

ವಾಸುಕಿ ಮತ್ತು ಅನಂತ ಇವು ಸರ್ಪಭೇದಗಳು. ವಾಸುಕಿ ಮುಂತಾದವರು ನಾಗಗಳು. ಅದಕ್ಕಿಂತ ಕೀಳ್ದರ್ಜೆಗಳಾದ ಅಲಗರ್ದ ಮುಂತಾದುವು ಸರ್ಪಗಳು ಎಂದು ಕುಲ್ಲೂಕರು ಹೇಳುತ್ತಾರೆ.

ಸರ್ಪಗಳಿಗೆ ಒಂದೊಂದೇ ಹೆಡೆಗಳು ; ನಾಗಗಳಿಗೆ ಅನೇಕ ಹೆಡೆಗಳು ಎಂದು ಶ್ರೀರಾಮಾನುಜ, ಶ್ರೀವಿದ್ಯಾಧಿರಾಜ ಮುಂತಾದವರ ಅಭಿಪ್ರಾಯ. ವಿಷವಿಲ್ಲದುವುಗಳು ನಾಗಗಳು ; ವಿಷವುಳ್ಳವುಗಳು ಸರ್ಪಗಳು—ಎಂದು ಶ್ರೀಧರ, ಕಥನ ಮುಂತಾದವರು ಹೇಳುತ್ತಾರೆ.

ವಾಸುಕಿ ಮತ್ತು ಅನಂತ ಇವರಿಬ್ಬರನ್ನೂ ಪರ್ಯಾಯವಾಗಿಯೇ ಉಪಯೋಗಿಸಿರುವ ಜಾಗಗಳೂ ಉಂಟು.

ಸರ್ಪಗಳ ವಾಸ ಮಹಾತಲದಲ್ಲಿ ; ನಾಗಗಳ ವಾಸ ಪಾತಾಲದಲ್ಲಿ.

ಬಿಳೀ ಬಣ್ಣದ ಹಾವುಗಳು ನಾಗಗಳು. ಕೆಂಪು ಮುಂತಾದ ಬಣ್ಣಗಳ ಹಾವುಗಳು ಸರ್ಪಗಳು—ಎಂದು ಕೆಲವರು ಹೇಳುತ್ತಾರೆ.

ವಾಸುಕಿ, ಶೇಷ ಮುಂತಾದುವುಗಳನ್ನು ತಾತ್ತ್ವಿಕವಾಗಿ ತೆಗೆದುಕೊಳ್ಳಬೇಕೆಂದು ಜ್ಞಾನಿಗಳು ಹೇಳುತ್ತಾರೆ.)

**ಓಂ ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥೩೦॥**

ದೈತ್ಯರಲ್ಲಿ ನಾನು ಪ್ರಹ್ಲಾದನಾಗಿದ್ದೇನೆ. ಗಣಕರಲ್ಲಿ ನಾನು ಕಾಲ

ನಾಗಿದ್ದೇನೆ. ಮೃಗಗಳಲ್ಲಿ ನಾನು ಮೃಗೇಂದ್ರನಾಗಿದ್ದೇನೆ. ಪಕ್ಷಿಗಳಲ್ಲಿ ವೈನತೇಯನಾಗಿದ್ದೇನೆ.

* * *

**(ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ**=ದೈತ್ಯರೆಂದರೆ ಕಶ್ಯಪನಿಗೆ ದಿತಿಯಲ್ಲಿ ಹುಟ್ಟಿದ ಮಕ್ಕಳು. ಅವರಲ್ಲಿ ಹಿರಣ್ಯಕಶಿಪುವೇ ಮೊದಲಿಗನು. ಅವನ ಮಗ ಪ್ರಹ್ಲಾದ. ಹಿರಣ್ಯಕಶಿಪುವು ನಾರಾಯಣನ ಪರಮದ್ವೇಷೀ. ಅವನ ಮಗ ನಾರಾಯಣನ ಪರಮಭಕ್ತ ; ಸರ್ವಸದ್ಗುಣಸಂಪನ್ನನು ; ಧರ್ಮಾತ್ಮನು. ಪರಮಾತ್ಮನ ವಿಷಯದಲ್ಲಿ ಪರಮಶ್ರದ್ಧಾಳು ; ನಿಷ್ಕಾಮಿ ; ತನ್ನ ಸ್ವಾರ್ಥಕ್ಕಾಗಿ ಭಗವಂತನಿಂದ ಯಾವುದನ್ನೂ ಬೇಡಿಕೊಂಡವನಲ್ಲ. ಪ್ರತ್ಯಕ್ಷನಾದ ನೃಸಿಂಹನು ಯಾವ ವರ ಬೇಕೆಂದು ಕೇಳಿದಾಗ ನನಗೆ ನಿನ್ನಲ್ಲಿ ಅನನ್ಯಭಕ್ತಿಯು ಸ್ಥಿರವಾಗಿ ಉಳಿಯಲಿ–ಎಂದು ಕೇಳಿಕೊಂಡ ಮಹಾನುಭಾವ. ನಾರಾಯಣನ ನಾಮಸ್ಮರಣೆಯ ಹೊರತಾಗಿ ಬೇರೆಯವರ ಸ್ಮರಣೆಯೇ ಅವನಿಗೆ ಬರುತ್ತಿರಲಿಲ್ಲ. ಅಂತಹ ಪರಮಭಕ್ತನಾದ ಪ್ರಹ್ಲಾದನು ನಾನೇ ಎನ್ನುತ್ತಾನೆ ಶ್ರೀಕೃಷ್ಣ.

**ಕಾಲಃ ಕಲಯತಾಮಹಮ್**= ಎಣಿಸುವವರಲ್ಲಿ ನಾನು ಕಾಲನಾಗಿದ್ದೇನೆ. ಎಣಿಸುವುದೆಂದರೆ : ಕ್ಷಣ, ಲವ, ನಿಮೇಷ, ಕಾಷ್ಠಾ, ಕಲಾ, ಘಟಿಕಾ, ಮುಹೂರ್ತ, ಅಹೋರಾತ್ರ, ಮಾಸ, ಸಂವತ್ಸರ–ಇತ್ಯಾದಿಗಳನ್ನು ಎಣಿಸುವವರು. ಇವರಲ್ಲಿ ನಾನು ಕಾಲನಾಗಿದ್ದೇನೆ–ಎನ್ನುತ್ತಾನೆ ಶ್ರೀಕೃಷ್ಣ.

ಕಾಲವು ಭಗವಂತನ ಶರೀರ.

**ಕಾಲಃ ಸೃಜತಿ ಭೂತಾನಿ ಕಾಲಃ ಸಂಹರತಿ ಪ್ರಜಾಃ ।**
**ಕಲನಾತ್ಸರ್ವಭೂತಾನಾಂ ಸ ಕಾಲಃ ಪರಿಕೀರ್ತಿತಃ ॥**

**ಮೃಗಾಣಾಂ ಚ ಮೃಗೇನ್ದ್ರೋಽಹಂ** = ಮೃಗಗಳಲ್ಲಿ ನಾನು ಮೃಗೇಂದ್ರನಾಗಿದ್ದೇನೆ. **ಸಿಂಹೋ ಮೃಗೇನ್ದ್ರಃಪಞ್ಚಾಸ್ಯಃ**–ಸಿಂಹಕ್ಕೆ ಮೃಗೇಂದ್ರ ಎಂಬ ಹೆಸರೂ ಇದೆ. ಇದು ಬಹುಬಲಿಷ್ಠವಾದ ಪ್ರಾಣಿ. ಬೃಹದಾಕಾರವುಳ್ಳ ಆನೆಗೆ ಸಿಂಹದ ಸ್ವಪ್ನವಾಯಿತೆಂದರೆ ಸತ್ತೇಹೋಗುತ್ತದೆ. ಇಂತಹ ಸಿಂಹದಲ್ಲಿ ನಾನಿದ್ದೇನೆ. ಮೃಗರಾಜನೇ ನಾನು ಎನ್ನುತ್ತಾನೆ.

**ವೈನತೇಯಶ್ಚ ಪಕ್ಷಿಣಾಮ್** = ಪಕ್ಷಿಗಳಲ್ಲಿ ನಾನು ವೈನತೇಯನು.

ಕಶ್ಯಪರಿಗೆ ವಿನತೆಯಲ್ಲಿ ಹುಟ್ಟಿದ ಮಗ. ಆದುದರಿಂದಲೇ ಇವನು ವೈನತೇಯ. ವಿಷ್ಣುವಿನ ವಾಹನವೂ ಇವನೇ. ಧ್ವಜದಲ್ಲಿರತಕ್ಕವನೂ ಇವನೇ. ತನ್ನ ಭುಜಬಲ-ಪರಾಕ್ರಮಗಳಿಂದ ದೇವತೆಗಳಲ್ಲಿದ್ದ ಅಮೃತವನ್ನು ಅಪಹರಿಸಿ ತಂದು ತನ್ನ ತಾಯಿಯನ್ನು ದಾಸ್ಯಭಾವದಿಂದ ಬಿಡುಗಡೆಮಾಡಿದ ಮಹಾನುಭಾವ. ಪಕ್ಷಿಗಳಿಗೆ ಇಂದ್ರನಾಗೆಂದು ದೇವೇಂದ್ರನೇ ಇವನನ್ನು ಇಂದ್ರಪದವಿಯಲ್ಲಿ ಕುಳ್ಳಿರಿಸಿ ಅಭಿಷೇಕಮಾಡುತ್ತಾನೆ. ಇಂತಹ ಮಹಾಭಕ್ತನಾದ, ಪಕ್ಷಿರಾಜನಾದ, ಶ್ರುತಿಸ್ವರೂಪನಾದ ವೈನತೇಯನೇ ನಾನು ಎನ್ನುತ್ತಾನೆ ಭಗವಂತ.)

**ಓಂ ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

ಪಾವಿತ್ರ್ಯವನ್ನುಂಟುಮಾಡುವವರಲ್ಲಿ ನಾನು ವಾಯುವಾಗಿದ್ದೇನೆ. ಶಸ್ತ್ರಧಾರಿಗಳಲ್ಲಿ ನಾನು ಶ್ರೀರಾಮನಾಗಿದ್ದೇನೆ. ಹಿಂಸ್ರವಾದ ಜಲಚರಪ್ರಾಣಿಗಳಲ್ಲಿ ನಾನು ಮೊಸಳೆಯಾಗಿದ್ದೇನೆ. ಪ್ರವಾಹಗಳಲ್ಲಿ ಗಂಗೆಯಾಗಿದ್ದೇನೆ.

* * *

(**ಪವನಃ ಪವತಾಮಸ್ಮಿ** = ಶುದ್ಧಿಗೊಳಿಸುವವರಲ್ಲಿ ನಾನು ವಾಯು ಎನ್ನುತ್ತಾನೆ ಪರಮಾತ್ಮ. ಗಾಳಿಗೆ ತೆರವಾಗಿ ಬಿಟ್ಟರೆ ಎಂತಹ ದುರ್ವಾಸನೆಯೂ ಹೋಗಿಬಿಡುತ್ತದೆ. ಗಾಳಿಯಿಲ್ಲದ ಜಾಗದಲ್ಲಿ ಸ್ವಾಭಾವಿಕವಾಗಿಯೇ ದುರ್ವಾಸನೆಯಿರುತ್ತದೆ. ಆದುದರಿಂದ ಸರ್ವಪದಾರ್ಥಗಳನ್ನೂ ಶುದ್ಧಿಗೊಳಿಸುವುದು ವಾಯುವೇ ಆಗಿದೆ. ಅಂತಹ ವಾಯುವೇ ನಾನು ಎನ್ನುತ್ತಾನೆ. **ಪವತಾಂ**–ಎಂಬುದಕ್ಕೆ ವೇಗವಂತರಲ್ಲಿ ಎಂದೂ ಅರ್ಥ. ವೇಗವಂತರಲ್ಲಿ (ಸಾಮಾನ್ಯವಾಗಿ) ಗಾಳಿಯೇ ಬಹುವೇಗವುಳ್ಳದ್ದು. ಚಂಡಮಾರುತವು ಅನೇಕ ಯೋಜನಗಳ ದೂರ ಮಿತಿಮೀರಿದ ವೇಗದಲ್ಲಿ ಹೋಗುತ್ತಿರುತ್ತದೆ.

**ರಾಮಃ ಶಸ್ತ್ರಭೃತಾಮಹಮ್** = ಶಸ್ತ್ರಧಾರಿಗಳಲ್ಲಿ ನಾನು ಶ್ರೀರಾಮನಾಗಿದ್ದೇನೆ. ಇಲ್ಲಿ ರಾಮ ಎಂದರೆ ದಶರಥನ ಮಗನಾದ ರಾಮನೇ ವಿವಕ್ಷಿತ.

**ಝಷಾಣಾಂ ಮಕರಶ್ಚಾಸ್ಮಿ** = ಝಷಗಳು ಎಂದರೆ ಹಿಂಸ್ರವಾದ ಮತ್ತು ನೀರಿನಲ್ಲಿಯೇ ಜೀವಿಸುವ ಜಲಚರ ಪ್ರಾಣಿಗಳು. ತಿಮಿಂಗಿಲ ಮುಂತಾದುವು. ಇವುಗಳಲ್ಲಿ ಮಕರವು ನಾನು ಎನ್ನುತ್ತಾನೆ ಶ್ರೀಕೃಷ್ಣ.

ಮೊಸಳೆಯು ಬಲಶಾಲಿಯಾದ ಜಲಚರಪ್ರಾಣಿ. ನೀರಿನಲ್ಲಿರುವಾಗ ಅದಕ್ಕೆ ಮಹಾಬಲಶಾಲಿಯಾದ ಆನೆಯನ್ನೂ ಸೆಳೆಯುವ ಸಾಮರ್ಥ್ಯವು ಉಂಟು. ಮೊಸಳೆಗೆ ಅಷ್ಟೊಂದು ಬಲವಿದೆ. ಆದುದರಿಂದ ಜಲಚರಗಳಲ್ಲಿ ಮೊಸಳೆಯೇ ನಾನು ಎಂದಿದ್ದಾನೆ ಶ್ರೀಕೃಷ್ಣ.

**ಸ್ರೋತಸಾಮಸ್ಮಿ ಜಾಹ್ನವೀ=** ನದಿಗಳಲ್ಲಿ ನಾನು ಗಂಗೆ ಎನ್ನುತ್ತಾನೆ ಶ್ರೀಕೃಷ್ಣ. ಗಂಗೆಯು ಪರಮಪಾವನೆಯೆಂಬುದು ಲೋಕಪ್ರಸಿದ್ಧವೇ ಆಗಿದೆ.

**ಧಾತುಃ ಕಮಣ್ಡಲುಜಲಂ ತದುರುಕ್ರಮಸ್ಯ**
**ಪಾದಾವನೇಜನಪವಿತ್ರತಯಾ ನರೇನ್ದ್ರ ।**
**ಸ್ವರ್ಧುನ್ಯಭೂನ್ನಭಸಿ ಸಾ ಪತತೀ ನಿಮಾರ್ಷ್ಟಿ**
**ಲೋಕತ್ರಯಂ ಭಗವತೋ ವಿಶದೇವ ಕೀರ್ತಿಃ ॥**

ಭಾಗವತ ೮-೨೧-೪

ಬ್ರಹ್ಮನ ಕಮಂಡಲುವಿನಲ್ಲಿದ್ದ ಜಲವು ಭಗವಂತನ ಚರಣಗಳನ್ನು ತೊಳೆದನಂತರ ಪರಮಪವಿತ್ರವಾಗಿ ಸ್ವರ್ಗಗಂಗೆಯಾಯಿತು. ಆ ಗಂಗೆಯೇ ಭಗವಂತನ ನಿರ್ಮಲಕೀರ್ತಿಯಂತೆ ಆಕಾಶದಿಂದ ಭೂಲೋಕಕ್ಕೆ ಬಂದು ಮೂರು ಲೋಕಗಳನ್ನೂ ಪಾವನಗೊಳಿಸುತ್ತಿದ್ದಾಳೆ. ರಭಸದಿಂದ ಬರುತ್ತಿದ್ದ ಗಂಗಾನದಿಯನ್ನು ಜಹ್ನು ಎಂಬ ಋಷಿಯು ಆಪೋಶನಮಾಡಿಬಿಟ್ಟನು. ಭಗೀರಥನು ಪ್ರಾರ್ಥಿಸಿದನಂತರ ಕಿವಿಯ ಮೂಲಕವಾಗಿ ಬಿಟ್ಟುಬಿಟ್ಟನು. ಆದುದರಿಂದ ಇವಳಿಗೆ ಜಾಹ್ನವೀ (ಜಹ್ನುಮಹರ್ಷಿಯ ಮಗಳು) ಎಂದೂ ಹೆಸರಾಯಿತು.

ಪ್ರಪಂಚದಲ್ಲಿರುವ ಯಾವುದೇ ನದಿಯ ನೀರಾಗಲೀ ಕಾಲಾಂತರದಲ್ಲಿ ಕೆಟ್ಟೀತು. ಆದರೆ ಪರ್ವತದಲ್ಲೇ ಇರುವ ಗಂಗಾನದಿಯ ನೀರು ಮಾತ್ರ ಯಾವುದೇ ಕಾಲಕ್ಕೂ ಕೆಡುವುದಿಲ್ಲವೆಂದು ವೈಜ್ಞಾನಿಕರೂ ಒಪ್ಪಿಕೊಂಡಿದ್ದಾರೆ.

**ಶರೀರೇ ಜರ್ಝರೀಭೂತೇ ವ್ಯಾಧಿಗ್ರಸ್ತೇ ಕಳೇಬರೇ ।**
**ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ ॥**

ಶರೀರವು ಜರ್ಝರಿತವಾಗಿರಲಾಗಿ, ಕಳೇಬರವು ನಾನಾವಿಧವಾದ

ವ್ಯಾಧಿಗಳಿಂದ ಆಕ್ರಮಿಸಲ್ಪಡುತ್ತಿರಲಾಗಿ–ಆ ಸಮಯದಲ್ಲಿನ ಔಷಧವೆಂದರೆ ಜಾಹ್ನವೀತೋಯ. (ಗಂಗಾಜಲ) ವೈದ್ಯನೆಂದರೆ ಹರಿ ಅಥವಾ ನಾರಾಯಣ.)

o o o

ಮೊದಲು ಆದಿಪಿತಾಮಹನ ಕಮಂಡಲುವಿನಲ್ಲಿದ್ದ ಜಲ. ಅನಂತರ ಭಗವಂತನಾದ ಫಣಿಶಾಯಿಯಾದ ನಾರಾಯಣನ ಪಾವನವಾದ ಪಾದೋದಕ. ಅನಂತರ ಭಗವಂತನಾದ ಶಂಭುವಿನ ಜಟೆಗೆ ಭೂಷಣರತ್ನವಾದವಳು. ಜಹ್ನುಮಹಾಮುನಿಯ ಕನ್ಯೆ. ಕಲ್ಮಷನಾಶಿನೀ ಭಗವತಿಯಾದ ಭಾಗೀರಥೀ. ತ್ರಿಮೂರ್ತಿಗಳ ಸಂಸರ್ಗದಿಂದಲೂ ಪವಿತ್ರಳಾದವಳು.

**ಆದಾವಾದಿಪಿತಾಮಹಸ್ಯ ನಿಯಮವ್ಯಾಪಾರಪಾತ್ರೇ ಜಲಂ**
**ಪಶ್ಚಾತ್ಪನ್ನಗಶಾಯಿನೋ ಭಗವತಃ ಪಾದೋದಕಂ ಪಾವನಮ್ ।**
**ಭೂಯಃ ಶಂಭುಜಟಾವಿಭೂಷಣಮಣಿರ್ಜಹ್ನೋರ್ಮಹರ್ಷೇರಿಯಂ**
**ಕನ್ಯಾ ಕಲ್ಮಷನಾಶಿನೀ ಭಗವತೀ ಭಾಗೀರಥೀ ಪಾತು ಮಾಮ್ ॥**

(ಶಂ. ಭಾ.)

ಇಂತಹ ಪವಿತ್ರತಮಳಾದ ಜಾಹ್ನವಿಯು ನಾನು ಎನ್ನುತ್ತಾನೆ ಭಗವಂತ.

**ಪವತಾಂ** = ಪವಿತ್ರಮಾಡುವ ವಸ್ತುಗಳಲ್ಲಿ. **ಪವತಾಂ**= ಗಮನ ಸ್ವಭಾವವುಳ್ಳವುಗಳಲ್ಲಿ. **ಶಸ್ತ್ರಭೃತಾಂ ಅಹಂ ರಾಮಃ** = ಇಲ್ಲಿ ಹೇಳಿರುವ ರಾಮನು ಪರಶುರಾಮನನ್ನು ಕೂಡ ಜಯಿಸಿದ ರಾವಣಹಂತಕನಾದ ಶ್ರೀರಾಮ. ಇಲ್ಲಿ ಶಸ್ತ್ರಧಾರಣೆಯಲ್ಲಿ ಮಾತ್ರ ವಿಭೂತಿತ್ವವು ವಿವಕ್ಷಿತ. ಹಿಂದೆ ಮತ್ತು ಮುಂದೆ ಬರುವ ವಿಷಯಗಳ ಹೋಲಿಕೆಯಂತೆ ರಾಮನೇ ವಿಭೂತಿಯೆಂದು ತಿಳಿಯಬಾರದು. ರಾಮನು ಅರ್ಥಾಂತರವಲ್ಲ.

ಆದಿತ್ಯನೇ ಮುಂತಾದ ಕ್ಷೇತ್ರಜ್ಞರು ತಮಗೆಲ್ಲಾ ಆತ್ಮನಾಗಿರುವ ಭಗವಂತನಿಗೆ ಶರೀರವಾಗಿ ಅವನಿಗೆ ಧರ್ಮಭೂತರಾಗಿರುವುದರಿಂದ ಶಸ್ತ್ರ ಧಾರಿತ್ವದ ಸ್ಥಾನದಲ್ಲಿರುವವರು. (ರಾ. ಭಾ.)

**ರಾಮಃ** = ಆನಂದರೂಪನೂ, ಪೂರ್ಣನೂ, ಲೋಕವನ್ನು ರಮಿಸುವವನೂ ಆಗಿರುವುದರಿಂದ ಅವನು ರಾಮ.

ಆನನ್ದರೂಪತ್ವಾತ್ ಪೂರ್ಣತ್ವಾತ್ ಲೋಕರಮಣತ್ವಾಚ್ಚ ರಾಮಃ

ಆನನ್ದರೂಪೋ ನಿಷ್ಪರಿಮಾಣಃ ಏಷ ಲೋಕಶ್ಚ ಏತಸ್ಮಾದ್ರಮತೇ ತೇನ ರಾಮಃ (ಶಾಂಡಿಲೀಶಾಖೆ)

**ರಶ್ಚ ಅಮಶ್ಚ** ಎಂದು ವ್ಯುತ್ಪತ್ತಿ. ರಃ ಎಂದರೆ ರಮಿಸುವವನು, ಅಮಃ ಎಂದರೆ ಪ್ರಮೆ (ಪರಿಚ್ಛೇದ) ಯಿಲ್ಲದವನು. (ಮ. ಭಾ.)

**ಓಂ ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥೩೨॥**

ಅರ್ಜುನ! ಸೃಷ್ಟಿಗಳಲ್ಲಿ ಆದಿ, ಅಂತ ಮತ್ತು ಮಧ್ಯವೂ ಕೂಡ ನಾನೇ ಆಗಿದ್ದೇನೆ. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯಾಗಿದ್ದೇನೆ. ಪರಸ್ಪರಚರ್ಚೆ ಮಾಡುವವರಲ್ಲಿ ನಾನು ವಾದವೇ ಆಗಿದ್ದೇನೆ.

* * *

(**ಸರ್ಗಾಣಾಮಾದಿರನ್ತಶ್ಚ** = ಸರ್ಗ ಎಂದರೆ ಸೃಷ್ಟಿ. ಹಿಂದೆ ಇದೇ ಅಧ್ಯಾಯದಲ್ಲಿ ಶ್ರೀಕೃಷ್ಣನು ಅಹಮಾದಿಶ್ಚ ಮಧ್ಯಂ ಚ ಭೂತಾನಾಂ ಎಂದು ಹೇಳಿದ್ದಾನೆ. ಅಲ್ಲಿ ಅವನು ಹೇಳಿದ್ದು ಪ್ರಾಣಿಮಾತ್ರಕ್ಕೆ. ಇಲ್ಲಿ ಹೇಳುತ್ತಿರುವುದು ಸರ್ವಸೃಷ್ಟಿಗೆ. ಈ ಸೃಷ್ಟಿಯೆಂಬುದು ಸಕಲಚರಾಚರವಸ್ತುಗಳಿಗೂ ಸಂಬಂಧಿಸಿದ್ದು. ಒಂದೇ ಸೃಷ್ಟಿಯೂ ಅಲ್ಲ ; ಅನೇಕಾನೇಕ ಸೃಷ್ಟಿಗಳು. ಆ ಎಲ್ಲ ಸೃಷ್ಟಿಗಳಲ್ಲಿಯೂ ಅವನು ಆದಿಯೂ ಆಗಿದ್ದಾನೆ. ಎಂದರೆ ಸೃಷ್ಟಿಕರ್ತಾ. ಅಂತ ಎಂದರೆ ಲಯಕರ್ತಾ. ಮಧ್ಯ ಎಂದರೆ ಸಂರಕ್ಷಕ—ಈ ಮೂರೂ ನಾನೇ ಆಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ.

ಅಧ್ಯಾತ್ಮವಿದ್ಯಾ ವಿದ್ಯಾನಾಂ = ಇರುವ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಅಥವಾ ಅನೇಕಾನೇಕವಿದ್ಯೆಗಳಲ್ಲಿ ನಾನು ಅಧ್ಯಾತ್ಮವಿದ್ಯೆ ಎನ್ನುತ್ತಾನೆ ಶ್ರೀಕೃಷ್ಣ.

ಪರಮಾತ್ಮನ ಸ್ವರೂಪವು ತಿಳಿಯಬೇಕಾದರೆ ಅಧ್ಯಾತ್ಮವಿದ್ಯೆಯಿಂದಲೇ. ಬೇರೆ ಯಾವ ವಿದ್ಯೆಯಿಂದಲೂ ಅವನ ನಿಜಸ್ವರೂಪವು ತಿಳಿಯುವುದಿಲ್ಲ.

ಅಧ್ಯಾತ್ಮವಿದ್ಯೆಯು ಸಂಸಾರಕ್ಕೆ ಮೂಲವಾದ ಅವಿದ್ಯೆಯನ್ನು–ಅಜ್ಞಾನವನ್ನು ಹೋಗಲಾಡಿಸುತ್ತದೆ. ಇದು ಮೋಕ್ಷಪ್ರಯೋಜನವುಳ್ಳದ್ದು. ನಿವೃತ್ತಿಮಾರ್ಗವನ್ನು ಉಪದೇಶಿಸುವುದು. ಉಳಿದ ವಿದ್ಯೆಗಳು ಪ್ರವೃತ್ತಿಮಾರ್ಗಪ್ರಚೋದಕಗಳು. ಭಗವತ್ಪ್ರಾಪ್ತಿಗೆ ನಿವೃತ್ತಿಮಾರ್ಗವನ್ನೇ ಹಿಡಿಯಬೇಕು. ಆದುದರಿಂದ ಭಗವಂತನ ನಿಜಸ್ವರೂಪವನ್ನು ಪ್ರಕಟಪಡಿಸುವ ಅಧ್ಯಾತ್ಮವಿದ್ಯೆಯಲ್ಲಿ ನಾನಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ.

ವಾದಃ ಪ್ರವದತಾಮಹಂ = ವಾದಮಾಡುವವರಲ್ಲಿ ನಾನು ವಾದ ಎನ್ನುತ್ತಾನೆ.

ವಾದಮಾಡುವುದರಲ್ಲಿಯೂ ಮೂರು ವಿಧ. ಜಲ್ಪ, ವಿತಂಡಾ ಮತ್ತು ವಾದ. ಎದುರಾಳಿಯನ್ನು ಗೆಲ್ಲಬೇಕೆಂಬ ಏಕೈಕವಾದ ಉದ್ದೇಶದಿಂದ ಮಾತನಾಡುವುದು ಜಲ್ಪ. ತನ್ನ ಸಿದ್ಧಾಂತವನ್ನು ಸಮರ್ಥಿಸಿಕೊಳ್ಳುವ ಗೋಜಿಗೆ ಹೋಗದೇ ಮತ್ತೊಬ್ಬರ ಪಕ್ಷದ ಖಂಡನೆಮಾಡುವುದರಲ್ಲಿಯೇ ಚರಿತಾರ್ಥವಿರುವುದು ವಿತಂಡಾ. ತತ್ತ್ವವನ್ನು ನಿರ್ಣಯಿಸುವುದಕ್ಕಾಗಿಯೇ ಮಾಡುವ ಚರ್ಚೆಯು ವಾದ. ತತ್ತ್ವನಿರ್ಣಾಯಕವಾದ ವಾದವೇ ನಾನು ಎನ್ನುತ್ತಾನೆ ಭಗವಂತ.)

O O O

ವಾದ-ಜಲ್ಪ-ವಿತಂಡಗಳಲ್ಲಿ ಅರ್ಥನಿರ್ಣಯಕ್ಕೆ ಕಾರಣವಾಗಿರುವುದರಿಂದ ವಾದವೇ ಪ್ರಧಾನ. (ಶಂ. ಭಾ.)

ಎದುರಾಳಿಗಳನ್ನು ಗೆಲ್ಲುವಿಕೆಯೆಂಬ ಸ್ವಲ್ಪಫಲಕ್ಕಿಂತಲೂ ಅತ್ಯಂತ ಅತಿಶಯವಾದ ಮೋಕ್ಷದಲ್ಲಿ ಪರ್ಯವಸಾನಹೊಂದುವ ಫಲವುಳ್ಳದ್ದಾದುದರಿಂದ ವಾದವು ಜಲ್ಪ-ವಿತಂಡಗಳಿಗಿಂತಲೂ ಉತ್ಕೃಷ್ಟವಾದುದು.

–ವೇದಾಂತದೇಶಿಕರು.

**ಓಂ ಅಕ್ಷರಾಣಾಮಕಾರೋऽಸ್ಮಿ ದ್ವನ್ದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥೩೩॥**

ಅಕ್ಷರಗಳಲ್ಲಿ ನಾನು ಅಕಾರವಾಗಿರುವೆನು. ಸಮಾಸಗಳ ಸಮೂಹದಲ್ಲಿ ನಾನು ದ್ವಂದ್ವಸಮಾಸವಾಗಿರುವೆನು. ಅಕ್ಷಯವಾದ ಕಾಲನೂ ನಾನೇ ಆಗಿದ್ದೇನೆ. ಸರ್ವತೋಮುಖನಾದ ಧಾತೃವೂ ನಾನೇ ಆಗಿದ್ದೇನೆ.

* * *

**(ಅಕ್ಷರಾಣಾಮಕಾರೋಽಸ್ಮಿ** = ಅಕ್ಷರಗಳಲ್ಲಿ ಮೊದಲನೆಯ ಅಕ್ಷರವಾದ 'ಅ' ಕಾರವೇ ನಾನಾಗಿದ್ದೇನೆ. ಸ್ವರ-ವ್ಯಂಜನಾದಿರೂಪವಾದ ಎಲ್ಲ ಅಕ್ಷರಗಳಿಗೂ ಮೊದಲನೆಯದೇ 'ಅ' ಎಂಬ ಅಕ್ಷರ. ಎಲ್ಲ ಮಾತಿಗೂ ಈ ಅಕ್ಷರವ್ಯಾಪ್ತಿಯಿದೆಯೆಂದು ಶ್ರುತಿಯು ಹೇಳುತ್ತದೆ. ಅಕಾರೋ ವೈ ಸರ್ವಾ ವಾಕ್–ಐತರೇಯಬ್ರಾಹ್ಮಣ (೩-೬)–ಎಲ್ಲ ಮಾತೂ ಅಕಾರವೇ ಆಗಿದೆ. ಅಃ ಎಂದರೆ ವಾಸುದೇವ. ಅವತಿ= ರಕ್ಷತಿ ಇತಿ ಅಃ. ಅಕಾರೋ ವಾಸುದೇವಃ ಸ್ಯಾತ್ ಅಂತಹ ಅಕಾರವು ನಾನೇ ಎನ್ನುತ್ತಾನೆ ಭಗವಂತ.

**ದ್ವನ್ದ್ವಃ ಸಾಮಾಸಿಕಸ್ಯ ಚ** = ಸಮಾಸಗಳ ಸಮೂಹದಲ್ಲಿ ನಾನು ದ್ವಂದ್ವಸಮಾಸ. ಪರಸ್ಪರಪದಗಳ ಸೇರುವಿಕೆಗೆ ಸಮಾಸವೆಂದು ಹೆಸರು. ಸಂಸ್ಕೃತದಲ್ಲಿ ಇಂತಹ ಸಮಾಸಗಳು ನಾಲ್ಕು. ಅವ್ಯಯೀಭಾವ, ತತ್ಪುರುಷ, ಬಹುವ್ರೀಹಿ ಮತ್ತು ದ್ವಂದ್ವ. (ಕರ್ಮಧಾರಯ ಮತ್ತು ದ್ವಿಗುಸಮಾಸಗಳು ತತ್ಪುರುಷಸಮಾಸದಲ್ಲಿಯೇ ಅಂತರ್ಗತವಾಗಿವೆ.) ಅವ್ಯಯೀಭಾವವು ಪೂರ್ವಪದಪ್ರಧಾನವಾದುದು. **ಅಧಿಹರಿ**–ಇದು ಅವ್ಯಯೀಭಾವಸಮಾಸಕ್ಕೆ ಉದಾಹರಣೆ. **ಹರಿಂ ಅಧಿಕೃತ್ಯ ಅಧಿಹರಿ** ಹರಿಗೆ ಸಂಬಂಧಿಸಿದಂತೆ. ಅಧಿ ಎಂಬುವುದು ಅವ್ಯಯ.

ತತ್ಪುರುಷಸಮಾಸವು ಉತ್ತರಪದಪ್ರಧಾನವಾದುದು. ಉದಾ :– **ಸೀತಾಪತಿಂ ವನ್ದೇ, ಸೀತಾಯಾಃ ಪತಿಂ = ಸೀತಾಪತಿಂ** ಎಂದರೆ ಶ್ರೀರಾಮಚಂದ್ರನನ್ನು.

ಬಹುವ್ರೀಹಿಸಮಾಸದಲ್ಲಿ ಪೂರ್ವೋತ್ತರಪದಗಳೆರಡಕ್ಕೂ ಪ್ರಾಧಾನ್ಯವಿಲ್ಲದೇ ಬೇರೊಂದು ಪದಕ್ಕೆ ಪ್ರಾಧಾನ್ಯವಿರುತ್ತದೆ.

ಉದಾ :–**ಪೀತಾಮ್ಬರಃ–ಪೀತಂ ಅಮ್ಬರಂ ಯಸ್ಯ ಸಃ=ಪೀತಾಮ್ಬರಃ** (ವಿಷ್ಣು)

ಪೀತವಾದ ಬಟ್ಟೆಯು ಯಾವನದೋ ಅವನು ಪೀತಾಂಬರ.

ದ್ವಂದ್ವಸಮಾಸದಲ್ಲಿ ಎರಡು ಪದಗಳಿಗೂ ಪ್ರಾಧಾನ್ಯವಿರುತ್ತದೆ. ಉದಾ:–**ರಾಮಲಕ್ಷ್ಮಣೌ. ರಾಮಶ್ಚ ಲಕ್ಷ್ಮಣಶ್ಚ =ರಾಮಲಕ್ಷ್ಮಣೌ ;**

ರಾಮ-ಲಕ್ಷ್ಮಣರಿಬ್ಬರೂ. ಆದುದರಿಂದ ಎಲ್ಲ ಸಮಾಸಗಳಿಗಿಂತಲೂ ಉಭಯಪದ ಪ್ರಧಾನವಾದ ದ್ವಂದ್ವಸಮಾಸವೇ ಶ್ರೇಷ್ಠವಾದುದು. ಅಂತಹ ದ್ವಂದ್ವ ಸಮಾಸವೇ ನಾನಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ.

**ಅಹಮೇವಾಕ್ಷಯಃ ಕಾಲಃ** = ಅಕ್ಷಯನಾದ ಕಾಲನೂ ನಾನೇ ಆಗಿದ್ದೇನೆ–ಎಂದು ಪರಮಾತ್ಮನು ಇಲ್ಲಿ ಹೇಳಿರುವುದರಿಂದ ೩೦ನೆಯ ಶ್ಲೋಕದಲ್ಲಿ ಹೇಳಿರುವ ಕಾಲವು ಕ್ಷಯಯುಕ್ತವಾದುದು ಎಂದಂತಾಯಿತು. ಕ್ಷಯಕಾಲವೆಂದರೆ ಮಹಾಪ್ರಲಯವಾದನಂತರ ಈ ಎಣಿಕೆಯ ಕಾಲವಿರುವುದಿಲ್ಲ. ಏಕೆಂದರೆ : ಆ ಸಮಯದಲ್ಲಿ ಬ್ರಹ್ಮನೂ ಸಹ ಇರುವುದಿಲ್ಲ. ಆದರೆ ಶಾಶ್ವತನಾದ ಕಾಲಾತೀತನಾದ ಪರಮಾತ್ಮನೊಬ್ಬನೇ ಇರುತ್ತಾನೆ. ಆದುದರಿಂದಲೇ ಇವನು ಅಕ್ಷಯನಾದ ಕಾಲನಾಗಿರುತ್ತಾನೆ.

ಧಾತಾಹಂ ವಿಶ್ವತೋಮುಖಃ = ಸರ್ವತೋಮುಖನಾದ ಧಾತೃವು ನಾನೇ ಆಗಿದ್ದೇನೆ. ವಿಶ್ವತೋಮುಖವೆಂದರೆ ಸರ್ವತೋಮುಖ, ಸರ್ವವ್ಯಾಪ್ತ, ಅಥವಾ ವಿಶ್ವವೇ ಮುಖವಾಗಿ ಉಳ್ಳವನು ; ವಿಶ್ವರೂಪೀ ವಿರಾಟ್. ಅಂತಹ ಧಾತೃವು ನಾನು. ಎಲ್ಲರ ಧಾರಣ–ಪೋಷಣೆಗಳನ್ನು ಮಾಡತಕ್ಕವನೇ ನಾನು. ಅವರವರ ಕರ್ಮಗಳಿಗೆ ತಕ್ಕುದಾದ ಫಲವನ್ನು ಕೊಡತಕ್ಕವನು.)

o o o

**ಅಕ್ಷಯಃ ಕಾಲಃ ಅಹಂ** = ಕಲಾ-ಮುಹೂರ್ತಾದಿಮಯವಾದ ಅಕ್ಷಯವಾದ ಕಾಲನು ನಾನೇ ಆಗಿದ್ದೇನೆ.

**ಅನಾದಿರ್ಭಗವಾನ್ಕಾಲೋ ನಾನ್ತೋऽಸ್ಯ ದ್ವಿಜ ಉಚ್ಯತೇ**

ವಿ. ಪು. ೧-೨-೨೬

**ಧಾತಾ....ಮುಖಃ** = ಎಲ್ಲದರ ಸೃಷ್ಟಿಕರ್ತನಾದ ಚತುರ್ಮುಖ ಹಿರಣ್ಯಗರ್ಭನು ನಾನೇ. (ರಾ. ಭಾ.)

**ಅಕ್ಷಯಃ ಕಾಲಃ** = ಪ್ರಸಿದ್ಧವಾದ ಕ್ಷಣವೇ ಮುಂತಾದ ಕಾಲ ಅಥವಾ ಕಾಲಕ್ಕೂ ಕಾಲನಾಗಿರುವ ಪರಮೇಶ್ವರ. **ಧಾತಾ ಅಹಂ** = ಎಲ್ಲ ಜಗತ್ತಿಗೂ ಕರ್ಮಫಲವನ್ನು ವಿಧಾನಮಾಡುವವನು. (ಶಂ. ಭಾ.)

ಅಕಾರವು ವಾಸುದೇವವಾಚಕವಾದುದರಿಂದ ಶ್ರೇಷ್ಠವಾದುದು ಎಂದು ವಲ್ಲಭಾಚಾರ್ಯರು ಹೇಳುತ್ತಾರೆ.)

**ಓಂ ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥**

ಎಲ್ಲವನ್ನೂ ನಾಶಗೊಳಿಸುವ ಮೃತ್ಯುವು ನಾನು. ಮುಂದೆ ಹುಟ್ಟುವವರಿಗೆ ಉದ್ಭವವೂ ನಾನೇ ಆಗಿದ್ದೇನೆ. ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಾ, ಧೃತಿ, ಕ್ಷಮೆ–ಇವುಗಳ ಅಭಿಮಾನದೇವತೆಗಳೇ ನಾನು.

* * *

(**ಮೃತ್ಯುಃ ಸರ್ವಹರಶ್ಚಾಹಂ** = ಸರ್ವಹರನಾದ ಮೃತ್ಯುವೇ ನಾನು ಎನ್ನುತ್ತಾನೆ ಶ್ರೀಕೃಷ್ಣ. ಸರ್ವಹರನೆಂದರೆ ಸರ್ವಸಂಪತ್ತನ್ನೂ ಅಪಹರಿಸುವವನಾಗಬಹುದು ; ಸರ್ವಪ್ರಾಣಾಪಹಾರಕನಾಗಬಹುದು. ಪ್ರಲಯಕಾಲದಲ್ಲಿ ಸರ್ವವನ್ನೂ ಅಪಹರಿಸುವವನೂ ಆಗಬಹುದು. ಎಲ್ಲವೂ ಮೃತ್ಯುವಿನ ಕಾರ್ಯವೇ ಆಗಿದೆ. ಧನವನ್ನೇ ಆಗಲೀ, ಪ್ರಾಣವನ್ನೇ ಆಗಲೀ, ವಿಶ್ವವನ್ನೇ ಆಗಲೀ–ಮೃತ್ಯುರೂಪದಿಂದ ಅಪಹರಿಸಿದ ಭಗವಂತನು ಸುಮ್ಮನಿದ್ದುಬಿಡುವುದಿಲ್ಲ. **ಉದ್ಭವಶ್ಚ ಭವಿಷ್ಯತಾಮ್** = ಮುಂದೆ ಹುಟ್ಟುವವರಿಗೆ ಅವನೇ ಉತ್ಪತ್ತಿಕಾರಣನೂ ಆಗಿರುತ್ತಾನೆ. ಅವನೇ ಬೀಜಸ್ವರೂಪನು. ಅವನಿಂದಲೇ ಪುನಃ ಎಲ್ಲ ಪ್ರಾಣಿಗಳೂ ಹುಟ್ಟುವುವು.

**ನಾರೀಣಾಂ ಕೀರ್ತಿಃ ಶ್ರೀರ್ವಾಕ್ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ।**

ಹೆಂಗಸರಲ್ಲಿ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ ಇವರಾಗಿದ್ದೇನೆ. (ಇವರೆಲ್ಲರೂ ಸ್ತ್ರೀಯರೇ? ಎಂಬ ಸಂದೇಹವುಂಟಾಗುತ್ತದೆ. ಕೀರ್ತಿಯೇ ಮೊದಲಾದುವುಗಳನ್ನು ನಾವು ಗುಣಗಳೆಂದು ಮಾತ್ರವೇ ತಿಳಿದಿರುತ್ತೇವೆ. ಈ ಕಾರಣದಿಂದಲೇ ಕೆಲವು ವ್ಯಾಖ್ಯಾನಕಾರರು ಹೆಂಗಸರಲ್ಲಿರುವ ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮೆ ಇವೆಲ್ಲವೂ ನಾನು ಎಂದು ಶ್ರೀಕೃಷ್ಣನು ಹೇಳಿದ್ದಾನೆಂದು ವಿವರಣೆ ನೀಡಿದ್ದಾರೆ.) ಆದರೆ ಕೀರ್ತಿಯೇ ಮೊದಲಾದವರು ಸ್ತ್ರೀಯರೆಂದೇ ಮಹಾಭಾರತದಲ್ಲಿ ಉಕ್ತವಾಗಿದೆ.

**ನಾಮತೋ ಧರ್ಮಪತ್ನ್ಯಸ್ತಾಃ ಕೀರ್ತ್ಯಮಾನಂ ನಿಬೋಧ ಮೇ ॥**

**ಕೀರ್ತಿರ್ಲಕ್ಷ್ಮೀ ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ತಥಾ ।**
**ಬುದ್ಧಿರ್ಲಜ್ಜಾ ಮತಿಶ್ಚೈವ ಪತ್ನ್ಯೋ ಧರ್ಮಸ್ಯ ತಾ ದಶ ॥೧೫॥**

ದಕ್ಷನು ತನ್ನ ಐದು ನೂರು ಹೆಣ್ಣುಮಕ್ಕಳಲ್ಲಿ ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೆ ಮದುವೆಮಾಡಿಕೊಟ್ಟನು. ಧರ್ಮನ ಪತ್ನಿಯರಾದ ಆ ಹತ್ತು ಹೆಣ್ಣುಮಕ್ಕಳ ಹೆಸರುಗಳನ್ನು ಹೇಳುತ್ತೇನೆಂದು ಜನಮೇಜಯನಿಗೆ ವೈಶಂಪಾಯನರು ಹೇಳುತ್ತಾರೆ.

ಕೀರ್ತಿ, ಲಕ್ಷ್ಮೀ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಬುದ್ಧಿ, ಲಜ್ಜಾ ಮತ್ತು ಮತಿ-ಈ ಹತ್ತುಮಂದಿ ದಕ್ಷನ ಹೆಣ್ಣುಮಕ್ಕಳು ಮತ್ತು ಧರ್ಮನ ಪತ್ನಿಯರು. ಇವರಲ್ಲಿ ಶ್ರೀಕೃಷ್ಣನು ಕೀರ್ತಿ, ಶ್ರೀ (ಲಕ್ಷ್ಮೀ ), ಮೇಧಾ, ಸ್ಮೃತಿ (ಬುದ್ಧಿ), ಧೃತಿ–ಇವರುಗಳನ್ನು ಉದ್ಧರಿಸಿದ್ದಾನೆ. ಕ್ಷಮಾ ಎಂದು ದುರ್ಗಾದೇವಿಗೆ ಹೆಸರಿದೆ.

**ಜಯನ್ತೀ ಮಙ್ಗಲಾ ಕಾಲೀ ಭದ್ರಕಾಲೀ ಕಪಾಲಿನೀ ।**
**ದುರ್ಗಾ ಶಿವಾ ಕ್ಷಮಾ ಧಾತ್ರೀ ಸ್ವಾಹಾ ಸ್ವಧಾ ನಮೋಽಸ್ತು ತೇ ॥**

ವಾಕ್ಕು ಬ್ರಹ್ಮನ ಮಗಳೆಂದು ಪ್ರಸಿದ್ಧಳಾಗಿದ್ದಾಳೆ. ಆದುದರಿಂದ ಇಲ್ಲಿ ಶ್ರೀಕೃಷ್ಣನು ಈ ಸ್ತ್ರೀಯರ ವಿಷಯವಾಗಿಯೇ ಹೇಳಿದ್ದಾನೆ. ಆದರೆ ಈ ಗುಣಗಳಲ್ಲಿಯೂ ಇವನಿದ್ದಾನೆಂದು ಹೇಳಬಹುದು. ಸತ್ಕೀರ್ತಿಯೇ ನಾನಾಗಿದ್ದೇನೆ. ಸಂಪತ್ತೇ ನಾನಾಗಿದ್ದೇನೆ. ಒಳ್ಳೆಯ ಮಾತೇ ನಾನಾಗಿದ್ದೇನೆ. ಮನುಷ್ಯರಲ್ಲಿರುವ ಜ್ಞಾಪಕಶಕ್ತಿಯು ನಾನಾಗಿದ್ದೇನೆ. ಮೇಧಾಶಕ್ತಿಯೂ ನಾನಾಗಿದ್ದೇನೆ. ಧೈರ್ಯವೂ ನಾನೇ. ಕ್ಷಮಾಗುಣವೂ ಸಹ ನಾನೇ ಆಗಿದ್ದೇನೆ. (ಪರಮಾತ್ಮನ ವಿಭೂತಿಗಳಾದ ಕೀರ್ತಿಯೇ ಮೊದಲಾದ ದೇವತಾಸ್ತ್ರೀಯರ ಅನುಗ್ರಹವಿದ್ದರೆ ಮನುಷ್ಯನು ಉದ್ಧಾರವಾಗುತ್ತಾನೆ.)

o o o

**ಕೀರ್ತಿಃ** ಶ್ರೀಃ **ಕ್ಷಮಾ** ಮುಂತಾದವರು ಸ್ತ್ರೀಯರಲ್ಲಿ ಅತ್ಯಂತ ಉತ್ತಮರು. ಇವರ ಆಭಾಸಮಾತ್ರದ ಸಂಬಂಧವಿದ್ದರೂ ಜನರು ತಮ್ಮನ್ನು ಕೃತಾರ್ಥರೆಂದು ಭಾವಿಸುತ್ತಾರೆ. ಅವು ನಾನೇ ಆಗಿದ್ದೇನೆ. (ಶಂ. ಭಾ.)

ಶ್ರೀಯೂ ನಾನೇ ಆಗಿದ್ದೇನೆ. ನಾರಿಯರಲ್ಲಿ ಕೀರ್ತಿಯೂ ನಾನೇ

ಆಗಿದ್ದೇನೆ. ವಾಣಿಯೂ ನಾನೇ. ಸ್ಮೃತಿಯೂ ನಾನೇ. ಮೇಧೆಯೂ ನಾನೇ. ಧೃತಿಯೂ ನಾನೇ ಮತ್ತು ಕ್ಷಮೆಯೂ ನಾನೇ.

ಇಲ್ಲಿ ಹೇಳಿರುವ ಕೀರ್ತಿ ಮುಂತಾದುವುಗಳು ಗುಣವಿಶೇಷಗಳಲ್ಲ. ಏಕೆಂದರೆ : ಅವು ಪುರುಷರಲ್ಲಿಯೂ ಇರುತ್ತವೆ. **ನಾರೀಣಾಂ** ಎಂಬ ವಿಶೇಷಣಕ್ಕೆ ಹೊಂದಿಕೆಯಾಗುವುದಿಲ್ಲ. ಕೀರ್ತಿ ಮುಂತಾದುವುಗಳು ಭಗವಂತನ ಅಸಾಧಾರಣವಾದ ಶಕ್ತಿಗಳು. (ವೇದಾಂತದೇಶಿಕರು.)

**ಓಂ ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥**

ಸಾಮಗಳಲ್ಲಿ ಬೃಹತ್ಸಾಮವು ನಾನು. ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸು ನಾನು. ಮಾಸಗಳಲ್ಲಿ ಮಾರ್ಗಶೀರ್ಷವು ನಾನು. ಋತುಗಳಲ್ಲಿ ವಸಂತನು ನಾನು.

*   *   *

(**ಬೃಹತ್ಸಾಮ ತಥಾ ಸಾಮ್ನಾಂ** = ಈ ಹಿಂದೆ ಶ್ರೀಕೃಷ್ಣನು **ವೇದಾನಾಂ ಸಾಮವೇದೋಽಸ್ಮಿ**–ವೇದಗಳಲ್ಲಿ ನಾನು ಸಾಮವೇದವೇ ಆಗಿದ್ದೇನೆ, ಎಂದು ಹೇಳಿದ್ದನು. ಸಾಮವೇದದಲ್ಲಿರುವ ರಥಂತರಾದಿ ಅನೇಕ ಸಾಮಗಳಲ್ಲಿ ನಾನು ಬೃಹತ್ಸಾಮವಾಗಿದ್ದೇನೆ ಎನ್ನುತ್ತಾನೆ. ಈ ಬೃಹತ್ಸಾಮವು ಇಂದ್ರರೂಪನಾದ ಪರಮಾತ್ಮನನ್ನು ಸ್ತೋತ್ರಮಾಡುವ ಸಾಮ. ಅತಿರಾತ್ರಯಾಗದಲ್ಲಿ ಇದನ್ನು ಗಾನಮಾಡುತ್ತಾರೆ. **ತ್ವಾಮಿದ್ಧಿ ಹವಾಮಹೇ ಸಾತಾವಾಜಸ್ಯಕಾರವಃ** ಎಂಬುದೇ ಈ ಸಾಮದ ಋಕ್ ಆಗಿರುತ್ತದೆ. **ಛನ್ದಸಾಮಹಂ ಗಾಯತ್ರೀ**= ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಙ್ಕ್ತೀ, ಗಾಯತ್ರೀ ಮುಂತಾದ ಛಂದಸ್ಸುಗಳಲ್ಲಿ ನಾನು ಗಾಯತ್ರೀ ಛಂದಸ್ಸಾಗಿದ್ದೇನೆ.

**ಚತುರ್ವಿಗ್ಂಶತ್ಯಕ್ಷರಾ ತ್ರಿಪದಾ ಗಾಯತ್ರೀ**

ಇಪ್ಪತ್ತುನಾಲ್ಕು ಅಕ್ಷರಗಳಿಂದ ಮತ್ತು ಮೂರು ಪಾದಗಳಿಂದ ಕೂಡಿದ ಛಂದಸ್ಸಿಗೆ ಗಾಯತ್ರೀ ಎಂದು ಹೆಸರು.)

o   o   o

ಉಳಿದ ಛಂದಸ್ಸುಗಳಿಗಿಂತಲೂ ಈ ಛಂದಸ್ಸು ಅತ್ಯಂತಮಹಿಮಾ ವಿಶಿಷ್ಟವಾದುದು. ಸುವರ್ಲೋಕಕ್ಕೆ ಹೋಗಿ ಎಲ್ಲ ಪ್ರತಿಬಂಧಕಗಳನ್ನೂ ಜಯಿಸಿ ಸೋಮವನ್ನು ತಂದುಕೊಟ್ಟು ಸುಪರ್ಣಮಾತೆಯ ದಾಸ್ಯವಿಮೋಚನಕ್ಕೆ ಕಾರಣವಾದುದು–ಎಂದು ವೇದಗಳು ಗಾಯತ್ರಿಯ ಮಹಿಮೆಯನ್ನು ಗಾನಮಾಡುತ್ತವೆ. **ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛನ್ದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಸ್ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ.**

**– ತೈತ್ತಿರೀಯ ೬-೧-೬೨**

**ಛಂದಸಾಂ** ಎನ್ನುವುದಕ್ಕೆ ಛಂದಸ್ಸಿನಿಂದ ಕೂಡಿದ ಋಕ್ಕುಗಳಲ್ಲಿ ಎಂದೂ ಅರ್ಥಮಾಡಬಹುದು. ಹಾಗಾದರೆ ಅಂತಹ ಋಕ್ಕುಗಳಲ್ಲಿ ಶ್ರೇಷ್ಠವಾದುದು ಗಾಯತ್ರೀ ಎಂದು ಅರ್ಥವಾಗುತ್ತದೆ.

ಇಂತಹ ಗಾಯತ್ರಿಗಳು ಅನೇಕವಿವೆ. ನೃಸಿಂಹಗಾಯತ್ರೀ, ವಾಸುದೇವಗಾಯತ್ರೀ, ವಿಷ್ಣುಗಾಯತ್ರೀ–ಇತ್ಯಾದಿ. ಆದರೆ ಇಲ್ಲಿ ಹೇಳಿರುವುದು ಸವಿತೃದೇವತಾತ್ಮಕವಾದ ಬ್ರಹ್ಮಗಾಯತ್ರೀ.

**ಗಾಯನ್ತಂ ತ್ರಾಯತೇ ಯಸ್ಮಾದ್ಗಾಯತ್ರೀಯಂ ತತಃ ಸ್ಮೃತಾ ॥**

ತನ್ನ ಉಪಾಸಕನನ್ನು ರಕ್ಷಿಸುವುದರಿಂದ ಈ ಮಂತ್ರವು ಗಾಯತ್ರೀ ಎಂದು ಪ್ರಸಿದ್ಧವಾಯಿತು. ಉಪನಯನಕಾಲದಲ್ಲಿ ಈ ಮಹಾಮಂತ್ರವನ್ನು ಉಪದೇಶಿಸುತ್ತಾರೆ. ಇದರ ಉಪಾಸನೆಯ ಫಲವು ಅಪಾರವಾದುದು.

**ಗಾಯತ್ರೀಂ ಜಪತೇ ಯಸ್ತು ಕಲ್ಯಮುತ್ಥಾಯ ಯೋ ದ್ವಿಜಃ ।**
**ಸ ಲಿಮ್ಪತಿ ನ ಪಾಪೇನ ಪದ್ಮಪತ್ರಮಿವಾಮ್ಭಸಾ ॥**

ಯಾವ ದ್ವಿಜನು ಪ್ರಾತಃಕಾಲದಲ್ಲಿ ಗಾಯತ್ರಿಯನ್ನು ವಿಧಿಪೂರ್ವಕವಾಗಿ ಜಪಿಸುತ್ತಾನೆಯೋ ಅವನಿಗೆ ಕಮಲದೆಲೆಗೆ ನೀರು ಅಂಟಿಕೊಳ್ಳದಂತೆ ಯಾವ ವಿಧವಾದ ಪಾಪಗಳೂ ಅಂಟಿಕೊಳ್ಳುವುದಿಲ್ಲ. ಬ್ರಹ್ಮ-ವಿಷ್ಣು-ಮಹೇಶ್ವರರೇ ಗಾಯತ್ರೀ.

**ಗಾಯತ್ರ್ಯೇವ ಪರೋ ವಿಷ್ಣುಃ ಗಾಯತ್ರ್ಯೇವ ಪರಃ ಶಿವಃ ।**
**ಗಾಯತ್ರ್ಯೇವ ಪರೋ ಬ್ರಹ್ಮಾ ಗಾಯತ್ರ್ಯೇವ ತ್ರಯೀ ಯತಃ ॥**

**ಸರ್ವವೇದಸಾರಭೂತಾ ಗಾಯತ್ರ್ಯಾಸ್ತು ಸಮರ್ಚನಾ ।**
**ಬ್ರಹ್ಮಾದಯೋಽಪಿ ಸಂಧ್ಯಾಯಾಂ ತಾಂ ಧ್ಯಾಯನ್ತಿ ಜಪನ್ತಿ ಚ ॥**

ದೇವೀಭಾಗವತ ೧೧-೧೬-೧೫

ಗಾಯತ್ರಿಯ ಉಪಾಸನೆಯು ಸರ್ವವೇದಗಳ ಸಾರಭೂತವಾಗಿದೆ. ಬ್ರಹ್ಮಾದಿದೇವತೆಗಳೂ ಸಹ ಸಂಧ್ಯಾಕಾಲಗಳಲ್ಲಿ ಗಾಯತ್ರಿಯನ್ನು ಧ್ಯಾನ ಮಾಡುತ್ತಾರೆ ಮತ್ತು ಜಪಿಸುತ್ತಾರೆ.

**ನಾಸ್ತಿ ಗಙ್ಗಾಸಮಂ ತೀರ್ಥಂ ನ ದೇವಃ ಕೇಶವಾತ್ಪರಃ ।**
**ಗಾಯತ್ರ್ಯಾಸ್ತು ಪರಂ ಜಪ್ಯಂ ನ ಭೂತಂ ನ ಭವಿಷ್ಯತಿ ॥**

ಗಂಗೆಗೆ ಸಮಾನವಾದ ತೀರ್ಥವಿಲ್ಲ. ಕೇಶವನಿಗಿಂತಲೂ ಶ್ರೇಷ್ಠನಾದ ಮತ್ತೊಬ್ಬ ದೇವನಿಲ್ಲ. ಗಾಯತ್ರಿಗಿಂತಲೂ ಮಿಗಿಲಾದ ಉಪಾಸನಾಮಂತ್ರವು ಬೇರೊಂದಿಲ್ಲ. ಹಿಂದೆಯೂ ಇರಲಿಲ್ಲ. ಮುಂದೆಯೂ ಈ ಮೂರಕ್ಕೆ ಸಮಾನವಾದುದು ಬೇರೊಂದಿರುವುದಿಲ್ಲ. ಇಂತಹ ಪರಮಪವಿತ್ರವಾದ ಗಾಯತ್ರೀಮಂತ್ರವೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಮಾಸಾನಾಂ ಮಾರ್ಗಶೀರ್ಷೋಽಹಂ**=ಮಾಸಗಳಲ್ಲಿ ಮಾರ್ಗ ಶೀರ್ಷಮಾಸವು ನಾನು ಎನ್ನುತ್ತಾನೆ. ಈಗ ಚೈತ್ರಮಾಸವನ್ನು ಮೊದಲು ಮಾಡಿ ವರ್ಷವನ್ನು ಎಣಿಸುವಂತೆ ಹಿಂದೆ ಮಾರ್ಗಶೀರ್ಷಮಾಸದಿಂದ ಪ್ರಾರಂಭಿಸಿ ವರ್ಷವನ್ನು ಎಣಿಸುತ್ತಿದ್ದರು. ಮಾರ್ಗಶೀರ್ಷವು ವರ್ಷದ ಮೊದಲ ಮಾಸವಾಗಿತ್ತು.

ಮಾಸ, ಪಕ್ಷ ಮತ್ತು ತಿಥಿಗಳ ಸಂಬಂಧವಾದ ವ್ರತಗಳು ಮತ್ತು ಅವುಗಳ ಫಲಗಳನ್ನು ಹೇಳುವಾಗ ಅನುಶಾಸನಪರ್ವದ ೧೦೬ನೆಯ ಅಧ್ಯಾಯದಲ್ಲಿ ಮಾರ್ಗಶೀರ್ಷಮಾಸದಿಂದಲೇ ಪ್ರಾರಂಭಿಸಿ ಹೇಳಿದ್ದಾರೆ. ೧೦೯ನೆಯ ಅಧ್ಯಾಯದಲ್ಲಿಯೂ ದ್ವಾದಶಿಯಂದು ಉಪವಾಸಮಾಡಿ ಮಹಾವಿಷ್ಣುವಿನ ಪೂಜೆಮಾಡುವುದರಿಂದ ಪ್ರಾಪ್ತವಾಗುವ ಫಲವನ್ನು ಹೇಳುವಾಗ ಮಾರ್ಗಶೀರ್ಷವನ್ನೇ ಪ್ರಾರಂಭಿಸಿ ಹೇಳಿದ್ದಾರೆ.

ಆದುದರಿಂದ ವರ್ಷದ ಮೊದಲನೆಯ ಮಾಸವಾಗಿದ್ದ ಮಾರ್ಗ ಶೀರ್ಷವು ನಾನೇ ಎಂದಿದ್ದಾನೆ.

**ಋತೂನಾಂ ಕುಸುಮಾಕರಃ** = ಋತುಗಳಲ್ಲಿ ಕುಸುಮಾಕರನು ನಾನು ಎನ್ನುತ್ತಾನೆ. ಕುಸುಮಾಕರ ಎಂದರೆ ಪುಷ್ಪಗಳಿಗೆ ಆಕರವಾಗಿರುವ ಋತು. ವಸಂತರ್ತು. ಚೈತ್ರ-ವೈಶಾಖಮಾಸಗಳಲ್ಲಿ ವೃಕ್ಷಗಳೆಲ್ಲವೂ ಹೂಗಳಿಂದ ತುಂಬಿಹೋಗಿರುತ್ತವೆ. ಎಲ್ಲರಿಗೂ ಆ ಋತುವು ಆನಂದಮಯವಾದ ಋತುವಾಗಿರುತ್ತದೆ. ಸಾಧಕರಿಗೂ ಸಹ ಆ ಋತುವು ಹೆಚ್ಚು ಅನು ಕೂಲವಾದುದೆಂದು ಬಲ್ಲವರು ಹೇಳುತ್ತಾರೆ. ಮೇಲಾಗಿ ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರಗಳೆಂಬ ಆರು ಋತುಗಳಲ್ಲಿ ವಸಂತವೇ ಮೊದಲನೆಯದಾಗಿದೆ. ಇಂತಹ ಶ್ರೇಷ್ಠವಾದ ಋತುವು ನಾನೇ ಎನ್ನುತ್ತಾನೆ ಭಗವಂತ.

O O O

ಸಾಮಗಳಲ್ಲಿ ಬೃಹತ್ಸಾಮವು ಹೆಚ್ಚು ಉತ್ಕೃಷ್ಟವೆಂಬುದು ಶ್ರುತಿ ಯಿಂದಲೇ ಸಿದ್ಧವಾಗುತ್ತದೆ. **ಬೃಹಚ್ಚ ವಾ ಇದಮಗ್ರೇ ರಥಂತರಂ ಚ ಆಸ್ತಾಮ್ । ವಾಕ್ಚ ವೈ ತನ್ಮನಶ್ಚಾಸ್ತಾಂ ವಾಗ್ಘಿ ರಥಂತರಮ್ । ಮನೋ ಬೃಹತ್ । ತದ್ಬೃಹತ್ಪೂರ್ವಂ ಸಸೃಜಾನಂ ರಥಂತರಂ ಅತ್ಯಮನ್ಯತ**

ಐತರೇಯ ೪-೧೯-೬

ಗಾಯತ್ರಿಯು ಛಂದಸ್ಸುಗಳ ತಾಯಿಯಾದುದರಿಂದ ಛಂದಸ್ಸುಗಳಲ್ಲಿ ಅತ್ಯಂತಶ್ರೇಷ್ಠವಾದುದು ಎಂಬ ವಿಷಯವು ಶ್ರುತಿಗಳಲ್ಲೂ ಛಂದೋವಿವೇಕ ದಲ್ಲೂ ವಿಸ್ತರಿಸಲ್ಪಟ್ಟಿದೆ.

**ಗಾಯತ್ರೀಂ ಛನ್ದಸಾಂ ಮಾತೇದಂ ಬ್ರಹ್ಮ ಜುಷಸ್ವ ನಃ ।**

**ಅಗ್ನೌ ವೈ ಛನ್ದಸಾಂ ಗಾಯತ್ರೀ**–ಎಂದು ಬಹ್ವೃಚೋಪನಿಷತ್ತು ಹೇಳುತ್ತದೆ.

ಮಾರ್ಗಶೀರ್ಷಮಾಸದ ಅತಿಶಯ : ವರ್ಷದ ಗರ್ಭಾಧಾನಕಾಲವಾಗಿ ರುವುದರಿಂದಲೂ, ಆ ಮಾಸಕ್ಕೆ ಅಧಿದೇವತೆಗಳಾದ ಕೇಶವನೇ ಮುಂತಾದ ಹನ್ನೆರಡು ಮಂದಿಗಳಲ್ಲಿ ಮೊದಲಿಗನಾದ ಕೇಶವನ ಮಾಸವಾದುದ ರಿಂದಲೂ, ಋತುವರ್ಗದ ಆರಂಭಕಾಲವಾದುದರಿಂದಲೂ ಇದು ಶ್ರೇಷ್ಠ ವಾದುದು. **ಋತೂನಾಂ ಕುಸುಮಾಕರಃ** = ವಸಂತವು ಸರ್ವಪ್ರಾಣಿಗಳಿಗೂ ಸುಖಕರವೆಂಬುದು ಅನುಭವಸಿದ್ಧವೇ ಆಗಿದೆ.

**ವಸನ್ತೇ ವಸನ್ತೇ ಜ್ಯೋತಿಷಾ ಯಜೇತ ।** ಆಪಸ್ತಮ್ಬಶ್ರೌತಸೂತ್ರ.
**ವಸನ್ತೇ ದೀಕ್ಷಯೇದ್ವಿಪ್ರಂ ಗ್ರೀಷ್ಮೇ ರಾಜನ್ಯಮೇವ ಚ ।**

(ವೇದಾಂತದೇಶಿಕರು.)

ಸುಪಕ್ವಸಸ್ಯಾದಿಸಂಪನ್ನವಾದ ಮಾರ್ಗಶಿರ ಮಾಸವು, ಬಹುತರ ಗೋಕ್ಷೀರಸಮೃದ್ಧಿಯುಳ್ಳದ್ದು. ಅತಿಶೀತವೂ ಅತ್ಯುಷ್ಣವೂ ಅಲ್ಲದ ಸೂರ್ಯನುಳ್ಳದ್ದು. ನವಾಗ್ರಯಣಪೂಜೆ ಮುಂತಾದುವುಗಳಿಂದ ಪಿತೃದೇವತೆಗಳು ಸಂತೋಷಿಸುವ ಕಾಲ.

ದಕ್ಷಿಣಾಯನವು ದೇವತೆಗಳಿಗೆ ರಾತ್ರಿ. ಈ ಮಾಸವು ಆ ರಾತ್ರಿಯ ಬ್ರಾಹ್ಮಮೂಹೂರ್ತದಂತೆ ಇರುವುದರಿಂದ ಅದು ದೇವತೆಗಳಿಗೂ ಪಿತೃಗಳಿಗೂ ಸಮಾಗಮದ ಕಾಲ. ಕಾತ್ಯಾಯನರು ಹೇಳಿರುವಂತೆ ಈ ಮಾಸದಿಂದಲೇ ಹಿಂದೆ ಒಂದಾನೊಂದು ಕಾಲದಲ್ಲಿ ವರ್ಷಾರಂಭದ ಗಣನೆಯಿದ್ದಿತು.

**ಆದೌ ಮಾರ್ಗಶೀರ್ಷಾದಿ ದ್ವೌ ದ್ವೌ ಮಾಸೌ ಋತುರ್ಮತಃ ।**

(ಕಾತ್ಯಾಯನರು)

ಅಮರಸಿಂಹನು ಕೂಡ ಇದನ್ನೇ ಮೊದಲನೆಯದನ್ನಾಗಿ ಹೇಳಿದ್ದಾನೆ.

**ಮಾರ್ಗಾದೀನಾಂ ಯುಗೈಃ ಕ್ರಮಾತ್**

**ಓಂ ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥೩೬॥**

ಛಲವನ್ನು ಮಾಡುವವರಲ್ಲಿ (ವಂಚಕರಲ್ಲಿ) ನಾನು ಜೂಜು ಆಗಿರುವೆನು. ತೇಜಸ್ವಿಗಳಲ್ಲಿ ತೇಜಸ್ಸೇ ನಾನು. ಜಯವಾಗಿರುವೆನು. ವ್ಯವಸಾಯವಾಗಿರುವೆನು. ಸತ್ತ್ವವಂತರ ಸತ್ತ್ವವೇ ನಾನು.

* * *

**(ದ್ಯೂತಂ ಛಲಯತಾಮಸ್ಮಿ** = ಛಲ ಎಂದರೆ ಮೋಸ, ವಂಚನೆ, ಕಪಟ ಇತ್ಯಾದಿಗಳು. ಅಥವಾ ಪ್ರಿಯವಾಗಿರುವಂತೆ ತೋರುವ ಅಹಿತವಾದ ಮಾತುಗಳಿಂದ ಮೋಸಗೊಳಿಸುವುದು ಛಲ.

**ಪ್ರಿಯಾಭೈರಪ್ರಿಯೈರ್ವಾಕ್ಯೈರ್ವಿಲೋಭ್ಯ ಚ್ಛಲನಾಚ್ಛಲಮ್ ।**

ಇವರಲ್ಲಿ ನಾನು ದ್ಯೂತವಾಗಿದ್ದೇನೆ. ಅಥವಾ ಜೂಜಾಟವಾಗಿದ್ದೇನೆ.

ಜೂಜಾಟವು ಪ್ರತ್ಯಕ್ಷವಾಗಿ ಮೋಸವೆಂಬಂತೆ ಕಾಣದಿದ್ದರೂ ಮೋಸದಿಂದ ಕೂಡಿರುತ್ತದೆ. ಕೌರವರು ಪಾಂಡವರೊಡನಾಡಿದ ಪಗಡೆಯಾಟವೇ ಇದಕ್ಕೆ ನಿದರ್ಶನ.

ಮೋಸಗೊಳಿಸುವವರಲ್ಲಿ ನಾನು ಜೂಜಾಟವಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ.

**ತೇಜಸ್ತೇಜಸ್ವಿನಾಮಹಂ** = ತೇಜಸ್ವಿಗಳಲ್ಲಿ ನಾನು ತೇಜಸ್ಸೇ ಆಗಿದ್ದೇನೆ. ತೇಜಸ್ವೀ ಎಂಬ ಹೆಸರು ಬರಬೇಕಾದರೆ ತೇಜಸ್ಸಿನಿಂದ ಕೂಡಿರಬೇಕು. ತೇಜಸ್ಸಿಲ್ಲದಿದ್ದರೆ ತೇಜಸ್ವೀ ಎಂಬ ಹೆಸರೇ ಬರುವುದಿಲ್ಲ. ಆದುದರಿಂದ ತೇಜಸ್ವಿಗಳಲ್ಲಿರುವ ತೇಜಸ್ಸತ್ತ್ವವೇ ನಾನು ಎನ್ನುತ್ತಾನೆ.

**ಜಯೋಽಸ್ಮಿ**= ವಿಜಯಿಗಳಲ್ಲಿ ಜಯವು ನಾನು. ನಾನಿದ್ದರೆ ಅವರಿಗೆ ವಿಜಯವು ಲಭಿಸುವುದು. ನಾನಿಲ್ಲದಿದ್ದರೆ ವಿಜಯವು ಲಭಿಸುವುದಿಲ್ಲ. ವಿಜಯಗಳಿಸಿದರೆ ನಾನಲ್ಲಿರುವೆನೆಂದು ತಿಳಿಯಬಹುದು.

**ವ್ಯವಸಾಯೋಽಸ್ಮಿ** = ವ್ಯವಸಾಯ ಎಂದರೆ ನಿಶ್ಚಯ ಅಥವಾ ಉದ್ಯೋಗ. ನಿಶ್ಚಯವಂತರ ನಿಶ್ಚಯವು ನಾನಾಗಿದ್ದೇನೆ. ಅಥವಾ ಉದ್ಯೋಗವಂತರ ಉದ್ಯೋಗವೇ ನಾನಾಗಿದ್ದೇನೆ.

ಸತ್ತ್ವಂ ಸತ್ತ್ವವತಾಮಹಂ = ಸತ್ತ್ವವಂತರು ಎಂದರೆ ಸಾತ್ತ್ವಿಕ ಸ್ವಭಾವದವರು. ಅವರ ಸತ್ತ್ವಗುಣವೇ ನಾನಾಗಿದ್ದೇನೆ ಎನ್ನುತ್ತಾನೆ ಭಗವಂತ. ತೇಜಸ್ಸು, ಜಯ, ವ್ಯವಸಾಯ ಮತ್ತು ಸತ್ತ್ವ–ಎಲ್ಲವೂ ಭಗವಂತನೇ ಆಗಿದ್ದಾನೆ. ಅವನ ಇರುವಿಕೆಯಿಂದಲೇ ಮಾನವರು ತೇಜಸ್ವಿಗಳೂ, ವಿಜಯಿಗಳೂ, ವ್ಯವಸಾಯಿಗಳೂ, ನಿಶ್ಚಯಮತಿಗಳೂ ಅಥವಾ ಉದ್ಯೋಗವಂತರೂ ಮತ್ತು ಸಾತ್ತ್ವಿಕರೂ ಆಗುತ್ತಾರೆ. ಅವನ ಇರುವಿಕೆ ಯಿಲ್ಲದಿದ್ದರೆ ಇವುಗಳ ಸಾಧನೆಯಾಗುವುದಿಲ್ಲ. ಈ ರಹಸ್ಯವನ್ನು ಮನುಷ್ಯರು ಅರಿತು ತೇಜಸ್ವಿಗಳಾದುದಕ್ಕಾಗಿ ವಿಜಯಗಳಿಸಿದ್ದಕ್ಕಾಗಿ ಅಹಂಕಾರಪಡಬಾರದು.

ಕೇನೋಪನಿಷತ್ತಿನಲ್ಲಿ ಒಂದು ಕಥೆಯಿದೆ. ಒಮ್ಮೆ ದೇವತೆಗಳು ಪರಮಾತ್ಮನ ಸಾನ್ನಿಧ್ಯದಿಂದ ಮತ್ತು ಅನುಗ್ರಹದಿಂದ ಅಸುರರೊಡನೆ ಯುದ್ಧಮಾಡಿ ಜಯಗಳಿಸಿದರು. ದೇವತೆಗಳ ಮಹಿಮೆಯು ಮೂರು

ಲೋಕಗಳಲ್ಲಿಯೂ ವ್ಯಾಪ್ತವಾಯಿತು. ಆದರೆ ಸ್ವಲ್ಪಸಮಯದಲ್ಲಿಯೇ ದೇವತೆಗಳು ತಮ್ಮ ವಿಜಯವು ಯಾರ ಅನುಗ್ರಹದಿಂದ ಲಭಿಸಿತೆಂಬುದನ್ನು ಮರೆತೇಬಿಟ್ಟರು. **ವಿಜಯೋಽಸ್ಮಾಕಮೇವಾಯಂ ಮಹಿಮಾ** 'ವಿಜಯವು ನಮಗೇ ಲಭಿಸಿದೆ. ನಮ್ಮ ಮಹಿಮೆಯಿಂದಲೇ ಇದು ಲಭಿಸಿತು' ಎಂದು ಹೇಳಿಕೊಳ್ಳಲು ಪ್ರಾರಂಭಿಸಿದರು. ದೇವತೆಗಳ ಅಹಂಕಾರವನ್ನು ನಾಶಗೊಳಿಸುವ ಸಲುವಾಗಿ ಬ್ರಹ್ಮನು ವಿಚಿತ್ರವಾದ ಒಂದು ರೂಪವನ್ನು ಸೃಷ್ಟಿಸಿದನು. ಯಕ್ಷರೂಪಧರನಾದ ಆ ಪುರುಷನು ಯಾರೆಂಬುದು ದೇವತೆಗಳಿಗೆ ತಿಳಿಯಲಿಲ್ಲ. ಅವರು ಆ ಯಕ್ಷನನ್ನು ಕಂಡು ಭ್ರಾಂತರಾದರು. ಒಡನೆಯೇ ಯಕ್ಷನಾರೆಂಬುದನ್ನು ತಿಳಿದುಬರುವಂತೆ ತಮ್ಮ ಮುಖ್ಯಸ್ಥನಾದ ಅಗ್ನಿಯನ್ನು ಕಳುಹಿಸಿದರು. ಅಗ್ನಿಯು ಹಾಗೆಯೇ ಆಗಲೆಂದು ಹೇಳಿ ಯಕ್ಷನ ಸಮೀಪಕ್ಕೆ ಹೋದನು. ಅಗ್ನಿಯನ್ನು ಕಂಡೊಡನೆಯೇ ಯಕ್ಷನು ಪ್ರಶ್ನಿಸಿದನು. '**ಕೋಽಸಿ?**' 'ನೀನು ಯಾರು?'

'**ಅಗ್ನಿಃ ಜಾತವೇದಾಃ ಅಹಮಸ್ಮಿ ।**'

'ಅಗ್ನಿಯೂ, ಜಾತವೇದನೂ ನಾನೇ ಆಗಿರುವೆನು'—ಎಂದು ಅಗ್ನಿಯು ಉತ್ತರಿಸಿದನು.

'**ತ್ವಯಿ ಕಿಂ ವೀರ್ಯಂ?** ನಿನ್ನಲ್ಲಿರುವ ಶಕ್ತಿಯೇನು?'—ಎಂದು ಯಕ್ಷನು ಪ್ರಶ್ನಿಸಿದನು.

'**ಸರ್ವಂ ದಹೇಯಂ ಯದಿದಂ ಪೃಥಿವ್ಯಾಂ**—ಈ ಪ್ರಪಂಚದಲ್ಲಿ ಏನಿರುವುದೋ ಅದೆಲ್ಲವನ್ನೂ ನಾನು ದಹಿಸಿಬಿಡುತ್ತೇನೆ'—ಎಂದು ಅಗ್ನಿಯು ಉತ್ತರಿಸಿದನು.

'ಹಾಗಾದರೆ ಇದನ್ನು ಸುಡು' ಎಂದು ಯಕ್ಷನು ಒಂದು ಹುಲ್ಲುಕಡ್ಡಿಯನ್ನು ಅಗ್ನಿಯ ಮುಂದಿಟ್ಟನು. ಅಗ್ನಿಯು ಅದನ್ನು ಸುಟ್ಟುಹಾಕುವ ಸಲುವಾಗಿ ಬಹಳ ರಭಸದಿಂದ ಅದರ ಬಳಿಗೆ ಹೋದನು. ಆದರೆ **ನ ಶಶಾಕ ದಗ್ಧುಂ**—ಆ ಹುಲ್ಲುಕಡ್ಡಿಯನ್ನು ಸುಡಲೂ ಅಗ್ನಿಗೆ ಸಾಧ್ಯವಾಗಲಿಲ್ಲ.

ಅನಂತರ ಅಗ್ನಿಯು ಹತಪ್ರಭನಾಗಿ ದೇವತೆಗಳ ಬಳಿಗೆ ಬಂದು ಯಕ್ಷನಾರೆಂಬುದನ್ನು ತನ್ನಿಂದ ತಿಳಿದುಕೊಳ್ಳಲಾಗಲಿಲ್ಲವೆಂದು ಹೇಳಿಬಿಟ್ಟನು. ಅನಂತರ ದೇವತೆಗಳು ವಾಯುವನ್ನು ಯಕ್ಷನ ಸಮೀಪಕ್ಕೆ ಕಳುಹಿಸಿಕೊಟ್ಟರು.

**ವಾಯವೇತದ್ವಿಜಾನೀಹಿ । ಕಿಮೇತದ್ಯಕ್ಷಂ**

ವಾಯುವೂ ಯಕ್ಷನ ಬಳಿಗೆ ಹೋದನು. ಅವನು ಹೋದೊಡನೆಯೇ ಹಿಂದಿನಂತೆಯೇ ಯಕ್ಷನು ಪ್ರಶ್ನಿಸಿದನು.

'**ಕೋಽಸಿ**? ನೀನು ಯಾರು?'

'**ವಾಯುಃ ಮಾತರಿಶ್ವಾ ವಾ ಅಹಮಸ್ಮಿ**–ನಾನು ವಾಯುವಾಗಿದ್ದೇನೆ. ಮಾತರಿಶ್ವನೂ ನಾನೇ ಆಗಿದ್ದೇನೆ.'

'**ತ್ವಯಿ ಕಿಂ ವೀರ್ಯಂ**?' 'ನಿನ್ನಲ್ಲಿರುವ ಬಲವೇನು?'

'**ಸರ್ವಮಾದದೀಯಂ ಯದಿದಂ ಪೃಥಿವ್ಯಾಂ**–ಈ ಪ್ರಪಂಚದಲ್ಲಿರುವ ಎಲ್ಲ ವಸ್ತುಗಳನ್ನೂ ಹಾರಿಸಿಕೊಂಡು ಹೋಗಿಬಿಡಬಲ್ಲೆ.'

ವಾಯುವಿನ ಮುಂದೆಯೂ ಯಕ್ಷನು ಹುಲ್ಲುಕಡ್ಡಿಯೊಂದನ್ನಿಟ್ಟು '**ಏತದಾದತ್ಸ್ವ** ಇದನ್ನು ಹಾರಿಸಿಕೊಂಡು ಹೋಗು'–ಎಂದನು. ವಾಯುವು ನಿರತಿಶಯವೇಗದಿಂದ ಅದರ ಬಳಿಗೆ ಹೋದನು. ಆದರೆ **ತನ್ನ ಶಶಾಕಾದಾತುಂ**– ಅದನ್ನು ಅಳ್ಳಾಡಿಸಲು ಕೂಡ ಅವನಿಗೆ ಸಾಧ್ಯವಾಗಲಿಲ್ಲ. ಅವನೂ ಸಹ ಹತಪ್ರಭನಾಗಿ ದೇವತೆಗಳ ಸಮೀಪಕ್ಕೆ ಹೋಗಿ ಯಕ್ಷನಾರೆಂಬುದನ್ನು ತಿಳಿದುಕೊಳ್ಳಲು ತನಗೂ ಸಾಧ್ಯವಾಗಲಿಲ್ಲವೆಂದು ಹೇಳಿಬಿಟ್ಟನು. ಅನಂತರ ದೇವತೆಗಳೆಲ್ಲರೂ ಯಕ್ಷನಾರೆಂಬುದನ್ನು ತಿಳಿದುಬರುವಂತೆ ಇಂದ್ರನನ್ನೇ ಕಳುಹಿಸಿಕೊಟ್ಟರು. ಇಂದ್ರನು ಯಕ್ಷನ ಸಮೀಪಕ್ಕೆ ಹೋದನು. ಆದರೆ ಯಕ್ಷನು ಒಡನೆಯೇ ಅಂತರ್ಧಾನನಾದನು. ಅದೇ ಸಮಯದಲ್ಲಿ ಹಿಮವಂತನ ಮಗಳಾದ ಬಹುಶೋಭಾಯಮಾನಳಾಗಿ ಕಾಣುತ್ತಿದ್ದ ಬ್ರಹ್ಮವಿದ್ಯಾ ಸ್ವರೂಪಿಣಿಯಾದ ಉಮಾಹೈಮವತಿಯು ಆಕಾಶದಲ್ಲಿ ಕಾಣಿಸಿಕೊಂಡಳು. ಅವಳ ಸಮೀಪಕ್ಕೇ ಹೋಗಿ ಇಂದ್ರನು ಅವಳನ್ನು ಕುರಿತು '**ಕಿಮೇತದ್ಯಕ್ಷಂ**–

ಈ ಯಕ್ಷನು ಯಾರು?' ಎಂದು ಪ್ರಶ್ನಿಸಿದನು. ಆಗ ಉಮಾಹೈಮವತಿಯು ಹೇಳಿದಳು :

'ಸಾ ಬ್ರಹ್ಮೇತಿ ಹೋವಾಚ । ಅವಳು ಯಕ್ಷನು ಬ್ರಹ್ಮನೆಂದು ಹೇಳಿದಳು. ಬ್ರಹ್ಮಣೋ ವಾ ಏತದ್ವಿಜಯೇ ಮಹೀಧ್ವಮಿತಿ । ಬ್ರಹ್ಮನ ಜಯದಲ್ಲಿಯೇ ನೀವು ಮಹಿಮೆಯನ್ನು ಹೊಂದಿದಿರಿ. ವಿಜಯವು ನಿಮ್ಮದಲ್ಲ; ಬ್ರಹ್ಮನದು ; ಪರಮಾತ್ಮನದು. ನೀವು ಮಹಿಮೆಯನ್ನು ಪಡೆದುದು ನಿಜ. ಆದರೆ ಆ ಮಹಿಮೆಗೆ ಬ್ರಹ್ಮನು ಕಾರಣ'–ಎಂದು ಪಾರ್ವತಿಯು ಹೇಳಿದಳು.

ಇಂದ್ರನಿಗೆ ಜ್ಞಾನೋದಯವಾಯಿತು. ಹೀಗೆ ವಿಜಯ, ತೇಜಸ್ಸು, ವ್ಯವಸಾಯ, ಸಾತ್ತ್ವಿಕತೆ–ಈ ಎಲ್ಲಕ್ಕೂ ಪರಮಾತ್ಮನೇ ಕಾರಣ. ಅವನ ಅನುಗ್ರಹವಿಲ್ಲದಿದ್ದರೆ ಇವು ಲಭ್ಯವಾಗುವುದಿಲ್ಲ. ಲಬ್ಧವಾದನಂತರ ಅದು ಪರಮಾತ್ಮನ ಅನುಗ್ರಹದಿಂದ ಲಭಿಸಿತೆಂದು ಭಾವಿಸಬೇಕೇ ಹೊರತು ತಾನೇ ಗಳಿಸಿಬಿಟ್ಟೆನೆಂದು ಅಹಂಕಾರಪಡಬಾರದು.)

O O O

**ದ್ಯೂತಂ ಛಲಯತಾಂ ಅಸ್ಮಿ** = ಮೋಸಮಾಡುವವರಲ್ಲಿ ಪಗಡೆ ಯಾಟವೇ ಮುಂತಾದ ರೂಪವಾದ ಜೂಜು ನಾನೇ ಆಗಿದ್ದೇನೆ.

(ಶಂ. ಭಾ.)

**ಛಲಯತಾಂ ದ್ಯೂತಂ ಅಸ್ಮಿ** = ಮೋಸವನ್ನು ಮಾಡುವವರಲ್ಲಿ ಪಗಡೆಯಾಟವೇ ಮುಂತಾದ ಜೂಜು ನಾನಾಗಿದ್ದೇನೆ. (ಕೇವಲ ದಾಳ ಎಸೆಯುವುದಷ್ಟರಿಂದಲೇ ಜಯ-ಪರಾಜಯಗಳು ತೀರ್ಮಾನಿಸಲ್ಪಡುವುದ ರಿಂದ ಛಲತ್ವದ ಯುಕ್ತಿಯು (ಮೋಸದ ಯುಕ್ತಿ) ದ್ಯೂತದಲ್ಲಿದೆ. ಮೋಸದ ಇತರ ಜಾಗಗಳಾದ ಕ್ರಯ-ವಿಕ್ರಯ, ಸಾಲ-ಆಸ್ತಿವಿಭಾಗ ಮುಂತಾದುವು ಗಳೆಲ್ಲಕ್ಕಿಂತಲೂ ಅತಿಶಯವಾದ ಮೋಸವು ಇದಾಗಿರುವುದರಿಂದ ವಂಚನಾ ಸ್ಪದವಾದ ವಿಷಯ ಎಂದು ಇದನ್ನೇ ಹೇಳಿದ್ದಾರೆ. –ವೇದಾಂತದೇಶಿಕರು.

**ಓಂ ವೃಷ್ಣೀನಾಂ ವಾಸುದೇವೋऽಸ್ಮಿ ಪಾಣ್ಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥**

ವೃಷ್ಣಿಗಳಲ್ಲಿ ವಾಸುದೇವನಾಗಿರುವೆನು. ಪಾಂಡವರಲ್ಲಿ ಧನಂಜಯನು. ಮುನಿಗಳಲ್ಲಿ ವ್ಯಾಸನಾಗಿರುವೆನು. ಕವಿಗಳಲ್ಲಿ ಉಶನನು (ಶುಕ್ರನು) ನಾನು.

*　　*　　*

**ವೃಷ್ಣೀನಾಂ ವಾಸುದೇವೋಽಸ್ಮಿ** = ವೃಷ್ಣಿಗಳಲ್ಲಿ ವಾಸುದೇವನಾಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಮಧುವಿನ ವಂಶದಲ್ಲಿ ವೃಷಣನೆಂಬುವನು ಹುಟ್ಟಿದನು. ಅವನಿಂದ ಆ ವಂಶದವರಿಗೆ ವೃಷ್ಣಿಗಳೆಂದು ಹೆಸರಾಯಿತು. ಮಧುವಿನ ವಂಶದವನಾದುದರಿಂದಲೇ ಶ್ರೀಕೃಷ್ಣನನ್ನು ಮಾಧವನೆಂದೂ ಕರೆಯುತ್ತಾರೆ.

**ಮಧೋಃ ಪುತ್ರಶತಂ ತ್ವಾಸೀತ್ ವೃಷಣಸ್ತಸ್ಯ ವಂಶಭಾಕ್ ।**
**ವೃಷಣಾದ್ವೃಷ್ಣಯಃ ಸರ್ವೇ ಮಧೋಸ್ತು ಮಾಧವಾಃ ಸ್ಮೃತಾಃ ॥**

ಹರಿವಂಶ. ೧-೩೩-೫೪

ವೃಷ್ಣಿಗಳೆಂದರೆ ಯಾದವರು. ಯಾದವರ ವಂಶದಲ್ಲಿ ವಸುದೇವನ ಮಗನಾದ ವಾಸುದೇವನು ನಾನು ಎನ್ನುತ್ತಾನೆ ಶ್ರೀಕೃಷ್ಣ. ವಸುದೇವನು ಹುಟ್ಟಿದ ಕಾಲಕ್ಕೆ ದೇವತೆಗಳು ನಗಾರಿಯನ್ನು ಬಾರಿಸಿದರು—ಎಂದು ಪುರಾಣ ವಚನವಿದೆ. ಅವನ ಮಗನಾದುದರಿಂದಲೂ, ಸ್ವತಃ ಚತುರ್ಭುಜಾದಿ ವಿಶೇಷ ಗಳಿಂದ ಹುಟ್ಟಿದುದರಿಂದಲೂ ಮತ್ತು ಬಾಲ್ಯದಲ್ಲಿಯೇ ಅಮಾನುಷವಾದ ಲೀಲೆಗಳನ್ನು ತೋರಿಸಿದ್ದರಿಂದಲೂ ವಾಸುದೇವರೂಪದಿಂದ ಪರಮಾತ್ಮನ ವಿಭೂತಿಗಳಲ್ಲಿ ಪರಿಗಣಿತನಾಗಿದ್ದಾನೆ.

**ಪಾಣ್ಡವಾನಾಂ ಧನಂಜಯಃ** = ಪಾಂಡವರಲ್ಲಿ ಧನಂಜಯನು ನಾನೇ ಆಗಿದ್ದೇನೆ ಎನ್ನುತ್ತಾನೆ ಶ್ರೀಕೃಷ್ಣ. ಪಾಂಡವಶ್ರೇಷ್ಠನಾದ ಯುಧಿಷ್ಠಿರನು ಮಹಾತ್ಮನೆಂಬುದರಲ್ಲಿಯೂ ಧರ್ಮಾತ್ಮನೆಂಬುದರಲ್ಲಿಯೂ ಸಂಶಯವಿಲ್ಲ. ಆದರೆ ಅರ್ಜುನನು ಶ್ರೀಕೃಷ್ಣನಿಂದ ಬೇರೆಯವನೇ ಅಲ್ಲ. ಶ್ರೀಕೃಷ್ಣನ ಮಾತಿನಲ್ಲಿಯೇ :

**ನರಸ್ತ್ವಮಸಿ ದುರ್ಧರ್ಷ ಹರಿರ್ನಾರಾಯಣೋ ಹ್ಯಹಮ್ ।**
**ಕಾಲೇ ಲೋಕಮಿಮಂ ಪ್ರಾಪ್ತೌ ನರನಾರಾಯಣಾವೃಷೀ ॥**
**ಅನನ್ಯಃ ಪಾರ್ಥ ಮತ್ತಸ್ತ್ವಂ ತ್ವತ್ತಶ್ಚಾಹಂ ತಥೈವ ಚ ।**
**ನಾವಯೋರನ್ತರಂ ಶಕ್ಯಂ ವೇದಿತುಂ ಭರತರ್ಷಭ ॥** ವನ ೧೨-೪೬-೪೭

"ದುರ್ಜಯನಾದ ಅರ್ಜುನನೇ! ನೀನು ದುರ್ಧರ್ಷನಾದ ನರ. ನಾನು ಸ್ವಯಂ ಹರಿ ಅಥವಾ ನಾರಾಯಣ. ನರ-ನಾರಾಯಣರೆಂಬ ಋಷಿಗಳಾಗಿದ್ದ ನಾವು ಈ ಲೋಕಕ್ಕೆ ಬಂದಿದ್ದೇವೆ. ಪಾರ್ಥ! ನಿನಗಿಂತಲೂ ನಾನು ಬೇರೆಯವನಲ್ಲ ; ನನಗಿಂತಲೂ ನೀನು ಬೇರೆಯವನಲ್ಲ. ನಮ್ಮಿಬ್ಬರಲ್ಲಿ ಯಾವ ವಿಧವಾದ ಅಂತರವೂ ಇಲ್ಲ. ಅಂತರವಿಲ್ಲವೆಂಬುದನ್ನು ಬೇರೆಯವ ರಿಂದ ತಿಳಿಯಲು ಕೂಡ ಶಕ್ಯವಿಲ್ಲ"–ಈ ಕಾರಣದಿಂದಾಗಿ ನಾನು ಪಾಂಡವ ರಲ್ಲಿ ಧನಂಜಯನೆಂದು ಶ್ರೀಕೃಷ್ಣನು ಹೇಳಿದ್ದಾನೆ.

**ಮುನೀನಾಮಪ್ಯಹಂ ವ್ಯಾಸಃ** = ಮುನಿಗಳಲ್ಲಿ ನಾನು ವ್ಯಾಸನಾಗಿದ್ದೇನೆ. ಮನನಶೀಲರಾದವರು ಮುನಿಗಳು. ವ್ಯಾಸರು ಸಮಸ್ತವೇದಗಳನ್ನೂ ಮನನಮಾಡಿ ಅವುಗಳನ್ನು ನಾಲ್ಕಾಗಿ ವಿಭಾಗಮಾಡಿದವರು. ಮಹಾಭಾರತ ಮತ್ತು ಅಷ್ಟಾದಶಪುರಾಣಗಳನ್ನೂ ರಚಿಸಿದವರು. ಬ್ರಹ್ಮಸೂತ್ರವನ್ನೂ ರಚಿಸಿದವರು. ಜ್ಞಾನಭಂಡಾರವಾಗಿರುವ ಇಷ್ಟೊಂದು ಗ್ರಂಥರಾಶಿಯನ್ನು ರಚಿಸಬೇಕಾದರೆ ಅವರಿಗೆ ಮನನಶಕ್ತಿಯು ಎಷ್ಟಿತ್ತೆಂಬುದನ್ನು ಊಹಿಸ ಬಹುದಾಗಿದೆ. ಮುನಿಶಬ್ದಕ್ಕೆ ಸಂಪೂರ್ಣವಾಗಿ ಅರ್ಹತೆಯನ್ನು ಪಡೆದಿದ್ದವರು ಇವರೊಬ್ಬರೇ ಇರಬಹುದು. ಮೇಲಾಗಿ ವ್ಯಾಸರು ವಿಷ್ಣುವಿನ ಅಂಶ ಎಂದೂ ಹೇಳುತ್ತಾರೆ. ವ್ಯಾಸಾಯ ವಿಷ್ಣುರೂಪಾಯ. ಆದುದರಿಂದ ಶ್ರೀಕೃಷ್ಣನು ಮುನಿಗಳಲ್ಲಿ ನಾನು ವ್ಯಾಸನೆಂದು ಹೇಳಿದ್ದಾನೆ.

**ಕವೀನಾಮುಶನಾ ಕವಿಃ** = ಕವಿಗಳಲ್ಲಿ ನಾನು ಉಶನಸನು. ಕವಿ ಎಂದರೆ ವಿದ್ವಾಂಸ, ಪಂಡಿತ, ಬ್ರಹ್ಮ ಎಂದೂ ಆಗುತ್ತದೆ. ಕಾವ್ಯಗಳನ್ನು ರಚಿಸುವವನು ಎಂಬ ಅರ್ಥವಿದ್ದರೂ ಇಲ್ಲಿ ತ್ರಿಕಾಲದರ್ಶೀ ಎಂಬ ಅರ್ಥ. ಶುಕ್ರನ ತಂದೆಯ ಹೆಸರು ಕವಿ. ಆದುದರಿಂದ ಇವನಿಗೂ ಸಹ ಕವಿ ಎಂಬ ಹೆಸರು ಬಂದಿದೆ.

**ಬ್ರಹ್ಮಣೋ ಹೃದಯಂ ಭಿತ್ತ್ವಾ ನಿಃಸೃತೋ ಭಗವಾನ್ ಭೃಗುಃ ।**
**ಭೃಗೋಃ ಪುತ್ರಃ ಕವಿರ್ವಿದ್ವಾನ್ ಶುಕ್ರಃ ಕವಿಸುತೋ ಗ್ರಹಃ ॥**

ಮ. ಆದಿ. ೬೭

ಭಗವಾನ್ ಭೃಗುಋಷಿಯು ಬ್ರಹ್ಮನ ಹೃದಯವನ್ನು ಸೀಳಿಕೊಂಡು ಹೊರಕ್ಕೆ ಬಂದನು. ಅವನ ಮಗ ವಿದ್ವಾಂಸನಾದ ಕವಿ ಎಂಬುವನು. ಶುಕ್ರ

ನಾದರೋ ಕವಿಯ ಮಗ. ಇವನೂ ಒಂದು ಗ್ರಹವು. ಶುಕ್ರನು ಶಂಕರನನ್ನು ಆರಾಧಿಸಿ ಸಂಜೀವಿನೀವಿದ್ಯೆಯನ್ನೂ ಜರಾ-ಮರಣರಹಿತವಾದ ವಜ್ರಕ್ಕೆ ಸಮಾನವಾದ ದೃಢವಾದ ಶರೀರವನ್ನೂ ಪಡೆದುಕೊಂಡನು. ಶಂಕರನ ಪ್ರಸಾದದಿಂದ ಯೋಗವಿದ್ಯೆಯನ್ನು ಕಲಿತು ಯೋಗಾಚಾರ್ಯನೆಂಬ ಹೆಸರನ್ನೂ ಪಡೆದನು. ಇವನು ದೈತ್ಯಗುರು. ನೀತಿಶಾಸ್ತ್ರದಲ್ಲಿ ಪ್ರವೀಣ. ಶುಕ್ರನೀತಿ ಎಂಬ ಗ್ರಂಥವು ಸುಪ್ರಸಿದ್ಧವಾಗಿದೆ. ಇವನಿಗೆ ಉಶನಸ್ ಎಂಬ ಮತ್ತೊಂದು ಹೆಸರಿದೆ. ವಿದ್ವಾಂಸರಲ್ಲಿ ವಿದ್ವಾಂಸನಾದ (ಕವಿಯಾದ) ಉಶನಸನು ಅಥವಾ ಶುಕ್ರನು ನಾನು ಎಂದು ಶ್ರೀಕೃಷ್ಣನು ಹೇಳಿದ್ದಾನೆ.)

o o o

**ಮುನೀನಾಂ**= ಮನನಶೀಲರಾದವರಲ್ಲಿ ಮತ್ತು ಎಲ್ಲ ಪದಾರ್ಥಗಳನ್ನೂ ಅರಿತವರಲ್ಲಿ ನಾನು ವ್ಯಾಸನು.

**ಕವೀನಾಂ** =ಕ್ರಾಂತದರ್ಶನವುಳ್ಳವರಲ್ಲಿ. (ಶಂ. ಭಾ.)

ವೃಷ್ಣಿಗಳಲ್ಲಿ ನಾನು ವಾಸುದೇವ. ವಾಸುದೇವನು ರಾಮನಂತೆ ಸಾಕ್ಷಾತ್ತಾಗಿ ನನ್ನ ಅವತಾರವೇ ಆಗಿರುವುದರಿಂದ **ವಾಸುದೇವಃ** ಎಂಬಲ್ಲಿ ವಸುದೇವನ ಮಗನಾಗಿರುವಿಕೆಯು ವಿಭೂತಿ. ವಾಸುದೇವನು ಶ್ರೀಕೃಷ್ಣನಿಂದ ಬೇರೆಯಾದವನಲ್ಲ.

**ಮುನಯಃ**= ಮನನದಿಂದ ಆತ್ಮಯಾಥಾತ್ಮ್ಯವನ್ನು ಬಲ್ಲವರು.

**ಏತಮೇವ ವಿದಿತ್ವಾ ಮುನಿರ್ಭವತಿ** ಬೃ.೬-೪-೨೨

**ಕವಯಃ**= ವಿದ್ವಾಂಸರು. (ರಾ. ಭಾ.)

ಆತ್ಮಯಾಥಾತ್ಮ್ಯವನ್ನು ಕಂಡ ಮುನಿಗಳಲ್ಲಿ ವ್ಯಾಸರೇ ತಾನು. ವ್ಯಾಸರು ಅತ್ಯಂತಾತಿಶಯವುಳ್ಳವರು ಎಂಬುದನ್ನು ಶಾಸ್ತ್ರಗಳು ಸ್ಪಷ್ಟವಾಗಿ ಹೇಳುತ್ತವೆ.

**ತಪೋವಿಶಿಷ್ಟಾದಪಿ ವೈ ವಸಿಷ್ಠಾನ್ಮುನಿಸತ್ತಮಾತ್ ।**
**ಮನ್ಯೇ ಶ್ರೇಷ್ಠತಮಂ ತ್ವಾದ್ಯ ರಹಸ್ಯಜ್ಞಾನವೇದನಾತ್ ॥**

ಭಾ. ಅ. ೧-೯೬

ಇವರು ಭಗವಂತನ ವಿಭವಾವತಾರವೇ ಆಗಿದ್ದಾರೆ.

**ವೇದವಿದ್ಭಗವಾನ್ಕಲ್ಕೀ ಪಾತಾಲಶಯನಃ ಪ್ರಭುಃ** (ಅಹಿ ರ್ಬುಧ್ನ್ಯಸಂಹಿತಾ. ೫-೫೬) –ವೇದಾಂತದೇಶಿಕರು.

**ವಾಸುದೇವಃ** = ಎಲ್ಲವನ್ನೂ ಆಚ್ಛಾದನೆಮಾಡಿರುವವನು, ಎಲ್ಲರಿಗೂ ವಾಸಸ್ಥಾನವಾಗಿರುವವನು, ಎಲ್ಲವನ್ನೂ ತನ್ನಲ್ಲಿ ವಾಸಮಾಡಿಸಿಕೊಂಡಿರುವವನು ಮತ್ತು ಎಲ್ಲೆಲ್ಲೂ ವಾಸಮಾಡುವವನು.

**ಛಾದಯಾಮಿ ಜಗದ್ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ ।**
**ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋಽಸ್ಮ್ಯಹಮ್ ॥**

ಎಂದು ಮೋಕ್ಷಧರ್ಮವು ಹೇಳುತ್ತದೆ. **ವ್ಯಾಸಃ** = ಎಲ್ಲಕ್ಕಿಂತಲೂ ವಿಶಿಷ್ಟನಾದವನು ಮತ್ತು ಎಲ್ಲ ಕಡೆಗಳಲ್ಲಿಯೂ ಸುತ್ತಲೂ ಅವನೇ ಆಗಿರುವವನು.

**ವಿಶಿಷ್ಟಃ ಸರ್ವಸ್ಮಾತ್ ಆಸಮನ್ತಾತ್ಸ ಏವ ಇತಿ ವ್ಯಾಸಃ**

(ಮ. ಭಾ.)

**ಓಂ ದಣ್ಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥**

ದಮನಮಾಡುವವರಲ್ಲಿ ನಾನು ದಂಡವಾಗಿರುವೆನು. ಗೆಲ್ಲಬೇಕೆಂಬ ಇಚ್ಛೆಯುಳ್ಳವರಲ್ಲಿ ನೀತಿಯಾಗಿರುವೆನು. ಗೋಪ್ಯವಿಷಯಗಳಲ್ಲಿ ಮೌನವಾಗಿರುವೆನು ಮತ್ತು ಜ್ಞಾನಿಗಳಲ್ಲಿ ಜ್ಞಾನವಾಗಿರುವೆನು.

* * *

**(ದಮಯತಾಂ ದಣ್ಡೋಽಸ್ಮಿ** = ದಮನಮಾಡುವವರಲ್ಲಿ ದಂಡವು ನಾನು ಎಂದರೆ ದುರ್ಮಾರ್ಗದಲ್ಲಿ ಹೋಗುತ್ತಿರುವವರನ್ನು ದಂಡಿಸುವ ಶಕ್ತಿಯು ನಾನೇ ಆಗಿದ್ದೇನೆ.

**ನೀತಿರಸ್ಮಿ ಜಿಗೀಷತಾಮ್** = ಗೆಲ್ಲಲು ಬಯಸುವವರಲ್ಲಿ ನಾನು ನೀತಿಯಾಗಿರುವೆನು. ನೀತಿ ಎಂದರೆ ಸಾಮ-ದಾನ-ಭೇದ-ದಂಡೋಪಾಯಗಳು. ಗೆಲ್ಲಲು ಬಯಸುವವರು ಈ ಉಪಾಯಗಳನ್ನು ಸಮಯೋಚಿತವಾಗಿ ಉಪಯೋಗಿಸಬೇಕು. ಅಂತಹ ಉಪಾಯ ಅಥವಾ ನೀತಿಯೇ ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಮೌನಂ ಚೈವಾಸ್ಮಿ ಗುಹ್ಯಾನಾಂ**=ಗುಹ್ಯ ಎಂದರೆ ಗುಟ್ಟುಗಳು. ರಹಸ್ಯವಿಷಯಗಳು ಗುಟ್ಟಾಗಿಯೇ ಉಳಿಯಬೇಕಾದರೆ ಮೌನದಿಂದ ಮಾತ್ರವೇ ಸಾಧ್ಯ. ಒಮ್ಮೆ ಬಾಯಿಬಿಟ್ಟರೂ ಗುಟ್ಟು ಬಯಲಾಗಿಬಿಡುತ್ತದೆ. ಆದುದರಿಂದ ರಹಸ್ಯವನ್ನು ಗುಟ್ಟಾಗಿಯೇ ಇರಿಸುವಂತಹ ಮೌನವೇ (ತುಟಿ ಪಿಟಕ್ ಎನ್ನದೇ ಇರುವುದು) ನಾನು ಎನ್ನುತ್ತಾನೆ ಶ್ರೀಕೃಷ್ಣ.

**ಜ್ಞಾನಂ ಜ್ಞಾನವತಾಮಹಂ**=ಜ್ಞಾನವಂತರಲ್ಲಿ ನಾನು ಜ್ಞಾನವೇ ಆಗಿದ್ದೇನೆ. ಮನುಷ್ಯರು ನನ್ನ ಅನುಗ್ರಹದಿಂದ ಜ್ಞಾನಿಗಳಾಗುತ್ತಾರೆ. ಜ್ಞಾನಿಗಳಲ್ಲಿ ನಾನು ಜ್ಞಾನರೂಪದಿಂದಲೇ ಇದ್ದೇನೆ ಎನ್ನುತ್ತಾನೆ.)

o o o

**ಗುಹ್ಯಾನಾಂ**=ಗೋಪ್ಯವಾಗಿಡಲು ಯೋಗ್ಯವಾದ ಭಾವಗಳಲ್ಲಿ.

(ಶಂ. ಭಾ.)

**ದಂಡೋ ದಮಯತಾಂ**=ನಿಯಮವನ್ನು ಮೀರಿಹೋದಾಗ ದಂಡಕ್ಕೆ ಯೋಗ್ಯರಾದವರನ್ನು ದಂಡಿಸುವ ದಂಡವು ಭಗವದ್ವಿಭೂತಿ.

ನೀತಿರಸ್ಮಿ ಜಿಗೀಷತಾಂ = ಗೆಲ್ಲಲು ಬಯಸುವವರಿಗೆ ಗೆಲುವಿಗೆ ಉಪಾಯವಾದ ನೀತಿಯೂ ತಾನೇ ಎನ್ನುತ್ತಾನೆ.

**ಮೌನಂ ಚೈವಾಸ್ಮಿ** = ಗುಟ್ಟಿನ ವಿಷಯಗಳಿಗೆ ಸಂಬಂಧಪಟ್ಟ ಗೋಪನೀಯವಸ್ತುಗಳಲ್ಲಿ ಮೌನವು ತಾನೇ ಎನ್ನುತ್ತಾನೆ.

**ಜ್ಞಾನಂ ಜ್ಞಾನವತಾಮಹಂ**=ಭೂತಾನಾಮಸ್ಮಿ ಚೇತನಾ ಎಂಬಲ್ಲಿಯೇ ಚೈತನ್ಯಮಾತ್ರವನ್ನು ಭಗವಂತನ ವಿಭೂತಿಯೆಂದು ಹಿಂದೆಯೇ ಹೇಳಿದೆ. ಇಲ್ಲಿ ಹೇಳಿರುವ ಜ್ಞಾನವು ಪುರುಷಾರ್ಥಕ್ಕೆ ಉಪಯೋಗವಾಗುವ ಅತಿಶಯಿತವಾದ ಜ್ಞಾನವಿಶೇಷ. (ರಾ. ಭಾ.)

**ಓಂ ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥೩೯॥**

ಅರ್ಜುನ! ಎಲ್ಲ ಭೂತಗಳಿಗೂ ಯಾವುದು ಬೀಜವೋ ಅದೇ ನಾನು. ಚರಾಚರಗಳಲ್ಲಿ ನಾನಿಲ್ಲದೇ ಇರಬಹುದಾದ ಭೂತವು ಯಾವುದೂ ಇರುವುದಿಲ್ಲ.

* * *

(ಅರ್ಜುನ! ಸರ್ವಪ್ರಾಣಿಗಳಿಗೂ ಕಾರಣವಾದ ಬೀಜವೇ ನಾನು. ನನ್ನನ್ನು ಬಿಟ್ಟು ಚರಾಚರಪ್ರಾಣಿಗಳು ಯಾವುದೂ ಇರುವುದಿಲ್ಲ. ನಾನಿಲ್ಲದೇ ಅವುಗಳಿಗೆ ಅಸ್ತಿತ್ವವೇ ಇಲ್ಲ. ಅಣು-ರೇಣು-ತೃಣ-ಕಾಷ್ಠಾದಿಗಳೆಲ್ಲಕ್ಕೂ ನಾನೇ ಕಾರಣ. **'ಸರ್ವಂ ವಿಷ್ಣುಮಯಂ ಜಗತ್'** ಎಲ್ಲವೂ ವಿಷ್ಣುಮಯವಾಗಿಯೇ ಇದೆ. ಎಲ್ಲದರಲ್ಲಿಯೂ ನಾನೇ ಇದ್ದೇನೆ. ನಾನಿಲ್ಲದೇ ಯಾವುದೇ ಪದಾರ್ಥದ ಅಸ್ತಿತ್ವವೂ ಇರುವುದಿಲ್ಲ.)

o o o

**ಸರ್ವಭೂತಾನಾಂ ಬೀಜಂ ತದಹಮರ್ಜುನ** = ಎಂದರೆ ಎಲ್ಲ ಭೂತಗಳ ಉತ್ಪತ್ತಿಗೆ ಕಾರಣನಾದವನು ನಾನೇ ಆಗಿದ್ದೇನೆ.

**ನ ತದಸ್ತಿ ಚರಾಚರಮ್**= ನಾನಿಲ್ಲದೇ ಇರುವ ಚರ ಅಥವಾ ಅಚರ ವಾದ ಭೂತಪ್ರಾಣಿಯು ಯಾವುದೂ ಇಲ್ಲ. ಏಕೆಂದರೆ : ನನ್ನಿಂದ ರಹಿತ ವಾಗಿರುವುದಕ್ಕೆ ಸತ್ತೆಯೇ ಇಲ್ಲ. ಅದು ಶೂನ್ಯ. ಆದುದರಿಂದ ಎಲ್ಲವೂ ಮದಾತ್ಮಕ. ನನ್ನ ಸ್ವರೂಪವೇ ಆಗಿದೆ. (ಶಂ. ಭಾ.)

ಎಲ್ಲ ಅವಸ್ಥೆಗಳಲ್ಲಿಯೂ ಇರುವ ಎಲ್ಲ ಭೂತಗಳ ಆಯಾ ಅವಸ್ಥೆಗಳಿಗೆ ಬೀಜವಾದವನು (ಉಪಾದಾನದ್ರವ್ಯವಾದವನು) ನಾನೇ. ಆ ಉಪಾದಾನವಸ್ತುವು ಪ್ರತ್ಯಕ್ಷವಾಗಿ ಕಾಣಬಹುದು ; ಅಥವಾ ಕಾಣದೇ ಅನುಮಾನಾದಿಗಳಿಂದ ತಿಳಿಯಲ್ಪಡಬಹುದು–ಹೇಗಿದ್ದರೂ ಆ ಉಪಾದಾನ ದ್ರವ್ಯವು ನಾನೇ ಆಗಿದ್ದೇನೆ. ಆತ್ಮನಾಗಿರುವ ನನ್ನನ್ನು ಹೊರತಾದ ಭೂತ ಜಾತವು ಯಾವುದೂ ಇಲ್ಲ. ಎಲ್ಲ ಅವಸ್ಥೆಗಳಲ್ಲಿರುವ ಎಲ್ಲ ವಸ್ತುಗಳೂ ಎಲ್ಲಕ್ಕೂ ಆತ್ಮವಾಗಿರುವ ನನ್ನಿಂದಲೇ ಕೂಡಿರುತ್ತವೆ. (ರಾ. ಭಾ.)

**ನ ತದಸ್ತಿ...... ಚರಾಚರಮ್.**

ನನ್ನನ್ನು ಬಿಟ್ಟು ಭೂತವಾಗಿರುವುದು (ಸತ್ತೆಯನ್ನು ಹೊಂದಿರುವುದು) ಯಾವುದೂ ಇಲ್ಲ. ಎಲ್ಲ ಪದಾರ್ಥಗಳಲ್ಲಿಯೂ ವ್ಯಾಪಿಸಿರುವವನು ನಾನು. **ವಿಶ್ವರೂಪ, ಅನಂತಗತಿ, ಅನಂತಭಾಗ, ಅನಂತಕ** (ಮ. ಭಾ.)

**ಓಂ ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥**

ಪರಂತಪನೇ! ನನ್ನ ವಿಭೂತಿಗಳಿಗೆ ಕಡೆಯೆಂಬುದೇ ಇಲ್ಲ. ಆದರೆ ನಾನು ಸಂಕ್ಷೇಪವಾಗಿ ನನ್ನ ವಿಭೂತಿಯ ವಿಸ್ತಾರವನ್ನು ಹೇಳಿರುವೆನು.

*        *        *

(ಅರ್ಜುನ! ನನ್ನ ದಿವ್ಯವಿಭೂತಿಗಳಿಗೆ–ಎಂದರೆ ನನ್ನ ಭಾವವನ್ನು ಹೊಂದಿರುವ ದೇವ-ದಾನವ-ಮನುಷ್ಯರಿಗಾಗಲೀ, ಪಶು-ಪಕ್ಷಿ-ಮೃಗ-ವೃಕ್ಷ ಗಳಿಗಾಗಲೀ ಕಡೆಯೆಂಬುದೇ ಇಲ್ಲ.

ನಾನು ಹೇಳಿರುವುದರಿಂದಲೇ ಇದು ಅಗಣ್ಯವೆಂಬುದು ತಿಳಿಯುತ್ತದೆ. ನಾನು ಎಲ್ಲೆಲ್ಲೂ ಇದ್ದೇನೆ. ಸರ್ವತ್ರವ್ಯಾಪ್ತನಾಗಿದ್ದೇನೆ. ನಾನಿಲ್ಲದ ಸ್ಥಳವೇ ಇಲ್ಲ–ಎಂಬುದನ್ನು ಹೇಳುವ ಸಲುವಾಗಿಯೇ ನನ್ನ ವಿಭೂತಿಯು ಅತ್ಯಂತ ವಿಸ್ತಾರವಾಗಿದ್ದರೂ ನಿನ್ನ ಗ್ರಹಣಕ್ಕೆ ಅನುಕೂಲವಾಗಲೆಂದು ಅದನ್ನು ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ.)

o        o        o

**ನಾನ್ತೋಽಸ್ತಿ** = ಸರ್ವಾತ್ಮಕನಾದ ಈಶ್ವರನ ದಿವ್ಯವಿಭೂತಿಗಳನ್ನು ಅವು ಇಷ್ಟೇ ಇವೆ ಎಂದು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ವಿಸ್ತರವಾದ ನನ್ನ ವಿಭೂತಿಯಲ್ಲಿ ಅಂಶಮಾತ್ರವನ್ನು ನಿನಗೆ ಹೇಳಿದ್ದೇನೆ. (ಶಂ. ಭಾ.)

ಕಲ್ಯಾಣಮಯವಾದ ನನ್ನ ವಿಭೂತಿಗಳಿಗೆ ಕೊನೆಯಿಲ್ಲ. ನನ್ನ ಈ ವಿಭೂತಿಯ ವಿಸ್ತಾರವನ್ನು ಕೆಲವು ಉಪಾಧಿಗಳಿಂದ ಕೆಲವು ಅಂಶಗಳಲ್ಲಿ ಮಾತ್ರ ಸಂಕ್ಷೇಪವಾಗಿ ತಿಳಿಸಿದ್ದೇನೆ. (ರಾ. ಭಾ.)

**ಓಂ ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಮ್ಭವಮ್ ॥೪೧॥**

ಯಾವ ಯಾವ ಸತ್ತ್ವವು ವಿಭೂತಿಯುಳ್ಳದ್ದೋ, ಶ್ರೀಯುಕ್ತವೋ, ಊರ್ಜಿತವಾಗಿರುವುದೋ–ಅವೆಲ್ಲವನ್ನೂ ನೀನು ನನ್ನ ತೇಜಸ್ಸಿನ ಅಂಶ ದಿಂದ ಹುಟ್ಟಿರುವುವೆಂದೇ ತಿಳಿ.

*        *        *

(ಲೋಕದಲ್ಲಿ ಯಾವ ಯಾವ ವಸ್ತುವು ನನ್ನ ವಿಭೂತಿಯಿಂದ ಎಂದರೆ ಅಮಾನುಷವಾದ ಶಕ್ತಿಯಿಂದ-ಐಶ್ವರ್ಯದಿಂದ ಕೂಡಿರುವುದೋ, ಕಾಂತಿ

ಯುಕ್ತವಾಗಿರುವುದೋ, ಬಲಯುಕ್ತವಾಗಿರುವುದೋ ಅವುಗಳೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದಲೇ ಹುಟ್ಟಿವೆಯೆಂದು ನೀನು ತಿಳಿ. ವಸ್ತು ಮಾತ್ರಕ್ಕೂ ಪರಮಾತ್ಮನು ಹೇಳಿದ್ದಾನೆ. ಇದರಿಂದ ಮನುಷ್ಯರ ವಿಷಯವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ. ವಿಭೂತಿ ಎಂದರೆ ಐಶ್ವರ್ಯ.

ಪ್ರಾಣಿಯು ಕಾಂತಿಯಿಂದ ಕೂಡಿದ್ದರೂ ಸರಿಯೇ, ಉತ್ಸಾಹ-ಬಲ ಗಳಿಂದ ಕೂಡಿದ್ದರೂ ಸರಿಯೇ ಅವೆಲ್ಲವೂ ನನ್ನ ತೇಜಸ್ಸಿನ ಅಂಶದಿಂದಲೇ ಹುಟ್ಟಿರುವುವೆಂದು ಭಾವಿಸು, ಎನ್ನುತ್ತಾನೆ ಶ್ರೀಕೃಷ್ಣ.)

o o o

**ಶ್ರೀಮತ್** = ಶ್ರೀಃ –ಲಕ್ಷ್ಮೀ (ಕಾಂತಿ) ಅದರಿಂದ ಕೂಡಿದ್ದು ಮತ್ತು ಉತ್ಸಾಹದಿಂದ ಕೂಡಿದ್ದು. (ಶಂ. ಭಾ.)

ವಿಭೂತಿಮತ್ = ಆಳಲ್ಪಡುವಿಕೆಯಿಂದ ಸಂಪನ್ನವಾದ. ಶ್ರೀಮತ್ = ಕಾಂತಿಸಂಪನ್ನವಾದ ಅಥವಾ ಧನ-ಧಾನ್ಯಸಮೃದ್ಧಿಯಿಂದ ಕೂಡಿದ. ಊರ್ಜಿತಂ = ಕಲ್ಯಾಣವಾದ ಆರಂಭಗಳಲ್ಲಿ ಉದ್ಯುಕ್ತವಾದ. ತೇಜಃ– ಇತರರನ್ನು ಅಭಿಭವಿಸುವ ಸಾಮರ್ಥ್ಯ.

**ಮಮ ತೇಜೋಽಂಶಸಮ್ಭವಮ್** = ಅಚಿನ್ತ್ಯವಾದ ಶಕ್ತಿಯುಳ್ಳ ನನ್ನ ನಿಯಮನಶಕ್ತಿಯ ಅಂಶದಿಂದ ಹುಟ್ಟಿದ್ದನ್ನಾಗಿ. (ರಾ. ಭಾ.)

**ಯದ್ಯದ್ವಿಭೂತಿಮತ್** ಎಂಬುದು ವಿಸ್ತರ. ವಿಷ್ಣು ಮುಂತಾದುವುಗಳು ಭಗವತ್ಸ್ವರೂಪವೇ ಆಗಿವೆ. ಉಳಿದುವುಗಳು ತೇಜಸ್ಸಿನಿಂದ ಕೂಡಿ ದುವುಗಳು.

**ವಿಶೇಷಕಾ ರುದ್ರವೈನ್ಯೇನ್ದ್ರದೇವಾ ರಾಜನ್ಯಾದ್ಯಾ ಅಂಶ– ಯುತಾನ್ಯಜೀವಾಃ। ಕೃಷ್ಣವ್ಯಾಸೌ ರಾಮಕೃಷ್ಣೌ ಚ ರಾಮಃ ಕಪಿಲಯಜ್ಞಪ್ರಮುಖಾಃ ಸ್ವಯಂ ಸಃ.**

ವಿಶೇಷಕಾಃ–ವಿ= ಗರುಡ, ಶೇಷ=ಅನಂತ. ಕ=ಬ್ರಹ್ಮ. ಗರುಡಾನಂತ ವಿರಿಂಚಿಗಳು. ವೈನ್ಯ = ಪೃಥುಚಕ್ರವರ್ತಿ-ರುದ್ರದೇವರು. ದೇವಾಃ = ಇಂದ್ರಾದಿ ದೇವತೆಗಳು. ರಾಜನ್ಯ = ರಾಜರು ಮುಂತಾದವರು.

ಧರ್ಮನ ಮಗನಾದ ಕೃಷ್ಣ. ವ್ಯಾಸರು, ಶ್ರೀರಾಮ, ಶ್ರೀಕೃಷ್ಣ, ಪರಶುರಾಮ, ಕಪಿಲ, ಯಜ್ಞ–ಮುಂತಾದವರೆಲ್ಲರೂ ಸ್ವಯಂ ವಿಷ್ಣುವೇ.

(ಮ. ಭಾ.)

ಶ್ರೀಕೃಷ್ಣನು ವಿಭೂತಿಯೋಗವನ್ನು ಉಪಸಂಹಾರಮಾಡುತ್ತಾ ಹೇಳುತ್ತಾನೆ :

**ಓಂ ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥೪೨॥**

ಅಥವಾ ಅರ್ಜುನ! ಬಹಳವಾದ ಈ ವಿವರಣೆಯನ್ನು ತಿಳಿಯುವುದರಿಂದ ನಿನಗೆ ಆಗುವ ಪ್ರಯೋಜನವಾದರೂ ಏನಿದೆ? ನಾನು ಈ ಜಗತ್ತೆಲ್ಲವನ್ನೂ ಒಂದಂಶದಿಂದ ಧರಿಸಿಕೊಂಡಿರುವೆನು.

* * *

(ಹೀಗೆಯೇ ಹೇಳುತ್ತಾ ಹೋದರೆ ನನ್ನ ಶಕ್ತಿ, ನನ್ನ ಐಶ್ವರ್ಯ ಮತ್ತು ನನ್ನ ಅಂಶಗಳು ಇಲ್ಲದಿರುವ ಪದಾರ್ಥವೇ ಪ್ರಪಂಚದಲ್ಲಿ ಸಿಕ್ಕುವುದಿಲ್ಲ. ಇರಲು ಸಾಧ್ಯವೂ ಇಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಅರ್ಜುನ! ನಾನು ಈ ಅಖಂಡವಿಶ್ವವನ್ನೂ ನನ್ನ ಒಂದೇ ಒಂದು ಅಂಶದಿಂದ ಸುದೃಢವಾಗಿ ಹಿಡಿದು ನಿಂತಿದ್ದೇನೆ. ಒಂದಂಶದಿಂದ ನಾನು ಈ ಜಗತ್ತನ್ನು ಹಿಡಿದಿರುವೆನೆಂದರೆ ಆ ನನ್ನ ಅಂಶವು ವಿಶ್ವದಲ್ಲಿರುವ ಸಕಲಚರಾಚರಗಳಲ್ಲೆಲ್ಲಾ ವ್ಯಾಪ್ತವಾಗಿದೆಯೆಂದು ಭಾವಿಸು. ಮಣಿಗಳನ್ನು ಒಂದೆಡೆ ಸೇರಿಸಬೇಕಾದರೆ ಅವುಗಳನ್ನು ನೂಲಿನಲ್ಲಿ ಪೋಣಿಸಬೇಕಲ್ಲವೇ? ಅದರಂತೆ ನನ್ನ ಅಂಶವೆಂಬ ದಾರದಿಂದ ಈ ವಿಶ್ವವೇ ಪೋಣಿಸಲ್ಪಟ್ಟಿದೆ. ಈ ಅಂಶದ ಮೂಲಕ ನಾನು ವಿಶ್ವವನ್ನು ದೃಢವಾಗಿ ಹಿಡಿದಿಟ್ಟುಕೊಂಡಿರುತ್ತೇನೆ.)

o o o

ವಿಷ್ಟಭ್ಯ = ವಿಶೇಷವಾಗಿ ದೃಢವಾಗಿ ಧರಿಸಿಕೊಂಡು. (ಶಂ. ಭಾ.)

**ವಿಷ್ಟಭ್ಯಾಹಂ....ಜಗತ್** = ಚಿದಚಿದಾತ್ಮಕವಾದ ಮತ್ತು ಕಾರ್ಯಾವಸ್ಥೆ–ಕಾರಣಾವಸ್ಥೆಗಳಲ್ಲಿರುವ, ಸ್ಥೂಲವೂ ಮತ್ತು ಸೂಕ್ಷ್ಮವೂ ಆದ ಇಡೀ ಜಗತ್ತು ತನ್ನ ಸ್ವರೂಪ-ಸ್ಥಿತಿ-ಪ್ರವೃತ್ತಿಭೇದಗಳಲ್ಲಿ ನನ್ನ ಸಂಕಲ್ಪವನ್ನು

ಮೀರಿಹೋಗದಂತೆ ನನ್ನ ಮಹಿಮೆಯ ಅತ್ಯಲ್ಪವಾದ ಅಂಶದಿಂದ ಎಲ್ಲವನ್ನೂ ನಾನು ಧರಿಸಿಕೊಂಡಿದ್ದೇನೆ. ಭಗವಾನ್ ಪರಾಶರರು ಹೇಳುವಂತೆ :

**ಯಸ್ಯಾಯುತಾಯುತಾಂಶಾಂಶೇ ವಿಶ್ವಶಕ್ತಿರಿಯಂ ಸ್ಥಿತಾ.**

ವಿ. ಪು. ೧-೯-೫೩.

**ಪಾದೋಽಸ್ಯ ವಿಶ್ವಭೂತಾನಿ** ತೈ. ಆ. ೩-೧೨.

ವಿರಾಟ್‌ಪುರುಷನ ಒಂದು ಪಾದವೇ ಈ ವಿಶ್ವ ಮತ್ತು ಅದರಲ್ಲಿರುವ ಪ್ರಾಣಿಗಳು ಎಂಬ ಶ್ರುತಿವಾಕ್ಯವೂ ಇದೆ.

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ**

ಭಗವದ್ಗೀತೆಯ ಹತ್ತನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೩೪ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ–೧೧ನೆಯ ಅಧ್ಯಾಯ

೩೫ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ವಿಶ್ವರೂಪದರ್ಶನವನ್ನು ಮಾಡಿಸಬೇಕೆಂದು ಅರ್ಜುನನು ಶ್ರೀಕೃಷ್ಣನನ್ನು ಪ್ರಾರ್ಥಿಸಿದುದು : ಸಂಜಯನಿಂದ ವಿಶ್ವರೂಪದ ವರ್ಣನೆ : ಅರ್ಜುನನು ಭಗವಂತನ ವಿಶ್ವರೂಪವನ್ನು ಸಂದರ್ಶಿಸಿದುದು : ಭಯಭೀತನಾದ ಅರ್ಜುನನು ಭಗವಂತನನ್ನು ಪ್ರಾರ್ಥಿಸಿದುದು : ವಿಶ್ವರೂಪ ಮತ್ತು ಚತುರ್ಭುಜರೂಪಗಳ ದರ್ಶನಗಳ ಮಹಿಮೆ : ಭಗವತ್ಪ್ರಾಪ್ತಿಗೆ ಅನನ್ಯಭಕ್ತಿಯ ಮಹತ್ತ್ವ ಕಥನ

**ಅರ್ಜುನ ಉವಾಚ :**

**ಓಂ ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥**

ಅರ್ಜುನನು ಹೇಳುತ್ತಾನೆ :

"ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಅಧ್ಯಾತ್ಮವೆಂಬ ಹೆಸರಿನ ಯಾವ ಪರಮಗುಹ್ಯವಾದ ಮಾತನ್ನು ನೀನು ಹೇಳಿದೆಯೋ–ಆ ಮಾತಿನಿಂದ ನನ್ನ ಮೋಹವು ನನ್ನನ್ನು ಬಿಟ್ಟು ಹೊರಟುಹೋಯಿತು.

* * *

(ಇಷ್ಟು ಕೇಳಿದನಂತರ ಅರ್ಜುನನಿಗೆ ಜ್ಞಾನೋದಯವಾಯಿತು. **ಮೋಹೋಽಯಂ ವಿಗತೋ ಮಮ**–ನನ್ನ ಮೋಹವೆಲ್ಲವೂ ಹೊರಟು ಹೋಯಿತು ಎನ್ನುತ್ತಾನೆ. ಅರ್ಜುನನ ಮೋಹ ಎಂದರೆ : ಆತ್ಮಾನಾತ್ಮ ವಿವೇಕವಿಲ್ಲದೆ ನಾನು ಕೊಲ್ಲುವವನು ಇತರರು ನನ್ನಿಂದ ಕೊಲ್ಲಲ್ಪಡತಕ್ಕ ವರು–ಇತ್ಯಾದಿಗಳು. ಈಗ ಅವನಿಗೆ ಮೋಹವು ನಿವಾರಣೆಯಾಗಲು ಕಾರಣ ವೇನೆಂದರೆ : ನಾನು ಯಾವುದನ್ನೂ ಮಾಡುವವನಲ್ಲ. ಕಾರ್ಯಮಾಡಿಸಲು ಹಿಂದೊಬ್ಬನಿದ್ದಾನೆ. ಅವನ ಇಚ್ಛೆಯಂತೆ ಎಲ್ಲ ಕಾರ್ಯಗಳೂ ನಡೆಯುತ್ತಿರು ತ್ತವೆ. ನಾನು ನೆಪಮಾತ್ರಕ್ಕೆ ಇದ್ದೇನೆ. ನಾನು ಒಲ್ಲೆನೆಂದರೂ ನಡೆಯಬೇಕಾದ ಕಾರ್ಯವು ನಡೆದೇ ನಡೆಯುತ್ತದೆ. ಹಿಂದೊಬ್ಬನು ನಿಂತು ಸೂತ್ರಧಾರನಾಗಿ ಎಲ್ಲವನ್ನೂ ಮಾಡಿಸುತ್ತಿದ್ದಾನೆ. ಅವನಿಗೆ ಕರ್ಮಫಲವನ್ನು ಅರ್ಪಿಸಿ ಕರ್ತವ್ಯವನ್ನು ಮಾಡಬೇಕು–ಮುಂತಾದ ತಿಳಿವಳಿಕೆಯೇ ಮೋಹನಿವಾರಣೆಗೆ ಕಾರಣ. ಭಗವಂತನ ಅನುಗ್ರಹವಿಲ್ಲದೇ ಯಾವುದನ್ನೂ ಸಾಧಿಸಲು ಆಗುವುದಿಲ್ಲ. ಅವನು ತನ್ನ ಅಮಾನುಷಶಕ್ತಿಯಿಂದ ಹುಲ್ಲುಶತ್ತೆಯನ್ನೇ ಬ್ರಹ್ಮಾಸ್ತ್ರವನ್ನಾಗಿ ಮಾಡಬಲ್ಲನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಬೇಕು.

**ಪಾಂಡವಾನಾಂ ಧನಂಜಯಃ**–ಎಂದು ಹೇಳಿದನಂತರ ಅರ್ಜುನನಿಗೆ ಸ್ವಾಭಿಮಾನವು ಸಂಪೂರ್ಣವಾಗಿ ಹೊರಟುಹೋಯಿತು. ಏಕೆಂದರೆ : ಅರ್ಜುನನಲ್ಲಿ ಪರಮಾತ್ಮನ ಅಧಿಷ್ಠಾನವು ಪೂರ್ಣವಾಗಿದ್ದುದರಿಂದಲೇ ಅವನು ಮಹಾಪರಾಕ್ರಮಿಯೆಂಬ ಕೀರ್ತಿಯನ್ನು ಗಳಿಸಲು ಸಾಧ್ಯವಾಯಿತು. ವಿಜಯ ಎಂಬ ಅನ್ವರ್ಥವಾದ ಹೆಸರನ್ನೇ ಗಳಿಸಿದನು. ಮೋಹವು ಕಳೆದುದು ಹೇಗೆ?-ನನ್ನನ್ನು ಅನುಗ್ರಹಿಸಲೆಂದೇ ನೀನು ಅಧ್ಯಾತ್ಮವೆಂಬ ಹೆಸರಿನ ಅತ್ಯಂತ ರಹಸ್ಯದ ಮಾತನ್ನು ಹೇಳಿದೆ ಎನ್ನುತ್ತಾನೆ, ಅರ್ಜುನ. ನಮ್ಮ ಮೋಹವು

ಕಳೆಯಬೇಕಾದರೆ ಅಧ್ಯಾತ್ಮವಿದ್ಯೆಯೊಂದೇ ದಾರಿ. **ಅಧ್ಯಾತ್ಮವಿದ್ಯಾ ವಿದ್ಯಾನಾಂ**–ಎಂದು ಶ್ರೀಕೃಷ್ಣನೇ ಹೇಳಿದ್ದಾನೆ. ಈ ಅಧ್ಯಾತ್ಮವು ಗುಹ್ಯ ವಾದುದು. ಗುಹೆಯಲ್ಲಿ ; ಹೃದಯಗುಹೆಯಲ್ಲಿರತಕ್ಕದ್ದು. ನಮ್ಮಲ್ಲಿಯೇ ಇರತಕ್ಕ ಆತ್ಮನ ಸಂಬಂಧವುಳ್ಳದ್ದು. ಕಸ್ತೂರೀಮೃಗವು ಕಸ್ತೂರಿಯ ವಾಸನೆಯನ್ನು ಹುಡುಕಿಕೊಂಡು ಅರಣ್ಯದಲ್ಲೆಲ್ಲಾ ಅಲೆಯುವುದಂತೆ. ವಾಸನೆಯು ಬರುವ ಸ್ಥಳವು ಸಿಕ್ಕದೇ ಬಳಲಿ ಬೆಂಡಾಗಿ ಮಲಗಿದ ಬಳಿಕ ತನ್ನ ನಾಭಿಯಿಂದಲೇ ಆ ವಾಸನೆಯು ಬರುತ್ತಿರುವುದೆಂದು ಅದಕ್ಕೆ ಅರಿ ವಾಗುವುದಂತೆ. ಅದರಂತೆ ಮೋಹವನ್ನು ಕಳೆದುಕೊಳ್ಳಬೇಕಾದರೆ ನಾವು ವಿಶ್ವಪರ್ಯಟನವನ್ನು ಮಾಡಬೇಕಾಗಿಲ್ಲ. ಊರೂರುಗಳನ್ನು ಅಲೆಯಬೇಕಾ ಗಿಲ್ಲ. ನಮ್ಮಲ್ಲಿಯೇ ಇರುವ ಹೃದಯಗುಹೆಯನ್ನು ಮನಸ್ಸಿನ ಮೂಲಕವಾಗಿ ಹೊಕ್ಕರೆ ಆತ್ಮವು ಸಿಕ್ಕುವುದು. ಮೋಹವೂ ಕಳೆಯುವುದು.

ಅರ್ಜುನನು **ಮದನುಗ್ರಹಾಯ**–ಎಂದು ಹೇಳುತ್ತಾನೆ. ಭಗವಂತನ ದಿವ್ಯಾನುಗ್ರಹವಿಲ್ಲದಿದ್ದರೆ ಅಧ್ಯಾತ್ಮವಿದ್ಯೆಯು ಲಭಿಸುವುದಿಲ್ಲ. ತನ್ನನ್ನು ಯಾರಲ್ಲಿ ಪ್ರಕಟಿಸಿಕೊಳ್ಳಬೇಕೆಂದು ಅವನು ಇಚ್ಛಿಸುವನೋ ಅಂತಹವನಿಗೆ ಮಾತ್ರವೇ ಅಧ್ಯಾತ್ಮವಿದ್ಯೆಯು ಸಿದ್ಧಿಸುವುದು. **ಯಮೇವೈಷ ವೃಣುತೇ ತೇನ ಲಭ್ಯಃ**–ಅವನ ದಯೆ ಇರಬೇಕು. ಅವನ ಒಲುಮೆಯಿರಬೇಕು. ಕೂಡಲೇ ಶ್ರೇಷ್ಠವಾದ ಗುಹ್ಯತಮವಾದ ಅಧ್ಯಾತ್ಮವಿದ್ಯೆಯು ಲಭಿಸುವುದು.)

o o o

ಭಗವಂತನ ವಿಭೂತಿಗಳು ಹಿಂದೆ ಹೇಳಲ್ಪಟ್ಟುವು. ಅಲ್ಲಿ **ವಿಷ್ಟಭ್ಯಾಹಂ ಸ್ಥಿತೋ ಜಗತ್**. ಇಡೀ ಜಗತ್ತನ್ನು ನಾನು ಒಂದಂಶದಿಂದ ವ್ಯಾಪಿಸಿದ್ದೇನೆ ಎಂಬ ಮಾತನ್ನು ಕೇಳಿ, ಈಶ್ವರನ ಜಗದಾತ್ಮಕವಾದ ಯಾವ ಆದಿಸ್ವರೂಪ ವುಂಟೋ ಅದರ ಪ್ರತ್ಯಕ್ಷದರ್ಶನವನ್ನು ಪಡೆಯುವ ಇಚ್ಛೆಯಿಂದ ಅರ್ಜುನನು ಈ ಶ್ಲೋಕವನ್ನು ಹೇಳುತ್ತಾನೆ. **ಅಧ್ಯಾತ್ಮಸಂಜ್ಞಿತಂ** = ಆತ್ಮಾನಾತ್ಮ ವಿಶೇಷವಿಷಯವಾದ. **ಮೋಹಃ** = ಅವಿವೇಕಬುದ್ಧಿ. (ಶಂ. ಭಾ.)

ವಿಭೂತಿಯೋಗದ ಅಧ್ಯಾಯದಲ್ಲಿ ಭಗವಂತನ ಅಸಾಧಾರಣವಾದ ಸ್ವಭಾವವನ್ನೂ ಮತ್ತು ಎಲ್ಲದರ ಸ್ವರೂಪ-ಸ್ಥಿತಿ-ಪ್ರವೃತ್ತಿಗಳೂ ಅದಕ್ಕೆ

ಅಧೀನವಾಗಿರುವುದನ್ನೂ ಭಗವಂತನಿಂದ ಕೇಳಿ ಅದು ಹಾಗೆಯೇ ಎಂದು ನಿಶ್ಚಯಿಸಿ, ಅಂತಹ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವ ಇಷ್ಟದಿಂದ ಅರ್ಜುನನು ಈ ಮಾತನ್ನು ಹೇಳುತ್ತಾನೆ. ಹಾಗೆಯೇ ಭಗವಂತನ ಅನುಗ್ರಹದಿಂದ ಒಡನೆಯೇ ಅದನ್ನು ನೋಡುವನು. ಸರ್ವಾಶ್ಚರ್ಯಮಯವಾದ ತನ್ನ ಅನುಭವವನ್ನು ಹೇಳುವನು.

ದೇಹಾತ್ಮಬುದ್ಧಿಯೆಂಬ ಮೋಹದಿಂದ ಮೋಹಿತನಾದ ನನ್ನನ್ನು ಅನುಗ್ರಹಿಸುವ ಏಕಮಾತ್ರಪ್ರಯೋಜನಕ್ಕಾಗಿ ಪರಮರಹಸ್ಯವಾದ ಆತ್ಮನ ವಿಷಯವಾಗಿ ಹೇಳಬೇಕಾದ **ನ ತ್ವೇವಾಹಂ** ೨-೧೨ ಎಂಬಲ್ಲಿ ಆರಂಭಿಸಿ **ತಸ್ಮಾದ್ಯೋಗೀ ಭವಾರ್ಜುನ** ಎನ್ನುವವರೆಗೆ ನೀನು ಯಾವ ಮಾತನ್ನಾಡಿದೆಯೋ ಅದರಿಂದ ನನ್ನ ಆತ್ಮವಿಷಯವಾದ ಮೋಹವೆಲ್ಲವೂ ತೊಲಗಿ ಹೋಯಿತು. (ರಾ. ಭಾ.)

ಹತ್ತನೆಯ ಅಧ್ಯಾಯದ ಕೊನೆಯಲ್ಲಿ ಭಗವಂತನ ವ್ಯಾಪ್ತ್ಯೋಪಾಸನ ವನ್ನು ಸಂಕ್ಷೇಪವಾಗಿ ಹೇಳಿಯಾಯಿತು. ಆದರೆ ಸಂಕ್ಷೇಪವಾಗಿ ಹೇಳಿದ್ದರಿಂದ ಧ್ಯಾನಮಾಡುವುದು ಶಕ್ಯವಲ್ಲ. ಅದು ಬುದ್ಧಿಗೆ ಹತ್ತುವುದಿಲ್ಲ. ಆದುದರಿಂದ ಯಾವ ರೀತಿಯ ವ್ಯಾಪ್ತರೂಪವು ಸವಿಸ್ತರವಾಗಿ ಕೇಳಲ್ಪಟ್ಟರೆ ಧ್ಯಾನಮಾಡಲು ಸಾಧ್ಯವಾಗುತ್ತದೆಯೋ ಅಂತಹ ಸ್ವರೂಪಸ್ಥಿತಿಯನ್ನು ಈ ಅಧ್ಯಾಯದಲ್ಲಿ ಭಗವಂತನು ಹೇಳುತ್ತಾನೆ.

**ಯಥಾ ಶ್ರುತೇ ಧ್ಯಾನಂ ಶಕ್ಯಂ ತಥಾ ಸ್ವರೂಪಸ್ಥಿತಿಃ ಅನೇನ ಅಧ್ಯಾಯೇನ ಉಚ್ಯತೇ ॥** (ಮ. ಭಾ.)

**ಓಂ ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥೨॥**

ಪ್ರಾಣಿಗಳ ಸೃಷ್ಟಿ ಮತ್ತು ಲಯಗಳನ್ನು ಸವಿಸ್ತರವಾಗಿ ನಿನ್ನಿಂದ ಕೇಳಿದ್ದಾಯಿತು. ಕಮಲಪತ್ರಾಕ್ಷ! ಅವ್ಯಯವಾದ ಮಾಹಾತ್ಮ್ಯವನ್ನೂ ಕೇಳಿದ್ದಾಯಿತು.

*　　*　　*

(ಭವಃ ಎಂದರೆ ಹುಟ್ಟುವಿಕೆ. ಅಪ್ಯಯಃ ಎಂದರೆ ಲಯವಾಗುವುದು. ಪ್ರಾಣಿಗಳ ಸೃಷ್ಟಿ-ಸ್ಥಿತಿ-ಲಯಗಳನ್ನೂ ಮತ್ತು ಅವುಗಳ ರಹಸ್ಯವನ್ನೂ ಸವಿಸ್ತರವಾಗಿ ನಿನ್ನಿಂದ ಕೇಳಿದ್ದಾಯಿತು.

ಆ ವಿಷಯದಲ್ಲಿ ನನಗೆ ಯಾವ ಸಂದೇಹವೂ ಉಳಿದಿಲ್ಲ. ಅವ್ಯಯವಾದ ಅವಿನಾಶಿಯಾದ ಮಾಹಾತ್ಮ್ಯವನ್ನು ಕೇಳಿದೆನು. ಸಮಸ್ತಪ್ರಾಣಿಗಳ ಸೃಷ್ಟಿ-ಲಯಗಳಿಗೆ ನೀನೇ ಕಾರಣನಾಗಿದ್ದರೂ ನೀನು ಅಕರ್ತನು. ಸಕಲ ಪ್ರಾಣಿಗಳ ನಿಯಂತೃವು ನೀನೇ ಆಗಿದ್ದರೂ ನೀನು ಉದಾಸೀನನಂತಿರುವೆ. ನೀನು ಸರ್ವವ್ಯಾಪಿಯಾಗಿದ್ದರೂ ಪ್ರಾಣಿಗಳ ಗುಣ-ದೋಷಗಳು ನಿನಗೆ ಲೇಪವಾಗುವುದಿಲ್ಲ. ಶುಭಾಶುಭಕರ್ಮಗಳಿಗೆ ಅನುಸಾರವಾಗಿ ನೀನು ಪ್ರಾಣಿಗಳಿಗೆ ಸುಖ-ದುಃಖಗಳನ್ನು ಕೊಡುವೆ. ಆದರೆ ನಿನಗೆ ನಿರ್ದಯತೆಯ ದೋಷವಾಗಲೀ ಪಕ್ಷಪಾತದ ದೋಷವಾಗಲೀ ಇಲ್ಲ. ಇಂತಹ ಅನೇಕಪ್ರಕಾರದ, ಎಷ್ಟು ಹೇಳಿದರೂ ಮುಗಿಯದೇ ಇರುವ ನಿನ್ನ ಮಾಹಾತ್ಮ್ಯವನ್ನೂ ನಿನ್ನಿಂದ ಕೇಳಿದೆನು ; ಎನ್ನುತ್ತಾನೆ ಅರ್ಜುನ.)

O O O

**ಅವ್ಯಯಂ** = ಅಕ್ಷಯವಾದ. **ಕಮಲಪತ್ರಾಕ್ಷ** = ತಾವರೆಯ ಪತ್ರದಂತೆ ಕಣ್ಣುಗಳುಳ್ಳವನೇ! (ಶಂ. ಭಾ.)

**ಅವ್ಯಯಂ** = ನಿತ್ಯವಾದ, **ಮಾಹಾತ್ಮ್ಯಂ** = ನೀನು ಎಲ್ಲ ಚೇತನಾಚೇತನಗಳಿಗೂ ಶೇಷಿಯಾಗಿರುವಿಕೆ, ಜ್ಞಾನಬಲಾದಿ ಕಲ್ಯಾಣಗುಣಗಳಿಂದ ಪರತತ್ತ್ವವಾಗಿರುವಿಕೆ, ಸರ್ವಾಧಾರವಾಗಿರುವಿಕೆ, ಯೋಚಿಸುವಿಕೆ, ಕಣ್ಣುಮಿಟುಕಿಸುವಿಕೆ–ಮತ್ತು ಎಲ್ಲ ಪ್ರವೃತ್ತಿಗಳಿಗೂ ನೀನೇ ಪ್ರವರ್ತಕನಾಗಿರುವಿಕೆ–ಮುಂತಾದ ಅಪರಿಮಿತಮಾಹಾತ್ಮ್ಯವನ್ನು. (ರಾ. ಭಾ.)

**ಓಂ ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥**

ಓ ಪರಮೇಶ್ವರ! ನೀನು ನಿನ್ನನ್ನು ಹೇಗೆಂದು ಹೇಳಿಕೊಂಡಿರುವೆಯೋ

ಅದು ಹಾಗೆಯೇ ಸರಿ. ಪುರುಷೋತ್ತಮ! ನಿನ್ನ ಐಶ್ವರ್ಯವಾದ (ಎಂದರೆ ಈಶ್ವರಸಂಬಂಧವಾದ) ರೂಪವನ್ನು ನೋಡಲು ಇಚ್ಛಿಸುತ್ತೇನೆ.

* * *

(ಈಗೀಗ ಅರ್ಜುನನು ಶ್ರೀಕೃಷ್ಣನನ್ನು–'ಪರಮೇಶ್ವರ! ಪುರುಷೋತ್ತಮ!'–ಎಂದೇ ಸಂಬೋಧಿಸುತ್ತಾನೆ. ಶ್ರೀಕೃಷ್ಣನು ತನ್ನ ಸ್ನೇಹಿತ ಅಥವಾ ತನ್ನ ರಥದ ಕುದುರೆಗಳನ್ನು ನಡೆಸುವವನು–ಎಂಬುದೇ ಸ್ಮೃತಿಪಥದಿಂದ ಸಂಪೂರ್ಣವಾಗಿ ಅಳಿಸಿಹೋಗಿದೆ. ದೇವ! ನಿನ್ನ ವಿಭೂತಿಗಳ ವಿಷಯವಾಗಿ ಏನೇನು ಹೇಳಿದೆಯೋ ಅವೆಲ್ಲವೂ ನಿಜವೇ ಸರಿ. ನಿನ್ನ ವಿಭೂತಿಗಳು ಅಸಂಖ್ಯಾತವಾದುವುಗಳು ; ಅಪರಿಮಿತವಾದುವುಗಳು. ಮೇಲಾಗಿ ನೀನು **ಏಕಾಂಶೇನ ಸ್ಥಿತೋ ಜಗತ್** ಎಂದು ಬೇರೆ ಹೇಳಿರುವೆ. ಅನೇಕವಿಭೂತಿಗಳಿಂದ ಕೂಡಿರುವ ಈ ವಿಶ್ವವು ನಿನ್ನ ಅಂಶಮಾತ್ರ ಎಂದರೆ ಪೂರ್ಣವಾದ ರೂಪೈಶ್ವರ್ಯವು (ಜ್ಞಾನೈಶ್ವರ್ಯ-ಶಕ್ತಿ-ಬಲ-ತೇಜಸ್ಸುಗಳು) ಇನ್ನೆಷ್ಟಿರಬಹುದು? ಆ ಸಮಗ್ರರೂಪವನ್ನು ನಾನು ನೋಡಬೇಕೆಂದಿರುತ್ತೇನೆ. ಅಂತಹ ವೈಷ್ಣವರೂಪವನ್ನು (ಸರ್ವವ್ಯಾಪಕವಾದ ದಿವ್ಯರೂಪವನ್ನು ) ನನಗೆ ದಯಮಾಡಿ ತೋರಿಸು).

O O O

**ಐಶ್ವರಂ ರೂಪಂ** = ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸುಗಳಿಂದ ಸಂಪನ್ನವಾದ ವೈಷ್ಣವರೂಪವನ್ನು. (ಶಂ. ಭಾ.)

**ಐಶ್ವರಂ ರೂಪಂ** = ಎಲ್ಲದರ ಪ್ರಶಾಸಕವೂ, ಸ್ರಷ್ಟೃವೂ, ರಕ್ಷಕವೂ, ಸಂಹಾರಕವೂ, ಭರ್ತೃವೂ, ಕಲ್ಯಾಣಗುಣಾಕರವೂ, ಪರತರವೂ, ಉಳಿದ ಎಲ್ಲಕ್ಕಿಂತಲೂ ವಿಜಾತೀಯವೂ ಆಗಿರುವ ಅಸಾಧಾರಣವಾದ ರೂಪವನ್ನು. (ರಾ. ಭಾ.)

**ಓಂ ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥**

ಪ್ರಭುವೇ! ಅದನ್ನು ನೋಡುವುದು ನನಗೆ ಸಾಧ್ಯವೆಂದು ನೀನು ತಿಳಿಯುವೆಯಾದರೆ, ಅವ್ಯಯವಾದ ನಿನ್ನ ಆ ರೂಪವನ್ನು ನನಗೆ ತೋರಿಸು, ಯೋಗೇಶ್ವರ!"

* * *

(ಅರ್ಜುನನು ಹೇಳುತ್ತಾನೆ! 'ಪ್ರಭುವೇ! ಮಹಾನುಭಾವ! ನಾನೇನೋ ಚಪಲತೆಯಿಂದ ನಿನ್ನ ಪೂರ್ಣದರ್ಶನವನ್ನು ದಯಪಾಲಿಸುವಂತೆ ಕೇಳಿಕೊಂಡುಬಿಟ್ಟೆ. ದಯಾಮಯನಾದ ನೀನೂ ಸಹ ನನ್ನ ಮಾತಿಗೆ ಒಪ್ಪಿಬಿಡಬಹುದು. ಆದರೆ–'ಆ ದಿವ್ಯಸ್ವರೂಪವನ್ನು ನನ್ನಿಂದ ನೋಡಲು ಸಾಧ್ಯವೇ?'–ಎಂಬುದನ್ನೂ ನೀನೇ ನಿಶ್ಚಯಿಸಬೇಕಾಗಿದೆ. ನಿನ್ನ ಆ ವಿರಾಡ್ರೂಪವನ್ನು ನನ್ನಿಂದ ನೋಡಲು ಸಾಧ್ಯವಾಗುವುದೇ?–ಎಂಬ ವಿಷಯವು ನನಗೆ ಗೊತ್ತಿಲ್ಲ.' ಮಗುವಿಗೆ ತಿಂಡಿಯ ಮೇಲೆ ಆಶೆಯಿರುತ್ತದೆ. ಪದೇ-ಪದೇ ತಾಯಿಯನ್ನು ಅದು ಕೊಡು–ಇದು ಕೊಡು ಎಂದು ಕೇಳುತ್ತಲೇ ಇರುತ್ತದೆ. ಆದರೆ ತಾಯಿಯು ಮಗುವು ಕೇಳಿದುದನ್ನೆಲ್ಲಾ ಕೊಟ್ಟು ಬಿಡುವುದಿಲ್ಲ. ಮಗುವಿಗೆ ಅರಗಿಸಿಕೊಳ್ಳುವ ಸಾಮರ್ಥ್ಯವೆಷ್ಟಿದೆಯೆಂಬ ವಿಷಯವು ತಾಯಿಗೆ ಚೆನ್ನಾಗಿ ಗೊತ್ತಿರುವುದರಿಂದ ಅದಕ್ಕೆ ಎಷ್ಟು ಬೇಕೋ, ಎಷ್ಟು ಉಚಿತವೋ, ಅದರ ದೇಹಪೋಷಣೆಗೆ ಎಷ್ಟು ಆವಶ್ಯಕವೋ–ಅಷ್ಟು ಆಹಾರವನ್ನು ಮಾತ್ರವೇ ಕೊಡುವಳು. ಆದುದರಿಂದ ವಿರಾಟ್‌ಸ್ವರೂಪವನ್ನು ನೋಡಲು ಒಬ್ಬನು ಅರ್ಹನೇ ಎಂಬುದನ್ನು ನಿರ್ಧರಿಸುವವನು ಪರಮ ಯೋಗೇಶ್ವರನಾದ ಪರಮಾತ್ಮ. ಆದುದರಿಂದಲೇ ಅರ್ಜುನನು ತನಗೆ ಅವ ನನ್ನು ಕಾಣುವ, ಆ ರೂಪೈಶ್ವರ್ಯವನ್ನು ಕಾಣುವ ಯೋಗ್ಯತೆಯಿದ್ದರೆ ಅವ್ಯಯವಾದ ಆತನ ದಿವ್ಯಸ್ವರೂಪವನ್ನು ತೋರಿಸು ಎನ್ನುತ್ತಾನೆ.

ಶ್ರೀಕೃಷ್ಣನು ಯೋಗೇಶ್ವರನೆಂಬುದರಲ್ಲಿ, ವಿರಾಡ್ರೂಪನೆಂಬುದರಲ್ಲಿ ಸಕಲಭೂತಗಳಿಗೂ ಕಾರಣನು ಅವನೇ ಎಂಬುದರಲ್ಲಿ ಅರ್ಜುನನಿಗೆ ಯಾವ ಸಂದೇಹವೂ ಉಳಿದಿಲ್ಲ. ಅವನು ಇಚ್ಛೆಸಿದರೆ ತನ್ನ ನಿಜಸ್ವರೂಪವನ್ನು ತೋರಿಸಿಯಾನೆಂಬ ದೃಢನಂಬಿಕೆಯೂ ಇದೆ. ಆದುದರಿಂದಲೇ ಹೀಗೆ ಬೇಡಿ ಕೊಳ್ಳುತ್ತಾನೆ. **ದರ್ಶಯಾತ್ಮಾನಮವ್ಯಯಮ್** ಅವ್ಯಯವಾದ ನಿನ್ನ ಸ್ವರೂಪವನ್ನು ತೋರಿಸು.)

o o o

**ಯೋಗೇಶ್ವರ** = **ಯೋಗಾಃ** = ಎಂದರೆ ಯೋಗಿಗಳು. ಅವರಿಗೆ ಈಶ್ವರನು ಯೋಗೇಶ್ವರ. **ತತಃ** = ನಾನು ಅರ್ಥಿಯಾಗಿರುವುದರಿಂದ ನಿನ್ನ

ರೂಪವನ್ನು ನೋಡಲು ಹೆಚ್ಚು ಉತ್ಕಟವಾದ ಇಚ್ಛೆಯುಳ್ಳವನಾಗಿರುವುದರಿಂದ. (ಶಂ. ಭಾ.)

**ಯೋಗೇಶ್ವರ** = ಯೋಗ ಎಂದರೆ ಜ್ಞಾನಾದಿ ಕಲ್ಯಾಣಗುಣಯೋಗ. ಏಕೆಂದರೆ ಮುಂದೆ (ಶ್ಲೋಕ-೮) **ಪಶ್ಯ ಮೇ ಯೋಗಮೈಶ್ವರಮ್** ಎಂದು ಹೇಳುವನು. **ಯೋಗೇಶ್ವರ** ಎಂದರೆ ಅವನನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಸಂಭವಿಸುವುದಕ್ಕೂ ಆಗದ ಜ್ಞಾನ-ಬಲೈಶ್ವರ್ಯ-ವೀರ್ಯ-ಶಕ್ತಿ-ತೇಜಸ್ಸುಗಳ ನಿಧಿಯಾದವನು.

**ಅವ್ಯಯಂ** ಎಂಬುದು ಕ್ರಿಯಾವಿಶೇಷಣ. ಸಕಲವಾಗಿ ಎಂದು ಅದಕ್ಕೆ ಅರ್ಥ. ಸಮಸ್ತಗುಣ, ವಿಭೂತಿ, ವಿಗ್ರಹಗಳೇ ಮುಂತಾದುವುಗಳಿಂದ ವಿಶಿಷ್ಟವಾದ ರೂಪವನ್ನು. (ರಾ. ಭಾ.)

**ಪ್ರಭೋ** = ಸಮರ್ಥನಾದವನೇ! ಇಲ್ಲಿ ಪ್ರಭುಶಬ್ದಕ್ಕೆ ಕೇವಲ ಸ್ವಾಮೀ ಎಂಬ ಅಷ್ಟೇ ಅರ್ಥವಿಲ್ಲ. ಅತ್ಯಂತಸಾಮರ್ಥ್ಯವುಳ್ಳವನು ಎಂಬ ಅರ್ಥವನ್ನು ತೆಗೆದುಕೊಳ್ಳಬೇಕು. ಅವನ ಸಾಮರ್ಥ್ಯದಿಂದಲೇ ಅವನ ಅತೀಂದ್ರಿಯ ರೂಪವು ಅರ್ಜುನನ ದರ್ಶನಕ್ಕೆ ಬರಬೇಕಾಗಿದೆ.

**ನಾಸ್ತಿ ತಸ್ಮಾತ್ಪರಂ ಭೂತಂ ಪುರುಷಾದ್ವೈ ಸನಾತನಾತ್ ।**
**ಮೋಕ್ಷಧರ್ಮ.**

**ಪ್ರಭುರೀಶಃ ಸಮರ್ಥಶ್ಚ** ಎಂದೂ ಹೇಳಿದೆ. –ಜಯತೀರ್ಥರು.

**ಶ್ರೀಭಗವಾನುವಾಚ**

**ಓಂ ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥೫॥**

ಭಗವಂತನು ಹೇಳುತ್ತಾನೆ :

"ಪಾರ್ಥ! ನೂರುಗಟ್ಟಳೆ ಮತ್ತು ಸಾವಿರಗಟ್ಟಳೆ ನಾನಾವಿಧವಾದ ಮತ್ತು ನಾನಾವರ್ಣಗಳಿಂದ ಕೂಡಿದ ಆಕಾರಗಳುಳ್ಳ ನನ್ನ ದಿವ್ಯವಾದ ರೂಪಗಳನ್ನು ನೋಡು.

* * *

(ಭಗವಂತನು–ಅರ್ಜುನನಿಗೆ ತನ್ನ ದಿವ್ಯರೂಪವನ್ನು ತೋರಿಸುವ ಮೊದಲು ಮೂರು ಶ್ಲೋಕಗಳಲ್ಲಿ ಅದರ ಸೂಕ್ಷ್ಮಪರಿಚಯವನ್ನು ಮಾಡಿಕೊಡುತ್ತಾನೆ.

ಭಯಾನಕ ದೃಶ್ಯದ ವಿಷಯವಾಗಿ ಮೊದಲೇ ಅಲ್ಪ-ಸ್ವಲ್ಪ ತಿಳಿದು ಬಿಟ್ಟಿದ್ದರೆ ಮನುಷ್ಯನು ಹೆಚ್ಚು ಆತಂಕಗೊಳ್ಳುವುದಿಲ್ಲ. ಪೂರ್ವಸಿದ್ಧತೆಯಿಲ್ಲದೇ ನೋಡಿಬಿಟ್ಟರೆ ಬಹಳ ಭಯಪಡುತ್ತಾನೆ. ಆದುದರಿಂದ ಶ್ರೀಕೃಷ್ಣನಿಲ್ಲಿ ತನ್ನ ಐಶ್ವರ್ಯರೂಪವನ್ನು ಅರ್ಜುನನಿಗೆ ತೋರಿಸುವುದರ ಮೊದಲು ಅದರ ಸ್ಥೂಲವಾದ ಒಂದು ಚಿತ್ರವನ್ನು ಅರ್ಜುನನ ಗಮನಕ್ಕೆ ತರುತ್ತಾನೆ.

ನೂರಾರು ಪ್ರಕಾರವಾಗಿರುವ, ಸಾವಿರಾರು ಪ್ರಕಾರವಾಗಿರುವ ನನ್ನ ರೂಪಗಳನ್ನು ನೀನು ನೋಡು. ಅವುಗಳಿಗೆ ಮಿತಿಯೇ ಇಲ್ಲ. ಆ ರೂಪ ಗಳಾದರೋ ಒಂದು ವಿಧವಾದುವಲ್ಲ. ನಾನಾವಿಧವಾದುವುಗಳು. ಕೆಲವು ದೇವರೂಪಗಳು, ಕೆಲವು ಮನುಷ್ಯರೂಪಗಳು, ಮತ್ತೆ ಕೆಲವು ರಾಕ್ಷಸರೂಪ ಗಳು, ಗಂಧರ್ವರೂಪಗಳು, ಪ್ರಾಣಿರೂಪಗಳು. ಯಾವ ಯಾವ ವಿಭೂತಿ ಗಳನ್ನು ತನ್ನವೆಂದು ಹೇಳಿಕೊಂಡಿದ್ದನೋ ಆ ಎಲ್ಲ ರೂಪಗಳನ್ನೂ ಮತ್ತು ಇನ್ನೂ ಅನೇಕ ನಾನಾರೂಪಗಳನ್ನೂ ನೋಡು, ಎನ್ನುತ್ತಾನೆ ಶ್ರೀಕೃಷ್ಣ. ಆ ರೂಪಗಳೆಲ್ಲವೂ ದಿವ್ಯವಾದುವುಗಳು. ನಾನಾವಿಧವಾದ ಬಣ್ಣದಿಂದ ಕೂಡಿರತಕ್ಕುವುಗಳು. ನಾನಾವಿಧವಾದ ಆಕೃತಿಗಳಿಂದ ಕೂಡಿರತಕ್ಕುವುಗಳು. ಅವುಗಳೆಲ್ಲವನ್ನೂ ನೋಡು ಎನ್ನುತ್ತಾನೆ ಭಗವಂತ.)

o o o

ದಿವ್ಯಾನಿ = ದಿವಿಯಲ್ಲಿ ಉಂಟಾದ, ಅಪ್ರಾಕೃತವಾದ (ಶಂ. ಭಾ.)

ಪಶ್ಯ ಮೇ ಪಾರ್ಥ ರೂಪಾಣಿ = ನನ್ನ ಸರ್ವಾಶ್ರಯವಾದ ರೂಪ ಗಳನ್ನು. (ರಾ. ಭಾ.)

ಓಂ ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥೬॥

ಭಾರತ! ಆದಿತ್ಯರನ್ನೂ, ವಸುಗಳನ್ನೂ, ರುದ್ರರನ್ನೂ, ಅಶ್ವಿನ

ರನ್ನೂ, ಮರುತ್ತುಗಳನ್ನೂ ನೋಡು. ಹಿಂದೆಂದೂ ನೋಡಿರದ ಅನೇಕಾನೇಕವಾದ ಆಶ್ಚರ್ಯಗಳನ್ನೂ ನೋಡು.

* * *

(ಆದಿತ್ಯರು ಎಂದರೆ ದ್ವಾದಶಾದಿತ್ಯರು. ವಸುಗಳು ಎಂದರೆ ಅಷ್ಟ ವಸುಗಳು. ರುದ್ರರು ಎಂದರೆ ಏಕಾದಶರುದ್ರರು. ಅಶ್ವಿನೌ ಎಂದರೆ ಇಬ್ಬರು ಅಶ್ವಿನೀದೇವತೆಗಳು. (ಇವರು ಸೂರ್ಯನ ಭಾರ್ಯೆಯಾದ ಸಂಜ್ಞಾ ಎಂಬುವಳಲ್ಲಿ ಹುಟ್ಟಿದವರೆಂದು ಕೆಲವು ಕಡೆಗಳಲ್ಲಿಯೂ, ಕಶ್ಯಪನ ಔರಸಪುತ್ರರು ಮತ್ತು ಅದಿತಿಯ ಗರ್ಭದಲ್ಲಿ ಹುಟ್ಟಿದವರೆಂದು ಮತ್ತೆ ಕೆಲವು ಕಡೆಗಳಲ್ಲಿಯೂ ಹೇಳಿದೆ. ಇವು ಪರಸ್ಪರವಿರೋಧಗಳಂತೆ ಕಂಡುಬಂದರೂ ತಾತ್ತ್ವಿಕವಾಗಿ ಸೂರ್ಯನು ಮತ್ತು ಕಶ್ಯಪರು ಒಂದೇ ಸ್ಥಾನದಲ್ಲಿರುವುದರಿಂದ ವಾಸ್ತವಿಕವಾದ ವಿರೋಧವಿಲ್ಲ. ಇವರು ಮೂಗಿನ ಎರಡು ಹೊಳ್ಳೆಗಳ ಇಂದ್ರಿಯಸ್ಥಾನದಲ್ಲಿ ಅಧಿದೇವತೆಗಳಾಗಿರುವವರು. ಅದಕ್ಕೆ ಇವರನ್ನು **ನಾಸತ್ಯೌ** ಎಂದೂ ಕರೆಯುತ್ತಾರೆ. ಇವರು ದೇವವೈದ್ಯರು. ಸುಕನ್ಯೆಯಿಂದ ಪ್ರಾರ್ಥಿತರಾದ ಇವರು ಅವಳ ಪತಿಯಾದ ವೃದ್ಧನಾದ ಚ್ಯವನನನ್ನು ನವಯುವಕನನ್ನಾಗಿ ಮಾಡಿದರು. ಆದುದರಿಂದಲೇ ಇವರಿಗೂ ಸಹ ಯಜ್ಞ ಗಳಲ್ಲಿ ಹವಿರ್ಭಾಗವು ಸಿಕ್ಕುವಂತಾಯಿತು. ಮರುತರು ಎಂದರೆ ಸಪ್ತ ಮರುತ್ತುಗಳು–ಇವರೆಲ್ಲರನ್ನೂ ನನ್ನ ವಿರಾಡ್ರೂಪದಲ್ಲಿ ನೋಡು ಎನ್ನುತ್ತಾನೆ ಶ್ರೀಕೃಷ್ಣ. ಇಷ್ಟು ಮಾತ್ರವಲ್ಲ. ಹಿಂದೆಂದೂ ನೋಡದಿರುವ ಅನೇಕಾಶ್ಚರ್ಯಕರವಾದ ದೃಶ್ಯಗಳನ್ನೂ ನೋಡು ಎನ್ನುತ್ತಾನೆ ಭಗವಂತ.)

O O O

**ಅದೃಷ್ಟಪೂರ್ವಾಣಿ** = ಮನುಷ್ಯಲೋಕದಲ್ಲಿ ನೀನಾಗಲೀ, ಇತರರಾಗಲೀ ಯಾರೂ ನೋಡದಿರುವ. (ಶಂ. ಭಾ.)

ಆದಿತ್ಯ, ವಸು, ರುದ್ರ, ಅಶ್ವಿನೀದೇವತೆಗಳು, ಮರುತ್–ಇತ್ಯಾದಿಗಳನ್ನು ಹೇಳಿರುವುದು–ಈ ಜಗತ್ತಿನಲ್ಲಿ ಪ್ರತ್ಯಕ್ಷವಾಗಿ ಕಂಡಿರುವ ಮತ್ತು ಶಾಸ್ತ್ರಗಳಲ್ಲಿ ಮಾತ್ರ ಕಂಡುಬರುವ ಯಾವ ವಸ್ತುಗಳುಂಟೋ ಅವುಗಳನ್ನೂ ಮತ್ತು ಎಲ್ಲ ಲೋಕಗಳಲ್ಲಿಯೂ ಎಲ್ಲ ಶಾಸ್ತ್ರಗಳಲ್ಲಿಯೂ ಕಂಡುಬರದೇ ಇರುವ ಅನೇಕಾಶ್ಚರ್ಯಗಳನ್ನೂ ಇನ್ನೂ ಉಳಿದ ಎಲ್ಲ ದೇವಾದಿಗಳನ್ನೂ ಸೂಚಿಸುತ್ತದೆ. (ರಾ. ಭಾ.)

**ಅದೃಷ್ಟಪೂರ್ವಾಣಿ** = ಅರ್ಜುನನಾಗಲೀ, ಇತರರಾಗಲೀ ಹಿಂದೆ ನೋಡದೇ ಇರುವ ಮತ್ತು ಕೇಳದೇ ಇರುವ. –ವೇದಾಂತದೇಶಿಕರು.

**ಓಂ ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥೭॥**

ಗುಡಾಕೇಶ! ನನ್ನ ದೇಹದಲ್ಲಿ ಒಂದೇ ಕಡೆಯಲ್ಲಿ ಚರಾಚರಗಳಿಂದ ಕೂಡಿದ ಜಗತ್ತೆಲ್ಲವೂ ಇರುವುದನ್ನು ಈಗ ನೋಡು ಮತ್ತು ಬೇರೆ ಯಾವುದನ್ನು ನೋಡಲಿಚ್ಛಿಸುವೆಯೋ ಅದೆಲ್ಲವನ್ನೂ ನೋಡು.

* * *

(ಹಿಂದಿನ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಭಗವಂತನು **ಅಹಂ ಕೃತ್ಸ್ನಂ ಜಗತ್ ಏಕಾಂಶೇನ ವಿಷ್ಟಭ್ಯ ಸ್ಥಿತಃ** = ನಾನು ಈ ಅಖಂಡ ವಿಶ್ವವನ್ನೂ ನನ್ನ ಒಂದೇ ಒಂದು ಅಂಶದಿಂದ ಧಾರಣೆಮಾಡಿಕೊಂಡಿದ್ದೇನೆ ಎಂದು ಹೇಳಿದ್ದಾನೆ. ಹಾಗಿರುವುದನ್ನು ಸಾಕ್ಷಾತ್ತಾಗಿ ನೋಡು ಎನ್ನುತ್ತಾನೆ ಶ್ರೀಕೃಷ್ಣ.

**ಏಕಾಂಶೇನ ಸ್ಥಿತೋ ಜಗತ್** –ಎಂದು ಹಿಂದೆ ಹೇಳಿರುವಂತೆ ಇಲ್ಲಿ **ಇಹ ಏಕಸ್ಥಂ**–ಒಂದು ಕಡೆಯಲ್ಲಿ ಮಾತ್ರವಿರುವ ಎಲ್ಲ ಜಗತ್ತನ್ನೂ ನೋಡು ಎನ್ನುತ್ತಾನೆ ಭಗವಂತ. ಅವನಲ್ಲಿಯೇ ಈ ಜಗತ್ತು ಸಂಪೂರ್ಣವಾಗಿ ತುಂಬಿಕೊಂಡುಬಿಟ್ಟಿಲ್ಲ. ಅದು ಅವನ ಶರೀರದ ಒಂದು ಭಾಗದಲ್ಲಿ ಮಾತ್ರವಿದೆ.

**ಇಹ ಪಶ್ಯ** = ಈಗಲೇ ಇಲ್ಲಿಯೇ ನೋಡು. ಬೇರೆ ಕಡೆಗೆ ಹೋಗಬೇಕಾಗಿಲ್ಲ. ನಾನು ನಿನ್ನ ಸಾರಥಿಯಾಗಿದ್ದುಕೊಂಡೇ ಅದನ್ನು ತೋರಿಸುತ್ತೇನೆ. ಈಗಲೇ ತೋರಿಸುತ್ತೇನೆ. ಈ ನನ್ನ ದೇಹದಲ್ಲೇ ಚರಾಚರಗಳಿಂದ ಕೂಡಿದ ಎಲ್ಲ ಜಗತ್ತನ್ನೂ ತೋರಿಸುತ್ತೇನೆ. ಇಷ್ಟು ಮಾತ್ರವಲ್ಲ–ನೀನು ಯಾವುದನ್ನು ನೋಡಲಿಚ್ಛಿಸುವೆಯೋ ಅದನ್ನೂ ನೀನು ನನ್ನ ಈ ಶರೀರದಲ್ಲಿ ನೋಡಬಹುದು.

ಈ ಯುದ್ಧದಲ್ಲಿ ಯಾರು ಗೆಲ್ಲುತ್ತಾರೆಂಬುದನ್ನು ಇಲ್ಲಿಯೇ ನೀನು ನೋಡಿ ತಿಳಿದುಕೊಳ್ಳಬಹುದು. ನಿನ್ನ ಮನಸ್ಸಿನಲ್ಲಿ ಯಾವುದನ್ನು ತಿಳಿದು

ಕೊಳ್ಳಬೇಕೆಂದು, ಯಾವುದನ್ನು ನೋಡಬೇಕೆಂದು ಬಯಸುವೆಯೋ ಅದು ನಿನ್ನ ಕಣ್ಣುಮುಂದೆಯೇ ಕಾಣುತ್ತದೆ. ಆದುದರಿಂದ ಯಾವು ಯಾವುದನ್ನು ಕಾಣಬೇಕೆನ್ನುವೆಯೋ ಅವೆಲ್ಲವನ್ನೂ ನೋಡು, ಎನ್ನುತ್ತಾನೆ ಭಗವಂತ.)

O O O

ಹಿಂದೆ ಹೇಳಿದ ಆದಿತ್ಯ, ವಸು–ಮುಂತಾದವರು ಮಾತ್ರವಲ್ಲದೇ ನನ್ನ ಶರೀರದಲ್ಲಿ ಒಂದೇ ಸ್ಥಾನದಲ್ಲಿರುವ ಚರಾಚರವಾದ ಸಮಸ್ತಜಗತ್ತನ್ನೂ ನೋಡು ಮತ್ತು ಏನನ್ನು ನೋಡಬಯಸುವೆಯೋ ಎಂದರೆ **ಯದ್ವಾ ಜಯೇಮ ಯದಿ ವಾ ನೋ ಜಯೇಯುಃ**–ನಾವು ಗೆಲ್ಲುವೆವೋ ಅಥವಾ ಅವರೇ ನಮ್ಮನ್ನು ಗೆಲ್ಲುವರೋ ಎಂಬ ಶಂಕೆಯ ಮಾತನ್ನು ಹೇಳಿದ ನೀನು ಜಯ-ಪರಾಜಯಗಳೇ ಮುಂತಾದ ಯಾವ ದೃಶ್ಯವನ್ನು ನೋಡಲು ಬಯಸುವೆಯೋ ಅದನ್ನೂ ನೋಡು. (ಶಂ. ಭಾ.)

**ಇಹ** = ನನ್ನ ದೇಹವೊಂದರಲ್ಲೇ ಅದರಲ್ಲಿಯೂ **ಏಕಸ್ಥಂ** = ಒಂದೇ ಜಾಗದಲ್ಲೇ ಇರುವ ಇಡೀ ಚರಾಚರಜಗತ್ತನ್ನು ನೋಡು. ಇದಲ್ಲದೇ ನೀನು ಬೇರೆ ಏನನ್ನು ನೋಡಬಯಸುವೆಯೋ (ಪಾಂಡವರು ಕೌರವರನ್ನು ಜಯಿಸುವಿಕೆ–ಮುಂತಾದುವುಗಳು) ಅದನ್ನೂ ಈ ಒಂದೇ ದೇಹದ ಒಂದೇ ಸ್ಥಾನದಲ್ಲಿಯೇ ನೋಡು. (ರಾ. ಭಾ.)

**ಓಂ ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥೮॥**

ಆದರೆ ನೀನು ಇದೇ ಕಣ್ಣಿನಿಂದಲೇ ನನ್ನನ್ನು ನೋಡಲು ಶಕ್ತನಲ್ಲ. ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ. ಅದರಿಂದ ನೀನು ಈಶ್ವರನಾದ ನನ್ನ ಯೋಗವನ್ನು ನೋಡು.

* * *

(ಆದರೆ ವಿರಾಡ್ರೂಪವನ್ನು ಧರಿಸುವ ನನ್ನನ್ನು ನೀನು ಈ ನಿನ್ನ ಕಣ್ಣುಗಳಿಂದ ನೋಡಲಾರೆ. ಚರ್ಮದ ಚಕ್ಷುಸ್ಸುಗಳಿಗೆ ಆ ನನ್ನ ಸ್ವರೂಪ

ವನ್ನು ನೋಡುವ ಸಾಧ್ಯತೆಯಿಲ್ಲ. ಆದುದರಿಂದ ನಿನಗೆ ನಾನು ದಿವ್ಯದೃಷ್ಟಿಯನ್ನು ದಯಪಾಲಿಸುತ್ತೇನೆ. ಅದರಿಂದ ನೀನು ನನ್ನ ಯೋಗೈಶ್ವರ್ಯವನ್ನು–ನನ್ನ ವಿಭೂತಿಗಳ ವಿಸ್ತಾರವನ್ನು ನೋಡು–ಎನ್ನುತ್ತಾನೆ ಭಗವಂತ.

ಭಗವಂತನು ತನ್ನ ಶರೀರದಲ್ಲಿ ವಿರಾಡ್ರೂಪವನ್ನು ತೋರಿಸುತ್ತೇ ನೆಂದೂ ಅದನ್ನು ನೋಡಲು ದಿವ್ಯದೃಷ್ಟಿಯನ್ನು ಅನುಗ್ರಹಿಸುವೆನೆಂದೂ ಹೇಳಿದ್ದಾನೆ.

ವ್ಯಾಸರು ಸಂಜಯನಿಗೆ ಅನುಗ್ರಹಿಸಿದ್ದ ದಿವ್ಯದೃಷ್ಟಿಯನ್ನೇ ಶ್ರೀಕೃಷ್ಣನು ಅರ್ಜುನನಿಗೂ ಅನುಗ್ರಹಿಸಿದ್ದಾನೆ. ವ್ಯಾಸರು ಅನುಗ್ರಹಿಸಿದ್ದ ದಿವ್ಯದೃಷ್ಟಿಯಿಂದ ಸಂಜಯನೂ ಸಹ ವಿಶ್ವರೂಪದರ್ಶನಮಾಡಲು ಸಮರ್ಥನಾಗುತ್ತಾನೆ. ಶ್ರೀಕೃಷ್ಣನು ಅರ್ಜುನನೊಬ್ಬನಿಗೇ ಈ ವಿಶ್ವರೂಪದರ್ಶನವನ್ನು ಮಾಡಿಸಿದರೂ ಸಂಜಯನೂ ಕೂಡ ವ್ಯಾಸರ ದಿವ್ಯಾನುಗ್ರಹದಿಂದಾಗಿ ಪರಮೋತ್ಕೃಷ್ಟವಾದ ದಿವ್ಯವಾದ ವಿರೂಡ್ರೂಪವನ್ನು ಕಾಣುತ್ತಾನೆ. ವಿರಾಡ್ರೂಪವೆಂದರೆ ವಿಶ್ವರೂಪ; ಸಮಗ್ರಪ್ರಪಂಚದ ರೂಪ ; ಬ್ರಹ್ಮಾಂಡದ ರೂಪ. ಇದು ಪರಮಾತ್ಮನ ಏಕದೇಶದಲ್ಲಿದೆ. ತನ್ನ ಶರೀರದ ಏಕದೇಶದಲ್ಲಿರುವ ಸಮಗ್ರವಿಶ್ವದ ರೂಪವನ್ನು ಪೂರ್ಣರೂಪದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ತೋರಿಸಬೇಕಾಗಿದೆ. ಅದಕ್ಕಾಗಿಯೇ ಶ್ರೀಕೃಷ್ಣನು ದಿವ್ಯದೃಷ್ಟಿಯನ್ನು ಅರ್ಜುನನಿಗೆ ದಯಪಾಲಿಸಿದನು. ಭೌತಿಕವಾಗಿಯೂ ಸಹ ನಾವು ಎಲ್ಲ ವಸ್ತುಗಳನ್ನೂ ಈ ನಮ್ಮ ಕಣ್ಣುಗಳಿಂದಲೇ ನೋಡುವುದಕ್ಕಾಗುವುದಿಲ್ಲ. ಆದುದರಿಂದಲೇ ಮೈಕ್ರೊಸ್ಕೋಪ್ (ಸೂಕ್ಷ್ಮದರ್ಶಿ) ಟೆಲಿಸ್ಕೋಪ್ (ದೂರದರ್ಶಿ) ಮುಂತಾದುವನ್ನು ತಯಾರಿಸಿದ್ದಾರೆ. ಮನುಷ್ಯನ ಊಹೆಗೂ ನಿಲುಕದ ಅತಿಸೂಕ್ಷ್ಮವಾದ ಮತ್ತು ಅತಿದೂರದ ವಸ್ತುಗಳನ್ನೂ ಇವುಗಳಿಂದ ನೋಡಬಹುದಾಗಿದೆ. ಕೆಲವರು ಅಂಜನಾದಿಗಳನ್ನು ಹಾಕಿಕೊಂಡು ಪರೋಕ್ಷದಲ್ಲಿರುವ ವಸ್ತುಗಳನ್ನು ನೋಡುತ್ತಾರೆ. ಇಲ್ಲಿಯೂ ಸಹ ಭಗವಂತನು ದಿವ್ಯದೃಷ್ಟಿಯನ್ನು ಅನುಗ್ರಹಿಸಿದ್ದರಿಂದ ಅರ್ಜುನನಿಗೆ ಅವನ ಸಮಗ್ರವಿಶ್ವದ ದಿವ್ಯರೂಪವನ್ನು ನೋಡಲು ಸಾಧ್ಯವಾಯಿತು.

ಭಗವಂತನ ದಿವ್ಯಾತ್ಮಸ್ವರೂಪ, ಪ್ರಸನ್ನವಾದ ದಿವ್ಯಮಂಗಳವಿಗ್ರಹ-

ಇವುಗಳಲ್ಲಿ ತಾದಾತ್ಮ್ಯವುಂಟಾದಾಗ ಪರಮಾನಂದವೇ ಆಗುತ್ತದೆ. ಭಯಕ್ಕೆ ಎಡೆಯೇ ಇಲ್ಲ. ಆದರೆ ಅರ್ಜುನನಿಗೆ ಇಲ್ಲಿ ಭಗವಂತನು ಆ ಮೂಲಸ್ವರೂಪ ದರ್ಶನವನ್ನಲ್ಲದೇ–ಅದು ವಿಶ್ವಾಕಾರವಾಗಿ ಬೆಳೆದು ಕಾಲರೂಪಿಯಾಗಿ ಎಲ್ಲ ವನ್ನೂ ನುಂಗುವ ದರ್ಶನವನ್ನೂ ಮಾಡಿಸಿದ್ದರಿಂದ ಅದು ಭಯವನ್ನುಂಟು ಮಾಡಿದುದು ಸಹಜವೇ ಆಗಿದೆ. ಅವನ ಕಾಲರೂಪವಾದ ವಿರಾಟ್‌ಶರೀರವು ಹೀಗೆ ಭಯಂಕರವಾಗಿರುವುದರಿಂದಲೇ ಅದರಲ್ಲಿ ನಿಲ್ಲಲು ಇಷ್ಟಪಡದೇ ಅದಕ್ಕೆ ಹಿಂದಿರುವ ಪ್ರಶಾಂತವಾದ ವೈಷ್ಣವರೂಪವನ್ನೂ ಭಗವಂತನು ಅವ ನಿಗೆ ತೋರಿಸಿ, ಆ ದಿವ್ಯರೂಪಕ್ಕೆ ಪ್ರತಿರೂಪವಾಗಿದ್ದ ತನ್ನ ಮಾನುಷರೂಪ ವನ್ನೂ ತೋರಿಸುತ್ತಾನೆ. ಅರ್ಜುನನು ಇಲ್ಲಿ ದರ್ಶಿಸುವುದು ಭಗವಂತನ ದಿವ್ಯಶಕ್ತಿಯಿಂದ ಕೆಲಸಮಾಡುತ್ತಿರುವ ವಿಶ್ವದಲ್ಲಿನ ಭೀಕರವಾದ ಕಾಲಾತ್ಮಕ ರೂಪ ಮತ್ತು ಅದರ ಮೂಲದಲ್ಲಿ ಬೆಳಗುತ್ತಿರುವ ವೈಷ್ಣವದಿವ್ಯಮಂಗಳ ವಿಗ್ರಹ. ಅನಂತರ ಅವನ ಮಾನುಷರೂಪ. ಅವುಗಳಲ್ಲಿ ಮೊದಲನೆಯದು ಮಾತ್ರವೇ ದೇವತೆಗಳಿಗೂ ಭೀಕರವಾದುದು. ಅವರೂ ಕಾಲಕ್ಕೆ ಅಧೀನರೇ ಅಲ್ಲವೇ ? ಅದನ್ನು ದಾಟಿದನಂತರ ಎರಡನೆಯದಾದ ದಿವ್ಯಮಂಗಳರೂಪದ ದಿವ್ಯದರ್ಶನವಾಗುತ್ತದೆ. ಕೆಲವೊಮ್ಮೆ ಈಶ್ವರಸಂಕಲ್ಪದಿಂದ ಆ ಭೀಕರ ರೂಪವೂ ಕೆಲವು ಭಕ್ತರಿಗೆ ಭಯವನ್ನುಂಟುಮಾಡದೇ ಇರಬಹುದು.)

O O O

**ಮಾಂ** = ವಿಶ್ವರೂಪಧಾರಿಯಾದ ನನ್ನನ್ನು ; **ಸ್ವಚಕ್ಷುಷಾ**= ಪ್ರಾಕೃತವಾದ ನಿನ್ನ ಕಣ್ಣಿನಿಂದ. **ಐಶ್ವರಂ ಯೋಗಂ**=ಈಶ್ವರನಾದ ನನ್ನ ಯೋಗಶಕ್ತಿಯ ಅತಿಶಯವನ್ನು. (ಶಂ. ಭಾ.)

**ಸ್ವಚಕ್ಷುಷಾ** = ನಿಯತವಾದ ಪರಿಮಿತವಸ್ತುಗಳನ್ನು ಮಾತ್ರ ಗ್ರಹಿಸುವ ಪ್ರಾಕೃತವಾದ ನಿನ್ನ ಕಣ್ಣುಗಳಿಂದ. **ದಿವ್ಯಂ** = ಅಪ್ರಾಕೃತವಾದ, ನನ್ನ ದರ್ಶನಕ್ಕೆ ಸಾಧನವಾದ.

**ಐಶ್ವರಂ ಯೋಗಂ** = ಅಸಾಧಾರಣವಾದ ಯೋಗವನ್ನೂ, ನನ್ನ ಅನಂತಜ್ಞಾನದ ಯೋಗವನ್ನೂ ಮತ್ತು ಅನಂತವಿಭೂತಿಯೋಗವನ್ನೂ.

(ರಾ. ಭಾ.)

**ಸಂಜಯ ಉವಾಚ :**

**ಓಂ ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥೯॥**

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಮಹಾರಾಜ! ಮಹಾಯೋಗೇಶ್ವರನಾದ ಹರಿಯು ಹೀಗೆಂದು ಹೇಳಿದನಂತರ ಪಾರ್ಥನಿಗೆ ಪರಮಶ್ರೇಷ್ಠವಾದ ಈಶ್ವರೀಯರೂಪವನ್ನು ತೋರಿಸಿದನು."

* * *

(ಶ್ರೀಕೃಷ್ಣನು ಮಹಾಯೋಗೇಶ್ವರ-ಮಹಾ-ಮಹಾ ಯೋಗಗಳಿಗೂ ಈಶ್ವರ, ಸ್ವಾಮೀ. ಭಕ್ತಜನರ ಪಾಪಗಳನ್ನು ಪರಿಹರಿಸುವವನು ಅಥವಾ ತನ್ನ ದಿವ್ಯಸ್ವರೂಪದಿಂದ ಭಕ್ತರ ಮನಸ್ಸನ್ನು ಆಕರ್ಷಿಸುವವನು, ಎಲ್ಲ ಯಜ್ಞಗಳಲ್ಲಿಯೂ ಭಾಗಗಳನ್ನು ತೆಗೆದುಕೊಳ್ಳುವವನು ಮತ್ತು ಹರಿದ್ವರ್ಣ ವುಳ್ಳವನು ಹರಿ. ಇಂತಹ ಪರಮಾತ್ಮನು ತನ್ನ ಶ್ರೇಷ್ಠವಾದ ಈಶ್ವರ ಸಂಬಂಧವಾದ ಗುಣ, ಪ್ರಭಾವ, ತೇಜಸ್ಸು–ಇವುಗಳಿಂದ ಪರಿಪೂರ್ಣವಾದ ದಿವ್ಯರೂಪವನ್ನು ತೋರಿಸಿದನು.)

O O O

**ಮಹಾಯೋಗೇಶ್ವರಃ**= ಅತ್ಯಂತ ದೊಡ್ಡವನು ಮತ್ತು ಯೋಗೇಶ್ವರನು.

**ಮಹಾಂಶ್ಚಾಸೌ ಯೋಗೇಶ್ವರಶ್ಚ । ಹರಿಃ ನಾರಾಯಣಃ.**

(ಶಂ. ಭಾ.)

**ಮಹಾಯೋಗೇಶ್ವರಃ ಹರಿಃ** = ಮಹಾಶ್ಚರ್ಯಯೋಗಗಳಿಗೆ ಈಶ್ವರ ನಾದ, ಪರಬ್ರಹ್ಮನಾದ ನಾರಾಯಣನು.

**ಪರಮಂ ಐಶ್ವರಂ ರೂಪಂ** = ತನ್ನದೇ ಆದ ಅಸಾಧಾರಣವಾದ ರೂಪವನ್ನು. ಈ ವಿಧವಾದ ವಿಚಿತ್ರವಾದ ಎಲ್ಲ ಜಗತ್ತಿಗೂ ಆಶ್ರಯವಾಗಿ ವಿಶ್ವವನ್ನು ಆಳುತ್ತಿರುವ ರೂಪವನ್ನು. (ರಾ. ಭಾ.)

**ಹರಿಃ**= ಎಲ್ಲ ಯಜ್ಞಗಳಲ್ಲಿಯೂ ಭಾಗವನ್ನು ತೆಗೆದುಕೊಳ್ಳುವುದರಿಂದ

ಭಗವಂತನು ಹರಿ. ಮಹಾಭಾರತದ ಮೋಕ್ಷಧರ್ಮವು ಈ ಅರ್ಥಕ್ಕೆ ಪ್ರಮಾಣವಾಗಿದೆ.

**ಇಡೋಪಹೂತಂ ಗೇಹೇಷು ಹವಿರ್ಭಾಗಂ ಕ್ರತುಷ್ವಹಮ್ ।**
**ವರ್ಣೋ ಮೇ ಹರಿತಃ ಶ್ರೇಷ್ಠಃ ತಸ್ಮಾದ್ಧರಿರಿತಿ ಸ್ಮೃತಃ ॥** (ಮ. ಭಾ.)

ಆ ದಿವ್ಯರೂಪವನ್ನೇ ಸಂಜಯನು ವರ್ಣನೆಮಾಡುತ್ತಾನೆ.

**ಓಂ ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥೧೦॥**

ಅನೇಕವಾದ ಬಾಯಿ ಮತ್ತು ಕಣ್ಣುಗಳುಳ್ಳದ್ದಾಗಿಯೂ, ಅನೇಕಾದ್ಭುತ ದರ್ಶನವುಳ್ಳದ್ದಾಗಿಯೂ, ಅನೇಕದಿವ್ಯಾಭರಣಗಳುಳ್ಳದ್ದಾಗಿಯೂ, ದಿವ್ಯ ವಾದ ಮೇಲೆತ್ತಿದ್ದ ಅನೇಕಾಯುಧವುಳ್ಳದ್ದಾಗಿಯೂ ಇದ್ದ ತನ್ನ ಶ್ರೇಷ್ಠವಾದ ವಿಶ್ವರೂಪವನ್ನು ತೋರಿಸಿದನು.

* * *

(ಆ ದಿವ್ಯ ವಿರಾಟ್ಪುರುಷನಿಗೆ ಅಸಂಖ್ಯಾತವಾದ ಬಾಯಿಗಳಿದ್ದುವು. ಅಸಂಖ್ಯಾತವಾದ ಕಣ್ಣುಗಳಿದ್ದುವು. ಬಾಯಿಗಳೇ ಆಗಲೀ, ಕಣ್ಣುಗಳೇ ಆಗಲೀ, ಉಳಿದ ದೃಶ್ಯಗಳೇ ಆಗಲೀ–ಅದ್ಭುತವಾಗಿ ಕಾಣುತ್ತಿದ್ದುವು. ಆ ದಿವ್ಯಪುರುಷನು ಅನೇಕವಾದ ದಿವ್ಯವಾದ ಆಭರಣಗಳನ್ನು ತೊಟ್ಟಿದ್ದನು. ಆ ಮಹಾಪುರುಷನ ಅನೇಕಾನೇಕಹಸ್ತಗಳಲ್ಲಿ ಅನೇಕಾನೇಕಶಂಖ-ಚಕ್ರಾದಿ ದಿವ್ಯಾಯುಧಗಳಿದ್ದುವು. ಆ ಆಯುಧಗಳೆಲ್ಲವನ್ನೂ ಆ ವಿರಾಟ್ಪುರುಷನು ಮೇಲಕ್ಕೆತ್ತಿಕೊಂಡೇ ನಿಂತಿದ್ದನು. ಆ ಸಮಯದಲ್ಲಿ ಅರ್ಜುನನಿಗೆ ಹಿಂದಾಗಲೀ, ಮುಂದಾಗಲೀ, ಮೇಲಾಗಲೀ, ಕೆಳಗಾಗಲೀ–ವಿಶ್ವರೂಪವೇ ಕಾಣುತ್ತಿದ್ದಿತೇ ಹೊರತು ಬೇರಾವುದೂ ಕಾಣಿಸುತ್ತಿರಲಿಲ್ಲ. ವಿಶ್ವವನ್ನೂ ವ್ಯಾಪಿಸಿ ವಿಶ್ವಮಯವಾಗಿರುವುದಲ್ಲವೇ ಭಗವಂತನ ವಿಶ್ವರೂಪ? )

**ಓಂ ದಿವ್ಯಮಾಲ್ಯಾಮ್ಬರಧರಂ ದಿವ್ಯಗನ್ಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥**

ದಿವ್ಯಮಾಲೆಗಳನ್ನೂ ದಿವ್ಯಾಂಬರಗಳನ್ನೂ ಧರಿಸಿರುವ, ದಿವ್ಯವಾದ ಗಂಧವನ್ನು ಪೂಸಿಕೊಂಡಿರುವ ಸರ್ವಾಶ್ಚರ್ಯಮಯವಾಗಿ ಕಾಣುತ್ತಿದ್ದ

ಅನಂತವಾದ ಸರ್ವತೋಮುಖವಾದ ದೇವರೂಪವನ್ನು ಅರ್ಜುನನು ನೋಡಿದನು.

*　　*　　*

(ಆ ವಿರಾಟ್ಪುರುಷನ ಶರೀರವು ಸುವಾಸಿತವಾದ ದಿವ್ಯವಾದ ಕುಸುಮ ಮಾಲೆಗಳಿಂದ ಅಲಂಕೃತವಾಗಿದ್ದಿತು. ಆ ದಿವ್ಯಪುರುಷನ ಶರೀರವು ದಿವ್ಯ ವಾದ ವಸ್ತ್ರಗಳಿಂದಲೂ ಅಲಂಕೃತವಾಗಿದ್ದಿತು. ವಿರಾಟ್‌ಪುರುಷನ ಸುತ್ತಲೂ ದಿವ್ಯವಾದ ಪರಿಮಳಗಂಧವು ಹೊರಸೂಸುತ್ತಿದ್ದಿತು.

ಅವನ ಶರೀರವು ದಿವ್ಯಗಂಧದಿಂದ ಲೇಪಿತವಾಗಿದ್ದಿತು. ಬುದ್ಧಿಗೆ ಊಹಿಸುವುದಕ್ಕೂ ಅಸಾಧ್ಯವಾದ ಅನಂತತ್ವ ವ್ಯಾಪಕತ್ವಗಳಿಂದಲೂ ಮತ್ತು ದಿವ್ಯಮಾಲ್ಯಭೂಷಣ-ಗಂಧಾದಿಗಳಿಂದ ಕೂಡಿದ್ದರಿಂದಲೂ ಎಲ್ಲರಿಗೂ ಅಚ್ಚರಿಯನ್ನುಂಟುಮಾಡುತ್ತಿದ್ದಿತು. ಅಂತಹ ತನ್ನ ಐಶ್ವರರೂಪವನ್ನು ಶ್ರೀಕೃಷ್ಣನು ಅರ್ಜುನನಿಗೆ ತೋರಿಸಿದನು.)

o　　o　　o

ವಿಶ್ವತೋಮುಖಂ = ಭಗವಂತನು ಸರ್ವಭೂತಗಳಿಗೂ ಆತ್ಮ ನಾಗಿರುವುದರಿಂದ ಅವನು ಸರ್ವತೋಮುಖನಾಗಿದ್ದಾನೆ. (ಶಂ. ಭಾ.)

ದೇವಂ = ಪ್ರಕಾಶಮಾನವಾಗಿದ್ದ. ಅನನ್ತಂ = ತ್ರಿಕಾಲಗಳಲ್ಲಿಯೂ ಇರುವ. ಎಲ್ಲ ಜಗತ್ತುಗಳಿಗೂ ಆಶ್ರಯವಾಗಿರುವುದರಿಂದ ದೇಶ-ಕಾಲ-ಪರಿ ಚ್ಛೇದವಿಲ್ಲದವನಾದ. ವಿಶ್ವತೋಮುಖಂ=ಎಲ್ಲ ದಿಕ್ಕುಗಳಿಗೂ ಮುಖವುಳ್ಳ. ದಿವ್ಯ....ಲೇಪನಂ = ತನಗೆ ಉಚಿತವಾದ ದಿವ್ಯಾಂಬರ-ಗಂಧ-ಮಾಲ್ಯಾಭರಣಾದಿಗಳಿಂದ ಕೂಡಿದ. (ರಾ. ಭಾ.)

ಸರ್ವಾಶ್ಚರ್ಯಮಯಂ = ಸರ್ವಾಶ್ಚರ್ಯಾತ್ಮಕನಾದ. ಇಲ್ಲಿರುವ ಮಯಟ್ ಪ್ರತ್ಯಯಕ್ಕೆ ಪ್ರಚುರ ಎಂಬ ಅರ್ಥವನ್ನು ಹೇಳಬಾರದು. ತಾದಾತ್ಮ್ಯ ಎಂಬ ಅರ್ಥವನ್ನೇ ಹೇಳಬೇಕು. —ಜಯತೀರ್ಥರು.

ಓಂ ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥೧೨॥

ಆಕಾಶದಲ್ಲಿ ಸಾವಿರಸೂರ್ಯರು ಏಕಕಾಲದಲ್ಲಿ ಉದಯಿಸಿದ್ದೇ ಆದರೆ

ಆ ಪ್ರಭೆಯು ಮಹಾತ್ಮನಾದ ಆ ವಿರಾಟ್ಪುರುಷನ ಪ್ರಭೆಗೆ ಸಮಾನವಾದರೂ ಆಗಬಹುದಿತ್ತೇನೋ?

* * *

(ವಿರಾಟ್ಪುರುಷನ ಪ್ರಕಾಶವೆಷ್ಟಿತ್ತೆಂಬುದನ್ನು ಈ ಶ್ಲೋಕದಲ್ಲಿ ಸಂಜಯನು ವರ್ಣಿಸಿದ್ದಾನೆ. ಈಗ ಬೆಳಗುತ್ತಿರುವ ಸೂರ್ಯನಿಗೆ ಸಮಾನ ರಾದ ಸಾವಿರ ಸೂರ್ಯರು ಒಂದೇ ಕಾಲದಲ್ಲಿ ಬೆಳಗಿದರೆ ಎಷ್ಟು ಪ್ರಕಾಶ ವಿರುತ್ತದೆಯೋ ಅಷ್ಟು ಪ್ರಕಾಶದಿಂದ ಮಹಾತ್ಮನಾದ ವಿರಾಟ್ಪುರುಷನು ಬೆಳಗುತ್ತಿದ್ದನು.

ಸಾವಿರ ಸೂರ್ಯರ ಬೆಳಕು ವಿರಾಡ್ರೂಪನ ಪ್ರಕಾಶಕ್ಕೆ ಸಮಾನವಾಗುತ್ತಿದ್ದಿತೋ ಏನೋ! ಅರ್ಥಾತ್ ಸಾವಿರ ಸೂರ್ಯರ ಪ್ರಕಾಶಕ್ಕಿಂತಲೂ ವಿಶ್ವರೂಪನ ಪ್ರಕಾಶವು ಅಧಿಕವಾಗಿರಲು ಸಾಧ್ಯ. ಸಾವಿರ ಸೂರ್ಯರ ಪ್ರಕಾಶವನ್ನು ನಾವು ಊಹಿಸಿಕೊಳ್ಳಲಾರೆವು. ಆದರೆ ಅಂತಹ ಸಹಸ್ರಸೂರ್ಯ ಪ್ರಕಾಶವನ್ನೂ ಧಿಕ್ಕರಿಸುವ ಪ್ರಕಾಶದಿಂದ ಕೂಡಿದ್ದ ವಿರಾಟ್ಪುರುಷನನ್ನು ಅರ್ಜುನನೂ ನೋಡಿದನು ; ಸಂಜಯನೂ ನೋಡಿದನು. ಶ್ರೀಕೃಷ್ಣ ಮತ್ತು ಕೃಷ್ಣದ್ವೈಪಾಯನರು ಅನುಗ್ರಹಿಸಿಕೊಟ್ಟಿದ್ದ ದಿವ್ಯದೃಷ್ಟಿಯಿಂದಾಗಿ ಅದು ಅವರಿಗೆ ಸಾಧ್ಯವಾಯಿತು.)

o o o

ದಿವಿ–ಅಂತರಿಕ್ಷದಲ್ಲಿ ಅಥವಾ ಮೂರನೆಯದಾದ ಸ್ವರ್ಗಲೋಕದಲ್ಲಿ ; **ಯದಿ ಭಾಃ ಸದೃಶೀ ಸಾ ಸ್ಯಾತ್**–ಅದು ಆ ಮಹಾತ್ಮನಾದ ವಿಶ್ವರೂಪನ ಪ್ರಕಾಶಕ್ಕೆ ಸಾಟಿಯಾಗುತ್ತಿತ್ತು ಅಥವಾ ಅದೂ ಆಗುತ್ತಿರಲಿಲ್ಲ. ಅದಕ್ಕಿಂತಲೂ ವಿಶ್ವರೂಪನ ಪ್ರಕಾಶವೇ ಅಧಿಕವಾಗಿತ್ತು. (ಶಂ. ಭಾ.)

ವಿಶ್ವರೂಪನಾದ ಭಗವಂತನ ತೇಜಸ್ಸು ಅಪರಿಮಿತವಾಗಿತ್ತು–ಎಂದು ತೋರಿಸಲು ಈ ಸೂರ್ಯನ ತೇಜಸ್ಸಿನ ಹೋಲಿಕೆ. ಅದು ಅಕ್ಷಯ, ತೇಜೋರೂಪವಾಗಿತ್ತು ಎಂಬ ಅಭಿಪ್ರಾಯ. ಸಂಖ್ಯಾವಿಶೇಷದ ಲೆಕ್ಕವಿಲ್ಲ.

(ರಾ. ಭಾ.)

ಸಹಸ್ರ ಎಂದರೆ ಅನಂತ ಎಂದು ಅರ್ಥ. ಭಗವಂತನಿಗೆ ಅನಂತ

ಸೂರ್ಯರ ಉಪಮಾನವನ್ನು ಹೇಳುವುದೂ ಕೂಡ ವಾಸ್ತವವಲ್ಲ. ಏಕೆಂದರೆ: ಅವನು ನಿರುಪಮ. ಆದರೆ ನಮ್ಮ ಬುದ್ಧಿಯಲ್ಲಿ ನಂಬಿಕೆ ಯುಂಟಾಗುವಂತೆ ತೋರಿಸುವುದಕ್ಕೋಸ್ಕರ ಅದನ್ನು ಉಪಮಾನವಾಗಿ ಕೊಟ್ಟಿದೆ. ಭಗವಂತನಾದ ಶ್ರೀರಾಮನನ್ನು ಇಂದ್ರನಿಗೆ ಹೋಲಿಸುವಂತೆ.

**ಯಥಾ ಭಗವತೋ ದಾಶರಥೇಃ ಪಾಕಶಾಸನೋಪಮ ಪರಾಕ್ರಮತ್ವಮ್.** (ಮ. ಭಾ.)

**ಓಂ ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ॥೧೩॥**

ಅನೇಕಪ್ರಕಾರವಾಗಿ ವಿಂಗಡಿಸಲ್ಪಟ್ಟಿದ್ದ ಜಗತ್ತೆಲ್ಲವೂ ಅಲ್ಲಿ ; ಆ ದೇವ ದೇವನ ಶರೀರದಲ್ಲಿ ಒಂದು ಕಡೆಯಲ್ಲಿರುವುದನ್ನು ಆಗ ಪಾಂಡವನು ಕಂಡನು.

* * *

(ಜಗತ್ತು ಅನೇಕಪ್ರಕಾರವಾಗಿ ವಿಭಾಗಿಸಲ್ಪಟ್ಟಿದ್ದಿತು. ಜಗತ್ತು ಎಂದರೆ ಲೋಕ. ಭೂಲೋಕ, ಭುವೋಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಬ್ರಹ್ಮಲೋಕ, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಲ–ಈ ಎಲ್ಲ ಹದಿನಾಲ್ಕು ಲೋಕಗಳೂ ಸಹ ಪ್ರತ್ಯೇಕ-ಪ್ರತ್ಯೇಕವಾಗಿ ತಮ್ಮಲ್ಲಿರುವ ಅನೇಕ ಜೀವ ಜಾತಿಗಳ ಅವಾಂತರಭೇದಗಳೊಡನೆ ವಿರಾಟ್‌ಪುರುಷನ ಶರೀರದ ಒಂದು ಭಾಗದಲ್ಲಿದ್ದುವು. ಅದನ್ನು ಅರ್ಜುನನು ನೋಡಿದನು.)

O O O

**ಅನೇಕಧಾ ಪ್ರಯುಕ್ತಂ** =ದೇವ-ಪಿತೃ-ಮನುಷ್ಯಾದಿ ಭೇದಗಳಿಂದ ಅನೇಕಪ್ರಕಾರಗಳಲ್ಲಿ ವಿಭಕ್ತವಾಗಿದ್ದ. (ಶಂ. ಭಾ.)

**ಅನೇಕಧಾ ಪ್ರಯುಕ್ತಂ ಕೃತ್ಸ್ನಂ ಜಗತ್**–ಬ್ರಹ್ಮಾದಿ ವಿವಿಧ ವಿಚಿತ್ರ ವಾದ ದೇವ-ತಿರ್ಯಕ್-ಮನುಷ್ಯ-ಸ್ಥಾವರಗಳೇ ಮುಂತಾದ ಭೋಕ್ತೃವರ್ಗ ದಿಂದಲೂ, ಪೃಥ್ವಿಯೇ ಮುಂತಾದ ಭೋಗಸ್ಥಾನ-ಭೋಗ್ಯ-ಭೋಗೋಪ ಕರಣಭೇದಗಳಿಂದ ಭಿನ್ನವಾದ ಪ್ರಕೃತಿ-ಪುರುಷಾತ್ಮಕವಾದ ಇಡೀ ಜಗತ್ತನ್ನು.

ಪಾಣ್ಡವಃ = ಭಗವಂತನ ಅನುಗ್ರಹದಿಂದ ಪಡೆದುಕೊಂಡು ಅವನನ್ನು ದರ್ಶಿಸಲು ಅನುಗುಣವಾದ ದಿವ್ಯದೃಷ್ಟಿಯುಳ್ಳ ಅರ್ಜುನನು. (ರಾ. ಭಾ.)

**ಓಂ ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಞ್ಜಲಿರಭಾಷತ ॥೧೪॥**

ಅನಂತರ ಆಶ್ಚರ್ಯಭರಿತನಾಗಿ, ರೋಮಾಂಚಿತನಾದ ಧನಂಜಯನು ಆ ದೇವನಿಗೆ ತಲೆಬಾಗಿ ನಮಸ್ಕರಿಸಿ ಬದ್ಧಾಂಜಲಿಯಾಗಿ ನಿಂತು ಹೇಳಿದನು.

* * *

(ಅಂಗೈನೆಲ್ಲಿಯಂತೆ ಭಗವಂತನ ಶರೀರದ ಒಂದು ಭಾಗದಲ್ಲಿ ಸುಸ್ಪಷ್ಟವಾಗಿ ಕಾಣುತ್ತಿದ್ದ ಸಕಲಜಗತ್ತನ್ನೂ ಕಂಡು ಅರ್ಜುನನು ಆಶ್ಚರ್ಯಚಕಿತನಾದನು. ಪರಮಾದ್ಭುತವಾದ ಆ ಈಶ್ವರೀಯರೂಪವನ್ನು ಕಂಡೊಡನೆಯೇ ಅರ್ಜುನನ ರೋಮಕೋಟಿಗಳು ನಿಮಿರಿನಿಂತುವು. ಅತ್ಯಂತವಿನೀತನಾಗಿ ಅರ್ಜುನನು ಭಗವಂತನಿಗೆ ಶಿರಸಾ ಪ್ರಣಾಮಮಾಡಿ ಕೈಜೋಡಿಸಿ ನಿಂತು ಅವನಿಗೆ ಬಿನ್ನೈಸಿದನು.)

o o o

ದೇವಂ=ಮಹಾಶ್ಚರ್ಯಕರವಾದ ಇಡೀ ಜಗತ್ತಿಗೆ ತನ್ನ ಶರೀರದ ಒಂದು ಭಾಗದಲ್ಲಿ ಆಶ್ರಯನಾಗಿ ಎಲ್ಲಕ್ಕೂ ಪ್ರೇರಕನಾಗಿ ಆಶ್ಚರ್ಯತಮನಾದ ಅನಂತವಾದ ಜ್ಞಾನಾದಿ ಕಲ್ಯಾಣಗುಣಗಣಗಳುಳ್ಳ ದೇವನನ್ನು. (ರಾ. ಭಾ.)

**ಅರ್ಜುನ ಉವಾಚ :**

**ಓಂ ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥ-**
**ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥೧೫॥**

ಅರ್ಜುನನು ಹೇಳುತ್ತಾನೆ :

ದೇವ! ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನೂ, ಎಲ್ಲ ಭೂತವಿಶೇಷಸಮೂಹಗಳನ್ನೂ, ಕಮಲಾಸನನಾದ–ಈಶನಾದ ಬ್ರಹ್ಮನನ್ನೂ, ಸರ್ವರ್ಷಿಗಳನ್ನೂ, ದಿವ್ಯರಾದ ಸರ್ಪಗಳನ್ನೂ ಕಾಣುತ್ತಿದ್ದೇನೆ.

* * *

(ಅರ್ಜುನನು ಕೈಜೋಡಿಸಿ ನಿಂತು ಭಗವಂತನ ವಿರಾಡ್ರೂಪದಲ್ಲಿ ಏನೇನನ್ನು ನೋಡುತ್ತಿರುವೆನೆಂಬುದನ್ನು ವಿವರಿಸಿ ಭಗವಂತನಿಗೆ ಹೇಳುತ್ತಿದ್ದಾನೆ.

ದೇವ! ಮಹಾನುಭಾವ! ನಾನು ಎಲ್ಲ ದೇವತೆಗಳನ್ನೂ ಈ ನಿನ್ನ ದಿವ್ಯಶರೀರದಲ್ಲಿ ಕಾಣುತ್ತಿದ್ದೇನೆ. ಎಲ್ಲ ಪ್ರಾಣಿಗಳ ಸಮುದಾಯಗಳನ್ನೂ ನೋಡುತ್ತಿದ್ದೇನೆ. ಈಶ್ವರನಾದ–ಕಮಲದ ಮೇಲೆ ಕುಳಿತಿರುವ ಬ್ರಹ್ಮನನ್ನೂ, ವಸಿಷ್ಠಾದಿ ಋಷಿಗಳನ್ನೂ, ವಾಸುಕಿಯೇ ಮೊದಲಾದ ದೇವಲೋಕದ ಸರ್ಪಗಳನ್ನೂ ಸಹ ಕಾಣುತ್ತಿದ್ದೇನೆ. (ಕಮಲಾಸನದಲ್ಲಿ ಮಂಡಿಸಿರುವ ಬ್ರಹ್ಮನನ್ನೂ ಮತ್ತು ಮಹಾದೇವನನ್ನೂ ಎಂದೂ ಅರ್ಥಮಾಡಬಹುದು.)

* * *

**ಕಮಲಾಸನಸ್ಥಂ ಈಶಂ ಬ್ರಹ್ಮಾಣಂ**= ಪ್ರಜೆಗಳಿಗೆಲ್ಲಾ ಪ್ರಭುವಾಗಿರುವ ಮತ್ತು ಕಮಲಾಸನದಲ್ಲಿ ಕುಳಿತಿರುವ–ಪೃಥಿವೀ ಎಂಬ ಪದ್ಮದ ಮಧ್ಯದಲ್ಲಿ ಮೇರುವೆಂಬ ಕರ್ಣಿಕಾಸ್ಥಾನದ ಆಸನದಲ್ಲಿ ಮಂಡಿಸಿರುವ ಚತುರ್ಮುಖನನ್ನು.

**ಈಶಂ = ಪ್ರಜಾನಾಂ ಈಶಿತಾರಮ್ । ಪೃಥಿವೀಪದ್ಮಮಧ್ಯೇ ಮೇರುಕರ್ಣಿಕಾಸನಸ್ಥಂ.** (ಶಂ. ಭಾ.)

**ಬ್ರಹ್ಮಾಣಮೀಶಂ ಕಮಲಾಸನಸ್ಥಂ :**

**ಬ್ರಹ್ಮಾಣಂ** = ಅಂಡಾಧಿಪತಿಯಾದ ಚತುರ್ಮುಖನನ್ನು, **ಈಶಂ ಕಮಲಾಸನಸ್ಥಂ**=ಕಮಲಾಸನನಾದ ಬ್ರಹ್ಮನಲ್ಲಿರುವ ಎಂದರೆ ಅವನ ಅಭಿಪ್ರಾಯದಂತೆ ನೆಲೆಸಿರುವ ಈಶ್ವರನನ್ನು. (ರಾ. ಭಾ.)

**ಓಂ ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನನ್ತರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥**

ಅನೇಕವಾದ ತೋಳುಗಳೂ, ಹೊಟ್ಟೆಗಳೂ, ಮುಖಗಳೂ, ಕಣ್ಣು

ಗಳೂ ಇರುವ ನಿನ್ನನ್ನು ನಾನು ಕಾಣುತ್ತಿದ್ದೇನೆ. ಅನಂತರೂಪನಾದ ನಿನ್ನನ್ನು ಎಲ್ಲೆಲ್ಲೂ ಕಾಣುತ್ತಿದ್ದೇನೆ. ವಿಶ್ವೇಶ್ವರ! ವಿಶ್ವರೂಪ! ನಿನ್ನ ರೂಪದ ತುದಿಯನ್ನಾಗಲೀ, ಮಧ್ಯವನ್ನಾಗಲೀ ಅಥವಾ ಆದಿಯನ್ನಾಗಲೀ ನಾನು ಕಾಣುತ್ತಿಲ್ಲ.

* * *

(ವಿಶ್ವಕ್ಕೆ ಈಶ್ವರನಾಗಿರತಕ್ಕವನೇ! ವಿಶ್ವವೇ ರೂಪವಾಗಿ ಉಳ್ಳವನೇ! ನಿನ್ನ ಈ ಈಶ್ವರೀಯರೂಪದಲ್ಲಿ ಅಸಂಖ್ಯಾತವಾದ ತೋಳುಗಳನ್ನು ಕಾಣುತ್ತಿದ್ದೇನೆ. ಅನಂತವಾದ ಹೊಟ್ಟೆಗಳನ್ನು ಕಾಣುತ್ತಿದ್ದೇನೆ. ಅನೇಕ ಮುಖಗಳನ್ನೂ, ಕಣ್ಣುಗಳನ್ನೂ ಸಹ ಕಾಣುತ್ತಿದ್ದೇನೆ. ಹಿಂದೆ-ಮುಂದೆ-ಮೇಲೆ-ಕೆಳಗೆ ಎಲ್ಲ ಕಡೆಗಳಲ್ಲಿಯೂ ಸಹ ನಿನ್ನ ಅಂತವೇ ಇಲ್ಲದ ಅಸಂಖ್ಯಾತವಾದ ರೂಪಗಳನ್ನು ಕಾಣುತ್ತಿದ್ದೇನೆ. ಆದರೆ ನಿನ್ನ ವಿಶ್ವವ್ಯಾಪಕವಾದ ಈ ವಿರಾಡ್ರೂಪದಲ್ಲಿ ಕೊನೆ ಯಾವುದೆಂಬುದನ್ನು ನಾನು ಕಾಣುತ್ತಿಲ್ಲ. ಮಧ್ಯವನ್ನೂ ಕಾಣುತ್ತಿಲ್ಲ. ಮೊದಲು ಯಾವುದೆಂಬುದನ್ನೂ ನಾನು ಕಾಣುತ್ತಿಲ್ಲ. ಎಲ್ಲ ಕಡೆಗಳಲ್ಲಿಯೂ ನಿನ್ನ ರೂಪವೇ ಕಾಣುತ್ತಿರುವಾಗ–ನೀನು ವಿಶ್ವತೋಮುಖನಾಗಿರುವಾಗ ನಿನ್ನ ಆದಿ-ಮಧ್ಯಾಂತಗಳನ್ನು ಅರಿಯಲು ಹೇಗೆ ತಾನೇ ಸಾಧ್ಯವಾದೀತು? )

O O O

ವಿಶ್ವೇಶ್ವರ = ವಿಶ್ವಕ್ಕೆ ನಿಯಂತೃವಾದವನೇ, ವಿಶ್ವರೂಪ= ವಿಶ್ವ ಶರೀರಿಯೇ, ನೀನು ಅನಂತವಾಗಿರುವೆ. ಆದುದರಿಂದ ನಿನ್ನ ಅಂತವನ್ನಾಗಲೀ, ಮಧ್ಯವನ್ನಾಗಲೀ, ಆದಿಯನ್ನಾಗಲೀ ನಾನು ನೋಡುತ್ತಿಲ್ಲ.

(ರಾ. ಭಾ.)

ಅನೇಕ= ಎಂದರೆ ಅನಂತ ಎಂದು ಅರ್ಥ. ಏಕೆಂದರೆ : ಮುಂದೆ (೧೯ನೆಯ ಶ್ಲೋಕದಲ್ಲಿ) ಅನನ್ತಬಾಹು–ಎಂಬ ಪದವನ್ನು ಬಳಸಿದೆ. ಶ್ರುತಿಗಳೂ ಈ ಅಭಿಪ್ರಾಯವನ್ನೇ ಹೇಳುತ್ತವೆ.

**ಸರ್ವತಃ ಪಾಣಿಪಾದಂ ತತ್ ।**
**ವಿಶ್ವತಶ್ಚಕ್ಷುರುತ ವಿಶ್ವತೋಮುಖೋ**
**ವಿಶ್ವತೋ ಬಾಹುರುತ ವಿಶ್ವತಸ್ಪಾತ್ ।**

ಸಂಬಾಹುಭ್ಯಾಂ ಧಮತಿ ಸಂಪತತ್ರೈ-
ರ್ದ್ಯಾವಾಪೃಥಿವೀ ಜನಯನ್ದೇವ ಏಕಃ ॥ ಋಗ್ವೇದ ಖಿಲ.

ಯಜುರ್ವೇದದಲ್ಲಿ ವಿಶ್ವತೋ ಬಾಹು ಎಂಬುದಕ್ಕೆ ವಿಶ್ವತೋ ಹಸ್ತ ಎಂದೂ, ಧಮತಿ–ಎಂಬುದಕ್ಕೆ ನಮತಿ ಎಂದೂ ಪಾಠವಿದೆ.

ಶ್ಲೋಕದಲ್ಲಿರುವ ವಿಶ್ವಶಬ್ದವು ಅನಂತವಾಚಕ. ಅನಂತ ಎಂಬ ಅರ್ಥ ವನ್ನು ಹೇಳುತ್ತದೆ.

ಸರ್ವಂ ಸಮಸ್ತಂ ವಿಶ್ವಂ ಚ ಅನನ್ತಂ ಪೂರ್ಣಮೇವ ಚ ।

ಭಗವಂತನ ಪರಿಮಾಣಕ್ಕೆ ಪರಿಚ್ಛೇದವಿಲ್ಲ ಎಂದು ಹೇಳಿರುವುದು ಔಪ ಚಾರಿಕವಲ್ಲ. ಏಕೆಂದರೆ ಈಶ್ವರನು ಅಚಿಂತ್ಯಶಕ್ತಿಯುಳ್ಳವನು.

ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸನ್ತ್ಯಶ್ರುತಾ ಅಪಿ ನೈವಾತ್ರ ಶಙ್ಕಾ । ಜಾಬಾಲಖಿಲ

ನೈಷಾ ತರ್ಕೇಣ ಮತಿರಪನೇಯಾ । (ಕಠ)
ಅಚಿನ್ತ್ಯಾಃ ಖಲು ಯೇ ಭಾವಾಃ ನ ತಾಂಸ್ತರ್ಕೇಣ ಯೋಜಯೇತ್ (ವಿ. ಪು.)

ಇದು ಔಪಚಾರಿಕವಲ್ಲ ಎಂಬುದನ್ನು ತೋರಿಸುವುದಕ್ಕೋಸ್ಕರವೇ ಶ್ಲೋಕದಲ್ಲಿ ಮಧ್ಯಂ ಎಂಬ ಪದವನ್ನು ವಾಚ್ಯವಾಗಿ ಹೇಳಿದೆ. ಇಲ್ಲದಿದ್ದರೆ ಆದಿ-ಅಂತ್ಯಗಳು ಕಾಣುವುದಿಲ್ಲವೆಂದು ಹೇಳಿದ್ದರಿಂದಲೇ ಮಧ್ಯವು ಕಾಣುವು ದಿಲ್ಲ ಎಂಬುದು ಸಿದ್ಧವಾಗುತ್ತಿದ್ದಿತು.

ವಿಶ್ವರೂಪ = ಪೂರ್ಣರೂಪನೇ.

ಸ ವಿಶ್ವರೂಪಃ ಅನೂನರೂಪಃ ಅತೋಽಯಂ ಸೋಽನನ್ತರೂಪೋ ನ ಹಿ ನಾಶೋಽಸ್ತಿ ತಸ್ಯ. (ಮ. ಭಾ.)

ಓಂ ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮನ್ತಮ್ ।
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮನ್ತಾ-
ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥೧೭॥

ಕಿರೀಟಿಯೂ, ಗದಾಧಾರಿಯೂ, ಚಕ್ರಧಾರಿಯೂ, ತೇಜಃಪುಂಜನೂ, ಎಲ್ಲ ಕಡೆಗಳಲ್ಲಿಯೂ ಪ್ರಕಾಶದಿಂದ ಕೂಡಿರುವವನೂ, ನೋಡಲು ಕಷ್ಟ

ಸಾಧ್ಯನೂ ಆಗಿ ಎಲ್ಲೆಲ್ಲಿಯೂ ಪ್ರದೀಪ್ತವಾದ ಅಗ್ನಿ ಮತ್ತು ಸೂರ್ಯರ ಪ್ರಕಾಶವನ್ನು ಹೊಂದಿರುವ ಅಪ್ರಮೇಯನಾದ ನಿನ್ನನ್ನು ಕಾಣುತ್ತಿದ್ದೇನೆ.

* * *

(ವಿಶ್ವರೂಪ! ನೀನು ದಿವ್ಯವಾದ ಕಿರೀಟವನ್ನು ಧರಿಸಿರುವೆ. ಗದೆ ಮತ್ತು ಚಕ್ರಗಳನ್ನೂ ಹಿಡಿದಿರುವೆ. ನೀನು ತೇಜಸ್ಸಿನ ರಾಶಿಯಂತೆಯೇ ಕಾಣುತ್ತಿರುವೆ.

ಎಲ್ಲ ಕಡೆಗಳಲ್ಲಿಯೂ ನೀನು ಬೆಳಕನ್ನು ಹೊಂದಿರುವೆ. ಅರ್ಥಾತ್ ನಿನ್ನನ್ನು ಕಾಣಲು ಬೇರೊಂದು ಬೆಳಕು ಬೇಕಾಗಿಲ್ಲ. ನಿನ್ನಲ್ಲಿಯೇ ನಿನ್ನ ಸುತ್ತಲೂ ಆ ಬೆಳಕೇ ಇರುವುದರಿಂದ ನಿನ್ನಲ್ಲಿರುವ ಬೆಳಕಿನಿಂದಲೇ ನಿನ್ನನ್ನು ಕಾಣಬಹುದಾಗಿದೆ. ನಿನ್ನನ್ನು ನೋಡಲು ಅತಿಕಷ್ಟವಾಗುವುದು. ಯದ್ಯಪಿ ದಿವ್ಯದೃಷ್ಟಿಯನ್ನೇ ನೀನು ದಯಪಾಲಿಸಿದ್ದರೂ ಈ ದಿವ್ಯದೃಷ್ಟಿಯಿಂದಲೂ ನಿನ್ನನ್ನು ನೋಡುವುದು ಕಷ್ಟಸಾಧ್ಯವೇ ಸರಿ. ನಿನ್ನ ಅಮಿತವಾದ ಪ್ರಭೆಯಿಂದಾಗಿ ಕಣ್ಣುಗಳು ಕೋರೈಸುತ್ತಿರುವುವು. ಸುತ್ತಲೂ ಪ್ರದೀಪ್ತವಾದ ಝಗ-ಝಗಿಸುವ ಅಗ್ನಿ-ಸೂರ್ಯರ ಜ್ವಾಲೆಗಳಿಂದ ಕೂಡಿರುವುದರಿಂದಲೇ ನೀನು ದುರ್ನಿರೀಕ್ಷ್ಯನೆಂದು ಹೇಳಲು ಕಾರಣವಾಗಿದೆ. ಇಂತಹ ಅಳೆಯಲು ಅಸಾಧ್ಯನಾದ (ಅಪ್ರಮೇಯನಾದ) ವಿಶ್ವರೂಪನಾದ ನಿನ್ನನ್ನು ನಾನು ಕಾಣುತ್ತಿದ್ದೇನೆ.)

o o o

**ದೀಪ್ತಾನಲಾರ್ಕದ್ಯುತಿಂ** = ತೊಳತೊಳಗಿ ಬೆಳಗುತ್ತಿರುವ ಅಗ್ನಿ-ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳ ನಿನ್ನನ್ನು. **ಅಪ್ರಮೇಯಂ** = ಪರಿಚ್ಛೇದಮಾಡಲು ಅಸಾಧ್ಯನಾದ. (ಶಂ. ಭಾ.)

**ಕಿರೀಟಿನಂ ಗದಿನಂ** = ನಿನ್ನ ಈ ರೂಪವನ್ನು ಹಿಂದೆ ನೋಡಿರದಿದ್ದರೂ ಕೂಡ ನಿನ್ನ ಅಸಾಧಾರಣವಾದ ಚಿಹ್ನೆಗಳಾದ ಚಕ್ರ-ಗದೆ ಮುಂತಾದುವುಗಳಿಂದ ನಿನ್ನನ್ನು ಗುರುತಿಸುತ್ತಿದ್ದೇನೆ. (ರಾ. ಭಾ.)

ಇಲ್ಲಿರುವ ಕಿರೀಟಶಬ್ದವು ಉಳಿದ ದಿವ್ಯಾಭರಣಗಳಿಗೂ ಸೂಚಕವಾಗಿದೆ. ಅವುಗಳಲ್ಲಿ ಕಿರೀಟವನ್ನು ಹೇಳಿರುವುದು ಅವನ ಸರ್ವೇಶ್ವರತ್ವವನ್ನು ಸೂಚಿ

ಸುವುದಕ್ಕೆ. ಮಕುಟದಲ್ಲಿ ಕಿರೀಟ, ಕರಂಡಿಕಾ ಎಂದು ಎರಡು ಭೇದಗಳು. ಅವುಗಳಲ್ಲಿ ಕಿರೀಟವು ಉತ್ಕೃಷ್ಟವಾದುದು.

**ಗದಿನಂ, ಚಕ್ರಿಣಂ**–ಎನ್ನುವುದು ಭಗವಂತನ ಉಳಿದ ದಿವ್ಯಾಯುಧಗಳಿಗೂ ಸೂಚಕವಾಗಿದೆ. ಅವುಗಳಲ್ಲಿಯೂ ಚಕ್ರ ಮುಂತಾದುವುಗಳು ಭಗವಂತನ ಅಸಾಧಾರಣವಾದ ಆಯುಧಗಳಾದುದರಿಂದ ಅವುಗಳನ್ನು ಹೇಳಿದೆ.
–ವೇದಾಂತದೇಶಿಕರು.

**ದೀಪ್ತಾನಲಾರ್ಕದ್ಯುತಿಂ**–ಇಲ್ಲಿ ಭಗವಂತನ ಪ್ರಕಾಶಕ್ಕೆ ಅಗ್ನಿ ಮತ್ತು ಸೂರ್ಯರ ಪ್ರಕಾಶವನ್ನು ಹೋಲಿಕೆಯಾಗಿ ಕೊಟ್ಟಿರುವುದರಿಂದ ಅದಕ್ಕೆ ಪರಿಮಿತಿಯು ಇರಬಹುದೋ?–ಎಂಬ ಶಂಕೆಯನ್ನು ಹೋಗಲಾಡಿಸಲು **ಅಪ್ರಮೇಯಂ**–ಎಂಬ ಪದವನ್ನು ಹೇಳಿದೆ. (ಮ. ಭಾ.)

**ಓಂ ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥**

ಅರಿತುಕೊಳ್ಳಬೇಕಾಗಿರುವ ಶ್ರೇಷ್ಠವಾದ ಅಕ್ಷರವು ನೀನು. ಈ ವಿಶ್ವಕ್ಕೇ ನೀನು ಶ್ರೇಷ್ಠವಾದ ಆಶ್ರಯಸ್ಥಾನನು. ಅಳಿವಿಲ್ಲದವನು. ಶಾಶ್ವತವಾದ ಧರ್ಮವನ್ನು ರಕ್ಷಿಸತಕ್ಕವನು. ಸನಾತನನಾದ ಪುರುಷನೂ ಸಹ ನೀನೇ ಎಂದು ನನ್ನ ಅಭಿಮತವಾಗಿದೆ.

* * *

(ತಿಳಿದುಕೊಳ್ಳಲೇಬೇಕಾದ, ಶ್ರೇಷ್ಠನಾದ ಅಕ್ಷರನು ನೀನು. ಕ್ಷರ ಅಂದರೆ ನಾಶ, ನಾಶವಿಲ್ಲದ್ದು **ಅಕ್ಷರ**. ಅರ್ಥಾತ್ ಬ್ರಹ್ಮ. ಪರಬ್ರಹ್ಮನನ್ನು ಅರಿತುಕೊಳ್ಳಲೇಬೇಕು ; ಕಂಡುಕೊಳ್ಳಲೇಬೇಕು. ನಾನೇ ಈಗ ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ. ನಿನ್ನ ಶರೀರದ ಏಕದೇಶದಲ್ಲಿ ಚತುರ್ದಶಭುವನಗಳೂ ಪ್ರತ್ಯೇಕ-ಪ್ರತ್ಯೇಕವಾಗಿ ಆಶ್ರಯಮಾಡಿಕೊಂಡಿವೆ. ಆದುದರಿಂದ ನೀನು ಈ ವಿಶ್ವಕ್ಕೇ ಶ್ರೇಷ್ಠವಾದ ಆಶ್ರಯಸ್ಥಾನನು. ನೀನು ವ್ಯಯವಿಲ್ಲದವನು. ಸಕಲಪ್ರಾಣಿಗಳಲ್ಲಿಯೂ ಇರುವೆಯೆಂಬುದು ನಿಜ. ಆದರೆ ಪ್ರಾಣಿಗಳ ಸಾವು

ಗಳಿಂದ ನಿನಗೆ ಅಳಿವುಂಟಾಗುವುದಿಲ್ಲ. ಯಾವ ವಿಕಾರವೂ ಇಲ್ಲದವನು ನೀನು. ಪ್ರಾಣಿಗಳು ದೇಹತ್ಯಾಗಮಾಡುವುದರಿಂದ ನಿನ್ನ ಅಸ್ತಿತ್ವಕ್ಕೆ ಯಾವ ಬಾಧಕವೂ ಇಲ್ಲ. ಆದುದರಿಂದ ನೀನು ಅವ್ಯಯನು. ಶಾಶ್ವತವಾಗಿ ಯಾವುದು ಇರುವುದೋ ಅದಕ್ಕೇ ಸನಾತನಧರ್ಮವೆಂದು ಹೆಸರು. ಅದನ್ನು ರಕ್ಷಿಸತಕ್ಕವನು ನೀನು.

ಈ ಎಲ್ಲ ಕಾರಣಗಳಿಂದಲೂ ನೀನು ಸನಾತನನಾದ ಪುರುಷನೆಂಬುದು ನನ್ನ ಅಭಿಮತವಾಗಿದೆ.)

O O O

**ಅಕ್ಷರಂ ಪರಮಂ** = ನಾಶಹೊಂದದೇ ಇರುವವನು ಪರಬ್ರಹ್ಮ. **ನ ಕ್ಷರತಿ ಇತಿ ಅಕ್ಷರಂ. ವೇದಿತವ್ಯಂ ಪರಮಂ**–ಮುಮುಕ್ಷುಗಳು ತಿಳಿಯಬೇಕಾಗಿರುವ ಪರಬ್ರಹ್ಮ. (ಶಂ. ಭಾ.)

**ತ್ವಮಕ್ಷರಂ ಪರಮಂ ವೇದಿತವ್ಯಂ.**

**ದ್ವೇ ವಿದ್ಯೇ ವೇದಿತವ್ಯೇ**–(ಮುಂ ೧-೧೪) ಮುಂತಾದ ಉಪನಿಷತ್ತುಗಳಲ್ಲಿ **ಅಥ ಪರಾ ಯಯಾ ತದಕ್ಷರಮಧಿಗಮ್ಯತೇ**–(ಕಠ ೧-೧-೫) ಮುಂತಾದ ವಾಕ್ಯಗಳಿಂದ ತಿಳಿಯಲ್ಪಡಬೇಕಾದ ವಸ್ತು ಎಂದು ನಿರ್ದೇಶಿಸಲ್ಪಟ್ಟಿರುವ ಶ್ರೇಷ್ಠವಾದ ಅಕ್ಷರವಸ್ತುವು ನೀನೇ.

**ಪರಮಂ ನಿಧಾನಂ** = ವಿಶ್ವಕ್ಕೆ ಪರಮಾಧಾರಭೂತನಾದವನು. **ಅವ್ಯಯಃ** = ವ್ಯಯವಿಲ್ಲದವನು. ನೀನು ಯಾವ ಸ್ವರೂಪ, ಯಾವ ಗುಣ, ಯಾವ ವಿಭವಗಳಿಂದ ಕೂಡಿರುವೆಯೋ ಅದೇ ರೂಪದಲ್ಲೇ ಎಂದೆಂದಿಗೂ ಇರುವವನು.

**ಶಾಶ್ವತಧರ್ಮಗೋಪ್ತಾ**–ನಿತ್ಯವಾದ ವೈದಿಕಧರ್ಮವನ್ನು ನಿನ್ನ ಈಗಿನ ಅವತಾರವೇ ಮುಂತಾದ ಅವತಾರಗಳಿಂದ ರಕ್ಷಿಸತಕ್ಕವನು ನೀನೇ.

**ತ್ವಂ ಸನಾತನಃ ಪುರುಷೋ ಮತೋ ಮೇ** = **ವೇದಾಹಮೇತಂ ಪುರುಷಂ ಮಹಾನ್ತಂ** (ಪುರುಷಸೂಕ್ತ) **ಪರಾತ್ಪರಂ ಪುರುಷಮುಪೈತಿ ದಿವ್ಯಮ್** (ಮುಂಡಕ) ಮುಂತಾದುವುಗಳಲ್ಲಿ ಹೇಳಲ್ಪಟ್ಟಿರುವ ಸನಾತನ ಪುರುಷನು ನೀನೇ ಎಂದು ನನ್ನ ಅರಿವಿಗೆ ಬಂದಿದೆ.

(ರಾ. ಭಾ.)

ಓಂ ಅನಾದಿಮಧ್ಯಾನ್ತಮನನ್ತವೀರ್ಯ-
ಮನನ್ತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥೧೯॥

ಆದಿ-ಮಧ್ಯ ಮತ್ತು ಕೊನೆ ಇಲ್ಲದವನಾದ, ಅನಂತವಾದ ಸಾಮರ್ಥ್ಯವುಳ್ಳ, ಅನಂತಬಾಹುವಾದ, ಚಂದ್ರ-ಸೂರ್ಯರೇ ನೇತ್ರರಾಗಿ ಉಳ್ಳ, ಪ್ರಜ್ವಲಿಸುತ್ತಿರುವ ಅಗ್ನಿಯೇ ಮುಖವಾಗಿ ಉಳ್ಳ, ಸ್ವತೇಜಸ್ಸಿನಿಂದ ಈ ವಿಶ್ವಕ್ಕೇ ಬೇಗೆಯನ್ನುಂಟುಮಾಡುತ್ತಿರುವ ನಿನ್ನನ್ನು ನೋಡುತ್ತಿದ್ದೇನೆ.

* * *

(ಮೊದಲು, ಮಧ್ಯ, ಕಡೆ–ಯಾವುದೂ ನಿನ್ನ ಈ ವಿಶ್ವರೂಪದಲ್ಲಿ ನನಗೆ ಕಾಣುತ್ತಿಲ್ಲ. ನಿನ್ನ ವೀರ್ಯವು ಅಥವಾ ಪರಾಕ್ರಮವು ಅನಂತವಾಗಿದೆ. ಅಂತವೇ ಇಲ್ಲದ್ದಾಗಿದೆ ; ಅಮಿತವಾಗಿದೆ. ಆಯುಧಗಳನ್ನು ಹಿಡಿದು ಮೇಲಕ್ಕೆತ್ತಿರುವ ನಿನ್ನ ಕೈಗಳೂ ಅನಂತವಾಗಿವೆ. ಅವುಗಳನ್ನು ಎಣಿಕೆ ಮಾಡುವ ಸಾಧ್ಯತೆಯೇ ಇಲ್ಲ. ಯಸ್ಯಾಗ್ನಿರಾಸ್ಯಂ ದ್ಯೌಃ ಮೂರ್ಧಾ ಶಶಿ-ಸೂರ್ಯರೇ ನಿನ್ನೆರಡು ಕಣ್ಣುಗಳಾಗಿದ್ದಾರೆ. ನಿನ್ನ ಬಾಯಿಂದ ಪ್ರಜ್ವಲಿಸುವ ಅಗ್ನಿಯು ಹೊರಹೊಮ್ಮುತ್ತಿದೆ. ನಿನ್ನ ಅಮಿತವಾದ ತೇಜಸ್ಸಿನಿಂದಾಗಿ ನಿನ್ನೊಳಗಿರುವ ವಿಶ್ವವು ಪರಿತಾಪಗೊಂಡಿದೆ. ಇಂತಹ ಅಪ್ರಮೇಯನಾದ ನಿನ್ನ ರೂಪವನ್ನು ನಾನು ಕಾಣುತ್ತಿದ್ದೇನೆ.)

O O O

ಅನನ್ತವೀರ್ಯಂ–ನಿರವಧಿಕವಾದ ಅತಿಶಯವೀರ್ಯವುಳ್ಳ.

ಇಲ್ಲಿರುವ ವೀರ್ಯಶಬ್ದವು ಜ್ಞಾನ, ಬಲ, ಐಶ್ವರ್ಯ, ಶಕ್ತಿ, ತೇಜಸ್ಸುಗಳನ್ನೂ ಸೂಚಿಸುತ್ತದೆ. ಇವೆಲ್ಲಕ್ಕೂ ಭಗವಂತನೇ ನಿಧಿಯಾಗಿದ್ದಾನೆ.

ಅನನ್ತಬಾಹುಂ=ಅಸಂಖ್ಯೇಯವಾದ ತೋಳುಗಳುಳ್ಳ, ಇಲ್ಲೂ ಬಾಹು ಶಬ್ದವು ಹೊಟ್ಟೆ, ಪಾದ, ಮುಖ ಮುಂತಾದ ಅವಯವಗಳನ್ನು ಸೂಚಿಸುತ್ತದೆ. ಭಗವಂತನ ದಿವ್ಯದೇಹದಲ್ಲಿ ಎಲ್ಲ ಅವಯವಗಳೂ ಅನಂತವಾಗಿವೆ.

ಶಶಿಸೂರ್ಯನೇತ್ರಂ = ಚಂದ್ರನಂತೆಯೂ ಮತ್ತು ಸೂರ್ಯನಂತೆಯೂ ಪ್ರಸನ್ನತೆ ಮತ್ತು ಪ್ರತಾಪಗಳಿಂದ ಕೂಡಿದ ಕಣ್ಣುಳ್ಳವನಾದ,

ಅನುಕೂಲರಾಗಿ ನಮಸ್ಕಾರಾದಿಗಳನ್ನು ಮಾಡುತ್ತಿರುವ ದೇವತೆಗಳೇ ಮುಂತಾದವರಲ್ಲಿ ಪ್ರಸಾದವನ್ನೂ, ಅದಕ್ಕೆ ವಿರುದ್ಧರಾದ ಅಸುರ-ರಾಕ್ಷಸಾದಿಗಳ ವಿಷಯದಲ್ಲಿ ಪ್ರತಾಪವನ್ನೂ ತೋರುತ್ತಿರುವೆ.

**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ ಸರ್ವೇ ನಮಸ್ಯನ್ತಿ ಚ ಸಿದ್ಧಸಂಘಾಃ**

**ದೀಪ್ತಹುತಾಶವಕ್ತ್ರಂ** = ಉರಿಯುತ್ತಿರುವ ಕಾಲಾಗ್ನಿಯಂತೆ ಸಂಹಾರಕ್ಕೆ ಉದ್ಯುಕ್ತವಾಗಿರುವ ಮುಖಗಳುಳ್ಳ.

**ತೇಜಃ** = ಇತರರನ್ನು ತಿರಸ್ಕರಿಸುವ ಸಾಮರ್ಥ್ಯ.

ಒಂದೇ ದಿವ್ಯದೇಹದಲ್ಲಿ ಅನೇಕಬಾಹೂದರ–ಮುಖಗಳು ಹೇಗೆ ಇರುವುದು ?–ಎಂದರೆ ಅನಂತಪರಿಮಾಣವುಳ್ಳ ಆತನ ಒಂದು ನಡುಪ್ರದೇಶ ದಿಂದ ಅನೇಕ ಉದರ ಮುಂತಾದುವುಗಳು ಮೇಲಕ್ಕೆ ಹೋಗಿವೆ ಮತ್ತು ಅನೇಕ ದಿವ್ಯಪಾದಗಳು ಕೆಳಕ್ಕೆ ಬಂದಿವೆ. ಅವುಗಳಲ್ಲಿ ಒಂದೊಂದು ಮುಖದಲ್ಲಿಯೂ ಎರಡೆರಡು ಕಣ್ಣುಗಳಿರುವುದರಿಂದ ವಿರೋಧವಿಲ್ಲ. (ರಾ. ಭಾ.)

**ಶಶಿಸೂರ್ಯನೇತ್ರಂ** = ಎಂಬುದಕ್ಕೆ **ಅಹಂ ಕ್ರತುಃ** ಮುಂತಾದ ಜಾಗದಲ್ಲಿ ಹೇಳಿದಂತೆ ಅರ್ಥವನ್ನು ಹೇಳಬೇಕು. ಚಂದ್ರ-ಸೂರ್ಯ ಮುಂತಾದವರೆಲ್ಲರೂ ಭಗವಂತನ ಅಂಗಗಳಲ್ಲಿ ಹುಟ್ಟಿದವರಾದ್ದರಿಂದ ಅವನ ಅಂಗಗಳೆಂದು ಹೇಳಲ್ಪಟ್ಟಿದ್ದಾರೆ.

**ತದಙ್ಗಜಾಃ ಸರ್ವಸುರಾದಯೋಽಪಿ ತಸ್ಮಾತ್ತದಙ್ಗೇತ್ಯೃಷಿಭಿಃ**
**ಸ್ತುತಾಸ್ತೇ ।** (ಋಗ್ವೇದಖಿಲ.)

**ಚನ್ದ್ರಮಾ ಮನಸೋ ಜಾತಃ**–ಇತ್ಯಾದಿ ಶ್ರುತಿಗಳನ್ನು ಗಮನಿಸಬೇಕು. ದೇವತೆಗಳು ಬಹುರೂಪರಾಗಿರುವುದರಿಂದ ಹೆಚ್ಚು ಅಂಗಗಳನ್ನು ಅವರು ಆಶ್ರಯಿಸಿರುವುದು ಯುಕ್ತವೇ ಆಗಿದೆ.

**ಬಹುರೂಪತ್ವಾತ್ ಬಹ್ವಾಶ್ರಯತ್ವಂ ತೇಷಾಂ ಯುಕ್ತಂ.**

(ಮ. ಭಾ.)

**ಓಂ ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥**

ಸ್ವರ್ಗಲೋಕ-ಭೂಲೋಕಗಳ ಈ ನಡುವಣಭಾಗವೂ, ಎಲ್ಲ ದಿಕ್ಕುಗಳೂ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವುವು. ಮಹಾತ್ಮನೇ! ಅದ್ಭುತವಾದ ಮತ್ತು ಉಗ್ರವಾದ ನಿನ್ನ ಈ ರೂಪವನ್ನು ಕಂಡು ಮೂರು ಲೋಕಗಳೂ ತುಂಬಾ ತಲ್ಲಣಿಸುತ್ತಿವೆ.

* * *

(ಸ್ವರ್ಗಕ್ಕೂ ಮತ್ತು ಭೂಮಿಗೂ ನಡುವೆ ಇರುವ ಆಕಾಶವನ್ನೆಲ್ಲಾ ನೀನೊಬ್ಬನೇ ನಿನ್ನ ಈ ಅಗಾಧವಾದ ವಿಶ್ವರೂಪದಿಂದ ಆವರಿಸಿಕೊಂಡು ಬಿಟ್ಟಿರುವೆ. ಅಂತೆಯೇ ನಾಲ್ಕು ದಿಕ್ಕುಗಳ ತುತ್ತತುದಿಯವರೆಗೂ ನೀನು ವ್ಯಾಪಿಸಿರುವೆ. ಅರ್ಥಾತ್ ಸರ್ವತ್ರ ನಿನ್ನ ಶರೀರವೊಂದು ಮಾತ್ರವೇ ನನ್ನ ಕಣ್ಣಿಗೆ ಕಾಣಿಸುತ್ತಿದೆ.

ಈ ಅತ್ಯಾಶ್ಚರ್ಯಕರವಾದ ಮತ್ತು ಅತ್ಯುಗ್ರವಾದ ರೂಪವನ್ನು ಕಂಡು ನಿನ್ನಲ್ಲಿಯೇ ಇರುವ ಮೂರು ಲೋಕಗಳೂ ತತ್ತರಿಸಿಹೋಗಿವೆ.)

O O O

**ಪ್ರವ್ಯಥಿತಂ** = ಭಯಗೊಂಡಿವೆ ಅಥವಾ ವಿಚಲಿತವಾಗಿವೆ. **ಮಹಾತ್ಮನ್** = ಅಕ್ಷುದ್ರವಾದ ಸ್ವಭಾವವುಳ್ಳವನೇ. (ಶಂ. ಭಾ.)

**ದ್ಯಾವಾಪೃಥಿವ್ಯೋಃ ಇದಮನ್ತರಂ ಹಿ.**

ಇಲ್ಲಿ ಹೇಳಿರುವ **ದ್ಯು**ಶಬ್ದ ಮತ್ತು **ಪೃಥಿವೀ** ಶಬ್ದಗಳು ಮೇಲುಗಡೆ ಇರುವ ಮತ್ತು ಕೆಳಗಡೆ ಇರುವ ಎಲ್ಲ ಲೋಕಗಳನ್ನೂ ಕೂಡ ಸೂಚಿಸುತ್ತವೆ.

**ಲೋಕತ್ರಯಂ ಪ್ರವ್ಯಥಿತಂ** = ಯುದ್ಧವನ್ನು ನೋಡಲು ಬಂದಿರುವ ಬ್ರಹ್ಮಾದಿದೇವತೆಗಳು, ಅಸುರರು, ಪಿತೃಗಣಗಳು, ಸಿದ್ಧ-ಗಂಧರ್ವ-ರಾಕ್ಷಸರು ಮುಂತಾದವರಲ್ಲಿ ಪ್ರತಿಕೂಲರೂ, ಅನುಕೂಲರೂ, ಮಧ್ಯಸ್ಥರೂ ಆಗಿರುವ ಮೂರು ಲೋಕಗಳಲ್ಲಿರುವ ಎಲ್ಲರೂ ಅತ್ಯಂತಭಯಗೊಂಡಿದ್ದಾರೆ. **ಮಹಾತ್ಮನ್**=ಅಪರಿಚ್ಛೇದ್ಯವಾದ ಮನೋವೃತ್ತಿಯುಳ್ಳವನೇ!

ಬ್ರಹ್ಮನೇ ಮೊದಲಾದ ದೇವಾಸುರಾದಿಗಳಿಗೂ ಕೂಡ ಅರ್ಜುನನಿಗೆ ಹೇಗೋ ಹಾಗೆ ವಿಶ್ವಕ್ಕೆ ಆಶ್ರಯವಾಗಿರುವ ರೂಪವನ್ನು ಸಾಕ್ಷಾತ್ಕರಿಸಲು ಸಾಧನವಾದ ದಿವ್ಯಚಕ್ಷುಸ್ಸನ್ನು ಭಗವಂತನು ದಯಪಾಲಿಸಿದನು. ಏಕೆಂದರೆ : ಅರ್ಜುನನಿಗೆ ತನ್ನ ಐಶ್ವರ್ಯವೆಲ್ಲವನ್ನೂ ತೋರಿಸುವುದಕ್ಕೋಸ್ಕರ. ಆದುದರಿಂದಲೇ–'ನಿನ್ನ ಅದ್ಭುತವೂ, ಉಗ್ರವೂ ಆದ ಈ ರೂಪವನ್ನು ಕಂಡು ಮೂರು ಲೋಕಗಳೂ ತಲ್ಲಣಗೊಂಡಿವೆ–ಎಂದು ಅರ್ಜುನನು ಹೇಳುತ್ತಾನೆ.

(ರಾ. ಭಾ.)

**ಮಾತಾಪಿತ್ರೋರನ್ತರಙ್ಗಃ ಸ ಏಕಃ ರೂಪೇಣ ಚಾನ್ಯೈಃ ಸರ್ವಗತಃ ಸ ಏಕಃ**–ಎಂದು ವಾರುಣಶ್ರುತಿಯು ಹೇಳುವಂತೆ ಅವನ ಒಂದೇ ರೂಪದಿಂದಲೇ ದ್ಯಾವಾಪೃಥಿವಿಗಳ ಮಧ್ಯಭಾಗವು ವ್ಯಾಪಿಸಲ್ಪಟ್ಟಿದೆ.

**ಪಶ್ಯ ಮೇ ಪಾರ್ಥ ರೂಪಾಣಿ**–ಎಂದು ಅನೇಕರೂಪಗಳು ಉಂಟೆಂದು ಪ್ರತಿಜ್ಞೆಮಾಡಲ್ಪಟ್ಟಿದೆ. ದ್ಯಾವಾಪೃಥಿವಿಗಳು ತಾಯಿ-ತಂದೆಗಳು.

**ಮಾ ನೋ ಮಾತಾ ಪೃಥಿವೀ । ಮಧು ದ್ಯೌರಸ್ತು ನಃ ಪಿತಾ ।**

**ಪ್ರವ್ಯಥಿತಂ**= ಭಗವಂತನ ಸ್ವರೂಪವು ಎಲ್ಲರಿಗೂ ಭಯಪ್ರದವಾಗಿರಬೇಕೆಂಬ ನಿಯಮವಿಲ್ಲ. ಕೆಲವರಿಗೆ ಮಾತ್ರ ಕಾರಣವಿಶೇಷದಿಂದ ಕೆಲವು ವೇಳೆಗಳಲ್ಲಿ ಭಯಂಕರವಾಗಿರುತ್ತದೆ. ಏಕೆಂದರೆ : ನಾರದರಿಗೆ ಅದರಿಂದ ಭಯವುಂಟಾಗುವುದಿಲ್ಲ. ಕೆಲವರಿಗೆ ಮಾತ್ರ ಭಯವುಂಟಾಗುವಂತೆ ರೂಪವನ್ನು ಭಗವಂತನು ತೋರಿಸುತ್ತಾನೆ.

**ಪ್ರಯಾನ್ತಿ ಕೇಚಿತ್ತಸ್ಯ ರೂಪಸ್ಯ ದೃಷ್ಟ್ವಾ ಬಿಭೇತಿ ಕಶ್ಚಿದಭ್ಯಾಸೇ ಸರ್ವತೃಪ್ತಿಃ**–ಎಂದು ವಾರುಣಶಾಖೆಯಲ್ಲಿ ಹೇಳಿದೆ. ಅವನನ್ನು ಎಲ್ಲರೂ ನೋಡುತ್ತಿಲ್ಲ.

ವಿಶ್ವರೂಪವನ್ನು ನೋಡಲು ಪ್ರಯತ್ನಿಸುತ್ತಿರುವ ಮೂರು ಲೋಕಗಳಲ್ಲಿರುವ ಜನರಿಗೆ ಅದು ಕಾಣದಿದ್ದರೂ ಕೂಡ ಮನಸ್ಸಿಗೆ ಅದನ್ನು ತಂದುಕೊಂಡರೇ ಭಯವುಂಟಾಗುತ್ತಿರುವಾಗ ಅದನ್ನು ನೋಡುತ್ತಿರುವ ಅರ್ಜುನನಿಗೆ ತನ್ನಂತೆಯೇ ಇವರೂ ಭಯಪಡುತ್ತಿದ್ದಾರೆ ಎಂದು ತೋರಿಬರುತ್ತದೆ.

(ಮ. ಭಾ.)

ಓಂ ಅಮೀ ಹಿ ತ್ವಾಂ ಸುರಸಂಘಾ ವಿಶನ್ತಿ
ಕೇಚಿದ್ಭೀತಾಃ ಪ್ರಾಞ್ಜಲಯೋ ಗೃಣನ್ತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥೨೧॥

ಈ ದೇವತೆಗಳ ಸಮೂಹಗಳು ನಿನ್ನೊಳಗೇ ಹೋಗುತ್ತಿರುವುವು. ಕೆಲವರು ಹೆದರಿ ಕೈಮುಗಿದುಕೊಂಡು ಸ್ತೋತ್ರಮಾಡುತ್ತಿರುವರು. ಮಹರ್ಷಿ-ಸಿದ್ಧಸಮೂಹಗಳು 'ಸ್ವಸ್ತಿ' ಎಂದು ಹೇಳುತ್ತಾ ನಿನ್ನನ್ನು ಬಹುವಿಧವಾದ ಸ್ತೋತ್ರಗಳಿಂದ ಸ್ತುತಿಮಾಡುತ್ತಿರುವರು.

* * *

(ಅರ್ಜುನನೀಗ ವಿಶ್ವರೂಪದಲ್ಲಿ ತನ್ಮಯನಾಗಿದ್ದಾನೆ. ತನ್ನ ಸುತ್ತ ಮತ್ತು ಮೇಲ್ಭಾಗದಲ್ಲಿ—ಎಲ್ಲ ಕಡೆಗಳಲ್ಲಿಯೂ ಪರಮಾತ್ಮನ ವಿರಾಟ್‌ಸ್ವರೂಪವನ್ನೇ ಕಾಣುತ್ತಿದ್ದಾನೆ. ಒಂದೊಂದು ಕಡೆ ಒಂದೊಂದು ದೃಶ್ಯಗಳು ಅವನಿಗೆ ಕಾಣುತ್ತಿವೆ. ಮೇಲಾಗಿ ಎಲ್ಲವೂ ತನ್ನ ಸಮ್ಮುಖದಲ್ಲಿಯೇ ನಡೆಯುತ್ತಿರುವಂತೆ ಕಾಣುತ್ತಿವೆ. ಇದನ್ನೇ ಅವನು ಹೇಳತೊಡಗಿದ್ದಾನೆ.

ಇಲ್ಲಿ ಕಾಣುತ್ತಿರುವ ದೇವತೆಗಳ ಸಮೂಹಗಳು ನಿನ್ನೊಳಗೇ ಸೇರಿ ಕೊಳ್ಳುತ್ತಿವೆ. ಮತ್ತೆ ಕೆಲವರು ನಿನ್ನ ಉಗ್ರರೂಪವನ್ನು ಕಂಡು ಭಯ ಗೊಂಡವರಾಗಿ ಬದ್ಧಾಂಜಲಿಗಳಾಗಿ ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಾರೆ. ನಾರದರೇ ಮೊದಲಾದ ಮಹರ್ಷಿಗಳೂ, ಕಪಿಲರೇ ಮೊದಲಾದ ಸಿದ್ಧರೂ 'ಸ್ವಸ್ತಿ-ಕಲ್ಯಾಣವಾಗಲಿ'—ಎಂದು ಹೇಳಿಕೊಂಡು ಯಥೇಚ್ಛವಾದ ಸ್ತೋತ್ರ ಗಳಿಂದ ನಿನ್ನನ್ನೇ ಸ್ತುತಿಸುತ್ತಿದ್ದಾರೆ.)

O O O

ಯುದ್ಧಮಾಡುವ ಸೈನಿಕರೂಪದಲ್ಲಿರುವ ದೇವಗಣಗಳು ಎಂದರೆ ಭೂಮಿಯ ಭಾರವನ್ನಿಳಿಸಲು ಇಲ್ಲಿ ಅವತಾರಮಾಡಿ ಮನುಷ್ಯರಂತೆ ಆಕಾರ ವನ್ನು ಹೊಂದಿರುವ ವಸುಗಳೇ ಮುಂತಾದ ದೇವಸಮುದಾಯಗಳು ನಿನ್ನೊಳಗಡೆ ಪ್ರವೇಶಿಸುತ್ತಿರುವಂತೆ ಕಂಡುಬರುತ್ತಿದ್ದಾರೆ. ಅವರಲ್ಲಿ ಕೆಲವರು ಓಡಿಹೋಗಲೂ ಅಶಕ್ತರಾಗಿರುವುದರಿಂದ ಭಯಭೀತರಾಗಿ ಕೈಮುಗಿದು ಕೊಂಡು ಸ್ತೋತ್ರಮಾಡುತ್ತಿದ್ದಾರೆ. ಮಹಾಯುದ್ಧವು ಬಂದೊದಗಿರುವಾಗ

ಉತ್ಪಾತವೇ ಮುಂತಾದ ನಿಮಿತ್ತಗಳನ್ನು ಕಂಡು ಮಹರ್ಷಿಗಳ ಮತ್ತು ಸಿದ್ಧರ ಸಮುದಾಯಗಳು ಜಗತ್ತಿಗೆ ಮಂಗಳವಾಗಲಿ ಎಂದು ಹೇಳಿ ನಿನ್ನನ್ನು ಸಂಪೂರ್ಣವಾದ ಸ್ತೋತ್ರಗಳಿಂದ ಸ್ತುತಿಸುತ್ತಿದ್ದಾರೆ. (ಶಂ. ಭಾ.)

ಈ ಉತ್ಕೃಷ್ಟರಾದ ದೇವತಾಗಣಗಳು ವಿಶ್ವಕ್ಕೇ ಆಶ್ರಯನಾದ ನಿನ್ನನ್ನು ಕಂಡು ಆನಂದದಿಂದ ಕೂಡಿದ ಮನಸ್ಸಿನಿಂದ ನಿನ್ನ ಬಳಿಗೆ (ಸೇವೆಗಾಗಿ) ಆಗಮಿಸುತ್ತಿದ್ದಾರೆ. ಅವರಲ್ಲೇ ಕೆಲವರು ಉಗ್ರವೂ, ಅದ್ಭುತವೂ ಆದ ನಿನ್ನ ಆಕಾರವನ್ನು ಕಂಡು ಭಯಗೊಂಡು ಬದ್ಧಾಂಜಲಿಗಳಾಗಿ ತಮ್ಮ ಜ್ಞಾನಕ್ಕೆ ಅನುಗುಣವಾಗಿ ನಿನ್ನನ್ನು ಸ್ತುತಿಸುತ್ತಿದ್ದಾರೆ. ಪರಾಪರತತ್ತ್ವವನ್ನು ಯಥಾವತ್ತಾಗಿ ತಿಳಿದಿರುವ ಭೃಗು ಮುಂತಾದ ಮತ್ತೆ ಕೆಲವು ಮಹರ್ಷಿಗಳ ಸಂಘಗಳು, ಸನಕರೇ ಮುಂತಾದ ಸಿದ್ಧರ ಸಂಘಗಳು ಭಕ್ತಿಪರವಶರಾಗಿ ನಿನಗೆ ಜಯಕಾರವನ್ನು ಹೇಳಿ ಅನಂತರ ನಿನ್ನನ್ನು ಅನುಗುಣವಾದ ಸ್ತೋತ್ರಗಳಿಂದ ಹೇರಳವಾಗಿ ಸ್ತುತಿಸುತ್ತಿದ್ದಾರೆ. (ರಾ. ಭಾ.)

**ಓಂ ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗನ್ಧರ್ವಯಕ್ಷಾಸುರಸಿದ್ಧಸಂಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಮರುತ್ತುಗಳು, ಊಷ್ಮಪರು, ಗಂಧರ್ವ-ಯಕ್ಷ- ಅಸುರ ಮತ್ತು ಸಿದ್ಧಸಮೂಹಗಳು—ಇವರೆಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿದ್ದಾರೆ.

*   *   *

(ಏಕಾದಶರುದ್ರರು, ದ್ವಾದಶಾದಿತ್ಯರು, ಅಷ್ಟವಸುಗಳು, ದ್ವಾದಶ ಸಾಧ್ಯರು, ದಶವಿಶ್ವೇದೇವತೆಗಳು, ಇಬ್ಬರು ಅಶ್ವಿನೀದೇವತೆಗಳು, ಸಪ್ತ ಮರುತ್ತುಗಳು, ಅಗ್ನಿಷ್ವಾತ್ತಾದಿ ಊಷ್ಮಪರು (ಪಿತೃದೇವತೆಗಳು), ಗಂಧರ್ವ ಸಮೂಹಗಳು, ಯಕ್ಷಸಮೂಹಗಳು, ಅಸುರಸಮೂಹಗಳು, ಸಿದ್ಧ ಸಮೂಹಗಳು—ಈ ಎಲ್ಲರೂ ನಿನ್ನನ್ನು ವಿಸ್ಮಿತರಾಗಿ ನೋಡುತ್ತಿದ್ದಾರೆ.

ರುದ್ರ, ಆದಿತ್ಯ, ವಸು ಮತ್ತು ಮರುತ್ತರ ವಿವರಣೆಯನ್ನು ಈ ಹಿಂದೆಯೇ ಕೊಟ್ಟಿದೆ.

ಸಾಧ್ಯರು ಹನ್ನೆರಡು ಮಂದಿ :

**ಮನೋಽನುಮನ್ತಾ ಪ್ರಾಣಶ್ಚ ನರೋ ಯಾನಶ್ಚ ವೀರ್ಯವಾನ್ ।**
**ಚಿತ್ತಿರ್ಹಯೋ ನಯಶ್ಚೈವ ಹಂಸೋ ನಾರಾಯಣಸ್ತಥಾ ।**
**ಪ್ರಭವೋಽಥ ವಿಭುಶ್ಚೈವ ಸಾಧ್ಯಾ ದ್ವಾದಶ ಜಜ್ಞಿರೇ ।**

(ವಾಯುಪುರಾಣ ೬೬-೧೫-೧೬)

ಧರ್ಮನ ಪತ್ನಿಯಾದ ಸಾಧ್ಯಾ ಎಂಬುವಳಲ್ಲಿ ಮನ, ಅನುಮಂತಾ, ಪ್ರಾಣ, ನರ, ಯಾನ, ಚಿತ್ತಿ, ಹಯ, ನಯ, ಹಂಸ, ನಾರಾಯಣ, ಪ್ರಭವ ಮತ್ತು ವಿಭು–ಎಂಬ ಹನ್ನೆರಡು ಮಂದಿ ಸಾಧ್ಯರು ಹುಟ್ಟಿದರು. ಸ್ಕಾಂದ ಪುರಾಣದಲ್ಲಿ ಈ ಹೆಸರುಗಳು ಸ್ವಲ್ಪ ವ್ಯತ್ಯಾಸವಾಗಿ ಬರುತ್ತವೆ.

ಮನ, ಅನುಮಂತಾ, ಪ್ರಾಣ, ನರ, ಅಪಾನ, ಭಕ್ತಿ, ಭಯ, ಅನಘ, ಹಂಸ, ನಾರಾಯಣ, ವಿಭು ಮತ್ತು ಪ್ರಭು.

ವಿಶ್ವೇದೇವತೆಗಳು ಹತ್ತು ಮಂದಿ :

**ವಿಶ್ವೇದೇವಾಸ್ತು ವಿಶ್ವಾಯಾ ಜಜ್ಞಿರೇ ದಶ ವಿಶ್ರುತಾಃ ।**
**ಕ್ರತುರ್ದಕ್ಷಃ ಶ್ರವಃ ಸತ್ಯಃ ಕಾಲಃ ಕಾಮೋ ಧುನಿಸ್ತಥಾ ।**
**ಕುರುವಾನ್ ಪ್ರಭವಾಂಶ್ಚೈವ ರೋಚಮಾನಶ್ಚ ತೇ ದಶ ॥**

(ವಾಯುಪುರಾಣ ೬೬-೩೧-೩೨)

ಕ್ರತು, ದಕ್ಷ, ಶ್ರವ, ಸತ್ಯ, ಕಾಲ, ಕಾಮ, ಧುನಿ, ಕುರುವಾನ್ ಪ್ರಭವಾನ್ ಮತ್ತು ರೋಚಮಾನ–ಎಂಬ ಹತ್ತು ಮಂದಿ ವಿಶ್ವೇದೇವತೆಗಳು ಧರ್ಮನ ಪತ್ನಿಯಾದ ವಿಶ್ವಾ ಎಂಬುವಳಲ್ಲಿ ಹುಟ್ಟಿದವರು.

ಮತ್ತೊಂದು ಪುರಾಣದಲ್ಲಿ ಇವರ ಹೆಸರುಗಳು ಹೀಗೆ ಬರುತ್ತವೆ :

**ವಸುಃ ಸತ್ಯಃ ಖುತುರ್ದಕ್ಷಃ ಕಾಲಃ ಕಾಮೋ ಧೃತಿಃ ಕುರುಃ ।**
**ಪುರೂರವಾ ಮಾದ್ರವಾಶ್ಚ ವಿಶ್ವೇದೇವಾಃ ಪ್ರಕೀರ್ತಿತಾಃ ॥**

ವಸು, ಸತ್ಯ, ಋತು, ದಕ್ಷ, ಕಾಲ, ಕಾಮ, ಧೃತಿ, ಕುರು, ಪುರೂರವಸ್, ಮಾದ್ರವ–ಇವರು ವಿಶ್ವೇದೇವತೆಗಳೆಂದು ಪ್ರಸಿದ್ಧರಾಗಿರುವರು.

ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ಧುರಿ, ಲೋಚನ, ಆರ್ದ್ರವ, ಪುರೂರವ ಇವು ಸ್ಕಾಂದಪುರಾಣದಲ್ಲಿ ಬರುವ ವಿಶ್ವೇದೇವತೆಗಳ ಹೆಸರುಗಳು. ಈ ವಿಶ್ವೇದೇವರನ್ನು ವೃದ್ಧಿಶ್ರಾದ್ಧ, ಆಬ್ದಿಕಶ್ರಾದ್ಧ–ಮೊದಲಾದ ಶ್ರಾದ್ಧಗಳಲ್ಲಿ ಸತ್ಯ-ವಸು, ಧುರಿ-ಲೋಚನ, ಪುರೂರವ-ಆರ್ದ್ರವ ಹೀಗೆ ಇಬ್ಬಿಬ್ಬರಂತೆ ಅರ್ಚಿಸುತ್ತಾರೆ.

ಊಷ್ಮಪರು ಎಂದರೆ ಪಿತೃಗಳು. ಊಷ್ಮ ಎಂದರೆ ಬಿಸಿಯಾದ ಆಹಾರ ಪದಾರ್ಥ. ಅದನ್ನು ಮಾತ್ರವೇ ತಿನ್ನುವವರು ಊಷ್ಮಪರು. ಪಿತೃಗಳಿಗೆ ಆರಿದುದನ್ನು ನಿವೇದನಮಾಡಬಾರದು.

**ಊಷ್ಮಭಾಗಾ ಹಿ ಪಿತರಃ (ಶ್ರುತಿಃ)**

ಮನುವಿನ ಮಕ್ಕಳಾದ ಮರೀಚ್ಯಾದಿ ಋಷಿಗಳ ಮಕ್ಕಳು ಪಿತೃಗಣಗಳು. ಸಾಧ್ಯರಿಗೆ ಸೋಮಸದರು ಪಿತೃಗಣಗಳು. ದೇವತೆಗಳಿಗೆ ಅಗ್ನಿಷ್ವಾತ್ತರು ಪಿತೃಗಣಗಳು. ದೈತ್ಯ-ದಾನವಾದಿಗಳಿಗೆ ಬರ್ಹಿಷದರು ಪಿತೃಗಣಗಳು. ಬ್ರಾಹ್ಮಣಾದಿ ಮನುಷ್ಯರಿಗೆ ಸೋಮಪರು, ಹವಿರ್ಭುಜರು, ಆಜ್ಯಪರು, ಸುಕಾಲಿಗಳು ಪಿತೃಗಣಗಳು–ಎಂದು ಮನುಸ್ಮೃತಿಯಲ್ಲಿ ವಿವರಣೆಯಿದೆ.

(ಮ.ನು.೩-೧೯೪-೧೯೭)

ಸೂರ್ಯನ ಹೆಂಡತಿಯಾದ ಸಂಜ್ಞಾ ಎಂಬುವಳಲ್ಲಿ ಹುಟ್ಟಿದವರು **ನಾಸತ್ಯರು** ಅಥವಾ **ದಸ್ರರು** ಎಂಬ ಅಶ್ವಿನೀದೇವತೆಗಳು.)

o o o

ರುದ್ರ, ಆದಿತ್ಯ, ವಸು, ಸಾಧ್ಯ–ಇವರು ದೇವಗಣಗಳು.

**ಊಷ್ಮಪಾಃ** = ಪಿತೃಗಳು. **ಗಂಧರ್ವಾಃ** = ಹಾಹಾ, ಹೂಹೂ ಮುಂತಾದವರು. **ಯಕ್ಷಾಃ** = ಕುಬೇರ ಮುಂತಾದವರು. **ಅಸುರಾಃ** – ವಿರೋಚನನೇ ಮುಂತಾದವರು. **ಸಿದ್ಧಾಃ**= ಕಪಿಲರೇ ಮುಂತಾದವರು. ಇವರ ಸಂಘಗಳು ಆಶ್ಚರ್ಯಚಕಿತರಾಗಿ ನಿನ್ನನ್ನು ನೋಡುತ್ತಿದ್ದಾರೆ.

(ಶಂ. ಭಾ.)

ಊಷ್ಮಪಾಃ = ಪಿತೃಗಳು.

ಊಷ್ಮಭಾಗಾ ಹಿ ಪಿತರಃ (ರಾ. ಭಾ.)

**ಓಂ ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩॥**

ಮಹಾಬಾಹುವೇ! ಅನೇಕಮುಖಗಳು ಮತ್ತು ಕಣ್ಣುಗಳುಳ್ಳ, ಅನೇಕವಾದ ತೋಳುಗಳೂ–ತೊಡೆಗಳೂ–ಹೆಜ್ಜೆಗಳೂ ಉಳ್ಳ, ಅನೇಕವಾದ ಹೊಟ್ಟೆಗಳುಳ್ಳ, ಅನೇಕವಾದ ಕೋರೆದಾಡೆಗಳಿಂದ ಕರಾಲರೂಪವಾಗಿ ಕಾಣುತ್ತಿರುವ ನಿನ್ನ ಮಹಾರೂಪವನ್ನು ಕಂಡು ಲೋಕಗಳೂ ವ್ಯಥೆಪಡುತ್ತಿವೆ. ನಾನು ಸಹ ತುಂಬ ವ್ಯಥೆಪಡುತ್ತಿದ್ದೇನೆ.

* * *

(**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್**–ಎಂದು ಈ ಹಿಂದೆ ೨೦ನೆಯ ಶ್ಲೋಕದಲ್ಲಿ ಅರ್ಜುನನು ಹೇಳಿದ್ದನು. **ತಥಾಹಂ**–ನಾನೂ ಅದೇ ರೀತಿಯಲ್ಲಿ ತುಂಬ ವ್ಯಥಿತನಾಗಿದ್ದೇನೆ ಎಂದು ಹೇಳಿ ಅದಕ್ಕೆ ಕಾರಣಗಳನ್ನು ನಿರೂಪಿಸುತ್ತಾನೆ. ನಿನಗೆ ಅದೆಷ್ಟು ಮುಖಗಳಿವೆಯೋ, ಅದೆಷ್ಟು ನೇತ್ರಗಳಿವೆಯೋ ತಿಳಿಯದು. ಎಲ್ಲವೂ ಅನಂತವಾಗಿ ಅಗಣ್ಯವಾಗಿವೆ. ನಿನ್ನ ತೋಳುಗಳು, ತೊಡೆಗಳು, ಕಾಲುಗಳು ಎಲ್ಲವೂ ಅನೇಕವಾಗಿವೆ. ಇವುಗಳಂತೆ ನಿನ್ನ ಹೊಟ್ಟೆಗಳೂ ಅನೇಕವಾಗಿವೆ. ನಿನ್ನ ಮುಖದಿಂದ ಅಗ್ನಿಯು ಹೊರಬರುವುದು ಮಾತ್ರವಲ್ಲದೇ ನಿನ್ನ ಬಾಯಿಯ ಎರಡು ಭಾಗಗಳಲ್ಲಿಯೂ ಕೋರೆಯ ಹಲ್ಲುಗಳಿದ್ದು ನಿನ್ನ ಅನಂತಾನಂತಮುಖಗಳು ಬಹುಭಯಂಕರವಾಗಿ ಕಾಣುತ್ತಿವೆ. ಇಂತಹ ಅದ್ಭುತಾಕಾರದ ಮತ್ತು ಭಯಂಕರಾಕಾರದ ನಿನ್ನ ಬೃಹದಾಕಾರವನ್ನು ಕಂಡು ಎಲ್ಲ ಲೋಕಗಳೂ ಬಹುದುಃಖಿತವಾಗಿವೆ. ಅವುಗಳಂತೆಯೇ ನಾನೂ ದುಃಖಿತನಾಗಿದ್ದೇನೆ.)

o o o

ಲೋಕಾಃ = ಲೋಕದಲ್ಲಿರುವ ಪ್ರಾಣಿಗಳು. ಪ್ರವ್ಯಥಿತಾ ಃ =ಭಯದಿಂದ ವ್ಯಾಕುಲಗೊಂಡು ನಡುಗುತ್ತಿವೆ. (ಶಂ. ಭಾ.)

**ಲೋಕಾಃ** = ಹಿಂದೆ ಹೇಳಿದ ಪ್ರತಿಕೂಲ, ಅನುಕೂಲ ಮತ್ತು ಮಧ್ಯಸ್ಥ ಎಂಬ ಮೂರು ಬಗೆಯ ಜೀವಿಗಳಿಂದ ಕೂಡಿದ ಎಲ್ಲ ಲೋಕಗಳು.

(ರಾ. ಭಾ.)

**ಓಂ ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾನ್ತರಾತ್ಮಾ**
**ಧೃತಿಂ ನ ವಿನ್ದಾಮಿ ಶಮಂ ಚ ವಿಷ್ಣೋ ॥೨೪॥**

ಮಹಾವಿಷ್ಣುವೇ! ನಭಸ್ಪರ್ಶಿಯಾದ, ಪ್ರದೀಪ್ತವಾದ ಅನೇಕವರ್ಣಗಳನ್ನೊಳಗೊಂಡ, ತೆರೆದ ಬಾಯಿಗಳಿಂದ ಕೂಡಿರುವ, ಪ್ರದೀಪ್ತವಾದ ಮತ್ತು ವಿಶಾಲವಾದ ಕಣ್ಣುಗಳಿಂದ ಕೂಡಿರುವ ನಿನ್ನನ್ನು ನೋಡಿ ಅಧಿಕವಾಗಿ ವ್ಯಥೆಗೊಂಡಿರುವ ನಾನು ಧೈರ್ಯಗುಂದಿದ್ದೇನೆ. ನನಗೆ ಶಾಂತಿಯುಂಟಾಗಿಲ್ಲ.

* * *

(ಮಹಾವಿಷ್ಣುವೇ! ನಿನ್ನ ಶರೀರವು ನಭಸ್ಪರ್ಶಿಯಾಗಿದೆ. ಕಣ್ಣಿಗೆ ನಿಲುಕದಷ್ಟು ಎತ್ತರವಾಗಿದೆ. ನಿನ್ನ ಅನಂತರೂಪಗಳು ಪ್ರದೀಪ್ತವಾದ ಅನೇಕ ವರ್ಣಗಳಿಂದ ಕೂಡಿವೆ. ನಿನ್ನ ಎಲ್ಲ ಬಾಯಿಗಳೂ ತೆರೆದುಕೊಂಡಿದ್ದು ನಾನು ಹಿಂದೆ ಹೇಳಿದಂತೆ ಬಾಯಿಗಳಿಂದ ಪ್ರಜ್ವಲಿಸುತ್ತಿರುವ ಅಗ್ನಿಯು ಹೊರಹೊಮ್ಮುತ್ತಿದೆ. ನಿನ್ನ ಕಣ್ಣುಗಳು ಶಶಿ-ಸೂರ್ಯರಂತೆ ಪ್ರದೀಪ್ತವಾಗಿಯೂ ವಿಶಾಲವಾಗಿಯೂ ಇವೆ. ಈ ನಿನ್ನ ಅದ್ಭುತಾಕಾರವನ್ನು ನೋಡಿ ನನ್ನ ಅಂತರಾತ್ಮವು ಅತ್ಯಂತವ್ಯಥೆಗೊಂಡಿದೆ. ನನ್ನ ಅತುಲಧೈರ್ಯವು ಹಾಳಾಗಿ ಹೋಗಿದೆ. ಸ್ವಾಮಿನ್! ನನ್ನ ಮನಸ್ಸಿಗೆ ಶಾಂತಿಯೇ ಇಲ್ಲವಾಗಿದೆ.)

o o o

**ಅನೇಕವರ್ಣಂ** = ಅನೇಕ ಬಣ್ಣವುಳ್ಳ ಎಂದರೆ ಅನೇಕಾಕೃತಿಗಳಿಂದ ಕೂಡಿರುವ. (ಶಂ. ಭಾ.)

**ನಭಸ್ಪೃಶಂ** = ಇಲ್ಲಿ ಹೇಳಿರುವ ನಭಃ ಎಂಬ ಶಬ್ದವು **ತದಕ್ಷರೇ ಪರಮೇ ವ್ಯೋಮನ್.**

**ಆದಿತ್ಯವರ್ಣಂ ತಮಸಃ ಪರಸ್ತಾತ್**

(ನಾರಾಯಣೋಪನಿಷತ್ ಯಜುರ್ವೇದ.)

**ಕ್ಷಯನ್ತಮಸ್ಯ ರಜಸಃ ಪರಾಕೇ ।** (ಅಷ್ಟಕ ೨-೨-೧೨-೬೮)

**ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್.** (ಅಷ್ಟಕ ೨-೮-೯-೬)

ಮುಂತಾದ ಶ್ರುತಿಗಳು ಹೇಳುವ ತ್ರಿಗುಣಾತ್ಮಕವಾದ ಪ್ರಕೃತಿಯನ್ನು ದಾಟಿದ ಪರಮವ್ಯೋಮವನ್ನು ಹೇಳುತ್ತದೆ. ಏಕೆಂದರೆ–ನಭಸ್ಪೃಶಂ ಎಂಬುದನ್ನು ಸವಿಕಾರವಾದ ಪ್ರಕೃತಿತತ್ತ್ವ ಮತ್ತು ಎಲ್ಲ ಅವಸ್ಥೆಗಳಲ್ಲಿಯೂ ಇರುವ ಪುರುಷ-ಎರಡಕ್ಕೂ ಆಶ್ರಯವನ್ನಾಗಿ ಹೇಳಿದೆ. ಇದಲ್ಲದೇ **ದ್ಯಾವಾ ಪೃಥಿವ್ಯೋರಿದಮನ್ತರಂ ಹಿ ವ್ಯಾಪ್ತಂ**–ಎಂದು ಪ್ರಸಿದ್ಧವಾದ ದ್ಯುಲೋಕ ಮತ್ತು ಪೃಥಿವೀಲೋಕಗಳಲ್ಲಿ ವ್ಯಾಪ್ತಿಯನ್ನು ಹಿಂದೆಯೇ ಹೇಳಿಯಾಗಿದೆ.

**ಧೃತಿಂ ನ ವಿನ್ದಾಮಿ । ಶಮಂ ನ ವಿನ್ದಾಮಿ** = ದೇಹಧಾರಣೆಯೇ ಇಲ್ಲವಾಗಿದೆ. ಮನಸ್ಸು ಮತ್ತು ಇಂದ್ರಿಯಗಳಿಗೆ ಶಾಂತಿಯೂ ದೊರಕದಾಗಿದೆ.

ವಿಷ್ಣೋ = ವ್ಯಾಪಕನೇ! ಸರ್ವವ್ಯಾಪಿಯೇ! (ರಾ. ಭಾ.)

**ಓಂ ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸಂನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

ಕೋರೆದಾಡೆಗಳಿಂದ ವಿಕೃತವಾಗಿರುವ, ಪ್ರಲಯಾಗ್ನಿಗೆ ಸಮಾನವಾಗಿರುವ ನಿನ್ನ ಮುಖಗಳನ್ನೇ ನೋಡುತ್ತಿರುವ ನಾನು ದಿಕ್ಕುಗಳನ್ನೇ ತಿಳಿಯದವನಾಗಿದ್ದೇನೆ. ಸುಖವನ್ನು ಪಡೆಯದವನಾಗಿದ್ದೇನೆ. ದೇವೇಶ! ಜಗನ್ನಿವಾಸ! ಪ್ರಸನ್ನನಾಗು.

* * *

(ದೇವೇಶ! ನಾನೂ ಏಕೆ ದುಃಖಿತನಾಗಿದ್ದೇನೆ ಎನ್ನುವೆಯೋ? ನಿನ್ನ ಅನಂತಾನಂತಮುಖಗಳು ಕೋರೆದಾಡೆಗಳಿಂದ ವಿಕೃತಗೊಂಡಿವೆ ಅಥವಾ ಭಯಂಕರವಾಗಿ ಕಾಣುತ್ತಿವೆ. ಬಾಯಿಗಳಿಂದ ಅಗ್ನಿಗಳನ್ನು ಉಗುಳುತ್ತಿರುವುದರಿಂದ ಪ್ರಲಯಕಾಲದಲ್ಲಿನ ಚಂಡಾಗ್ನಿಯಂತೆಯೇ ಒಂದೊಂದು ಮುಖವೂ

ಕಾಣುತ್ತಿದೆ. ಇಂತಹ ಮುಖಗಳು ನನ್ನ ಸುತ್ತಲೂ ಕಾಣಿಸಿಕೊಳ್ಳುತ್ತಿವೆ. ಇವುಗಳನ್ನು ನೋಡುತ್ತಾ ನಾನು ದಿಙ್ಮೂಢನಾಗಿದ್ದೇನೆ. ನನಗೆ ದಿಕ್ಕೇ ತೋಚುತ್ತಿಲ್ಲ. ಪೂರ್ವವು ಯಾವುದು–ಪಶ್ಚಿಮವು ಯಾವುದು? ಎಂಬು ದನ್ನೂ ಸಹ ತಿಳಿಯಲು ನನಗೆ ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ನನಗೆ ಮಾನಸಿಕಸುಖವೂ ಹಾಳಾಗಿಬಿಟ್ಟಿದೆ. ಸುಖವನ್ನು ಕಳೆದುಕೊಂಡ ನಾನು ದುಃಖವನ್ನೇ ಅನುಭವಿಸುತ್ತಿದ್ದೇನೆ. ಜಗನ್ನಿವಾಸ! ಅಖಂಡವಿಶ್ವಕ್ಕೂ ನಿವಾಸ ಸ್ಥಾನನಾಗಿರತಕ್ಕವನೇ! ಪ್ರಸನ್ನನಾಗು.)

O O O

ದಿಶಃ ನ ಜಾನೇ=ಪೂರ್ವವು ಯಾವುದು, ಪಶ್ಚಿಮವು ಯಾವುದು ಎಂಬ ವಿವೇಕವೇ ಹೊರಟುಹೋಗಿದೆ. ದಿಙ್ಮೂಢನಾಗಿದ್ದೇನೆ. (ಶಂ. ಭಾ.)

ದೇವೇಶ =ಬ್ರಹ್ಮನೇ ಮುಂತಾದ ಈಶ್ವರರಿಗೂ ಕೂಡ ಅಧಿಪತಿಯಾದ ಪರಮೇಶ್ವರನೇ! ನನ್ನಲ್ಲಿ ಪ್ರಸನ್ನನಾಗು. (ರಾ. ಭಾ.)

**ಓಂ ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**
**ಓಂ ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾನ್ತರೇಷು**
**ಸಂದೃಶ್ಯನ್ತೇ ಚೂರ್ಣಿತೈರುತ್ತಮಾಙ್ಗೈಃ ॥೨೭॥**

ಎಲ್ಲ ರಾಜಸಮೂಹಗಳಿಂದೊಡಗೂಡಿದ ಈ ಧೃತರಾಷ್ಟ್ರನ ಮಕ್ಕಳು ಭೀಷ್ಮ, ದ್ರೋಣ, ಈ ಸೂತಪುತ್ರನಾದ ಕರ್ಣ ಇವರು, ನಮ್ಮ ಕಡೆಯಲ್ಲಿ ರುವ ಯೋಧಮುಖ್ಯರೊಡನೆ ಕೋರೆದಾಡೆಗಳಿಂದ ವಿಕಾರಗೊಂಡಿರುವ ಭಯಂಕರವಾದ ನಿನ್ನ ಮುಖಗಳನ್ನು ಅವಸರದಿಂದ ಪ್ರವೇಶಿಸುತ್ತಿದ್ದಾರೆ. ಇವರಲ್ಲಿ ಕೆಲವರು ನಿನ್ನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡು ಜಜ್ಜಿ ಪುಡಿ-ಪುಡಿಯಾದ ತಲೆಗಳುಳ್ಳವರಾಗಿ ಕಾಣುತ್ತಿದ್ದಾರೆ.

* * *

(ತಾನು ಕಾಣುತ್ತಿರುವ ಇನ್ನೂ ಅನೇಕಭಯಾನಕದೃಶ್ಯಗಳನ್ನು ಭೀತನಾದ ಅರ್ಜುನನು ವಿವರಿಸುತ್ತಾನೆ.

ದೇವೇಶ! ಅದೋ ಅಲ್ಲಿ ಧೃತರಾಷ್ಟ್ರನ ದುರ್ಯೋಧನಾದಿ ನೂರು ಮಂದಿ ಮಕ್ಕಳೂ ಅಗ್ನಿಯ ಜ್ವಾಲೆಗಳಿಂದ ಕೂಡಿರುವ ನಿನ್ನ ಅನಂತಾನಂತ ಮುಖಗಳನ್ನು ಅವಸರದಿಂದ ಪ್ರವೇಶಿಸುತ್ತಿದ್ದಾರೆ. ಅವರ ಜೊತೆಯಲ್ಲಿ ರಾಜರ ಸಮೂಹವೇ ನಿನ್ನ ಅನಂತಾನಂತವಾದ ಬಾಯಿಗಳೊಳಗೆ ಪ್ರವೇಶಿಸುತ್ತಿದೆ. ಭೀಷ್ಮ, ದ್ರೋಣ, ಕರ್ಣ ಇವರೂ ಸಹ ನಿನ್ನ ಬಾಯೊಳಗೆ ಅವಸರದಿಂದ ಹೋಗುತ್ತಿರುವುದನ್ನು ನಾನು ಕಾಣುತ್ತಿದ್ದೇನೆ. ಜನಾರ್ದನ! ಇಷ್ಟು ಮಾತ್ರವಲ್ಲ. ನಮ್ಮ ಕಡೆಯ ಯೋಧಮುಖ್ಯರನ್ನೂ ಸಹ ನಿನ್ನ ತೆರೆದ ಬಾಯ್ಗಳು ಸರಸರನೆ ಕಬಳಿಸುತ್ತಿವೆ. ಹೀಗೆ ಒಳಹೊಕ್ಕವರಲ್ಲಿ ಕೆಲವರಂತೂ ನಿನ್ನ ಹಲ್ಲುಗಳ ನಡುಭಾಗದಲ್ಲಿ ಸಿಕ್ಕಿಬಿಟ್ಟಿದ್ದಾರೆ. ಅಯ್ಯೋ! ಅವರ ತಲೆ ಗಳೆಲ್ಲವೂ ಕ್ಷಣಮಾತ್ರದಲ್ಲಿ ನಿನ್ನ ಹಲ್ಲುಗಳ ಜಗಿತಕ್ಕೆ ಸಿಕ್ಕಿ ನುಚ್ಚುನೂರಾಗಿ ಹೋದುವು. ಇಂತಹ ಭಯಂಕರದೃಶ್ಯವನ್ನು ನಾನು ನೋಡುತ್ತಿದ್ದೇನೆ.)

o o o

ಯಾರ ದೆಸೆಯಿಂದ ನನಗೆ ಪರಾಜಯವುಂಟಾಗಬಹುದೆಂಬ ಶಂಕೆಯಿತ್ತೋ ಅದು ಈಗ ಹೊರಟುಹೋಯಿತು. ಏಕೆಂದರೆ : ದುರ್ಯೋಧನಾದಿಗಳು, ಭೀಷ್ಮ-ದ್ರೋಣ-ಕರ್ಣಾದಿಗಳು ನಿನ್ನ ಬಾಯೊಳಗೆ ಪ್ರವೇಶಿಸುತ್ತಿದ್ದಾರೆ. ಧೃಷ್ಟದ್ಯುಮ್ನನೇ ಮುಂತಾದ ನಮ್ಮ ಕಡೆಯ ಪ್ರಧಾನಯೋಧರೂ ಸಹ ಹಾಗೆಯೇ ನಿನ್ನ ಬಾಯೊಳಗೆ ಪ್ರವೇಶಿಸುತ್ತಿದ್ದಾರೆ.

ವಿಲಗ್ನಾ **ದಶನಾನ್ತರೇಷು**= ನಿನ್ನ ಹಲ್ಲುಗಳ ಮಧ್ಯೇ ಅಗಿಯಲ್ಪಟ್ಟಿರುವ ಮಾಂಸದಂತೆ ಕಾಣುತ್ತಿದ್ದಾರೆ. (ಶಂ. ಭಾ.)

ಹೀಗೆ ಇಡೀ ಜಗತ್ತಿನ ಸ್ಥಿತಿ-ಪ್ರವೃತ್ತಿಗಳೆಲ್ಲವೂ ತನಗೆ ಅಧೀನವೆಂಬುದನ್ನು ತೋರಿಸುತ್ತಾ ಪಾರ್ಥಸಾರಥಿಯು ರಾಜವೇಷದ ಛದ್ಮದಲ್ಲಿರುವ ಧೃತರಾಷ್ಟ್ರನ ಮಕ್ಕಳನ್ನೂ ಮತ್ತು ಧರ್ಮರಾಜನ ಕಡೆಯಲ್ಲಿಯೂ ಒಳಗೆ ಬಂದು ಸೇರಿಕೊಂಡಿರುವ ಅಸುರಾಂಶಗಳನ್ನೂ ಸಂಹಾರಮಾಡಿ ತನ್ನ ಸಂಕಲ್ಪವನ್ನು ಅರ್ಜುನನಿಗೆ ತೋರಿಸಿದನು ಮತ್ತು ಪಾರ್ಥನು ಭಗವಂತನ

ಸೃಷ್ಟಿಮಾಡುವಿಕೆಯೇ ಮುಂತಾದ ಎಲ್ಲ ಐಶ್ವರ್ಯವನ್ನೂ ಸಾಕ್ಷಾತ್ಕರಿಸಿ ಸರ್ವಾತ್ಮಕನಾದ ಅದೇ ಭಗವಂತನಲ್ಲೇ ದುರ್ಯೋಧನನೇ ಮುಂತಾದವರು ಉಪಸಂಹಾರಹೊಂದುವುದನ್ನೂ–ಅದು ಮುಂದೆ ಒದಗುವ ಘಟನೆ ಯಾದರೂ–ಭಗವದನುಗ್ರಹದಿಂದ ದೊರಕಿದ ದಿವ್ಯದೃಷ್ಟಿಯಿಂದ ನೋಡುತ್ತಾ ಈ ಮಾತನ್ನು ಹೇಳುತ್ತಾನೆ.

**ವಕ್ತ್ರಾಣಿ.....ಭಯಾನಕಾನಿ**–ಭಯಂಕರವಾದ ನಿನ್ನ ಮುಖದೊಳಗೆ ತಮ್ಮ ನಾಶಕ್ಕೋಸ್ಕರ ತ್ವರೆಯಿಂದ ಪ್ರವೇಶಿಸುತ್ತಿದ್ದಾರೆ. ಅವರಲ್ಲಿ ಕೆಲವರು ಪುಡಿ-ಪುಡಿಯಾದ ತಲೆಗಳಿಂದ ಹಲ್ಲುಗಳ ಮಧ್ಯೆ ಸಿಕ್ಕಿಹಾಕಿಕೊಂಡಿರುವಂತೆ ಕಂಡುಬರುತ್ತಾರೆ. (ರಾ. ಭಾ.)

**ಓಂ ಯಥಾ ನದೀನಾಂ ಬಹವೋಽಮ್ಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವನ್ತಿ ।**
**ತಥಾ ತವಾಮೀ ನರಲೋಕವೀರಾ**
**ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥೨೮॥**

ನದಿಗಳ ಬಹಳವಾದ ನೀರಿನ ವೇಗಗಳು (ಪ್ರವಾಹಗಳು) ಸಮುದ್ರಕ್ಕೆ ಅಭಿಮುಖವಾಗಿ ಹೇಗೆ ಹರಿಯುತ್ತಿರುವುವೋ-ಹಾಗೆ ಈ ಮನುಷ್ಯಲೋಕದ ವೀರರು ನಿನ್ನ ಉರಿಯುತ್ತಿರುವ ಬಾಯಿಗಳೊಳಕ್ಕೆ ಹೋಗುತ್ತಿದ್ದಾರೆ.

* * *

(ದೇವೇಶ! ನದಿಗಳು ಭೂವಲಯದಲ್ಲಿ ಎಲ್ಲಿಯೋ ಹುಟ್ಟಿ, ಎಲ್ಲಿಯೋ ಹರಿದು ಕಟ್ಟಕಡೆಗೆ ಅವುಗಳೆಲ್ಲವೂ ಏಕಮುಖವಾಗಿ ರಭಸದಿಂದ ಸಮುದ್ರವನ್ನು ಒಳಹೊಗುವಂತೆ–ಈ ಮನುಷ್ಯಲೋಕದ ವೀರರಾದ ಭೀಷ್ಮಾದಿಗಳು ಎಲ್ಲ ಕಡೆಗಳಿಂದಲೂ ಧಾವಿಸಿಬಂದು ಧಗ-ಧಗಿಸುತ್ತಿರುವ ನಿನ್ನ ಬಾಯಿಗಳೊಳಕ್ಕೆ ನುಗ್ಗಿ ಹೋಗುತ್ತಿದ್ದಾರೆ.)

**ಓಂ ಯಥಾ ಪ್ರದೀಪ್ತಂ ಜ್ವಲನಂ ಪತಙ್ಗಾ**
**ವಿಶನ್ತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶನ್ತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥**

ಯಾವ ರೀತಿಯಲ್ಲಿ ಹೆಚ್ಚು ವೇಗದಿಂದ ಕೂಡಿದ ಪತಂಗಗಳು ಧಗ-ಧಗಿಸುತ್ತಿರುವ ಅಗ್ನಿಯನ್ನು ತಮ್ಮ ನಾಶಕ್ಕಾಗಿ ಪ್ರವೇಶಿಸುವುವೋ–ಅದೇ ರೀತಿಯಲ್ಲಿ ಈ ಲೋಕಗಳೂ ಸಹ ಹೆಚ್ಚಾದ ವೇಗದಿಂದ ತಮ್ಮ ವಿನಾಶಕ್ಕಾಗಿಯೇ ನಿನ್ನ ಮುಖಗಳನ್ನು ಸೇರುತ್ತಿರುವುವು.

* * *

(ದೀಪದ ಹುಳುಗಳದ್ದು ಒಂದು ಸ್ವಭಾವ. ಜ್ವಲಿಸುತ್ತಿರುವ ಅಗ್ನಿಯನ್ನು ಕಂಡೊಡನೆಯೇ ಅದರಿಂದ ಅವುಗಳು ಆಕರ್ಷಿತವಾಗಿ ಉರಿಯುತ್ತಿರುವ ಬೆಂಕಿಯ ಬಳಿಗೆ ಧಾವಿಸಿ ಬರುತ್ತವೆ. ಆದರೆ ಹೀಗೆ ಬರುವುದು ಅವುಗಳ ವಿನಾಶಕ್ಕೇ ಕಾರಣವಾಗುತ್ತದೆ. ಕೆಲವು ಕ್ಷಣಗಳಲ್ಲಿಯೇ ಅವುಗಳು ಬೆಂಕಿಯಲ್ಲಿ ಬಿದ್ದು ಭಸ್ಮವಾಗಿಬಿಡುತ್ತವೆ. ಅದೇ ರೀತಿಯಲ್ಲಿ ಈ ಲೋಕಗಳು ಎಂದರೆ ಈ ಲೋಕದ ಯೋಧರು ನಿನ್ನಿಂದ ಆಕರ್ಷಿತರಾಗಿರುವರೋ ಎಂಬಂತೆ ಹೆಚ್ಚಿನ ವೇಗದಿಂದ ; ಹೆಚ್ಚಿನ ಅವಸರದಿಂದ ಧಾವಿಸಿಬಂದು ತೆರೆದಿರುವ ನಿನ್ನ ಬಾಯಿಗಳೊಳಗೆ ತಮ್ಮ ನಾಶಕ್ಕಾಗಿಯೇ ನುಗ್ಗುತ್ತಿದ್ದಾರೆ.)

o o o

**ಪತಙ್ಗಾಃ**– ಪಕ್ಷಿಸಮೂಹಗಳು. (ಶಂ. ಭಾ.)

**ಪತಙ್ಗಾಃ**– ಮಿಡತೆಗಳು.

**ತ್ವರಮಾಣಾ ವಿಶನ್ತಿ** –ತಮ್ಮ ನಾಶಕ್ಕೋಸ್ಕರ ತ್ವರೆಯಿಂದ ತಾವೇ ಪ್ರವೇಶಿಸುತ್ತಿದ್ದಾರೆ. (ರಾ. ಭಾ.)

ನದೀಪ್ರವಾಹದ ನಾಶವೆಂದರೆ ಪ್ರತ್ಯೇಕವಾದ ಪ್ರವಾಹದ ಆಕಾರವನ್ನು ಕಳೆದುಕೊಳ್ಳುವಿಕೆ. ಆ ದ್ರವ್ಯದಲ್ಲಿ ಮಾತ್ರವೇ ನದೀಪ್ರವಾಹ ಎಂಬ ಹೆಸರು ಹೋಗುತ್ತದೆ. ಪತಂಗಗಳಲ್ಲಾದರೋ ಬೇರೇ ದ್ರವ್ಯವೆಂದೇ ಕರೆಸಿಕೊಳ್ಳಲ್ಪಡುವ ಭಸ್ಮದ ರೂಪವನ್ನು ತಾಳಿಬಿಡುವುದರಿಂದ ಎರಡು ಬೇರೆ ಬೇರೆ ಪ್ರಕಾರವನ್ನು ತೋರಿಸಲು ಎರಡು ದೃಷ್ಟಾಂತಗಳನ್ನು ಹೇಳಿದೆ ಅಥವಾ ಅವರಿಗೆ ಸ್ವೇಚ್ಛೆಯಿಂದ ಹಿಂದಿರುಗುವುದಕ್ಕೇ ಸಾಧ್ಯವಿಲ್ಲ ಎಂಬುದನ್ನು ತೋರಿಸಲು ಪ್ರವಾಹದ ದೃಷ್ಟಾಂತವನ್ನು ಕೊಟ್ಟಿದೆ. ಅಂತಹ ವಿನಾಶವು ತಮ್ಮ ಇಚ್ಛೆಯಿಂದಲೇ ಉಂಟಾಗಿದೆ ಎಂಬುದನ್ನು ತೋರಿಸಲು ಪತಂಗದ ಹುಳುಗಳ ದೃಷ್ಟಾಂತವನ್ನು ಕೊಟ್ಟಿದೆ.

ಭಗವಂತನು ತನ್ನೊಳಗೆ ಇವರೆಲ್ಲರೂ ಪ್ರವೇಶಿಸಿದರೂ ಕೂಡ ಪೂರ್ತಿ ತುಂಬಿಹೋಗುವುದಿಲ್ಲ–ಎಂಬುದನ್ನು ತೋರಿಸಲು ಸಮುದ್ರದ ನಿದರ್ಶನ ವನ್ನು ಕೊಟ್ಟಿದೆ. ಅವನನ್ನು ಪ್ರವೇಶಿಸಿದವರು ಒಡನೆಯೇ ಧ್ವಂಸವಾಗಿಬಿಡು ತ್ತಾರೆ–ಎಂಬುದನ್ನು ತೋರಿಸಲು ಬೆಂಕಿಯ ಉದಾಹರಣೆಯನ್ನು ಕೊಟ್ಟಿದೆ.

–ವೇದಾಂತದೇಶಿಕರು.

**ಓಂ ಲೇಲಿಹ್ಯಸೇ ಗ್ರಸಮಾನಃ ಸಮನ್ತಾ-**
**ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ॥೩೦॥**

ನೀನಾದರೋ ಸಮಗ್ರವಾದ ಲೋಕಗಳನ್ನೂ ಸಹ ಉರಿಯುತ್ತಿರುವ ನಿನ್ನ ಮುಖಗಳಿಂದ ನುಂಗುತ್ತಾ ಚಪ್ಪರಿಸುತ್ತಿರುವೆ. ಕ್ರೂರವಾದ ನಿನ್ನ ಕಿರಣಗಳು ಸಮಗ್ರಜಗತ್ತನ್ನೂ ತೇಜಸ್ಸುಗಳಿಂದ ತುಂಬಿಕೊಂಡು ಸುಡು ತ್ತಿರುವುವು. ಸರ್ವವ್ಯಾಪಿಯಾದ ವಿಷ್ಣುವೇ! ಎಲ್ಲ ಕಡೆಗಳಿಂದಲೂ ಧಾವಿಸಿ ಬಂದು ಪ್ರಜ್ವಲಿಸುತ್ತಿರುವ ನಿನ್ನ ಬಾಯಿಗಳೊಳಗೆ ಬೀಳುತ್ತಿರುವ ಯೋಧರನ್ನು ಒಡನೆಯೇ ನುಂಗಿಹಾಕುತ್ತಿರುವೆ.

*  *  *

(ಭಕ್ಷ್ಯ-ಭೋಜ್ಯಾದಿಗಳನ್ನು ತಿಂದು ಚಪ್ಪರಿಸುವಂತೆ ಈ ಮನುಷ್ಯರನ್ನು ನುಂಗಿ ಅವರ ತಲೆಗಳನ್ನು ನಿನ್ನ ಹಲ್ಲುಗಳಿಂದ ಚೂರ್ಣೀಕೃತಮಾಡಿದನಂತರ ಚಪ್ಪರಿಸುವೆ. ನಿನ್ನ ತೀಕ್ಷ್ಣವಾದ ಕಿರಣಗಳು ಅವುಗಳ ತೀಕ್ಷ್ಣವಾದ ತೇಜಸ್ಸಿನಿಂದ ಸಮಗ್ರವಾದ ಜಗತ್ತನ್ನೂ ತುಂಬಿ ಈ ಜಗತ್ತನ್ನೇ ಸುಡುತ್ತಿವೆ. ನಿನ್ನ ತೀಕ್ಷ್ಣವಾದ ಕಿರಣಗಳು ಎಲ್ಲೆಲ್ಲಿಯೂ ವ್ಯಾಪಿಸಿ ಎಲ್ಲವನ್ನೂ ಸುಟ್ಟುಹಾಕುತ್ತಿವೆ.)

O  O  O

ವಿಷ್ಣೋ = ವ್ಯಾಪನಸ್ವಭಾವವುಳ್ಳವನೇ! (ಶಂ. ಭಾ.)

**ಗ್ರಸಮಾನಃ ಲೇಲಿಹ್ಯಸೇ** = ಎಲ್ಲರನ್ನೂ ನುಂಗಿಹಾಕುತ್ತಾ ಅವರ ರಕ್ತದಿಂದ ತೊಯ್ದಿರುವ ತುಟಿ ಮುಂತಾದುವುಗಳನ್ನು ಮತ್ತೆ ಮತ್ತೆ ನೆಕ್ಕುತ್ತಿದ್ದೀಯೆ. (ರಾ. ಭಾ.)

ಓಂ ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥೩೧॥

ಉಗ್ರರೂಪನಾದ ನೀನು ಯಾರೆಂಬುದನ್ನು ನನಗೆ ಹೇಳು. ದೇವ ಶ್ರೇಷ್ಠನೇ! ನಿನಗೆ ನಮಸ್ಕಾರವಿರಲಿ. ಪ್ರಸನ್ನನಾಗು. ಆದ್ಯನಾದ ನಿನ್ನನ್ನು ವಿಶೇಷವಾಗಿ ತಿಳಿಯಲು ಬಯಸುತ್ತೇನೆ. ಏಕೆಂದರೆ : ನಿನ್ನ ಚೇಷ್ಟೆಯು ನನಗೆ ಅರ್ಥವಾಗುತ್ತಿಲ್ಲ.

* * *

(ನೀನು ಉಗ್ರರೂಪನಾಗಿರುವೆ. ಆದುದರಿಂದ ನೀನಾರೆಂಬುದು ನನಗೆ ತಿಳಿಯದು. ನಾನು ಪ್ರಸನ್ನವದನನಾಗಿದ್ದ ಶ್ರೀಕೃಷ್ಣಸ್ವಾಮಿಯನ್ನು ವಿಶ್ವರೂಪವನ್ನು ತೋರಿಸುವಂತೆ ಪ್ರಾರ್ಥಿಸಿದ್ದೆನು. ಆದರೆ ಈಗ ನಾನು ನೋಡುತ್ತಿರುವುದು ಭಯಂಕರರೂಪವನ್ನು. ಆದುದರಿಂದ ನೀನಾರೆಂಬುದ ರಲ್ಲಿಯೇ ನನಗೆ ಸಂದೇಹವುಂಟಾಗಿದೆ. ನೀನಾರೆಂಬುದನ್ನು ದಯಮಾಡಿ ಹೇಳು. ದೇವತೆಗಳಿಗೆಲ್ಲರಿಗೂ ಶ್ರೇಷ್ಠನಾದವನೇ! ನಿನಗೆ ನಮಸ್ಕಾರಮಾಡು ತ್ತೇನೆ. ನನ್ನ ಮೇಲೆ ಪ್ರಸನ್ನನಾಗು. ಈ ಉಗ್ರರೂಪವನ್ನು ನಾನು ಇನ್ನು ಹೆಚ್ಚುಹೊತ್ತು ನೋಡಲಾರೆನು. ಆದ್ಯನಾದ, ಸನಾತನನಾದ, ಮೂಲ ಸ್ವರೂಪನಾದ ನಿನ್ನನ್ನೂ ಮತ್ತು ನಿನ್ನ ನಿಜಸ್ವರೂಪವನ್ನೂ ತಿಳಿದುಕೊಳ್ಳುವ ಆಸೆಯಿಂದಿರುತ್ತೇನೆ. ಏಕೆಂದರೆ : ನಿನ್ನ ವ್ಯಾಪಾರವು ನನಗೆ ಅರ್ಥವಾಗುತ್ತಿಲ್ಲ. ನಿನ್ನ ಈ ಉಗ್ರರೂಪವನ್ನು ನಾನು ಊಹಿಸಿಯೂ ಇರಲಿಲ್ಲ. ಆದುದರಿಂದ ನಿನ್ನ ನಿಜಸ್ವರೂಪವೇನೆಂಬುದನ್ನೂ–ನಿನ್ನ ವ್ಯಾಪಾರವು ಯಾವುದೆಂಬುದನ್ನೂ ದಯಮಾಡಿ ಹೇಳು.)

O O O

ವಿಜ್ಞಾತುಂ = ವಿಶೇಷವಾಗಿ ತಿಳಿಯಲು. ಪ್ರವೃತ್ತಿಂ –ಚೇಷ್ಟೆಯನ್ನು.
(ಶಂ. ಭಾ.)

**ದರ್ಶಯಾತ್ಮಾನಮವ್ಯಯಂ**–ಎಂದು ನಿನ್ನ ನಿರಂಕುಶವಾದ ಐಶ್ವರ್ಯವನ್ನು ತೋರಿಸಬೇಕೆಂದು ನಾನು ನಿನ್ನನ್ನು ಪ್ರಾರ್ಥಿಸಿದೆನು.

ಅದನ್ನು ತೋರಿಸಲು ಹೊರಟಿರುವ ನೀನು ಈ ಅತಿಘೋರವಾದ ರೂಪವನ್ನು ಪ್ರಕಟಪಡಿಸಿದ್ದೀಯೆ. ಈ ಅತಿಘೋರರೂಪನಾದ ನೀನು ಯಾರು? ಏನು ಮಾಡಲು ತೊಡಗಿದ್ದೀಯೆ–ಎಂಬುದನ್ನು ತಿಳಿಯಲು ಬಯಸುತ್ತೇನೆ. ನಿನಗೆ ಇಷ್ಟವಾದ ಪ್ರವೃತ್ತಿಯು ಯಾವುದೆಂಬುದನ್ನು ನನಗೆ ತಿಳಿಸು. ಈ ಅಭಿಪ್ರಾಯದಿಂದ, ಹೀಗೆ ಮಾಡುವುದಕ್ಕೋಸ್ಕರ ಈ ಸಂಹಾರಕರೂಪವನ್ನು ತೋರಿಸುತ್ತಿದ್ದೇನೆ–ಎಂಬುದನ್ನು ತಿಳಿಯಪಡಿಸಿ ಪ್ರಸನ್ನವಾದ ರೂಪವುಳ್ಳವನೂ ಆಗು. (ರಾ. ಭಾ.)

ಆತನು ಭಗವಂತನೇ ಎಂಬುದನ್ನೂ ಅವನ ಧರ್ಮಗಳನ್ನೂ ತಿಳಿದಿದ್ದರೂ ಕೂಡ ಅರ್ಜುನನು ಅವನ ಇತರಧರ್ಮಗಳನ್ನು ತಿಳಿಯುವುದಕ್ಕೋಸ್ಕರವೇ 'ನೀನು ಯಾರು?'–ಎಂದು ಅವನನ್ನು ಕೇಳುತ್ತಿದ್ದಾನೆ. ಯಾವನಾದರೂ ಒಬ್ಬನ ಹೆಸರು ಮುಂತಾದುವು ಅಲ್ಪ-ಸ್ವಲ್ಪ ತಿಳಿದಿದ್ದರೂ ಅವನ ಜಾತಿಯನ್ನು ತಿಳಿದುಕೊಳ್ಳುವುದಕ್ಕೋಸ್ಕರ 'ನೀನು ಯಾರು' ಎಂದು ಕೇಳುವುದಿಲ್ಲವೇ? ಅದರಂತೆ. 'ಅವನು ಯಾರು'–ಎಂಬುದೇ ತಿಳಿಯದಿದ್ದರೆ ವಿಷ್ಣೋ ಎಂದು ಅವನನ್ನು ಸಂಬೋಧಿಸುತ್ತಿರಲಿಲ್ಲ. ತ್ವಮಕ್ಷರಂ ಪರಮಂ ವೇದಿತವ್ಯಂ–ಎಂದು ಮೊದಲಾಗಿ ಅವನ ಧರ್ಮಗಳ ಸ್ತುತಿಯನ್ನೂ ಮಾಡುತ್ತಿರಲಿಲ್ಲ. (ಮ. ಭಾ.)

**ಶ್ರೀಭಗವಾನುವಾಚ :**

**ಓಂ ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥೩೨॥**

ಶ್ರೀಭಗವಂತನು ಹೇಳುತ್ತಾನೆ :

ಲೋಕಕ್ಷಯವನ್ನು ಮಾಡುವವನಾಗಿ ಬೆಳೆದುಕೊಂಡಿರುವ ಕಾಲನೇ ನಾನಾಗಿರುವೆನು. ಈಗ ಲೋಕಗಳನ್ನು ಸಂಹಾರಮಾಡಲು ಇಲ್ಲಿ ತೊಡಗಿ

ದ್ದೇನೆ. ಎರಡೂ ಪಕ್ಷಗಳ ಸೇನೆಗಳಲ್ಲಿ ಯಾವ ಯೋಧರು ನಿಂತಿರುವರೋ ಅವರೆಲ್ಲರೂ ನೀನಿಲ್ಲದಿದ್ದರೂ ಇಲ್ಲವಾಗುವರು.

* * *

(ಅರ್ಜುನ! ನಾನು ಯಾರೆಂದು ತಿಳಿಯಲು ನೀನು ಅಪೇಕ್ಷಿಸಿರುವೆಯಲ್ಲವೇ? ಹೇಳುವೆನು ; ಕೇಳು. ನಾನು ಲೋಕವಿನಾಶಕನಾದ ಕಾಲನಾಗಿದ್ದೇನೆ. ಈ ಲೋಕಗಳನ್ನು (ಹದಿನೆಂಟು ಅಕ್ಷೌಹಿಣೀಸೈನ್ಯಗಳನ್ನೂ) ವಿನಾಶಮಾಡುವ ಸಲುವಾಗಿಯೇ ಬೆಳೆದುನಿಂತಿದ್ದೇನೆ. ಈಗ ತಾನೇ ನಾನು ಲೋಕಗಳನ್ನೂ (ಹದಿನೆಂಟು ಅಕ್ಷೌಹಿಣೀಸೈನ್ಯಗಳನ್ನೂ) ಸಂಹರಿಸಲು ಪ್ರಾರಂಭಿಸಿಬಿಟ್ಟಿದ್ದೇನೆ. ಅನೀಕ-ಪ್ರತ್ಯನೀಕಗಳಲ್ಲಿ (ನಿನ್ನ ಸೈನ್ಯ ಮತ್ತು ಎದುರು ಸೈನ್ಯಗಳಲ್ಲಿ) ಎಷ್ಟುಮಂದಿ ಯೋಧರಿದ್ದಾರೆಯೋ ಅವರಲ್ಲಿ ಯಾರೊಬ್ಬರೂ ಉಳಿಯುವುದಿಲ್ಲ. ನೀನು ನಿಂತು ಯುದ್ಧಮಾಡದಿದ್ದರೂ ಅವರು ಉಳಿಯುವುದಿಲ್ಲ. 'ನಾನು ಕೊಲ್ಲುವವನು. ಅವರು ಕೊಲ್ಲಲ್ಪಡತಕ್ಕವರು' ಎಂಬ ಭ್ರಾಂತಿಯನ್ನು ನೀನು ಬಿಟ್ಟುಬಿಡು. ಈಗಾಗಲೇ ನಾನು ಅವರೆಲ್ಲರನ್ನೂ ಕಬಳಿಸಿ ಚಪ್ಪರಿಸಿದ ದೃಶ್ಯವನ್ನು ನೀನೇ ನೋಡಿದೆಯಲ್ಲವೇ? ಅರ್ಜುನ! ಈಗಾಗಲೇ ಅವರು ನನ್ನಿಂದ ಹತರಾಗಿಬಿಟ್ಟಿದ್ದಾರೆ. ನೀನು ನೆಪಮಾತ್ರನಾಗಿ ಅವರನ್ನು ಸಂಹರಿಸಬೇಕಾಗಿದೆ.)

O O O

**ಪ್ರತ್ಯನೀಕೇಷು** = ಪ್ರತಿಪಕ್ಷಗಳ ಸೇನೆಗಳಲ್ಲಿ. (ಶಂ. ಭಾ.)

**ಕಾಲಃ** = ಲೆಕ್ಕಿಸುವವನು. **ಕಲಯತೀತಿ ಕಾಲಃ**. ಎಲ್ಲ ಕೌರವರ ಮತ್ತು ರಾಜರ ಆಯುಸ್ಸಿನ ಅವಸಾನವನ್ನು ಲೆಕ್ಕಿಸುತ್ತಿರುವವನಾಗಿ ಕಾಲನೆಂದು ಕರೆಯಲ್ಪಡುತ್ತಿರುವ ನಾನು ಅವರ ನಾಶಕ್ಕಾಗಿ ಬೆಳೆದಿದ್ದೇನೆ. ಅವರನ್ನು ಸಂಹಾರಮಾಡತೊಡಗಿದ್ದೇನೆ. ಆದುದರಿಂದ ನೀನು ಉದ್ಯೋಗಮಾಡದಿದ್ದರೂ ನನ್ನ ಸಂಕಲ್ಪದಿಂದಲೇ ನಿನ್ನ ಪ್ರತಿಸ್ಪರ್ಧಿಸೇನೆಯಲ್ಲಿರುವ ಧೃತರಾಷ್ಟ್ರಪುತ್ರರೇ ಮುಂತಾದವರೆಲ್ಲರೂ ನಾಶಹೊಂದಿಬಿಡುವರು.

'ಆಶ್ರಿತವಾತ್ಸಲ್ಯದ ಅತಿಶಯದಿಂದ ನಿನ್ನ ಎಲ್ಲ ಐಶ್ವರ್ಯವನ್ನೂ ತೋರಿಸಲು ಹೊರಟ ನೀನು ಘೋರರೂಪವನ್ನು ಪ್ರಕಟಪಡಿಸುತ್ತಿರುವುದರಲ್ಲಿ ನಿನ್ನ ಅಭಿಪ್ರಾಯವೇನು?–ಎಂಬ ಅರ್ಜುನನ ಪ್ರಶ್ನೆಗೆ ಭಗವಂತನು ಇಲ್ಲಿ

ತನ್ನ ಅಭಿಪ್ರಾಯವನ್ನು ಹೇಳುತ್ತಾನೆ. ನೀನು ಉದ್ಯೋಗಮಾಡದಿದ್ದರೂ ಧೃತರಾಷ್ಟ್ರಪುತ್ರರೇ ಮುಂತಾದ ಇಡೀ ರಾಜಲೋಕವನ್ನು ನಾನು ಧ್ವಂಸ ಮಾಡಲು ತೊಡಗಿದ್ದೇನೆ–ಎಂದು ಜ್ಞಾಪಕಪಡಿಸುವುದಕ್ಕೋಸ್ಕರ ನನ್ನ ಘೋರರೂಪವನ್ನು ಪ್ರಕಟಪಡಿಸಿದ್ದೇನೆ. ಅದನ್ನು ಜ್ಞಾಪಿಸಿರುವುದು ನಿನ್ನನ್ನು ಉದ್ಯೋಗಶೀಲನನ್ನಾಗಿ ಮಾಡುವುದಕ್ಕೋಸ್ಕರ. (ರಾ. ಭಾ.)

ಇಲ್ಲಿ ಹೇಳಿರುವ ಕಾಲಶಬ್ದವು ಜಗತ್ತಿನ ಬಂಧನ–ವಿಧ್ವಂಸಜ್ಞಾನವೇ ಮುಂತಾದ ಎಲ್ಲ ಭಗವದ್ಧರ್ಮಗಳನ್ನೂ ಸೂಚಿಸುತ್ತದೆ. **ಕಲ–ಬನ್ಧನೇ, ಕಲ-ಚ್ಛೇದನೇ, ಕಲ-ಜ್ಞಾನೇ,** ಎಂದು **ಕಲ್** ಧಾತುವು ಕಾಮಧೇನುವಿನಂತೆ ಬೇಕಾದ ಅರ್ಥಗಳನ್ನು ಕೊಡುತ್ತದೆ. ಈ ಕಾಲ ಎಂಬ ಶಬ್ದವು ಭಗವದ್ವಾಚಕವಾಗಿ ಪ್ರಸಿದ್ಧವಾಗಿದೆ.

**ನಿಯತಂ ಕಾಲಪಾಶೇನ ಬದ್ಧಂ ಶಕ್ರ ವಿಕತ್ಥಸೇ ।**
**ಅಯಂ ಸ ಪುರುಷಃ ಶ್ಯಾಮೋ ಲೋಕಸ್ಯ ಹರತಿ ಪ್ರಭಾಃ ॥**

**ಬದ್ಧ್ವಾ ತಿಷ್ಠತಿ ಮಾಂ ರೌದ್ರಃ ಪಶುಂ ರಶನಯಾ ಯಥಾ ।**
**ವಿಷ್ಣೌ ಚಾಧೀಶ್ವರೇ ಚಿತ್ತಂ ಧಾರಯನ್ಕಾಲವಿಗ್ರಹೇ ॥**

**ಪ್ರವೃದ್ಧಃ**= ಪರಿಪೂರ್ಣನು ಅಥವಾ ಅನಾದಿಯು.

**ಋತಂ ಚ ಸತ್ಯಂ ಚಾಭೀದ್ಧಾತ್ । ಏತನ್ಮಹದ್ಭೂತಂ ।**

**ಪ್ರವೃದ್ಧಃ**–ಎಂಬ ಪದಕ್ಕೆ ಬೆಳವಣಿಗೆ ಹೊಂದುವಿಕೆ ಎಂದು ಅರ್ಥ ಮಾಡಬಾರದು. ಏಕೆಂದರೆ : ಭಗವಂತನಿಗೆ ವೃದ್ಧಿ-ಕ್ಷಯಗಳಿಲ್ಲ.

**ನಾಸೌ ಜಜಾನ ನ ಮರಿಷ್ಯತಿ ನೈಧತೇಽಸೌ ।** (ಭಾಗವತ.)

**ಯಸ್ಯ ದಿವ್ಯಂ ಹಿ ತದ್ರೂಪಂ ಕ್ಷೀಯತೇ ವರ್ಧತೇ ನ ಚ ।**
(ಮೋಕ್ಷಧರ್ಮ.)

**ಲೋಕಾನ್.... ಪ್ರವೃತ್ತಃ**= ಲೋಕಗಳನ್ನು ಸಂಹರಿಸಲು ಇಲ್ಲಿ ವಿಶೇಷವಾಗಿ ತೊಡಗಿರುವ. ನೀನೂ ಮತ್ತು ನಿನ್ನ ಸಹೋದರರೂ ಕೂಡ ಇಲ್ಲದಿದ್ದರೂ–ಎಂಬುದನ್ನು ಸೂಚಿಸಲು ಅಪಿ ಶಬ್ದವನ್ನು ಹೇಳಿದೆ.

**ಪ್ರತ್ಯನೀಕೇಷು** = ಈ ಸೈನಿಕರು ಪರಸ್ಪರವಿರೋಧಿಗಳಾದುದರಿಂದ ಒಬ್ಬರಿಗೊಬ್ಬರು ಪ್ರತ್ಯನೀಕರು. **ಪ್ರತ್ಯನೀಕೇಷು**–ಎಂದು ಬಹುವಚನ

ವನ್ನು ಉಪಯೋಗಿಸುವುದಕ್ಕೆ ಕಾರಣ : ಸೈನಿಕರು ಅಕ್ಷೌಹಿಣಿಯೇ ಮುಂತಾದ ರೂಪಗಳಲ್ಲಿ ಬಹುವಿಧವಾಗಿರುವುದರಿಂದ. (ಮ. ಭಾ.)

ಓಂ ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ಭುಙ್ಕ್ಷ್ವ ರಾಜ್ಯಂ ಸಮೃದ್ಧಮ್ ।
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥೩೩॥

ಆದುದರಿಂದ ಎದ್ದೇಳು. ಯಶಸ್ಸನ್ನು ಹೊಂದು. ಶತ್ರುಗಳನ್ನು ಜಯಿಸಿ ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಇವರು ಮೊದಲೇ ನನ್ನಿಂದ ಸಂಹರಿಸಲ್ಪಟ್ಟಿದ್ದಾರೆ. ಸವ್ಯಸಾಚಿಯೇ! ನೀನು ನೆಪಮಾತ್ರನಾಗು.

* * *

(ಈಗಲಾದರೂ ನಿನ್ನ ಅಜ್ಞಾನದ ಫಲವಾದ ಅಲಸಿಕೆಯನ್ನೂ, ವ್ಯಾಮೋಹವನ್ನೂ ತೊರೆದು ಎದ್ದೇಳು. ಅರ್ಜುನ! ನೀನೇ ನೋಡಿದಂತೆ ಇವರೆಲ್ಲರೂ ಈ ಮೊದಲೇ ನನ್ನಿಂದ ಹತಪ್ರಾಯರಾಗಿಬಿಟ್ಟಿದ್ದಾರೆ. ನೀನು ನೆಪಮಾತ್ರಕ್ಕೆ ಯುದ್ಧಮಾಡು. ಇವರೆಲ್ಲರೂ ಮರದ ಗೊಂಬೆಗಳಂತೆ ತೊಪ-ತೊಪನೆ ಕೆಳಗೆ ಬೀಳುತ್ತಾರೆ. ಭೀಷ್ಮಾದಿ ಅತಿರಥ-ಮಹಾರಥರನ್ನೂ ಕೊಂದ ಮಹಾಪರಾಕ್ರಮೀ–ಎಂಬ ಯಶಸ್ಸನ್ನೂ, ಕೀರ್ತಿಯನ್ನೂ ಪಡೆದುಕೊ. ಶತ್ರುಗಳನ್ನು ಸಂಹರಿಸಿದನಂತರ ನಿಷ್ಕಂಟಕವಾದ ಸಮೃದ್ಧವಾದ ಈ ರಾಜ್ಯವನ್ನು ನಿನ್ನ ಸಹೋದರರೊಡನೆ ಅನುಭವಿಸು.

ಸವ್ಯಸಾಚೀ ಎಂದರೆ ಎಡಗೈಯಿಂದಲೂ ಬಾಣಬಿಡುವವನು ಎಂದರ್ಥ. ಬಲಗೈಯಿಂದ ಬಾಣಗಳನ್ನು ಎಲ್ಲರೂ ಬಿಡುತ್ತಾರೆ. ಎಡಗೈಯಿಂದ ಬಿಡುವುದು ವಿಶೇಷವಾದುದು. ಅರ್ಜುನನಿಗೆ ಎಡಗೈಯಿಂದಲೂ ಬಾಣಬಿಡುವ ಅಭ್ಯಾಸವು ಚೆನ್ನಾಗಿ ಇದ್ದಿತಾದುದರಿಂದ ಅವನಿಗೆ ಸವ್ಯಸಾಚೀ ಎಂಬ ಅನ್ವರ್ಥನಾಮವೇ ಬಂದಿತು.)

o o o

ಯಶಃ ಲಭಸ್ವ–ಭೀಷ್ಮ, ದ್ರೋಣರೇ ಮುಂತಾದ ಅತಿರಥರು ದೇವತೆ

ಗಳಿಂದಲೂ ಅಜೇಯರು. ಅವರನ್ನೂ ಅರ್ಜುನನು ಜಯಿಸಿಬಿಟ್ಟನು–ಎಂಬ ಕೀರ್ತಿಯನ್ನು ಗಳಿಸು. ಆ ಕೀರ್ತಿಯು ಕೇವಲ ಪುಣ್ಯದಿಂದಲೇ ದೊರಕುವುದು.

**ಸಮೃದ್ಧಂ**=ಸಮೃದ್ಧಿಸಂಪನ್ನವೂ, ಶತ್ರುರಹಿತವೂ, ನಿಷ್ಕಲಂಕವೂ ಆದುದು.

**ನಿಹತಾಃ** = ನಿಶ್ಚಯವಾಗಿ ಕೊಲ್ಲಲ್ಪಟ್ಟಿದ್ದಾರೆ.

**ಸವ್ಯಸಾಚೀ = ಸವ್ಯೇನ ವಾಮೇಣಾಪಿ ಹಸ್ತೇನ ಶರಾಣಾಂ ಕ್ಷೇಪಾತ್ ಸವ್ಯಸಾಚೀ.**

ಎಡಗೈಯಿಂದಲೂ ಕೂಡ ಬಾಣಗಳನ್ನು ಪ್ರಯೋಗಿಸುವ ಅಭ್ಯಾಸವಿರುವವನು. (ಶಂ. ಭಾ.)

**ಮಯ್ಯೈವೈತೇ ನಿಹತಾಃ.... ನಿಮಿತ್ತಮಾತ್ರಂ ಭವ**= ಅಪರಾಧವನ್ನು ಎಸಗಿರುವ ಇವರು ಸಂಹಾರಹೊಂದಲು ಮೊದಲೇ ನನ್ನಿಂದ ಸಂಕಲ್ಪಿತರಾಗಿದ್ದಾರೆ. ಇವರ ಸಂಹಾರಕಾರ್ಯದಲ್ಲಿ ನೀನು ಕೇವಲ ನಿಮಿತ್ತವಾಗು. ನನ್ನಿಂದಲೇ ಕೊಲ್ಲಲ್ಪಟ್ಟಿರುವ ಇವರ ವಿಷಯದಲ್ಲಿ ಶಸ್ತ್ರಾದಿಗಳಂತೆ ಸಾಧನವಾಗು.

**ಸವ್ಯಸಾಚೀ = ಸವ್ಯೇನಾಪಿ ಕರೇಣ ಶರಸಮವಾಯಕರಃ (ಷಚ-ಸಮವಾಯೇ)** ಎರಡೂ ಕೈಗಳಿಂದಲೂ ಬಾಣಬಿಡಲು ಸಮರ್ಥನಾದವನು. (ರಾ. ಭಾ.)

**ಓಂ ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥**

ನನ್ನಿಂದ ಸಂಹರಿಸಲ್ಪಟ್ಟಿರುವ ದ್ರೋಣರನ್ನೂ, ಭೀಷ್ಮನನ್ನೂ, ಜಯದ್ರಥನನ್ನೂ, ಕರ್ಣನನ್ನೂ, ಇದೇ ರೀತಿಯಲ್ಲಿ ಇನ್ನೂ ಅನೇಕವೀರರನ್ನೂ ನೀನು ಸಂಹರಿಸು, ವ್ಯಥೆಪಡಬೇಡ. ಯುದ್ಧಮಾಡು. ಯುದ್ಧದಲ್ಲಿ ನೀನು ಶತ್ರುಗಳನ್ನು ಗೆಲ್ಲುವೆ."

* * *

(ಅರ್ಜುನ! ನಿನಗೆ ಧನುರ್ವಿದ್ಯೆಯ ಆಚಾರ್ಯರೂ, ದಿವ್ಯಾಸ್ತ್ರಗಳ ಸಂಪತ್ತುಳ್ಳವರೂ, ನಿನ್ನ ಪರಮಗುರುಗಳೂ ಆದ ದ್ರೋಣಾಚಾರ್ಯರ ವಿಷಯವಾಗಿ ಭಯವಿರಬಹುದು. ಇಚ್ಛಾಮರಣಿಯೂ, ದ್ರೋಣರಂತೆಯೇ ಅನೇಕಾನೇಕದಿವ್ಯಾಸ್ತ್ರಗಳನ್ನು ಹೊಂದಿರತಕ್ಕವನೂ ಮತ್ತು ಮಹಾಪರಾಕ್ರಮಿಯಾದ ಪರಶುರಾಮನನ್ನೇ ಎದುರಿಸಿ ನಿಂತು ಯುದ್ಧಮಾಡಿ ಜಯಗಳಿಸಿದವನೂ ಆದ ಭೀಷ್ಮನ ವಿಷಯವಾಗಿಯೂ ಭಯವಿರಬಹುದು. ತನ್ನ ಮಗನ ತಲೆಯನ್ನು ಕೆಳಕ್ಕೆ ಕೆಡವುವವನ ತಲೆಯು ಸಾವಿರ ಹೋಳಾಗಲಿ ಎಂದು ವೃದ್ಧಕ್ಷತ್ರನು ವರಪಡೆದುಕೊಂಡಿರುವುದರಿಂದ ಅವನ ಮಗನಾದ ಜಯದ್ರಥನ ವಿಷಯದಲ್ಲಿಯೂ ನಿನಗೆ ಭಯವಿರಬಹುದು. ಅಪ್ರತಿಹತ ವಾದ ಶಕ್ತ್ಯಾಯುಧವನ್ನು ಇಂದ್ರನಿಂದ ಪಡೆದುಕೊಂಡಿರುವ ಕರ್ಣನ ವಿಷಯದಲ್ಲಿಯೂ ನೀನು ಭೀತನಾಗಿರಬಹುದು. ಆದರೆ ಅವರೆಲ್ಲರನ್ನೂ ನಾನು ಈಗಾಗಲೇ ಕಬಳಿಸಿಬಿಟ್ಟಿದ್ದೇನೆ. ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಇವರೇ ಮೊದಲಾದ ಇನ್ನೂ ಅನೇಕಯೋಧವೀರರನ್ನೂ ಸಹ ನಾನು ಈಗಾಗಲೇ ಸಂಹರಿಸಿಬಿಟ್ಟಿದ್ದೇನೆ. ಅವರೀಗ ಕೇವಲ ಜೀವಚ್ಛವಗಳಂತೆ ಉಳಿದುಕೊಂಡಿದ್ದಾರೆ. ಅವರಲ್ಲಿ ಯಾವ ಸತ್ತ್ವವೂ ಉಳಿದಿಲ್ಲ. ಅಂತಹವರನ್ನು ನೀನು ಕೇವಲ ನೆಪಮಾತ್ರಕ್ಕೆ ಸಂಹರಿಸು. ನನ್ನ ಉಗ್ರರೂಪವನ್ನು ನೋಡಿ ನೀನು ವ್ಯಥೆಪಡುವ ಕಾರಣವಿಲ್ಲ. ಯುದ್ಧಮಾಡು. ಖಂಡಿತವಾಗಿಯೂ ರಣರಂಗದಲ್ಲಿ ನೀನು ನಿನ್ನ ಶತ್ರುಗಳನ್ನು (ದುರ್ಯೋಧನಾದಿಗಳನ್ನು) ಜಯಿಸುವೆ.)

O O O

**ರಣೇ ಸಪತ್ನಾನ್ ಜೇತಾಸಿ**–ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವೆ. ಅವರನ್ನು ಸಂಹರಿಸುವ ವಿಷಯದಲ್ಲಿ ಕ್ರೌರ್ಯದ ಗಂಧವೂ ಇಲ್ಲ. ಇದಲ್ಲದೇ ನಿನಗೆ ಜಯವೂ ದೊರೆಯುತ್ತದೆ.

**ದ್ರೋಣಂ ಚ.... ಕರ್ಣಂ....ಜಹಿ**–ಅಪರಾಧವೆಸಗಿದ್ದರಿಂದ ಸಂಹಾರಕ್ಕೆ ಯೋಗ್ಯರೆಂದು ನನ್ನಿಂದ ಸಂಕಲ್ಪಿಸಲ್ಪಟ್ಟಿರುವ ದ್ರೋಣ-ಭೀಷ್ಮಾದಿಗಳನ್ನು ನೀನು ಸಂಹರಿಸು. ಗುರುಗಳೂ-ಬಂಧುಗಳೂ ಆದ ಅವರನ್ನೂ ಮತ್ತು ಭೋಗಸಕ್ತರಾದ ಇತರರನ್ನೂ ಹೇಗೆ ಕೊಲ್ಲಲಿ?–ಎಂದು ದುಃಖಪಡಬೇಡ ; ಅವರ ವಿಷಯದಲ್ಲಿ ಧರ್ಮಾಧರ್ಮಭಯದಿಂದಲೂ, ಬಂಧು

ಸ್ನೇಹದಿಂದಲೂ, ಕರುಣೆಯಿಂದಲೂ ವ್ಯಥೆಪಡಬೇಡ. ಅಪರಾಧಮಾಡಿರುವುದರಿಂದ ನನ್ನಿಂದಲೇ ಸಂಹಾರಕ್ಕೆಂದು ಅವರೆಲ್ಲರೂ ಸಂಕಲ್ಪಿತರಾಗಿದ್ದಾರೆ. ಆದುದರಿಂದ ಶಂಕೆಯಿಲ್ಲದೇ ಯುದ್ಧಮಾಡು. (ರಾ. ಭಾ.)

**ಸಂಜಯ ಉವಾಚ :**

**ಓಂ ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಞ್ಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥೩೫॥**

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ಮಹಾರಾಜ! ಕೇಶವನ ಆ ಮಾತನ್ನು ಕೇಳಿ ಕಿರೀಟಿಯು ಕೈಮುಗಿದುಕೊಂಡು ನಡುಗುತ್ತಾ ನಮಸ್ಕರಿಸಿ ಭೀತಭೀತನಾಗಿ ಶ್ರೀಕೃಷ್ಣನಿಗೆ ಪ್ರಣಾಮ ವನ್ನು ಮಾಡಿ ಗದ್ಗದಭಾವದಿಂದ ಪುನಃ ಹೇಳಿದನು :

* * *

(ದಯಾಸಾಗರನಾದ ಪರಮಾತ್ಮನ ಅಭಯದಾಯಕವಾದ ಮಾತುಗಳನ್ನು ಕೇಳಿದೊಡನೆಯೇ ಅರ್ಜುನನು ಕಾಲಸ್ವರೂಪನಾದ ಶ್ರೀಕೃಷ್ಣನ ಕಾರ್ಯಪ್ರವರ್ತನೆಯನ್ನು ಕಂಡು ನಡುಗಿಹೋದನು. ಕೈಮುಗಿದು ನಮಸ್ಕರಿಸಿ, ಭಯಪಡುತ್ತಲೇ ಭಯ-ಭಕ್ತಿಗಳಿಂದ ಬದ್ಧಾಂಜಲಿಯಾಗಿ ನಿಂತು, ಕಣ್ಣುಗಳಲ್ಲಿ ನೀರುತುಂಬಿಕೊಂಡು, ಬಾಯಿ ಒಣಗಿ ಮಾತುಗಳು ಸ್ಪಷ್ಟವಾಗಿ ಹೊರಬರದಿದ್ದರೂ ಸಹ ಗದ್ಗದಸ್ವರದಿಂದಲೇ ಶ್ರೀಕೃಷ್ಣನೊಡನೆ ಮಾತನಾಡಲು ಪ್ರಾರಂಭಿಸಿದನು.)

o o o

ಗದ್ಗದ ಎಂದರೆ ದುಃಖದಿಂದ ; ಭಯಭೀತರಾದ ಮತ್ತು ಸಂತೋಷಾಧಿಕ್ಯದಿಂದ ಹೃಷ್ಟರಾದ ಮನುಷ್ಯರ ಕಣ್ಣುಗಳು ನೀರಿನಿಂದ ತುಂಬಿಹೋಗುತ್ತವೆ ಮತ್ತು ಕಂಠವು ಶ್ಲೇಷ್ಮದಿಂದ ಕಟ್ಟಿಹೋಗುತ್ತದೆ. ಆ ಸಮಯದಲ್ಲಿ ಮಾತಿನಲ್ಲಿ ಅಪಾಟವವುಂಟಾಗುತ್ತದೆ ಮತ್ತು ಶಬ್ದವು ಮಂದವಾಗುತ್ತದೆ. ಅಂತಹ ಮಾತಿಗೆ ಗದ್ಗದ ಎಂದು ಹೆಸರು.

ಪ್ರಕೃತಸಂದರ್ಭದಲ್ಲಿ ಸಂಜಯನ ಮಾತು ಈ ಗೂಢವಾದ ಅಭಿಪ್ರಾಯದಿಂದ ಕೂಡಿದೆ. ಏನೆಂದರೆ : ದ್ರೋಣರೇ ಮುಂತಾದ ನಾಲ್ಕು ಮಂದಿ ಅಜೇಯರಾದ ಶೂರ-ವೀರರು ಸಂಹರಿಸಲ್ಪಟ್ಟ ಬಳಿಕ ದುರ್ಯೋಧನನು ನಿರಾಶ್ರಯನಾಗಿ ಸತ್ತಂತೆಯೇ–ಎಂದು ಭಾವಿಸಿ ಜಯದ ವಿಷಯದಲ್ಲಿ ನಿರಾಶನಾಗಿ ಧೃತರಾಷ್ಟ್ರನು ಸಂಧಿಮಾಡಿಕೊಳ್ಳುವನು. ಆಗ ಇಬ್ಬರಿಗೂ ಶಾಂತಿಯುಂಟಾಗುವುದು ಎಂದು. ಆದರೆ ಅದೃಷ್ಟವಶದಿಂದ ಧೃತರಾಷ್ಟ್ರನು ಆ ಮಾತನ್ನು ಕೇಳಲಿಲ್ಲ. (ಶಂ. ಭಾ.)

**ಕೇಶವಃ** = ಬ್ರಹ್ಮ ಮತ್ತು ಈಶ್ವರರಿಗೆ ಪ್ರಭುವಾದವನು ಮುಂತಾದ ಕಾರಣದಿಂದ ಭಗವಂತನಿಗೆ ಈ ಹೆಸರು. ಆಶ್ರಿತರ ಸಂಸಾರವನ್ನು ರಕ್ಷಣೆ ಮಾಡುವವನು ಎಂಬ ಕಾರಣದಿಂದ ಕೃಷ್ಣ ಎಂಬ ಹೆಸರು. ಭಗವಂತನ ಪಾದಾರವಿಂದಗಳಿಗೆ ನಮಸ್ಕಾರಮಾಡಿದ್ದರಿಂದ ಅರ್ಜುನನ ಕಿರೀಟಯುಕ್ತವಾದ ಶಿರಸ್ಸಿಗೆ ಚರಿತಾರ್ಥತೆಯುಂಟಾಯಿತು ಎಂಬುದನ್ನು ಸೂಚಿಸಲು ಅರ್ಜುನನ ವಿಷಯದಲ್ಲಿ ಕಿರೀಟೀ ಎಂಬ ಪದವನ್ನು ಉಪಯೋಗಿಸಿದೆ. **ಭಾರಃ ಪರಂ ಪಟ್ಟಕಿರೀಟಜುಷ್ಟಮಪ್ಯುತ್ತಮಾಙ್ಗಂ ನ ನಮೇನ್ಮುಕುನ್ದಮ್.**

(ಭಾಗವತ-೨-೩-೨೧. ವೇದಾಂತದೇಶಿಕರು.)

**ಅರ್ಜುನ ಉವಾಚ :**

**ಓಂ ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಙ್ಘಾಃ ॥೩೬॥**

ಅರ್ಜುನನು ಹೇಳುತ್ತಾನೆ :

ಹೃಷೀಕೇಶ! ನಿನ್ನ ಕೀರ್ತನಮಾತ್ರದಿಂದ ಜಗತ್ತು ಹರ್ಷಗೊಳ್ಳುತ್ತದೆ. ಅನುರಾಗವನ್ನೂ ಹೊಂದುತ್ತದೆ. ರಾಕ್ಷಸರು ಭೀತರಾಗಿ ದಿಕ್ಕು-ದಿಕ್ಕುಗಳಿಗೆ ಓಡುತ್ತಾರೆ. ಸಿದ್ಧರ ಸಮೂಹಗಳೆಲ್ಲವೂ ನಮಸ್ಕರಿಸುವುವು. ಇದು ಯುಕ್ತವೇ ಆಗಿದೆ.

* * *

(ಹೃಷಿಕೇಶ! ಜಗತ್ತು (ಜಗತ್ತಿನ ಜನಗಳು) ನಿನ್ನನ್ನು ವಿಪುಲವಾಗಿ

ಸ್ತೋತ್ರಮಾಡುವುದರಿಂದ ಸಂತೋಷಗೊಳ್ಳುತ್ತದೆ. ಆ ಜನಕ್ಕೆ ನಿನ್ನ ಸ್ತೋತ್ರಮಾಡುತ್ತಿರುವುದೇ ಒಂದು ಆನಂದ. ನಿನ್ನ ಸ್ತೋತ್ರವನ್ನು ಭಜನೆಯನ್ನು ಬಿಟ್ಟು ಅವರಿಗೆ ಮತ್ತೇನೂ ಬೇಕಾಗುವುದಿಲ್ಲ. ಸತತವಾದ ಭಜನೆಯಿಂದಾಗಿ ಅವರು ನಿನ್ನ ಮೇಲೆ ವಿಶೇಷವಾದ ಅನುರಾಗವನ್ನೂ ಹೊಂದುತ್ತಾರೆ. ಆದರೆ ರಾಕ್ಷಸರ ಮಾತು ಹಾಗಲ್ಲ. ಅವರು ನಿನ್ನನ್ನು ಕಂಡೊಡನೆಯೇ ಭಯಗೊಂಡು ದಿಕ್ಕಾಪಾಲಾಗಿ ಓಡುತ್ತಿರುತ್ತಾರೆ.

ನಿನ್ನ ನಿಜಸ್ವರೂಪವನ್ನು ತಿಳಿದಿರುವ ಎಲ್ಲ ಸಿದ್ಧಸಮೂಹಗಳೂ ನಿನಗೆ ನಮಸ್ಕರಿಸುತ್ತಿವೆ. ಇದು ಯುಕ್ತವೇ ಆಗಿದೆ.

ಈ ಶ್ಲೋಕವು ರಾಕ್ಷಸರ ನಾಶಕ್ಕಾಗಿ ಹೇಳುವ ರಾಕ್ಷೋಘ್ನವೆಂಬ ಮಂತ್ರವೆಂದು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವುದು.)

O O O

**ತವ ಪ್ರಕೀರ್ತ್ಯಾ** = ನಿನ್ನ ಮಾಹಾತ್ಮ್ಯವನ್ನು ಕೀರ್ತನೆಮಾಡುವುದರಿಂದ ಮತ್ತು ಶ್ರವಣಮಾಡುವುದರಿಂದ. **ಸ್ಥಾನೇ**= ಯುಕ್ತವಾಗಿದೆ. ನಿನ್ನ ಕೀರ್ತನದಿಂದ ಜಗತ್ತು ಸಂತೋಷಪಡುವುದು ಯುಕ್ತವಾಗಿದೆ. ಅಥವಾ ಸ್ಥಾನೇ–ಎಂಬುದನ್ನು ವಿಷಯಕ್ಕೆ ವಿಶೇಷಣವನ್ನಾಗಿಯೂ ಮಾಡಬಹುದು. ಭಗವಂತನು ಹರ್ಷ ಮುಂತಾದುವುಗಳಿಗೆ ಯಥಾರ್ಥವಿಷಯವಾಗಿದ್ದಾನೆಂದು ಭಾವಿಸುವುದು ಸರಿಯಾಗಿದೆ. ಏಕೆಂದರೆ ಈಶ್ವರನು ಎಲ್ಲರ ಆತ್ಮವೂ ಮತ್ತು ಎಲ್ಲ ಭೂತಗಳ ಗೆಳೆಯನೂ ಆಗಿದ್ದಾನೆ.

**ಯತ ಈಶ್ವರಃ ಸರ್ವಾತ್ಮಾ ಸರ್ವಭೂತಸುಹೃಚ್ಚ.** (ಶಂ. ಭಾ.)

**ಜಗತ್** = ಯುದ್ಧವನ್ನು ನೋಡಲು ಬಂದಿರುವ ಸಮಸ್ತದೇವ-ಗಂಧರ್ವ-ಸಿದ್ಧ-ಯಕ್ಷ-ವಿದ್ಯಾಧರ-ಕಿಂಪುರುಷರೇ ಮುಂತಾದ ಜಗತ್ತು.

**ಸಿದ್ಧಸಙ್ಘಾಃ** = ಸಿದ್ಧರೇ ಮುಂತಾದ ಭಗವಂತನಿಗೆ ಅನುಕೂಲವಾದ ಚೇತನರ ಸಂಘ. (ರಾ. ಭಾ.)

ಈ ಶ್ಲೋಕವು ಶ್ರೀವಿಷ್ಣುಪಂಜರ ಮುಂತಾದುವುಗಳಲ್ಲಿ ವಿನಿಯುಕ್ತವಾಗಿರುವ ಪ್ರಸಿದ್ಧವಾದ ಮಂತ್ರವಾಗಿದೆ. –ವೇದಾಂತದೇಶಿಕರು.

**ಹೃಷೀಕೇಶ**= ಅಗ್ನಿ, ಸೋಮ, ಸೂರ್ಯ–ಮುಂತಾದವರಲ್ಲಿ ಅಂತರ್ಯಾಮಿಯಾಗಿರುವುದರಿಂದ ಜಗತ್ತಿಗೆ ಹರ್ಷಾದಿಗಳನ್ನು ಉಂಟುಮಾಡು

ವುದರಿಂದ ಅವನು ಹೃಷೀಕೇಶ. ಸೂರ್ಯ, ಅಗ್ನಿ ಮುಂತಾದವರಲ್ಲಿದ್ದು ತನ್ನ ಕೇಶಗಳಲ್ಲಿ ನಿಯತವಾಗಿರುವ ಅವರ ಕಿರಣಗಳಿಂದ ಜಗತ್ತಿಗೆ ಬೋಧನೆ ಮಾಡುವುದರ ಮತ್ತು ಜಗತ್ತನ್ನು ಸ್ಥಾಪಿಸುವುದರ ಮೂಲಕ ಹರ್ಷ ವನ್ನುಂಟುಮಾಡುತ್ತಾನೆ. ಹರ್ಷಕ್ಕೆ ಕಾರಣವಾದ ಕೇಶಗಳನ್ನು ಹೊಂದಿರು ವುದರಿಂದ ಆತನು ಹೃಷೀಕೇಶ. ಅಥವಾ ಹೃಷೀಕಗಳಿಗೆ ಎಂದರೆ ಇಂದ್ರಿಯ ಗಳಿಗೆ ಈಶನಾಗಿರುವುದರಿಂದ ಅವನು ಹೃಷೀಕೇಶ.

**ನ ಮೇ ಹೃಷೀಕಾಣಿ ಪತನ್ತ್ಯಸತ್ಪಥೇ।** ಜಗತ್ತಿಗೇ ಈಶ್ವರನಾಗಿದ್ದರೂ ಆತನು ವಿಶೇಷವಾಗಿ ಇಂದ್ರಿಯಗಳಿಗೆ ಈಶ ಎಂದು ಕರೆಯಲ್ಪಡಲು ಕಾರಣ ಆತನು ಪುರುಷಾರ್ಥಕ್ಕೆ ಬೇಕಾಗಿರುವ ಜ್ಞಾನ-ಕ್ರಿಯಾಶಕ್ತಿಗಳಿಗೆ ಪ್ರೇರಕನಾಗಿರುವುದರಿಂದ. (ಮ. ಭಾ.)

**ಓಂ ಕಸ್ಮಾಚ್ಚ ತೇ ನ ನಮೇರನ್ಮಹಾತ್ಮ-**
**ನ್ಗರೀಯಸೇ ಬ್ರಹ್ಮಣೋऽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೭॥**

ಮಹಾತ್ಮನೇ! ಬ್ರಹ್ಮನಿಗೂ ಕೂಡ ಆದಿಕರ್ತೃವಾಗಿರುವ, ಎಲ್ಲರಿಗೂ ದೊಡ್ಡವನಾದ ನಿನಗೆ ಅವರೆಲ್ಲರೂ ಯಾವ ಕಾರಣದಿಂದ ತಾನೇ ನಮಿಸದೇ ಇದ್ದಾರು? ಅನಂತ! ದೇವೇಶ! ಜಗನ್ನಿವಾಸ! ಸತ್ತು-ಅಸತ್ತು ಇವೆರಡನ್ನೂ ಮೀರಿರುವುದು ಯಾವುದೋ ಆ ಅಕ್ಷರವು ನೀನು.

* * *

(ಅರ್ಜುನನೇ ಪ್ರಶ್ನಿಸಿಕೊಳ್ಳುತ್ತಾನೆ. ಮಹಾತ್ಮನೇ! ಅವರು ನಿನಗೆ ನಮಸ್ಕಾರಮಾಡದೇ ಹೇಗೆ ತಾನೇ ಸುಮ್ಮನಿದ್ದಾರು? ನಿನ್ನ ವ್ಯಕ್ತಿತ್ವವೇ ಅಂತಹುದಾಗಿದೆ. ನಿನ್ನನ್ನು ನೆನೆದ ಮಾತ್ರದಿಂದಲೇ ಸಾಧು-ಸಂತರಿಗೆ ಸಿದ್ಧರಿಗೆ ನಮಸ್ಕಾರಮಾಡಬೇಕೆಂಬ ಪ್ರವೃತ್ತಿಯುಂಟಾಗುತ್ತದೆ. ಇದಕ್ಕೆ ಕಾರಣವಿಷ್ಟೇ ಮಹಾನುಭಾವ! ನೀನು ಬಹಳ ದೊಡ್ಡವನು. **ಮಹತೋ ಮಹೀ ಯಾನ್**–ಪ್ರಪಂಚದಲ್ಲಿ ದೊಡ್ಡದೆಂಬುದು ಯಾವುದುಂಟೋ ಅದಕ್ಕೂ ದೊಡ್ಡವನಾಗಿರುವೆ. ಬ್ರಹ್ಮನನ್ನು ನಾವು ಪಿತಾಮಹ ಎನ್ನುತ್ತೇವೆ. ಅವನ ಹುಟ್ಟಿಗೂ ಕಾರಣನು ನೀನೇ ಆಗಿರುವೆ.

ಇಂತಹ ಮಹಾನುಭಾವನಿಗೆ ನಮಸ್ಕಾರಮಾಡದೇ ಯಾರು ತಾನೇ ಸುಮ್ಮನಿದ್ದಾರು? **ಅನಂತ** = ಅಂತವೇ ಇಲ್ಲದವನೇ! **ದೇವೇಶ** = ದೇವತೆಗಳೆಲ್ಲರಿಗೂ ಸ್ವಾಮಿಯಾದವನೇ! **ಜಗನ್ನಿವಾಸ**= ಜಗತ್ತಿಗೇ ಆಶ್ರಯ ಸ್ಥಾನನಾಗಿರತಕ್ಕವನೇ! **ಸತ್** ಎಂದರೆ ಅವಿನಾಶಿಯಾದ ಜೀವ. **ಅಸತ್** ಎಂದರೆ ಅನಿತ್ಯವಾದ ನಾಶವಾಗುವ ವಸ್ತುಗಳು ಅರ್ಥಾತ್ ಜಗತ್ತು. ಇವೆರಡಕ್ಕೂ ಶ್ರೇಷ್ಠವಾದುದು ಯಾವುದುಂಟೋ ಆ ಅಕ್ಷರನೇ ನೀನಾಗಿರುವೆ. ಪ್ರಣವಸ್ವರೂಪನೂ ಅರ್ಥಾತ್ ಅಕ್ಷರಬ್ರಹ್ಮನೂ ನೀನೇ ಆಗಿರುವೆ.)

O O O

**ಕಸ್ಮಾಚ್ಚ ತೇ–ಮಹಾತ್ಮನ್** = ಹರ್ಷ ಮುಂತಾದುವುಗಳಿಗೂ ನಮಸ್ಕಾರಕ್ಕೂ ಅರ್ಹನಾದ ವಿಷಯನು ನೀನು. **ಅಕ್ಷರಂ–ತತ್ಪರಂ ಯತ್** ವೇದಾಂತಗಳಲ್ಲಿ ಹೇಳಲ್ಪಟ್ಟಿರುವ ಅಕ್ಷರಬ್ರಹ್ಮವು ನೀನೇ : **ಸತ್** ಎಂದರೆ ವಿದ್ಯಮಾನವಾಗಿರುವುದು. **ಅಸತ್** ಎಂದರೆ ಇಲ್ಲದೇ ಇರುವುದು : **ಸತ್–ಅಸತ್** ಈ ಎರಡೂ ಅಕ್ಷರದ ಉಪಾಧಿಗಳು. ಈ ಕಾರಣದಿಂದ ಬ್ರಹ್ಮವು ಔಪಚಾರಿಕವಾಗಿ **ಸತ್** ಮತ್ತು **ಅಸತ್** ಎಂದು ಕರೆಸಿಕೊಳ್ಳುತ್ತದೆ. ಆದರೆ ಪಾರಮಾರ್ಥಿಕವಾಗಿ **ಸತ್** ಮತ್ತು **ಅಸತ್** ಎರಡಕ್ಕೂ ಪರವಾಗಿರುವ ಯಾವ ವಸ್ತುವನ್ನು ವೇದಜ್ಞರು ಅಕ್ಷರ ಎಂದು ಕರೆಯುತ್ತಾರೆಯೋ ಅದೂ ನೀನೇ ಆಗಿದ್ದೀಯೆ. ಅದು ನೀನೇ ಹೊರತು ಬೇರೆ ಏನೂ ಅಲ್ಲ.

(ಶಂ. ಭಾ.)

**ಅಕ್ಷರಂ** ಎಂದರೆ ಕ್ಷರಭಾವವಿಲ್ಲದಿರುವುದು (ಜೀವಾತ್ಮತತ್ತ್ವ ) **ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್** (ಕಠ ೨-೧೮) ಎಂದು ಶ್ರುತಿಯಲ್ಲಿ ಹೇಳುವ ಅಳಿವಿಲ್ಲದ ತತ್ತ್ವ ಜೀವಾತ್ಮ. ಆ ಅಕ್ಷರವಸ್ತುವು ನೀನೇ. ಸತ್ ಮತ್ತು ಅಸತ್ತುಗಳೂ ನೀನೇ. ಕಾರ್ಯ-ಕಾರಣಭಾವದಿಂದಿರುವ ಪ್ರಕೃತಿತತ್ತ್ವಕ್ಕೆ ಸತ್-ಅಸತ್ ಎಂದು ಹೆಸರು. ನಾಮ-ರೂಪವಿಭಾಗ ಹೊಂದಿರುವುದರಿಂದ ಕಾರ್ಯಾವಸ್ಥೆಯಲ್ಲಿರುವ ಪ್ರಕೃತಿಗೆ **ಸತ್** ಎಂದು ಹೆಸರು. ಆ ವಿಭಾಗವಿಲ್ಲದೇ ಕಾರಣಾವಸ್ಥೆಯಲ್ಲಿರುವ ಅವ್ಯಾಕೃತಿಗೆ **ಅಸತ್**

ಎಂದು ಹೆಸರು. ಈ ಸತ್ ಮತ್ತು ಅಸದ್ರೂಪವಾದ ಪ್ರಕೃತಿಗಿಂತಲೂ ಪ್ರಕೃತಿಸಂಬಂಧಿಯಾದ ಜೀವಾತ್ಮನಿಗಿಂತಲೂ ಬೇರೆಯಾಗಿರುವ ಯಾವ ಮುಕ್ತಾತ್ಮತತ್ತ್ವವುಂಟೋ ಅದೂ ನೀನೇ ಆಗಿದ್ದೀಯೆ. ಅವೆಲ್ಲವೂ ನಿನ್ನ ಶರೀರಭೂತವಾದುವುಗಳು. (ರಾ. ಭಾ.)

**ಮಹಾತ್ಮಾ** ಎಂದರೆ ಪೂರ್ಣನಾದ ಆತ್ಮನು. **ಪೂರ್ಣಶ್ಚಾಸೌ ಆತ್ಮೇತಿ = ಮಹಾತ್ಮಾ .** ಆತ್ಮಶಬ್ದಕ್ಕೆ ಭಾರತವು ಹೀಗೆ ವ್ಯುತ್ಪತ್ತಿಯನ್ನು ಹೇಳುತ್ತದೆ :

**ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ ।**
**ಯಚ್ಚಾಸ್ಯ ಸಂತತೋ ಭಾವಃ ತಸ್ಮಾದಾತ್ಮೇತಿ ಭಣ್ಯತೇ ॥**

ವ್ಯಾಪಿಸಿರುವುದರಿಂದ, ಸ್ವೀಕರಿಸುವುದರಿಂದ, ವಿಷಯಗಳನ್ನು ಅನುಭವಿಸುವುದರಿಂದ ಮತ್ತು ನಿತ್ಯವಾದ ಸತ್ತೆಯನ್ನು ಹೊಂದಿರುವುದರಿಂದ ಆತ್ಮಾ ಎನಿಸುತ್ತಾನೆ. (ಮ. ಭಾ.)

ಆತ್ಮಾ ಎಂದರೆ ಜೀವವಲ್ಲ : **ಯಚ್ಚಾಸ್ಯ ಸಂತತೋ ಭಾವಃ** ಈ ದೇಹದಲ್ಲಿ ನಿನ್ನ ಸತ್ತೆಯನ್ನು ಹೊಂದಿರುವುದರಿಂದ.

**ತತ್ಪರಂ** = ಸತ್ ಮತ್ತು ಅಸತ್ತುಗಳಿಗೆ ಪರವಾಗಿರುವ.

**ಅಸಚ್ಚ ಸಚ್ಚೈವ ಚ ಯತ್ ವಿಶ್ವಂ ಸದಸತಃ ಪರಮ್ ।** (ಭಾಗವತ)

ಸದಸದ್ಭಾವಾತ್ಮಕವಾದ ವಿಶ್ವವು ನೀನೇ ಆಗಿದ್ದೀಯೆ. ಏಕೆಂದರೆ ಸತ್ತಾ ಮುಂತಾದುವುಗಳನ್ನು ಕೊಡುವವನು ನೀನೇ. ಸತ್ತಾ ಮುಂತಾದುವುಗಳನ್ನು ಕೊಡುವುದರಿಂದಲೇ ಅವನನ್ನು ಸದಸದ್ಭಾವಾತ್ಮಕವಾದ ವಿಶ್ವವೆಂದು ಕರೆದಿದೆ.
—ಜಯತೀರ್ಥರು.

**ಓಂ ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ॥೩೮॥**

ನೀನು ಆದಿದೇವನು. ಪುರಾಣಪುರುಷನು. ನೀನು ಈ ವಿಶ್ವಕ್ಕೇ

ಶ್ರೇಷ್ಠವಾದ ಆಶ್ರಯಸ್ಥಾನನಾಗಿರುವೆ. ನೀನು ಎಲ್ಲವನ್ನೂ ತಿಳಿದಿರತಕ್ಕವನು. ಎಲ್ಲರಿಂದಲೂ ತಿಳಿಯಲ್ಪಡತಕ್ಕವನೂ ಆಗಿರುವೆ. ನೀನು ಶ್ರೇಷ್ಠವಾದ ಪರಮಪದವು. ಅನಂತರೂಪನೇ! ನಿನ್ನಿಂದ ಈ ಪ್ರಪಂಚವು ವ್ಯಾಪ್ತವಾಗಿದೆ.

* * *

(ಮಹಾನುಭಾವ! ಕೃಷ್ಣ! ನೀನು ಆದಿದೇವನು. ಬ್ರಹ್ಮನಿಂದ ಮೊದಲ್ಗೊಂಡು ಅಖಂಡಬ್ರಹ್ಮಾಂಡವನ್ನೂ ಸೃಷ್ಟಿಸಿದವನು ನೀನೇ ಆಗಿರುವೆ. ನೀನು ಅನಾದಿ. ಎಲ್ಲಕ್ಕೂ ಆದಿಯಾಗಿರುವ ಪ್ರಭುವಾದುದರಿಂದ ನೀನು ಆದಿದೇವನೆನಿಸಿಕೊಂಡಿರುವೆ. ಶರೀರವೆಂಬ ಪುರದಲ್ಲಿ ಇರುವುದರಿಂದಲೂ ಪೂರ್ಣನಾಗಿರುವುದರಿಂದಲೂ ನೀನು ಪುರುಷನು (**ಪುರಿ ಶಯನಾತ್ ಪುರುಷಃ**) ಪುರಾಣನು ; ಚಿರಂತನನು ; ಸನಾತನನು. ಬಹಳ ಹಳೆಯವನು. ಪ್ರಪಂಚಕ್ಕೇ ಶ್ರೇಷ್ಠವಾದ ಆಶ್ರಯಸ್ಥಾನವಾಗಿರುವೆ. ಮಹಾಪ್ರಳಯಕಾಲದಲ್ಲಿಯೂ ಸಹ ಈ ವಿಶ್ವವು ಬೀಜರೂಪವಾಗಿ ನಿನ್ನಲ್ಲಿಯೇ ಇದ್ದುಬಿಡುತ್ತದೆ. **ವೇತ್ತಾಸಿ** = ನೀನು ತಿಳಿದವನಾಗಿದ್ದೀಯೆ. ಸರ್ವಜ್ಞನು. **ವೇದ್ಯಂ** = ತಿಳಿಯಬೇಕಾದುದು ಯಾವುದೋ ಅದೂ ನೀನೇ ಆಗಿರುವೆ. **ಪರಂ ಚ ಧಾಮ** = ಶ್ರೇಷ್ಠವಾದ ಸ್ಥಾನವು ನೀನು. ವಿಷ್ಣುವಿನ ಪರಮಪದವೇ ನೀನು. **ಧಾಮ** ಎಂದರೆ ಸ್ಥಾನ, ತೇಜಸ್ಸು, ಪ್ರಭಾವ, ಮನೆ–ಇಷ್ಟು ಅರ್ಥಗಳೂ ಆಗಬಹುದು.)

ಅನಂತರೂಪನೇ! ಅನೇಕಾನೇಕರೂಪಗಳನ್ನು ಧರಿಸಿರತಕ್ಕವನೇ! ನಿನ್ನಿಂದ ಈ ಪ್ರಪಂಚವು ವ್ಯಾಪ್ತವಾಗಿದೆ. ವಿಶ್ವವೆಲ್ಲವೂ ವಿಷ್ಣುಮಯ.)

O O O

**ಧಾಮ** = ಪರಮಪದವಾದ ವೈಷ್ಣವಪದ. **ಪರಂ ನಿಧಾನಂ** = ಮಹಾಪ್ರಳಯ ಮುಂತಾದುವುಗಳಲ್ಲಿಯೂ ಇಡೀ ಜಗತ್ತೇ ನಿನ್ನಲ್ಲಿ ಇರುವುದು.

(ಶಂ. ಭಾ.)

ಸದಸದ್ರೂಪವಾದ ಪ್ರಕೃತಿ ; ಪ್ರಕೃತಿಸಂಬಂಧಿಯಾದ ಜೀವ ; ಮತ್ತು ಮುಕ್ತಾತ್ಮತತ್ತ್ವ–ಎಲ್ಲವೂ ನೀನೇ ಆಗಿದ್ದೀಯೆ. ಆದುದರಿಂದ ನೀನೇ ಆದಿದೇವನು. ಶರೀರಭೂತವಾಗಿರುವ ಈ ವಿಶ್ವಕ್ಕೆ ಆತ್ಮನಾಗಿರುವುದರಿಂದ ವಿಶ್ವಕ್ಕೆ ಪರಮಾಧಾರನೂ ನೀನೇ. ವಿಶ್ವಂ = ಚಿದಚಿನ್ಮಿಶ್ರವಾದ ಜಗತ್ತು.

ಈ ಜಗತ್ತು ಅನಂತರೂಪನಾದ ನಿನ್ನಿಂದಲೇ ವ್ಯಾಪಿಸಲ್ಪಟ್ಟಿದೆ. ಆದುದರಿಂದ ವಾಯು, ಯಮ–ಮುಂತಾದ ಶಬ್ದಗಳಿಂದ ವಾಚ್ಯನಾದವನೂ ನೀನೇ.

(ರಾ. ಭಾ.)

ಓಂ ವಾಯುರ್ಯಮೋಽಗ್ನಿರ್ವರುಣಃ ಶಶಾಙ್ಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥೩೯॥

ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ ಮತ್ತು ಪ್ರಪಿತಾಮಹ–ಇವರೆಲ್ಲರೂ ನೀನೇ. ನಿನಗೆ ನಮಸ್ಕಾರ. ಮತ್ತೆ ಮತ್ತೆ ನಮಸ್ಕಾರ ; ಸಾವಿರಾರು ಬಾರಿ ನಮಸ್ಕಾರವಿರಲಿ. ಮತ್ತೂ ಇನ್ನೊಮ್ಮೆ ನಮಸ್ಕಾರ. ನಿನಗೆ ನಮಸ್ಕಾರ.

* * *

(ದೇವೇಶ! ಸರ್ವವ್ಯಾಪಕನಾದ ವಾಯುವೂ ನೀನೇ. ಪ್ರಾಣಿಗಳನ್ನು ನಿಯಂತ್ರಿಸುವ ಯಮನೂ ನೀನೇ. ಯಜ್ಞಮುಖನಾದ ಅಗ್ನಿಯೂ ನೀನೇ. ಜಲಾಧಿಪತಿಯೂ, ಜಗತ್ತಿನ ಸತ್ಯಾನೃತಗಳಿಗೆ ಸಾಕ್ಷಿಯೂ, ರಾತ್ರಿಗೆ ಮತ್ತು ಅಪಾನವೃತ್ತಿಗೆ ಅಧಿದೇವತೆಯೂ, ನೀತಿ-ನಿಯಮಗಳ ರಾಜನೂ ಆದ ವರುಣನೂ ನೀನೇ ಆಗಿರುವೆ. ಓಷಧಿಗಳ ಒಡೆಯನಾದ ಆಹ್ಲಾದಕರನಾದ ಚಂದ್ರನೂ ನೀನೇ. ಕಶ್ಯಪಾದಿ ಪ್ರಜಾಪತಿಯೂ ನೀನೇ ಆಗಿರುವೆ. ನೀನು ಪಿತಾಮಹನಾದ ಬ್ರಹ್ಮನಿಗೂ ತಂದೆಯಾಗಿ ಪ್ರಪಿತಾಮಹನೆನಿಸಿಕೊಂಡಿದ್ದೀಯೆ. ಸಕಲಜಗತ್ತನ್ನೂ ಇಚ್ಛಾಮಾತ್ರದಿಂದ ಸೃಷ್ಟಿಸಿದ ಕಾರಣ ನೀನು ಪ್ರಪಿತಾಮಹ ; ನಿನಗೆ ನಮಸ್ಕಾರಮಾಡುತ್ತೇನೆ. ಸರ್ವವಿಭೂತಿಸಹಿತನಾದ ನಿನಗೆ ಸಾವಿರಾರು ಬಾರಿ ನಾನು ನಮಸ್ಕಾರಮಾಡುತ್ತೇನೆ. ಪುನಃ ಪುನಃ ನಮಸ್ಕರಿಸುತ್ತೇನೆ. ನಿನಗೆ ಎಷ್ಟು ನಮಸ್ಕಾರಮಾಡಿದರೂ ನನಗೆ ತೃಪ್ತಿಯೆಂಬುದೇ ಇಲ್ಲ. ಸರ್ವದಾ ನಮಸ್ಕಾರಮಾಡುತ್ತಲೇ ಇರಬೇಕು ಎನ್ನಿಸುತ್ತದೆ.)

O O O

ಪುನಶ್ಚ, ಭೂಯಃ, ಅಪಿ–ಎಂಬ ಶಬ್ದಗಳು ಶ್ರದ್ಧೆ ಮತ್ತು ಭಕ್ತಿ

ಇವುಗಳ ಅತಿಶಯದಿಂದ ಭಗವಂತನಿಗೆ ಎಷ್ಟೆಷ್ಟು ನಮಸ್ಕರಿಸಿದರೂ ಅರ್ಜುನನಿಗೆ ತೃಪ್ತಿಯಿಲ್ಲ–ಎಂಬುದನ್ನು ಸೂಚಿಸುತ್ತವೆ. (ಶಂ. ಭಾ.)

ಪ್ರಜಾಪತಿಃ = ಎಲ್ಲ ಪ್ರಜೆಗಳಿಗೂ ತಂದೆಗಳಂತೆ ಇರುವ ದಕ್ಷ ಮುಂತಾದವರು. ಪಿತಾಮಹಃ = ಪ್ರಜಾಪತಿಗಳಿಗೆ ತಂದೆಯಾದ ಹಿರಣ್ಯ ಗರ್ಭ. ಪ್ರಪಿತಾಮಹಃ = ಹಿರಣ್ಯಗರ್ಭನಿಗೂ ತಂದೆಯಾದವನು. ಪಿತಾಮಹ ಮುಂತಾದವರೆಲ್ಲರಿಗೂ ನೀನು ಆತ್ಮನಾಗಿರುವುದರಿಂದ ಆ ಶಬ್ದಗಳೆಲ್ಲವೂ ನಿನಗೇ ವಾಚಕಗಳಾಗಿವೆ.

ಅತ್ಯದ್ಭುತಾಕಾರವುಳ್ಳ ಭಗವಂತನನ್ನು ಕಂಡು ಹರ್ಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ಅತ್ಯಂತಭಯ-ಭಕ್ತಿಗಳಿಂದ ನಮ್ರನಾಗಿ ಎಲ್ಲ ಕಡೆ ಗಳಿಂದಲೂ ಅವನಿಗೆ ನಮಸ್ಕಾರಮಾಡುತ್ತಾನೆ. ಪುನಃ ಪುನಃ ನಮಸ್ಕಾರಕ್ಕೆ ಕಾರಣ : ವಿಶ್ವರೂಪದರ್ಶನದಿಂದ ಪ್ರಕಟಿತವಾದ ಅವನ ಪರತ್ವ ಮತ್ತು ಸೌಲಭ್ಯಗಳ ಅನುಭವದಿಂದ ಉಂಟಾಗಿರುವ ಭಯ ಮತ್ತು ಹರ್ಷಗಳು.

(ರಾ. ಭಾ.)

**ಓಂ ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನನ್ತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥೪೦॥**

ಸರ್ವನೇ! ನಿನಗೆ ಮುಂದೆಯೂ ನಮಸ್ಕಾರ ಮತ್ತು ಹಿಂದೆಯೂ ನಮಸ್ಕಾರ. ಎಲ್ಲ ಕಡೆಗಳಿಂದಲೂ ನಿನಗೆ ನಮಸ್ಕಾರವಿರಲಿ. ನೀನು ಅನಂತವೀರ್ಯನು. ಅಮಿತವಿಕ್ರಮನು. ಸರ್ವವನ್ನೂ ಚೆನ್ನಾಗಿ ವ್ಯಾಪಿಸಿ ಕೊಂಡಿರುವೆ. ಆದುದರಿಂದ ಸರ್ವನೆನಿಸಿದ್ದೀಯೆ.

* * *

(ಸರ್ವನೇ! ನಿನ್ನ ಮುಂಭಾಗದಲ್ಲೂ ನಮಸ್ಕಾರಮಾಡುತ್ತೇನೆ. ನಿನ್ನ ಹಿಂಭಾಗದಲ್ಲೂ ನಮಸ್ಕಾರಮಾಡುತ್ತೇನೆ. ಇಷ್ಟು ಮಾತ್ರವಲ್ಲದೇ ಎಲ್ಲ ಕಡೆ ಗಳಿಂದಲೂ ನಿನಗೆ ನಮಸ್ಕಾರಮಾಡುತ್ತೇನೆ. ನೀನು ಅನಂತವೀರ್ಯನೂ ಆಗಿರುವೆ ; ಅಮಿತವಿಕ್ರಮನೂ (ಪರಾಕ್ರಮಿಯೂ) ಆಗಿರುವೆ. ಒಬ್ಬನಲ್ಲಿ

ವೀರ್ಯವಿರಬಹುದು. ಶತ್ರುವನ್ನು ಎದುರಿಸುವಷ್ಟು ಶಕ್ತಿಯಿರಬಹುದು. ಆದರೆ ಎದುರಿಸದೆಯೇ ಇರಬಹುದು. ಶತ್ರುವನ್ನು ಎದುರಿಸಿ ನಿಲ್ಲುವುದೇ ಪರಾಕ್ರಮ. ವಿಕ್ರಮ ಅಥವಾ ಪರಾಕ್ರಮವಿದ್ದವನೇ ಶತ್ರುಗಳನ್ನು ಎದುರಿಸಿ ನಿಲ್ಲಲು ಸಮರ್ಥನು. ಕೇವಲ ವೀರ್ಯಾತಿಶಯದಿಂದ ಸಾಧ್ಯವಾಗುವುದಿಲ್ಲ. ನೀನಾದರೋ ವೀರ್ಯಾತಿಶಯಯುಕ್ತನೂ, ಅಮಿತವಿಕ್ರಮನೂ ಆಗಿರುವೆ. ನಿನ್ನನ್ನು ನಾನು ಸರ್ವ ಎಂದು ಕರೆದಿದ್ದೇನೆ. ಅದಕ್ಕೆ ಕಾರಣವನ್ನೂ ಹೇಳಿಬಿಡುತ್ತೇನೆ. ನೀನು ಸರ್ವಜಗತ್ತನ್ನೂ ಏಕಾತ್ಮಭಾವದಿಂದ ವ್ಯಾಪಿಸಿಬಿಟ್ಟಿರುವೆ ಅಥವಾ ನಿನ್ನದನ್ನಾಗಿ ಮಾಡಿಕೊಂಡುಬಿಟ್ಟಿರುವೆ. ನೀನೇ ಎಲ್ಲವೂ ಆಗಿರುವೆ. ಆದುದರಿಂದಲೇ ನೀನು ಸರ್ವನು.)

O O O

ವೀರ್ಯಂ = ಸಾಮರ್ಥ್ಯ, ವಿಕ್ರಮ, ಪರಾಕ್ರಮಗಳು. ವೀರ್ಯವಂತನೂ ಕೂಡ ಶಸ್ತ್ರಾದಿಪ್ರಯೋಗದ ವಿಷಯದಲ್ಲಿ ಪರಾಕ್ರಮವಿಲ್ಲದೇ ಇರಬಹುದು. ಅಲ್ಪಪರಾಕ್ರಮಿಯೂ ಆಗಿರಬಹುದು. ಆದರೆ ನೀನು ಎಲ್ಲೆಯಿಲ್ಲದ ವೀರ್ಯ ಮತ್ತು ಅಳತೆಗೆ ಸಿಕ್ಕದ ಪರಾಕ್ರಮವುಳ್ಳವನು. ಸರ್ವಃ = ಎಲ್ಲ ಜಗತ್ತನ್ನೂ ನಿನ್ನ ಏಕಸ್ವರೂಪದಿಂದ ವ್ಯಾಪಿಸಿರುವುದರಿಂದ ನೀನು ಸರ್ವನು. ನಿನಗಿಂತಲೂ ಅತಿರಿಕ್ತವಾದುದು ಯಾವುದೂ ಇಲ್ಲ. (ಶಂ. ಭಾ.)

ಅಪರಿಮಿತವಾದ ವೀರ್ಯಪರಾಕ್ರಮವುಳ್ಳವನಾದ ನೀನು ಸರ್ವಕ್ಕೂ ಆತ್ಮವಾಗಿ ಸರ್ವವನ್ನೂ ವ್ಯಾಪಿಸಿರುವುದರಿಂದ ಸರ್ವನೂ ಆಗಿದ್ದೀಯೆ. ನೀನು ಚಿದಚಿದ್ವಸ್ತುಗಳೆಲ್ಲವನ್ನೂ ಅವುಗಳಲ್ಲಿ ಆತ್ಮವಾಗಿ ವ್ಯಾಪಿಸಿದ್ದೀಯೆ. ಸರ್ವ ಚಿದಚಿದ್ವಸ್ತುಗಳೂ ನಿನಗೆ ಶರೀರವಾಗಿ ನಿನ್ನ ಪ್ರಕಾರಗಳಾಗಿರುವುದರಿಂದ ಸರ್ವಪ್ರಕಾರನಾಗಿರುವ ನೀನೇ 'ಸರ್ವ' ಎಂಬ ಶಬ್ದದಿಂದ ಕರೆಯಲ್ಪಡಲು ಯೋಗ್ಯನು. (ರಾ. ಭಾ.)

ಓಂ ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥೪೧॥

**ಓಂ ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥೪೨॥**

ಈ ನಿನ್ನ ಮಹಿಮೆಯನ್ನು ಅರಿಯದೆ ನೀನು ನನ್ನ ಸ್ನೇಹಿತನೆಂದು ಭಾವಿಸಿ–'ಎಲೋ ಕೃಷ್ಣ! ಎಲೋ ಯಾದವ! ಎಲೋ ಗೆಳೆಯ!'–ಎಂದು ಮೊದಲಾಗಿ ದಿಟ್ಟತನದಿಂದ, ಪ್ರಮಾದದಿಂದ ಅಥವಾ ಪ್ರೀತಿಯಿಂದ ಏನು ಹೇಳಿರುವೆನೋ–ವಿಹಾರ, ಶಯ್ಯೆ, ಆಸನ, ಭೋಜನ ಇವುಗಳಲ್ಲಿ ಪರಿಹಾಸಕ್ಕಾಗಿ ನೀನು ಒಬ್ಬನೇ ಇರುವಾಗ ಅಥವಾ ಮತ್ತೊಬ್ಬರೆದುರಿನಲ್ಲಿ ಏನು ಅಸತ್ಕಾರಮಾಡಿದೆನೋ–ಅದನ್ನು ಕ್ಷಮಿಸಬೇಕೆಂದು ಅಪ್ರಮೇಯನಾದ ನಿನ್ನನ್ನು ಬೇಡಿಕೊಳ್ಳುತ್ತೇನೆ.

* * *

(ದೇವೇಶ! ನಿನ್ನನ್ನು ನಾನು ಇದುವರೆಗೂ ಕೇವಲ ಸ್ನೇಹಿತನೆಂದು ಭಾವಿಸಿಬಿಟ್ಟಿದ್ದೆನು. ನಿನ್ನ ಅನೇಕವಾದ ಅಮಾನುಷಕೃತ್ಯಗಳು ನನಗೆ ತಿಳಿದಿತ್ತಾದರೂ ಈ ನಿನ್ನ ಸರ್ವೇಶ್ವರತ್ವ ಮತ್ತು ಯೋಗೈಶ್ವರ್ಯಗಳು ನನ್ನ ಅನುಭವಕ್ಕೆ ಬಂದಿರಲಿಲ್ಲ.

ದಿಟ್ಟತನದಿಂದ ನಾನು ನಿನ್ನನ್ನು 'ಎಲ್ಲವೋ ಕೃಷ್ಣ! ಹೋಗೋ ಬಾರೋ'–ಎನ್ನುತ್ತಿದ್ದೆ. ಇಷ್ಟು ಮಾತ್ರವಲ್ಲ ; ಆಟವಾಡುವಾಗ, ಮಲಗುವಾಗ, ಎಲ್ಲಿಯಾದರೂ ಕುಳಿತುಕೊಂಡಿದ್ದಾಗ, ಭೋಜನಮಾಡುವ ಸಮಯದಲ್ಲಿ ನಾನು ಅಸಾವಧಾನತೆಯಿಂದಲೋ, ಪ್ರೀತಿಯಿಂದಲೋ, ನಿನ್ನ ಪ್ರತ್ಯಕ್ಷದಲ್ಲಿಯೋ ಅಥವಾ ಪರೋಕ್ಷದಲ್ಲಿಯೋ, ನೀನೊಬ್ಬನೇ ಇರುವಾಗಲೋ, ಅಥವಾ ಯಾರಾದರೂ ಇದ್ದಾಗಲೋ–ನಾನು ಹಾಸ್ಯಕ್ಕಾಗಿ ನಿನಗೆ ಅಪಚಾರವನ್ನೆಸಗಿರಬಹುದು. ನಿನ್ನೊಡನೆ ನನಗಿದ್ದ ಸಲಿಗೆಯಲ್ಲಿ ಏನು ಮಾಡಿದೆನು ; ಏನು ಬಿಟ್ಟೆನು-ಎಂದು ಹೇಳುವುದಕ್ಕಾಗುವುದಿಲ್ಲ. ನಾನು ನೀನಾರೆಂಬುದನ್ನು ತಿಳಿಯದೇ ಸಲಿಗೆ ಮುಂತಾದ ಕಾರಣಗಳಿಂದ ತಿಳಿದೋ-ತಿಳಿಯದೆಯೋ

ಅನೇಕ ಅಪರಾಧಗಳನ್ನು ಮಾಡಿರಬಹುದು. ಅಂತಹ ಅಪರಾಧಗಳೆಲ್ಲವನ್ನೂ ಅಪ್ರಮೇಯನಾದ ನೀನು ಕ್ಷಮಿಸಿಬಿಡಬೇಕೆಂದು ಕೇಳಿಕೊಳ್ಳುತ್ತೇನೆ.

ಅರ್ಜುನನೇ ಭಾಗವತದಲ್ಲಿ ಒಂದು ಕಡೆ ಹೀಗೆ ಹೇಳಿದ್ದಾನೆ :

**ಶಯ್ಯಾಸನಾಟನವಿಕತ್ಥನಭೋಜನಾದಿ-**
**ಷ್ವೈಕ್ಯಾದ್ವಯಸ್ಯ ಋತವಾನಿತಿ ವಿಪ್ರಲಬ್ಧಃ ।**
**ಸಖ್ಯುಃ ಸಖೇವ ಪಿತೃವತ್ತನಯಸ್ಯ ಸರ್ವಂ**
**ಸೇಹೇ ಮಹಾನ್ಮಹಿತಯಾ ಕುಮತೇರಘಂ ಮೇ ॥**

ಭಾಗವತ ೧-೧೫-೧೯

ಭಗವಾನ್ ಶ್ರೀಕೃಷ್ಣನೊಡನೆ ಮಲಗುವಾಗ, ಕುಳಿತಾಗ, ತಿರುಗಾಡುವಾಗ, ಹರಟೆಹೊಡೆಯುವಾಗ, ಭೋಜನಮಾಡುವಾಗ–ಅವನು ಭಗವಂತನೆಂಬುದನ್ನು ಗಣನೆಗೇ ತೆಗೆದುಕೊಳ್ಳದೇ ಆಪ್ತಮಿತ್ರನೆಂದು ಮಾತ್ರವೇ ಭಾವಿಸಿ ಆಗಿಂದಾಗ್ಗೆ ಅವನೊಡನೆ–'ಎಲವೋ ಕೃಷ್ಣ! ನೀನು ನಿಜಹೇಳುವ ಮನುಷ್ಯನೇ ಆಗಿಬಿಟ್ಟಿರುವೆ'–ಎಂದು ಹೇಳುತ್ತಿದ್ದೆನು. ಹೀಗೆ ಹೇಳಿದರೂ ಸಹ ಮಹಾತ್ಮನಾದ, ಪ್ರಭುವಾದ, ದಯಾಮಯನಾದ ಅವನು ಕುಬುದ್ಧಿಯಾದ ನಾನು ಮಾಡಿದ ಈ ಆರೋಪವನ್ನು ಮಗನ ತಪ್ಪನ್ನು ತಂದೆಯು ಸಹಿಸಿಕೊಳ್ಳುವಂತೆ ಅಥವಾ ಒಬ್ಬನು ತನ್ನ ಮಿತ್ರನು ಮಾಡಿದ ಅಪರಾಧವನ್ನು ಸಹಿಸಿಕೊಳ್ಳುವಂತೆ–ಸಹಿಸಿಕೊಳ್ಳುತ್ತಿದ್ದನು.)

o o o

**ಪ್ರಮಾದಾತ್** = ವಿಕ್ಷಿಪ್ತಚಿತ್ತನಾಗಿರುವುದರಿಂದ. **ಪ್ರಣಯೇನ** = ಪ್ರಣಯ ಎಂದರೆ ಸ್ನೇಹನಿಮಿತ್ತವಾದ ವಿಶ್ವಾಸ. **ಪ್ರಸಭಂ** = ತಿರಸ್ಕಾರದಿಂದ, ಅಪಮಾನಪೂರ್ವಕವಾದ ಹಠದಿಂದ. (ಶಂ. ಭಾ.)

**ಪ್ರಸಭಂ** = ವಿನಯರಹಿತನಾಗಿ. **ಪ್ರಮಾದಾತ್** = ಮೋಹದಿಂದ. **ಪ್ರಣಯೇನ** = ಚಿರಪರಿಚಯದಿಂದ. (ರಾ. ಭಾ.)

**ಏಕೋಽಥವಾ** = ನೀನೇ ಕಾರಯಿತೃ. (ಕೆಲಸ ಮಾಡಿಸುವವನು.) ಕಾರಯಿತೃ ಬೇರೊಬ್ಬನೂ ಇಲ್ಲ. ಹೀಗೆ ನೀನು ಅತ್ಯಂತಸತ್ಕಾರಾರ್ಹನಾಗಿದ್ದರೂ ಕೂಡ ನಿನಗೆ ನಾನು ಸತ್ಕಾರವನ್ನು ಮಾಡಿಲ್ಲ. ( ಏಕಃ ಎಂಬಲ್ಲಿ

ಏ ಎಂಬುದು ಏಕತ್ವವನ್ನು ಹೇಳುತ್ತದೆ. **ಕಃ** ಎಂಬುದು **ಕಾರಯಿತ್ವ** ಎಂಬುದನ್ನು ಹೇಳುತ್ತದೆ. (ಮ. ಭಾ.)

**ಓಂ ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥೪೩॥**

ಈ ಚರಾಚರಕ್ಕೆ ನೀನು ತಂದೆಯಾಗಿರುವೆ. ಪೂಜ್ಯನೂ ಮಹಾನ್ ಗುರುವೂ ಆಗಿರುವೆ. ಎಣೆಯಿಲ್ಲದ ಪ್ರಭಾವವುಳ್ಳವನೇ! ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಾದವನೇ ಇಲ್ಲ. ಇನ್ನು ನಿನಗಿಂತ ಹೆಚ್ಚಿನವನು ಎಲ್ಲಿದ್ದಾನು?

* * *

(ಅಪ್ರತಿಮಪ್ರಭಾವನೇ! ಮಿಗಿಲಿಲ್ಲದ ಪ್ರಭಾವವುಳ್ಳವನೇ! ಸ್ಥಾವರ-ಜಂಗಮರೂಪವಾದ ಈ ಲೋಕಕ್ಕೇ ನೀನು ತಂದೆಯಾಗಿರುವೆ. ನಿನ್ನಿಂದಲೇ ಸ್ಥಾವರ-ಜಂಗಮಾತ್ಮಕವಾದ ಈ ಲೋಕವು ಹುಟ್ಟಿದೆ. ತಂದೆಯು ಮಕ್ಕಳಿಗೆ ಪೂಜ್ಯನಾಗಿರುವಂತೆ ನೀನು ಸ್ಥಾವರ-ಜಂಗಮಗಳಿಗೆ ಪೂಜ್ಯನಾಗಿರುವೆ. ಕಾರಣವೇನೆಂದರೆ : ನೀನು ಮಹಾಮಹಿಮನಾದ ಗುರು ; ಗುರುತರನಾದವನು ; ಅಮಿತಪ್ರಭಾವನು ; ಅಮಿತವಿಕ್ರಮನು ; ಅಮಿತವೀರ್ಯನು ; ಬಹಳ ದೊಡ್ಡವನು–ಇಷ್ಟುಮಾತ್ರ ಹೇಳಿ ಸುಮ್ಮನಾಗಬೇಕೇ ಹೊರತು ನಿನ್ನ ದೊಡ್ಡತನವನ್ನು ಮಾತುಗಳಿಂದ ವರ್ಣಿಸಲು ಸಾಧ್ಯತೆಯಿಲ್ಲ. ಆದುದರಿಂದಲೇ ನೀನು **'ಗರೀಯಾನ್ ಗುರುಃ.'** (**ಗುರುಃ** ಎಂದರೆ ದೊಡ್ಡವನು ಎಂದು ಅರ್ಥವಾಗುತ್ತದೆ. **ಗರೀಯಾನ್ ಗುರುಃ** ಎಂದರೆ ಬಹಳ ದೊಡ್ಡವನಾದ ಗುರು, ಬಹಳ ಘನತೆಯುಳ್ಳ ಗುರು.)

ಈ ಕಾರಣದಿಂದಲೇ ಈ ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಾದವನು ಯಾರೂ ಇಲ್ಲ. ಮಹಾನುಭಾವ! ಹೀಗಿರುವಾಗ ನಿನಗಿಂತಲೂ ಮಿಗಿಲಾದವನು ಯಾರೂ ಇಲ್ಲವೆಂಬುದನ್ನು ಹೇಳಬೇಕೆ? )

o o o

ನೀನು ಅತ್ಯಂತ ದೊಡ್ಡಗುರು. ನಿನಗೆ ಸಮಾನನಾದವನಿಲ್ಲ. ಏಕೆಂದರೆ:

ಇಬ್ಬರು ಈಶ್ವರರಿರಲು ಸಾಧ್ಯವಿಲ್ಲ. ಒಬ್ಬನಿಗಿಂತ ಹೆಚ್ಚು ಈಶ್ವರರಿದ್ದರೆ ವ್ಯವಹಾರವೇ ಸಿದ್ಧವಾಗುವುದಿಲ್ಲ. (ಶಂ. ಭಾ.)

**ಗರೀಯಾನ್**–ಪೂಜ್ಯತಮನು.

**ನ ತ್ವತ್ಸಮೋಽಸ್ತಿ ಲೋಕತ್ರಯೇಽಪಿ**= ಕಾರುಣ್ಯವೇ ಮುಂತಾದ ಯಾವುದೇ ಗುಣಗಳಿಂದಲೂ ನಿನಗೆ ಸಮನಾದವರು ಇಲ್ಲ. ಹೀಗಿರುವಾಗ ಸಕಲಕಲ್ಯಾಣಗುಣಗಳಿಂದ ಕೂಡಿರುವಿಕೆ, ಜಗತ್ತಿಗೆ ಕಾರಣನಾಗಿರುವಿಕೆ, ಮೋಕ್ಷಪ್ರದನಾಗಿರುವಿಕೆ–ಇವುಗಳಲ್ಲಿ ನಿನಗೆ ಸಮರು ಯಾರು? ನಿನಗಿಂತಲೂ ಅಧಿಕರಾದವರೂ ಯಾರೂ ಇಲ್ಲ. ನಿನಗೆ ಸಮರಾದವರು, ನೀನೇ ಆಗಿರುವವರು ಅಥವಾ ನಿನಗಿಂತಲೂ ಮಿಗಿಲಾದವರು–ಯಾರೂ ಇಲ್ಲ.
(ರಾ. ಭಾ.)

**ಓಂ ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥೪೪॥**

ಆದುದರಿಂದ ಶರೀರವನ್ನು ಬಗ್ಗಿಸಿ ಪ್ರಣಾಮಮಾಡಿ, ಸ್ತೋತ್ರಾರ್ಹನೂ ಈಶನೂ ಆಗಿರುವ ನಿನ್ನನ್ನು ಪ್ರಸನ್ನಗೊಳಿಸುತ್ತೇನೆ. ತಂದೆಯು–ಮಗನ, ಗೆಳೆಯನು–ಗೆಳೆಯನ, ಪ್ರಿಯನು–ನಲ್ಲೆಯ ಅಪರಾಧವನ್ನು ಸಹಿಸುವಂತೆ ನೀನು ಸಹಿಸಿಕೊಳ್ಳಬೇಕು.

* * *

(ದೇವ! ನೀನು ಸರ್ವಲೋಕಪೂಜ್ಯನಾಗಿರುವುದರಿಂದಲೂ, ಬಹಳ ದೊಡ್ಡ ಗುರುವಾಗಿರುವುದರಿಂದಲೂ, ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಾದವನು ಅಥವಾ ಮಿಗಿಲಾದವನು ಬೇರೊಬ್ಬನು ಇಲ್ಲದೇ ಇರುವುದರಿಂದಲೂ ನಾನು ನನ್ನ ಶರೀರವನ್ನು ಸಂಪೂರ್ಣವಾಗಿ ಬಗ್ಗಿಸಿ ನಮಸ್ಕಾರ ಮಾಡಿ, ಅಂಗಲಾಚಿ ಬೇಡಿಕೊಂಡು ನಿನ್ನನ್ನು ಪ್ರಸನ್ನನಾಗುವಂತೆ ಪ್ರಾರ್ಥಿಸುತ್ತೇನೆ. ಮಹಾನುಭಾವ! ನೀನು ಸರ್ವೇಶ್ವರನಾಗಿರುವೆ. ಸ್ತೋತ್ರಾರ್ಹನಾಗಿರುವೆ. ಸ್ತೋತ್ರಕ್ಕೆ ಅರ್ಹರಾದವರು ನಿನ್ನನ್ನು ಬಿಟ್ಟು ಬೇರೊಬ್ಬರಿಲ್ಲ. ಬ್ರಹ್ಮನೇ ಆದಿಯಾಗಿ ಸರ್ವದೇವತೆಗಳೂ ಸಹ ನಿನ್ನನ್ನೇ ದಿವ್ಯಸ್ತುತಿಗಳಿಂದ

ಸ್ತೋತ್ರಮಾಡುವರೆಂದಮೇಲೆ ಸ್ತೋತ್ರಾರ್ಹನೂ ಈಡ್ಯನೂ ಬೇರೆ ಯಾವ ನಿದ್ದಾನೆ?

ಸ್ತೋತ್ರ ಎಂದರೆ ಗುಣಶಾಲಿಯಲ್ಲಿರುವ ಗುಣವನ್ನು ಹೇಳುವುದು.

**ಗುಣಿನಿಷ್ಠಗುಣಾಭಿಧಾನಂ ಸ್ತುತಿಃ**

ಎಲ್ಲ ಕಲ್ಯಾಣಗುಣಗಳಿಗೂ ಆಕರನಾಗಿರುವುದರಿಂದ ಭಗವಂತ ನೊಬ್ಬನೇ ಗುಣಿ. ಅರ್ಥಸಂಕೋಚವಿಲ್ಲದೆ ಗುಣಕಥನಮಾಡಿಸಿಕೊಳ್ಳಲು ಅವನೊಬ್ಬನೇ ಯೋಗ್ಯನಾಗಿರುವುದರಿಂದ ಅವನೇ ಈಡ್ಯ. ಉಳಿದವರನ್ನು ಕುರಿತು ಮಾಡುವ ಸ್ತುತಿಯು ಕೆಲವೊಮ್ಮೆ ಮುಖಸ್ತುತಿಯಾಗುತ್ತದೆ. ನಿಜ ವಾದ ಗುಣದ ಸ್ತುತಿಯಾಗಿದ್ದರೂ ಭಗವಂತನ ಗುಣದ ಅವಶೇಷದ ಯೋಗ ದಿಂದ ಮಾತ್ರವೇ ಅವರಲ್ಲಿ ಅದು ಹೊಂದಿಕೆಯಾಗುತ್ತದೆ. ವಿಷ್ಣುಸಹಸ್ರ ನಾಮವು ಭಗವಂತನನ್ನು ಸ್ತವ್ಯಃ ಎಂದು ಕರೆಯುತ್ತದೆ.

ದೇವೇಶ! ನಾನು ಇದುವರೆಗೆ ಮಾಡಿದ ನನ್ನ ಎಲ್ಲ ಅಪರಾಧಗಳನ್ನೂ ನೀನು ಸಹಿಸಿಕೊಳ್ಳಬೇಕು ಅಥವಾ ಕ್ಷಮಿಸಿಬಿಡಬೇಕು.

ಹಿಂದೆ ೪೧ ಮತ್ತು ೪೨ನೆಯ ಶ್ಲೋಕಗಳಲ್ಲಿ ಅರ್ಜುನನು ಮೂರು ವಿಧವಾದ ಅಪರಾಧಗಳನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾನೆ. ಪ್ರಮಾದ, ಪ್ರಣಯ ಮತ್ತು ಅವಹಾಸ (ಹಾಸ್ಯ ಅಥವಾ ವಿನೋದ.) ಈ ಮೂರು ವಿಧದ ಅಪರಾಧಗಳನ್ನೂ ಕ್ಷಮಿಸಬೇಕೆಂದು ಸಾದೃಶ್ಯದ ಮೂಲಕವಾಗಿ ಅರ್ಜುನನಿಲ್ಲಿ ಹೇಳುತ್ತಾನೆ.

ಮಗನು ಪ್ರಮಾದದಿಂದ ತಪ್ಪುಮಾಡಿದರೆ ತಂದೆಯಾದವನು ಕ್ಷಮಿಸು ವಂತೆ–ಪ್ರಮಾದಮೂಲಕವಾದ ಅಪರಾಧವನ್ನು ನೀನು ಕ್ಷಮಿಸಬೇಕು. ಪ್ರಣಯಸಮಯದಲ್ಲಿ ಅಥವಾ ಪ್ರಣಯದ ಕಾರಣದಿಂದ ಹೆಂಡತಿಯಾದ ವಳು ಅಪರಾಧಮಾಡಿದರೆ ಗಂಡನಾದವನು ಕ್ಷಮಿಸುವಂತೆ–ಪ್ರಣಯ ಮೂಲಕವಾಗಿ ಮಾಡಿದ ನನ್ನ ಅಪರಾಧವನ್ನು ನೀನು ಕ್ಷಮಿಸಬೇಕು. ಹಾಸ್ಯ ಕ್ಕಾಗಿ ಅಥವಾ ವಿನೋದಕ್ಕಾಗಿ ಮಿತ್ರನೊಬ್ಬನು ಮಾಡುವ ಅಪರಾಧವನ್ನು ಅವನ ಮಿತ್ರನು ಕ್ಷಮಿಸುವಂತೆ–ನಾನು ಹಾಸ್ಯಕ್ಕಾಗಿ ಮಾಡಿರಬಹುದಾದ ಅಪರಾಧವನ್ನು ನೀನು ಕ್ಷಮಿಸಬೇಕು. ದಯಾಮಯನೇ! ನಾನು ಈ

ಮೂರು ವಿಧವಾದ ಅಪರಾಧಗಳನ್ನೂ ಮಾಡಿರಬಹುದು. ಅವುಗಳೆಲ್ಲವನ್ನೂ ನೀನು ಸಹಿಸಿಕೊಳ್ಳಬೇಕೆಂದು ಅಥವಾ ಕ್ಷಮಿಸಬೇಕೆಂದು ಸಾಷ್ಟಾಂಗ ನಮಸ್ಕಾರಮಾಡಿ ಬೇಡಿಕೊಳ್ಳುತ್ತೇನೆ. ಪ್ರಿಯಾಯಾಃ ಅರ್ಹಸಿ ಎಂದಿರಬೇಕಾಗಿದ್ದುದು ಆರ್ಷಪ್ರಯೋಗದಲ್ಲಿ ಪ್ರಿಯಾಯಾರ್ಹಸಿ ಎಂದಾಗಿದೆ.)

O O O

**ತಸ್ಮಾತ್** = ನೀನು ಎಲ್ಲರಿಗೂ ತಂದೆಯೂ, ಪೂಜ್ಯತಮನಾದ ಗುರುವೂ ಆಗಿ ಕಾರುಣ್ಯಾದಿ ಗುಣಗಳಿಂದಲೂ ಸರ್ವಾಧಿಕನಾಗಿರುವುದರಿಂದ. **ಪ್ರಿಯಃ ಪ್ರಿಯಾಯ** = ಪರಮಕಾರುಣಿಕನೂ ಪ್ರಿಯನೂ ಆದ ನೀನು ಪ್ರಿಯನಾದ ನನ್ನ ಎಲ್ಲ ಅಪರಾಧಗಳನ್ನೂ ಸಹಿಸಿಕೊಳ್ಳಬೇಕು.

ಮಗನಾಗಲೀ, ಗೆಳೆಯನಾಗಲೀ–ಅಪರಾಧಮಾಡಿದ್ದರೂ ಕೂಡ ಅವನು ನಮಸ್ಕರಿಸಿ ಬೇಡಿಕೊಂಡಾಗ ತಂದೆಯಾಗಲೀ ಗೆಳೆಯನಾಗಲೀ ಅವನಲ್ಲಿ ಪ್ರಸನ್ನನಾಗುವಂತೆ ಎಲ್ಲ ಅಪರಾಧಗಳನ್ನೂ ಸಹಿಸಿಕೊಳ್ಳಬೇಕು.

ಪ್ರಿಯಃ ಪ್ರಿಯಾಯ ಸೋಢುಂ ಅರ್ಹಸಿ (ರಾ. ಭಾ.)

**ಓಂ ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥೪೫॥**

ಹಿಂದೆಂದೂ ನೋಡದ ರೂಪವನ್ನು ಕಂಡು ನಾನು ಸಂತುಷ್ಟನಾಗಿರುವೆನು. ಭಯದಿಂದಲೂ ನನ್ನ ಮನಸ್ಸು ಹೆಚ್ಚು ವ್ಯಥೆಗೊಂಡಿದೆ. ದೇವ! ಅದೇ ಹಿಂದಿನ ನಿನ್ನ ರೂಪವನ್ನೇ ನನಗೆ ತೋರಿಸು. ದೇವೇಶ! ಜಗನ್ನಿವಾಸ! ಪ್ರಸನ್ನನಾಗು.

* * *

(ದೇವ! ಇಂತಹ ವಿಶ್ವರೂಪದರ್ಶನವನ್ನು ನಾನು ಹಿಂದೆಂದೂ ಕಂಡೇ ಇರಲಿಲ್ಲ. ಇಂದು ಈ ವಿರಾಡ್ರೂಪವನ್ನು ಕಾಣುತ್ತಿರುವುದೂ ನನ್ನ ಸೌಭಾಗ್ಯವೇ ಸರಿ. ನನ್ನನ್ನು ಅನುಗ್ರಹಿಸುವ ಸಲುವಾಗಿಯೇ ನನಗೆ ನೀನು ಈ ದಿವ್ಯರೂಪವನ್ನು ತೋರಿಸಿರುವೆ. ಈ ವಿರಾಡ್ರೂಪವನ್ನು ನೋಡಿ ನಾನು

ಬಹಳ ಹರ್ಷಿತನಾಗಿದ್ದೇನೆ. ಸಂತೋಷಗೊಂಡಿದ್ದೇನೆ. ಆದರೆ ನಿನ್ನ ಅನೇಕಾನೇಕ ದಂಷ್ಟ್ರಾಕರಾಲವದನಗಳನ್ನೂ, ಆ ವದನಗಳಿಂದ ಹೊರಬರುತ್ತಿರುವ ಜಾಜ್ವಲ್ಯಮಾನವಾದ ಅಗ್ನಿಯನ್ನೂ ಮತ್ತು ನಿನ್ನ ಈ ಬಾಯಿಗಳೊಳಗೆ ಅನವರತವಾಗಿ ಧಾವಿಸುತ್ತಿರುವ ಯೋಧರನ್ನೂ ನೋಡಿ ನನಗೆ ಭಯವಾಗಿದೆ. ಭಯದಿಂದ ನನ್ನ ಮನಸ್ಸೂ ಸಹ ಬಹುವಾಗಿ ವ್ಯಥೆಗೊಂಡಿದೆ. (ಕಳವಳಗೊಂಡಿದೆ.) ಆದುದರಿಂದ ನಿನ್ನ ಹಿಂದಿನ ರೂಪವನ್ನೇ ನನಗೆ ಪುನಃ ತೋರಿಸು. ದೇವೇಶ! ದೇವತೆಗಳಿಗೆಲ್ಲಾ ಒಡೆಯನೇ! ಜಗನ್ನಿವಾಸ! ಜಗತ್ತಿಗೆಲ್ಲಾ ಆಶ್ರಯಸ್ಥಾನವಾಗಿರುವವನೇ! ಪ್ರಸನ್ನನಾಗು.

'ದೇವ! ಎಂದು ಸಂಬೋಧಿಸಿ **ತದೇವ ರೂಪಂ** ಎಂದು ಹೇಳಿರುವುದರಿಂದ ವೈಕುಂಠಾಧಿಪತಿಯಾದ ಚತುರ್ಭುಜಗಳಿಂದ ಕೂಡಿರುವ ವಿಷ್ಣುರೂಪವನ್ನು ತೋರಿಸು'–ಎಂದು ಅರ್ಜುನನು ಹೇಳಿದನೆಂದು ಕೆಲವರು ವ್ಯಾಖ್ಯಾನಮಾಡಿರುತ್ತಾರೆ. **ದೇವರೂಪಂ** ಎಂದು ಪದವನ್ನು ಒಟ್ಟಾಗಿ ಮಾಡಿ ದೇವರೂಪವನ್ನು ಅರ್ಥಾತ್ ಮಹಾವಿಷ್ಣುವಿನ ರೂಪವನ್ನು ತೋರಿಸು ಎಂದು ಅರ್ಥಮಾಡಿರುತ್ತಾರೆ.)

o o o

**ಅದೃಷ್ಟಪೂರ್ವಂ....ಮನೋ ಮೇ**= ನಿನ್ನ ಈ ರೂಪವು ಹಿಂದೆ ಎಂದೂ ನನಗೆ ಕಂಡುಬರದಿರುವುದೂ, ಅತ್ಯದ್ಭುತವೂ ಮತ್ತು ಅತ್ಯುಗ್ರವೂ ಆಗಿರುವುದರಿಂದ ಅದನ್ನು ಕಂಡು ನನಗೆ ಹರ್ಷವೂ ಆಗುತ್ತಿದೆ. ಭಯದಿಂದಲೂ ಮನಸ್ಸು ವ್ಯಥೆಗೊಂಡಿದೆ. **ತದೇವ ರೂಪಂ**–ಅದೇ ನಿನ್ನ ಸುಪ್ರಸನ್ನವಾದ ರೂಪವನ್ನು. (ರಾ. ಭಾ.)

**ಓಂ ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥೪೬॥**

ಕಿರೀಟಧಾರಿಯೂ, ಗದಾಧರನೂ, ಚಕ್ರಹಸ್ತನೂ ಆಗಿ ಮೊದಲಿನ ಹಾಗೆಯೇ ಇರುವ ನಿನ್ನನ್ನು ನಾನು ನೋಡಲಿಚ್ಛಿಸಿದ್ದೇನೆ. ಸಹಸ್ರ

ಬಾಹುವೇ! ವಿಶ್ವಮೂರ್ತಿಯೇ! ಚತುರ್ಭುಜಗಳ ಅದೇ ರೂಪದಿಂದಲೇ ಕಾಣುವವನಾಗು.

*  *  *

(ಸಹಸ್ರಬಾಹೋ! ವಿಶ್ವಮೂರ್ತೇ! ನೀನು ಈ ವಿರಾಡ್ರೂಪವನ್ನು ದಯಮಾಡಿ ಉಪಸಂಹರಿಸು. ಕಿರೀಟಯುಕ್ತನಾಗಿರುವ, ಗದಾಧರನಾಗಿರುವ, ಚಕ್ರಪಾಣಿಯಾಗಿರುವ ಚತುರ್ಭುಜಯುಕ್ತವಾದ ಅದೇ ರೂಪದಿಂದ ಹಿಂದಿನಂತೆಯೇ ನಿನ್ನನ್ನು ನೋಡಲು ನಾನು ಇಚ್ಛಿಸಿದ್ದೇನೆ.

**ತಥೈವ** = ಪೂರ್ವದಂತೆ. **ತೇನೈವ ರೂಪೇಣ**= ವಸುದೇವಪುತ್ರ ರೂಪದಿಂದ–ಶ್ರೀಕೃಷ್ಣರೂಪದಿಂದ ಎಂಬುದಾಗಿ ಕೆಲವರು ವ್ಯಾಖ್ಯಾನಮಾಡಿರುತ್ತಾರೆ.

ಶ್ರೀಕೃಷ್ಣನು ಅನೇಕಸಮಯಗಳಲ್ಲಿ ಚತುರ್ಭುಜನಾಗಿಯೂ ಇದ್ದನೆಂಬುದೇನೋ ನಿಜ. ಗೀತೋಪದೇಶಕಾಲದಲ್ಲಿಯೂ ಅವನು ಚತುರ್ಭುಜನಾಗಿಯೇ ಇದ್ದನೆಂದು ಹಿರಿಯರ ಅಭಿಪ್ರಾಯವಾಗಿದೆ. ಆದರೆ ಶ್ರೀಕೃಷ್ಣನು ತಾನು ಮಾಡಿದ್ದ ಪ್ರತಿಜ್ಞೆಯಂತೆ ಶಸ್ತ್ರಪಾಣಿಯಾಗಿ ರಣರಂಗಕ್ಕೆ ಬಂದಿರಲಿಲ್ಲ. ಚಾವಟಿಯನ್ನು ಮಾತ್ರ ಹಿಡಿದು ಸಾರಥಿಯಾಗಿ ಅರ್ಜುನನ ರಥದ ಮೇಲೆ ಕುಳಿತಿದ್ದನು. ಹೀಗಿರುವಾಗ **ತಥೈವ** = ಹಿಂದಿನಂತೆ ಚಕ್ರ-ಗದಾಧರನಾಗಿ–ಎಂದು ಹೇಳುವ ಸಾಧ್ಯತೆಯಿಲ್ಲ. ಆದುದರಿಂದ **ತಥೈವ** ಎನ್ನುವುದಕ್ಕೆ ಶಂಖ-ಚಕ್ರ-ಗದಾಪಾಣಿಯಾದ ಭಗವಂತನ ವೈಷ್ಣವರೂಪವನ್ನು ಎಂದು ಅರ್ಥ. ವಿಶ್ವರೂಪದ ಹಿಂದೆ ಈ ವೈಷ್ಣವದೇವತಾರೂಪವನ್ನು ಭಗವಂತನು ಅರ್ಜುನನಿಗೆ ತೋರಿಸಿದನು ಎಂದೂ ಹೇಳಬಹುದು.

ಈ ನಿನ್ನ ವಿಶ್ವರೂಪದಲ್ಲಿ ಕಿರೀಟಧಾರಿಯೂ, ಗದಾಧರನೂ, ಚಕ್ರಹಸ್ತನೂ ಆಗಿರುವ ನಿನ್ನನ್ನು ನಾನು ಹಾಗೆಯೇ ಎಂದರೆ ಆಯುಧಗಳಿಲ್ಲದೇ ಸಾರಥ್ಯಮಾಡಿದ್ದ ಸಮಯದಲ್ಲಿ ಇದ್ದ ರೂಪದಲ್ಲಿಯೇ ಎಂದೂ ಅರ್ಥಮಾಡಬಹುದು. ಹಾಗೆಯೇ ವಿಶ್ವರೂಪವನ್ನು ತೋರಿಸಿದಾಗ ಸಹಸ್ರಬಾಹುವಾಗಿದ್ದ ನೀನು ನಿನ್ನ ಸಹಜವಾದ ಚತುರ್ಭುಜರೂಪವನ್ನು ತೋರಿಸು ಎಂದು ಉತ್ತರಾರ್ಧಕ್ಕೆ ಅರ್ಥಮಾಡಬಹುದು.)

O  O  O

ಹಿಂದಿನಂತೆ ಆ ನಿನ್ನ ವಸುದೇವಪುತ್ರರೂಪವಾದ ಚತುರ್ಭುಜರೂಪದಿಂದಲೇ ನೀನು ಕಾಣುವವನಾಗು. ವಿಶ್ವರೂಪವನ್ನು ಉಪಸಂಹಾರಮಾಡಿ ಆ ವಸುದೇವಪುತ್ರರೂಪದಿಂದಲೇ ದರ್ಶನಕೊಡು. (ಶಂ. ಭಾ.)

ಹಿಂದಿನಂತೆ ಕಿರೀಟಧರನಾಗಿ, ಗದಾಧರನಾಗಿ, ಚಕ್ರಹಸ್ತನಾಗಿ ನಿನ್ನನ್ನು ನೋಡಲು ಬಯಸುತ್ತೇನೆ. ಆದುದರಿಂದ ನಿನ್ನ ಆ ಪೂರ್ವಸಿದ್ಧವಾದ ಚತುರ್ಭುಜರೂಪದಿಂದಲೇ ಕೂಡಿರುವವನಾಗು. (ರಾ. ಭಾ.)

**ಶ್ರೀಭಗವಾನುವಾಚ :**

**ಓಂ ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನನ್ತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥೪೭॥**

ಶ್ರೀಭಗವಂತನು ಹೇಳುತ್ತಾನೆ :

ಅರ್ಜುನ! ಪ್ರಸನ್ನನಾದ ನನ್ನಿಂದ ತೇಜೋಮಯವಾಗಿಯೂ, ಅನಂತವಾಗಿಯೂ, ಆದ್ಯವಾಗಿಯೂ ಇರುವ ಶ್ರೇಷ್ಠವಾದ ವಿಶ್ವರೂಪವು ನನ್ನ ಯೋಗದಿಂದ ನಿನಗೆ ತೋರಿಸಲ್ಪಟ್ಟಿತು. ನನ್ನ ಈ ರೂಪವನ್ನು ನಿನ್ನ ಹೊರತು ಮತ್ತೊಬ್ಬನು ಹಿಂದೆ ಎಂದೂ ಕಂಡಿದ್ದಿಲ್ಲ.

* * *

(ಅರ್ಜುನ! **ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ**–ಎಂದು ಈ ನನ್ನ ಈಶ್ವರೀಯರೂಪವನ್ನು ತೋರಿಸುವಂತೆ ನನ್ನನ್ನು ಬಹುವಾಗಿ ಪ್ರಾರ್ಥಿಸಿದೆ. ನಾನು ನಿನ್ನ ವಿಷಯದಲ್ಲಿ ಪ್ರಸನ್ನನಾಗಿ ಪರಮಶ್ರೇಷ್ಠವಾದ ಈ ರೂಪವನ್ನು ಆತ್ಮಯೋಗದಿಂದ ನಿನಗೆ ತೋರಿಸಿದೆನು. ಈ ದಿವ್ಯರೂಪವನ್ನು ನೋಡಲು ನಿನಗೆ ದಿವ್ಯದೃಷ್ಟಿಯನ್ನೂ ಅನುಗ್ರಹಿಸಿದೆನು. ಅರ್ಜುನ! ನನ್ನ ಈ ಶರೀರವು ತೇಜೋಮಯವಾದುದು ; ತೇಜಃಪುಂಜಯುಕ್ತವಾದುದು. ಅನಂತವಾದುದು. ಎಲ್ಲಕ್ಕಿಂತಲೂ ಮೊದಲನೆಯದು. ಸರ್ವತ್ರ ವಿಸ್ತೃತವಾದುದು. ನಿನ್ನ ಹೊರತಾಗಿ ಬೇರೆಯವರಾರೂ ಇಂತಹ ವಿರಾಡ್ರೂಪವನ್ನು ಇದುವರೆಗೂ ನೋಡಿರುವುದಿಲ್ಲ.

ಕೌರವಸಭೆಯಲ್ಲಿಯೂ, ಭೀಷ್ಮ-ದ್ರೋಣಾದಿಗಳ ಸಮ್ಮುಖದಲ್ಲಿಯೂ ವಿಶ್ವರೂಪವನ್ನು ತೋರಿಸಿದನೆಂದು ಭಾರತದಲ್ಲಿ ಕಥೆಯಿದೆ. ಆದರೆ ಅದು ಬೇರೆಯ ರೀತಿಯದು.)

o o o

**ಆತ್ಮಯೋಗಾತ್** = ನನ್ನ ಐಶ್ವರ್ಯದ ಸಾಮರ್ಥ್ಯದಿಂದ. **ಪ್ರಸನ್ನೇನ ಮಯಾ = ಪ್ರಸಾದ** ಎಂದರೆ ಅನುಗ್ರಹಬುದ್ಧಿ. ಭಗವಂತನ ದರ್ಶನವು ಅವನ ಅನುಗ್ರಹವೆಂಬ ಉಪಾಯದಿಂದಲೇ ದೊರೆಯುವುದು.

**ತ್ವದನ್ಯೇನ** = ನಿನ್ನನ್ನು ಹೊರತು ನನ್ನ ಅನುಗ್ರಹದಿಂದ ರಹಿತನಾದ ಬೇರೊಬ್ಬನಿಂದ. (ಆನಂದಗಿರಿ)

**ಅನನ್ತಂ** = ಅಂತರಹಿತವಾದ. ಆದಿ-ಮಧ್ಯಗಳ ರಾಹಿತ್ಯವನ್ನೂ ಇಲ್ಲಿ ಸೂಚಿಸುತ್ತದೆ. **ಆತ್ಮಯೋಗಾತ್** = ನನ್ನ ಸತ್ಯಸಂಕಲ್ಪದ ಯೋಗದಿಂದ.

(ರಾ. ಭಾ.)

**ಓಂ ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥೪೮॥**

ಭಗವಂತನು ಮುಂದುವರಿದು ಹೇಳುತ್ತಾನೆ :

ಕುರುಪ್ರವೀರ! ವೇದಾಧ್ಯಯನ-ಯಜ್ಞ-ದಾನ–ಇವುಗಳಿಂದಾಗಲೀ, ಕ್ರಿಯೆಗಳಿಂದಾಗಲೀ, ಉಗ್ರವಾದ ತಪಸ್ಸುಗಳಿಂದಾಗಲೀ–ಈ ರೂಪವುಳ್ಳ ನನ್ನನ್ನು ಮನುಷ್ಯಲೋಕದಲ್ಲಿ ನಿನ್ನ ಹೊರತು ಮತ್ತೊಬ್ಬರು ನೋಡುವುದು ಶಕ್ಯವಿಲ್ಲ.

* * *

(ನಾಲ್ಕು ವೇದಗಳ ಅಧ್ಯಯನದಿಂದ ನನ್ನ ರೂಪವನ್ನು ನೋಡುವ ಸಾಧ್ಯತೆಯಿಲ್ಲ. ಯಜ್ಞಗಳ ಅಧ್ಯಯನದಿಂದ ಯಜ್ಞದ ವಿಷಯಗಳನ್ನು ತಿಳಿದುಕೊಂಡು ಶ್ರೌತವನ್ನು ಅಧ್ಯಯನಮಾಡಿ ಯಜ್ಞಾದಿಗಳನ್ನು ಆಚರಿಸುವುದರಿಂದಲೂ ಸಾಧ್ಯವಿಲ್ಲ. ಧನ, ಸಂಪತ್ತು, ಅನ್ನ, ಜಲ, ವಿದ್ಯೆ, ಗೋವು,

ಚಿನ್ನ, ಭೂಮಿ–ಇವೇ ಮುಂತಾದ ಮಹಾದಾನಗಳನ್ನು ಕೊಡುವುದರಿಂದಲೂ ನನ್ನ ಈ ರೂಪವನ್ನು ನೋಡಲು ಸಾಧ್ಯವಾಗುವುದಿಲ್ಲ. ಕ್ರಿಯೆಗಳು ಎಂದರೆ ಅಗ್ನಿಹೋತ್ರಾದಿ ಕರ್ಮಗಳು. ಅವುಗಳಿಂದಲೂ ನನ್ನನ್ನು ಈ ರೂಪದಿಂದ ನೋಡಲು ಸಾಧ್ಯವಾಗುವುದಿಲ್ಲ. ಉಗ್ರವಾದ ತಪಸ್ಸುಗಳೆಂದರೆ ಕೃಚ್ಛ್ರಚಾಂದ್ರಾಯಣಾದಿ ವ್ರತಗಳು, ವಿಧ-ವಿಧವಾದ ಕಠೋರನಿಯಮಗಳ ಪರಿಪಾಲನೆ–ಇವುಗಳಿಂದಲೂ ಸಹ ಈ ವಿಧವಾದ ನನ್ನ ರೂಪವನ್ನು ನೋಡಲು ಸಾಧ್ಯವಾಗುವುದಿಲ್ಲ. ಅನನ್ಯಭಕ್ತಿ, ಜ್ಞಾನ–ಇವುಗಳಿಲ್ಲದೇ ಅಧ್ಯಯನ, ಕರ್ಮ–ಮುಂತಾದುವುಗಳಿಂದಲೇ ಭಗವಂತನ ಪಾರಮಾರ್ಥಿಕ ಸ್ವರೂಪವು ದರ್ಶನಕ್ಕೆ ಬರುವುದಿಲ್ಲ.)

o o o

ನನ್ನ ರೂಪದರ್ಶನದಿಂದ ನೀನು ಕೃತಾರ್ಥನಾಗಿದ್ದೀಯೆ–ಎಂಬುದನ್ನು ಇಲ್ಲಿ ಹೇಳಿ ಭಗವಂತನು ಅಭಿನಂದಿಸುತ್ತಾನೆ. ಯಜ್ಞಾಧ್ಯಯನ ಎಂದರೆ ಯಜ್ಞವಿಜ್ಞಾನ ಎಂಬುದಕ್ಕೂ ಸೂಚಕ. ಏಕೆಂದರೆ ವೇದಾಧ್ಯಯನಗಳಿಂದಲೇ ಯಜ್ಞಾಧ್ಯಯನವು ಸಿದ್ಧವಾಗುತ್ತದೆ. (ಶಂ. ಭಾ.)

ಅನನ್ಯಭಕ್ತಿಯನ್ನು ಬಿಟ್ಟು ಉಳಿದ ಯಾವ ಉಪಾಯಗಳಿಂದಲೂ ಭಗವಂತನ ಯಥಾವತ್ತಾದ ಸ್ವರೂಪವನ್ನು ದರ್ಶನಮಾಡಲು ಸಾಧ್ಯವಿಲ್ಲ ಎಂಬುದನ್ನು ಇಲ್ಲಿ ಹೇಳುತ್ತಾನೆ.

ನನ್ನಲ್ಲಿ ಭಕ್ತಿಯುಳ್ಳ ಬೇರೆ ಯಾವನಿಂದಲೂ ಎಂದರೆ ಐಕಾಂತಿಕವಾದ ಮತ್ತು ಅತ್ಯಂತವಾದ ಭಕ್ತಿಯಿಲ್ಲದ ಬೇರಾವ ಮನುಷ್ಯನಿಂದಲೂ ಕೇವಲ ವೇದ-ಯಜ್ಞಾದಿಗಳಿಂದ ನನ್ನ ಯಥಾವಸ್ಥಿತವಾದ ಸ್ವರೂಪವನ್ನು ನೋಡಲು ಸಾಧ್ಯವಿಲ್ಲ. (ರಾ. ಭಾ.)

**ತ್ವದನ್ಯೇನ** = ಇಲ್ಲಿ ಅನ್ಯಪದಕ್ಕೆ ಅರ್ಜುನನನ್ನು ಬಿಟ್ಟು ಬೇರೆ ಯಾರಿಂದಲೂ ನೋಡಲು ಸಾಧ್ಯವಿಲ್ಲ–ಎಂಬ ಅಭಿಪ್ರಾಯವನ್ನು ತೆಗೆದು ಕೊಳ್ಳಬಾರದು. ಏಕೆಂದರೆ : ಮುಂದೆ ೫೪ನೆಯ ಶ್ಲೋಕದಲ್ಲಿ ಇಂತಹ ನನ್ನನ್ನು ಅನನ್ಯವಾದ ಭಕ್ತಿಯಿಂದ ತಾತ್ತ್ವಿಕವಾಗಿ ತಿಳಿಯಲು, ನೋಡಲು ಮತ್ತು ಪ್ರವೇಶಿಸಲು ಸಾಧ್ಯ–ಎಂದು ಹೇಳುತ್ತಾನೆ. ಆದುದರಿಂದ ಅನ್ಯ

ಎಂಬುದಕ್ಕೆ 'ಏಕಾಂತಭಕ್ತಿಯಿಲ್ಲದವನು' ಎಂದು ಅರ್ಥಮಾಡಬೇಕು. ವೇದ-ಯಜ್ಞಾದಿಗಳು ಭಗವಂತನ ದರ್ಶನಕ್ಕೆ ಸಾಧನಗಳೇ ಆಗಿವೆ. **ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾ ಅನಾಶಕೇನ.** ಬೃ. ೬-೪-೨೨

ಆದರೆ ಭಕ್ತಿಯಿಲ್ಲದಿದ್ದರೆ ಇವುಗಳು ಭಗವಂತನ ದರ್ಶನಕ್ಕೆ ಸಾಧಕ ಗಳಾಗುವುದಿಲ್ಲ.

**ಕ್ರಿಯಾಭಿಃ**—ಎಂಬುದಕ್ಕೆ ಯಜ್ಞಾಧ್ಯಯನಾದಿಗಳಿಂದ ಬೇರೆಯಾದ ಹೋಮಾದಿ ಕ್ರಿಯೆಗಳಿಂದ ಎಂದು ಅರ್ಥ. ಏಕೆಂದರೆ ವೇದ-ಯಜ್ಞಾಧ್ಯಯನ-ದಾನಗಳೂ ಕ್ರಿಯೆಗಳೇ ಆಗಿವೆ. —ವೇದಾಂತದೇಶಿಕರು.

**ಅಧ್ಯಯನೈಃ**—ಎಂಬುದಕ್ಕೆ ವೇದಾಂಗಗಳ ಅಧ್ಯಯನಗಳಿಂದ ಎಂದೂ **ಕ್ರಿಯಾಭಿಃ**—ಎಂಬುದಕ್ಕೆ ಗುರುಪರಿಚರ್ಯೆಯೇ ಮುಂತಾದ ಕ್ರಿಯೆಗಳಿಂದ ಎಂದೂ ಕೆಲವರು ಅರ್ಥಹೇಳುತ್ತಾರೆ.

**ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ**—ಎಂದು ಶ್ರುತಿಯೂ ಇದೇ ಅಭಿಪ್ರಾಯವನ್ನು ಹೇಳುತ್ತದೆ. ಭಗವಂತನ ದರ್ಶನವು ಯೋಗೈಕಗಮ್ಯವಾದುದು. ಕರ್ಮಗಳಿಗೆ ಅದು ದೊರೆಯುವುದಿಲ್ಲ. —ನೀಲಕಂಠೀಯ

**ಓಂ ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥೪೯॥**

ಘೋರವಾಗಿರುವ ಇಂತಹ ಈ ನನ್ನ ರೂಪವನ್ನು ಕಂಡು ನಿನಗೆ ವ್ಯಥೆಯಾಗದಿರಲಿ. ವಿಮೂಢಭಾವವೂ ಇಲ್ಲದಿರಲಿ. ಅಂಜಿಕೆಯನ್ನು ಬಿಟ್ಟು ಪ್ರೀತಿಯಿಂದ ಕೂಡಿದ ಮನಸ್ಸಿನಿಂದ ಪುನಃ ನೀನು ನನ್ನ ಅದೇ ರೂಪವನ್ನು ನೋಡು.

* * *

(ನಿನ್ನ ಇಚ್ಛೆಯಂತೆ ನಾನು ಪ್ರಸನ್ನನಾಗಿ ಇತರರಿಗೆ ದುರ್ಲಭ

ವಾದ ನನ್ನ ವಿರಾಡ್ರೂಪವನ್ನು ನಿನಗೆ ತೋರಿಸಿದೆನು. ಆದರೆ ನೀನೀಗ ನನ್ನ ಘೋರರೂಪವನ್ನು ಕಂಡು ವ್ಯಾಕುಲನಾಗಿಬಿಟ್ಟಿರುವೆ ; ವಿಮೂಢನಾಗಿರುವೆ ; ಭ್ರಾಂತನಾಗಿರುವೆ. ಅರ್ಜುನ! ನಿನ್ನ ವ್ಯಥೆಯನ್ನು ಸಾಕುಮಾಡು. ನನ್ನ ಈ ವಿಧವಾದ ಘೋರರೂಪವನ್ನು ನೋಡಿ ಭ್ರಾಂತನಾಗಬೇಡ. ಭಯವನ್ನು ದೂರಮಾಡು. ಅಭಯಪ್ರದನಾದ ನಾನು ಇಲ್ಲಿರುವಾಗ ಭಯಪಡಲು ಯಾವ ಕಾರಣವೂ ಇಲ್ಲ. ಮೊದಲಿನಂತೆಯೇ ಪ್ರೀತಮನಸ್ಕನಾಗು. ಚತುರ್ಭುಜನಾದ, ಚಕ್ರ-ಗದಾಪಾಣಿಯಾದ, ಕಿರೀಟಿಯಾದ ನನ್ನನ್ನು ನೋಡಬೇಕೆಂದು ಆಶಿಸಿದೆಯಲ್ಲವೇ? ನೀನಿಚ್ಛಿಸಿರುವ ಅದೇ ನನ್ನ ರೂಪವನ್ನು ನೋಡು–ಎಂಬುದಾಗಿ ಹೇಳಿ ಭಗವಂತನು ಚತುರ್ಭುಜನಾಗಿ, ಶಂಖ-ಚಕ್ರ-ಗದಾಧಾರಿಯಾಗಿ, ಕಿರೀಟಿಯಾಗಿ ಅರ್ಜುನನಿಗೆ ಕಾಣಿಸಿಕೊಂಡನು.)

O O O

ವ್ಯಪೇತಭೀಃ ಪ್ರಪಶ್ಯ = ಭಯವನ್ನು ತೊರೆದು ಪ್ರೀತಿಯುಳ್ಳ ಮನಸ್ಸಿನಿಂದ ನೀನು ನಿನಗೆ ಇಷ್ಟವಾದ ಚತುರ್ಭುಜದಿಂದ ಕೂಡಿದ ಶಂಖ-ಚಕ್ರ-ಗದಾಧಾರಿಯಾದ ಈ ರೂಪವನ್ನು ನೋಡು. (ಶಂ. ಭಾ.)

ನನ್ನ ಘೋರರೂಪದರ್ಶನವನ್ನು ಕಂಡು ನಿನಗೆ ವ್ಯಥೆಯಾಗಲೀ ಮೂಢಭಾವವಾಗಲೀ ಉಂಟಾಗದಿರಲಿ. ನೀನು ಹಿಂದೆ ನೋಡಿ ಅಭ್ಯಾಸವಾಗಿರುವ ಸೌಮ್ಯರೂಪವನ್ನು ತೋರಿಸುತ್ತೇನೆ. ಆ ನನ್ನ ರೂಪವನ್ನೇ ನೋಡು. (ರಾ. ಭಾ.)

**ಸಂಜಯ ಉವಾಚ :**

**ಓಂ ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥೫೦॥**

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

ವಾಸುದೇವನು ಅರ್ಜುನನಿಗೆ ಹೀಗೆಂದು ಹೇಳಿ ಮತ್ತೆ ತನ್ನ ಹಿಂದಿನ

ರೂಪವನ್ನೇ ತೋರಿಸಿದನು. ಅಂಜಿಕೊಂಡಿದ್ದ ಅರ್ಜುನನನ್ನು ಮಹಾತ್ಮನಾದ ಶ್ರೀಕೃಷ್ಣನು ಪುನಃ ಸೌಮ್ಯಶರೀರವನ್ನು ತಳೆದು ಸಂತೈಸಿದನು.

* * *

(ಮಹಾರಾಜ! ವಸುದೇವನ ಮಗನಾದ ಶ್ರೀಕೃಷ್ಣನು ಅರ್ಜುನನಿಗೆ ಹೀಗೆಂಬುದಾಗಿ ಹೇಳಿ ಮತ್ತೆ ತನ್ನ ರೂಪವನ್ನು ತೋರಿಸಿದನು. ಮಹಾತ್ಮನಾದ ಶ್ರೀಕೃಷ್ಣನು ಬಹುವಾಗಿ ಹೆದರಿದ್ದ ಅರ್ಜುನನನ್ನು ಪುನಃ ಸೌಮ್ಯವಾದ ಶರೀರವನ್ನು ಹೊಂದಿದವನಾಗಿ ಸಮಾಧಾನಪಡಿಸಿದನು.)

o o o

**ಸ್ವಕಂ ರೂಪಂ** = ವಸುದೇವನ ಮನೆಯಲ್ಲಿ ಹುಟ್ಟಿದ ರೂಪವನ್ನು.

(ಶಂ. ಭಾ.)

**ಸ್ವಕಂ ರೂಪಂ**=ಚತುರ್ಭುಜಗಳಿಂದ ಕೂಡಿದ ತನ್ನ ರೂಪವನ್ನು. ಪರಮಪುರುಷನು ವಸುದೇವಪುತ್ರನಾಗಿದ್ದಾಗ ಚತುರ್ಭುಜಗಳೇ ಅವನಿಗಿದ್ದುವು. ಕಂಸನಿಗೆ ಹೆದರಿದ ವಸುದೇವನ ಪ್ರಾರ್ಥನೆಯಂತೆ ಭಗವಂತನು ಕಂಸವಧಪರ್ಯಂತವಾಗಿ ಅವುಗಳಲ್ಲಿ ಎರಡು ಭುಜಗಳನ್ನು ಉಪಸಂಹಾರ ಮಾಡಿಕೊಂಡಿದ್ದು ಅನಂತರ ಮತ್ತೆ ಅದನ್ನು ಪ್ರಕಾಶಪಡಿಸಿಕೊಂಡನು.

**ಉಪಸಂಹರ ವಿಶ್ವಾತ್ಮನ್ರೂಪಮೇತಚ್ಚತುರ್ಭುಜಮ್**

ವಿ. ಪುರಾಣ ೫-೩-೧೩

ಶಿಶುಪಾಲನೂ ಕೂಡ ಚತುರ್ಭುಜಗಳಿಂದ ಕೂಡಿದ ಶಂಖ-ಚಕ್ರ-ಗದಾಧಾರಿಯಾದ ವಸುದೇವಪುತ್ರನ ರೂಪವನ್ನೇ ಶತ್ರುವನ್ನಾಗಿ ಅನವರತವಾಗಿ ಭಾವಿಸಿಕೊಳ್ಳುತ್ತಿದ್ದನು.

**ಉದಾರಪೀವರಚತುರ್ಬಾಹುಶಂಖಚಕ್ರಗದಾಧರಮ್**

ವಿ. ಪು. ೪-೧೪-೧೦

ಆದುದರಿಂದ **ಸ್ವಕಂ ರೂಪಂ** ಎಂಬುದಕ್ಕೆ **ತೇನೈವ ರೂಪೇಣ ಚತುರ್ಭುಜೇನ** ಎಂದು–ಅರ್ಜುನನು ಕೇಳಿಕೊಂಡಿದ್ದ ಕೃಷ್ಣಾವತಾರದ ಸಹಜರೂಪವನ್ನು–ಎಂದೇ ಅರ್ಥಮಾಡಬೇಕು. (ರಾ. ಭಾ.)

**ಸ್ವಕಂ ರೂಪಂ** = ತನ್ನ ಸ್ವಕೀಯವಾದ ಶ್ರೀಕೃಷ್ಣರೂಪವನ್ನು. ಭ್ರಾಂತಿಯ ಪ್ರತೀತಿಯಿಂದ ಈ ರೂಪವನ್ನು **ಸ್ವಕಂ ರೂಪಂ** ಎಂದು ಕರೆ

ದಿದೆ. ವಿಶ್ವರೂಪವು ಭಗವಂತನ ಸ್ವಕೀಯವಾದ ರೂಪವಲ್ಲ–ಎಂದು ತಿಳಿಯಬಾರದು. ಪ್ರಾಮಾಣಿಕವಾಗಿ ಅದೂ ಕೂಡ ಅವನ ಸ್ವಕೀಯ ರೂಪವೇ ಆಗಿದೆ. ಇದಕ್ಕೆ ಪ್ರಮಾಣಗಳನ್ನು ಎರಡನೆಯ ಅಧ್ಯಾಯದ ಕೊನೆ ಯಲ್ಲಿ ಹೇಳಿದೆ. (ಮ. ಭಾ.)

ಶ್ರೀಶಂಕರರ ಮತ್ತು ಶ್ರೀರಾಮಾನುಜರ ಅಭಿಪ್ರಾಯದಂತೆ **ಸ್ವಕಂ ರೂಪಂ** ಎಂಬುದಕ್ಕೆ ವಸುದೇವಪುತ್ರನಾದ ಶ್ರೀಕೃಷ್ಣನ ಸ್ವಾಭಾವಿಕವಾದ ಚತುರ್ಭುಜರೂಪವೆಂದೇ ಅರ್ಥವಾಗುತ್ತದೆ. ಈ ಶಬ್ದವು ಪ್ರಾಕೃತರಾಜ ಪುತ್ರನಿಗೆ ಸಾಧಾರಣವಾದ ದ್ವಿಭುಜವಾದ ರೂಪ ಎಂದು ಕೆಲವರ ಅಭಿ ಪ್ರಾಯ. ಸಾರಥಿಯಾಗಿದ್ದ ಶ್ರೀಕೃಷ್ಣನಿಗೆ ಆಯುಧಗ್ರಹಣವು ಅವನ ಪ್ರತಿಜ್ಞೆಗೆ ವಿರುದ್ಧವಾದುದರಿಂದ **ಸ್ವಕಂ ರೂಪಂ** ಎನ್ನುವುದಕ್ಕೆ ಶಂಖ-ಚಕ್ರ-ಗದಾ ವಿಶಿಷ್ಟವಾದ ಚತುರ್ಭುಜಯುಕ್ತವಾದ ಭಗವಂತನ ವೈಷ್ಣವರೂಪವನ್ನು– ಎಂದು ಅರ್ಥಮಾಡಿ ಅನಂತರ ಭಗವಂತನು ಅರ್ಜುನನಿಗೆ ತನ್ನ ಮಾನುಷರೂಪವನ್ನೂ ತೋರಿಸಿದನು–ಎಂದೂ ಹೇಳಬಹುದು.

**ಅರ್ಜುನ ಉವಾಚ :**

**ಓಂ ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥೫೧॥**

ಅರ್ಜುನನು ಹೇಳುತ್ತಾನೆ :

ಜನಾರ್ದನ! ಈ ನಿನ್ನ ಸೌಮ್ಯವಾದ ಮಾನುಷರೂಪವನ್ನು ಕಂಡು ಈಗ ಸಚೇತನನಾಗಿ ಪ್ರಕೃತಿಯನ್ನು ಹೊಂದಿದವನಾಗಿರುವೆನು.

* * *

(ಶ್ಯಾಮಸುಂದರನಾದ ಶ್ರೀಕೃಷ್ಣನ ಸೌಮ್ಯರೂಪವನ್ನು ಕಂಡೊಡನೆಯೇ ಅರ್ಜುನನಿಗೆ ಪುನಶ್ಚೇತನವು ಬಂದಂತಾಯಿತು. ಅದನ್ನೇ ಅವನು ಶ್ರೀಕೃಷ್ಣನೊಡನೆ ಹೇಳುತ್ತಾನೆ : ಜನಾರ್ದನ! ನಿನ್ನ ಈ ಸೌಮ್ಯವಾದ ಮಾನುಷರೂಪವನ್ನು ನೋಡಿದನಂತರ ನನಗೆ ಪುನಶ್ಚೇತನಬಂದಂತಾಗಿದೆ. ಭಯವೂ ಭ್ರಾಂತಿಯೂ ದೂರವಾಗಿದೆ. ನನ್ನ ಪ್ರಕೃತಿಯನ್ನು (ಶೌರ್ಯ ಸ್ವಭಾವವನ್ನು ) ಪುನಃ ನಾನು ಪಡೆದುಕೊಂಡಿದ್ದೇನೆ.)

**ಶ್ರೀಭಗವಾನುವಾಚ :**

**ಓಂ ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥೫೨॥**

ಶ್ರೀಭಗವಂತನು ಹೇಳುತ್ತಾನೆ :

ನೀನೀಗ ನೋಡಿದ ಸುದುರ್ದರ್ಶವಾದ ನನ್ನ ರೂಪವನ್ನು ದೇವತೆಗಳೂ ಕೂಡ ನಿತ್ಯವೂ ಕಾಣಬೇಕೆಂದು ತವಕಪಡುತ್ತಿರುವರು.

* * *

(ಬಹಳ ಕಷ್ಟದಿಂದ ಮಾತ್ರವೇ ನೋಡಲು ಸಾಧ್ಯವಾದ ಯಾವ ರೂಪವನ್ನು ನೀನೀಗ ನೋಡಿದೆಯೋ–ಈ ದಿವ್ಯರೂಪವನ್ನು ಸಂದರ್ಶಿಸಲು ದೇವತೆಗಳೂ ಕೂಡ ನಿತ್ಯವೂ ಕಾತರತೆಯಿಂದಿರುತ್ತಾರೆ. ಈ ರೂಪವನ್ನು ನೋಡಲು ದೇವತೆಗಳೂ ಸಹ ನಿತ್ಯಾಕಾಂಕ್ಷಿಗಳಾಗಿರುತ್ತಾರೆ.

ಇಲ್ಲಿಯೂ ಸಹ 'ಇದಂ ರೂಪಂ' ಎಂದರೆ ಯಾವ ರೂಪ? ವಿಶ್ವರೂಪವೇ? ಶ್ರೀಕೃಷ್ಣನ ರೂಪವೇ? ಅಥವಾ ಎರಡಕ್ಕೂ ಮಧ್ಯೆ ಅರ್ಜುನನಿಗೆ ತೋರಿಸಿದನೆಂದು ಹೇಳುವ ವಿಷ್ಣುರೂಪವೇ? ಎಂಬ ಸಂಶಯ ಬರಬಹುದು.

**ನಿತ್ಯಂ ದರ್ಶನಕಾಂಕ್ಷಿಣಃ**–ಎಂದು ಹೇಳಿದ್ದಾನೆ. ವಿರಾಡ್ರೂಪವನ್ನು ನೋಡಲು ಅರ್ಜುನನೇ ಭಯಪಟ್ಟು ಉಪಸಂಹರಿಸುವಂತೆ ಕೇಳಿಕೊಂಡಿರುವಾಗ ಆ ಉಗ್ರರೂಪವನ್ನು ಕಾಣಲು ದೇವತೆಗಳು ಆಕಾಂಕ್ಷೆಯಿಂದಿದ್ದಾರೆಯೇ? ನಿತ್ಯವೂ ದರ್ಶನಕಾಂಕ್ಷಿಗಳಾಗಿದ್ದಾರೆಂದರೆ ನಿತ್ಯವೂ ವಿರಾಡ್ರೂಪವು ಸಿಕ್ಕತಕ್ಕದ್ದೇ?–ಆದುದರಿಂದ **ಇದಂ ರೂಪಂ** ಎಂದು ಶ್ರೀಕೃಷ್ಣನು ಹೇಳಿರುವುದು ವಿರಾಡ್ರೂಪಕ್ಕೆ ಸಂಬಂಧಿಸಿದುದಲ್ಲ. ವಿರಾಡ್ರೂಪವನ್ನು ಉಪಸಂಹರಿಸಿಕೊಂಡನಂತರ ಅರ್ಜುನನಿಗೆ ತೋರಿಸಿದ ವಿಷ್ಣುರೂಪಕ್ಕೆ ಸಂಬಂಧಿಸಿದುದು. ಆ ರೂಪವೂ ಸಹ ಸುದುರ್ದರ್ಶವಾದುದೇ ಸರಿ. ಬಹಳ ಕಷ್ಟದಿಂದಲೇ ಅದನ್ನೂ ನೋಡಬೇಕು. ದೇವತೆಗಳಲ್ಲದೇ ಇನ್ನೂ ಅನೇಕರಿಗೆ ತಪಸ್ಸಿನಿಂದಲೂ ಭಕ್ತಿಯ ಮೂಲಕವಾಗಿಯೂ ಮಹಾವಿಷ್ಣುವನ್ನು ನಿತ್ಯವೂ ಸಂದರ್ಶಿಸಲು ಆಕಾಂಕ್ಷೆಯಿರುವುದು ಸ್ವಾಭಾವಿಕವಾಗಿಯೇ ಇದೆ. ಆದುದ

ರಿಂದ **ಇದಂ ರೂಪಂ**–ಎಂಬುದಕ್ಕೆ ಈಗ ತೋರಿಸಿದ ಮಹಾವಿಷ್ಣುವಿನ ಈ ರೂಪವನ್ನು–ಎಂದು ಅರ್ಥಮಾಡುವುದೇ ಸಮಂಜಸವಾಗಿ ಕಾಣುತ್ತದೆ.)

o o o

ನೀನು ನನ್ನ ಯಾವ ರೂಪವನ್ನು ನೋಡಿದ್ದೀಯೋ ಅದು ಇತರರಿಗೆ ನೋಡಲು ಅತ್ಯಂತಕಷ್ಟಸಾಧ್ಯವಾದುದು. ದೇವತೆಗಳೂ ಕೂಡ ಈ ರೂಪವನ್ನು ನೋಡಲು ಸದಾ ಬಯಸುವರು. (ಶಂ. ಭಾ.)

**ಇದಂ ರೂಪಂ**= ಎಲ್ಲವನ್ನೂ ಪ್ರಶಾಸನಮಾಡುತ್ತಾ, ಎಲ್ಲಕ್ಕೂ ಆಶ್ರಯವಾಗಿ, ಎಲ್ಲಕ್ಕೂ ಕಾರಣವಾಗಿರುವ ಯಾವ ನನ್ನ ರೂಪವನ್ನು ನೋಡಿದ್ದೀಯೋ ಅದನ್ನು. (ರಾ. ಭಾ.)

**ಓಂ ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥**

ನನ್ನನ್ನು ನೀನು ಯಾವ ರೂಪದಲ್ಲಿ ನೋಡಿದೆಯೋ ಆ ರೂಪದಲ್ಲಿ ನೋಡಲು ವೇದಗಳ ಅಧ್ಯಯನದಿಂದ ಸಾಧ್ಯವಿಲ್ಲ. ತಪಸ್ಸಿನಿಂದ ಸಾಧ್ಯವಿಲ್ಲ. ದಾನದಿಂದ ಸಾಧ್ಯವಿಲ್ಲ. ಯಜ್ಞದಿಂದಲೂ ಸಾಧ್ಯವಿಲ್ಲ.

* * *

(ಅರ್ಜುನ! ನನ್ನ ಅನುಗ್ರಹದಿಂದಾಗಿ ಭಕ್ತನಾದ ನಿನಗೆ ನನ್ನ ರೂಪವನ್ನು ನೋಡಲು ಸಾಧ್ಯವಾಯಿತು. ನನ್ನ ಅನುಗ್ರಹವಿಲ್ಲದಿದ್ದರೆ ನಾಲ್ಕು ವೇದಗಳನ್ನು ಅಧ್ಯಯನಮಾಡುವುದರಿಂದ ಆ ನನ್ನ ದಿವ್ಯರೂಪವನ್ನು ನೋಡಲು ಸಾಧ್ಯವಾಗುವುದಿಲ್ಲ. ಚಾಂದ್ರಾಯಣಾದಿ ಉಗ್ರವಾದ ತಪಸ್ಸನ್ನು ಮಾಡುವುದರಿಂದಲೂ ಸಾಧ್ಯವಾಗುವುದಿಲ್ಲ. ಗೋ-ಭೂಮಿ-ಹಿರಣ್ಯಾದಿಗಳನ್ನು ದಾನಕೊಡುವುದರಿಂದಲೂ ಸಾಧ್ಯವಾಗುವುದಿಲ್ಲ. ಯಜ್ಞ, ಪೂಜೆ–ಮುಂತಾದುವುಗಳಿಂದಲೂ ಸಾಧ್ಯವಾಗುವುದಿಲ್ಲ.)

o o o

**ನಾಹಂ ದ್ರಷ್ಟುಂ ಶಕ್ಯಃ** = ನನ್ನಲ್ಲಿ ಭಕ್ತಿಯಿಲ್ಲದವರಿಂದ ಕೇವಲ

ಅಧ್ಯಯನಾಧ್ಯಾಪನ-ಶ್ರವಣ-ಜಪರೂಪವಾದ ವೇದಗಳಿಂದಾಗಲೀ, ಯಾಗ-ದಾನ-ಹೋಮ-ತಪಸ್ಸುಗಳಿಂದಾಗಲೀ ನಾನು ನೋಡಲು ಶಕ್ಯನಲ್ಲ.

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯ-**
**ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥**

ಕಠ. ೨-೨೨ (ರಾ. ಭಾ.)

**ಓಂ ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥೫೪॥**

ಆದರೆ ಪರಂತಪನಾದ ಅರ್ಜುನನೇ! ಅನನ್ಯವಾದ ಭಕ್ತಿಯಿಂದ ಈ ವಿಧನಾದ ನಾನು ತತ್ತ್ವದಿಂದ ಅರಿತುಕೊಳ್ಳುವುದಕ್ಕೂ, ಕಾಣುವುದಕ್ಕೂ, ಸೇರಿಕೊಳ್ಳುವುದಕ್ಕೂ ಶಕ್ಯನು.

* * *

(ಯಾವ ರೀತಿಯಲ್ಲೂ ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲವೇ?– ಎಂದರೆ ಸಾಧ್ಯವಿದೆ. ಒಂದು ಹಾದಿಯನ್ನು ಭಗವಂತನು ಅರ್ಜುನನಿಗೆ ತೋರಿಸುತ್ತಾನೆ.

ಶತ್ರುಗಳನ್ನು ಪರಿತಾಪಗೊಳಿಸುವ ಅರ್ಜುನನೇ! ಈ ವಿಧವಾಗಿ ನನ್ನನ್ನು ನೋಡಲು ಒಂದು ಮಾರ್ಗವಿದೆ. ಅದೇ ಭಕ್ತಿಮಾರ್ಗ. ಭಕ್ತಿ ಎಂದರೆ ಅನನ್ಯಭಕ್ತಿಯಾಗಿರಬೇಕು. ಅವ್ಯಭಿಚಾರಿಣಿಯಾದ ಭಕ್ತಿಯಾಗಿರಬೇಕು. ಸಾಧ್ವಿಯಾದವಳು ಪತಿಯೊಬ್ಬನನ್ನೇ ದೈವವೆಂದು ಭಾವಿಸುವಂತೆ– ಇರತಕ್ಕವನು ಒಬ್ಬನೇ ಒಬ್ಬ ದೇವನೆಂದು ಭಾವಿಸಿ, ನನ್ನನ್ನು ಆಶ್ರಯಿಸಬೇಕು. ಇಂತಹ ಅನನ್ಯಭಕ್ತಿಯಿಂದ ಅವನು ನನ್ನನ್ನು ಆ ರೂಪದಲ್ಲಿ ಕಾಣಬಹುದು. ಶಾಸ್ತ್ರಗಳ ಮೂಲಕ ನನ್ನ ಇರುವಿಕೆಯನ್ನು ತಿಳಿಯುವುದಕ್ಕೂ, ಸಾಕ್ಷಾತ್ಕರಿಸಿಕೊಳ್ಳುವುದಕ್ಕೂ ಮತ್ತು ತತ್ತ್ವತಃ ನನ್ನಲ್ಲಿಯೇ ಸೇರಿಕೊಳ್ಳುವುದಕ್ಕೂ (ಮೋಕ್ಷವನ್ನು ಪಡೆಯುವುದಕ್ಕೂ ) ಅನನ್ಯಭಕ್ತನಿಗೆ ಸಾಧ್ಯವಾಗುತ್ತದೆ.)

o o o

**ಅನನ್ಯಯಾ ಭಕ್ತ್ಯಾ**= ಯಾವ ಭಕ್ತಿಯಿಂದ ಎಲ್ಲ ಕರಣಗಳಿಂದಲೂ ವಾಸುದೇವನನ್ನು ಹೊರತಾಗಿ ಬೇರೆ ಯಾರೂ ದೊರಕುವುದಿಲ್ಲವೋ ಅದು ಅನನ್ಯಭಕ್ತಿ.

**ಸರ್ವೈಃ ಅಪಿ ಕರಣೈಃ ವಾಸುದೇವಾದನ್ಯತ್ ನ ಉಪಲಭ್ಯತೇ ಯಯಾ ಸಾ ಅನನ್ಯಾ ಭಕ್ತಿಃ** (ಶಂ. ಭಾ.)

**ಅನನ್ಯಯಾ ಭಕ್ತ್ಯಾ**= ಅನನ್ಯಪ್ರಯೋಜನವಾದ ಅಥವಾ ಅನನ್ಯ ದೇವತಾಪರವಾದ.

**ಜ್ಞಾತುಂ** = ಶಾಸ್ತ್ರಗಳಿಂದ ತಾತ್ತ್ವಿಕವಾಗಿ ತಿಳಿಯಲು. **ದ್ರಷ್ಟುಂ** = ತಾತ್ತ್ವಿಕವಾಗಿ ಸಾಕ್ಷಾತ್ಕರಿಸಿಕೊಳ್ಳಲು. **ಪ್ರವೇಷ್ಟುಂ** = ತಾತ್ತ್ವಿಕವಾಗಿ ಪ್ರವೇಶ ಮಾಡಲು. (ರಾ. ಭಾ.)

**ಓಂ ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥೫೫॥**

ಪಾಂಡವ! ನನಗಾಗಿಯೇ ಕರ್ಮಮಾಡುವವನಾಗಿ, ನನ್ನನ್ನೇ ಪರಮಗತಿಯೆಂದು ಭಾವಿಸಿರುವವನಾಗಿ, ನನ್ನಲ್ಲಿಯೇ ಭಕ್ತಿಯುಳ್ಳವನಾಗಿ, ನಿಃಸಂಗನಾಗಿ, ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ವೈರಭಾವವಿಲ್ಲದಿರುವ ವನು ಯಾವನೋ–ಅವನು ನನ್ನನ್ನು ಬಂದು ಸೇರುತ್ತಾನೆ.

* * *

(ಭಗವಂತನು ಭಕ್ತಿಮಾರ್ಗದ ಸಾಧನೋಪಾಯವನ್ನು ಅರ್ಜುನನಿಗೆ ಹೇಳಿಕೊಡುತ್ತಾನೆ.

**ಮತ್ಕರ್ಮಕೃತ್** = ಲೌಕಿಕಕರ್ಮಗಳನ್ನೇ ಆಗಲೀ, ವೈದಿಕಕರ್ಮಗಳನ್ನೇ ಆಗಲೀ–ನನಗಾಗಿ ಮಾಡುವವನು, ನನ್ನ ಪ್ರೀತ್ಯರ್ಥವಾಗಿ ಮಾಡುವವನು, ಫಲದಾಸೆಯಿಲ್ಲದೇ ಕರ್ಮಮಾಡುವವನು. ಪ್ರಯತ್ನ, ಸಾಹಸ, ಸ್ಥೈರ್ಯ–ಎಲ್ಲವೂ ನಾನೇ ಎಂದು ವಿಭೂತಿಯೋಗದಲ್ಲಿ ಹೇಳಿದ್ದೇನೆ. ನಾನೇ ಕೊಟ್ಟಿರುವ ಶಕ್ತಿಯನ್ನು ನನ್ನ ಪೂಜೆಗಾಗಿ ನಿಯೋಜಿಸುವವನು.

**ಮತ್ಪರಮಃ**= ನಾನೇ ಪರಮಗತಿಯೆಂದು ನಂಬಿರುವವನು. ಲೋಕ ದಲ್ಲಿ ಭೃತ್ಯನಾದವನು ಸ್ವಾಮಿಕಾರ್ಯವನ್ನೇನೋ ಮಾಡುತ್ತಾನೆ. ಆದರೆ ತನ್ನ ಸೇವೆಯನ್ನು ಪಡೆದು ಜೀವಿಕೆಗಾಗಿ ಭತ್ಯವನ್ನು ಕೊಡುವ ಸ್ವಾಮಿಯೇ

ತನಗೆ ಪರಮಗತಿ ಎಂದು ಎಂದಿಗೂ ಭಾವಿಸುವುದಿಲ್ಲ. ಆದರೆ ಭಕ್ತನ ವಿಷಯವು ಹಾಗಲ್ಲ. ಅವನು ನನ್ನ ಸೇವೆಯನ್ನು ಮಾಡುತ್ತಿರುತ್ತಾನೆ. ಯಾವುದೇ ಕರ್ಮಮಾಡಿದರೂ ನನ್ನ ಪ್ರೀತ್ಯರ್ಥವಾಗಿ ಮಾಡುತ್ತಾನೆ. ಕಡೆಗೆ ನನ್ನನ್ನೇ ಪರಮಗತಿಯೆಂದೂ ಭಾವಿಸುತ್ತಾನೆ. ಇಂತಹವನು ಮತ್ಪರಮನು.

**ಮದ್ಭಕ್ತಃ** = ನನ್ನನ್ನೇ ಸರ್ವಪ್ರಕಾರದಿಂದಲೂ, ಸರ್ವಾತ್ಮನಾ ಸಂಪೂರ್ಣವಾದ ಉತ್ಸಾಹದಿಂದ ಭಜಿಸುವವನು.

**ಸಙ್ಗವರ್ಜಿತಃ** = ನಿಃಸಂಗನಾಗಿರತಕ್ಕವನು. ಧನ-ಪುತ್ರ-ಮಿತ್ರ-ಕಳತ್ರ-ಬಂಧುವರ್ಗಾದವರಿಂದ ದೂರವಿರತಕ್ಕವನು. ಸಙ್ಗ ಎಂದರೆ ಸ್ನೇಹ ಅಥವಾ ಪ್ರೀತಿ. ಸ್ನೇಹವನ್ನು ಅಥವಾ ಪ್ರೀತಿಯನ್ನು ಎಲ್ಲ ಕಡೆಗಳಿಂದಲೂ ಸೆಳೆದುಕೊಂಡು ಭಗವಂತನೊಬ್ಬನ ಮೇಲೆ ಮಾತ್ರವೇ ಇಟ್ಟಿರುವವನು.

**ನಿರ್ವೈರಃ ಸರ್ವಭೂತೇಷು** = ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದ್ವೇಷವಿಲ್ಲದೇ ಇರತಕ್ಕವನು. ಹೀಗೆ ಯಾವನಿದ್ದಾನೆಯೋ ಅವನು ನನ್ನನ್ನೇ ಸೇರುತ್ತಾನೆ.)

o o o

ಈಗ ಇಡೀ ಗೀತಾಶಾಸ್ತ್ರಕ್ಕೇ ಸಾರಭೂತವಾಗಿರುವ ಅರ್ಥವನ್ನು ಪರಮಕಲ್ಯಾಣಪ್ರಾಪ್ತಿಗಾಗಿ ಭಕ್ತನು ಅನುಷ್ಠಾನಮಾಡುವುದಕ್ಕೋಸ್ಕರ ಸಂಗ್ರಹಮಾಡಿ ಸಂಕ್ಷೇಪವಾಗಿ ಭಗವಂತನು ಈ ಶ್ಲೋಕದಲ್ಲಿ ಹೇಳುತ್ತಾನೆ.

**ಅಧುನಾ ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತಃ ಅರ್ಥಃ ನಿಃಶ್ರೇಯಸಾರ್ಥಃ ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ ।**

**ನಿರ್ವೈರಃ** = ಎಲ್ಲ ಭೂತಗಳಲ್ಲಿಯೂ ಅತ್ಯಂತಾಪಕಾರವನ್ನು ಮಾಡಲು ತೊಡಗಿರುವವರಲ್ಲಿಯೂ ಕೂಡ ಶತ್ರುಭಾವವಿಲ್ಲದವನು. (ಶಂ. ಭಾ.)

**ಮತ್ಕರ್ಮಕೃತ್** = ವೇದಾಧ್ಯಯನವೇ ಮುಂತಾದ ಎಲ್ಲ ಕರ್ಮಗಳನ್ನೂ ನನ್ನ ಆರಾಧನಾರೂಪವಾಗಿ ಮಾಡುವವನು. **ಮತ್ಪರಮಃ** = ಎಲ್ಲ ಆರಂಭಗಳಿಗೂ ನನ್ನನ್ನೇ ಪರಮೋದ್ದೇಶವನ್ನಾಗಿ ಹೊಂದಿರುವವನು. **ಮದ್ಭಕ್ತಃ** = ನನ್ನನ್ನು ಅತ್ಯಂತಪ್ರಿಯನನ್ನಾಗಿ ತಿಳಿದು ನನ್ನ ಪ್ರಾರ್ಥನೆ, ಸ್ತುತಿ, ಧ್ಯಾನ, ಅರ್ಚನೆ, ಪ್ರಣಾಮ–ಮುಂತಾದುವುಗಳಿಲ್ಲದೇ ಆತ್ಮಧಾರ

ಣೆಯೇ ಇಲ್ಲವೆಂದು ಭಾವಿಸಿ ನನ್ನೊಬ್ಬನನ್ನೇ ಪ್ರಯೋಜನವನ್ನಾಗಿ ಇಟ್ಟು ಕೊಂಡು ಸರ್ವದಾ ಅವುಗಳನ್ನು ಮಾಡುವವನು.

**ಸಙ್ಗವರ್ಜಿತಃ** = ನಾನೊಬ್ಬನೇ ಅವನಿಗೆ ಪ್ರಿಯನಾಗಿರುವುದರಿಂದ ಉಳಿದ ಬೇರೆ ಯಾವ ಸಂಗವನ್ನೂ ಸಹಿಸದವನು. **ಸರ್ವಭೂತೇಷು ನಿರ್ವೈರಃ** = ಯಾವ ಪ್ರಾಣಿಯಲ್ಲಿಯೂ ವೈರವಿಲ್ಲದವನು. ನನ್ನ ಸಂಯೋಗ ಮತ್ತು ವಿಯೋಗಗಳನ್ನೇ ಸುಖ-ದುಃಖಗಳನ್ನಾಗಿ ಭಾವಿಸಿ ತನ್ನ ದುಃಖವು ತನ್ನ ಅಪರಾಧದಿಂದಲೇ ಉಂಟಾದುದು ಎಂದು ಭಾವಿಸುತ್ತಾನೆ ಮತ್ತು ಎಲ್ಲ ಭೂತಗಳೂ ಪರಮಪುರುಷನಿಗೆ ಅಧೀನ ಎಂದು ಅನುಸಂಧಾನಮಾಡು ತ್ತಾನೆ. ಆದುದರಿಂದ ಅವನಿಗೆ ಯಾವ ಭೂತಗಳಲ್ಲಿಯೂ ವೈರಕ್ಕೆ ಕಾರಣವಿರುವುದಿಲ್ಲ. ಹೀಗೆ ಇರುವ ಅವನು ನನ್ನನ್ನು ಹೊಂದುತ್ತಾನೆ.

ಯಥಾವಸ್ಥಿತವಾಗಿರುವ ನನ್ನನ್ನು ಹೊಂದುತ್ತಾನೆ. ಅವಿದ್ಯೆಯೇ ಮುಂತಾದ ಯಾವ ದೋಷಗಳ ಗಂಧವೂ ಇಲ್ಲದೇ ನನ್ನೊಬ್ಬನನ್ನೇ ಅನುಭವಿಸುತ್ತಿರುವವನೂ ಆಗುತ್ತಾನೆ. (ರಾ. ಭಾ.)

**ಇತಿ ಶ್ರೀಮಹಾಭಾರತೇ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಶ್ವರೂಪದರ್ಶನಯೋಗೋ ನಾಮೈಕಾದಶೋಽಧ್ಯಾಯಃ**

ಭಗವದ್ಗೀತೆಯಲ್ಲಿ ೧೧ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೩೫ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೧೨ನೆಯ ಅಧ್ಯಾಯ

## ಸಾಕಾರ ಮತ್ತು ನಿರಾಕಾರೋಪಾಸನೆಗಳಲ್ಲಿ ಯಾವುದು ಶ್ರೇಷ್ಠವೆಂಬ ವಿಚಾರ ಮತ್ತು ನಿರ್ಣಯ : ಭಗವತ್ಪ್ರಾಪ್ತಿಯ ಉಪಾಯ : ಭಗವಂತನನ್ನು ಕಂಡುಕೊಂಡವರ ಲಕ್ಷಣ

**ಅರ್ಜುನ ಉವಾಚ :**

**ಓಂ ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥**

ಅರ್ಜುನನು ಹೇಳುತ್ತಾನೆ :

ಹೀಗೆ ಎಡೆಬಿಡದೇ ಯಾವ ಭಕ್ತರು ನಿನ್ನನ್ನು ಉಪಾಸನೆಮಾಡುತ್ತಾರೆಯೋ ಮತ್ತು ಯಾರು ಅವ್ಯಕ್ತವಾದ ಅಕ್ಷರವನ್ನು ಉಪಾಸನೆಮಾಡುತ್ತಾರೆಯೋ–ಅವರಲ್ಲಿ ಯಾರು ಯೋಗವಿತ್ತಮರು ಅರ್ಥಾತ್ ಯೋಗವನ್ನು ಅರಿತವರಲ್ಲಿ ಅತ್ಯುತ್ತಮರು?

* * *

(ಮೊದಲನೆಯ ಷಟ್ಕದಲ್ಲಿ ಅರ್ಜುನನಿಗೆ ಕರ್ಮಯೋಗವು ಶ್ರೇಷ್ಠವೇ? ಜ್ಞಾನಯೋಗವು ಶ್ರೇಷ್ಠವೇ?–ಎಂಬ ವಿಷಯವಾಗಿ ಸಂದೇಹವು ಬಂದಿತ್ತು.

ಹಿಂದಿನ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಭಗವಂತನು ಮತ್ಕರ್ಮನಾದವನು, ಮತ್ಪರಮನಾದವನು, ಮದ್ಭಕ್ತನಾದವನು, ಸಂಗವರ್ಜಿತನಾದವನು, ಸರ್ವಪ್ರಾಣಿಗಳಲ್ಲಿಯೂ ನಿರ್ವೈರನಾಗಿರತಕ್ಕವನು–ನನ್ನನ್ನೇ ಸೇರುತ್ತಾನೆ ಎಂದು ಹೇಳಿದ್ದಾನೆ. ಆ ಶ್ಲೋಕವನ್ನೇ ಅನುವರ್ತನೆಮಾಡಿಕೊಂಡು ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ. ಈ ರೀತಿಯಾಗಿ ಅರ್ಥಾತ್ ತ್ವತ್ಕರ್ಮರಾಗಿ, ತ್ವತ್ಪರಮರಾಗಿ, ಸಂಗವರ್ಜಿತರಾಗಿ, ರಾಗ-ದ್ವೇಷರಹಿತರಾಗಿ ಯಾವ ಭಕ್ತರು ನಿನ್ನನ್ನು ಎಡೆಬಿಡದೇ ಸದಾಕಾಲದಲ್ಲಿಯೂ ಉಪಾಸನೆ ಮಾಡುತ್ತಾರೆಯೋ ಅವರು ಯೋಗವಿತ್ತಮರೋ? ಅಥವಾ ಅವ್ಯಕ್ತವಾದ ಅಕ್ಷರವಸ್ತುವನ್ನು ಧ್ಯಾನಯೋಗದ ಮೂಲಕವಾಗಿ ಉಪಾಸನೆಮಾಡತಕ್ಕವರು

ಯೋಗವಿತ್ತಮರೋ–ಎಂಬುದನ್ನು ತಿಳಿಸು. ಅರ್ಜುನನ ಅಭಿಪ್ರಾಯ ದಲ್ಲಿಯೂ ಇಬ್ಬರೂ ಯೋಗವಿದರೇ. ಇಬ್ಬರೂ ಪರಮಾತ್ಮನಲ್ಲಿ ಸೇರುವಿಕೆ ಯನ್ನು ತಿಳಿದವರೇ ಆಗಿರುತ್ತಾರೆ. ಆದರೆ ಆ ಇಬ್ಬರು ಯೋಗವಿದರಲ್ಲಿ ಯೋಗವಿತ್ತಮರು ಯಾರು? ಅರ್ಥಾತ್ ಶ್ರೇಷ್ಠರು ಯಾರು? (**ಯೋಗ ವಿತ್, ಯೋಗವಿತ್ತರಃ,ಯೋಗವಿತ್ತಮಃ**) ಅತಿಶಯವಾಗಿ ಯೋಗವನ್ನು ತಿಳಿದವರು ಯಾರು?–ಎಂಬುದು ಅರ್ಜುನನ ಪ್ರಶ್ನೆಯಾಗಿದೆ.)

o o o

**ಮತ್ಕರ್ಮಕೃತ್**–ಎಂಬ ಶ್ಲೋಕದಲ್ಲಿ ಹೇಳಿರುವಂತೆ ನಿರಂತರವಾದ ಭಗವತ್ಕರ್ಮವೇ ಮುಂತಾದುವುಗಳಲ್ಲಿ ಮನಸ್ಸುಕೊಟ್ಟು ತೊಡಗಿ ಅನನ್ಯ ಶರಣರಾಗಿ ವಿಶ್ವರೂಪನಾದ ನಿನ್ನನ್ನು ಯಾರು ಧ್ಯಾನಿಸುತ್ತಾರೆಯೋ ಮತ್ತು ಎಲ್ಲ ವಾಸನೆಗಳನ್ನೂ ತೊರೆದು ಸರ್ವಕರ್ಮಸಂನ್ಯಾಸಿಗಳಾಗಿ ಅವ್ಯಕ್ತವಾದ ಅಕ್ಷರವನ್ನು ಎಂದರೆ ಯಾವ ಉಪಾಧಿಗಳೂ ಇಲ್ಲದ್ದೂ, ಕರಣಗಳಿಗೆ ಗೋಚರವಲ್ಲದ್ದೂ ಆದ ಬ್ರಹ್ಮವನ್ನು ಉಪಾಸನೆಮಾಡುತ್ತಾರೆಯೋ–ಅವ ರಿಬ್ಬರಲ್ಲಿ ಅತಿಶಯವಾಗಿ ಯೋಗವನ್ನು ಬಲ್ಲವರು ಯಾರು? (ಶಂ. ಭಾ.)

**ಮತ್ಕರ್ಮಕೃತ್** ಎಂಬ ಶ್ಲೋಕದಲ್ಲಿ ಹೇಳಿರುವಂತೆ ಪರಿಪೂರ್ಣನಾದ ನಿನ್ನನ್ನು ಯಾರು ಉಪಾಸನೆಮಾಡುತ್ತಾರೆಯೋ ಮತ್ತು ಅವ್ಯಕ್ತವಾದ ಅಕ್ಷರ ವನ್ನು ಎಂದರೆ ಕಣ್ಣು ಮುಂತಾದ ಕರಣಗಳಿಗೆ ಗೋಚರವಾಗದೇ ಇರುವ ಪ್ರತ್ಯಗಾತ್ಮಸ್ವರೂಪವನ್ನು ಉಪಾಸನೆಮಾಡುತ್ತಾರೆಯೋ–ಅವರಿಬ್ಬರಲ್ಲಿ ಅತಿ ಶಯವಾದ ಯೋಗವಿದರು ಯಾರು? ಎಂದರೆ ತನ್ನ ಸಾಧ್ಯವಸ್ತುವನ್ನು ಶೀಘ್ರವಾಗಿ ಹೊಂದುವವರು ಯಾರು?

**ಭವಾಮಿ ನ ಚಿರಾತ್ಪಾರ್ಥ**–ಎಂದು ಮುಂದೆ ಹೇಳುವಂತೆ ಶೀಘ್ರ ದಲ್ಲಿಯೇ ಭಗವಂತನನ್ನು ಹೊಂದುವಿಕೆಯೇ ಅತಿಶಯವಾದ ಯೋಗದ ಅರಿವು. (ರಾ. ಭಾ.)

ಅವ್ಯಕ್ತೋಪಾಸನೆಗಿಂತಲೂ ಭಗವಂತನ ಉಪಾಸನೆಯು ಉತ್ತಮ ವೆಂದು ತೋರಿಸಿ ಅದರ ಉಪಾಯವನ್ನು ಈ ಅಧ್ಯಾಯದಲ್ಲಿ ತೋರಿಸ ಲಾಗುತ್ತದೆ.

**ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯು- ನಾನಿವಸ್ತೇ । ಅಹಂ ರುದ್ರೇಭಿರ್ವಸುಭಿಶ್ಚರಾಮಿ.... ಸಂಬಭೂವ ।**

ಋ. ೮-೬-೧೩-೩೩

ತ್ವಯಾ ಜುಷ್ಟಋಷಿರ್ಭವತಿ ದೇವಿ ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ] ಮಹಾನಾರಾಯಣ ೧೩-೨

ಇತ್ಯಾದಿ ಶ್ರುತಿಗಳು ಅವ್ಯಕ್ತದ ಎಂದರೆ ಶ್ರೀದೇವಿಯ ಉಪಾಸನೆಯೇ ಮೋಕ್ಷಸಾಧನೆಯೆಂದು ಹೇಳುತ್ತದೆ.

ವಾಸ್ತವವಾಗಿ ಅವ್ಯಕ್ತದ ಉಪಾಸನೆಯನ್ನು ಮೋಕ್ಷದ ಉಪಾಯವೆಂದು ಕರೆದಿರುವುದು ಭಗವದುಪಾಸನೆಯ ಆಧಿಕ್ಯವನ್ನು ಸಮರ್ಥಿಸುವುದ ಕ್ಕೋಸ್ಕರವೇ.

ಹೀಗಿರುವಾಗ ಯಾವ ಉಪಾಸನೆಯು ಶ್ರೇಷ್ಠ? ಯಾವುದನ್ನು ಉಪಾ ಸನೆಮಾಡಬೇಕು?–ಎಂಬ ಶಂಕೆಯು ಸಂಭವಿಸುತ್ತದೆ. ಇದಕ್ಕೆ ಉತ್ತರ ತಿಳಿದಿದ್ದರೂ ಕೂಡ ಸೂಕ್ಷ್ಮಯುಕ್ತಿಯ ಅರಿವಿಗೋಸ್ಕರ **ಏವಂ ಸತತಯುಕ್ತಾ ಯೇ** ಇತ್ಯಾದಿಯಾಗಿ ಅರ್ಜುನನು ಪ್ರಶ್ನಿಸುತ್ತಾನೆ.

**ಅವ್ಯಕ್ತಂ** = ಪ್ರಕೃತಿ.

**ಮಹತಃ ಪರಮವ್ಯಕ್ತಂ ।** (ಕಠ)

**ಯತ್ತತ್ ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಮ್ ।**
**ಪ್ರಧಾನಂ ಪ್ರಕೃತಿಂ ಪ್ರಾಹುಃ ಅವಿಶೇಷಂ ವಿಶೇಷವತ್ ॥**

ಭಾಗವತ ೩-೨೬-೧೦

ಇದು ಅಕ್ಷರವೂ ಆಗಿದೆ. **ಅಕ್ಷರಾತ್ಪರತಃ ಪರಃ ।** (ಮುಂಡಕ)

ಪರಬ್ರಹ್ಮವು ಭಗವಂತನಿಂದ ಬೇರೆಯಲ್ಲ. ಅದರ ರೂಪವನ್ನು ಹಿಂದೆ ಸಾಧಿಸಿದೆ. ಹಾಗೆಯೇ ಅದನ್ನು ಉಪಾಸನೆಮಾಡಬೇಕು.

**ಸಹಸ್ರಶೀರ್ಷಾಪುರುಷಃ.....ಇಹ ಭವತಿ । ನಾನ್ಯಃ ಪನ್ಥಾ ಅಯನಾಯ ವಿದ್ಯತೇ ।** (ಮ. ಭಾ.)

**ಶ್ರೀಭಗವಾನುವಾಚ :**

**ಓಂ ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥೨॥**

ಶ್ರೀ ಭಗವಂತನು ಹೇಳುತ್ತಾನೆ :

ನನ್ನಲ್ಲಿಯೇ ಮನಸ್ಸನ್ನು ಇಟ್ಟು ಯಾರು ನಿತ್ಯಯುಕ್ತರಾಗಿ ಪರಮ ಶ್ರದ್ಧೆಯಿಂದ ಕೂಡಿ ನನ್ನನ್ನು ಉಪಾಸನೆಮಾಡುತ್ತಾರೆಯೋ–ಅವರು ಯುಕ್ತತಮರು ಎಂದು ನನ್ನ ಅಭಿಮತವು.

* * *

(ಇಲ್ಲಿ ಭಗವಂತನು ಭಗವದುಪಾಸಕರನ್ನೇ ಯುಕ್ತತಮರು ಅಥವಾ ಯೋಗವಿತ್ತಮರು ಎನ್ನುತ್ತಾನೆ.

**ಮಯ್ಯಾವೇಶ್ಯ ಮನಃ** = ಯಾರು ತಮ್ಮ ಮನಸ್ಸನ್ನು ನನ್ನಲ್ಲಿಯೇ ನೆಟ್ಟುಬಿಟ್ಟಿರುವರೋ.

ಮನಸ್ಸು ಯಾವಾಗಲೂ ಸರ್ವಶಕ್ತಿವಂತನಾದ, ಸರ್ವಾಂತರ್ಯಾಮಿಯಾದ, ಸಕಲಗುಣಪರಿಪೂರ್ಣನಾದ ಪರಮಾತ್ಮನಲ್ಲಿಯೇ ಲೀನವಾಗಿರಬೇಕು. **'ಆವೇಶ್ಯ'** ಪದವು ವಿಶ–ಪ್ರವೇಶನೆ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಲ್ಯಪ್ ಪ್ರತ್ಯಯಾಂತವಾದ ಅವ್ಯಯವಾಗಿದೆ. ಮನಸ್ಸು ಅವನ ಮೇಲಿರುವುದು ಮಾತ್ರವಲ್ಲ. ಅವನಲ್ಲೇ ನೆಟ್ಟುಕೊಂಡಿರಬೇಕು ; ಸರ್ವದಾ ಅವನನ್ನೇ ಧ್ಯಾನಮಾಡುತ್ತಿರಬೇಕು. ನಿತ್ಯಯುಕ್ತರು ಎಂದರೂ ಇದೇ ಅರ್ಥವಾಗುತ್ತದೆ. ಸದಾ ಅವನಲ್ಲಿಯೇ ಯುಕ್ತರಾಗಿರಬೇಕು. ಮನಸ್ಸು ಅವನನ್ನೇ ಧ್ಯಾನಮಾಡುತ್ತಿರಬೇಕು. ಮಾಡುವ ಎಲ್ಲ ಕಾರ್ಯಗಳೂ ಅವನಿಗೇ ಸೇರಿದುವೆಂದು ಭಾವಿಸಿ ಮಾಡಬೇಕು. ಯಾವ ಕಾರ್ಯವನ್ನಾದರೂ ಫಲಕಾಮನೆಯಿಂದ ಮಾಡಬಾರದು. **ಶ್ರದ್ಧಯಾ ಪರಯೋಪೇತಾಃ**= ಪರಮಶ್ರದ್ಧಾಯುಕ್ತರಾಗಿರಬೇಕು. ಶ್ರದ್ಧೆ ಎಂದರೆ ಆಸಕ್ತಿ. ಅವನಲ್ಲಿಯೇ ಯಾವಾಗಲೂ ಆಸಕ್ತಿಯುಳ್ಳವರಾಗಿರಬೇಕು.

**ಓಂ ನಮೋ ವಿಷ್ಣವೇ ತಸ್ಮೈ ನಮಸ್ತಸ್ಮೈ ಪುನಃ ಪುನಃ ।**
**ಯತ್ರ ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವಸಂಶ್ರಯಃ ॥**

ವಿ. ಪು. ೧-೧೯

ಓಂ, ವಿಷ್ಣುವಿಗೆ ನಮಸ್ಕಾರ! ಆತನಿಗೆ ಮತ್ತೆ ಮತ್ತೆ ನಮಸ್ಕಾರ. ಯಾವನಲ್ಲಿ ಎಲ್ಲವೂ ಇರುವುದೋ, ಯಾವಾತನಿಂದ ಎಲ್ಲವೂ ಆಗಿರುವುದೋ, ಯಾವನು ಎಲ್ಲಕ್ಕೂ ಆಶ್ರಯನಾಗಿರುವನೋ ಆತನಿಗೆ ನಮಸ್ಕಾರ. ಈ ಭಾವನೆಯನ್ನು ಉಪಾಸಕನು ಮೈಗೂಡಿಸಿಕೊಳ್ಳಬೇಕು.

ಗೋಪಿಕಾಸ್ತ್ರೀಯರಂತೆ ಅವನನ್ನು ಸದಾ ನೆನೆಯುತ್ತಿರಬೇಕು.

**ಯಾ ದೋಹನೇಽವಹನನೇ ಮಥನೋಪಲೇಪ-**
**ಪ್ರೇಙ್ಖೇಙ್ಖನಾರ್ಭರುದಿತೋಕ್ಷಣಮಾರ್ಜನಾದೌ ।**
**ಗಾಯನ್ತಿ ಚೈನಮನುರಕ್ತಧಿಯೋಽಶ್ರುಕಣ್ಠ್ಯೋ**
**ಧನ್ಯಾ ವ್ರಜಸ್ತ್ರಿಯ ಉರುಕ್ರಮಚಿತ್ತಯಾನಾಃ ॥**

ಭಾಗವತ ೧೦-೪೪-೧೫

ಹಾಲುಕರೆಯುವ ಸಮಯದಲ್ಲಿ, ಧಾನ್ಯಾದಿಗಳನ್ನು ಕುಟ್ಟುವ ಸಮಯದಲ್ಲಿ, ಮೊಸರು ಕಡೆಯುವ ಸಮಯದಲ್ಲಿ, ಅಂಗಳವನ್ನು ಸಾರಿಸುವ ಸಮಯದಲ್ಲಿ, ಮಕ್ಕಳನ್ನು ತೂಗುವ ಸಮಯದಲ್ಲಿ, ಅಳುತ್ತಿರುವ ಮಕ್ಕಳನ್ನು ಸಮಾಧಾನಪಡಿಸಲು ಜೋಗುಳ ಹಾಡುವ ಸಮಯದಲ್ಲಿ, ಮನೆಯಲ್ಲಿ ನೆಲಕ್ಕೆ ನೀರು ಚುಮುಕಿಸುವ ಸಮಯದಲ್ಲಿ ಶ್ರೀಕೃಷ್ಣನಲ್ಲಿಯೇ ಅನುರಕ್ತವಾದ ಬುದ್ಧಿಯುಳ್ಳ ಗೋಪಿಕಾಸ್ತ್ರೀಯರು, ಗೋಪಾಲನನ್ನು ನೆನೆದು ಕಂಬನಿತುಂಬಿದ ಕಣ್ಣುಗಳಿಂದ ಕೂಡಿದವರಾಗಿ (ಗದ್ಗದಧ್ವನಿಯುಳ್ಳವರಾಗಿ) ಅವನ ಸ್ತೋತ್ರವನ್ನೇ ಹಾಡುತ್ತಿರುತ್ತಾರೆ. ಈ ರೀತಿಯಾಗಿ ಸದಾಕಾಲದಲ್ಲಿಯೂ ಉರುಕ್ರಮನಲ್ಲಿಯೇ (ಶ್ರೀಕೃಷ್ಣನಲ್ಲಿಯೇ) ನೆಟ್ಟ ಮನಸ್ಸುಳ್ಳ ಗೋಪಿಕಾಸ್ತ್ರೀಯರೇ ಧನ್ಯರು. ಈ ರೀತಿಯಲ್ಲಿ ಯಾರು ನನ್ನ ಉಪಾಸನೆಮಾಡುತ್ತಾರೆಯೋ ಅವರೇ ನನಗೆ ಯುಕ್ತತಮರು ಅಥವಾ ಯೋಗವಿತ್ತಮರು ಎಂಬುದು ನನ್ನ ಅಭಿಮತವಾಗಿದೆ.)

o o o

ಎಲ್ಲ ಕಾಮ್ಯಗಳನ್ನೂ ತೊರೆದಿರುವ ಪೂರ್ಣಜ್ಞಾನಿಗಳಾದ ಅಕ್ಷರೋಪಾಸಕರು ಯಾರುಂಟೋ ಅವರ ವಿಷಯವು ಹಾಗಿರಲಿ. ಅವರ ವಿಷಯದಲ್ಲಿ ಹೇಳಬೇಕಾದುದನ್ನು ಮುಂದೆ ಹೇಳುವೆನು. ಆದರೆ ನನ್ನಲ್ಲಿ ಸತತ ಯುಕ್ತರಾದ ಭಕ್ತರು ಎಂದು ಯಾರನ್ನು ಕೇಳಿದೆಯೋ ಅವರ ಬಗೆಗೆ ಹೇಳುವುದಾದರೆ ಹಾಗೆ ನನ್ನಲ್ಲಿ ಮನಸ್ಸನ್ನಿರಿಸಿ ಪರಮಶ್ರದ್ಧೆಯಿಂದ ಕೂಡಿ ಸತತ ಯುಕ್ತರಾಗಿ ಹನ್ನೊಂದನೇ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಹೇಳಿರುವಂತೆ ನಿರಂತರವಾಗಿ ಯಾರು ನನ್ನನ್ನು ಉಪಾಸನೆಮಾಡುತ್ತಾರೆಯೋ ಅವರು ಶ್ರೇಷ್ಠತಮರಾದ ಯೋಗಿಗಳು ಎಂದು ನನ್ನ ಅಭಿಪ್ರಾಯ. (ಶಂ. ಭಾ.)

**ಮಾಂ** = ಸರ್ವಯೋಗೇಶ್ವರರಿಗೂ ಅಧೀಶ್ವರನೂ, ಸರ್ವಜ್ಞನೂ,

ರಾಗವೇ ಮುಂತಾದ ಐದು ಕ್ಲೇಶಗಳೆಂಬ ಅಜ್ಞಾನದೃಷ್ಟಿಯಿಲ್ಲದವನೂ ಆದ ನನ್ನನ್ನು.

**ಮೇ ಯುಕ್ತತಮಾ ಮತಾಃ ತೇ ಯುಕ್ತತಮಾ ಮೇ ಮತಾಃ** ಅವರು ಶ್ರೇಷ್ಠತಮರೆಂದು ನನ್ನ ಅಭಿಪ್ರಾಯ. ಅವರು ನಿರಂತರವಾಗಿ ನನ್ನಲ್ಲೇ ಚಿತ್ತವನ್ನಿರಿಸಿ ಹಗಲು-ರಾತ್ರಿಗಳೆಲ್ಲವನ್ನೂ ಕಳೆಯುತ್ತಾರೆ. ಆದುದರಿಂದ ಅವರನ್ನು ಯುಕ್ತತಮರೆಂದು ಹೇಳುವುದು ಯುಕ್ತವೇ ಆಗಿದೆ.

ನಿತ್ಯಯುಕ್ತಾಃ = ನಿತ್ಯಯೋಗವನ್ನು ಬಯಸುವವರಾಗಿ, ಅವರು ಸುಖವಾಗಿ ಶೀಘ್ರದಲ್ಲಿಯೇ ನನ್ನನ್ನು ಹೊಂದುತ್ತಾರೆ. (ರಾ. ಭಾ.)

**ಓಂ ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥೩॥**

**ಓಂ ಸಂನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ॥೪॥**

ಯಾರು ನಿರ್ದೇಶಿಸಲು ಅಸಾಧ್ಯವಾದ, ಅವ್ಯಕ್ತವಾದ, ಸರ್ವವ್ಯಾಪ್ತವಾದ, ಅಚಿಂತ್ಯವಾದ, ಕೂಟಸ್ಥವಾದ, ಅಚಲವಾದ, ಸ್ಥಿರವಾದ ಅಕ್ಷರವನ್ನು–ಇಂದ್ರಿಯಗ್ರಾಮಗಳನ್ನು ಸಂನಿಯಮನಮಾಡಿಕೊಂಡು, ಎಲ್ಲೆಲ್ಲೂ ಸಮ ಬುದ್ಧಿಯಿಂದ ಕೂಡಿದವರಾಗಿ, ಸರ್ವಪ್ರಾಣಿಗಳ ಹಿತದಲ್ಲಿಯೇ ನಿರತರಾಗಿ ಉಪಾಸನೆಮಾಡುತ್ತಾರೆಯೋ–ಅವರೂ ಸಹ ನನ್ನನ್ನೇ ಪಡೆಯುವರು.

* * *

(ಹಿಂದಿನ ಶ್ಲೋಕದಲ್ಲಿ ತನ್ನ ಪರಮಭಕ್ತರು ತನಗೆ ಯುಕ್ತತಮರೆಂದು ಭಗವಂತನು ಹೇಳಿದನೇ ಹೊರತು ಅಕ್ಷರಬ್ರಹ್ಮೋಪಾಸಕರ ವಿಷಯವಾಗಿ ಅಲ್ಲಿ ಏನೂ ಹೇಳಿಲ್ಲ. ಆದರೆ ಅವನ ಪರಮಭಕ್ತರು ಯುಕ್ತತಮರು ಎಂದು ಭಗವಂತನೇ ಸ್ಪಷ್ಟವಾಗಿ ಹೇಳಿರುವಾಗ ಅಕ್ಷರಬ್ರಹ್ಮೋಪಾಸಕರು ಪರಮಾತ್ಮನನ್ನು ಹೊಂದುವುದಿಲ್ಲವೇ?–ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅದಕ್ಕೆ ಉತ್ತರವಾಗಿ ಇಲ್ಲಿ **ತೇ ಪ್ರಾಪ್ನುವನ್ತಿ ಮಾಮೇವ** =ಅವರೂ ನನ್ನನ್ನೇ ಸೇರುತ್ತಾರೆ. ಎರಡು ಬಗೆಯ ಉಪಾಸನೆಗಳ ಫಲಿತಾಂಶವೂ ಒಂದೇ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

ನಿರ್ದೇಶನಕ್ಕೆ ವಸ್ತುವಾಗದೇ ಇರುವ, ಇಂದ್ರಿಯಗಳಿಗೆ ವಿಷಯನಲ್ಲದ, ಇಂದ್ರಿಯಗಳಿಂದ ತಿಳಿದುಕೊಳ್ಳಲು ಅಸಾಧ್ಯನಾದ, ರೂಪ-ಆಕೃತಿ ಮುಂತಾದುವುಗಳಿಲ್ಲದ, ಆಕಾಶದಂತೆ ಸರ್ವವ್ಯಾಪಕನಾದ, ಮನಸ್ಸು-ಬುದ್ಧಿಗಳಿಗೆ ವಿಷಯನಾಗದ, ಯಾವ ವಿಧವಾದ ಪರಿವರ್ತನವೂ ಇಲ್ಲದೇ ಏಕ ರೂಪನಾಗಿರುವ, ಕಂಬದಂತೆ ಇರುವ, ಸರ್ವಥಾ ಚಲನಕ್ರಿಯೆಯಿಲ್ಲದೇ ಇರುವ, ಸುಸ್ಥಿರನಾಗಿರುವ, ನಿತ್ಯನಾಗಿರುವ, ನಾಶವಿಲ್ಲದೇ ಇರುವ ಅಕ್ಷರ ಬ್ರಹ್ಮನನ್ನು–ಇಂದ್ರಿಯಗಳ ಸಮುದಾಯವನ್ನು ಉಪಸಂಹರಿಸಿ ಎಲ್ಲ ಕಡೆಯಲ್ಲೂ ಸಮಬುದ್ಧಿಯುಳ್ಳವರಾಗಿ **ಸರ್ವಂ ಖಲ್ವಿದಂ ಬ್ರಹ್ಮ** ಎಂಬ ಭಾವನೆಯಿಂದ ಎಲ್ಲ ಪ್ರಾಣಿಗಳಲ್ಲಿಯೂ ಪರಮಾತ್ಮನನ್ನೇ ಕಾಣುತ್ತಾ ಸರ್ವ ಪ್ರಾಣಿಗಳ ಹಿತದಲ್ಲಿಯೂ ಆಸಕ್ತಿಯುಳ್ಳವರಾಗಿ ಯಾರು ಉಪಾಸನೆ ಮಾಡುತ್ತಾರೆಯೋ ಅಂತಹವರೂ ಸಹ ನನ್ನನ್ನೇ ಸೇರುತ್ತಾರೆ.)

O O O

**ಅವ್ಯಕ್ತಃ** = ಯಾವ ಪ್ರಮಾಣದಿಂದಲೂ ವ್ಯಕ್ತವಾಗದೇ ಇರುವುದು. **ಉಪಾಸನೆ** = ಶಾಸ್ತ್ರಕ್ಕೆ ಅನುಗುಣವಾಗಿ ಉಪಾಸ್ಯವಸ್ತುವನ್ನು ಬುದ್ಧಿಗೆ ವಿಷಯವನ್ನಾಗಿ ಮಾಡಿಕೊಂಡು ಅದರ ಬಳಿಗೆ ಹೋಗಿ ಎಣ್ಣೆಯ ಧಾರೆಯಂತೆ ಅದಕ್ಕೆ ಸಮನಾದ ಪ್ರತ್ಯಯವುಳ್ಳ ಪ್ರವಾಹದೊಡನೆ ದೀರ್ಘಕಾಲ ಕುಳ್ಳಿರುವಿಕೆ.

**ಕೂಟಸ್ಥಂ**=ಕೂಟ ಎಂದರೆ ಅನೇಕಸಂಸಾರಗಳಿಗೆ ಬೀಜವಾಗಿ ಹೊರಗೆ ಒಳ್ಳೆಯದರಂತೆ ಕಾಣಿಸಿಕೊಂಡರೂ ಒಳಗೆ ದೋಷವನ್ನು ಹೊಂದಿರುವ ಮಾಯೆ–ಅವ್ಯಾಕೃತ ಮುಂತಾದ ಶಬ್ದಗಳಿಂದ ಕರೆಯಲ್ಪಡುವ ಅವಿದ್ಯೆಯೇ ಮುಂತಾದ ಪದಾರ್ಥ. ಕೂಟ ಎಂದರೆ ಒಳಗೆ ದೋಷವುಳ್ಳ ವಸ್ತು. ಕೂಟ ರೂಪವಾದುದು. ಇದೇ ಅರ್ಥವು ಕೂಟಸಾಕ್ಷ್ಯ ಮುಂತಾದ ಸ್ಥಳದಲ್ಲಿ ಪ್ರಸಿದ್ಧವಾಗಿದೆ. **ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್ । ಮಮ ಮಾಯಾ ದುರತ್ಯಯಾ**–ಅಂತಹ ಕೂಟದಲ್ಲಿ ಅದಕ್ಕೆ ಅಧ್ಯಕ್ಷನಾಗಿರುವುದು. ಕೂಟಸ್ಥ ; ಅಥವಾ ಕೂಟ ಎಂದರೆ ರಾಶಿ, ಅದರಂತೆ ಇರುವುದು. ಆದುದರಿಂದಲೇ ಅಚಲವಾಗಿರುವುದು ; ನಿತ್ಯವಾಗಿರುವುದು. (ಶಂ. ಭಾ.)

**ಅನಿರ್ದೇಶ್ಯಂ**=ದೇಹದಿಂದ ಬೇರೆಯಾದ್ದರಿಂದ ದೇವ ಮುಂತಾದ ಶಬ್ದಗಳಿಂದ ನಿರ್ದೇಶಿಸಲು ಬರದೇ ಇರುವುದು, ಕಣ್ಣು ಮುಂತಾದ ಕರಣಗಳಿಗೆ ಅಭಿವ್ಯಕ್ತವಾಗದೇ ಇರುವುದು. ದೇವತೆ ಮುಂತಾದ ದೇಹಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಇದ್ದರೂ ಅದಕ್ಕಿಂತಲೂ ಬೇರೆ ಜಾತಿಯದಾದುದರಿಂದ ಚಿಂತಿಸಲು ಅಸಾಧ್ಯವು. ಅದೇ ಕಾರಣದಿಂದ ಕೂಟಸ್ಥವು ಸರ್ವ ಸಾಧಾರಣವು. ಪರಿಣಾಮಿಯಲ್ಲದುದರಿಂದ ತನ್ನ ಅಸಾಧಾರಣವಾದ ಆಕಾರದಿಂದ ಜಾರದೇ ಇರುವುದರಿಂದ ಅಚಲವು ಮತ್ತು ಅದೇ ಕಾರಣದಿಂದ ನಿತ್ಯವೂ ಆಗಿರುವ ಅಕ್ಷರವನ್ನು ಎಂದರೆ ಪ್ರತ್ಯಗಾತ್ಮಸ್ವರೂಪವನ್ನು ಉಪಾಸನೆಮಾಡುವವರೂ ನನ್ನನ್ನೇ ಹೊಂದುತ್ತಾರೆ. ನನ್ನ ಸಾಧರ್ಮ್ಯವನ್ನು ಹೊಂದುತ್ತಾರೆ. (ರಾ. ಭಾ.)

ನಿನ್ನ ಉಪಾಸಕರೇ ಉತ್ತಮರಾಗಲಿ ; ಆದರೆ ಇತರರಿಗೆ (ಅವ್ಯಕ್ತೋಪಾಸಕರಿಗೆ) ದೊರೆಯುವ ಫಲವೇನು? ಎಂಬುದಕ್ಕೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾನೆ.

**ಕೂಟಸ್ಥ**–ಎಂದರೆ ಪ್ರಕೃತಿ. ಆಕಾಶದಲ್ಲಿ ಇರುವುದರಿಂದ ಅದಕ್ಕೆ ಕೂಟಸ್ಥ ಎಂದು ಹೆಸರು.

**ಆಕಾಶೇ ಸಂಸ್ಥಿತಾ ತ್ವೇಷಾ ತತಃ ಕೂಟಸ್ಥಿತಾ ಮತಾ ॥**

ಋಗ್ವೇದ ಖಿಲ

ಆಕೆಯು ಸರ್ವತ್ರ ಇರತಕ್ಕವಳು, ನಿಶ್ಚಲೆ ಮತ್ತು ಅಕ್ಷರವಾಗಿದ್ದಾಳೆ.

**ಸಾ ಸರ್ವಗಾ ನಿಶ್ಚಲಾ ಲೋಕಯೋನಿಃ ಸಾ ಚಾಕ್ಷರಾ ವಿಶ್ವಗಾ ವಿರಜಸ್ಕಾ.** (ಸಾಮವೇದ ಗೌಪಮನಶಾಖಾ) (ಮ. ಭಾ.)

**ಓಂ ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥೫॥**

ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳ ಅವರಿಗೆ ಕ್ಲೇಶವು ಅಧಿಕತರವಾಗಿರುತ್ತದೆ. ಏಕೆಂದರೆ : ಅವ್ಯಕ್ತವೆಂಬ ಗತಿಯು ದೇಹವಂತರಿಗೆ ಕಷ್ಟದಿಂದ ದೊರೆಯುತ್ತದೆ.

* * *

( ಅಕ್ಷರಬ್ರಹ್ಮೋಪಾಸಕರೂ ನನ್ನನ್ನೇ ಸೇರುತ್ತಾರೆ ; ಕರ್ಮಯೋಗಿ

ಗಳೂ ಅಥವಾ ಭಕ್ತಿಯೋಗಿಗಳೂ ನನ್ನನ್ನೇ ಸೇರುತ್ತಾರೆ–ಎಂದು ಭಗವಂತನು ಹೇಳಿರುವಾಗ ತರ-ತಮಭಾವಕ್ಕೆ (ಶ್ರೇಷ್ಠತಮ ಎಂಬುದಕ್ಕೆ ) ಕಾರಣವೇನು? ಎಂಬ ಪ್ರಶ್ನೆಗೆ ಶ್ರೀಕೃಷ್ಣನು ಸಮಾಧಾನಹೇಳುತ್ತಾನೆ. ಸಾಧಕನ ದೃಷ್ಟಿಯಿಂದ ತರ-ತಮಭಾವವೇ ಹೊರತು ಫಲಿತಾಂಶದ ದೃಷ್ಟಿಯಿಂದಲ್ಲ. ಸಾಧಕನಿಗೆ ಭಕ್ತಿಮಾರ್ಗದ ಭಗವದುಪಾಸನೆಯು ಸುಲಭ. ಅವ್ಯಕ್ತದ ಉಪಾಸನೆಯು ಕಷ್ಟ. ಏಕೆಂದರೆ : ಅವ್ಯಕ್ತವು ಮನಸ್ಸಿಗೆ ಗೋಚರವಾಗತಕ್ಕುದಲ್ಲ. ಅವ್ಯಕ್ತ ಅಥವಾ ಅಕ್ಷರವಸ್ತುವಿನಲ್ಲಿಯೇ ಆಸಕ್ತವಾದ ಚಿತ್ತವುಳ್ಳವರಿಗೆ ಕ್ಲೇಶವು ತುಂಬ ಹೆಚ್ಚಾಗಿರುತ್ತದೆ. ದೇಹವಂತರಿಗೆ ಅವ್ಯಕ್ತದ ಉಪಾಸನೆಯ ಮಾರ್ಗವು ಬಹಳ ಕಷ್ಟದಿಂದ ಸಾಧ್ಯವಾಗುವುದು.

ದೇಹವಂತರಿಗೆ ಸಾಕಾರನಾದ ಭಗವಂತನನ್ನು ಧ್ಯಾನಮಾಡಲು ಸುಲಭ. ಕರಣಗಳಿಗೆ ಸಿಕ್ಕದೇ ಇರುವ ಅವ್ಯಕ್ತನನ್ನು ಅನುಸಂಧಾನಮಾಡು ವುದು ಸ್ವಾಭಾವಿಕವಾಗಿಯೇ ಅತಿಕಷ್ಟ.

ಇದಲ್ಲದೇ ಭಗವಂತನನ್ನೇ ಯಾರು ಶ್ರದ್ಧೆಯಿಂದ ಉಪಾಸನೆಮಾಡು ತ್ತಾರೆಯೋ ಅವರಿಗೆ ಜ್ಞಾನವನ್ನು ದಯಪಾಲಿಸುವ ಮತ್ತು ಭವಬಂಧನವನ್ನು ಬಿಡಿಸುವ ಹೊಣೆಗಾರಿಕೆಯನ್ನು ಭಗವಂತನು ವಹಿಸಿಕೊಳ್ಳುತ್ತಾನೆ. ಆದುದರಿಂದ ಸಾಧಕನು ನಿರ್ಭಯನೂ, ನಿರ್ಭರನೂ, ಆಗಿ ಸಾಧನೆಮಾಡ ಬಹುದು. ಅವನ ಯೋಗವಿಘ್ನಗಳನ್ನು ಭಗವಂತನೇ ಪರಿಹರಿಸುತ್ತಾನೆ.

ಅವ್ಯಕ್ತೋಪಾಸಕರಿಗಾದರೋ ತಮ್ಮ ವಿವೇಕದಿಂದಲೇ ಅವುಗಳನ್ನು ಪರಿಹರಿಸಿಕೊಂಡು ತುಂಬ ಸಾವಧಾನತೆಯಿಂದ ಮುಂದುವರಿಯಬೇಕಾಗು ತ್ತದೆ. ಅವರ ದಾರಿಯು ಕತ್ತಿಯ ಅಲುಗಿನ ಮೇಲೆ ನಡೆದಂತೆ. ಸಂತ ತುಲಸೀದಾಸರು ಹೇಳುವಂತೆ ಅವ್ಯಕ್ತೋಪಾಸಕರನ್ನು ಭಗವಂತನು ವಿವೇಕಿ ಯಾದ ಹಿರಿಯ ಮಗನನ್ನು ಹೇಗೋ ಹಾಗೆ ನೋಡುತ್ತಾನೆ. ಭಕ್ತನನ್ನಾದರೋ ಕಿರಿಯ ಮಗುವನ್ನು ನೋಡಿಕೊಳ್ಳುವಂತೆ ಅವನ ಪೂರ್ಣಯೋಗ–ಕ್ಷೇಮವನ್ನೆಲ್ಲಾ ತಾನೇ ವಹಿಸಿಕೊಳ್ಳುತ್ತಾನೆ.)

o o o

**ಅಧಿಕತರಃ** = ಕರ್ಮ ಮುಂತಾದುವುಗಳಲ್ಲಿ ಆಸಕ್ತರಾಗಿರುವ ಸಾಧಕ

ರಿಗೂ ಅಧಿಕಕ್ಲೇಶವಿರುತ್ತದೆ. ಆದರೆ ಅವ್ಯಕ್ತದಲ್ಲಿ ಆಸಕ್ತವಾಗಿರುವ ಅಕ್ಷರಾತ್ಮರಾದ ಪರಮಾರ್ಥದರ್ಶಿಗಳಿಗೆ ಇನ್ನೂ ಹೆಚ್ಚು ಕ್ಲೇಶ. ಏಕೆಂದರೆ : ಅವರು ದೇಹಾಭಿಮಾನವನ್ನು ಪೂರ್ಣವಾಗಿ ಪರಿತ್ಯಾಗಮಾಡಬೇಕಾಗುತ್ತದೆ. **ದೇಹವದ್ಭಿಃ**=ದೇಹಾಭಿಮಾನವುಳ್ಳವರಿಂದ. ಅಕ್ಷರೋಪಾಸಕರ ಆಚಾರ-ವಿಚಾರ-ವ್ಯವಹಾರಗಳು ಹೇಗಿರುತ್ತವೆ?–ಎಂಬುದನ್ನು ಮುಂದೆ (**ಅದ್ವೇಷ್ಟಾ ಸರ್ವಭೂತಾನಾಂ** ಇತ್ಯಾದಿ) ಹೇಳುತ್ತೇನೆ. (ಶಂ. ಭಾ.)

ಮುಂಡಕದಲ್ಲಿ **ಅಥ ಪರಾ ಯಯಾ ತದಕ್ಷರಮಧಿಗಮ್ಯತೇ** ಎಂಬಲ್ಲಿ ಅಕ್ಷರಶಬ್ದವು ಪರಬ್ರಹ್ಮವನ್ನು ಹೇಳುತ್ತದೆ. ಏಕೆಂದರೆ ಅದನ್ನು ಭೂತಯೋನಿ ಎಂದು ಕರೆದಿದೆ.

**ಅಕ್ಷರ** ಎಂಬ ಶಬ್ದಕ್ಕೆ ಇಲ್ಲಿ ಕೂಟಸ್ಥನಾದ ಪುರುಷ ಎಂದೇ ಅರ್ಥ. ಪುರುಷೋತ್ತಮನು ಇದಕ್ಕಿಂತಲೂ ಉತ್ತಮನು.

**ಕೂಟಸ್ಥೋಽಕ್ಷರ ಉಚ್ಯತೇ । ಉತ್ತಮಃ ಪುರುಷಸ್ತ್ವನ್ಯಃ ।**

ಗೀತಾ. ೧೫-೧೬

ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ ಅಧಿಕತರವಾದ ಕ್ಲೇಶ. ಏಕೆಂದರೆ : ದೇಹವುಳ್ಳವರಿಗೆ ಎಂದರೆ ದೇಹಾತ್ಮಾಭಿಮಾನವುಳ್ಳವರಿಗೆ ಅವ್ಯಕ್ತ ವಿಷಯವಾದ ಮನೋವೃತ್ತಿಯು ಸಿಕ್ಕುವುದು ಕಷ್ಟ. ಅವರು ದೇಹವನ್ನೇ ಆತ್ಮವೆಂಬುದಾಗಿ ತಿಳಿಯುತ್ತಾರೆ. (ರಾ. ಭಾ.)

ಹಾಗಾದರೆ ನಿನ್ನನ್ನು ಉಪಾಸನೆಮಾಡುವವರು ಉತ್ತಮರು ಹೇಗೆ?–ಎಂದರೆ ಈ ಶ್ಲೋಕವು ಉತ್ತರ ಕೊಡುತ್ತದೆ. ಅವ್ಯಕ್ತವು ಅನಿರ್ದೇಶ್ಯ. ತರ್ಕಿಸಲು ಸಾಧ್ಯವಿಲ್ಲದ್ದು. ಮಾಯೆಯು ಅನಿರ್ದೇಶ್ಯವೆಂಬುದನ್ನು ಭಾಗವತವು ಹೇಳುತ್ತದೆ. **ಅಪ್ರತರ್ಕ್ಯಾದನಿರ್ದೇಶ್ಯಾತ್.** (ಭಾಗವತ)

**ತಮೋ ಹ್ಯವ್ಯಕ್ತಮಜರಂ ಅನಿರ್ದೇಶ್ಯಮೇಷಾ ಹ್ಯೇವ ಪ್ರಕೃತಿಃ ।**

ಸರ್ವಗವಾಗಿರುವುದು ಮತ್ತು ಚಿಂತಿಸುವುದಕ್ಕೆ ಬರದೇ ಇರುವುದು ಮುಂತಾದುವು ಅದರ ಲಕ್ಷಣ.

**ಗತಿಃ** = ಮಾರ್ಗ. ಅವ್ಯಕ್ತದ ಮಾರ್ಗವು ಕಷ್ಟವುಳ್ಳದ್ದು. ಅವ್ಯಕ್ತೋಪಾಸನೆಯ ಮೂಲಕ ನನ್ನನ್ನು ಹೊಂದುವ ಮಾರ್ಗವು ಕಷ್ಟತರವಾದುದು.

ಶ್ರೀದೇವಿಯ ಅವ್ಯಕ್ತದ ಪ್ರತ್ಯಕ್ಷವಾಗಬೇಕಾಗಿದ್ದರೆ ಅತ್ಯಂತಾತಿಶಯ

ವಾದ ಉಪಾಸನೆಯು ಬೇಕು. ಎಲ್ಲ ಇಂದ್ರಿಯಗಳ ನಿಯಮನವು ಬೇಕು. ಎಲ್ಲರಲ್ಲಿಯೂ ಸಮಬುದ್ಧಿ, ಸರ್ವಭೂತಹಿತದಲ್ಲಿ ತೊಡಗುವಿಕೆ, ಸದಾಚಾರ, ಒಳ್ಳೆಯ ವಿಷ್ಣುಭಕ್ತಿ–ಮುಂತಾದ ಸಾಧನಸಂಪತ್ತಿಯೂ ಬೇಕು. ಇವುಗಳಿಲ್ಲದೇ ಅವ್ಯಕ್ತದ ಪ್ರತ್ಯಕ್ಷವಾಗುವುದಿಲ್ಲ. ಅದಿಲ್ಲದೇ ವಿಷ್ಣುಪ್ರಸಾದವು ಉಂಟಾಗುವುದಿಲ್ಲ. ಅದಿದ್ದರೂ ಕೂಡ ಚೆನ್ನಾಗಿ ಭಗವಂತನನ್ನು ಉಪಾಸನೆ ಮಾಡದಿದ್ದರೆ ವಿಷ್ಣುವಿನ ಪ್ರಸನ್ನತೆಯು ಸಿದ್ಧಿಸುವುದಿಲ್ಲ. ವಿಷ್ಣುವಿನ ಪ್ರಸನ್ನತೆಯಿಲ್ಲದೇ ಮೋಕ್ಷವಿಲ್ಲ. ಅವ್ಯಕ್ತೋಪಾಸನೆಯಿಲ್ಲದಿದ್ದರೂ ಭಗವಂತನನ್ನು ಉಪಾಸನೆಮಾಡತಕ್ಕವರಿಗೆ ಮೋಕ್ಷವು ಸಿಕ್ಕಿಯೇ ಸಿಕ್ಕುತ್ತದೆ. ಆದುದರಿಂದ ಅವ್ಯಕ್ತೋಪಾಸನೆಯ ಮಾರ್ಗವು ಅತ್ಯಂತಕ್ಲೇಶದಿಂದ ಕೂಡಿರುವುದು. ಅವ್ಯಕ್ತವನ್ನು ಪ್ರತ್ಯಕ್ಷಮಾಡಿಕೊಂಡವರಿಗೆ ಸುಲಭವಾಗಿ ಭಗವಂತನ ಉಪಾಸನೆ ಮಾಡುವುದೇ ಪ್ರಯೋಜನ. ಹೀಗಿದ್ದರೂ ಅವ್ಯಕ್ತವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದಕ್ಕೆ ಎಷ್ಟು ಪ್ರಯಾಸವಾಗುತ್ತದೆಯೋ ಅಷ್ಟೇ ಪ್ರಯಾಸದಿಂದ ಭಗವಂತನನ್ನು ಉಪಾಸನೆಮಾಡಿದರೆ ಅಥವಾ ಆ ಪ್ರಯಾಸದಲ್ಲಿ ಸ್ವಲ್ಪ ನ್ಯೂನತೆಯಿದ್ದು ಭಗವಂತನನ್ನು ಉಪಾಸನೆಮಾಡಿದರೂ ಕೂಡ ಭಗವಂತನ ಪ್ರತ್ಯಕ್ಷವು ಆಗಿಯೇ ಆಗುತ್ತದೆ–ಎಂಬ ಎರಡನೆಯ ಕಾರಣದಿಂದಲೂ ಭಗವದುಪಾಸನೆಯು ಸುಲಭ. ಉತ್ತಮವಾದುದು. ಇಂದ್ರಿಯಸಂಯಮ ಮುಂತಾದುವುಗಳಲ್ಲಿ ನ್ಯೂನತೆಯಿದ್ದರೆ ಹೆಚ್ಚು ಉಪಾಸನೆಮಾಡಿದವರಿಗೂ ಕೂಡ ದೇವಿಯು ಅತ್ಯಂತಾನುಗ್ರಹವನ್ನು ತೋರಿಸುವುದಿಲ್ಲ. ದೇವನಾದರೋ ತನ್ನಲ್ಲಿ ಭಕ್ತಿಯುಳ್ಳವನಿಗೆ ಆ ಸಾಧನೆಗಳನ್ನು ಪ್ರಯತ್ನಪೂರ್ವಕವಾಗಿ ತಾನೇ ದಯಪಾಲಿಸುತ್ತಾನೆ. ಆದುದರಿಂದ ಭಕ್ತರಿಗೆ ಭಗವಂತನ ಉಪಾಸನೆಯಲ್ಲಿಯೇ ಹೆಚ್ಚು ಸೌಕರ್ಯ. ಅವ್ಯಕ್ತದ ಉಪಾಸನೆಯಲ್ಲಿ ಅತ್ಯಧಿಕಕ್ಲೇಶ. ಪರ್ಯುಪಾಸತೇ ಎಂಬಲ್ಲಿ ಪರಿ, ಸಂನಿಯಮ್ಯ ಎಂಬಲ್ಲಿ ಸಮ್, ಅಧಿಕತರಃ ಎಂಬಲ್ಲಿ ತರಪ್ ಪ್ರತ್ಯಯ–ಇವುಗಳಿಂದ ಈ ಅಭಿಪ್ರಾಯವು ಕಂಡುಬರುತ್ತದೆ. (ಮ. ಭಾ.)

**ಓಂ ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥೬॥**

**ಓಂ ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥೭॥**

ಆದರೆ ಯಾರು ಸರ್ವಕರ್ಮಗಳನ್ನೂ ನನ್ನಲ್ಲಿ ಸಂನ್ಯಾಸಮಾಡಿ ಮತ್ಪರರಾಗಿ ಅನ್ಯಾವಲಂಬನೆಯಿಲ್ಲದೇ ಭಕ್ತಿಯೋಗದಿಂದ ನನ್ನನ್ನೇ ಧ್ಯಾನಿಸುತ್ತಾ ಉಪಾಸನೆಮಾಡುತ್ತಾರೆಯೋ ಮತ್ತು ನನ್ನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿರುತ್ತಾರೆಯೋ–ಅಂತಹವರನ್ನು ನಾನು ಬಹಳ ಬೇಗ ಮೃತ್ಯುರೂಪವಾದ ಸಂಸಾರಸಾಗರದಿಂದ ಉದ್ಧಾರಮಾಡುತ್ತೇನೆ.

* * *

(ಹಿಂದೆ ಹೇಳಿದ ಭಕ್ತಿಯೋಗವನ್ನೇ ಶ್ರೀಕೃಷ್ಣನು ಇಲ್ಲಿಯೂ ಹೇಳುತ್ತಾನೆ.

**ಮಯಿ ಕರ್ಮಾಣಿ ಸಂನ್ಯಸ್ಯ** = ನನ್ನಲ್ಲಿ ಕರ್ಮಗಳನ್ನಿಟ್ಟು–ಎಂದರೆ ಕರ್ಮಗಳನ್ನು ಅವನಿಗೇ ಅರ್ಪಿಸಿ. ಕರ್ಮಸಂನ್ಯಾಸವೆಂದರೆ ಕರ್ಮಮಾಡದೇ ಇರುವುದಲ್ಲ ; ವರ್ಣಾಶ್ರಮೋಕ್ತವಾದ ನಿಯತವಾದ ಕರ್ಮಗಳನ್ನು ಮಾಡಿ ಕರ್ಮಫಲವನ್ನು ಅವನಿಗೇ ಅರ್ಪಿಸುವುದು. ಫಲಕಾಮನೆಯಿಂದ ಕರ್ಮಗಳನ್ನು ಮಾಡದಿರುವುದು. ಅವನ ಪ್ರೀತಿಗೋಸ್ಕರ ಕರ್ಮಗಳನ್ನು ಮಾಡುವುದು. **ಮತ್ಪರಾಃ**= ನಾನೇ ಶ್ರೇಷ್ಠನಾದವನು ಎಂದು ಯಾರು ಭಾವಿಸುತ್ತಾರೆಯೋ ಅವರು ಮತ್ಪರರು. ನನ್ನೊಬ್ಬನನ್ನೇ ಆಶ್ರಯಿಸಿರತಕ್ಕವರು. ತಾಯಿ-ತಂದೆ-ಗುರು-ಬಂಧು-ಮಿತ್ರ ಎಲ್ಲವೂ ನಾನೇ ಎಂದು ಭಾವಿಸಿರತಕ್ಕವರು.

**ಅನನ್ಯೇನ ಯೋಗೇನ** = ಒಂದು ಮಾರ್ಗವನ್ನು ಹಿಡಿದನಂತರ ಮತ್ತೊಂದು ಯೋಗಕ್ಕೆ ಹಾರಬಾರದು. ಒಬ್ಬೊಬ್ಬರ ಪ್ರಕೃತಿಗೆ ಒಂದೊಂದು ಯೋಗವು ಹೊಂದಿಕೊಳ್ಳುತ್ತದೆ. ಆತ್ಮೋದ್ಧಾರಕ್ಕಾಗಿ ಒಂದು ದೇವತೆಯನ್ನು ಭಕ್ತಿಭಾವದಿಂದ ಉಪಾಸನೆಮಾಡಲು ಪ್ರಾರಂಭಿಸಿದನಂತರ ದೇವತಾಂತರಗಳನ್ನು ಹುಡುಕಿಕೊಂಡು ಹೋಗಬಾರದು. (ಎಲ್ಲ ದೇವತೆಗಳೂ ಒಂದೇ. ಎಲ್ಲ ದೇವತೆಗಳಲ್ಲೂ ಪರಮಾತ್ಮನ ಆವಿರ್ಭಾವವಿದೆ ಎಂಬ ವಿಷಯವು ಬೇರೆ.) ಭಕ್ತನಾದವನಿಗೆ ದೇವತಾಂತರದ ಉಪಾಸನೆಯು ಸಾಧನೆಗೆ ಅಡ್ಡಿ

ಯನ್ನುಂಟುಮಾಡುತ್ತದೆ. ಆದುದರಿಂದ ಭಗವಂತನು **ಮತ್ಪರಾಃ ಅನನ್ಯೇನೈವ ಯೋಗೇನ**–ಎಂದಿದ್ದಾನೆ. ಆದರೆ ದೇವತಾಂತರಗಳಲ್ಲಿ ತಿರಸ್ಕಾರಬುದ್ಧಿ ಯಿರಬಾರದು. ಅವುಗಳೂ ಕೂಡ ತನ್ನ ಇಷ್ಟದೇವತೆಗೆ ಸಂಬಂಧ ಪಟ್ಟಿರುವುದರಿಂದ ಯಥೋಚಿತವಾಗಿ ಗೌರವಕ್ಕೆ ಯೋಗ್ಯವೆಂದು ಭಾವಿಸ ಬೇಕು. ಅನನ್ಯಭಕ್ತನು ಸಾಮಾನ್ಯವಾಗಿ ಪತಿವ್ರತಾಸ್ತ್ರೀಯನ್ನು ಹೋಲುತ್ತಾನೆ. ಪತಿಯೇ ತನ್ನ ಜೀವನಸರ್ವಸ್ವ ಎಂದು ಭಾವಿಸುವುದು ಅವಳ ಕರ್ತವ್ಯ ವಾಗಿರುತ್ತದೆ. ಹೀಗೆ ತನ್ನ ಪತಿಯಲ್ಲೇ ಆಕೆಯು ಅನನ್ಯಭಕ್ತಿಯನ್ನು ಹೊಂದಿರಬೇಕು. ಆದರೆ ಪತಿಯ ಕಡೆಯವರನ್ನು ಯಥೋಚಿತವಾಗಿ ಆಕೆಯು ಸತ್ಕರಿಸುವಳಲ್ಲವೇ? ಹಾಗೆಯೇ ಭಕ್ತನು ತನ್ನ ಇಷ್ಟದೇವತೆಯನ್ನು (ನನ್ನನ್ನು) ನಿರಂತರವಾದ ಧ್ಯಾನ-ಪೂಜೆಗಳಿಗೆ ವಿಷಯವನ್ನಾಗಿಟ್ಟು ಕೊಂಡಿರಬೇಕು. ಉಳಿದ ದೇವತೆಗಳನ್ನು ಯಥೋಚಿತವಾಗಿ ಆಯಾ ಕಾಲ ಗಳಲ್ಲಿ ಸಂಭಾವಿಸಬೇಕು.

ಶ್ರೀಕೃಷ್ಣನು ಹೇಳುತ್ತಾನೆ : ಹೀಗೆ ನನ್ನಲ್ಲಿ ಅನನ್ಯಭಕ್ತಿಯಿಂದ ಅನನ್ಯ ಮಾರ್ಗದಿಂದ ಮತ್ಪರರಾಗಿ ಯಾರು ನನ್ನನ್ನೇ ಧ್ಯಾನಮಾಡುತ್ತಾ ಉಪಾಸನೆ ಮಾಡುತ್ತಾರೆಯೋ, **ಮಯ್ಯಾವೇಶಿತಚೇತಸಾಂ**=ನನ್ನಲ್ಲಿಯೇ ನೆಟ್ಟಮನ ಸ್ಸುಳ್ಳ ಅಂತಹ ನನ್ನ ಭಕ್ತರನ್ನು ಮೃತ್ಯುಸಂಸಾರಸಾಗರದಿಂದ ಸಂಪೂರ್ಣ ವಾಗಿ ಉದ್ಧರಿಸತಕ್ಕವನು ನಾನು. ಸಂಸಾರವನ್ನು ಮೃತ್ಯು ಎಂದು ಕರೆದಿದ್ದಾನೆ ಭಗವಂತ. ಮೃತ್ಯುರೂಪವಾದ ಜರಾ-ಮರಣಗಳಿಂದ ಉದ್ಧಾರ ಮಾಡುತ್ತೇನೆ. **ಸಮುದ್ಧರ್ತಾ** = ಪೂರ್ಣವಾಗಿ ಉದ್ಧಾರಮಾಡುತ್ತೇನೆ. ಅವರಿಗೆ ಮುಂದೆ ಸಂಸಾರದ ಭಯವಿಲ್ಲ. ನನ್ನ ಭಕ್ತರು ಜರಾ-ಮರಣ ರೂಪವಾದ ಸಂಸಾರವನ್ನು ದಾಟುತ್ತಾರೆ. ಆದರೆ ಈ ಯೋಗವನ್ನು ಅವಲಂಬಿಸುವವರಿಗೆ ಜರಾ-ಮರಣಗಳನ್ನು ದಾಟುವಂತಹ ದೆಸೆಯನ್ನು ಪಡೆಯಲು ಅಥವಾ ಮುಕ್ತಿಯನ್ನು ಪಡೆಯಲು ಸಾವಕಾಶವಾಗಬಹುದೇ?– ಎಂದರೆ ಅದಕ್ಕುತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ. **ನ ಚಿರಾತ್ ಸಮುದ್ಧರ್ತಾ ಭವಾಮಿ**–ಬಹಳ ಬೇಗ ಅವರನ್ನು ಉದ್ಧಾರಮಾಡುತ್ತೇನೆ. ಆದರೆ ನಮ್ಮನ್ನು ಸಂಪೂರ್ಣವಾಗಿ ಪರಮಾತ್ಮನಿಗೆ ಕೊಟ್ಟುಕೊಳ್ಳುವುದೂ ಅಷ್ಟು ಸುಲಭವಾದುದೇನೂ ಅಲ್ಲ. ತೋರಿಕೆಯ ಭಕ್ತಿಯು ಪರಮಾತ್ಮನಲ್ಲಿ

ಸಲ್ಲದು. ದೇಹವಂತರಿಗೆ ದೇಹಾಭಿಮಾನವನ್ನು ತೊರೆಯಲು ಬಹಳ ಕಷ್ಟವಾಗುತ್ತದೆ. ದೇಹಾಭಿಮಾನವನ್ನು ತೊರೆಯದಿದ್ದರೆ ಭಗವಚ್ಛರಣಾಗತಿಯ ಸಾಧನೆಯಾಗುವುದೇ ಇಲ್ಲ. ಕಷ್ಟಬಂದಿತೆಂದು ಆರಾಧ್ಯದೇವನನ್ನು ನಿಂದಿಸುವಂತಿಲ್ಲ. ಸುಖವು ಬಂತೆಂದರೆ ಸುಖವು ತನಗೇ ಬಂತು ಎಂದು ಹೇಳಿಕೊಂಡು ಹಿಗ್ಗಿ ಅವನನ್ನು ಮರೆಯುವಂತೆಯೂ ಇಲ್ಲ. ಈ ವಿಧವಾದ ಸಮತಾಭಾವನೆಯನ್ನೂ ಸಹ ಭಕ್ತಶ್ರೇಷ್ಠನು ರೂಢಿಸಿಕೊಳ್ಳಲೇಬೇಕಾಗುತ್ತದೆ. ಪಾಲಿಗೆ ಬಂದಿದ್ದು ಪಂಚಾಮೃತ–ಎಂಬುದನ್ನು ಮನಸಾರ ಒಪ್ಪಿಕೊಳ್ಳುವ ಸಾಧನೆಯನ್ನು ಇವನೂ ಮಾಡಬೇಕಾಗುತ್ತದೆ. ಇದು ಬರೀ ಬಾಯಿಯ ಮಾತಿನಲ್ಲಲ್ಲ. ಹೃತ್ಪೂರ್ವಕವಾಗಿಯೂ ಈ ತೃಪ್ತಿಯು ಅವನಲ್ಲುಂಟಾಗಬೇಕು. ನಾನು ದೇವರನ್ನು ಅವಲಂಬಿಸಿದ್ದೇನೆ. ನನ್ನ ಯೋಗ-ಕ್ಷೇಮವನ್ನು ನೋಡಿಕೊಳ್ಳತಕ್ಕವನು ಅವನೇ–ಎಂಬ ದೃಢಭಕ್ತಿಯಿರುವ ಭಕ್ತನನ್ನು ಮೃತ್ಯುಸಂಸಾರಸಾಗರದಿಂದ ದಾಟಿಸುವ ಹೊಣೆಯನ್ನು ಪರಮಾತ್ಮನು ತಾನೇ ವಹಿಸಿಕೊಳ್ಳುತ್ತಾನೆ. ಆದುದರಿಂದ ಭಕ್ತನಿಗೆ ಯಾವ ಆತಂಕಕ್ಕೂ ಕಾರಣವಿಲ್ಲ. ಇದರಲ್ಲಿ ಸಂಶಯವೇ ಇಲ್ಲ.)

o o o

**ಅನನ್ಯೇನೈವ ಯೋಗೇನ** = ವಿಶ್ವರೂಪಿಯಾದ, ದೇವನಾದ, ಪರಮಾತ್ಮನಾದ ನನ್ನನ್ನು ಬಿಟ್ಟು ಬೇರೆ ಯಾವ ಅವಲಂಬನೆಯೂ ಇಲ್ಲದೇ ಇರುವ ಕೇವಲ ಸಮಾಧಿಯಿಂದ ನನ್ನನ್ನು ಧ್ಯಾನಿಸುತ್ತಾ.

**ಮೃತ್ಯುಸಂಸಾರಸಾಗರಾತ್**= ಮೃತ್ಯುವಿನಿಂದ ಕೂಡಿದ ಸಂಸಾರವೆಂಬ ಸಾಗರದಿಂದ. ಅದನ್ನು ದಾಟುವುದು ಅತಿಕಷ್ಟವಾದುದರಿಂದ ಸಾಗರವೆಂದು ಕರೆದಿದೆ. (ಶಂ. ಭಾ.)

ತನ್ನನ್ನು ಉಪಾಸನೆಮಾಡತಕ್ಕವರು ಯುಕ್ತತಮರು ಎಂಬುದನ್ನು ಇಲ್ಲಿ ಸುಸ್ಪಷ್ಟವಾಗಿ ಭಗವಂತನು ಹೇಳುತ್ತಾನೆ.

ಯಾರು ಲೌಕಿಕವಾದ ದೇಹಯಾತ್ರೆಗೆ ಅಂಗವಾದ, ದೇಹಧಾರಣೆಗೆ ಬೇಕಾದ ಭೋಜನವೇ ಮುಂತಾದ ಕರ್ಮಗಳನ್ನೂ, ವೈದಿಕವಾದ ಯಾಗ-ದಾನಾದಿ ಕರ್ಮಗಳನ್ನೂ ಅವುಗಳ ಕಾರಣ ಮತ್ತು ಉದ್ದೇಶಗಳೊಡನೆ ಪರಮಾತ್ಮನಿಷ್ಠವಾದ ಚೇತಸ್ಸಿನಿಂದ ನನ್ನಲ್ಲಿರಿಸಿ, ನನ್ನೊಬ್ಬನನ್ನೇ ಪ್ರಾಪ್ಯನನ್ನಾಗಿ

ತಿಳಿದು ಬೇರೆ ಯಾವ ಪ್ರಯೋಜನವೂ ಇಲ್ಲದ ಯೋಗದಿಂದ ನನ್ನನ್ನು ಧ್ಯಾನಿಸುತ್ತಾ ಉಪಾಸನೆಮಾಡುತ್ತಾರೆಯೋ ಅವರು ಯುಕ್ತತಮರು.

ಧ್ಯಾನ-ಪೂಜೆ-ನಮಸ್ಕಾರ-ಸ್ತುತಿ-ಕೀರ್ತನೆ–ಮುಂತಾದುವುಗಳನ್ನು 'ಅತ್ಯಂತಪ್ರಿಯವಾದುವು, ಪ್ರಯೋಜನಕ್ಕೆ ಸಮನಾದುವು'–ಎಂದು ತಿಳಿದು ಯಾರು ಉಪಾಸನೆಮಾಡುತ್ತಾರೆಯೋ ಅವರನ್ನು ನಾನು ಶೀಘ್ರದಲ್ಲಿಯೇ ಸಂಸಾರಸಾಗರದಿಂದ ದಾಟಿಸಿಬಿಡುತ್ತೇನೆ. ಮೃತ್ಯುಸಂಸಾರ ಎಂದರೆ ಮೃತ್ಯುವಿನಂತೆ ಇರುವ ಸಂಸಾರ. ನನ್ನ ಪ್ರಾಪ್ತಿಗೆ ವಿರೋಧವಾಗಿರುವುದರಿಂದ ಅದು ಮೃತ್ಯುಭೂತವಾದುದು. ಏಕೆಂದರೆ ಭಗವಂತನ ಪ್ರಾಪ್ತಿಯಾದರೆ ಅಮೃತತ್ವವು ಸಿಕ್ಕುತ್ತದೆ. (ರಾ. ಭಾ.)

ನನ್ನನ್ನು ಉಪಾಸನೆಮಾಡುವ ಭಕ್ತರಿಗೆ ಯಾವ ಕ್ಲೇಶವೂ ಇಲ್ಲ ಎಂಬುದನ್ನು ಈ ಎರಡು ಶ್ಲೋಕಗಳಲ್ಲಿ ಭಗವಂತನು ಹೇಳುತ್ತಾನೆ. (ಮ. ಭಾ.)

**ಓಂ ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥೮॥**

ನನ್ನಲ್ಲಿಯೇ ಮನಸ್ಸನ್ನು ಇಡು. ನನ್ನಲ್ಲಿಯೇ ಬುದ್ಧಿಯನ್ನು ಹೊಗಿಸು. ಆ ಬಳಿಕ ನನ್ನಲ್ಲಿಯೇ ನಿವಾಸಮಾಡುವೆ. ಸಂಶಯವಿಲ್ಲ.

* * *

(ಶ್ರೀಕೃಷ್ಣನಿಲ್ಲಿ ಹಿಂದೆ ಹೇಳಿದುದನ್ನೇ ಮುಂದುವರಿಸಿ ಹೇಳುತ್ತಾನೆ. **ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ** ಮನಸ್ಸು-ಬುದ್ಧಿಗಳೆರಡನ್ನೂ ನನ್ನಲ್ಲಿಯೇ ಇಟ್ಟುಬಿಡು ಎನ್ನುತ್ತಾನೆ.

ಮನಸ್ಸನ್ನು ಅವನಲ್ಲಿಯೇ ಇಡಬೇಕಾದರೆ ಜಿತಮನಸ್ಕನಾಗಬೇಕು. ಜಿತೇಂದ್ರಿಯತ್ವವಿಲ್ಲದಿದ್ದರೆ ಜಿತಮನಸ್ಕನಾಗಲು ಸಾಧ್ಯವಿಲ್ಲ. ಕೈಗಳಿಂದ ಪೂಜೆಮಾಡಬಹುದು. ದೇವರಿಗೆ ಅಲಂಕಾರಮಾಡಬಹುದು. ಭಕ್ತಿಯ ಈ ಬಹಿರಂಗಗಳು ಸುಲಭಸಾಧ್ಯ. ಆದರೆ ಮನಸ್ಸನ್ನೂ ಮತ್ತು ಬುದ್ಧಿಯನ್ನೂ ಅವನಲ್ಲಿಯೇ ಸದಾಕಾಲದಲ್ಲಿಯೂ ನೆಡುವುದು ಸುಲಭಸಾಧ್ಯವಾದ ಕಾರ್ಯವಲ್ಲ. ಮನಸ್ಸನ್ನು ನೆಡಲು ಆಕಾರವೊಂದಿರುವುದೇನೋ ನಿಜ. ಅದರ ಮೇಲೆಯೇ ಸತತವಾಗಿ ಮನಸ್ಸನ್ನು ಇಟ್ಟಿರಬೇಕಾದರೂ ಬಹಳ ಕಷ್ಟವಾಗುತ್ತದೆ. ಸಾಕಾರಮೂರ್ತಿಯನ್ನು ಧ್ಯಾನಮಾಡಬೇಕಾದರೂ ಮನಸ್ಸು ಸ್ಥಿರ

ವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ. ಅದಕ್ಕೂ ಸತತವಾದ ಅಭ್ಯಾಸವು ಬೇಕು. ಮನಸ್ಸು-ಬುದ್ಧಿಗಳೆರಡೂ ಸಾಕಾರಮೂರ್ತಿಯಲ್ಲಿ ಲೀನವಾಗಿಬಿಟ್ಟರೆ ಅಹಂಕಾರವು ತಾನೇ ತಾನಾಗಿ ನಾಶವಾಗಿಬಿಡುವುದು. ತಾದಾತ್ಮ್ಯಹೊಂದುವುದು. ಇದನ್ನೇ ಶ್ರೀಕೃಷ್ಣನು ಉತ್ತರಾರ್ಧದಲ್ಲಿ ಹೇಳಿದ್ದಾನೆ. ನಿವಸಿಷ್ಯಸಿ ಮಯ್ಯೇವ–ನನ್ನಲ್ಲಿಯೇ ನೀನು ಇದ್ದುಬಿಡುವೆ. ಶ್ರೀಕೃಷ್ಣನ ರೂಪವನ್ನೇ ಮನಸ್ಸಿಗೆ ತಂದುಕೊಂಡು ಮತ್ತಾವುದನ್ನೂ ಯೋಚಿಸದೇ ಅದರಲ್ಲಿಯೇ ನಿಶ್ಚಯವುಳ್ಳವನಾದರೆ ಆ ಸಾಕ್ಷಾತ್ಕಾರದ ಫಲವಾಗಿ ಈಶ್ವರಸಾಯುಜ್ಯವನ್ನೇ ಪಡೆಯುತ್ತಾನೆ.

ಮನಸ್ಸೇ ಬೇರೆ, ಬುದ್ಧಿಯೇ ಬೇರೆ. ಯುಧಿಷ್ಠಿರನು ಅಜಗರನನ್ನು ಕುರಿತು **ಮನಸಶ್ಚಾಪಿ ಬುದ್ಧೇಶ್ಚ ಬ್ರೂಹಿ ಮೇ ಲಕ್ಷಣಂ ಪರಂ**– ಮನಸ್ಸಿನ ಮತ್ತು ಬುದ್ಧಿಯ ಶ್ರೇಷ್ಠವಾದ ಲಕ್ಷಣಗಳನ್ನು ಹೇಳು ಎನ್ನುತ್ತಾನೆ. ಅದಕ್ಕೆ ಉತ್ತರವಾಗಿ ಅಜಗರನು :

**ಬುದ್ಧಿರುತ್ಪದ್ಯತೇ ಕಾರ್ಯಾನ್ಮನಸ್ತೂತ್ಪನ್ನಮೇವ ಹಿ ।**
**ಬುದ್ಧೇರ್ಗುಣವಿಧಾನೇನ ಮನಸ್ತದ್ಗುಣವದ್ಭವೇತ್ ॥**

ವನ ೧೮೧-೨೬

o o o

**ಮನಃ** = ಮನಸ್ಸು ಸಂಕಲ್ಪ-ವಿಕಲ್ಪಾತ್ಮಕವಾದುದು. ಅದನ್ನು ವಿಶ್ವರೂಪನಾದ, ಈಶ್ವರನಾದ ನನ್ನಲ್ಲಿಯೇ ಇರಿಸು ಮತ್ತು ನಿಶ್ಚಯವನ್ನೂ ಮಾಡುವ ಬುದ್ಧಿಯನ್ನು ನನ್ನಲ್ಲೇ ಇರಿಸು.

**ಅತಃ ಊರ್ಧ್ವಂ**= ಶರೀರದ ಪತನದ ಅನಂತರ. (ಶಂ. ಭಾ.)

**ಅತಃ** = ಇದು ಅತಿಶಯವಾದ ಪುರುಷಾರ್ಥವಾಗಿರುವುದರಿಂದ, ಸುಲಭವಾಗಿರುವುದರಿಂದ, ಇವು ಶೀಘ್ರವಾಗಿ ಫಲವನ್ನು ಕೊಡುವುದರಿಂದ ನನ್ನಲ್ಲೇ ಮನಸ್ಸನ್ನು ಇರಿಸಿಕೋ. ನಾನೇ ಪರಮಪ್ರಾಪ್ಯನು ಎಂದು ನಿಶ್ಚಯಿಸು. ನನ್ನಲ್ಲಿ ಬುದ್ಧಿಯನ್ನಿರಿಸು. ಇದರ ಮೇಲೆಯೇ ಎಂದರೆ ನಾನೇ ಪರಮಪ್ರಾಪ್ಯನು ಎಂಬ ನಿಶ್ಚಯಪೂರ್ವಕವಾಗಿ ಮನಸ್ಸನ್ನು ನನ್ನಲ್ಲಿ ಇರಿಸಿದ ನಂತರವೇ ನೀನು ನನ್ನಲ್ಲಿ ವಾಸಮಾಡುವೆ. (ರಾ. ಭಾ.)

**ಓಂ ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥೯॥**

ಆದರೆ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಚೆನ್ನಾಗಿ ಇಡಲು ಶಕ್ತನಾಗದೇ ಇದ್ದರೆ ಆಗ, ಧನಂಜಯ! ಅಭ್ಯಾಸಯೋಗದಿಂದ ನನ್ನನ್ನು ಪಡೆಯುವುದಕ್ಕೆ ಇಚ್ಛಿಸು.

* * *

(ಹಿಂದೆ ಅರ್ಜುನನು **'ಚಂಚಲಂ ಹಿ ಮನಃ ಕೃಷ್ಣ'** ಎಂದು ಹೇಳಿದುದನ್ನು ಸ್ಮರಿಸಿದನೋ ಎಂಬಂತೆ ಶ್ರೀಕೃಷ್ಣನು ಮನಸ್ಸಿನ ವಿಷಯವನ್ನೇ ಕುರಿತು ಹೇಳುತ್ತಾನೆ. ನನ್ನಲ್ಲಿ ಚಿತ್ತವನ್ನಿಡುವುದೆಂದರೆ ಸುಲಭಸಾಧ್ಯವಾದ ಕಾರ್ಯವಲ್ಲ. ಚಿತ್ತವು ಸ್ಥಿರವಾಗಿರಬೇಕು. ಚಿತ್ತವನ್ನು ನನ್ನಲ್ಲಿಯೇ ನೆಡಬೇಕು. ಸುಮ್ಮನೆ ಕಣ್ಣುಮುಚ್ಚಿಕುಳಿತರೆ ಚಿತ್ತವು ಪರಮಾತ್ಮನ ಬಳಿಗೆ ಸಾಗಿಬಿಡುವುದಿಲ್ಲ. ಅಭ್ಯಾಸವಿಲ್ಲದವನು ಚಿತ್ತವನ್ನು ಪರಮಾತ್ಮನಲ್ಲಿ ಚೆನ್ನಾಗಿ ಇಡುವುದೆಂದರೆ ಬಟ್ಟೆಯಲ್ಲಿ ನೀರುತುಂಬಿಕೊಂಡು ಬಂದಂತೆ. ಆದುದರಿಂದ ಮನಸ್ಸನ್ನು ಮತ್ತು ಬುದ್ಧಿಯನ್ನು ಸಾಕಾರನಾದ ಪರಮಾತ್ಮನಲ್ಲಿಡಬೇಕಾದರೂ ನಿರಂತರವಾದ ಅಭ್ಯಾಸವು ಬೇಕು. ಅದನ್ನೇ ಶ್ರೀಕೃಷ್ಣನೂ ಹೇಳುತ್ತಾನೆ. ನಿನ್ನ ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ಚೆನ್ನಾಗಿ ಇಡಲು ಸಾಧ್ಯವಾಗದಿದ್ದರೆ ನಿರಾಶೆಹೊಂದಬೇಡ. ಅಭ್ಯಾಸಯೋಗದಿಂದ ನನ್ನನ್ನು ಪಡೆದುಕೊಳ್ಳಲು ಪ್ರಯತ್ನಿಸು ಅರ್ಜುನ!

ಅಭ್ಯಾಸವೆಂದರೆ ಮತ್ತೆ ಮತ್ತೆ ಒಂದು ಸ್ಥಿತಿಯಲ್ಲಿ ಇರಿಸುವ ಉತ್ಸಾಹ ಪೂರ್ವಕವಾದ ಪ್ರಯತ್ನ. ಇದನ್ನು ಯೋಗಸೂತ್ರದಲ್ಲಿ **ತತ್ರ ಸ್ಥಿತೌ ಯತ್ನೋಽಭ್ಯಾಸಃ** ಎಂದು ಹೇಳುತ್ತಾರೆ. ॥೧-೧೩॥

o o o

**ಅಭ್ಯಾಸಯೋಗೇನ** =ಚಿತ್ತವನ್ನು ಇತರ ಎಲ್ಲ ಕಡೆಗಳಿಂದಲೂ ಎಳೆದುಕೊಂಡು ಬಂದು ಆಲಂಬನದಲ್ಲಿ ಮತ್ತೆ ಮತ್ತೆ ಸ್ಥಾಪಿಸುವುದು. ಅದರಿಂದ ಮಾಡಿದ ಸಮಾಧಾನರೂಪವಾದ ಯೋಗವು ಅಭ್ಯಾಸಯೋಗ.

(ಶಂ. ಭಾ.)

**ಚಿತ್ತಂ ಮಯಿ ಸಮಾಧಾತುಂ ನ ಶಕ್ನೋಷಿ**= ಒಡನೆಯೇ ನನ್ನಲ್ಲಿ

ಚಿತ್ತವನ್ನು ಚೆನ್ನಾಗಿ ಇರಿಸಲು ನಿನಗೆ ಸಾಧ್ಯವಾಗದಿದ್ದರೆ ಅಭ್ಯಾಸಯೋಗದಿಂದ ನನ್ನನ್ನು ಹೊಂದಲು ಬಯಸು. ನನ್ನಲ್ಲಿ ನಿರತಿಶಯಪ್ರೇಮದಿಂದ ಕೂಡಿದ ಸ್ಮರಣೆಯ ಅಭ್ಯಾಸದ ಯೋಗದಿಂದ ಸ್ಥಿರವಾದ ಚಿತ್ತಸಮಾಧಾನವನ್ನು ಹೊಂದಿ ನನ್ನನ್ನು ಪಡೆಯಲು ಬಯಸು. ಅಭ್ಯಾಸ ಎಂದರೆ ಆಲಂಬನದಲ್ಲಿ ಮತ್ತೆ ಮತ್ತೆ ಸ್ಥಾಪಿಸುವುದು. ಆ ಯೋಗವು ಅಭ್ಯಾಸಯೋಗ. ಅಭ್ಯಾಸ-ವೈರಾಗ್ಯಗಳಿಂದ ಚಿತ್ತನಿರೋಧವನ್ನು ಮಾಡಬೇಕೆಂಬುದನ್ನು ಯೋಗಾನುಶಾಸನದಲ್ಲಿಯೂ ಮತ್ತು ಈ ಗೀತಾಶಾಸ್ತ್ರದಲ್ಲಿಯೂ ಹಿಂದೆಯೂ ಹೇಳಿದ್ದಾಗಿದೆ. (ರಾ. ಭಾ.)

**ಓಂ ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥೧೦॥**

ಅಭ್ಯಾಸಮಾಡುವುದಕ್ಕೂ ನೀನು ಅಶಕ್ತನಾದರೆ ನನಗೋಸ್ಕರ ಕರ್ಮ ಮಾಡುವುದರಲ್ಲಿ ತತ್ಪರನಾಗು. ನನಗಾಗಿ ಕರ್ಮಗಳನ್ನು ಮಾಡುತ್ತಿದ್ದರೂ ಸಿದ್ಧಿಯನ್ನು ಪಡೆಯುವೆ.

* * *

(ನಿರಂತರವಾಗಿ ಧ್ಯಾನಮಾಡಲೂ ಸಹ ನಿನಗೆ ಸಾಧ್ಯವಾಗದೇ ಹೋದರೆ ಹಿಂದಿನ ಅಧ್ಯಾಯದ ಕಡೆಯ ಶ್ಲೋಕದಲ್ಲಿ ಹೇಳಿರುವಂತೆ **'ಮತ್ಕರ್ಮಕೃನ್ಮತ್ಪರಮಃ'** = ನನಗಾಗಿ ಕರ್ಮಮಾಡು. ನನ್ನನ್ನೇ ಪರಮ ಗತಿಯೆಂದು ಭಾವಿಸು ಮತ್ತು ಇಲ್ಲಿಯೂ ಹೇಳಿರುವಂತೆ ಮತ್ಕರ್ಮಪರಮ ನಾಗು. ನನ್ನ ಕರ್ಮಮಾಡು ಮತ್ತು ಅದೇ ಶ್ರೇಷ್ಠವಾದ ಮಾರ್ಗವೆಂದು ಭಾವಿಸು. ನನ್ನ ಸಲುವಾಗಿ ನೀನು ವಿಹಿತವಾದ ಕರ್ಮಮಾಡುತ್ತಿದ್ದರೂ ಸಿದ್ಧಿಯನ್ನು ಪಡೆಯುವೆ. ನಿಷ್ಕಾಮನಾಗಿ ಮಾಡು.

**ಮತ್ಕರ್ಮಪರಮಃ**= ನನ್ನ ಕರ್ಮ ಅಥವಾ ಭಗವಂತನ ಕರ್ಮ ಎಂದ ರೇನು? ಅದನ್ನು ಹೇಗೆ ಮಾಡುವುದು?—ಎಂದರೆ ಭಗವಂತನ ಕರ್ಮ ಮಾಡುವವನು. ತಾನು ಭಗವಂತನ ಕೈಗೊಂಬೆಯೆಂದು ಭಾವಿಸುವವನು. ತನಗೆ ಸ್ವತಃ ಏನು ಮಾಡಲೂ ಸಾಮರ್ಥ್ಯವಿಲ್ಲವೆಂದು ಭಾವಿಸುವವನು.

ತನ್ನಲ್ಲಿರುವ ಬುದ್ಧಿ, ಮನಸ್ಸು, ಇಂದ್ರಿಯಗಳು ಭಗವಂತನದೆಂದೇ ಭಾವಿಸುವವನು. ಭಗವಂತನೇ ತನ್ನ ಇಚ್ಛಾನುಸಾರವಾಗಿ ತನ್ನದೇ ಆದ ಕರಣಗಳಿಂದ ಭಕ್ತನ ಕಾರ್ಯಗಳನ್ನು ಮಾಡಿಸುತ್ತಾನೆಂದು ಭಾವಿಸುವವನು. ಅವನು ಮಾಡಿಸುವ ಕರ್ಮಗಳಿಗೂ, ಕರ್ಮದ ಫಲಗಳಿಗೂ, ತನಗೂ ಯಾವ ಸಂಬಂಧವೂ ಇಲ್ಲವೆಂದೇ ಭಾವಿಸುವವನು. ಭಗವಂತನು ಯಂತ್ರಿ (ಯಂತ್ರವನ್ನು ನಡೆಸುವವನು) ತಾನು ಯಂತ್ರ–ಎಂದು ಭಾವಿಸುವವನು. ಯಂತ್ರಿಯು ನಡೆಸಿದಂತೆ ಯಂತ್ರವು ನಡೆಯುತ್ತದೆ. ಹೀಗೆ ಭಾವಿಸುವುದ ರಿಂದ ಅಂತಹ ಸಾಧಕನಿಗೆ ಕರ್ಮದಲ್ಲಾಗಲೀ, ಅದರ ಫಲದಲ್ಲಾಗಲೀ ಕಿಂಚಿನ್ಮಾತ್ರವೂ ಅನುರಾಗವಾಗಲೀ–ದ್ವೇಷವಾಗಲೀ ಇರುವುದಿಲ್ಲ.

ಪ್ರಾರಬ್ಧಾನುಸಾರವಾಗಿ ಯಾವುದೇ ಸುಖ-ದುಃಖಗಳು ಪ್ರಾಪ್ತ ವಾದರೂ ಎಲ್ಲವೂ ಭಗವಂತನ ಪ್ರಸಾದವೆಂದೇ ಭಾವಿಸಿ ಸದಾಕಾಲದ ಲ್ಲಿಯೂ ಪ್ರಸನ್ನನಾಗಿಯೇ ಇರುವವನು. ಹೀಗೆ ಪ್ರಸನ್ನತೆಯಿಂದ ಭಗವಂತನ ಪ್ರೀತಿಗಾಗಿ ಕರ್ಮಗಳನ್ನು ಆಚರಿಸುತ್ತಿದ್ದರೆ ಸತ್ತ್ವಶುದ್ಧಿಯುಂಟಾಗುತ್ತದೆ. ಈ ಸತ್ತ್ವಶುದ್ಧಿಯಿಂದಲೂ ಮತ್ತು ಭಗವದನುಗ್ರಹದಿಂದಲೂ ಸಾಧಕನಿಗೆ ಪರಮಸಿದ್ಧಿಯುಂಟಾಗುತ್ತದೆ.

**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ.**

o o o

**ಮತ್ಕರ್ಮಪರಮಃ** = ನನಗೋಸ್ಕರ ಕರ್ಮಮಾಡುವುದನ್ನೇ ಪ್ರಧಾನ ವಾಗಿ ಹೊಂದಿರುವವನು. (ಶಂ. ಭಾ.)

**ಮದರ್ಥಮಪಿ...ಅವಾಪ್ಸ್ಯಸಿ** = ಕೇವಲ ನನಗೋಸ್ಕರವಾಗಿ ನೀನು ಕರ್ಮಗಳನ್ನು ಆಚರಿಸುತ್ತಿದ್ದರೆ ಅದರಿಂದಲೂ ಅಂತಃಕರಣಶುದ್ಧಿ, ಯೋಗ ಮತ್ತು ಜ್ಞಾನಗಳ ಪ್ರಾಪ್ತಿಯ ಮೂಲಕ ಪರಮಸಿದ್ಧಿಯನ್ನು ಹೊಂದುತ್ತೀಯೆ.

ಹೀಗೆ ಸ್ಮರಣೆಯ ಅಭ್ಯಾಸವನ್ನು ಮಾಡಲೂ ಶಕ್ತಿಯಿಲ್ಲದಿದ್ದರೆ ನನ್ನ ಕರ್ಮಗಳಲ್ಲಿ ಆಸಕ್ತನಾಗು. ನನ್ನ ಸಂಬಂಧವಾದ ಕರ್ಮಗಳನ್ನು ಎಂದರೆ ದೇವಾಲಯನಿರ್ಮಾಣ, ದೇವರ ಉದ್ಯಾನನಿರ್ಮಾಣ, ದೀಪಹೊತ್ತಿಸುವುದು

ದೇವಾಲಯವನ್ನು ತೊಳೆಯುವುದು, ಗುಡಿಸುವುದು, ದೇವರಿಗೆ ಪುಷ್ಪಗಳನ್ನು ತರುವುದು, ಪೂಜೆಯಲ್ಲಿ ತೊಡಗುವುದು, ನಾಮಸಂಕೀರ್ತನ, ಪ್ರದಕ್ಷಿಣೆ, ಸ್ತುತಿ, ನಮಸ್ಕಾರ–ಮುಂತಾದುವುಗಳಲ್ಲಿ ಆಸಕ್ತನಾಗು. ಅವುಗಳನ್ನು ಅತ್ಯಂತಪ್ರಿಯವೆಂದು ಆಚರಿಸು. ಹೀಗೆ ಅತ್ಯಂತಪ್ರಿಯವೆಂದು ಭಾವಿಸಿ ನನಗೋಸ್ಕರ ಕರ್ಮಗಳನ್ನು ಆಚರಿಸುತ್ತಿದ್ದರೂ ಕೂಡ ಶೀಘ್ರದಲ್ಲಿಯೇ ಅಭ್ಯಾಸಯೋಗಪೂರ್ವಕವಾದ ಚಿತ್ತಸ್ಥೈರ್ಯದ ಸ್ಥಿತಿಯನ್ನು ಪಡೆದು ನನ್ನ ಪ್ರಾಪ್ತಿ ಎಂಬ ಸಿದ್ಧಿಯನ್ನು ಪಡೆಯುವೆ. (ರಾ. ಭಾ.)

**ಓಂ ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥೧೧॥**

ಹೀಗೆ ಮತ್ಪ್ರಾಪ್ತಿರೂಪವಾದ ಯೋಗವನ್ನಾಶ್ರಯಿಸಿ ಇದನ್ನೂ ಮಾಡಲು ನೀನು ಅಸಮರ್ಥನಾದರೆ ಮನಸ್ಸನ್ನು ಸಂಯಮದಲ್ಲಿಟ್ಟುಕೊಂಡು ಎಲ್ಲ ಕರ್ಮಗಳ ಫಲವನ್ನೂ ತ್ಯಾಗಮಾಡು.

* * *

(ನನ್ನ ಕರ್ಮಮಾಡಲೂ ನಿನಗೆ ಆಗದಿದ್ದರೆ ; ನನ್ನದೇ ಆದ ಯೋಗವನ್ನು ಆಶ್ರಯಿಸಿ, ಮನಸ್ಸು-ಬುದ್ಧಿ ಮತ್ತು ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು ಸರ್ವಕರ್ಮಗಳ ಎಂದರೆ ನಿತ್ಯ-ನೈಮಿತ್ತಿಕಕರ್ಮಗಳು, ಯಜ್ಞ, ದಾನ, ತಪಸ್ಸು ಮುಂತಾದುವುಗಳು ಶರೀರಯಾತ್ರಾರ್ಥವಾದ ಕರ್ಮಗಳು ಮತ್ತು ಕಾಮ್ಯಕರ್ಮಗಳು–ಇವೇ ಮುಂತಾದ ಯಾವ ಯಾವ ಕರ್ಮಗಳನ್ನು ಆಚರಿಸುವೆಯೋ ಆ ಎಲ್ಲ ಕರ್ಮಗಳ ಫಲಗಳನ್ನೂ ನನ್ನಲ್ಲಿ ಅರ್ಪಿಸಿಬಿಡು.

ಹಿಂದಿನ ಶ್ಲೋಕದಲ್ಲಿ ಹೇಳಿರುವ **ಮತ್ಕರ್ಮ** ಎಂಬುದು ನೇರವಾಗಿ ಭಗವಂತನನ್ನೇ ಕುರಿತು ಮಾಡುವ ಕರ್ಮಗಳು. ಭಗವಂತನ ಸ್ತುತಿ, ನಮಸ್ಕಾರ, ಪೂಜೆ–ಮುಂತಾದುವು. ಈ ಶ್ಲೋಕದಲ್ಲಿ ಹೇಳಿರುವುದು ಉಳಿದ ಕರ್ಮಗಳು. ಈ ಕರ್ಮಗಳನ್ನಾಚರಿಸಿದರೂ ಅವುಗಳ ಫಲವನ್ನು ಅಂಟಿಸಿಕೊಳ್ಳದೇ ಭಗವದರ್ಪಣಮಾಡುತ್ತಾ ಬಂದರೆ ಅದೂ ಕೂಡ ಸತ್ತ್ವಶುದ್ಧಿಯನ್ನುಂಟುಮಾಡಿ ಭಗವತ್ಪ್ರಾಪ್ತಿಗೆ ಸಹಾಯಕವಾಗುತ್ತದೆ.)

o o o

ಈ ಹಿಂದೆ ಹೇಳಿದ **ಮತ್ಕರ್ಮಪರಮತ್ವ**-ಮತ್ಕರ್ಮಪ್ರಧಾನತೆಯನ್ನು ಆಚರಿಸಲು ಅಶಕ್ತನಾಗಿದ್ದರೆ, **ಯತಾತ್ಮಾ** = ಸಂಯತಚಿತ್ತನಾಗಿ ನನ್ನ ಯೋಗವನ್ನಾಶ್ರಯಿಸಿ ಮಾಡುವ ಕರ್ಮಗಳೆಲ್ಲವನ್ನೂ ನನಗೆ ಸಮರ್ಪಿಸಿ ಅನುಷ್ಠಾನಮಾಡುತ್ತಾ ಎಲ್ಲ ಕರ್ಮಗಳ ಫಲವನ್ನೂ ತೊರೆಯುವವನಾಗು.

(ಶಂ. ಭಾ.)

ನನ್ನ ಯೋಗವನ್ನಾಶ್ರಯಿಸಿ ಎಂದರೆ ನನ್ನ ಗುಣಗಳ ಅನುಸಂಧಾನ ದಿಂದ ಉಂಟಾದ ಮದೇಕಪ್ರೇಮರೂಪವಾದ ಭಕ್ತಿಯೋಗವನ್ನಾಶ್ರಯಿಸಿ ಅದರ ಅಂಕುರರೂಪವಾಗಿ ಮದರ್ಥವಾದ ಕರ್ಮಗಳನ್ನು ಹಿಂದೆ ಹೇಳಿದಂತೆ ಮಾಡುವುದೂ ನಿನಗೆ ಕಷ್ಟವಾದರೆ ಆತ್ಮಸ್ವಭಾವಾನುಸಂಧಾನರೂಪವಾದ ಅಕ್ಷರಯೋಗವನ್ನಾಶ್ರಯಿಸಿ ಅದಕ್ಕೆ ಉಪಾಯವಾಗಿ ಎಲ್ಲ ಕರ್ಮಗಳ ಫಲವನ್ನೂ ತ್ಯಾಗಮಾಡು. (ಈ ಆತ್ಮಾನುಸಂಧಾನರೂಪವಾದ ಯೋಗವನ್ನು ಹಿಂದಿನ ಷಟ್ಕದಲ್ಲಿ ಹೇಳಿಯಾಗಿದೆ.)

ಇದನ್ನು ಸಂಯಮದಿಂದ ಕೂಡಿದ ಮನಸ್ಸುಳ್ಳವನಾಗಿ ಮಾಡಬೇಕು. ಹೀಗೆ ಫಲಾಭಿಸಂಧಿಯಿಲ್ಲದೇ ನನ್ನ ಆರಾಧನೆಯ ರೂಪವಾಗಿ ಕರ್ಮಗಳನ್ನು ಅನುಷ್ಠಾನಮಾಡಿದರೆ ಶುದ್ಧವಾದ ಪ್ರತ್ಯಗಾತ್ಮನ ಸಾಕ್ಷಾತ್ಕಾರವುಂಟಾಗಿ ಪರಾಭಕ್ತಿಯು ತಾನಾಗಿಯೇ ಉಂಟಾಗುತ್ತದೆ. (ರಾ. ಭಾ.)

**ಓಂ ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾನ್ತಿರನನ್ತರಮ್ ॥೧೨॥**

ಜ್ಞಾನವು ಅಭ್ಯಾಸಕ್ಕಿಂತಲೂ ಹೆಚ್ಚಿನದು. ಜ್ಞಾನಕ್ಕಿಂತಲೂ ಧ್ಯಾನವು ಮೇಲಾದುದು. ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಮೇಲಾದುದು. ಅನಂತರ ಕರ್ಮಫಲತ್ಯಾಗದಿಂದ ಶಾಂತಿಯು ಕೂಡಲೇ ಲಭಿಸುವುದು.

* * *

(ಅಭ್ಯಾಸಕ್ಕಿಂತಲೂ ಜ್ಞಾನವು ಹೆಚ್ಚಿನದು ಎಂದು ಇಲ್ಲಿ ಶ್ರೀಕೃಷ್ಣನು ಮೊದಲು ಹೇಳುತ್ತಾನೆ.

ಇಲ್ಲಿ ಅಭ್ಯಾಸವೆಂದರೆ ವಿವೇಕದಿಂದ ಕೂಡಿದ ಯೋಗಾಭ್ಯಾಸವಲ್ಲ. ಗೊತ್ತುಗುರಿಗಳ ಜ್ಞಾನವಿಲ್ಲದ ಅಶಾಸ್ತ್ರೀಯವಾದ ಅಭ್ಯಾಸ. ಅಜ್ಞಾನಿಗಳು ಮಾಡುವ ಅಂಧಶ್ರದ್ಧೆಯ ಅಭ್ಯಾಸ. ಯಾವ ಯಾವುದೋ ಸಾಧನೆಗಳನ್ನು

ಮಾಡುವುದು. ಗತಾನುಗತಿಕವಾಗಿ ವಿಚಾರವಿಲ್ಲದೇ ವೈದಿಕ-ಲೌಕಿಕಕರ್ಮಗಳನ್ನು ಆಚರಿಸುವುದು. ಹೀಗೆ ಅಭ್ಯಾಸಮಾಡುವುದಕ್ಕಿಂತಲೂ ಜ್ಞಾನವು ಎಂದರೆ ಒಳ್ಳೆಯ ತಿಳಿವಳಿಕೆಯು–ವಿವೇಕವು ಒಳ್ಳೆಯದು. ಆತ್ಮಾನಾತ್ಮಗ್ರಳ ಸ್ವರೂಪ, ಭಗವಂತನ ಗುಣ, ಪ್ರಕೃತಿಸ್ವರೂಪ–ಮುಂತಾದುವುಗಳ ಬಗೆಗೆ ಯಥಾರ್ಥವಾದ ತಿಳಿವಳಿಕೆ. (ಅನುಭವಜ್ಞಾನವಲ್ಲ ; ವೈಚಾರಿಕಪ್ರಜ್ಞೆ.)

ಇಂತಹ ಒಳ್ಳೆಯ ವಿಚಾರವಿದ್ದರೆ ಅದು ಮುಂದೆ ಎಂದಾದರೂ ಒಳ್ಳೆಯ ಅಭ್ಯಾಸಕ್ಕೆ ಕಾರಣವಾಗುತ್ತದೆ. ವಿವೇಕವಿಲ್ಲದ ಅಭ್ಯಾಸವು ಅಧಃಪತನಕ್ಕೂ ಕಾರಣವಾಗಬಹುದು. ಕೇವಲ ತಿಳಿವಳಿಕೆಗಿಂತಲೂ ಆ ತಿಳಿವಳಿಕೆಯನ್ನು ಅನುಭವದಿಂದ ಪಡೆಯುವುದಕ್ಕೋಸ್ಕರ ಮಾಡುವ ನಿರಂತರಧ್ಯಾನವು ಶ್ರೇಷ್ಠವಾದುದು. ವಿಚಾರವು ವಿಚಾರರೂಪದಲ್ಲಿಯೇ ಉಳಿದು ಬುದ್ಧಿಗೆ ಮಾತ್ರವೇ ಆಹಾರವಾಗದೇ ಅನುಭವದಲ್ಲಿಯೂ ಅದು ಬರುವುದಕ್ಕೆ ಅನುಗುಣವಾದ ಧ್ಯಾನರೂಪವಾದ ಉಪಾಯವು ಅದಕ್ಕಿಂತಲೂ ಶ್ರೇಷ್ಠವಾದುದು. ಇದು ಅಭ್ಯಾಸರೂಪದಲ್ಲಿ ಮುಂದುವರಿಯುತ್ತಿರುವ ವಿಚಾರಜ್ಞಾನ. ಒಳ್ಳೆಯ ಆಲಂಬನೆಯು ಯಾವುದೆಂಬುದನ್ನು ಜ್ಞಾನವು ತಿಳಿಸುತ್ತದೆ. ಆ ಆಲಂಬನೆಯಲ್ಲಿ ಚಿತ್ತವನ್ನು ನಿರಂತರವಾಗಿ ಇರಿಸುವ ಪ್ರಯತ್ನವು ಅಭ್ಯಾಸ. (ಯೋಗಾಭ್ಯಾಸ.) ಇದೇ ಧ್ಯಾನ. ಇದು ಕೇವಲ ವಿಚಾರರೂಪವಾದ ಜ್ಞಾನಕ್ಕಿಂತಲೂ ಶ್ರೇಷ್ಠವಾದುದು. ಅನಂತರ ಧ್ಯಾನಕ್ಕಿಂತಲೂ ಕರ್ಮಫಲದ ತ್ಯಾಗವು ಶ್ರೇಷ್ಠವೆಂದು ಭಗವಂತನು ಬೋಧಿಸುತ್ತಾನೆ. ಧ್ಯಾನವು ಕರ್ಮಫಲತ್ಯಾಗದಿಂದ ಉಂಟಾದ ಚಿತ್ತಶುದ್ಧಿಯ ಫಲ. ಕರ್ಮಫಲತ್ಯಾಗದಿಂದ ಸಾಧ್ಯವಾದುದು. ಸಾಧ್ಯವಾಗಿರುವ ಧ್ಯಾನಕ್ಕಿಂತಲೂ ಅದರ ಸಾಧನವಾಗಿರುವ ಕರ್ಮಫಲತ್ಯಾಗವನ್ನು ಶ್ರೇಷ್ಠವೆಂದು ಭಗವಂತನೇಕೆ ಉಪದೇಶಿಸುತ್ತಾನೆ?–ಎಂದರೆ ಲೋಕದಲ್ಲಿ ಬಹಳ ಜನರು ಸಾಧ್ಯದ ವಿಚಾರವನ್ನೇ ಮೆಲುಕುಹಾಕುತ್ತಾ ಸಾಧನದ ಉಪಯೋಗವಾದ ಉಪಾಯಾನುಷ್ಠಾನವನ್ನು ಬಿಟ್ಟುಬಿಡುತ್ತಿದ್ದಾರೆ. ಅವರಿಗೆ ಮುಖ್ಯವಾಗಿ ಹೇಳಬೇಕಾದುದು ಉಪಾಯಾಚರಣೆಯನ್ನು. ಅವರ ದೃಷ್ಟಿಯಿಂದ ಉಪಾಯವೇ ಮುಖ್ಯ. ಉಪಾಯವನ್ನಾಚರಿಸಿದರೆ ಅದರ ಫಲವಾದ ಧ್ಯಾನವು ತಾನಾಗಿಯೇ ಸಿದ್ಧಿಸುವುದು. ಆದುದರಿಂದ ಜನಸಾಮಾನ್ಯರ ಹಿತದೃಷ್ಟಿಯಿಂದ ಅವರಿಗೆ

ಮುಖ್ಯವಾಗಿ ಬೇಕಾಗಿರುವ ಕರ್ಮಯೋಗದ ವಿಧಾನವನ್ನು ಭಗವಂತನು ಅದರ ಫಲವಾದ ಧ್ಯಾನಕ್ಕಿಂತಲೂ ಶ್ರೇಷ್ಠವೆಂದು ಬೋಧಿಸಿರುವುದು ಉಚಿತ ವಾಗಿದೆ. ವಿವೇಕಪೂರ್ವಕವಾಗಿ ಫಲತ್ಯಾಗಮಾಡುವ ಕರ್ಮಯೋಗದ ಆಚರಣೆಯಿಂದ ಶೀಘ್ರದಲ್ಲಿಯೇ ಚಿತ್ತವು ಶುದ್ಧವಾಗಿ ಶಾಂತವಾದ ಸ್ಥಿತಿ ಯುಂಟಾಗುವುದು. ಅನಿಷ್ಟಸಂಸ್ಕಾರಗಳ ಶಮನವಾಗುವುದು. ಒಳ್ಳೆಯ ಧ್ಯಾನಕ್ಕೆ ಬೇಕಾದ ಮಾನಸಿಕವಾತಾವರಣವುಂಟಾಗಿ ಧ್ಯಾನಕ್ಕೆ ಪೋಷಣೆ ಯಾಗುವುದು. ಅದರ ಫಲವಾಗಿ ಜೀವನದ ಪರಮಲಕ್ಷ್ಯವಾದ ಜ್ಞಾನವು ದೊರೆಯುವುದು. ಹೀಗೆ ಕರ್ಮಫಲತ್ಯಾಗವು ಪ್ರಾಕೃತರಿಗೂ ಸುಲಭಸಾಧ್ಯ ವಾಗಿರುವ ಮತ್ತು ಪ್ರಾರಂಭದಲ್ಲಿ ಆಚರಿಸಬೇಕಾಗಿಯೂ ಇರುವ ಅನುಷ್ಠಾನ ವಾಗಿರುವುದರಿಂದ ಅದು ಶ್ರೇಷ್ಠ ಎಂದು ಭಗವಂತನು ಸ್ತುತಿಸಿರುವುದೂ ಸಹಜವಾಗಿದೆ.

ಕೆಲವರು, ಇದಕ್ಕೆ ಸೇರಿದಂತೆ ಹಿಂದೆ ಜ್ಞಾನ-ಭಕ್ತಿ-ಧ್ಯಾನ ಮುಂತಾ ದುವುಗಳನ್ನು ಹೇಳಿ ಕೊನೆಗೆ ಕರ್ಮಫಲತ್ಯಾಗವು ಶ್ರೇಷ್ಠವೆಂದು ಹೇಳಿರು ವುದರಿಂದ ಶ್ರೀಕೃಷ್ಣನಿಗೆ ಇಲ್ಲಿ ಕರ್ಮಯೋಗವೇ ಸರ್ವಶ್ರೇಷ್ಠವೆಂಬ ಸಿದ್ಧಾಂತ ವನ್ನು ಘೋಷಿಸುವುದರಲ್ಲಿ ತಾತ್ಪರ್ಯ—ಎಂದು ಹೇಳುತ್ತಾರೆ. ಈ ಪ್ರಸಂಗ ದಲ್ಲಿ ಇದು ಸರಿಯಲ್ಲ ಎಂದು ನಮ್ಮ ಅಭಿಪ್ರಾಯ. ಕರ್ಮಯೋಗದ ಮಹಿಮೆಯನ್ನು ಬೇರೆ ಕಡೆಗಳಲ್ಲಿ ಭಗವಂತನು ಚೆನ್ನಾಗಿ ಕೊಂಡಾಡಿರುವ ಸ್ಥಾನಗಳಿವೆ. ಇದರಂತೆಯೇ ಜ್ಞಾನಯೋಗ, ಭಕ್ತಿಯೋಗ ಮುಂತಾದುವು ಗಳನ್ನೂ ಆಯಾ ಪ್ರಕರಣಗಳಲ್ಲಿ ಆಯಾ ಯೋಗಗಳೇ ಶ್ರೇಷ್ಠವೆಂದು ಹೇಳಿರುವುದೂ ಉಂಟು. ವಸ್ತುತಃ ಈ ಎಲ್ಲ ಯೋಗಗಳೂ ಪರಸ್ಪರ ನಿಕಟ ಸಂಬಂಧವನ್ನು ಹೊಂದಿರತಕ್ಕುವುಗಳೇ ಆಗಿವೆ. ಒಂದಕ್ಕೊಂದು ಪೂರಕವಾಗಿ ವೆಯೇ ಹೊರತು ವಿರೋಧಿಗಳಂತೂ ಸರ್ವಥಾ ಅಲ್ಲ. ಅಧಿಕಾರಿಭೇದ ವನ್ನನುಸರಿಸಿ ಇವೆಲ್ಲವೂ ಶ್ರೇಷ್ಠಯೋಗಗಳೇ ಆಗಿವೆ. ಭಾಗವತದಲ್ಲಿಯೂ ಸಹ ಇದೇ ವಿಷಯವನ್ನೇ ಭಗವಂತನು ಹೇಳಿದ್ದಾನೆ.

**ಯೋಗಶಾಸ್ತ್ರೇ ಮಯಾ ಪ್ರೋಕ್ತಾ ನೃಣಾಂ ಶ್ರೇಯೋವಿಧಿತ್ಸಯಾ ।**
**ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್ ॥**

ನಿರ್ವಿಣ್ಣಾನಾಂ ಜ್ಞಾನಯೋಗೋ ನ್ಯಾಸಿನಾಮಿಹ ಕರ್ಮಸು ।
ತೇಷ್ವನಿರ್ವಿಣ್ಣಚಿತ್ತಾನಾಂ ಕರ್ಮಯೋಗಸ್ತು ಕಾಮಿನಾಮ್ ॥೭॥

ಯದೃಚ್ಛಯಾ ಮತ್ಕಥಾದೌ ಜಾತಶ್ರದ್ಧಸ್ತು ಯಃ ಪುಮಾನ್ ।
ನ ನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಽಸ್ಯ ಸಿದ್ಧಿದಃ ॥೮॥

ಭಾಗವತ ೧೧-೨೦

ಜನರಿಗೆ ಶ್ರೇಯಸ್ಸನ್ನುಂಟುಮಾಡಬೇಕೆನ್ನುವ ಅಪೇಕ್ಷೆಯಿಂದ ಯೋಗ ಶಾಸ್ತ್ರದಲ್ಲಿ ನಾನು ಜ್ಞಾನಯೋಗ-ಕರ್ಮಯೋಗ-ಭಕ್ತಿಯೋಗಗಳನ್ನು ಹೇಳಿ ದ್ದೇನೆ. ಇವುಗಳನ್ನು ಬಿಟ್ಟರೆ ಮನುಷ್ಯನ ಶ್ರೇಯಸ್ಸಿಗೆ ಬೇರೆ ಯಾವ ಉಪಾ ಯವೂ ಎಲ್ಲಿಯೂ ಇಲ್ಲ. ಸಂಸಾರದ ವಿಷಯದಲ್ಲಿ ನಿರುತ್ಸಾಹಿಗಳಾಗಿರು ವವರಿಗೆ, ಕರ್ಮಗಳು ಪಾಪ-ಪುಣ್ಯಗಳ ಬಂಧನವುಂಟುಮಾಡುವುದರಿಂದ ಅವುಗಳಲ್ಲಿಯೂ ಆಸಕ್ತಿಯಿಲ್ಲದವರಿಗೆ, ಜ್ಞಾನಯೋಗವು ಹೇಳಲ್ಪಟ್ಟಿದೆ. ಸಂಸಾರದ ವಿಷಯದಲ್ಲಿ ಖೇದವಿಲ್ಲದೇ ಕಾಮ್ಯಫಲಗಳನ್ನು ಆಶಿಸತಕ್ಕವರಿಗೆ ಕರ್ಮಯೋಗವು ಉತ್ತಮವಾಗಿದೆ. ತನ್ನ ಸ್ವಂತ ಇಚ್ಛೆಯಿಂದಲೇ ಯಾವನಿಗೆ ನನ್ನ ಕಥಾಶ್ರವಣ, ನಾಮಪಾರಾಯಣ, ಪೂಜೆ, ಅರ್ಚನೆ, ಸ್ತೋತ್ರಗಾನ ಮುಂತಾದುವುಗಳಲ್ಲಿ ಶ್ರದ್ಧೆಯಿರುತ್ತದೆಯೋ, ಸಂಸಾರದ ವಿಷಯದಲ್ಲಿ ನಿರುತ್ಸಾಹವೂ ಇಲ್ಲದೇ ಅತ್ಯಂತಾಸಕ್ತನೂ ಆಗದೇ ಯಾವನು ಇರುತ್ತಾ ನೆಯೋ ಅಂತಹವನು ಭಕ್ತಿಯೋಗದಿಂದ ಸಿದ್ಧಿಯನ್ನು ಪಡೆಯುತ್ತಾನೆ.

ಇದು ಭಕ್ತಿಯೋಗದ ಅಧ್ಯಾಯ. ಭಕ್ತಿಯೋಗದ ಉತ್ಕರ್ಷವನ್ನೇ ಇಲ್ಲಿ ಹೇಳುವುದು ಹೆಚ್ಚು ಸಮಂಜಸ. ಇದಲ್ಲದೇ ಈ ಪ್ರಕರಣದಲ್ಲಿ ಇದರ ಹಿಂದಿನ ಶ್ಲೋಕದಲ್ಲೇ ಭಗವಂತನು ಕರ್ಮಫಲತ್ಯಾಗವನ್ನು ಅತ್ಯುತ್ತಮ ಸಾಧನವೆಂದು ಹೇಳಿದ್ದರೂ ಅತ್ಯಂತಸಮರ್ಥರಾದ ಅಧಿಕಾರಿಗಳಿಗೆಂದು ಸ್ಪಷ್ಟವಾಗಿ ಬೋಧಿಸಿರುವುದರಿಂದ ಅದನ್ನೇ ಸರ್ವೋತ್ತಮಯೋಗವೆಂದು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಉದ್ಘೋಷಿಸುತ್ತಾನೆ–ಎಂದು ವಿವರಣೆ ನೀಡುವುದು ಸಮಂಜಸವಲ್ಲ.

ಅವಿವೇಕಪೂರ್ವಕವಾದ ಅಭ್ಯಾಸಕ್ಕಿಂತಲೂ ಜ್ಞಾನವು ಶ್ರೇಷ್ಠ ವಾದುದು. ಆ ಜ್ಞಾನಕ್ಕಿಂತಲೂ ಜ್ಞಾನಪೂರ್ವಕವಾದ ಧ್ಯಾನವು ಶ್ರೇಷ್ಠ

ವಾದುದು. ಆ ಜ್ಞಾನವಂತನ ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಹೆಚ್ಚು ಶ್ರೇಷ್ಠವಾದುದು. ಹೀಗೆ ಕರ್ಮಫಲವನ್ನು ತ್ಯಾಗಮಾಡುವುದರಿಂದ ಸಂಸಾರವು ಒಡನೆಯೇ (ಕಾಲಾಂತರದಲ್ಲಿ ಅಲ್ಲ ) ಶಮನಹೊಂದುವುದು.

ಕರ್ಮದಲ್ಲಿ ತೊಡಗಿರುವ ಅಜ್ಞಾನಿಗೆ ಹಿಂದೆ ಹೇಳಿರುವ ಅನುಷ್ಠಾನಗಳನ್ನು ಮಾಡಲು ಅಸಕ್ತಿಯಿದ್ದಾಗ ಸರ್ವಕರ್ಮಗಳ ಫಲತ್ಯಾಗವನ್ನು ಶ್ರೇಷ್ಠ ಸಾಧನವನ್ನಾಗಿ ಹೇಳಿದೆ. ಮೊಟ್ಟಮೊದಲಿಗೆ ಅದನ್ನು ಶ್ರೇಷ್ಠತಮ ಅಥವಾ ಶ್ರೇಯಃಸಾಧನವೆಂದು ಹೇಳಿಲ್ಲ. ಆದುದರಿಂದ ಇಲ್ಲಿ ಸರ್ವಕರ್ಮಫಲತ್ಯಾಗವನ್ನು ಸ್ತುತಿಸಲಾಗಿದೆ–ಎಂಬ ಅರ್ಥವನ್ನು ಗ್ರಹಿಸಬೇಕು.)

o o o

**ಯದಾ ಸರ್ವೇ ಪ್ರಮುಚ್ಯನ್ತೇ**–ಎಂದು ಕಠೋಪನಿಷತ್ತು–(೬-೧೪) ಎಲ್ಲ ಕಾಮನೆಗಳೂ ನಾಶವಾದರೆ ಅಮೃತತ್ವವುಂಟಾಗುತ್ತದೆ ಎಂದು ಹೇಳಿದೆ. ಶ್ರೌತ-ಸ್ಮಾರ್ತಕರ್ಮಫಲಗಳೆಲ್ಲವೂ ಕಾಮ್ಯಗಳು. ಅದನ್ನು ತ್ಯಾಗಮಾಡಿದರೆ ಜ್ಞಾನನಿಷ್ಠನಾದ ವಿದ್ವಾಂಸನಿಗೆ ಒಡನೆಯೇ ಶಾಂತಿಯು ದೊರೆಯುತ್ತದೆ. ಅಜ್ಞಾನಿಯು ಮಾಡುವ ಕರ್ಮಫಲತ್ಯಾಗದಲ್ಲಿಯೂ ಕೂಡ ಎಲ್ಲ ಕಾಮನೆಗಳ ತ್ಯಾಗವಿದೆ. ಆದುದರಿಂದ ಎಲ್ಲ ಕಾಮನೆಗಳ ತ್ಯಾಗ ಎನ್ನುವುದು ಇಬ್ಬರಲ್ಲಿರುವ ಸಧರ್ಮವಾದುದರಿಂದ ಕರ್ಮಫಲತ್ಯಾಗದಲ್ಲಿ ಅಭಿರುಚಿಯನ್ನುಂಟು ಮಾಡುವುದಕ್ಕೋಸ್ಕರ ಅದನ್ನು ತುಂಬಾ ಶ್ರೇಷ್ಠವೆಂದು ಸ್ತೋತ್ರಮಾಡಿದೆ.

(ಶಂ. ಭಾ.)

ಅತ್ಯರ್ಥವಾದ (ವರ್ಣಿಸಲು ಅಸಾಧ್ಯವಾದ), ಪ್ರೀತಿಯಿಲ್ಲದ, ಕರ್ಕಶರೂಪವಾದ ಅಭ್ಯಾಸಕ್ಕಿಂತಲೂ ಅಕ್ಷರದ ಯಥಾರ್ಥತೆಯನ್ನು ಅನುಸಂಧಾನ ಮಾಡುವುದರ ಮೂಲಕ ಉಂಟಾಗುವ ಅಪರೋಕ್ಷಜ್ಞಾನವೇ ಆತ್ಮಹಿತದ ದೃಷ್ಟಿಯಿಂದ ಶ್ರೇಷ್ಠವಾದುದು. ನಿಷ್ಪನ್ನವಾಗದೇ ಇರುವ ಆ ಅಪರೋಕ್ಷ ಜ್ಞಾನಕ್ಕಿಂತಲೂ ಅದಕ್ಕೆ ಉಪಾಯವಾದ ಆತ್ಮಧ್ಯಾನವು ಶ್ರೇಷ್ಠವಾದುದು. ನಿಷ್ಪನ್ನವಾಗದೇ ಇರುವ ಆ ಧ್ಯಾನಕ್ಕಿಂತಲೂ ಅದಕ್ಕೆ ಉಪಾಯವಾಗಿರುವ ಫಲತ್ಯಾಗಸಹಿತವಾದ ಕರ್ಮಾಚರಣೆಯೇ ಶ್ರೇಷ್ಠವಾದುದು. ಹೀಗೆ ಫಲಾಭಿ

ಸಂಧಿಯಿಲ್ಲದೇ ಅನುಷ್ಠಾನಮಾಡಿದ ಕರ್ಮದಿಂದ ಪಾಪವು ಧ್ವಂಸವಾಗುವುದರಿಂದ ಒಡನೆಯೇ ಮನಸ್ಸಿಗೆ ನೆಮ್ಮದಿಯುಂಟಾಗುತ್ತದೆ.

ಶಾಂತವಾದ ಮನಸ್ಸಿನಲ್ಲಿ ಆತ್ಮಧ್ಯಾನವುಂಟಾಗುತ್ತದೆ. ಆ ಧ್ಯಾನದಿಂದ ಅದರ ಅಪರೋಕ್ಷಜ್ಞಾನವುಂಟಾಗುತ್ತದೆ. ಆ ಅಪರೋಕ್ಷಜ್ಞಾನದಿಂದ ಪರಮಾತ್ಮನ ವಿಷಯದಲ್ಲಿ ಪರಾಭಕ್ತಿಯುಂಟಾಗುತ್ತದೆ. ಆದುದರಿಂದ ಭಕ್ತಿಯೋಗದ ಅಭ್ಯಾಸಕ್ಕೆ ಅಶಕ್ತನಾದವನಿಗೆ ಆತ್ಮನಿಷ್ಠೆಯು ಶ್ರೇಯಸ್ಕರವಾದುದು. ಆತ್ಮನಿಷ್ಠನೂ ಕೂಡ ಮನಸ್ಸಿಗೆ ಶಾಂತಿಯಿಲ್ಲದಿದ್ದರೆ ಆ ನಿಷ್ಠೆಯುಂಟಾಗುವುದಕ್ಕೋಸ್ಕರವಾಗಿ ಜ್ಞಾನವನ್ನೊಳಗೊಂಡ ಫಲಾಭಿಸಂಧಿರಹಿತವಾದ ಕರ್ಮನಿಷ್ಠೆಯನ್ನು ಹೊಂದುವುದೇ ಶ್ರೇಯಸ್ಕರ. (ರಾ. ಭಾ.)

ಅಜ್ಞಾನಪೂರ್ವಕವಾದ ಅಭ್ಯಾಸಕ್ಕಿಂತಲೂ ಜ್ಞಾನವೇ ಶ್ರೇಷ್ಠವಾದುದು. ಕೇವಲ ಜ್ಞಾನಕ್ಕಿಂತಲೂ ಜ್ಞಾನಸಹಿತವಾದ ಧ್ಯಾನವು ಶ್ರೇಷ್ಠವಾದುದು. ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಶ್ರೇಷ್ಠವಾದುದು–ಎಂದು ಹೇಳಿರುವುದು ಕರ್ಮಫಲತ್ಯಾಗದ ಸ್ತುತಿಗೋಸ್ಕರ. ಏಕೆಂದರೆ : ಹಿಂದಿನ ಶ್ಲೋಕದಲ್ಲಿ **ಅಭ್ಯಾಸೇऽಪ್ಯಸಮರ್ಥೋऽಸಿ** ಎಂದು ಹೇಳಿದ್ದಾನೆ. ಧ್ಯಾನಾದಿ ಪ್ರಾಪ್ತಿಗೆ ಕಾರಣವಾಗಿರುವುದರಿಂದ ತ್ಯಾಗವನ್ನು ಸ್ತೋತ್ರಮಾಡಿರುವುದು ಉಚಿತವಾಗಿದೆ. ಕೇವಲ ಧ್ಯಾನಕ್ಕಿಂತಲೂ ಕರ್ಮಫಲತ್ಯಾಗಯುಕ್ತವಾದ ಧ್ಯಾನವು ಶ್ರೇಷ್ಠವಾದುದು. ಇಲ್ಲಿ ಹೇಳಿರುವುದು ಧ್ಯಾನಯುಕ್ತವಾದ ತ್ಯಾಗವನ್ನೇ. ಇಲ್ಲದಿದ್ದರೆ ತ್ಯಾಗದ ಅನಂತರವೇ ಶಾಂತಿಯು ಸಿಗುತ್ತದೆ ಎಂಬ ಮಾತು ಹೊಂದಿಕೆಯಾಗುವುದಿಲ್ಲ. ಅದು ಧ್ಯಾನಕ್ಕಿಂತಲೂ ಅಧಿಕವು ಹೇಗಾಯಿತು? ಇಲ್ಲಿ ಹೇಳಿರುವುದು ಕೇವಲ ಕರ್ಮಫಲತ್ಯಾಗದ ಸ್ತುತಿ. ಜೊತೆಯಲ್ಲಿದ್ದರೆ ಇವನು ಗೆಲ್ಲುತ್ತಾನೆ ; ಇಲ್ಲದಿದ್ದರೆ ಇಲ್ಲ–ಎಂದು ಹೇಳಿದರೆ ಅದರಿಂದ 'ಇವನನ್ನು' ಸ್ತುತಿಸಿದಂತಾಗುತ್ತದೆ. (ಮ. ಭಾ.)

**ಓಂ ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥೧೩॥**

**ಓಂ ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೪॥**

ಯಾವ ಪ್ರಾಣಿಗಳನ್ನೂ ದ್ವೇಷಿಸದೇ ಮೈತ್ರಿಯುಳ್ಳವನೂ–ಕರುಣಾಳುವೂ ಆಗಿ, ಮಮತ್ವವನ್ನು ಬಿಟ್ಟು, ನಿರಹಂಕಾರಿಯಾಗಿ, ಸುಖ-ದುಃಖಗಳೆರಡನ್ನೂ ಸಮವಾಗಿ ಕಾಣುತ್ತಾ ಕ್ಷಮಾವಂತನಾಗಿ, ಸರ್ವದಾ ಸಂತುಷ್ಟನಾಗಿ, ಜಿತೇಂದ್ರಿಯನಾಗಿ, ದೃಢನಿಶ್ಚಯನಾಗಿ ನನ್ನಲ್ಲಿಯೇ ಮನಸ್ಸು ಮತ್ತು ಬುದ್ಧಿಗಳನ್ನು ಅರ್ಪಿಸಿರುವ ಯಾವ ಭಕ್ತನುಂಟೋ ಅವನು ನನಗೆ ಪ್ರಿಯನು.

* * *

( ಭಗವದ್ಭಕ್ತನ ಲಕ್ಷಣಗಳೂ ಸ್ಥಿತಪ್ರಜ್ಞನ ಲಕ್ಷಣಗಳೂ ಸಾಮಾನ್ಯವಾಗಿ ಒಂದೇ ಆಗಿವೆ. **ಅದ್ವೇಷ್ಟಾ ಸರ್ವಭೂತಾನಾಂ** = ಯಾವ ಪ್ರಾಣಿಗಳನ್ನೂ ದ್ವೇಷಿಸದೇ ಇರತಕ್ಕವನು. ಇಷ್ಟು ಮಾತ್ರವಲ್ಲ. **ಮೈತ್ರಃ ಕರುಣ ಏವ ಚ** = ಇವನು ಸಕಲಪ್ರಾಣಿಗಳ ವಿಷಯದಲ್ಲಿಯೂ ಮೈತ್ರಿಯಿಂದಲೂ ಇರುತ್ತಾನೆ. ದಯಾಪರನಾಗಿಯೂ ಇರುತ್ತಾನೆ.

**ನಿರ್ಮಮಃ** = ಮಮತೆ ಎಂದರೆ 'ನನ್ನವರು, ನನ್ನದು.' ಇವುಗಳ ಮೇಲೆ ಪ್ರೀತಿ. ಇದನ್ನು ತೊರೆಯುವುದೇ ನಿರ್ಮಮತೆ. ನಿರಹಙ್ಕಾರಃ– ಅಹಂಕಾರ ಎಂದರೆ 'ನಾನು ಮಾಡುತ್ತೇನೆ ; ನನ್ನಿಂದ ಈ ಕಾರ್ಯವಾಗು ತ್ತಿದೆ'–ಎಂಬ ಅಹಂಭಾವ. ಭಗವದ್ಭಕ್ತನು 'ಪರಮಾತ್ಮನೇ ಎಲ್ಲವೂ ; ನನ್ನ ದೆಂಬುದು ಏನೂ ಇಲ್ಲ ; ಅವನು ಮಾಡಿಸಿದಂತೆ ಮಾಡುವವನು ನಾನು'– ಎಂಬ ಭಾವನೆಯನ್ನು ಮೈಗೂಡಿಸಿಕೊಂಡು ಅಹಂಕಾರವನ್ನು ತೊರೆದಿರು ತ್ತಾನೆ.

**ಸಮದುಃಖಸುಖಃ** = ಭಕ್ತನಾದವನು ಸುಖವನ್ನೂ, ದುಃಖವನ್ನೂ ಒಂದೇ ಸಮನಾಗಿ ಕಾಣುತ್ತಾನೆ. ಏಕೆಂದರೆ : ಎರಡನ್ನೂ ಪರಮಾತ್ಮನು ಕರ್ಮಾನುಗುಣವಾಗಿ ಕೊಡುತ್ತಾನೆಂಬ ಭಾವನೆಯು ಅವನಿಗಿರುತ್ತದೆ. ಯಾವುದನ್ನೇ ಆದರೂ ಪರಮಾತ್ಮನ ಪ್ರಸಾದವೆಂದು ಸ್ವೀಕರಿಸಬೇಕೆಂಬ ಭಾವನೆಯಿಂದಿರುತ್ತಾನೆ. ಪರಮಾತ್ಮನ ಪ್ರಸಾದವೆಂದು ತುಳಸಿಯನ್ನೂ ಮೆಲ್ಲುತ್ತೇವೆ. ಬೇವನ್ನೂ ತಿನ್ನುತ್ತೇವೆ. ಇದರಂತೆಯೇ ಎಲ್ಲವೂ ಪರಮಾತ್ಮನ ಪ್ರಸಾದವೆಂದು ಭಾವಿಸಿದರೆ ಸುಖ-ದುಃಖಗಳೆರಡೂ ಒಂದೇ ಆಗುತ್ತವೆ.

ಸುಖದಿಂದ ಹರ್ಷವಾಗಲೀ, ದುಃಖದಿಂದ (ಕಷ್ಟಪ್ರಾಪ್ತಿಯಿಂದ) ಶೋಕವಾಗಲೀ–ಅವನಿಗೆ ಉಂಟಾಗುವುದಿಲ್ಲ.

ಕಠೋಪನಿಷತ್ತಿನಲ್ಲಿ ಇದನ್ನೇ ಜ್ಞಾನಿಯ ವಿಷಯದಲ್ಲಿ ಹೇಳಿದ್ದಾರೆ :

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ**
**ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥** ಕಠ ೨-೧೨

ಅತಿಸೂಕ್ಷ್ಮನಾಗಿರುವುದರಿಂದ ನೋಡಲು ಕಷ್ಟಸಾಧ್ಯನೂ, ಪ್ರಾಕೃತ ವಿಷಯಗಳ ಜ್ಞಾನದಿಂದ ಮುಚ್ಚಿಹೋಗಿರುವವನೂ, ಬುದ್ಧಿಯಲ್ಲಿರುವವನೂ, ಅನರ್ಥಸಂಕುಲವಾದ ಶರೀರದಲ್ಲಿರುವವನೂ, ಪುರಾಣನೂ ಆದ ದೇವನನ್ನು (ಆತ್ಮನನ್ನು ) ಅಧ್ಯಾತ್ಮಯೋಗದಿಂದ (ವಿಷಯಗಳಿಂದ ಮನಸ್ಸನ್ನು ಸೆಳೆದುಕೊಂಡು ಆತ್ಮನಲ್ಲಿಯೇ ನಿಲ್ಲಿಸುವ ಯೋಗಾಭ್ಯಾಸದಿಂದ) ಸಾಕ್ಷಾತ್ಕರಿಸಿಕೊಂಡು ಧೀರನಾದವನು ಹರ್ಷ-ಶೋಕಗಳನ್ನು ಬಿಡುತ್ತಾನೆ.

**ಕ್ಷಮೀ**= ಬಯ್ಯಲಿ, ಹೊಡೆಯಲಿ, ನಿಂದಿಸಲಿ–ಯಾವ ವಿಧವಾದ ಮನೋವಿಕಾರವೂ ಇಲ್ಲದೇ ಇರತಕ್ಕವನು. ಭಕ್ತನಾದವನು ತನಗೆ ಅಪಕಾರ ಮಾಡಿದವರನ್ನೂ ಸಹ ದಂಡಿಸಹೋಗುವುದಿಲ್ಲ. ತನಗೆ ಯಾರಿಂದಲಾದರೂ ಉಪಕಾರವಾದರೂ ಅದು ಭಗವಂತನಿಂದಲೇ ಆಯಿತೆಂದು ಭಾವಿಸುತ್ತಾನೆ. ಯಾರಿಂದಲಾದರೂ ಅಪಕಾರವಾದರೂ ಸಹ ಅದು ಭಗವಂತನಿಂದಲೇ ಆಯಿತೆಂದು ಭಾವಿಸುತ್ತಾನೆ. ತನ್ನ ಆಗು-ಹೋಗುಗಳಿಗೆಲ್ಲಾ ಭಗವಂತನೊಬ್ಬನೇ ಕಾರಣನೆಂದು ದೃಢವಾಗಿ ನಂಬಿರುತ್ತಾನೆ. ಆದುದರಿಂದ ನಿಜವಾದ ಭಕ್ತನು ಸಾಕ್ಷಾತ್ ಕ್ಷಮಾಮೂರ್ತಿಯೇ ಆಗಿರುತ್ತಾನೆ.

**ಸಂತುಷ್ಟಃ ಸತತಂ** = ಭಗವದ್ಭಕ್ತನಲ್ಲದ ಸಂಸಾರಿಯ ಸಂತೋಷವು ಅನಿತ್ಯವಸ್ತುಗತವಾದುದರಿಂದ ಆ ಭೋಗ್ಯವಸ್ತುಗಳು ತೀರಿದೊಡನೆಯೇ ಅಸಂತೋಷವುಂಟಾಗುತ್ತದೆ. ಪುನಃ ಅದನ್ನು ಪಡೆದುಕೊಂಡ ಮೇಲೆ ತಾತ್ಕಾಲಿಕವಾಗಿ ಸಂತೋಷವುಂಟಾಗುತ್ತದೆ. ಆದರೆ ಭಗವದ್ಭಕ್ತನ ವಿಷ

ಯವು ಹಾಗಲ್ಲ. ಅವನಿಗೆ ಪರಮಾತ್ಮನ ಗುಣಕೀರ್ತನೆ, ಕಥಾಶ್ರವಣ, ಪೂಜೆ-ಅರ್ಚನೆ, ನಾಮಜಪ–ಇವುಗಳೇ ಅವನ ಸಂತುಷ್ಟಿಗೆ ಕಾರಣಗಳಾಗುತ್ತವೆ. ಹಿಂದೆಯೇ ಹೇಳಿರುವಂತೆ ಭಗವಂತನನ್ನು ಆರಾಧಿಸಲು ಪತ್ರ, ಪುಷ್ಪ, ಫಲ, ತೋಯಗಳೇ ಸಾಕು. ಇವುಗಳಿಗೆ ಸಾಮಾನ್ಯವಾಗಿ ಯಾವಾಗಲೂ ಅಭಾವವಿರುವುದಿಲ್ಲ. ಸ್ತೋತ್ರ-ಪ್ರಾರ್ಥನಾದಿಗಳಿಗಂತೂ ಯಾವ ಪದಾರ್ಥದ ಅವಶ್ಯಕತೆಯೂ ಇಲ್ಲ. ಆದುದರಿಂದ ಭಗವದ್ಭಕ್ತನು ಸರ್ವದಾ ಪರಮಾತ್ಮನ ಚಿಂತನದಲ್ಲಿಯೇ ಆನಂದವಾಗಿದ್ದುಬಿಡುತ್ತಾನೆ.

**ಯತಾತ್ಮಾ** = ಭಕ್ತನು ಯಾವಾಗಲೂ ತನ್ನ ಮನಸ್ಸು-ಇಂದ್ರಿಯ-ಶರೀರಗಳನ್ನು ಭಗವದರ್ಪಣಮಾಡಿಬಿಟ್ಟಿರುತ್ತಾನೆ. ಅವನ ಇಂದ್ರಿಯಗಳೆಲ್ಲವೂ ಭಗವತ್ಸೇವೆಯಲ್ಲಿಯೇ ನಿರತವಾಗಿರುತ್ತವೆ. ಅವುಗಳಿಗೆ ಬೇರೆ ಕಡೆಗೆ ತಿರುಗಲು ಅವಕಾಶವೇ ಇರುವುದಿಲ್ಲ. ಆದುದರಿಂದ ಭಗವದರ್ಪಿತವಾಗಿರುವ ಅವನ ಮನಸ್ಸಾಗಲೀ, ಶರೀರವಾಗಲೀ, ಇಂದ್ರಿಯಗಳಾಗಲೀ–ಬೇರೆಡೆಗಳಿಗೆ ಹೋಗದೆ ಸಂಯಮದಲ್ಲಿರುತ್ತವೆ. **ದೃಢನಿಶ್ಚಯಃ** = ಇವನಿಗೆ ಪರಮಾತ್ಮನು ತನ್ನ ಸ್ವಾಮಿಯೆಂಬ ಮತ್ತು ತಾನು ಅವನ ದಾಸನೆಂಬ ವಿಷಯದಲ್ಲಿ ದೃಢವಾದ ನಿಶ್ಚಯಜ್ಞಾನವಿರುವುದು. ಸಂಶಯವಾಗಲೀ–ವಿಕಲ್ಪವಾಗಲೀ ಇರುವುದಿಲ್ಲ. **ಯೋಗೀ** = ಯೋಗೀ ಎಂದರೆ ಭಕ್ತಿಯೋಗಿಯೂ ಆಗಬಹುದು ; ಜ್ಞಾನಯೋಗಿಯೂ ಆಗಬಹುದು. ಜ್ಞಾನಯೋಗಿಗೂ ಸಹ ಸ್ವಲ್ಪ ವ್ಯತ್ಯಾಸವಾದ ಅರ್ಥದಲ್ಲಿ ಇದೇ ಲಕ್ಷಣಗಳು ಹೊಂದಿಕೊಳ್ಳುತ್ತವೆ. ಆದರೆ ಪ್ರಸಕ್ತಸಂದರ್ಭದಲ್ಲಿ ಭಕ್ತನನ್ನೇ ಕುರಿತು ಶ್ರೀಕೃಷ್ಣನು ಹೇಳುತ್ತಿರುವುದರಿಂದ ಯೋಗಿಯಾದ ಭಕ್ತನು ಎಂದೇ ಅರ್ಥ ಮಾಡಬಹುದು.

**ಮಯ್ಯರ್ಪಿತಮನೋಬುದ್ಧಿಃ** = ಮನಸ್ಸನ್ನೂ, ಬುದ್ಧಿಯನ್ನೂ ನನಗೆ ಸಮರ್ಪಿಸಿದವನು. ಸಂಕಲ್ಪ-ವಿಕಲ್ಪರೂಪವಾಗಿರುವುದು ಮನಸ್ಸು ; ನಿಶ್ಚಯರೂಪವಾಗಿರುವುದು ಬುದ್ಧಿ. ಇಂದ್ರಿಯಗಳು ಮನಸ್ಸಿನೊಳಗೂ, ಮನಸ್ಸು ಬುದ್ಧಿಯಲ್ಲೂ ಲೀನವಾದನಂತರ, ಬುದ್ಧಿಯು ಸಾಕಾರಮೂರ್ತಿಯಲ್ಲಿ ನೆಲೆಗೊಂಡು ಮನಸ್ಸೆಂಬ ಕಣ್ಣಿನ ಮೂಲಕ ಶುಭಾಲಂಬನವಾದ ಭಗವನ್ಮೂರ್ತಿಯನ್ನು ನೋಡುತ್ತದೆ. ಇದಕ್ಕೆ ಪರಮಾತ್ಮನಲ್ಲಿ ಮನಸ್ಸು-ಬುದ್ಧಿಗಳನ್ನು ಸಮರ್ಪಿಸುವುದು ಎಂದರ್ಥ.

ಇಂತಹವನು ಯಾವನೋ ಅವನೇ ನನ್ನ ಭಕ್ತನು ಮತ್ತು ಅವನೇ ನನಗೆ ಅತ್ಯಂತಪ್ರಿಯನಾದವನು–ಎಂದು ಭಗವಂತನು ಹೇಳುತ್ತಾನೆ.)

o o o

ಎಲ್ಲ ಕಾಮನೆಗಳನ್ನೂ ತೊರೆದು ಅಕ್ಷರೋಪಾಸಕರಾಗಿ ಯಥಾರ್ಥ ಜ್ಞಾನನಿಷ್ಠರಾಗಿರುವ ಸಂನ್ಯಾಸಿಗಳಿಗೆ ಸಾಕ್ಷಾತ್ ಅಮೃತತತ್ವಕ್ಕೆ ಕಾರಣವಾದ ಧರ್ಮಸಮೂಹವನ್ನು ಇಲ್ಲಿ ವರ್ಣಿಸಲು ತೊಡಗುತ್ತಾನೆ.

**ಅದ್ವೇಷ್ಟಾ ಸರ್ವಭೂತಾನಾಂ** = ಎಲ್ಲ ಭೂತಗಳಲ್ಲಿಯೂ–ಎಂದರೆ ತನಗೆ ದುಃಖವನ್ನುಂಟುಮಾಡುವ ಪ್ರಾಣಿಯನ್ನೂ ಕೂಡ ದ್ವೇಷಿಸುವುದಿಲ್ಲ. ಎಲ್ಲ ಭೂತಗಳನ್ನೂ ಆತ್ಮಭಾವದಿಂದಲೇ ನೋಡುತ್ತಾನೆ.

**ಕರುಣಃ** = ದುಃಖಿತರಲ್ಲಿ ದಯೆಯುಳ್ಳವನು. ಎಲ್ಲ ಭೂತಗಳಿಗೂ ಅಭಯವನ್ನು ಕೊಟ್ಟಿರುವ ಸಂನ್ಯಾಸಿ.

**ಸಮದುಃಖಸುಖಃ** = ಇವನ ಅಂತಃಕರಣದಲ್ಲಿ ಸುಖ-ದುಃಖಗಳು ರಾಗ-ದ್ವೇಷಗಳನ್ನು ಉಂಟುಮಾಡುವುದಿಲ್ಲ. **ಕ್ಷಮೀ**=ನಿಂದಿಸಲ್ಪಟ್ಟರೂ ಹೊಡೆಯಲ್ಪಟ್ಟರೂ ವಿಕಾರರಹಿತನಾಗಿಯೇ ಇರುವವನು. **ಸಂತುಷ್ಟಃಸತತಂ**= ದೇಹದ ಇರುವಿಕೆಗೆ ಬೇಕಾದ ಪದಾರ್ಥಗಳು ದೊರಕಲಿ ; ದೊರೆಯದೇ ಇರಲಿ–ಎಲ್ಲವೂ ಸರಿ ; ಎಂದು ತೃಪ್ತನಾಗಿರುವವನು. **ಯೋ ಮದ್ಭಕ್ತಃ ಸ ಮೇ ಪ್ರಿಯಃ**= ಏಳನೆಯ ಅಧ್ಯಾಯದಲ್ಲಿ **ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ**–ಎಂದೂ ಸೂಚಿಸಿದ ವಿಷಯವೇ ಇಲ್ಲಿ ವಿಸ್ತರಿಸಲ್ಪಟ್ಟಿದೆ. (ಶಂ. ಭಾ.)

ಫಲಾಭಿಸಂಧಿಯಿಲ್ಲದೇ ಮಾಡಬೇಕಾದ ಕರ್ಮಯೋಗದ ನಿಷ್ಠೆಯುಳ್ಳವನು ಸ್ವೀಕರಿಸಬೇಕಾದ ಗುಣಗಳನ್ನು ಇಲ್ಲಿ ಹೇಳಿದೆ.

**ಅದ್ವೇಷ್ಟಾ ಸರ್ವಭೂತಾನಾಂ : ನಿರಹಙ್ಕಾರಃ** = ತನ್ನಲ್ಲಿ ದ್ವೇಷವನ್ನು ಮಾಡುತ್ತಾ ಅಪಕಾರಮಾಡುತ್ತಿರುವ ಪ್ರಾಣಿಗಳಲ್ಲಿಯೂ ಕೂಡ ದ್ವೇಷವಿಲ್ಲದವನು. ನನ್ನ ಅಪರಾಧಕ್ಕೆ ಅನುಗುಣವಾಗಿ ಈಶ್ವರನಿಂದ ಪ್ರೇರಿಸಲ್ಪಟ್ಟೇ ಈ ಪ್ರಾಣಿಗಳು ನನ್ನನ್ನು ದ್ವೇಷಿಸಿ ಅಪಕಾರಮಾಡುತ್ತಿವೆ ಎಂದು ಅನುಸಂಧಾನಮಾಡುತ್ತಾನೆ. ಅವುಗಳನ್ನು ದ್ವೇಷಿಸುವುದಿಲ್ಲ. ಅಂತಹ

ಭೂತಗಳಲ್ಲಿಯೂ ಸ್ನೇಹದ ಬುದ್ಧಿಯನ್ನು ಹೊಂದಿರುತ್ತಾನೆ. ಅವರು ದುಃಖಿತರಾದರೂ ಕರುಣೆಯನ್ನು ತೋರಿಸುತ್ತಾನೆ. ದೇಹ ಮತ್ತು ಇಂದ್ರಿಯ ಗಳಲ್ಲಿಯೂ ಅದಕ್ಕೆ ಸಂಬಂಧಪಟ್ಟವರಲ್ಲಿಯೂ ನನ್ನದು ಎಂಬ ಭಾವವನ್ನು ತೊರೆದಿದ್ದಾನೆ. ದೇಹಾತ್ಮಾಭಿಮಾನವಿಲ್ಲದವನಾಗಿರುತ್ತಾನೆ.

**ದೃಢನಿಶ್ಚಯಃ** = ಅಧ್ಯಾತ್ಮಶಾಸ್ತ್ರಗಳು ಹೇಳಿರುವ ವಿಷಯಗಳಲ್ಲಿ ದೃಢವಾದ ನಿಶ್ಚಯವುಳ್ಳವನು. **ಮಯ್ಯರ್ಪಿತಮನೋಬುದ್ಧಿಃ** = ಭಗವಂತ ನಾದ ವಾಸುದೇವನೇ ಈ ಫಲಾಭಿಸಂಧಿರಹಿತವಾದ ನನ್ನ ಕರ್ಮಯೋಗ ದಿಂದ ಆರಾಧಿಸಲ್ಪಡುತ್ತಾನೆ ಮತ್ತು ಆರಾಧಿಸಲ್ಪಟ್ಟು ನನಗೆ ಪ್ರತ್ಯಕ್ಷನಾಗುತ್ತಾನೆ ಎಂದು ನನ್ನಲ್ಲಿ ಮನಸ್ಸು ಮತ್ತು ಬುದ್ಧಿಗಳನ್ನು ಅರ್ಪಿಸಿದವನು. **ಮದ್ಭಕ್ತಃ** = ಹೀಗೆ ಕರ್ಮಯೋಗದಿಂದ ನನ್ನನ್ನು ಭಜಿಸುವವನು ನನಗೆ ಪ್ರಿಯನು.

(ರಾ. ಭಾ.)

**ಓಂ ಯಸ್ಮಾನ್ನೋದ್ವಿಜತೇ ಲೋಕೋ**
**ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈ-**
**ರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥೧೫॥**

ಯಾವನಿಂದ ಲೋಕವು ಸಂತಾಪಗೊಳ್ಳುವುದಿಲ್ಲವೋ ಮತ್ತು ಲೋಕ ದಿಂದ ಯಾವನು ಸಂತಾಪಗೊಳ್ಳುವುದಿಲ್ಲವೋ, ಹರ್ಷ, ಅಸಹಿಷ್ಣುತೆ, ಭಯ, ಉದ್ವೇಗ–ಇವುಗಳಿಂದ ಯಾವನು ಬಿಡುಗಡೆಯನ್ನು ಹೊಂದಿರು ವನೋ ಅವನು ನನಗೆ ಪ್ರಿಯನು.

*　　*　　*

(**ಯಸ್ಮಾನ್ನೋದ್ವಿಜತೇ ಲೋಕಃ** = ಪರಮಾತ್ಮನ ಭಕ್ತರನ್ನು ಕಂಡರೆ ಲೋಕವು ಉದ್ವೇಗಗೊಳ್ಳುವುದಿಲ್ಲ ; ಭಯಪಡುವುದಿಲ್ಲ. ಪರಮಾತ್ಮನನ್ನು ಕಂಡಂತೆಯೇ ಹರ್ಷಗೊಳ್ಳುತ್ತದೆ. ಭಗವದ್ಭಕ್ತರ ಸ್ವರೂಪವೇ ಹರ್ಷ ದಾಯಕವಾಗಿರುತ್ತದೆ. ಅವರು ತಮ್ಮಲ್ಲಿ ಭಗವಂತನನ್ನು ತುಂಬಿಕೊಂಡು ಬಿಟ್ಟಿರುವುದೇ ಇದಕ್ಕೆ ಕಾರಣ. ಭಗವಂತನ ಮೈತ್ರಿ, ದಯಾಪರತೆ–ಇತ್ಯಾದಿ ಗಳೂ ಸಹ ಭಕ್ತರಲ್ಲಿ ಮೈಗೂಡಿಕೊಂಡಿರುತ್ತವೆ. ಆದುದರಿಂದ ಭಗವದ್ಭಕ್ತ

ರನ್ನು ಸಂದರ್ಶಿಸಿದ ಯಾರೂ ಉದ್ವೇಗಗೊಳ್ಳುವುದಿಲ್ಲ ; ಪ್ರಾಣಿಗಳೂ ಸಹ ಇಂತಹವರ ವಿಷಯದಲ್ಲಿ ಉದ್ವೇಗಗೊಳ್ಳುವುದಿಲ್ಲ.

**ಲೋಕಾನ್ನೋದ್ವಿಜತೇ ಯಃ** =ಲೋಕವನ್ನು ಅಥವಾ ಜನರನ್ನು ಕಂಡರೆ ಇವನೂ ಉದ್ವೇಗಗೊಳ್ಳುವುದಿಲ್ಲ. ಒಂದು ವೇಳೆ ಒಬ್ಬನಿಂದ ಅಪಕಾರವೇ ಆದರೂ ಸಹ ಅದನ್ನು ಅವನು ಮಾಡಿದ್ದೆಂದು ಭಾವಿಸುವುದೇ ಇಲ್ಲ. ಕರ್ಮಾನುಗುಣವಾಗಿ ತನಗೆ ಒದಗಿಬಂದದ್ದು ಮತ್ತು ಅವನಲ್ಲಿ ನಡೆದಿರುವ ಪ್ರಕೃತಿಯ ಆಧಿ–ಎಂದು ಭಾವಿಸಿ ಶಾಂತನಾಗಿರುತ್ತಾನೆ. ಪ್ರತಿಕ್ರಿಯೆಮಾಡಲು ಹೋಗುವುದಿಲ್ಲ.

**ಹರ್ಷಾಮರ್ಷಭಯೋದ್ವೇಗೈರ್ಮುಕ್ತಃ** = **ಹರ್ಷ** ಎಂದರೆ ಸಂತೋಷ ; ಸುಖವು ಪ್ರಾಪ್ತವಾದಾಗ ಸಂತೋಷಪಡುವುದು. ದುಃಖವು ಪ್ರಾಪ್ತವಾದಾಗ ಶೋಕಪಡುವುದು–ಎಂಬುದನ್ನೂ ಇದರೊಡನೆ ಸೇರಿಸಿ ಕೊಳ್ಳಬೇಕು. ಈ ದ್ವಂದ್ವಗಳಿಂದ ವಿಮುಕ್ತನಾಗಿರುವಿಕೆ. **ಅಮರ್ಷ**–ಎಂದರೆ ಅಸಹಿಷ್ಣುತೆ, ಸಹನೆಯಿಲ್ಲದಿರುವಿಕೆ, ಕೋಪ. ಇದರಿಂದಲೂ ಮುಕ್ತನಾಗಿರು ವಿಕೆ. ಭಯ–ಎಂದರೆ ಹೆದರಿಕೆ ; ಯಾರು ಏನು ಮಾಡುವರೋ ಯಾರಿಂದ ಏನಾಗುವುದೋ–ಎಂಬ ಭಯ. ಪರಮಾತ್ಮನ ಪಾದಾರವಿಂದಗಳನ್ನು ಹಿಡಿದ ನಂತರ ಇಂತಹ ಭಯಕ್ಕೆ ಕಾರಣವೇ ಇರುವುದಿಲ್ಲ. **ಉದ್ವೇಗ**–ಎಂದರೆ ತಳಮಳಗೊಳ್ಳುವುದು. ಇವುಗಳಿಂದ ಯಾವನು ಬಿಡುಗಡೆಹೊಂದಿರು ವನೋ ಅವನೇ ನನಗೆ ಪ್ರಿಯನಾದ ಭಕ್ತನು–ಎನ್ನುತ್ತಾನೆ ಭಗವಂತ.)

o o o

**ಹರ್ಷಃ** = ಪ್ರಿಯವಸ್ತುವು ದೊರೆತಾಗ ಅಂತಃಕರಣದಲ್ಲಿ ಉಂಟಾಗುವ ಹಿಗ್ಗುವಿಕೆ, ರೋಮಾಂಚನ, ಕಣ್ಣೀರುಸುರಿಸುವುದು–ಮುಂತಾದುವು ಇದರ ಗುರುತು.

**ಅಮರ್ಷಃ** = ಅಸಹಿಷ್ಣುತೆ, **ಭಯಂ**=ತ್ರಾಸ, **ಉದ್ವೇಗಃ** = ಕ್ಷೋಭೆ.

(ಶಂ. ಭಾ.)

ಯಾವನು ಲೋಕಕ್ಕೆ ಉದ್ವೇಗವನ್ನುಂಟುಮಾಡುವ ಯಾವ ಕೆಲಸ ವನ್ನೂ ಮಾಡುವುದಿಲ್ಲವೋ, ಯಾವನಿಂದ ಲೋಕವು ಉದ್ವೇಗಗೊಳ್ಳುವು

ದಿಲ್ಲವೋ. 'ಇವನು ಯಾರಿಗೂ ವಿರೋಧಿಯಲ್ಲ' ಎಂಬ ನಿಶ್ಚಯವಿರುವುದರಿಂದ ಇವನ ವಿಷಯದಲ್ಲಿಯೂ ಜನರು ಉದ್ವೇಗವನ್ನುಂಟುಮಾಡುವ ಕೆಲಸ ಮಾಡುವುದಿಲ್ಲ. (ರಾ. ಭಾ.)

**ಓಂ ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।**
**ಸರ್ವಾರಮ್ಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥**

ಅಪೇಕ್ಷೆಯಿಲ್ಲದವನೂ (ನಿಸ್ಪೃಹನೂ), ಶುಚಿಯೂ, ದಕ್ಷನೂ, ಉದಾಸೀನನೂ, ವ್ಯಥೆಯಿಲ್ಲದವನೂ, ಎಲ್ಲ ಆರಂಭಗಳನ್ನೂ ಬಿಟ್ಟುಬಿಟ್ಟವನೂ ಆಗಿರುವ ಯಾವ ನನ್ನ ಭಕ್ತನಿರುವನೋ–ಅವನು ನನಗೆ ಪ್ರಿಯನು.

* * *

(**ಅನಪೇಕ್ಷಃ** = ಯಾವ ವಿಧವಾದ ಅಪೇಕ್ಷೆಯೂ ಇಲ್ಲದವನು. ಪರಮಾತ್ಮನನ್ನು ಪಡೆದು ಪೂರ್ಣಕಾಮನಾದ ಇವನಿಗೆ ಪ್ರಕೃತಿಜನ್ಯವಾದ ಯಾವ ವಸ್ತುಗಳಲ್ಲೇ ಆಗಲೀ ಯಾವ ವಿಧವಾದ ಆಸೆಯೂ ಇರುವುದಿಲ್ಲ. ಯದೃಚ್ಛಾಲಾಭಸಂತುಷ್ಟನಾಗಿರುತ್ತಾನೆ. ಯಾವ ಹೊತ್ತಿಗೆ ಏನು ಸಿಕ್ಕಿತೋ ಅದರಲ್ಲೇ ತೃಪ್ತಿ. ಒಂದು ವೇಳೆ ಸಿಗದಿದ್ದರೂ ಚಿಂತೆಯಿಲ್ಲ. ನಿರ್ವಿಕಾರನಾಗಿರುತ್ತಾನೆ.

**ಶುಚಿಃ** = ಹೊರಗಡೆಯೂ ಮತ್ತು ಅಂತರಂಗದಲ್ಲಿಯೂ ಪರಿಶುದ್ಧನಾಗಿರತಕ್ಕವನು. ಪರಮಾತ್ಮನ ಪವಿತ್ರನಾಮಸ್ಮರಣೆ, ಧ್ಯಾನ–ಇವುಗಳ ಹೊರತಾಗಿ ಭಕ್ತನ ಮನಸ್ಸಿನಲ್ಲಿ ಮತ್ತೇನೂ ಇರುವುದಿಲ್ಲ. ಆದುದರಿಂದ ಇವನು ಪವಿತ್ರಾತ್ಮನಾಗಿರುತ್ತಾನೆ. ಬಹಿರಂಗದಲ್ಲಿಯೂ ಇವನು ಸ್ವಾಮಿಯನ್ನು ಅರ್ಚನೆಮಾಡುವುದರಿಂದಲೂ ಸ್ನಾನ-ಶೌಚಾದಿಗಳಿಂದಲೂ ಪರಿಶುದ್ಧನಾಗಿರುತ್ತಾನೆ.

**ದಕ್ಷಃ** = ತನ್ನ ಕರ್ತವ್ಯಗಳನ್ನು ಬಹುಶೀಘ್ರವಾಗಿ ಮಾಡಿಮುಗಿಸುವವನು. **ಯೇನ ಸ ಸ್ಯಾಚ್ಛೀಘ್ರಕಾರೀ ದಕ್ಷ ಇತ್ಯುಚ್ಯತೇ ಬುಧೈಃ** (ನಿರುಕ್ತ)–ತನ್ನ ಕೆಲಸಗಳನ್ನು ಶೀಘ್ರವಾಗಿ ಮಾಡಿಮುಗಿಸುವುದರಿಂದಲೇ ದಕ್ಷ ಎಂದು ವಿದ್ವಾಂಸರು ಇವನನ್ನು ಕರೆಯುತ್ತಾರೆ.

**ಉದಾಸೀನಃ** = ಶತ್ರುಗಳಲ್ಲಿಯೂ (ತನ್ನನ್ನು ವಿರೋಧಿಸುವವರಲ್ಲಿಯೂ) ಮತ್ತು ಮಿತ್ರರಲ್ಲಿಯೂ (ತನ್ನನ್ನು ಪ್ರೀತಿಸುವವರಲ್ಲಿಯೂ) ಉದಾಸೀನಭಾವದಿಂದಲೇ ಇರತಕ್ಕವನು. ಯಾವ ಪಕ್ಷವನ್ನೂ ಹಿಡಿದು

ಹೋಗತಕ್ಕವನಲ್ಲ. ಪ್ರಾಪಂಚಿಕವಾದ ವಿಷಯಗಳಲ್ಲಿ ಉದಾಸೀನನಾಗಿರತಕ್ಕವನು. ಬೇಕೂ ಬೇಡದಂತೆ ಇರತಕ್ಕವನು. ಯಾವ ವಿಧವಾದ ಚಿಂತೆಯೂ ಇಲ್ಲದೇ ಇರತಕ್ಕವನು–ಎಂದೂ ಅರ್ಥವಾಗುತ್ತದೆ.

**ಗತವ್ಯಥಃ** = ತೊಲಗಿಹೋದ ವ್ಯಥೆಯುಳ್ಳವನು. ವ್ಯಥೆಗೆ ಕಾರಣವಾದ ವಿಷಯಗಳೇ ಇವನ ಮನಸ್ಸಿನೊಳಗೆ ಸುಳಿಯುವುದಿಲ್ಲ. ರೋಗಬರಬಹುದು; ಬಂಧುಗಳ ವಿಯೋಗವಾಗಬಹುದು ; ಯಾವುದಾದರೂ ಕಾರಣಗಳಿಂದ ಮನೆಯಲ್ಲಿ ನಷ್ಟ ಸಂಭವಿಸಬಹುದು. ಭಕ್ತನಾದವನು ಇವುಗಳಾವುದನ್ನೂ ತನ್ನ ಮನಸ್ಸಿಗೇ ಹಚ್ಚಿಕೊಳ್ಳುವುದಿಲ್ಲ. ಈ ದುಃಖಗಳು–ವ್ಯಥೆಗಳು ಅವನ ಮನಸ್ಸಿನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟು ಮಾಡುವುದಿಲ್ಲ.

**ಸರ್ವಾರಮ್ಭಪರಿತ್ಯಾಗೀ**= ಯಾವ ಕರ್ಮವನ್ನೇ ಆಗಲೀ ಪ್ರಾರಂಭಿ ಸಲು ಹೋಗುವುದಿಲ್ಲ. ಭಗವಂತನ ಕೈಗೊಂಬೆಯಂತೆ ಇರುವ ಈ ಭಕ್ತ ಶ್ರೇಷ್ಠನು ಯಾವುದಾದರೂ ಕರ್ಮಮಾಡಬೇಕಾಗಿ ಬಂದರೂ ನಾನು ಮಾಡುತ್ತಿದ್ದೇನೆ–ಎಂದು ಭಾವಿಸಿ ಮಾಡುವುದಿಲ್ಲ. ಭಗವಂತನು ಮಾಡಿಸುತ್ತಿದ್ದಾನೆ–ಎಂದೇ ಭಾವಿಸುತ್ತಾನೆ. ಆ ಕರ್ಮಗಳ ಫಲವನ್ನು ತನಗೆ ಅಂಟಿಸಿಕೊಳ್ಳುವುದಿಲ್ಲ. ಕರ್ಮವೂ ಭಗವಂತನದೇ, ಕರ್ಮಮಾಡಿಸುವವನೂ ಭಗವಂತನೇ, ಕರ್ಮಫಲವೂ ಭಗವಂತನದೇ–ಎಂಬ ಭಾವನೆಯಿಂದ ಕರ್ಮ ಮಾಡುತ್ತಾನೆ.

ಇಂತಹ ಭಕ್ತನು ಕರ್ಮಮಾಡಿದರೂ ಸಹ ಕರ್ಮಮಾಡದಂತೆಯೇ ಸರಿ.

ಇಂತಹ ನನ್ನ ಭಕ್ತನು ನನಗೆ ಪ್ರಿಯನಾದವನೆಂದು ಭಗವಂತನು ಹೇಳುತ್ತಾನೆ.)

O O O

**ಸರ್ವಾರಮ್ಭಪರಿತ್ಯಾಗೀ** = ಆರಂಭ ಎಂದರೆ ಪ್ರಾರಂಭಮಾಡಲ್ಪಡುವ ಕರ್ಮಗಳು. ಈ ಲೋಕ ಮತ್ತು ಪರಲೋಕಗಳ ಫಲಭೋಗಗಳಿಗೋಸ್ಕರ ಮಾಡಲ್ಪಡುವ ಕಾಮನಾಹೇತುವಾದ ಕರ್ಮಗಳು. ಅವುಗಳನ್ನು ತ್ಯಾಗ ಮಾಡುವ ಸ್ವಭಾವವುಳ್ಳವನು ಸರ್ವಾರಮ್ಭಪರಿತ್ಯಾಗೀ. (ಶಂ. ಭಾ.)

**ಅನಪೇಕ್ಷಃ**= ಆತ್ಮವ್ಯತಿರಿಕ್ತವಾದ ಎಲ್ಲ ವಸ್ತುಗಳಲ್ಲಿಯೂ ಅಪೇಕ್ಷೆಯನ್ನು ತೊರೆದವನು.

**ಶುಚಿಃ** =ಶಾಸ್ತ್ರವಿಹಿತವಾದ ದ್ರವ್ಯಗಳಿಂದಲೇ ಶರೀರವನ್ನು ಬೆಳೆಸಿ ಕೊಂಡವನು. **ದಕ್ಷಃ** = ಶಾಸ್ತ್ರೀಯವಾದ ಕ್ರಿಯೆಗಳನ್ನು ಮಾಡುವುದರಲ್ಲಿ ಸಮರ್ಥನಾದವನು. ಉಳಿದ ವಿಷಯಗಳಲ್ಲಿ ಉದಾಸೀನನಾದವನು. **ಗತ ವ್ಯಥಃ**=ಶಾಸ್ತ್ರೀಯಕರ್ಮಗಳನ್ನು ಮಾಡಬೇಕಾದಾಗ ಅನಿವಾರ್ಯವಾಗಿ ಒದ ಗುವ ಶೀತ-ಉಷ್ಣ ಮುಂತಾದ ದುಃಖಗಳಲ್ಲಿ ವ್ಯಥೆಯಿಲ್ಲದವನು. **ಸರ್ವಾ ರಮ್ಭಪರಿತ್ಯಾಗೀ**=ಶಾಸ್ತ್ರೀಯಕರ್ಮಗಳನ್ನು ಉಳಿದು ಮಿಕ್ಕ ಎಲ್ಲ ಕರ್ಮ ಗಳನ್ನೂ ಬಿಟ್ಟವನು. ಇಂತಹ ಭಕ್ತನು ನನಗೆ ಪ್ರಿಯನು. (ರಾ. ಭಾ.)

**ಸರ್ವಾರಮ್ಭಪರಿತ್ಯಾಗೀ**–ಮುಂತಾದ ಪದಗಳನ್ನು ಒಂದು ಸಾಮಾನ್ಯ–ಒಂದು ವಿಶೇಷ, ಒಂದು ವ್ಯಾಖ್ಯಾನ–ಮತ್ತೊಂದು ವ್ಯಾಖ್ಯಾನಿಸ ಬೇಕಾದ ವಿಷಯ–ಎಂಬ ಭಾವದಿಂದ ತೆಗೆದುಕೊಂಡರೆ ಪುನರುಕ್ತಿದೋಷ ವೇನೂ ಇರುವುದಿಲ್ಲ.

**ಸರ್ವಾರಮ್ಭಪರಿತ್ಯಾಗೀ**–ಎಂದು ಈ ಶ್ಲೋಕದಲ್ಲಿ ಹೇಳಿದೆ. ಮುಂದಿನ ಶ್ಲೋಕದಲ್ಲಿ **ಶುಭಾಶುಭಪರಿತ್ಯಾಗೀ** ಎಂದು ಹೇಳಿದೆ. ಇವುಗಳಲ್ಲಿ ಮೊದಲನೆಯದು ಸಾಮಾನ್ಯವಾದ ಆರಂಭಗಳ ಪರಿತ್ಯಾಗ. ಎರಡನೆಯದು ಅವುಗಳ ವಿಶೇಷಗಳಾದ, ಶುಭಾಶುಭಕರ್ಮಗಳ ಪರಿತ್ಯಾಗ.

**ಸನ್ತುಷ್ಟಃ ಸತತಂ ಯೋಗೀ**–ಎಂದು ೧೪ನೆಯ ಶ್ಲೋಕದಲ್ಲಿ ಹೇಳಿದೆ. **ಸನ್ತುಷ್ಟೋ ಯೇನ ಕೇನಚಿತ್** ಎಂದು ೧೯ನೆಯ ಶ್ಲೋಕದಲ್ಲಿ ಹೇಳಿದೆ. ಇವುಗಳಲ್ಲಿ ಮೊದಲನೆಯದು ವ್ಯಾಖ್ಯಾನವನ್ನು ಅಪೇಕ್ಷಿಸುತ್ತದೆ. ಎರಡನೆಯದು **ಯೇನ ಕೇನಚಿತ್** ಅದರಲ್ಲಿ ಆಧಿಕ್ಯವನ್ನು ಹೇಳುವುದರಿಂದ **ಸನ್ತುಷ್ಟಃ ಸತತಂ ಯೋಗೀ** ಎನ್ನುವುದರ ವ್ಯಾಖ್ಯಾನ. ಈ ರೀತಿ ಅರ್ಥವನ್ನು ತೆಗೆದುಕೊಂಡರೆ ಪುನರುಕ್ತಿದೋಷವಿರುವುದಿಲ್ಲ. (ಮ. ಭಾ.)

**ಓಂ ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥೧೭॥**

ಯಾವನು ಸಂತೋಷಪಡುವುದಿಲ್ಲವೋ, ದ್ವೇಷಮಾಡುವುದಿಲ್ಲವೋ, ಶೋಕಿಸುವುದಿಲ್ಲವೋ, ಬಯಸುವುದಿಲ್ಲವೋ, ಶುಭಾಶುಭಗಳನ್ನು ಪರಿತ್ಯಾಗಮಾಡಿರುವನೋ, ಭಕ್ತಿಯುಳ್ಳವನೋ–ಅವನು ನನಗೆ ಪ್ರಿಯನು.

* * *

(**ನ ಹೃಷ್ಯತಿ** =ಯಾವನು ಸಂತೋಷಪಡುವುದಿಲ್ಲವೋ. ಈ ಹಿಂದೆ ೧೫ನೆಯ ಶ್ಲೋಕದಲ್ಲಿ **ಹರ್ಷಾಮರ್ಷ....ಮುಕ್ತಃ** = ಹರ್ಷಾದಿಗಳಿಂದ ಮುಕ್ತನಾದವನು ಎಂದು ಬಂದಿದೆ. ಪುನಃ ಇಲ್ಲಿ ಯೋ ನ ಹೃಷ್ಯತಿ ಎಂದು ಭಗವಂತನು ಹೇಳಿದ್ದಾನೆ. ಸಂತೋಷಪಡುವುದಿಲ್ಲ ಎಂದರೆ ಪ್ರಾಪಂಚಿಕವಾದ ವಸ್ತುಗಳ ಸಂಯೋಗದಿಂದ ಇವನಿಗೆ ಯಾವ ವಿಧವಾದ ಸಂತೋಷವೂ ಉಂಟಾಗುವುದಿಲ್ಲ. ಪರಮಾತ್ಮನ ದರ್ಶನದಿಂದಾಗಿ ಬ್ರಹ್ಮಾನಂದರೂಪವಾದ ಆನಂದವನ್ನು ಇವನು ಈಗಾಗಲೇ ಪಡೆದುಕೊಂಡುಬಿಟ್ಟಿ ದ್ದಾನೆ. ಆ ಆನಂದವನ್ನು ಮತ್ತು ತನ್ನ ಮನಸ್ಸನ್ನು ಸದಾ ಭಗವಂತನ ಸಾನ್ನಿಧ್ಯದಲ್ಲಿಟ್ಟು ಅನುಭವಿಸುತ್ತಲೇ ಇರುತ್ತಾನೆ. ಆ ಆನಂದದ ಮುಂದೆ ಆ ಸಂತೋಷದ ಮುಂದೆ ಪ್ರಕೃತಿಸಂತೋಷವು ಹೋಲಿಕೆಯದೇ ಅಲ್ಲ. ಆದುದರಿಂದ ವಸ್ತುಲಾಭದಿಂದ ಇವನು ಹಿಗ್ಗುವವನಲ್ಲ.

**ನ ದ್ವೇಷ್ಟಿ** = ಯಾರೊಬ್ಬರನ್ನೂ ದ್ವೇಷಿಸುವುದಿಲ್ಲ. ಭಗವಂತನ ಸದ್ಭಾವವೇ ಇವನ ಮನಸ್ಸಿನಲ್ಲಿ ಸಂಪೂರ್ಣವಾಗಿ ತುಂಬಿಕೊಂಡುಬಿಟ್ಟಿರುವುದರಿಂದ ಇವನ ಹೃದಯದಲ್ಲಿ ದ್ವೇಷಕ್ಕಾಗಲೀ, ಅಸೂಯೆಗಾಗಲೀ ಎಡೆಯೇ ಇರುವುದಿಲ್ಲ. ಭಗವಂತನ ಮೇಲಿನ ಪ್ರೇಮವೆಂಬುದು ಇವನ ನರನಾಡಿಗಳಲ್ಲೆಲ್ಲಾ ಸಂಚರಿಸುತ್ತಿರುತ್ತದೆ. ಪ್ರೇಮರಸವು ತುಂಬಿ ತುಳುಕುತ್ತಿರುವಾಗ ದ್ವೇಷಕ್ಕೆ ಎಡೆಯೆಲ್ಲಿಯದು? **ನ ಶೋಚತಿ** = ಹರ್ಷ-ಶೋಕ ಎಂಬುವು ದ್ವಂದ್ವಗಳು–ಸುಖ ಮತ್ತು ದುಃಖಗಳ ಪ್ರತಿಕ್ರಿಯೆಗಳಿವು. ಪ್ರಾಪಂಚಿಕವಾದ ವಸ್ತುವಿನ ಲಾಭಕ್ಕೆ ಸಂತೋಷಿಸದ ಇವನು ಒಂದು ವಸ್ತುವು ನಷ್ಟವಾದರೂ ಶೋಕಪಡುವುದಿಲ್ಲ. ವಸ್ತುವು ತನ್ನದೆಂಬ ಭಾವನೆಯೇ ಇವನಿಗಿರುವುದಿಲ್ಲ. ಇನ್ನು ನಷ್ಟದ ಮಾತೆಲ್ಲಿಂದ ಬಂತು? ಇಷ್ಟ-ಅನಿಷ್ಟ ಎಂಬುದನ್ನೇ ಮನಸ್ಸಿನಿಂದ ತೊಡೆದುಹಾಕಿಬಿಟ್ಟಿರುತ್ತಾನೆ. ಇಷ್ಟ-ಅನಿಷ್ಟ ಎಂಬುದು ಯಾವಾಗ

ಒಬ್ಬ ಮನುಷ್ಯನಿಗಿಲ್ಲವೋ ಆಗ ಹರ್ಷ-ಶೋಕಗಳ ಸುಳಿವೂ ಸಹ ಇರುವುದಿಲ್ಲ. **ನ ಕಾಂಕ್ಷತಿ**=ಯಾವುದನ್ನೂ ಅಪೇಕ್ಷಿಸುವುದಿಲ್ಲ. ಇವನಿಗೆ ಏನು ಬೇಕೋ ಅದು ಸಿಕ್ಕಿಹೋಗಿದೆ. ಆ ಪದಾರ್ಥಕ್ಕೆ ಹೋಲಿಸಿದರೆ ಉಳಿದ ಪದಾರ್ಥಗಳು ತೃಣಕ್ಕೂ ಸಾಟಿಯಾಗಲಾರವು. ಕ್ಷೀರಸಾಗರವು ಪಕ್ಕದಲ್ಲಿರುವಾಗ ಹಾಲಿಗಾಗಿ ಪಾತ್ರೆಯನ್ನು ಹಿಡಿದುಕೊಂಡು ಗೋಪಾಲಕನ ಮನೆಯನ್ನು ಅರಸುತ್ತಾ ಹೋಗುವರೇ? ಅಪಾರಮಹಿಮನಾದ ಭಗವಂತನನ್ನೇ ತನ್ನವನನ್ನಾಗಿ ಮಾಡಿಕೊಂಡಿರುವವನಿಗೆ ಆ ಭಾವಕ್ಕೆ ವಿರುದ್ಧವಾದ ಯಾವುದರ ಮೇಲೂ ಯಾವ ವಿಧವಾದ ಆಕಾಂಕ್ಷೆಯೂ ಇಲ್ಲದಿರುವುದು ಸ್ವಾಭಾವಿಕವಾಗಿಯೇ ಇದೆ.

**ಶುಭಾಶುಭಪರಿತ್ಯಾಗೀ**=ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ಎರಡು ಕರ್ಮಗಳನ್ನೂ ಬಿಟ್ಟಿರತಕ್ಕವನು. ಒಳ್ಳೆಯ ಕರ್ಮಗಳೆಂದರೆ ಲೌಕಿಕವಾದ ಅಭ್ಯುದಯ ಮತ್ತು ಪಾರಲೌಕಿಕವಾದ ಸ್ವರ್ಗಾದಿಪುಣ್ಯಗಳು. ಇವುಗಳ ಅಪೇಕ್ಷೆಯಿಂದ ಮಾಡುವ ಕರ್ಮಗಳು. ಅಶುಭಕರ್ಮಗಳೆಂದರೆ : ಜೂಜು, ಕಪಟ, ಹಿಂಸೆ, ವ್ಯಭಿಚಾರ ಇತ್ಯಾದಿ ಪಾಪಸಂಘಟನೆಯಾಗುವ ಕರ್ಮಗಳು. ಸಂಸಾರಬಂಧನದಿಂದ ತಪ್ಪಿಸಿಕೊಳ್ಳಲು ಎರಡು ವಿಧವಾದ ಕರ್ಮಗಳನ್ನೂ ಬಿಟ್ಟು ಭಗವಂತನಲ್ಲಿ ಮರೆಹೊಕ್ಕಿರುವವನು. ಪೂರ್ವಕರ್ಮಾನುರೂಪವಾಗಿ ಕಷ್ಟಗಳು ಯಾವುದೇ ಬಂದರೂ ಅವುಗಳನ್ನು ಅನುಭವಿಸುತ್ತಾನೆ. ಅವುಗಳ ನಿವಾರಣೆಗೆಂದು ಕಾಮ್ಯಕರ್ಮಗಳನ್ನು ಮಾಡುವುದಿಲ್ಲ. ಪಾಪಕರ್ಮಗಳು ಭಗವದ್ಭಕ್ತಿಗೆ ವಿರೋಧಿಗಳಾದುದರಿಂದ ಅವುಗಳನ್ನು ಆಚರಿಸುವುದಿಲ್ಲ.

ಇಂತಹ ಗುಣಗಳುಳ್ಳವನು ಮತ್ತು **ಭಕ್ತಿಮಾನ್**–ಭಕ್ತಿಯಿಂದ ಕೂಡಿರತಕ್ಕವನು ನನಗೆ ಪ್ರಿಯನು ಎನ್ನುತ್ತಾನೆ ಶ್ರೀಕೃಷ್ಣ.

ಭಕ್ತಿ ಎಂದರೇನು?–**ತಲ್ಲಕ್ಷಣಾನಿ ವಾಚ್ಯನ್ತೇ ನಾನಾಮತ ಭೇದಾತ್**–ಬೇರೆ ಬೇರೆಯ ಆಚಾರ್ಯರ ಮತದಿಂದ ಆ ಭಕ್ತಿಯ ಲಕ್ಷಣಗಳನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ. ಅರ್ಥಾತ್ ಭಕ್ತಿ ಎಂಬುದು ಒಂದೇ ವಿಧದ್ದಲ್ಲ. ಒಬ್ಬೊಬ್ಬರು ಆಚಾರ್ಯರೂ ಅಥವಾ ಋಷಿಗಳೂ ಭಕ್ತಿಯನ್ನು ಒಂದೊಂದು ವಿಧವಾಗಿ ಹೊಗಳಿದ್ದಾರೆ.

**ಪೂಜಾದಿಷ್ವನುರಾಗ ಇತಿ ಪಾರಾಶರ್ಯಃ**–ಪೂಜೆಯೇ ಮುಂತಾದುವುಗಳಲ್ಲಿ ಇರುವ ಅನುರಾಗವೇ ಭಕ್ತಿಯ ಲಕ್ಷಣ–ಎಂದು ಪರಾಶರರ ಪುತ್ರರಾದ ವ್ಯಾಸರು ಹೇಳುತ್ತಾರೆ.

**ಶ್ರೀವಿಷ್ಣೋರರ್ಚನಂ ಯೇ ತು ಪ್ರಕುರ್ವನ್ತಿ ನರಾ ಭುವಿ ।**
**ತೇ ಯಾನ್ತಿ ಶಾಶ್ವತಂ ವಿಷ್ಣೋರಾನನ್ದಂ ಪರಮಂ ಪದಮ್ ॥**

ವಿಷ್ಣುರಹಸ್ಯ.

ಭೂಮಿಯಲ್ಲಿ ವಿಷ್ಣುವಿನ ಅರ್ಚನೆಯನ್ನು ಅಥವಾ ಪೂಜೆಯನ್ನು ಚೆನ್ನಾಗಿ ಮಾಡಿದವರು, ಅನುರಾಗಪೂರ್ವಕವಾಗಿ ಮಾಡಿದವರು–ವಿಷ್ಣುವಿನ ಆನಂದಮಯವಾದ ಪರಮಪದವನ್ನು ಪಡೆಯುತ್ತಾರೆ. **ಕಥಾದಿಷ್ವಿತಿ ಗರ್ಗಃ**–ಭಗವತ್ಕಥಾದಿಗಳಲ್ಲಿರುವ ಅನುರಾಗವೇ ಭಕ್ತಿಯ ಲಕ್ಷಣ–ಎಂದು ಗರ್ಗರು ಹೇಳುತ್ತಾರೆ. ಪರಮಾತ್ಮನ ದಿವ್ಯಕಥಾಶ್ರವಣದಲ್ಲಿ, ಪ್ರವಚನದಲ್ಲಿ ತಲ್ಲೀನತೆಯಿರುವುದೇ ಭಕ್ತಿಯ ಲಕ್ಷಣ. ಕಥಾಶ್ರವಣವೆಂದರೆ ಭಗವಂತನ ಗುಣ-ಕರ್ಮಗಳನ್ನು ವರ್ಣಿಸುವ ಪುರಾಣಾದಿಗಳು. ಅವುಗಳನ್ನು ಕೇಳುವುದು ಮಾತ್ರವಲ್ಲದೇ ಅವುಗಳ ಕೀರ್ತನಮಾಡುವುದೂ ಸಹ ಭಕ್ತಿಗೆ ಸೇರಿದ್ದೇ ಆಗಿದೆ. **ಆತ್ಮರತ್ಯವಿರೋಧೇನೇತಿ ಶಾಣ್ಡಿಲ್ಯಃ**–ಆತ್ಮರತಿಗೆ ಅಡ್ಡಿಯಾಗದಂತೆ ಪೂಜಾದಿಗಳಲ್ಲಿಯೂ ಕಥಾದಿಗಳಲ್ಲಿಯೂ ತೋರಿಸುವ ಅನುರಾಗವು ಭಕ್ತಿಯ ಹೆಗ್ಗುರುತು ಎಂದು ಶಾಂಡಿಲ್ಯರು ಹೇಳುತ್ತಾರೆ. ಪೂಜೆಯೇ ಮೊದಲಾದುವುಗಳಲ್ಲಿ ಅನುರಾಗವಿರಬೇಕಾದುದು ಪೂಜಾದಿಗಳಿಗಾಗಿಯೇ ಅಲ್ಲ. ಪೂಜಾದಿಗಳಿಗೆ ವಿಷಯನಾದ ಭಗವಂತನಿಗಾಗಿ ; ಆತನಲ್ಲಿಯೇ ರತಿಯುಂಟಾಗುವಷ್ಟು ಮಟ್ಟಿಗೆ ಪೂಜಾದಿಗಳನ್ನು ಮಾಡುತ್ತಿರಬೇಕು. ಅವನನ್ನು ಹೃತ್ಕಮಲದಲ್ಲಿ ಕಂಡುಕೊಳ್ಳುವುದೇ ಬಹಿರಂಗಪೂಜೆಯ ಮುಖ್ಯೋದ್ದೇಶ. ಪೂಜಾದಿಗಳನ್ನು ಅನಿಶ್ಚಿತವಾಗಿ ಬೆಳೆಸಿಕೊಂಡು, ಪರಮಾತ್ಮನನ್ನು ಸೇರಿ ಅವನಲ್ಲಿಯೇ ರಮಿಸುವ ಬ್ರಹ್ಮಾನಂದವನ್ನು ಕಳೆದುಕೊಳ್ಳಬಾರದು. ಪೂಜೆಯಲ್ಲಿನ ಅನುರಾಗ ಮತ್ತು ಕಥಾಶ್ರವಣಗಳ ಅನುರಾಗಗಳು ಭಗವಂತನ ಮೇಲಿನ ಅನುರಾಗಕ್ಕೆ ಪೋಷಕಗಳಾಗಬೇಕು. ಪೂಜಾದಿಗಳು ಕರ್ಮೇಂದ್ರಿಯಗಳಿಗೆ

ಸಂಬಂಧಪಟ್ಟವುಗಳು. ಕಥೆಗಳು ಜ್ಞಾನೇಂದ್ರಿಯಗಳಿಗೆ ಸಂಬಂಧಪಟ್ಟವುಗಳು. ಪೂಜಾದಿಗಳಿಗಿಂತಲೂ ಇವು ಹೆಚ್ಚು ಅಂತರಂಗಸಾಧನಗಳಾಗುತ್ತವೆ. ಆತ್ಮರತಿಯು ಮನಸ್ಸಿಗೆ ಸಂಬಂಧಪಟ್ಟಿರುತ್ತದೆಯಾದುದರಿಂದ ಕಥಾದಿಗಳಿಗಿಂತಲೂ ಹೆಚ್ಚು ಅಂತರಂಗವಾಗಿರುತ್ತದೆ.

**ಗಙ್ಗಾಜಲೇ ಕಿಂ ನ ವಸನ್ತಿ ಮತ್ಸ್ಯಾಃ**
**ದೇವಾಲಯೇ ಪಕ್ಷಿಗಣಾ ವಸನ್ತಿ ।**
**ಭಾವೋಜ್ಝಿತಾಸ್ತೇ ನ ಫಲಂ ಲಭನ್ತೇ**
**ತೀರ್ಥಾಚ್ಚ ದೇವಾಯತನಾಚ್ಚ ಮುಖ್ಯಮ್ ॥**

ಗಂಗೆಯಲ್ಲಿ ಮೀನುಗಳು ಓಡಾಡುತ್ತಿದ್ದರೂ ಅವುಗಳಿಗೆ ತೀರ್ಥಸ್ನಾನದ ಫಲವು ಲಭಿಸುವುದಿಲ್ಲ. ಹಕ್ಕಿಗಳು ದೇವಾಲಯದಲ್ಲಿ ವಾಸಮಾಡುತ್ತಿದ್ದರೂ ದೇವಾಯತನವಾಸದ ಪುಣ್ಯವೇನೂ ಅವುಗಳಿಗೆ ಲಭಿಸುವುದಿಲ್ಲ. ಭಕ್ತಿಭಾವವು ಮನಸ್ಸಿನಲ್ಲಿಲ್ಲದಿರುವಾಗ ಬಾಹ್ಯಸಾಧನವು ಫಲಕಾರಿಯಾಗುವುದಿಲ್ಲ. **ನಾರದಸ್ತು ತದರ್ಪಿತಾಖಿಲಾಚಾರತಾ ತದ್ವಿಸ್ಮರಣೇ ಪರಮವ್ಯಾಕುಲತೇತಿ ।** ನಾರದರಾದರೋ : (ಭಗವಂತನಲ್ಲಿಯೇ ಸಕಲಾಚಾರಗಳನ್ನೂ ಅರ್ಪಿಸುವುದು, ಆತನನ್ನು ಮರೆತರೆ ಪರಮವ್ಯಾಕುಲನಾಗುವುದು ಭಕ್ತಿಯ ಗುರುತು)–ಎಂದು ಹೇಳುತ್ತಾರೆ. ಪರಮಾತ್ಮನಿಗೇ ಸಕಲವನ್ನೂ ಅರ್ಪಿಸಿಬಿಡುವುದು ; ತಾನು ಪರಮಾತ್ಮನ ಕೈಗೊಂಬೆ ಎಂದು ಭಾವಿಸುವುದು ; ತಾನು ಅಸ್ವತಂತ್ರನೆಂದು ಭಾವಿಸುವುದು ; ಪರಮಾತ್ಮನನ್ನು ಪ್ರಭುವೆಂತಲೂ ತನ್ನನ್ನು ದಾಸನೆಂತಲೂ ಭಾವಿಸಿಕೊಳ್ಳುವುದು. ದಾಸನಿಗೆ ಯಾವುದೇ ಆಸ್ತಿಯ ಹಕ್ಕು-ಬಾಧ್ಯತೆಗಳೂ ಇರುವುದಿಲ್ಲ. ಅದರಂತೆ ದಾಸಭಾವವನ್ನು ಹೊಂದಿದ ಭಕ್ತನು ತನ್ನದು ಎನ್ನುವುದು ಯಾವುದೂ ಇಲ್ಲವೆಂದೂ ಎಲ್ಲವೂ ಭಗವಂತನದೇ ಎಂದೂ ಭಾವಿಸುವುದು ; ಯಾವುದೇ ಕಾರ್ಯವನ್ನು ಮಾಡುತ್ತಿದ್ದರೂ ಭಗವಂತನನ್ನು ಮರೆಯದೇ ಸ್ಮರಿಸುತ್ತಲೇ ಇರುವುದು ; ಅಪ್ಪಿತಪ್ಪಿ ಮರೆತುಬಿಟ್ಟರೆ ಸಂಕಟಪಡುವುದು ; ಅಷ್ಟುಕಾಲವು ಅವನ ಸ್ಮರಣೆಯಿಲ್ಲದೇ ಕಳೆದುಹೋಯಿತಲ್ಲಾ ಎಂದು ಕಣ್ಣೀರಿಡುವುದು– ಇದೇ ಭಕ್ತಿಯ ಹೆಗ್ಗುರುತು ಎನ್ನುತ್ತಾರೆ ನಾರದರು.

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

**ಆತ್ಮಾ ತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ ।**
**ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ॥**

**ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರಃ ।**
**ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಮ್ಭೋ ತವಾರಾಧನಮ್ ॥**

ಈ ವಿಧವಾದ ಭಾವನೆಯನ್ನು ಮೈಗೂಡಿಸಿಕೊಳ್ಳುವುದೇ ಶ್ರೇಷ್ಠವಾದ ಭಕ್ತಿ. ಇಂತಹ ಭಕ್ತಿಯುಳ್ಳವನೇ ಭಕ್ತಿವಂತ. ಅಂತಹ ಭಕ್ತಿವಂತನನ್ನು ಅಥವಾ ಭಕ್ತನನ್ನು ನನ್ನ ಪ್ರಿಯನು ಎನ್ನುತ್ತಾನೆ ಭಗವಂತ.

ಒಬ್ಬ ಭಕ್ತರು ಹೀಗೂ ಹಾಡಿದ್ದಾರೆ :

**ದೇಹಬುದ್ಧ್ಯಾ ತು ದಾಸೋಽಹಂ ಜೀವಬುದ್ಧ್ಯಾ ತ್ವದಂಶಕಃ ।**
**ಆತ್ಮಬುದ್ಧ್ಯಾ ತ್ವಮೇವಾಹಮಿತಿ ಮೇ ನಿಶ್ಚಿತಾ ಮತಿಃ ॥**

ದೇಹಬುದ್ಧಿಯಲ್ಲಿ ನಾನೊಬ್ಬ ದಾಸನು. ಜೀವಬುದ್ಧಿಯಲ್ಲಿ ಭಗವದಂಶರಾದ ಅನಂತಜೀವರುಗಳಲ್ಲಿ ನಾನೂ ಒಬ್ಬ. ಆತ್ಮಬುದ್ಧಿಯಲ್ಲಿ ನಾನು ನೀನೇ ಆಗಿರುತ್ತೇನೆ. ಇದು ನನ್ನ ನಿಶ್ಚಯವಾದ ಬುದ್ಧಿಯು.)

o o o

ನ ಹೃಷ್ಯತಿ ನ ದ್ವೇಷ್ಟಿ = ಇಷ್ಟಪ್ರಾಪ್ತಿಯಾದಾಗ ಸಂತೋಷಪಡುವುದಿಲ್ಲ. ಅನಿಷ್ಟವು ಒದಗಿದಾಗ ದ್ವೇಷಿಸುವುದಿಲ್ಲ. (ಶಂ. ಭಾ.)

**ಶುಭಾಶುಭಪರಿತ್ಯಾಗೀ** = ಪಾಪದಂತೆ ಪುಣ್ಯವೂ ಕೂಡ ಬಂಧನಕ್ಕೆ ಕಾರಣವಾದುದರಿಂದ ಕರ್ಮಯೋಗಿಯು ಶುಭಫಲಗಳನ್ನೂ ಕೂಡ ಬಿಡುತ್ತಾನೆ. (ರಾ. ಭಾ.)

**ಯಃ ನ ಹೃಷ್ಯತಿ** = ಯಾವನು ಸಂತೋಷಪಡುವುದಿಲ್ಲವೋ, **ಹರ್ಷಾದಿಭಿಃ ಮುಕ್ತಃ**–ಹರ್ಷ ಮುಂತಾದುವುಗಳಿಂದ ಮುಕ್ತನಾದವನು

ಎಂದು ಹಿಂದೆ ಹೇಳಿದೆ. ಹರ್ಷಾದಿಗಳು ಇವನಿಗೆ ಮುಂದೆ ಎಂದಾದರೂ ಒದಗಬಹುದೋ ಏನೋ ಎಂಬ ಅರ್ಥವು ಬರಬಹುದು. ('ಕ್ತ' ಪ್ರತ್ಯಯವು ಭೂತಕಾಲದ ಅರ್ಥವನ್ನು ಹೇಳುತ್ತದೆ ಎಂದು ತೋರುವುದರಿಂದ) ಕಾಲಾಂತರದಲ್ಲಿ ಹರ್ಷಾದಿಗಳು ಒದಗಬಹುದು ಎಂಬ ಶಂಕೆಯನ್ನು ಪರಿಹರಿಸುವುದಕ್ಕೋಸ್ಕರ. ಆದುದರಿಂದ ನ ಹೃಷ್ಯತಿ ಎಂದು ಕ್ರಿಯಾಪದವನ್ನೇ ಉಪಯೋಗಿಸಿದೆ. ಹಾಗಾದರೆ ನ ಹೃಷ್ಯತಿ ಎಂಬ ಕ್ರಿಯಾಪದವೇ ಸಾಕು. **ಹರ್ಷಮುಕ್ತಃ**–ಎಂದು ಹಿಂದೆ ಏಕೆ ಹೇಳಬೇಕಾಗಿತ್ತು? ಎಂದರೆ ಈ ವಿಷಯವೂ ಔಪಚಾರಿಕವಲ್ಲ ಎಂದು ಸ್ಪಷ್ಟಪಡಿಸಲು. ವಿಷಯವು ಸಿದ್ಧವಾಗಿದ್ದರೂ ಅದನ್ನು ಹೇಳುವುದು ಅದು 'ಔಪಚಾರಿಕವಲ್ಲ. ಆ ಅಭಿಪ್ರಾಯದಲ್ಲೇ ತಾತ್ಪರ್ಯ' ಎಂದು ತಿಳಿಸುವುದಕ್ಕೋಸ್ಕರ. (ಮ. ಭಾ.)

**ಓಂ ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಙ್ಗವಿವರ್ಜಿತಃ ॥೧೮॥**

**ಓಂ ತುಲ್ಯನಿನ್ದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧೯॥**

ಶತ್ರುವಿನಲ್ಲಿಯೂ, ಮಿತ್ರನಲ್ಲಿಯೂ ಸಮನಾಗಿರುವವನು ; ಹಾಗೆಯೇ ಮಾನಾಪಮಾನಗಳಲ್ಲಿಯೂ, ಶೀತೋಷ್ಣ-ಸುಖ-ದುಃಖಗಳಲ್ಲಿಯೂ ಸಮನಾಗಿರುವವನು ; ಸಂಗವಿಲ್ಲದವನು ; ನಿಂದೆ ಮತ್ತು ಸ್ತುತಿಗಳೆರಡನ್ನೂ ಸಮನಾಗಿ ಕಾಣುವವನು ; ಮೌನಿಯಾಗಿರುವವನು ; ಯಾವುದೆಂದರೆ ಅದರಿಂದಲೇ ಸಂತುಷ್ಟಿಹೊಂದುವವನು ; ನಿವಾಸರಹಿತನಾಗಿರುವವನು ; ದೃಢಮನಸ್ಕನಾಗಿರುವವನು–ಇಂತಹ ಭಕ್ತನಾಗಿರುವವನು ನನಗೆ ಪ್ರಿಯನು.

* * *

(ಭಕ್ತನಾದವನು ರಾಗ-ದ್ವೇಷವಿವರ್ಜಿತನಾಗಿರುವುದರಿಂದ ಇವನಿಗೆ ಯಾರೊಬ್ಬರ ಮೇಲೂ ದ್ವೇಷವೂ ಇರುವುದಿಲ್ಲ. ಪ್ರೇಮವೂ ಇರುವುದಿಲ್ಲ. ಇವನ ಪ್ರೇಮವೆಲ್ಲವೂ ಭಗವಂತನಿಗೆ ಮಾತ್ರವೇ ಮೀಸಲಾಗಿರುತ್ತದೆ. ಆದರೆ ಭಕ್ತನಾದವನನ್ನು ಬೇರೊಬ್ಬನು ದ್ವೇಷಿಸಬಹುದು. ಆ ವಿಷಯವು ಇವನಿಗೆ ತಿಳಿದಿರಲೂಬಹುದು. ತನ್ನನ್ನು ದ್ವೇಷಿಸುವವನನ್ನೂ ಸಹ ಭಕ್ತನಾದವನು

ದ್ವೇಷಿಸುವುದಿಲ್ಲ. ಭಕ್ತನನ್ನು ದ್ವೇಷಿಸುವವರು ಇರುವಂತೆ ಭಕ್ತನನ್ನು ಪ್ರೀತಿಸುವವರೂ ಇರಬಹುದು. ಇವನನ್ನು ತಮ್ಮ ಪರಮಮಿತ್ರನೆಂದು ಭಾವಿಸಿರುವವರೂ ಇರಬಹುದು. ಆದರೆ ಭಕ್ತನಾದವನು ತನ್ನನ್ನು ದ್ವೇಷಿಸುವವನನ್ನೂ ಮತ್ತು ತನ್ನನ್ನು ಮಿತ್ರನಂತೆ ಕಾಣುವವನನ್ನೂ ಒಂದೇ ದೃಷ್ಟಿಯಿಂದ ಕಾಣುತ್ತಾನೆ. ದ್ವೇಷಿಸುವವನನ್ನು ದ್ವೇಷಿಸಹೋಗುವುದಿಲ್ಲ ; ಪ್ರೀತಿಸುವವನನ್ನು ಪ್ರೀತಿಸಹೋಗುವುದಿಲ್ಲ. ಇಬ್ಬರ ಮೇಲೂ ಏಕರೂಪವಾದ ಅನುಕಂಪದಿಂದಲೇ ಇದ್ದುಬಿಡುತ್ತಾನೆ.

ಭಕ್ತರಾದವರಿಗೆ ಮರ್ಯಾದೆಮಾಡುವವರೂ ಇರುತ್ತಾರೆ. ಅವರ ಮರ್ಯಾದೆಯನ್ನು ಕಳೆಯಲು ಪ್ರಯತ್ನಿಸುವ ದುರ್ಜನರೂ ಇರುತ್ತಾರೆ. ಭಕ್ತನಾದವನು ಅಪಮಾನಕ್ಕೂ-ಮಾನಕ್ಕೂ ಒಂದೇ ವಿಧವಾದ ಮೌಲ್ಯವನ್ನು ಕೊಡುತ್ತಾನೆ. ಮರ್ಯಾದೆಮಾಡಿದಾಗ ಹಿಗ್ಗುವುದೂ ಇಲ್ಲ. ಏಕೆಂದರೆ : ಮರ್ಯಾದೆಯನ್ನು ತನಗೆಂದು ಭಾವಿಸುವುದಿಲ್ಲ. ಅಪಮಾನವಾದಾಗ ತಗ್ಗುವುದೂ ಇಲ್ಲ. ಎರಡನ್ನೂ ಒಂದೇ ಸಮನಾಗಿ ಭಾವಿಸುತ್ತಾನೆ.

ಶೀತೋಷ್ಣ-ಸುಖ-ದುಃಖಗಳಲ್ಲಿ ಸಮನಾಗಿರುತ್ತಾನೆ. ಶೀತೋಷ್ಣ-ಸುಖ-ದುಃಖಗಳು ದ್ವಂದ್ವಗಳು. ಶೀತಕಾಲದಲ್ಲಿ ಸಂಕಟಪಡುವುದಿಲ್ಲ. ಉಷ್ಣಕಾಲದಲ್ಲಿ ಸಂತೋಷಪಡುವುದಿಲ್ಲ. ಎರಡನ್ನೂ ಸ್ಥೈರ್ಯದಿಂದ ಸಹಿಸಿಕೊಳ್ಳುತ್ತಾನೆ. ಪ್ರಕೃತಿಸಂಬಂಧದಿಂದ ಬಂದಿರುವುದರಿಂದ ಅವುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ದ್ವಂದ್ವಾತೀತನಾಗಿರುತ್ತಾನೆ.

**ಸಙ್ಗವರ್ಜಿತಃ** = ಸಙ್ಗ ಎಂದರೆ ಆಸಕ್ತಿ. ಪ್ರಾಪಂಚಿಕವಸ್ತುಗಳಲ್ಲಿ ಮತ್ತು ಸಂಸಾರದಲ್ಲಿ ಆಸಕ್ತಿಯನ್ನು ಬಿಟ್ಟಿರುವವನು. ಭಕ್ತನಾದವನು ಸಂಸಾರದಲ್ಲಿರಬಹುದು. ಇದ್ದರೂ ಅವನು ಅವುಗಳಲ್ಲಿ ನಿರ್ಲಿಪ್ತನಾಗಿರುತ್ತಾನೆ.

**ತುಲ್ಯನಿನ್ದಾಸ್ತುತಿಃ**= ನಿಂದೆ ಮತ್ತು ಸ್ತುತಿಗಳನ್ನು ಸಮವಾಗಿ ಕಾಣುತ್ತಾನೆ. ನಿಂದೆಮಾಡಿದವರನ್ನು ತೆಗಳಹೋಗುವುದಿಲ್ಲ. ಸ್ತುತಿಮಾಡಿದವರನ್ನು ಹೊಗಳಹೋಗುವುದಿಲ್ಲ. ನಿಂದಾ-ಸ್ತುತಿಗಳನ್ನು ಮಾಡುವುದರಿಂದ ಇವನ ಅಂತಃಕರಣದಲ್ಲಿ ಯಾವ ವಿಧವಾದ ಏರು-ಪೇರುಗಳೂ ಆಗುವುದಿಲ್ಲ.

**ಮೌನೀ**=ವಾಕ್ಸಂಯಮವುಳ್ಳವನು. ಅಲ್ಲಸಲ್ಲದ ಮಾತುಗಳನ್ನಾಡ ತಕ್ಕವನಲ್ಲ. ಭಗವಂತನ ವಿಷಯವೊಂದು ಹೊರತಾಗಿ ಪ್ರಾಪಂಚಿಕವಾದ ಮಾತುಗಳನ್ನಾಡದವನು. ಮೌನೀ ಎಂಬುದಕ್ಕೆ ಬಾಯಿಮುಚ್ಚಿಕೊಂಡಿರುವವ ನೆಂಬ ಅರ್ಥವಲ್ಲ. ಅಪಶಬ್ದಗಳನ್ನು ಉಚ್ಚರಿಸದಿರುವುದೇ ಮೌನ. ಭಗವಂತನ ನಾಮಸಂಕೀರ್ತನಮಾಡಬಹುದು. ಕೆಲವು ಸಮಯಗಳಲ್ಲಿ ಮೌನಧರಿಸಿ (ಅಕ್ಷರೋಚ್ಚಾರಣೆ ಮಾಡದೆ) ಧ್ಯಾನಯೋಗದಲ್ಲಿರಬಹುದು. **ಸಂತುಷ್ಟೋ ಯೇನ ಕೇನಚಿತ್**–ಇವನಿಗೆ ಇಂತಹುದೇ ಮೃಷ್ಟಾನ್ನವೇ ಬೇಕು, ಇಲ್ಲದಿದ್ದರೆ ತೃಪ್ತಿಯಿಲ್ಲ ಎಂಬ ಭಾವನೆ ಇರುವುದಿಲ್ಲ. ಇವನು ರಸನೆಯನ್ನು ಜಯಿಸಿರುವವನಾದುದರಿಂದ ಶರೀರಪೋಷಣೆಗೆ ಎಷ್ಟು ಬೇಕೋ ಅಷ್ಟು ಮಾತ್ರವೇ ಬೇಕು. ರುಚಿ–ಮುಂತಾದುವುಗಳ ವಿಷಯವಾಗಿಯೂ ಯೋಚಿಸ ತಕ್ಕವನಲ್ಲ. ಸಮುದ್ರವು ಮಳೆಗಾಲದಲ್ಲಿ ಉಕ್ಕುವುದಿಲ್ಲ. ಬೇಸಿಗೆಯಲ್ಲಿ ಬತ್ತಿಹೋಗುವುದಿಲ್ಲ. ಹಾಗೆಯೇ ಭಕ್ತನು ನಿತ್ಯಸಂತುಷ್ಟನಾಗಿರುವನು.

**ಅನಿಕೇತಃ** = ಮನೆಯಿಲ್ಲದವನು. ಮನೆ-ಮಠ ಮುಂತಾದುವುಗಳಲ್ಲಿ ತನ್ನದೆಂಬ ಮಮತೆಯಿಲ್ಲದವನು. ಭಕ್ತನು ಸಂನ್ಯಾಸಿಯೇ ಆಗಿದ್ದ ಪಕ್ಷದಲ್ಲಿ ತನ್ನದಾಗಿರುವ ಮನೆ ಮುಂತಾದ ಆಸ್ತಿ-ಪಾಸ್ತಿಗಳ ಯೋಚನೆ ಇಲ್ಲದವ ನಾಗಿರತಕ್ಕವನು. ಇಂತಹವನು ತನಗೆ ಪ್ರಿಯನಾದ ಭಕ್ತನೆಂದು ಶ್ರೀಕೃಷ್ಣನು ಹೇಳುತ್ತಾನೆ.

**ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ ।**
**ಯತ್ರ ಕ್ವಚನ ಶಾಯೀ ಸ್ಯಾತ್ತಂ ದೇವಾ ಬ್ರಾಹ್ಮಣಂ ವಿದುಃ ॥**

ಮೋ-೨೪೫-೧೨

ಅಥವಾ ಭಕ್ತನು ತನ್ನದೆಂದು ಯಾವುದನ್ನೂ ಭಾವಿಸದೆಯೇ ಇರು ವುದರಿಂದ, ಮನೆಯನ್ನೂ ಭಗವಂತನಿಗೇ ಸೇರಿದ್ದೆಂದು ಭಾವಿಸುವುದರಿಂದ ತನಗಾಗಿ ಮನೆಯಿಲ್ಲದವನು–ಎಂದೂ ಅರ್ಥಮಾಡಬಹುದಾಗಿದೆ.

**ಸ್ಥಿರಮತಿಃ** = ಸ್ಥಿರವಾದ ಬುದ್ಧಿಯಿರತಕ್ಕವನು. ಇವನ ಮನಸ್ಸು ದೃಢವಾಗಿದೆ. ನಿಶ್ಚಲವಾಗಿದೆ. ನಿಸ್ಸಂಶಯವಾಗಿದೆ. ಇಂತಹ ಭಕ್ತಿಯಿಂದ ಕೂಡಿರುವ ಮನುಷ್ಯನು ನನಗೆ ಪ್ರಿಯನು ಎನ್ನುತ್ತಾನೆ ಶ್ರೀಕೃಷ್ಣ.)

o o o

**ಸನ್ತುಷ್ಟೋ ಯೇನ ಕೇನಚಿತ್**= ಶರೀರಧಾರಣೆಗೆ ಮಾತ್ರ ಎಷ್ಟು ಬೇಕೋ ಅಷ್ಟರಲ್ಲಿ ಸಂತೋಷಪಡುವುದು. ಮಹಾಭಾರತದ ಶಾಂತಿಪರ್ವದಲ್ಲಿಯೂ ಈ ಅಭಿಪ್ರಾಯವಿರುವ ಶ್ಲೋಕವು ಬರುತ್ತದೆ.

**ಅನಿಕೇತಃ**= ನಿಯತವಾದ ನಿವಾಸವಿಲ್ಲದವನು. ಇದನ್ನೇ **ಅನಾಗಾರಃ** ಎಂದು ಇತರ ಸ್ಮೃತಿಗಳು ಹೇಳುತ್ತವೆ.

**ಸ್ಥಿರಮತಿಃ** = ಸ್ಥಿರವಾದ ಎಂದರೆ ಪರಮಾರ್ಥವಸ್ತುವಿಷಯಕವಾದ ಬುದ್ಧಿಯುಳ್ಳವನು. (ಶಂ. ಭಾ.)

**ಅದ್ವೇಷ್ಟಾ ಸರ್ವಭೂತಾನಾಂ** =ಶತ್ರು-ಮಿತ್ರ ಮುಂತಾದವರಲ್ಲಿ ದ್ವೇಷ-ರಾಗಾದಿಗಳು ಇರಬಾರದೆಂದು ಹೇಳಿಯಾಯಿತು. ಈ ಶ್ಲೋಕದಲ್ಲಿ ಅವರ ಬಳಿಯಲ್ಲಿದ್ದರೂ ಕೂಡ ಸಮಚಿತ್ತನಾಗಿರುವಿಕೆ ಎಂಬ ಮತ್ತೊಂದು ವಿಷಯವನ್ನೂ ಹೇಳಲಾಗಿದೆ.

**ಅನಿಕೇತಃ** = ಆತ್ಮನಲ್ಲಿ ಅವನ ಮತಿಯು ಸ್ಥಿರವಾಗಿರುವುದರಿಂದ ಮನೆ ಮುಂತಾದುವುಗಳಲ್ಲಿ ಅವನು ಆಸಕ್ತನಾಗಿರುವುದಿಲ್ಲ. ಅದೇ ಕಾರಣದಿಂದಲೇ ಮಾನ-ಅಪಮಾನ ಮುಂತಾದುವುಗಳಲ್ಲಿಯೂ ಸಮನಾಗಿರುವನು.

(ರಾ. ಭಾ.)

**ಓಂ ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥**

ಯಾವ ಭಕ್ತರು ಶ್ರದ್ಧೆಯುಳ್ಳವರಾಗಿ, ನನ್ನನ್ನೇ ಪರಮಗತಿಯನ್ನಾಗಿ ತಿಳಿದು ಮೇಲೆ ಹೇಳಿದ ಈ ಧರ್ಮ್ಯಾಮೃತವನ್ನು ಸಂಪೂರ್ಣವಾಗಿ ಉಪಾಸನೆ ಮಾಡುತ್ತಾರೆಯೋ–ಆ ಭಕ್ತರು ನನಗೆ ಅತ್ಯಂತಪ್ರಿಯರಾಗಿರುವರು.

* * *

(೧೩ನೆಯ ಶ್ಲೋಕದಿಂದ ೧೯ನೆಯ ಶ್ಲೋಕದವರೆಗೆ ಇರುವ ಗೀತಾ ಶ್ಲೋಕಗಳ ವಿಷಯವನ್ನು ಪರಮಾತ್ಮನು 'ಧರ್ಮ್ಯಾಮೃತ' ಎಂದು

ಕರೆದಿರುತ್ತಾನೆ. ಧರ್ಮವನ್ನು ಬಿಟ್ಟುಹೋಗದೇ ಇರುವ ಅಮೃತವಿದು. ಈ ಏಳು ಶ್ಲೋಕಗಳಲ್ಲಿ ಭಗವಂತನು ಹೇಳಿರುವಂತೆ ಪರಮಭಕ್ತನ ಶ್ರೇಷ್ಠಗುಣಗಳನ್ನು ಮೈಗೂಡಿಸಿಕೊಂಡು ಪರಮಾತ್ಮನನ್ನು ಭಜಿಸುವವನಿಗೆ ಅಮೃತತತ್ವವೇ ಸಿಕ್ಕುತ್ತದೆ. ಅವನು ಅಮೃತನೇ ಆಗುತ್ತಾನೆ. ಆದುದರಿಂದ ಇದನ್ನು ಭಗವಂತನು 'ಧರ್ಮ್ಯಾಮೃತ' ಎಂದು ಕರೆದಿರುತ್ತಾನೆ.

**ಯಥೋಕ್ತಂ ಪರ್ಯುಪಾಸತೇ**=ನಾನು ಹೇಗೆ ಹೇಳಿದ್ದೇನೆಯೋ ಹಾಗೆಯೇ ಚೆನ್ನಾಗಿ ಉಪಾಸನೆಮಾಡುತ್ತಾರೆಯೋ. **ಯಥೋಕ್ತಂ** ಎಂಬುದಕ್ಕೆ ಪುನಃ ವಿವರಣೆ ನೀಡುತ್ತಾನೆ ಭಗವಂತ. **ಶ್ರದ್ದಧಾನಾಃ ಮತ್ಪರಮಾಃ** = ನಾನು ಹೇಳಿದುದರಲ್ಲಿ ಶ್ರದ್ಧೆಯನ್ನಿಡಬೇಕು. ಸಂಶಯಗ್ರಸ್ತರಾಗಿರಬಾರದು. ನನ್ನನ್ನೇ ಪರಮಶ್ರೇಷ್ಠನನ್ನಾಗಿ ಭಾವಿಸಬೇಕು.

**ನಾನ್ಯಃ ಪನ್ಥಾ ಅಯನಾಯ ವಿದ್ಯತೇ**–ಎಂಬುದನ್ನು ದೃಢಮಾಡಿಕೊಳ್ಳಬೇಕು. ಹೀಗೆ ಸ್ಥಿರಚಿತ್ತರಾಗಿ ನನ್ನನ್ನು ಉಪಾಸನೆಮಾಡತಕ್ಕ ಭಕ್ತರು ನನಗೆ ಅತ್ಯಂತಪ್ರಿಯರಾಗಿರುತ್ತಾರೆ. ಅಂತಹವರನ್ನು ನಾನು ಬಹುವಾಗಿ ಪ್ರೀತಿಸುತ್ತೇನೆ ಎನ್ನುತ್ತಾನೆ ಪರಮಾತ್ಮ.

ಇಲ್ಲಿ ಹೇಳಿರುವ ಧರ್ಮ್ಯಾಮೃತವೇ ಜ್ಞಾನಯೋಗದಲ್ಲಿಯೂ ಬರುತ್ತದೆ. ಆದರೆ ಇಲ್ಲಿ ಭಕ್ತ ಮತ್ತು ಭಕ್ತಿ ಎಂಬುದು ಸೇರಿಕೊಂಡಿದೆ. ಅರ್ಥಾತ್ ಈ ಗುಣಗಳೊಂದಿಗೆ ಭಕ್ತಿಯೂ ಇರಬೇಕೆಂದು ಇಲ್ಲಿ ಪರಮಾತ್ಮನು ಹೇಳಿರುತ್ತಾನೆ.)

O O O

**ಅದ್ವೇಷ್ಟಾ ಸರ್ವಭೂತಾನಾಂ**–ಎಂದು ಪ್ರಾರಂಭವಾದ ಅಕ್ಷರೋಪಾಸಕರಾದ, ಪರಮಾರ್ಥಜ್ಞಾನನಿಷ್ಠರಾದ ಮತ್ತು ಸರ್ವಕಾಮರಹಿತರಾದ ಸಂನ್ಯಾಸಿಗಳ ಧರ್ಮವನ್ನು ಇಲ್ಲಿ ಉಪಸಂಹಾರಮಾಡುತ್ತಾನೆ.

**ಮತ್ಪರಮಾಃ ಭಕ್ತಾಸ್ತೇऽತೀವ ಮೇ ಪ್ರಿಯಾಃ**= ನನ್ನನ್ನೇ ನಿರತಿಶಯವಾದ ಗತಿಯನ್ನಾಗಿ ಹೊಂದಿರುವ ನನ್ನ ಭಕ್ತರು, ಉತ್ತಮವಾದ

ಪರಮಾರ್ಥಜ್ಞಾನವೆಂಬ ಭಕ್ತಿಯನ್ನು ಆಶ್ರಯಿಸಿದವರು ನನಗೆ ಅತ್ಯಂತ ಪ್ರಿಯರು.

**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ**–ಎಂದು ಸೂಚಿಸಲ್ಪಟ್ಟು ವ್ಯಾಖ್ಯಾನಮಾಡಲ್ಪಟ್ಟ ವಿಷಯವನ್ನು **ಭಕ್ತಾಸ್ತೇಽತೀವ ಮೇ ಪ್ರಿಯಾಃ** ಎಂದು ಉಪಸಂಹಾರಮಾಡಿದೆ.

ಹೀಗೆ ಹೇಳಲ್ಪಟ್ಟ ಧರ್ಮಮಯವೂ ಅಮೃತವೂ ಆದ ಉಪದೇಶವನ್ನು ಅನುಷ್ಠಾನಮಾಡುವವನು ಪರಮೇಶ್ವರನಾದ ಭಗವಾನ್ ವಿಷ್ಣುವಿಗೆ ಅತ್ಯಂತಪ್ರಿಯನಾಗುತ್ತಾನೆ. ಆದುದರಿಂದ ವಿಷ್ಣುವಿನ ಪ್ರಿಯವಾದ ಪರಮ ಧಾಮಕ್ಕೆ ಹೋಗುವ ಇಷ್ಟವುಳ್ಳ ಮುಮುಕ್ಷುವು ಇದನ್ನು ಪ್ರಯತ್ನಪೂರ್ವಕ ವಾಗಿ ಅನುಷ್ಠಾನಮಾಡಬೇಕು. (ಶಂ. ಭಾ.)

ಆತ್ಮನಿಷ್ಠನಿಗಿಂತಲೂ ಇಂತಹ ಭಕ್ತಿಯೋಗನಿಷ್ಠನು ಶ್ರೇಷ್ಠನೆಂಬುದನ್ನು ಪ್ರತಿಪಾದಿಸುತ್ತಾ ಉಪಕ್ರಮಮಾಡಿದ ಭಕ್ತಿಯೋಗದ ಮಾಹಾತ್ಮ್ಯವನ್ನು ಇಲ್ಲಿ ಉಪಸಂಹಾರಮಾಡುತ್ತಾನೆ.

**ಧರ್ಮ್ಯಾಮೃತಂ**=ಯಾವುದು ಧರ್ಮದಿಂದ ಅನಪೇತವಾಗಿದೆಯೋ ಮತ್ತು ಅಮೃತವಾಗಿದೆಯೋ ಅದು ಯಾವುದೆಂದರೆ ಭಕ್ತಿಯೋಗ. ಪ್ರಾಪ್ಯಕ್ಕೇ ಸಮವಾಗಿರುವ ಪ್ರಾಪಕ. ಅತ್ಯಂತಭೋಗ್ಯವಾದ ಭಕ್ತಿಯೋಗ. ಇದನ್ನು ಹಿಂದೆ ಹೇಳಿದಂತೆ ಎಂದರೆ **ಮಯ್ಯಾವೇಶ್ಯ ಮನೋ ಯೇ ಮಾಂ** ಎಂದು ಮೊದಲಾಗಿ ಹೇಳಿದಂತೆ ಯಾರು ಉಪಾಸನೆಮಾಡುತ್ತಾರೆಯೋ ಆ ಭಕ್ತರು ನನಗೆ ಅತ್ಯಂತಪ್ರಿಯರು. (ರಾ. ಭಾ.)

ಹಿಂದೆ ಹೇಳಿದ ವಿಷಯವನ್ನೇ ಒಟ್ಟಿಗೆ ಸೇರಿಸಿ ಈ ಶ್ಲೋಕದಲ್ಲಿ ಉಪ ಸಂಹಾರಮಾಡುತ್ತಾನೆ.

**ಧರ್ಮ್ಯಾಮೃತಂ**=ಧರ್ಮ ಎಂದರೆ ವಿಷ್ಣು. ಅವನ ವಿಷಯವಾದುದು ಧರ್ಮ್ಯ. ಯಾವುದು ವಿಷ್ಣುವಿಷಯವಾಗಿದೆಯೋ ಮತ್ತು ಅಮೃತವಾಗಿ ದೆಯೋ (ಮರಣವೇ ಮುಂತಾದ ಸಂಸಾರವನ್ನು ನಾಶಮಾಡುತ್ತದೆಯೋ) ಅದು ಧರ್ಮ್ಯಾಮೃತ.

ಶ್ರನ್ನಾಮಾಸ್ತಿಕ್ಯಮುಚ್ಯತೇ–ಶ್ರತ್ ಎಂದರೆ ಆಸ್ತಿಕ್ಯ. ಅದನ್ನು ಧರಿಸಿರುವವರು ಶ್ರದ್ಧಧಾನರು. (ಮ. ಭಾ.)

**ಇತಿ ಶ್ರೀಮಹಾಭಾರತೇ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ**

ಭಗವದ್ಗೀತೆಯಲ್ಲಿ ೧೨ನೆಯ ಅಧ್ಯಾಯವು ಮುಗಿಯಿತು.

ಮಹಾಭಾರತದ ಭೀಷ್ಮಪರ್ವದಲ್ಲಿ ೩೬ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ–೧೩ನೆಯ ಅಧ್ಯಾಯ

೩೭ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಜ್ಞಾನಸಹಿತವಾದ ಕ್ಷೇತ್ರ-ಕ್ಷೇತ್ರಜ್ಞರ ಮತ್ತು ಪ್ರಕೃತಿ–ಪುರುಷರ ವರ್ಣನೆ

**ಶ್ರೀಭಗವಾನುವಾಚ :**

**ಓಂ ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥೧॥**

ಶ್ರೀ ಭಗವಂತನು ಹೇಳುತ್ತಾನೆ :

ಕೌಂತೇಯ! ಈ ಶರೀರವು ಕ್ಷೇತ್ರವೆಂದು ಕರೆಯಲ್ಪಡುತ್ತದೆ. ಇದನ್ನು ಯಾವನು ಅರಿಯುತ್ತಾನೆಯೋ ಅವನನ್ನು ಕ್ಷೇತ್ರಜ್ಞನೆಂದು ಅವನನ್ನು ಬಲ್ಲವರು ಕರೆಯುತ್ತಾರೆ.

* * *

(ಈ ಹಿಂದೆ ಪರಾಪ್ರಕೃತಿ-ಅಪರಾಪ್ರಕೃತಿ, ಕ್ಷರ-ಅಕ್ಷರ, ಆತ್ಮಾ-ಅನಾತ್ಮಾ–ಮುಂತಾಗಿ ವಿವರಿಸಿದುದನ್ನೇ ಈ ಅಧ್ಯಾಯದಲ್ಲಿ ಪರ್ಯಾಯಾಂತರವಾಗಿ ಕ್ಷೇತ್ರ-ಕ್ಷೇತ್ರಜ್ಞ ಎಂಬುದರಿಂದ ವಿವರಿಸಲು ಹೊರಟಿದ್ದಾನೆ. ಅಧ್ಯಾತ್ಮದ ವಿಷಯವನ್ನು ಮನದಟ್ಟಾಗುವಂತೆ ಹೇಳಬೇಕಾದರೆ ನಾನಾ ರೀತಿಯಲ್ಲಿ ನಾನಾವಿಧವಾಗಿ ಹೇಳಲೇಬೇಕು.

ಶ್ರೀಕೃಷ್ಣನು ಹೇಳುತ್ತಾನೆ : ಕೌಂತೇಯ! ಈ ಶರೀರವೇ ಕ್ಷೇತ್ರ ಎಂದು ಹೇಳಲ್ಪಟ್ಟಿದೆ. **ಕ್ಷೀಯತೇ ಧಾನ್ಯೈರತ್ರ ಕ್ಷೇತ್ರಂ**–ಬತ್ತ ಮೊದಲಾದುವನ್ನು ಬೆಳೆಯುವ ಭೂಮಿ. ಅರ್ಥಾತ್ ಗದ್ದೆ ಎಂದೂ ಆಗುತ್ತದೆ. ಹೆಂಡತಿ ಎಂದೂ ಆಗುತ್ತದೆ. ಕ್ಷೇತ್ರಶಬ್ದಕ್ಕೆ ನಾನಾರ್ಥಗಳಿವೆ. ಶರೀರ, ಗದ್ದೆ, ಹೊಲ-ಮುಂತಾದ ಸಾಗುವಳಿಯಾಗುವ ಭೂಮಿ, ಪವಿತ್ರವಾದ ಸಿದ್ಧಸ್ಥಾನ ಮತ್ತು ಹೆಂಡತಿ. **ಕ್ಷೇತ್ರಂ ಶರೀರೇ ಕೇದಾರೇ ಸಿದ್ಧಸ್ಥಾನ ಕಲತ್ರಯೋಃ (ಮೇದಿನೀ)** ಭಗವಂತನು ಶರೀರವೆಂಬ ಒಂದರ್ಥವನ್ನೇನೋ ಹೇಳಿರುವನು. ಈ ಎಲ್ಲ ಅರ್ಥಗಳಲ್ಲಿಯೂ ಕ್ಷೇತ್ರವೆಂಬುದನ್ನು ಸಮನ್ವಯಮಾಡಬಹುದಾಗಿದೆ. ಕ್ಷೇತ್ರ ಎಂಬ ಶಬ್ದಕ್ಕೆ ಹೊಲ ಮತ್ತು ಗದ್ದೆ ಎಂಬ ಅರ್ಥವನ್ನಿಟ್ಟುಕೊಂಡಾಗ ರೈತನು ಹಾಕಿದ ಬೀಜ, ಗೊಬ್ಬರ ಇವುಗಳಿಂದ ಮತ್ತು ಮಳೆ ಮುಂತಾದುವನ್ನೂ ಅನುಸರಿಸಿ ಫಲವು ಸಿಗುತ್ತದೆ. ಈ ಶರೀರಕ್ಷೇತ್ರದಲ್ಲಿಯೂ ಸಹ ಬೀಜರೂಪವಾದ ಪ್ರಾರಬ್ಧಕರ್ಮಗಳಿಗೆ ಅನುಸಾರವಾಗಿ ಈ ಶರೀರಕ್ಕೆ ಫಲವು ಲಭಿಸುತ್ತಿರುತ್ತದೆ. ಕ್ಷೇತ್ರವೆಂದರೆ ದಿವ್ಯಕ್ಷೇತ್ರವೆಂದು ಅರ್ಥಮಾಡುವುದಾದರೆ : ದಿವ್ಯಕ್ಷೇತ್ರವೆಂಬ ಹೆಸರು ಬರಲು ಕಾರಣ, ಶರೀರವೆಂಬ ಕ್ಷೇತ್ರದಲ್ಲಿರುವ ಪರಮಾತ್ಮನ ಸಾನ್ನಿಧ್ಯವು ಆ ಕ್ಷೇತ್ರದಲ್ಲಿ ಹೆಚ್ಚಾಗಿರುವುದು. ಕಲತ್ರವಿಷಯದಲ್ಲಿ ಪುತ್ರ-ಪುತ್ರಿಯರು ಹುಟ್ಟುವರಾದುದರಿಂದ ಕ್ಷೇತ್ರವೆಂಬ ಹೆಸರು ಬಂದಿದೆ. ಗದ್ದೆಯ ಉಪಮಾನವನ್ನೇ ಇಲ್ಲಿಯೂ ತೆಗೆದುಕೊಳ್ಳಬಹುದಾಗಿದೆ. **ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞಂ** ಎಂದರೆ–ಈ ಶರೀರವನ್ನು ಯಾರು ತಿಳಿದಿರುವರೋ ಅವರು ಕ್ಷೇತ್ರಜ್ಞರು ಎಂದು ಶ್ರೀಕೃಷ್ಣನು ಹೇಳಿದ್ದಾನೆ.

ಕ್ಷೇತ್ರಜ್ಞ ಎಂದರೆ ಕ್ಷೇತ್ರವನ್ನು ಬಲ್ಲವನು. ಹೊರಗಡೆಯಲ್ಲಿದ್ದು ಆ ಕ್ಷೇತ್ರದ ಸ್ಥೂಲಪರಿಚಯವನ್ನು ಮಾತ್ರ ಪಡೆದಿರುವವನನ್ನು ಕ್ಷೇತ್ರಜ್ಞ ಎನ್ನಲಾಗುವುದಿಲ್ಲ. ಅವನು ಕ್ಷೇತ್ರದ ಒಳಗೂ ಇದ್ದು ಆ ಕ್ಷೇತ್ರವು ತನ್ನದು, ತಾನು ಅದರಿಂದ ಬೇರೆಯಾದವನು, ತಾನು ಅದಕ್ಕೆ ನಿಯಾಮಕ ಎಂದು ತಿಳಿದಿರುವವನು. ಶರೀರವೇ ತಾನು, ಶರೀರದ ಅವಯವಗಳಾದ ಕಾಲು ಕಣ್ಣು ಮುಂತಾದುವು ತಾನು ಎಂದು ತಿಳಿಯದೇ, ಅದು ತನ್ನದು ಎಂದು ಅದನ್ನು ತಿಳಿದ ಕ್ಷೇತ್ರದ ಪರಿಚಯವುಳ್ಳ ಚೈತನ್ಯವು ಕ್ಷೇತ್ರಜ್ಞ, ಕ್ಷೇತ್ರದೊಳಗಡೆಯೇ

ಇದ್ದು ಅದು ತನಗೆ ಭೋಗ್ಯವಾದುದು ; ತನ್ನ ವಾಸಸ್ಥಾನ ; ತಾನು ಅದರಿಂದ ಬೇರೆಯಾದವನು–ಎಂಬ ಅರಿವುಳ್ಳ ಆತ್ಮ.

**ಯೋಽಸ್ಯಾತ್ಮನಃ ಕಾರಯಿತಾ ತಂ ಕ್ಷೇತ್ರಜ್ಞಂ ಪ್ರಚಕ್ಷತೇ ।**
**ಯಃ ಕರೋತಿ ತು ಕರ್ಮಾಣಿ ಸ ಭೂತಾತ್ಮೇತ್ಯುಚ್ಯತೇ ಬುಧೈಃ ॥**

ಮನು ೧೨-೧೨

ಜೀವಾತ್ಮನಿಗೆ ಪ್ರೇರಿಸಿ ಕೆಲಸಮಾಡಿಸುವವನು ಕ್ಷೇತ್ರಜ್ಞ. ಕರ್ಮಗಳನ್ನು ಮಾಡುವವನು ಭೂತಾತ್ಮಾ ಅಥವಾ ಜೀವಾತ್ಮಾ ಎಂಬುದಾಗಿ ವಿದ್ವಾಂಸರು ಹೇಳುತ್ತಾರೆ.

**ಕ್ಷೇತ್ರಂ ಶರೀರಂ ಮಮೇತಿ ಜಾನಾತಿ । ಜ್ಞಾ–ಅವಬೋಧನೇ ಕಃ = ಕ್ಷೇತ್ರಜ್ಞಃ । ಕ್ಷೇತ್ರೇಷು ಸರ್ವದೇಹೇಷು ಅನ್ತರ್ಯಾಮಿತಯಾ ಆತ್ಮಸ್ವರೂಪಂ ಜಾನಾತಿ**–ಎಲ್ಲ ದೇಹಗಳಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಆತ್ಮಸ್ವರೂಪವನ್ನು ತಿಳಿಯುವವನು.

**'ತದ್ವಿದಃ'** ಎಂದರೆ ಕ್ಷೇತ್ರ ಮತ್ತು ಕ್ಷೇತ್ರಜ್ಞ ಇವುಗಳ ಸ್ವರೂಪವನ್ನು ಮೇಲೆ ಕಂಡಂತೆ ಚೆನ್ನಾಗಿ ಬಲ್ಲವರು. ಆತ್ಮಾನಾತ್ಮವಿವೇಕವುಳ್ಳ ಜ್ಞಾನಿಗಳು. ಕ್ಷೇತ್ರವನ್ನು ತಿಳಿದವನು ಕ್ಷೇತ್ರಜ್ಞನೆಂದು ಅವರು ಹೇಳುತ್ತಾರೆ.

* * *

ಇವರು ಮೇಲೆ ಹೇಳಿರುವ ರೀತಿಯಲ್ಲಿ ಕ್ಷೇತ್ರವನ್ನು ಅರಿತಿರುವವನನ್ನು ಕ್ಷೇತ್ರಜ್ಞ ಎಂದು ಕರೆಯುತ್ತಾರೆ.

**ಕ್ಷೇತ್ರಂ** ಎಂದರೆ ಶರೀರ. **ಕ್ಷತತ್ರಾಣಾತ್ ಕ್ಷೇತ್ರಂ**–ಗಾಯ ಮುಂತಾದುವುಗಳಿಂದ ರಕ್ಷಿಸಲ್ಪಡುವುದರಿಂದ ಅದು ಕ್ಷೇತ್ರ–ಅಥವಾ **ಕ್ಷಯಾತ್ ಕ್ಷರಣಾತ್ ಕ್ಷೇತ್ರಂ**=ಕ್ಷೀಣಹೊಂದುವುದರಿಂದ ಕ್ಷೇತ್ರ ಅಥವಾ **ಕ್ಷೇತ್ರವತ್ ಅಸ್ಮಿನ್ ಕರ್ಮಫಲನಿರ್ವೃತ್ತೇಃ** =ಕ್ಷೇತ್ರದಲ್ಲಿ ಫಲಗಳು ದೊರೆಯುವಂತೆ ಇದರಲ್ಲಿ ಕರ್ಮಫಲಗಳು ದೊರೆಯುವುದರಿಂದ ಇದು ಕ್ಷೇತ್ರ.

ಈ ಶರೀರವೆಂಬ ಕ್ಷೇತ್ರವನ್ನು ಯಾವನು ತಿಳಿದಿದ್ದಾನೆಯೋ ಅವನನ್ನು ಎಂದರೆ, ಅಡಿಯಿಂದ ಮುಡಿಯವರೆಗೆ ಇದನ್ನು ಜ್ಞಾನದಿಂದ ಯಾವನು ತಿಳಿದಿರುತ್ತಾನೆಯೋ–ಸ್ವಾಭಾವಿಕವಾದ ಅನುಭವದಿಂದ ಅಥವಾ ಉಪದೇಶ

ದಿಂದ ಬಂದ ಅರಿವಿನಿಂದ ವಿಭಾಗಪೂರ್ವಕವಾಗಿ ಸ್ಪಷ್ಟವಾಗಿ ಯಾವನು ತಿಳಿದಿದ್ದಾನೆಯೋ ಅವನನ್ನು ಕ್ಷೇತ್ರ-ಕ್ಷೇತ್ರಜ್ಞಸ್ವರೂಪವನ್ನು ಬಲ್ಲ ಜ್ಞಾನಿಗಳು ಕ್ಷೇತ್ರಜ್ಞನೆಂದು ಕರೆಯುತ್ತಾರೆ. (ಶಂ. ಭಾ.)

ಶರೀರದ ಯಾಥಾತ್ಮ್ಯವನ್ನು ಬಲ್ಲವರು ಈ ಶರೀರವನ್ನು ಕ್ಷೇತ್ರವೆಂದು ಎಂದರೆ–ನಾನು ದೇವ, ನಾನು ಮನುಷ್ಯ, ನಾನು ಸ್ಥೂಲ, ನಾನು ಕೃಶ– ಎಂದು ಮೊದಲಾಗಿ ಭೋಕ್ತೃವಿನೊಡನೆ ಸಮಾನಾಧಿಕರಣವಾಗಿ ಕಂಡು ಬಂದರೂ ಭೋಕ್ತೃವಾದ ಆತ್ಮನಿಗಿಂತಲೂ ಬೇರೆಯಾಗಿರುವ ಈ ಶರೀರ ವನ್ನು ಭೋಕ್ತೃವಾದ ಆತ್ಮನಿಗೆ ಭೋಗಕ್ಷೇತ್ರವೆಂದು ಕರೆಯುವರು.

'ಈ ಕ್ಷೇತ್ರವನ್ನು ಅವಯವರೂಪವಾಗಿಯೂ ಅವುಗಳ ಸಂಯುಕ್ತ ರೂಪವಾಗಿಯೂ ಇದನ್ನು ನಾನು ಅರಿಯುತ್ತೇನೆ. ಇದು ವೇದ್ಯ ; ನನ್ನಿಂದ ಬೇರೆಯಾದುದು'–ಎಂದು ಯಾವನು ತಿಳಿದಿದ್ದಾನೆಯೋ ಅವನನ್ನು ಆತ್ಮ ಯಾಥಾತ್ಮ್ಯಜ್ಞಾನಿಗಳು ಕ್ಷೇತ್ರಜ್ಞ ಎಂದು ಕರೆಯುತ್ತಾರೆ. ಈ ಕ್ಷೇತ್ರವನ್ನು ತಿಳಿದಿರುವ ಕ್ಷೇತ್ರಜ್ಞನು ಪ್ರಕೃತ್ಯಾಕಾರನಲ್ಲ ಎಂದರೆ ಕಣ್ಣು ಮುಂತಾದ ಕರಣಗಳಿಗೆ ಇವನು ವಿಷಯನಾಗುವುದಿಲ್ಲ. ಯೋಗಸಂಸ್ಕೃತವಾದ ಮನಸ್ಸಿಗೆ ಮಾತ್ರ ವಿಷಯನಾಗತಕ್ಕವನು. ಆದುದರಿಂದ ಮೂಢರು ಪ್ರಕೃತಿಯ ಸನ್ನಿ ಧಾನವಿರುವುದರಿಂದ ಪ್ರಕೃತಿಯ ಆಕಾರವುಳ್ಳವನು ಎಂಬುದಾಗಿ ತಿಳಿಯುತ್ತಾರೆ. (ರಾ. ಭಾ.)

ಹಿಂದೆ ಬೇರೆ-ಬೇರೆ ಕಡೆಗಳಲ್ಲಿ ಹೇಳಿದ್ದ ಜ್ಞಾನ, ಜ್ಞೇಯ, ಕ್ಷೇತ್ರ, ಪುರುಷ–ಇವರುಗಳನ್ನು ಒಂದು ಕಡೆ ಸೇರಿಸಿ ಅವುಗಳ ವಿವೇಕವನ್ನು ಈ ಅಧ್ಯಾಯದಲ್ಲಿ ಶೋಧನೆಮಾಡಿ ಹೇಳಿದೆ. (ಮ. ಭಾ.)

**ಓಂ ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥**

ಭಾರತ! ಎಲ್ಲ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನು (ಜೀವಾತ್ಮನನ್ನು) ನನ್ನನ್ನಾಗಿ ತಿಳಿ. ಕ್ಷೇತ್ರ-ಕ್ಷೇತ್ರಜ್ಞರ ಜ್ಞಾನವೇ ಜ್ಞಾನವೆಂಬುದು ನನ್ನ ಅಭಿಮತವಾಗಿದೆ.

* * *

(ಈ ಹಿಂದೆ ಹತ್ತನೆಯ ಅಧ್ಯಾಯದ ೩೯ನೆಯ ಶ್ಲೋಕದಲ್ಲಿ ಶ್ರೀಕೃಷ್ಣನು **ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ**–ಎಂದು ಹೇಳಿದ್ದನು. ಇಲ್ಲಿ ಬ್ರಹ್ಮನಿಂದ ಹಿಡಿದು ಕೀಟಪರ್ಯಂತವಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನೇ ಎನ್ನುತ್ತಾನೆ. ಎಲ್ಲ ಪ್ರಾಣಿಗಳಲ್ಲಿಯೂ ಬೀಜರೂಪವಾಗಿರತಕ್ಕವನು ಇವನೇ. ಆ ಬೀಜರೂಪವಾದುದೇ ಕ್ಷೇತ್ರಜ್ಞ. ಎಲ್ಲ ಕ್ಷೇತ್ರಗಳಲ್ಲಿಯೂ ನಾನೇ ಇದ್ದೇನೆ ಎನ್ನುತ್ತಾನೆ. ಎಲ್ಲ ಪ್ರಾಣಿಗಳಲ್ಲಿಯೂ ಆತ್ಮಸ್ವರೂಪನಾಗಿ ನಾನೇ ಇದ್ದೇನೆ. ಆ ಆತ್ಮನೇ ಕ್ಷೇತ್ರಜ್ಞ. ಜ್ಞಾನ-ಜ್ಞಾನ ಎಂದು ಯಾವುದನ್ನು ಹೇಳುತ್ತಿರುತ್ತಾರೆಯೋ ಆ ಜ್ಞಾನವೇ ಕ್ಷೇತ್ರ-ಕ್ಷೇತ್ರಜ್ಞರ ಜ್ಞಾನ ಅಥವಾ ಜ್ಞಾನವೆಂದರೆ ಕ್ಷೇತ್ರ-ಕ್ಷೇತ್ರಜ್ಞರ ಸಂಬಂಧವಾದ ತಿಳಿವಳಿಕೆ. ಇದು ಹೊರತಾಗಿ ಬೇರೆಯದಕ್ಕೆ ಜ್ಞಾನವೆಂಬ ಹೆಸರೇ ಒಪ್ಪುವುದಿಲ್ಲ–ಎಂಬುದು ಶ್ರೀಕೃಷ್ಣನ ಅಭಿಪ್ರಾಯವಾಗಿದೆ. ಕ್ಷೇತ್ರ-ಕ್ಷೇತ್ರಜ್ಞ ಎಂದರೆ ಅನಾತ್ಮ-ಆತ್ಮಗಳ ಜ್ಞಾನ, ಕ್ಷರ-ಅಕ್ಷರಗಳ ಜ್ಞಾನ, ಅಸತ್ತು-ಸತ್ತಿನ ಜ್ಞಾನ. ಈ ಜ್ಞಾನವೇ ಅತ್ಯಂತಶ್ರೇಷ್ಠವಾದುದು ಎನ್ನುತ್ತಾನೆ ಶ್ರೀಕೃಷ್ಣ.)

o o o

ಮೇಲೆ ಹೇಳಿದ ಲಕ್ಷಣವುಳ್ಳ ಕ್ಷೇತ್ರಜ್ಞನನ್ನೂ ಕೂಡ ನನ್ನನ್ನಾಗಿ ಎಂದರೆ ಅಸಂಸಾರಿಯಾದ ಪರಮೇಶ್ವರನೆಂಬುದಾಗಿ ತಿಳಿ. ಎಲ್ಲ ಕ್ಷೇತ್ರಗಳಲ್ಲಿಯೂ ಯಾವ ಕ್ಷೇತ್ರಜ್ಞನು ಎಂದರೆ ಬ್ರಹ್ಮನಿಂದ ಮೊದಲುಗೊಂಡು ಸ್ತಂಬದವರೆಗೆ ಅನೇಕಶರೀರರೂಪವಾದ ಉಪಾಧಿಗಳಿಂದ ವಿಭಾಗಗೊಂಡಿರುವ ಯಾವ ಕ್ಷೇತ್ರಜ್ಞನುಂಟೋ ಅವನ ಯಾವ ಉಪಾಧಿಭೇದವೂ ಇಲ್ಲದೆ ಸತ್-ಅಸತ್ ಮುಂತಾದ ಶಬ್ದಗಳ ಪ್ರತೀತಿಯಿಂದ ತಿಳಿಯಲು ಆಗದೇ ಇರುವ ಕ್ಷೇತ್ರಜ್ಞನು ಎಂದು ತಿಳಿ. ಈ ಕ್ಷೇತ್ರ-ಕ್ಷೇತ್ರಜ್ಞ ಮತ್ತು ಈಶ್ವರ ಇವರ ಯಥಾರ್ಥವಾದ ಸ್ವರೂಪವನ್ನು ಬಿಟ್ಟರೆ ಜ್ಞಾನಕ್ಕೆ ವಿಷಯವಾದುದು ಬೇರೆ ಯಾವುದೂ ಉಳಿಯುವುದಿಲ್ಲ. ಯಾವ ಜ್ಞಾನದಿಂದ ಕ್ಷೇತ್ರ ಮತ್ತು ಕ್ಷೇತ್ರಜ್ಞರು ಪ್ರತ್ಯಕ್ಷರಾಗುತ್ತಾರೆಯೋ ಅದೇ ನಿಜವಾದ ಜ್ಞಾನ. (ಶಂ. ಭಾ.)

ದೇವ, ಮನುಷ್ಯ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ತಿಳಿಯು ವವನು (ವೇದಿತಾ ಎಂಬ ಏಕಾಕಾರನಾಗಿರುವ) ಕ್ಷೇತ್ರಜ್ಞನನ್ನೂ ಕೂಡ ನನ್ನ

ನ್ನಾಗಿ ತಿಳಿ. ಎಂದರೆ ಮದಾತ್ಮಕನನ್ನಾಗಿ (ಭಗವದಾತ್ಮಕನನ್ನಾಗಿ) ತಿಳಿ. ಹಾಗೆಯೇ ಕ್ಷೇತ್ರವನ್ನೂ ಕೂಡ ಮದಾತ್ಮಕ (ಭಗವದಾತ್ಮಕ) ವೆಂದು ತಿಳಿ. ಕ್ಷೇತ್ರವು ಕ್ಷೇತ್ರಜ್ಞನ ವಿಶೇಷಣವಾಗಿದ್ದು ಅವನನ್ನು ಬಿಟ್ಟು ಬೇರೆಯಾಗಿ ಸಿದ್ಧವಾಗುವುದಿಲ್ಲ. ಆದುದರಿಂದ ಅವನಿಗೆ ಸಮಾನಾಧಿಕರಣವಾಗಿ ನಿರ್ದೇಶಿಸಲ್ಪಡುತ್ತದೆ. 'ಹಾಗೆಯೇ ಕ್ಷೇತ್ರ ಮತ್ತು ಕ್ಷೇತ್ರಜ್ಞಗಳೆರಡೂ ನನ್ನ ವಿಶೇಷಣಗಳೇ ಆಗಿರುವುದರಿಂದ ನನ್ನಿಂದ ಬೇರೆಯಾಗಿ ಸಿದ್ಧವಾಗುವುದಿಲ್ಲ. ಆದುದರಿಂದ ನನಗೇ ಸಮಾನಾಧಿಕರಣವಾಗಿಯೇ ಅವು ಹೇಳಲ್ಪಡುವುವು ಎಂದು ತಿಳಿ.' ಪೃಥಿವೀ ಮುಂತಾದುವುಗಳ ಸಂಘಾತವಾಗಿರುವ ಕ್ಷೇತ್ರವೂ ಮತ್ತು ಕ್ಷೇತ್ರಜ್ಞನೂ ಭಗವಚ್ಛರೀರವು ಮಾತ್ರವೇ ಆಗಿರುವುದರಿಂದ ಭಗವದಾತ್ಮಕವೆಂದು **ದ್ಯಾವಾಪೃಥಿವ್ಯಾಂ ತಿಷ್ಠನ್ । ಯ ಆತ್ಮನಿ ತಿಷ್ಠನ್ । ಆತ್ಮನಃ ಅನ್ತರಃ** ಬೃ. ೫-೭-೨೭ ಮುಂತಾದ ಶ್ರುತಿಗಳೂ, **ಅಹಮಾತ್ಮಾ ಗುಡಾಕೇಶ** ೧೦-೨೦ **ನ ತದಸ್ತಿ ವಿನಾ ಯತ್ಸ್ಯಾತ್** ೧೦-೩೯ **ವಿಷ್ಟಭ್ಯಾಹಮಿದಂ ಕೃತ್ಸ್ನಂ** ೧೦-೪೨ ಮುಂತಾದ ಗೀತಾವಾಕ್ಯಗಳೂ ಹೇಳುತ್ತವೆ.

ಈ ಕ್ಷೇತ್ರ-ಕ್ಷೇತ್ರಜ್ಞಗಳ ವಿವೇಕವಿಷಯವಾದ ಯಾವ ಜ್ಞಾನವುಂಟೋ–ಮತ್ತು ಅವೆರಡೂ ಭಗವದಾತ್ಮಕವೆಂಬ ವಿಷಯವಾದ ಜ್ಞಾನವುಂಟೋ–ಅದೇ ಉಪಾದೇಯವಾದ ಜ್ಞಾನ ಎಂದು ನನ್ನ ಅಭಿಪ್ರಾಯ.

(ರಾ. ಭಾ.)

**ಓಂ ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥೩॥**

ಆ ಕ್ಷೇತ್ರವು ಯಾವುದು ಮತ್ತು ಎಂತಹುದು? ಯಾವ ವಿಕಾರವುಳ್ಳದ್ದು? ಯಾವುದರಿಂದ ಯಾವುದು ಆಗುತ್ತದೆ?–ಎಂಬುದನ್ನೂ, ಅವನು ಯಾವನು? ಎಂತಹ ಪ್ರಭಾವದವನು?–ಎಂಬುದನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು.

* * *

(ಕ್ಷೇತ್ರ-ಕ್ಷೇತ್ರಜ್ಞರ ವಿಷಯವು ಬಹಳ ಗಾಢವಾದುದು ಅರ್ಜುನ!

ಶರೀರ ಎಂದ ಮಾತ್ರದಿಂದಲೇ ಇದರ ಸಂಪೂರ್ಣಪರಿಚಯವಾಗಿಬಿಡುವುದಿಲ್ಲ. ಅದರಲ್ಲಿ ಸಂಪೂರ್ಣವಾಗಿ ವಿಮರ್ಶಿಸಿ ತಿಳಿದುಕೊಳ್ಳಬೇಕಾದ ಅಂಶಗಳೂ ಇವೆ. ಮೊದಲನೆಯದಾಗಿ ಆ ಕ್ಷೇತ್ರವು ಯಾವುದೆಂಬುದನ್ನು ತಿಳಿದುಕೊಳ್ಳಬೇಕು. ಮತ್ತು ಅದು ಎಂತಹುದು? ಅದರ ಸ್ವಭಾವವೇನು? ಅದು ಯಾವ ವಿಧವಾದ ವಿಕಾರಗಳನ್ನು ಹೊಂದುತ್ತದೆ? ಯಾವ ಯಾವ ಪದಾರ್ಥಗಳ ಸಮೂಹಕ್ಕೆ ಕ್ಷೇತ್ರ ಎಂದು ಹೆಸರಾಗಿದೆ? ಮತ್ತು ಆ ಕ್ಷೇತ್ರದಲ್ಲಿರುವ ಯಾವ ಯಾವ ಪದಾರ್ಥಗಳು ಯಾವುದರಿಂದ ಉತ್ಪನ್ನವಾಗಿವೆ? ಸಃ ಎಂದರೆ ಅವನು–ಕ್ಷೇತ್ರಜ್ಞನು ಯಾರು? ಅವನ ಪ್ರಭಾವವಾದರೂ ಎಷ್ಟಿದೆ?–ಈ ಎಲ್ಲವನ್ನೂ ಸಂಗ್ರಹವಾಗಿ ಹೇಳುವೆನು ಕೇಳು ಎನ್ನುತ್ತಾನೆ ಶ್ರೀಕೃಷ್ಣ.)

o o o

**ಯತ್ಪ್ರಭಾವಃ**= ಉಪಾಧಿಯಿಂದ ಉಂಟಾದ ಪ್ರಭಾವಗಳು (ಶಕ್ತಿಗಳು) ಯಾವನಿಗಿವೆಯೋ ಅವನು. **ತತ್**=ಮೇಲೆ ಹೇಳಿದ ವಿಶೇಷವುಳ್ಳ ಕ್ಷೇತ್ರ-ಕ್ಷೇತ್ರಜ್ಞರ ಯಥಾರ್ಥಸ್ವರೂಪವನ್ನು. (ಶಂ. ಭಾ.)

ಆ ಕ್ಷೇತ್ರವು ಯಾವ ದ್ರವ್ಯ? ಯಾವುದಕ್ಕೆ ಆಶ್ರಯವಾಗಿದೆ? ಅದರ ವಿಕಾರಗಳು ಯಾವುವು? ಯಾವ ಕಾರಣಕ್ಕೋಸ್ಕರ (ಯಾವ ಪ್ರಯೋಜನಕ್ಕೋಸ್ಕರ) ಅದು ಉತ್ಪನ್ನವಾಗಿದೆ? ಅದರ ಸ್ವರೂಪವೇನು? ಮತ್ತು ಆ ಕ್ಷೇತ್ರಜ್ಞನು ಯಾರು? ಅವನ ಸ್ವರೂಪವೇನು? ಪ್ರಭಾವಗಳೇನು?–ಇವುಗಳೆಲ್ಲವನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು. (ರಾ. ಭಾ.)

**ಯದ್ವಿಕಾರಿ**=ಯಾವ ವಿಕಾರದಿಂದ ಕೂಡಿದ್ದು. **(ಯಶ್ಚಾಸೌ ವಿಕಾರಶ್ಚ ಯದ್ವಿಕಾರಃ, ಸಃ ಅಸ್ಯ ಅಸ್ತೀತಿ ಯದ್ವಿಕಾರೀ.)**

**ಯತಶ್ಚ ಯತ್**= ಯಾವುದರ ಪ್ರೇರಣೆಯಿಂದ ಯಾವುದು ಯಾವ ಕೆಲಸದಲ್ಲಿ ತೊಡಗುತ್ತದೆ? ಆ ಪ್ರವರ್ತಕನು ಯಾರು?

**ಯತಶ್ಚ ಯತ್** ಎಂಬುದು ಇವನಿಂದ ಕ್ಷೇತ್ರವು ಕೆಲಸದಲ್ಲಿ ತೊಡಗುತ್ತದೆ ಎಂಬ ಅರ್ಥದ ಮಾತು. ಸ ಚ ಯಃ ಎಂಬುದು ಅವನ ಸ್ವರೂಪ ಮಾತ್ರವನ್ನು ಹೇಳುತ್ತದೆ. (ಮ. ಭಾ.)

**ಓಂ ಋಷಿಭಿರ್ಬಹುಧಾ ಗೀತಂ ಛನ್ದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥೪॥**

ಋಷಿಗಳಿಂದ ಬಹುವಾಗಿ ಬಗೆ-ಬಗೆಯಾದ ಛಂದಸ್ಸುಗಳಿಂದ ಬೇರೆ-ಬೇರೆ ಪ್ರಕಾರಗಳಲ್ಲಿ ಹಾಡಲ್ಪಟ್ಟಿರುವುದು. ಯುಕ್ತಿಯುಕ್ತವಾಗಿ ಸಿದ್ಧಾಂತ ಮಾಡಿರುವ ಬ್ರಹ್ಮಸೂತ್ರಪದಗಳಿಂದಲೂ ಹಾಡಲ್ಪಟ್ಟಿರುವುದು.

* * *

(ಕ್ಷೇತ್ರ-ಕ್ಷೇತ್ರಜ್ಞರ ವಿಷಯವೆಂದರೆ ಸಾಮಾನ್ಯವಾದುದಲ್ಲ. ಇದನ್ನು ವಸಿಷ್ಠಾದಿ ಋಷಿಗಳೂ ಅನೇಕಪ್ರಕಾರವಾಗಿ ಹಾಡಿದ್ದಾರೆ. ಋಗ್ಯಜು ಸ್ಸಾಮಾಥರ್ವಣಗಳಲ್ಲಿರುವ ಅನೇಕಛಂದಸ್ಸುಗಳಲ್ಲಿಯೂ ಕ್ಷೇತ್ರ-ಕ್ಷೇತ್ರಜ್ಞರ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಸಂಶಯಾದಿಗಳಿಗೆ ಎಡೆಯಿಲ್ಲದೇ ಯುಕ್ತಿ ಪೂರ್ವಕವಾಗಿ ಸ್ಪಷ್ಟವಾಗಿ ವಿಷಯವನ್ನು ನಿರೂಪಿಸುವ ಬ್ರಹ್ಮಸೂತ್ರವಾಕ್ಯ ಗಳಿಂದಲೂ ಕ್ಷೇತ್ರ-ಕ್ಷೇತ್ರಜ್ಞರ ವಿಷಯವು ಹೊಗಳಲ್ಪಟ್ಟಿದೆ. ಕ್ಷೇತ್ರ- ಕ್ಷೇತ್ರಜ್ಞರ ವಿಷಯವೆಂದರೆ ಪ್ರಕೃತಿ-ಪುರುಷರ ವಿಷಯವೆಂದೂ ಇಟ್ಟುಕೊಳ್ಳಬಹುದು. ಸಾಂಖ್ಯಕಾರಿಕೆಯಲ್ಲಿ ಪ್ರಕೃತಿ-ಪುರುಷರ ವಿಷಯವನ್ನು ಹೀಗೆ ಹೇಳಿದೆ :

**ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಃ ಸಪ್ತ ।**
**ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನ ವಿಕೃತಿಃ ಪುರುಷಃ ॥೩॥**

ಒಂದು ಮೂಲಪ್ರಕೃತಿಯಿದೆ. ಆ ಮೂಲಪ್ರಕೃತಿಯು ಯಾವುದರ ವಿಕಾರವೂ ಅಲ್ಲ. ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರೆಗಳು (ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು) ಈ ಏಳು ಪ್ರಕೃತಿ-ವಿಕೃತಿಗಳೆಂದು ಕರೆಯ ಲ್ಪಡುತ್ತವೆ. ಈ ಏಳು ಪಂಚಭೂತಾದಿಗಳಿಗೆ ಕಾರಣಗಳಾಗುವುದರಿಂದ ಪ್ರಕೃತಿಗಳೂ ಆಗುತ್ತವೆ. ಮೂಲಪ್ರಕೃತಿಯ ಕಾರ್ಯಮಾಡುವುದರಿಂದ ವಿಕೃತಿಗಳೂ ಆಗುತ್ತವೆ. ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯ ಗಳು, ಮನಸ್ಸು ಮತ್ತು ಪಂಚಮಹಾಭೂತಗಳು–ಈ ಹದಿನಾರಕ್ಕೆ ವಿಕೃತಿ ಗಳೆಂದು ಹೆಸರು. ಇವುಗಳು ಯಾವುದಕ್ಕೂ ಕಾರಣಗಳಾಗುವುದಿಲ್ಲ. ಅರ್ಥಾತ್ ಇವು ವಿಕೃತಿಗಳೇ ಹೊರತು ಪ್ರಕೃತಿಗಳಲ್ಲ. ಹನ್ನೊಂದು

ಇಂದ್ರಿಯಗಳು ಅಹಂಕಾರದ ಕಾರ್ಯವಾಗಿದೆ. ಪಂಚಮಹಾಭೂತಗಳು ಪಂಚತನ್ಮಾತ್ರೆಗಳ ಕಾರ್ಯವಾಗಿದೆ. ಆದರೆ ಪುರುಷನು ಯಾವುದಕ್ಕೂ ಕಾರಣನೂ ಅಲ್ಲ ; ಯಾರ ಕಾರ್ಯನೂ ಅಲ್ಲ. ಕಾರ್ಯ-ಕಾರಣಗಳೆರಡೂ ಈ ಪುರುಷನಿಗಿರುವುದಿಲ್ಲ. ಮಹಾಭಾರತದ ಶಾಂತಿಪರ್ವದಲ್ಲಿಯೂ ಭಗವಂತನು ಕ್ಷೇತ್ರಜ್ಞನನ್ನು ವರ್ಣಿಸಿದ್ದಾನೆ.

**ಯತ್ತತ್ಸೂಕ್ಷ್ಮಮವಿಜ್ಞೇಯಮವ್ಯಕ್ತಮಚಲಂ ಧ್ರುವಮ್ ।**
**ಇನ್ದ್ರಿಯೈರಿನ್ದ್ರಿಯಾರ್ಥೈಶ್ಚ ಸರ್ವಭೂತೈಶ್ಚ ವರ್ಜಿತಮ್ ।**
**ಸ ಹ್ಯನ್ತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೇತಿ ಕಥ್ಯತೇ ॥೨೯॥**

ಅಧ್ಯಾಯ-೩೩೪

ಯಾವುದು ಸೂಕ್ಷ್ಮ , ಅಜ್ಞೇಯ, ಅವ್ಯಕ್ತ , ಅಚಲ ಮತ್ತು ಧ್ರುವ ವಾಗಿದೆಯೋ–ಯಾವುದು ಇಂದ್ರಿಯಗಳಿಗೂ ಇಂದ್ರಿಯಾರ್ಥಗಳಿಗೂ ಮತ್ತು ಸರ್ವಭೂತಗಳಿಗೂ ಪ್ರತ್ಯೇಕವಾಗಿರುವುದೋ ಇವುಗಳಿಗೆ ಸಂಬಂಧವಿಲ್ಲದೇ ಇರುವುದೋ–ಯಾವುದು ಸರ್ವಪ್ರಾಣಿಗಳಿಗೂ ಅಂತರಾತ್ಮವಾಗಿದೆಯೋ– ಅದು ಕ್ಷೇತ್ರಜ್ಞ ಎಂದೂ ಕರೆಯಲ್ಪಡುತ್ತದೆ.

ಬ್ರಹ್ಮಸೂತ್ರಪದೈಶ್ಚೈವ = ಆತ್ಮಸ್ವರೂಪವನ್ನು ತಿಳಿಸುವ ವಾಕ್ಯಗಳಿಂದ ಎಂದೂ ಅರ್ಥಮಾಡಬಹುದು. ಯುಕ್ತಿಯುಕ್ತವಾಗಿರುವ, ಯಾವ ಸಂಶಯವೂ ಇಲ್ಲದ, ನಿಶ್ಚಿತವಾದ ಅರಿವನ್ನು ಉಂಟುಮಾಡುವ ಬ್ರಹ್ಮಸೂತ್ರ ಪದಗಳಿಂದ (ವೇದೋಕ್ತಿಗಳಿಂದ), (**ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।** ಇತ್ಯಾದಿಗಳು.) ಬ್ರಹ್ಮಸೂತ್ರಪದಗಳೆಂದರೆ ಬಾದ ರಾಯಣರು ಮಾಡಿರುವ ಶಾರೀರಕಸೂತ್ರಗಳೂ ಆಗಬಹುದು. ಅವರು ಉಪನಿಷತ್ತುಗಳಲ್ಲಿಯ ಸಕಲವಿಷಯಗಳನ್ನೂ ಸಂಗ್ರಹಿಸಿ ಒಂದೊಂದು ವಿಷ ಯದ ಮೇಲೂ ಸರ್ವೋಪನಿಷತ್ತುಗಳಲ್ಲಿಯೂ ಒಂದೇ ಸಿದ್ಧಾಂತವಿರುವು ದೆಂಬುದನ್ನು ಸಪ್ರಮಾಣವಾಗಿಯೂ ಎಂದರೆ ಕಾರ್ಯ-ಕಾರಣಾದಿ ಹೇತು ಗಳನ್ನು ತೋರಿಸಿಕೊಟ್ಟು ಸಂಪೂರ್ಣವಾಗಿಯೂ ಸಿದ್ಧಮಾಡಿ ತೋರಿಸಿದ್ದಾರೆ. ಆದುದರಿಂದ ಉಪನಿಷತ್ತುಗಳ ರಹಸ್ಯವನ್ನು ಅರಿತುಕೊಳ್ಳಬೇಕಾದರೆ ವೇದಾಂತಸೂತ್ರಗಳ ಆಧಾರವು ಬೇಕಾಗುತ್ತದೆ. ಬ್ರಹ್ಮಸೂತ್ರಗಳ ಎರಡನೆಯ ಅಧ್ಯಾಯದಲ್ಲಿಯ ಮೂರನೆಯ ಪಾದದ ಪ್ರಾರಂಭದ ೧೬ ಸೂತ್ರಗಳಲ್ಲಿ

ಕ್ಷೇತ್ರದ ವಿಚಾರವನ್ನೂ, ಮುಂದೆ ಆ ಪಾದದ ಕೊನೆಯವರೆಗೆ ಕ್ಷೇತ್ರಜ್ಞನ ವಿಚಾರವನ್ನೂ ಮಾಡಿದ್ದಾರೆ.

**ಹೇತುಮದ್ಭಿಃ**–ಎಂಬುದನ್ನು ಬ್ರಹ್ಮಸೂತ್ರಪದೈಃ –ಎಂಬುದಕ್ಕೆ ವಿಶೇಷಣವನ್ನಾಗಿ ತೆಗೆದುಕೊಂಡು ಯುಕ್ತಿಯುಕ್ತವಾದ ಬ್ರಹ್ಮಸೂತ್ರವಾಕ್ಯ ಗಳಿಂದ ಎಂದು ಅರ್ಥಮಾಡಿದೆ. **ಹೇತುಮದ್ಭಿಃ**–ಎಂಬ ಪದವನ್ನು ವಿದ್ವಾಂಸರಿಗೆ ವಿಶೇಷಣವನ್ನಾಗಿ ಮಾಡಿಕೊಂಡು ಯುಕ್ತಿಗಳಿಂದ ಕೂಡಿದ ವಿದ್ವಾಂಸರಿಂದ ಚೆನ್ನಾಗಿ ನಿಶ್ಚಯಿಸಲ್ಪಟ್ಟ ಬ್ರಹ್ಮಸೂತ್ರವಾಕ್ಯಗಳಿಂದ ಎಂದೂ ಅರ್ಥಮಾಡಬಹುದು.)

o o o

**ಪೃಥಕ್** =ವಿವೇಚನಾಪೂರ್ವಕವಾಗಿ. ಬ್ರಹ್ಮಸೂತ್ರಪದೈಃ= ಬ್ರಹ್ಮವನ್ನು ಸೂಚಿಸುವ ವಾಕ್ಯಗಳು ಬ್ರಹ್ಮಸೂತ್ರಗಳು. ಅವುಗಳ ಮೂಲಕ ಬ್ರಹ್ಮವು ಹೊಂದಲ್ಪಡುವುದರಿಂದ ಅವುಗಳನ್ನು ಬ್ರಹ್ಮಸೂತ್ರಪದ ಎಂದು ಕರೆದಿದೆ. ಆತ್ಮೇತ್ಯೇವ ಉಪಾಸೀತ ಬೃ. ೧-೪-೭ ಮುಂತಾದುವುಗಳು ಬ್ರಹ್ಮಸೂತ್ರ ವಾಕ್ಯಗಳು. (ಶಂ. ಭಾ.)

**ಋಷಿಭಿಃ ಬಹುಧಾ ಗೀತಂ** = ಕ್ಷೇತ್ರ-ಕ್ಷೇತ್ರಜ್ಞರ ಯಾಥಾತ್ಮ್ಯವು ಪರಾಶರರೇ ಮುಂತಾದ ಋಷಿಗಳಿಂದ ಅನೇಕಪ್ರಕಾರವಾಗಿ ಗಾನಮಾಡಲ್ಪ ಟ್ಟಿದೆ.

**ಅಹಂ ತ್ವಂ ಚ ತಥಾನ್ಯೇ ಚ ಭೂತೈರುಹ್ಯಾಮ ಪಾರ್ಥಿವ ।**
**ಆತ್ಮಾ ಶುದ್ಧೋಽಕ್ಷರಃ ಶಾನ್ತೋ ನಿರ್ಗುಣಃ ಪ್ರಕೃತೇಃ ಪರಃ ॥**
ವಿ.ಪು. ೨-೧೩-೭೧

**ಪಿಣ್ಡಃ ಪೃಥಗ್ಯತಃ ಪುಂಸಃ ಶಿರಃ ಪಾಣ್ಯಾದಿಲಕ್ಷಣಃ ।**
**ತತೋಽಹಮಿತಿ ಕುತ್ರೈತಾಂ ಸಂಜ್ಞಾಂ ರಾಜನ್ಕರೋಮ್ಯಹಮ್ ॥**
ವಿ. ಪು. ೨-೧೩-೭೯

**ಇನ್ದ್ರಿಯಾಣಿ ಮನೋ ಬುದ್ಧಿಃ ಸತ್ತ್ವಂ ತೇಜೋ ಬಲಂ ಧೃತಿಃ ।**
**ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ॥**
ವಿಷ್ಣುಸಹಸ್ರನಾಮ.

ಮುಂತಾದ ಋಷಿವಾಕ್ಯಗಳು ಈ ವಿಷಯವನ್ನು ಬೋಧಿಸುತ್ತವೆ. ಬೇರೆ ಬೇರೇ ವಿಧವಾದ ಛಂದಸ್ಸುಗಳೂ (ಋಗ್ಯಜುಸ್ಸಾಮಾಥರ್ವಗಳು) ಕೂಡ ದೇಹಾತ್ಮಗಳ ಸ್ವರೂಪವನ್ನು ಪ್ರತ್ಯೇಕವಾಗಿ ಹಾಡಿವೆ.

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಮ್ಭೂತಃ ।**
**ಸ ವಾ ಏಷ ಪುರುಷೋಽನ್ನರಸಮಯಃ ।**

ಎಂಬಲ್ಲಿ ಶರೀರಸ್ವರೂಪವನ್ನು ಹೇಳಿ, **ತಸ್ಮಾದ್ವಾ ಏತಸ್ಮಾದ್ವಿಜ್ಞಾನ-ಮಯಾತ್**–ಎಂಬಲ್ಲಿ ಕ್ಷೇತ್ರಜ್ಞನ ಸ್ವರೂಪವನ್ನು ಹೇಳಿ, **ಅನ್ಯೋಽನ್ತ-ರಾತ್ಮಾನನ್ದಮಯಃ** ಎಂಬಲ್ಲಿ ಕ್ಷೇತ್ರಜ್ಞನಿಗೂ ಅಂತರಾತ್ಮನಾಗಿರುವ ಆನಂದಮಯನಾದ ಪರಮಾತ್ಮಸ್ವರೂಪವನ್ನು ತೈತ್ತಿರೀಯೋಪನಿಷತ್ತು ಹೇಳುತ್ತದೆ.

ಬ್ರಹ್ಮಸೂತ್ರಪದೈಃ ವಿನಿಶ್ಚಿತೈಃ = ಹೇತುಯುಕ್ತವಾಗಿ ನಿರ್ಣಯವನ್ನು ಕೊನೆಗೆ ಹೇಳುವ ಬ್ರಹ್ಮವನ್ನು ಪ್ರತಿಪಾದಿಸುವ ಶಾರೀರಕಸೂತ್ರಗಳಿಂದಲೂ (ಬಾದರಾಯಣಸೂತ್ರ) ಅದು ಹೇಳಲ್ಪಟ್ಟಿದೆ.

ಬ್ರಹ್ಮಸೂತ್ರವು ನ ವಿಯದಶ್ರುತೇಃ –ಎಂದು ಆರಂಭಿಸಿ ಕ್ಷೇತ್ರಪ್ರಕಾರದ ಸಿದ್ಧಾಂತವನ್ನು ಹೇಳುತ್ತದೆ. ಜ್ಞಃ ಅತಏವ । ೨-೩-೧೯ ಎಂಬಲ್ಲಿ ಕ್ಷೇತ್ರಜ್ಞನ ಯಾಥಾತ್ಮ್ಯವನ್ನು ನಿರ್ಣಯಿಸಿದೆ. **ಪರಾತ್ತು ತಚ್ಛ್ರುತೇಃ । ೨-೩-೪೦** ಎಂಬುದು ಭಗವಂತನೇ ಇವುಗಳಿಗೆ ಪ್ರವರ್ತಕ ಎಂದು ಹೇಳಿದೆ.

(ರಾ. ಭಾ.)

ಬ್ರಹ್ಮಸೂತ್ರಾಣಿ = **ಶಾರೀರಕಂ ;** ಬ್ರಹ್ಮಸೂತ್ರಪದಗಳು ಎಂದರೆ ಬಾದರಾಯಣರ ಶಾರೀರಕಸೂತ್ರಗಳು. (ಮ. ಭಾ.)

**ಓಂ ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇನ್ದ್ರಿಯಾಣಿ ದಶೈಕಂ ಚ ಪಞ್ಚ ಚೇನ್ದ್ರಿಯಗೋಚರಾಃ ॥೫॥**

ಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಇಂದ್ರಿಯಗಳು ಹತ್ತು ಮತ್ತು ಇಂದ್ರಿಯಗೋಚರಗಳು ಐದು.

* * *

(ಮಹಾಭೂತಾನಿ ಎಂದರೆ ಏಳನೇ ಅಧ್ಯಾಯದ ೪ನೆಯ ಶ್ಲೋಕದಲ್ಲಿ

ಹೇಳಿರುವ **ಭೂಮಿರಾಪೋಽನಲೋ ವಾಯುಃ ಖಂ**–ಭೂಮಿ, ನೀರು, ಬೆಂಕಿ, ವಾಯು ಮತ್ತು ಆಕಾಶ ಇವುಗಳು. **ಅಹಂಕಾರ**–ಇದು ಪಂಚ ತನ್ಮಾತ್ರೆಗಳಿಗೂ ಮನಸ್ಸಿಗೂ ಮತ್ತು ಎಲ್ಲ ಇಂದ್ರಿಯಗಳಿಗೂ ಕಾರಣವಾಗಿದೆ. ಇದು ಮಹತ್ತತ್ತ್ವದ ಕಾರ್ಯ. ಇದನ್ನು ಅಹಂಭಾವ ಎಂದೂ ಕರೆಯುತ್ತಾರೆ. ಇದನ್ನು ಅಂತಃಕರಣದ ಒಂದು ಭೇದವೆಂದೂ ಹೇಳುತ್ತಾರೆ.

**ಮನೋಬುದ್ಧಿರಹಙ್ಕಾರಶ್ಚಿತ್ತಂ ಕರಣಮನ್ತರಮ್ ॥**

ಪಂಚಮಹಾಭೂತಗಳ ಪಂಚೀಕರಣದಿಂದ ದೇಹದ ಸೃಷ್ಟಿಯಾದ ನಂತರ ಮೊದಲನೆಯದಾಗಿ ಅಹಂಕಾರ ಅಥವಾ ಅಹಂಭಾವವು (ನಾನು, ನನ್ನದು) ಎಂಬುದು ಅದರೊಳಗೆ ಸೇರಿಕೊಳ್ಳುತ್ತದೆ.

ಸಂತಜ್ಞಾನೇಶ್ವರರ ಮಾತಿನಂತೆ : ಜಾಗ್ರದವಸ್ಥೆಯಲ್ಲಿ ಸ್ವಪ್ನವು ಇಲ್ಲದಿರುವಂತೆ–ಅಮಾವಾಸ್ಯೆಯಲ್ಲಿ ಚಂದ್ರನು ಗುಪ್ತವಾಗಿರುವಂತೆ–ಚಿಕ್ಕಮಕ್ಕಳಲ್ಲಿ ತಾರುಣ್ಯವು ಅಡಗಿ ಕುಳಿತಿರುವಂತೆ–ಅರಳದಿದ್ದ ಮೊಗ್ಗಿನಲ್ಲಿ ಸುಗಂಧವು ಒಳಗೆ ನಿಗೂಢವಾಗಿರುವಂತೆ–ಕಟ್ಟಿಗೆಯಲ್ಲಿ ಬೆಂಕಿಯು ಗುಪ್ತವಾಗಿರುವಂತೆ–ಪ್ರಕೃತಿಯ ಹೊಟ್ಟೆಯಲ್ಲಿ ಅಹಂಕಾರವು ಗುಪ್ತವಾಗಿರುವುದು. ಧಾತುಗತವಾದ ಜ್ವರವು ಕೇವಲ ಕುಪಥ್ಯದ ದಾರಿಯನ್ನೇ ಕಾಯುತ್ತಿರುತ್ತದೆ. ಕುಪಥ್ಯವಾದೊಡನೆಯೇ ಅಂತರ್ಗತವಾಗಿದ್ದ ಜ್ವರವು ಹೊರಬಿದ್ದು ಶರೀರವನ್ನೆಲ್ಲಾ ವ್ಯಾಪಿಸುವಂತೆ–ಪಂಚಮಹಾಭೂತಗಳ ಪಂಚೀಕರಣದಿಂದ ದೇಹ ರಚನೆಯಾದಾಗ ಅದರೊಳಗೇ ಸೇರಿಕೊಂಡು ಅದು ಕುಣಿಯುವಂತೆ ಮಾಡುವುದೇ ಈ ಅಹಂಕಾರ.

ಬುದ್ಧಿಃ = ಇದೂ ಸಹ ಅಂತಃಕರಣದ ಒಂದು ಭೇದ. ಅಹಂಕಾರವು (ನಾನು ಎಂಬುದು) ಹುಟ್ಟಿಕೊಂಡೊಡನೆಯೇ ಅದಕ್ಕೆ ಸುಖದ ಬಯಕೆಯುಂಟಾಗುವುದು ಸಹಜವಾಗಿಯೇ ಇದೆ. ಸುಖ-ದುಃಖಗಳನ್ನು ಅಹಂಕಾರವು ಭೋಗಿಸಬೇಕಾಗಿ ಬಂದಾಗ 'ಇದು ಒಳ್ಳೆಯದು ; ಇದು ಕೆಟ್ಟುದು ; ಇದು ಪುಣ್ಯ ; ಇದು ಪಾಪ ; ಇದು ಅಶುದ್ಧ'–ಎಂಬುದನ್ನು ನಿರ್ಧರಿಸುವುದೇ ಬುದ್ಧಿ. ಮನುಷ್ಯನಲ್ಲಿರುವ ಅತ್ಯಂತಬಲಿಷ್ಠಪ್ರಕೃತಿಯೇ ಈ ಬುದ್ಧಿ. ಇತರಪ್ರಾಣಿಗಳಿಗೆ ತಮ್ಮನ್ನು ರಕ್ಷಿಸಿಕೊಳ್ಳಲು ಅಥವಾ

ಮತ್ತೊಂದು ಪ್ರಾಣಿಯನ್ನು ನಾಶಗೊಳಿಸಲು ವಿಷ, ದಂಷ್ಟ್ರ, ಉಗುರು, ಸೊಂಡಿಲು–ಮುಂತಾದುವುಗಳಿವೆ. ಮನುಷ್ಯನಿಗಾದರೋ ತನ್ನ ರಕ್ಷಣೆಗಾಗಿ ಬುದ್ಧಿಶಕ್ತಿಯನ್ನು ಭಗವಂತನು ಕೊಟ್ಟಿರುವನು. ಇದರ ಸಹಾಯದಿಂದ ಮನುಷ್ಯನು ಅದ್ಭುತವಾದುದನ್ನೂ ಸಾಧಿಸಬಲ್ಲನು. ಸಮುದ್ರದ ಆಳಕ್ಕೆ ಹೋಗುತ್ತಾನೆ. ಆಕಾಶದಲ್ಲಿ ಎತ್ತರಕ್ಕೆ ಹಾರುತ್ತಾನೆ. ಧ್ವಂಸಕ್ರಿಯೆಯಲ್ಲಿ ಕಾಲನನ್ನೂ ಮೀರಿಸುವಷ್ಟು ಸಮರ್ಥನಾಗಿದ್ದಾನೆ. ಸಾವಿರಾರು ಜನರನ್ನು ನಿಮಿಷಮಾತ್ರದಲ್ಲಿ ಕೊಲ್ಲಬಲ್ಲನು ಮತ್ತು ಕಾಯಬಲ್ಲನು. ಬುದ್ಧಿಯ ಶಕ್ತಿಯು ಅಷ್ಟು ಪರಮಾದ್ಭುತವಾದುದು. ಪರಮಾತ್ಮನ ಸಾಕ್ಷಾತ್ಕಾರಕ್ಕೂ ಸಹ ಇದೇ ಹೆಬ್ಬಾಗಿಲಾಗಿರುತ್ತದೆ. ಬುದ್ಧಿಯೆಂಬ ಕವಾಟದ ಮೂಲಕವಾಗಿಯೇ ಪರಮಾತ್ಮನ ಸಂದರ್ಶನವಾಗಬೇಕು.

**ಅವ್ಯಕ್ತಂ = ಅವ್ಯಕ್ತಾದ್ವ್ಯಕ್ತಯಃ ಸರ್ವಾಃ** –ಎಂದು ಹಿಂದೆ ಹೇಳಿರುವಂತೆ ಇದು ಮೂಲಪ್ರಕೃತಿ. ಅವ್ಯಕ್ತವಾದ ಮೂಲಪ್ರಕೃತಿಯಿಂದಲೇ ವ್ಯಕ್ತವಾದ ಪ್ರಪಂಚವು ಹುಟ್ಟುತ್ತದೆ. ಈ ಅವ್ಯಕ್ತವು ಅಥವಾ ಮೂಲಪ್ರಕೃತಿಯು ಪ್ರಳಯಕಾಲದಲ್ಲಿ ಭೂತಸಮುದಾಯವನ್ನು ಬೀಜರೂಪವಾಗಿಟ್ಟುಕೊಂಡು ಪರಮಾತ್ಮನಲ್ಲಿಯೇ ಸೇರಿಕೊಂಡಿರುತ್ತದೆ. ಸಾಂಖ್ಯರು ಇದನ್ನೇ ಪ್ರಧಾನ ಎಂದು ಕರೆಯುತ್ತಾರೆ. ಮುಂಜಾವಿನ ಕತ್ತಲಲ್ಲಿ ಆಕಾಶದಲ್ಲಿ ತಾರೆಗಳು ಅಡಗುವಂತೆ–ಸೂರ್ಯಾಸ್ತಮಾನದ ಅನಂತರ ಜನರ ವ್ಯವಹಾರವು ನಿಲ್ಲುವಂತೆ–ದೇಹವು ನಾಶವಾದ ಬಳಿಕ ದೇಹಾದಿ ಎಲ್ಲ ಉಪಾಧಿಗಳೂ ಕೃತಕರ್ಮಗಳ ಸಂಸ್ಕಾರದಲ್ಲಿ ಲಯಹೊಂದುವಂತೆ–ಬೀಜದ ಹೊಟ್ಟೆಯಲ್ಲಿ ಸಂಪೂರ್ಣವೃಕ್ಷವೂ ಸುಪ್ತವಾಗಿ ಒಳಗೊಂಡಿರುವಂತೆ–ತಂತುದೆಸೆಯಲ್ಲಿ ವಸ್ತ್ರವು ಗುಹ್ಯವಾಗಿರುವಂತೆ–ತಮ್ಮ ಸ್ಥೂಲವಾದ ಆಕಾರಗಳನ್ನು ಬಿಟ್ಟುಕೊಟ್ಟು ಮಹಾಭೂತಗಳು ಮತ್ತು ಮಹಾಭೂತಾದಿ ಆಕಾರಗಳು ಪ್ರಳಯಕಾಲದಲ್ಲಿ ಅವ್ಯಕ್ತದಲ್ಲಿ ಸೂಕ್ಷ್ಮವಾಗಿ ಲಯಹೊಂದುವುವು.

**ಇನ್ದ್ರಿಯಾಣಿ ದಶೈಕಂ ಚ = ವಾಕ್, ಪಾಣಿ, ಪಾದ, ಪಾಯು,** ಉಪಸ್ಥ=ಮಾತು, ಕೈ, ಕಾಲು, ಗುದ, ಜನನೇಂದ್ರಿಯ–ಇವು ಕರ್ಮೇಂದ್ರಿಯಗಳು. **ಚಕ್ಷುಃಶ್ರೋತ್ರಜಿಹ್ವಾಘ್ರಾಣತ್ವಚೆಗಳು** (ಕಣ್ಣು, ಕಿವಿ,

ನಾಲಿಗೆ, ಮೂಗು ಮತ್ತು ಚರ್ಮ) ಇವು ಐದು ಜ್ಞಾನೇಂದ್ರಿಯಗಳು. ಇವುಗಳೆಲ್ಲಕ್ಕೂ ಕಾರಣ ಅಹಂಕಾರವೇ ಆಗಿದೆ. ಹತ್ತರ ಮೇಲಿನ ಒಂದು ಯಾವುದೆಂದರೆ ಮನಸ್ಸು. ಇದೂ ಸಹ ಅಂತಃಕರಣದ ಒಂದು ಭೇದ. ಇದು ಸಂಕಲ್ಪ-ವಿಕಲ್ಪಸ್ವರೂಪವಾಗಿದೆ. ಈ ಮನಸ್ಸು ಇಂದ್ರಿಯಗಳ ಮತ್ತು ಬುದ್ಧಿಯ ನಡುವೆ ರಜೋಗುಣದ ಹೆಗಲ ಮೇಲೆ ಆಂದೋಳನಮಾಡುತ್ತಿರುತ್ತದೆ. ಯಾವ ಪ್ರವೃತ್ತಿಗಾದರೂ ಇದು ಮೂಲವಾಗಿದ್ದು ಇದರಿಂದಲೇ ಬಯಕೆಯು ಬಲಗೊಳ್ಳುವುದು. ಇದು ಅಹಂಕಾರದೊಡನೆ ನಿತ್ಯವೂ ಸೆಣೆಸುತ್ತಿರುವುದು. ಇದು ಬಯಕೆಯನ್ನು ಬೆಳೆಸುವುದು. ಆಶೆಯನ್ನು ಪ್ರಬಲಗೊಳಿಸುವುದು ಮತ್ತು ಭಯವನ್ನುಂಟುಮಾಡುವುದು. **ಪಞ್ಚ ಚೇನ್ದ್ರಿಯಗೋಚರಾಃ**–ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ– ಇವುಗಳು ಐದು ಜ್ಞಾನೇಂದ್ರಿಯಗಳಿಗೆ ಗೋಚರವಾಗತಕ್ಕುವುಗಳು.)

o o o

ಮಹಾಭೂತಗಳು ಎಂದರೆ ಸೂಕ್ಷ್ಮಭೂತಗಳು. ಎಲ್ಲ ವಿಕಾರಗಳ ಲ್ಲಿಯೂ ವ್ಯಾಪಕವಾಗಿರುವುದರಿಂದ ಇವುಗಳಿಗೆ **ಮಹತ್** ಎಂಬ ವಿಶೇಷಣ ವಿದೆ ಮತ್ತು ಇವುಗಳು ಭೂತಗಳೂ ಆಗಿವೆ. ಆದುದರಿಂದ ಮಹಾಭೂತ ಗಳು ಎನಿಸುತ್ತವೆ. (ಸ್ಥೂಲಪಂಚಭೂತಗಳಾದರೋ ಇಂದ್ರಿಯಗೋಚರ ಎಂಬ ಶಬ್ದದಿಂದ ಹೇಳಲ್ಪಡುತ್ತವೆ. ಆದುದರಿಂದ ಇಲ್ಲಿ ಹೇಳಿರುವ ಮಹಾ ಭೂತಗಳು ಸೂಕ್ಷ್ಮವಾದ ಪಂಚಮಹಾಭೂತಗಳೇ.) **ಅಹಂಕಾರಃ**=ಮಹಾ ಭೂತಗಳಿಗೆ ಕಾರಣವಾದುದು. ಅಹಂ–ನಾನು ಎಂಬ ಪ್ರತ್ಯಯದ ರೂಪವಾ ದುದು. **ಬುದ್ಧಿಃ** =ಅಹಂಕಾರಕ್ಕೆ ಕಾರಣವಾದುದು. ಇದಕ್ಕೂ ಕಾರಣವಾದುದು ಅವ್ಯಕ್ತಪ್ರಕೃತಿ. ಇದು ವ್ಯಕ್ತವಲ್ಲದುದು. ಅವ್ಯಾಕೃತವಾದ ಈಶ್ವರನ ಶಕ್ತಿ. **ಮಮ ಮಾಯಾ ದುರತ್ಯಯಾ**–ಮುಂತಾದ ವಚನಗಳಿಂದ ಹೇಳಲ್ಪಟ್ಟಿರುವುದು ಇದೇ. ಕಿವಿಯೇ ಮುಂತಾದ ಐದು ಇಂದ್ರಿಯಗಳು ಜ್ಞಾನವನ್ನು ಉಂಟುಮಾಡುವುದರಿಂದ ಜ್ಞಾನೇಂದ್ರಿಯಗಳು ಎನಿಸುತ್ತವೆ. ವಾಕ್, ಪಾಣಿ ಮುಂತಾದ ಐದು ಇಂದ್ರಿಯಗಳು ಕರ್ಮಗಳನ್ನು ನೆರವೇರಿಸುವುದರಿಂದ ಕರ್ಮೇಂದ್ರಿಯಗಳು ಎನಿಸುತ್ತವೆ. ಹನ್ನೊಂದನೆಯದಾದ ಮನಸ್ಸು ಸಂಕಲ್ಪ-

ವಿಕಲ್ಪಾತ್ಮಕವಾದುದು. ಶಬ್ದವೇ ಮುಂತಾದ ಇಂದ್ರಿಯವಿಷಯಗಳು ಐದು. ಒಟ್ಟು ಇಪ್ಪತ್ತುನಾಲ್ಕು. ಇವುಗಳೇ ಸಾಂಖ್ಯರು ಹೇಳುವ ಚತುರ್ವಿಂಶತಿ ತತ್ತ್ವಗಳು. (ಶಂ. ಭಾ.)

ಮಹಾಭೂತ, ಅಹಂಕಾರ, ಬುದ್ಧಿ, ಅವ್ಯಕ್ತ–ಇವಿಷ್ಟೂ ಕ್ಷೇತ್ರವನ್ನು ಆರಂಭಿಸುವ ದ್ರವ್ಯಗಳು. ಪೃಥಿವ್ಯಪ್ತೇಜೋವಾಯ್ವಾಕಾಶಗಳು ಮಹಾ ಭೂತಗಳು. ಅಹಂಕಾರವು ಭೂತಾದಿ. ಬುದ್ಧಿ ಎಂದರೆ ಮಹತ್ತು. ಅವ್ಯಕ್ತ ವೆಂದರೆ ಪ್ರಕೃತಿ. ಹತ್ತು ಇಂದ್ರಿಯಗಳು, ಮನಸ್ಸು ಮತ್ತು ಐದು ಇಂದ್ರಿಯವಿಷಯಗಳು–ಇವು ಕ್ಷೇತ್ರವನ್ನು ಆಶ್ರಯಿಸಿರುವ ತತ್ತ್ವಗಳು.

(ರಾ. ಭಾ.)

**ಓಂ ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥೬॥**

ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನಾ, ಧೃತಿ–ಇದೇ ಕ್ಷೇತ್ರ. ಹೀಗೆ ವಿಕಾರಗಳೊಡನೆ ಕ್ಷೇತ್ರವನ್ನು ಸಂಕ್ಷೇಪವಾಗಿ ಹೇಳಿದ್ದಾಯಿತು.

* * *

(ಇಚ್ಛಾ = ಅಪೇಕ್ಷೆ, ಅಭಿಲಾಷೆ, ಬಯಕೆ. ಯಾವ ಪದಾರ್ಥವನ್ನು ಮನುಷ್ಯನು ಸುಖಕ್ಕೆ ಕಾರಣವಾಗುವುದೆಂದು ಭಾವಿಸಿ, ಅದನ್ನು ಪಡೆದು ಕೊಳ್ಳಲು ಅವನಿಗೆ ಆಸಕ್ತಿಯುಕ್ತವಾದ ಕಾಮನೆಯಿರುತ್ತದೆಯೋ, ಅದಕ್ಕೆ ಇಚ್ಛೆ ಎಂದು ಹೆಸರು. ಇದರಲ್ಲಿ ವಾಸನೆ, ತೃಷೆ, ಆಶೆ, ಲಾಲಸೆ, ಸ್ಪೃಹೆ ಮುಂತಾದ ಭೇದಗಳಿವೆ. ಈ ಇಚ್ಛೆಯು ಅಂತಃಕರಣದ ವಿಕಾರ. ಸುಖಕ್ಕೆ ಅಥವಾ ಸಂತೋಷಕ್ಕೆ ಕಾರಣವು ಪ್ರತ್ಯಕ್ಷವಸ್ತುವೇ ಇರಬೇಕೆಂಬುದೇನಿಲ್ಲ. ಭಾವರೂಪವೂ ಆಗಿರಬಹುದು. ಇವುಗಳನ್ನು ತನ್ಮಾತ್ರೆಗಳೆಂದೂ ಕರೆಯು ತ್ತಾರೆ. ಒಬ್ಬನಿಗೆ ಒಳ್ಳೆಯದಾದರೆ ಸಂತೋಷವಾಗಬಹುದು. ಬೇರೊಬ್ಬನಿಗೆ ಕೆಟ್ಟುದಾದರೆ ಸಂತೋಷವಾಗಬಹುದು. ಈ ಇಚ್ಛೆಯು ಎಲ್ಲ ಪ್ರಾಣಿಗಳಿಗೂ ಒಂದೇ ಬಗೆಯಾಗಿರುವುದಿಲ್ಲ. ಒಬ್ಬನಿಗೆ ಖಾರತಿನ್ನುವ ಇಚ್ಛೆ ಇರಬಹುದು ; ಮತ್ತೊಬ್ಬನಿಗೆ ಸಿಹಿತಿನ್ನುವ ಇಚ್ಛೆ ಇರಬಹುದು–ಒಟ್ಟಿನಲ್ಲಿ ಇಚ್ಛೆ ಎಂದರೆ ಯಾವುದರಿಂದ ಮನುಷ್ಯನು ತನಗೆ ಸುಖವಾಗುತ್ತದೆಂದು ಭಾವಿಸುವನೋ

ಅದಕ್ಕೆ ಇಚ್ಛೆ ಎಂದು ಹೆಸರು. ಇಂದ್ರಿಯಗಳ ಮೂಲಕವಾಗಿ ಮನಸ್ಸಿನ ಮೇಲೆ ಆಗುವ ಪ್ರತಿಕ್ರಿಯೆಗಳೇ ಇಚ್ಛಾ-ದ್ವೇಷಗಳು. ದ್ವೇಷವೆಂಬುದು ಇಚ್ಛೆಯಿಂದಲೇ ಹುಟ್ಟಿದ್ದೆಂದೂ ಹೇಳಬಹುದು. ಇಚ್ಛೆಗೆ ವಿಘಾತವುಂಟಾದರೆ ಅದೇ ದ್ವೇಷಕ್ಕೆ ಕಾರಣವಾಗುತ್ತದೆ. ಯಾವುದನ್ನು ಮನುಷ್ಯನು ತನ್ನ ಸುಖಕ್ಕೆ ವಿರೋಧವಾದುದೆಂದು ಭಾವಿಸುತ್ತಾನೆಯೋ, ದುಃಖಕ್ಕೆ ಕಾರಣವಾದುದೆಂದು ಭಾವಿಸುತ್ತಾನೆಯೋ–ಅದನ್ನು ವಿರೋಧಿಸುತ್ತಾನೆ. ಇದಕ್ಕೇ ದ್ವೇಷವೆಂದು ಹೆಸರು. ವೈರ, ಈರ್ಷ್ಯೆ, ಅಸೂಯೆ ಮತ್ತು ಕ್ರೋಧ ಇವುಗಳು ದ್ವೇಷದ ಸ್ಥೂಲರೂಪಗಳು.

**ಸುಖ**=ಬೇಕಾದುದು ಸಿಕ್ಕಿದಾಗ ಉಂಟಾಗುವ ಅನುಭವ ಮತ್ತು ಬೇಡವಾದುದು ದೂರವಾದಾಗ ಉಂಟಾಗುವ ಅನುಭವ–ಇದಕ್ಕೆ ಸುಖ ವೆಂದು ಹೆಸರು.

**ದುಃಖ** = ಬೇಕೆನ್ನಿಸಿದುದು ಸಿಕ್ಕದಿರುವಾಗ ಉಂಟಾಗುವ ಅನುಭವ, ಬೇಡವೆನಿಸಿದುದು ಬಂದೊದಗಿದಾಗ ಉಂಟಾಗುವ ಅನುಭವ. ಇದಕ್ಕೆ ದುಃಖ ಎಂದು ಹೆಸರು. ಈ ರಾಗ-ದ್ವೇಷಗಳ ವಿಕಾರಗಳು ಕ್ರಮವಾಗಿ ಸುಖ-ದುಃಖಗಳು.

**ಸಂಘಾತಃ**= ದೇಹೇಂದ್ರಿಯಗಳು ಒಟ್ಟಾಗಿ ಸೇರಿದ ಗುಂಪಿಗೆ ಸಂಘಾತ ಎಂದು ಹೆಸರು.

**ಚೇತನಾ**=ಚಿತ್ತ. ಇದು ಅಂತಃಕರಣದಲ್ಲಿರುವ ಜ್ಞಾನಶಕ್ತಿ. ಇದರ ಮೂಲಕವೇ ಮನುಷ್ಯನು ಸುಖ-ದುಃಖಗಳನ್ನೂ ಸಮಸ್ತಪದಾರ್ಥಗಳ ಅನುಭವಗಳನ್ನೂ ಪಡೆದುಕೊಳ್ಳುತ್ತಾನೆ. ಸಂತಜ್ಞಾನೇಶ್ವರರ ವಿವರಣೆ ಯಂತೆ : ಪೂರ್ಣಚಂದ್ರೋದಯದಂದು ಸಮುದ್ರವು ಉಕ್ಕುವುದು. ಲೋಹಚುಂಬಕದ ಸಾನ್ನಿಧ್ಯದಿಂದ ಜಡಲೋಹವು ಚೇತನಗೊಳ್ಳುವುದು. ಸೂರ್ಯಪ್ರಕಾಶವು ಜನರ ಕರ್ಮಗಳಿಗೆ ಕಾರಣವಾಗುವುದು. ಸ್ಪರ್ಶವಿಲ್ಲದೇ ಕೇವಲದೃಷ್ಟಿಕ್ಷೇಪದಿಂದ ಆಮೆಯು ತನ್ನ ಮರಿಗಳನ್ನು ರಕ್ಷಿಸುವುದು. ಅದರಂತೆ ಈ ಶರೀರದೊಳಗಿನ ಆತ್ಮವು ಚಿತ್ತದ ಚೇತನೆಯ ಮೂಲಕ ಉಪ ಯೋಗಿಸಲ್ಪಡುವುದು. ಇಂತಹ ಜ್ಞಾನಶಕ್ತಿಗೆ ಚೇತನಾ ಎಂದು ಹೆಸರು.

ಧೃತಿ-ಎಂದರೆ ಧೈರ್ಯ. ಸುಖ-ದುಃಖಗಳು ಬಂದಾಗ ಶರೀರ ಮತ್ತು ಇಂದ್ರಿಯಗಳು ಕದಲದೇ ಧರಿಸುವಂತೆ ಮಾಡುವ ಧರ್ಮಕ್ಕೆ ಧೃತಿ ಎಂದು ಹೆಸರು. ಇದೂ ಸಹ ಅಂತಃಕರಣದ ಒಂದು ವಿಕಾರವೇ ಆಗಿದೆ.

**ಲೋಭಶೋಕಭಯಾದಿಜನಿತೋಪಪ್ಲವನಿವಾರಣಕಾರಿಣೀ ಭೂತಶ್ಚಿತ್ತವೃತ್ತಿವಿಶೇಷೋ ಧೃತಿಃ**

ಲೋಭ, ಶೋಕ, ಭಯ–ಇತ್ಯಾದಿಗಳಿಂದ ಉಂಟಾದ ಮನೋವ್ಯಾಕುಲತೆಯ ನಿವಾರಣೆಗೆ ಕಾರಣಭೂತವಾದ ಚಿತ್ತವೃತ್ತಿವಿಶೇಷವೇ ಧೃತಿಯು.

ಧೃತಿಗೆ ಸಂತಜ್ಞಾನೇಶ್ವರರ ವಿವರಣೆಯು ಗಮನಾರ್ಹವಾಗಿದೆ. ಹುಟ್ಟಿದಾಗಿನಿಂದಲೇ ಮಹಾಭೂತಗಳಲ್ಲಿ ಪರಸ್ಪರ ವೈರವುಂಟು. ಜಲವು ಪೃಥ್ವಿಯನ್ನು ನಾಶಗೊಳಿಸುವುದು. ತೇಜಸ್ಸು ಜಲವನ್ನು ಶೋಷಿಸುವುದು. ವಾಯುವು ತೇಜಸ್ಸನ್ನು ನುಂಗುವುದು. ಆಕಾಶವು ವಾಯುವನ್ನು ನುಂಗು ವುದು. ಆಕಾಶವು ಯಾವ ಕಾಲದಲ್ಲಾದರೂ ತಾನು ಸ್ವಲ್ಪವೂ ಲಿಪ್ತವಾಗದೇ ಎಲ್ಲ ಪದಾರ್ಥಗಳನ್ನೂ ವ್ಯಾಪಿಸಿ ಮತ್ತೆ ಬೇರೆಯಾಗಿರುವುದು. ಹೀಗೆ ಸ್ವಭಾವ ವೈರವುಳ್ಳ ಈ ಐದು ಭೂತಗಳೂ ದೇಹದಲ್ಲಿ ಒಗ್ಗಟ್ಟಿನಿಂದ ಕೂಡಿಕೊಂಡು ಬಾಳುವುವು. ಅಷ್ಟೇ ಅಲ್ಲ. ಪೂರ್ವವೈರವನ್ನು ಬದಿಗಿರಿಸಿ ಒತ್ತಟ್ಟಿಗೆ ವಾಸಿಸುತ್ತಾ ತಮ್ಮ-ತಮ್ಮ ಗುಣಗಳಿಂದ ಪರಸ್ಪರಪೋಷಣೆಯು ಆಗುವಂತೆ ಸಹಕರಿಸುವುವು. ಹೀಗೆ ಕೂಡದಂತಹ ಮೈತ್ರಿಯು ಯಾವುದರ ಸಾಮರ್ಥ್ಯದ ಮೇಲೆ ಕೂಡುವುದೋ ಆ ಧೈರ್ಯಕ್ಕೆ ಧೃತಿ ಎಂದು ಹೆಸರು.

ಇವಿಷ್ಟೂ ಸಹ ಜ್ಞೇಯಗಳೇ ಆಗಿರುವುದರಿಂದ ಕ್ಷೇತ್ರಕ್ಕೇ ಸೇರಿದುವುಗಳಾಗಿವೆ.)

O O O

ವೈಶೇಷಿಕರು ಇಚ್ಛೆ ಮುಂತಾದ ಯಾವ ಗುಣಗಳನ್ನು ಆತ್ಮಗುಣಗಳು ಎಂದು ಕರೆಯುತ್ತಾರೆಯೋ ಅವೂ ಕೂಡ ಕ್ಷೇತ್ರಧರ್ಮಗಳೇ ಆಗಿವೆ. ಕ್ಷೇತ್ರಜ್ಞನ ಧರ್ಮಗಳಲ್ಲ ಎಂದು ಭಗವಂತನು ಇಲ್ಲಿ ಹೇಳುತ್ತಾನೆ. ಜ್ಞೇಯ ವಾದುದೆಲ್ಲವೂ ಕ್ಷೇತ್ರ.

ಯಾವ ಬಗೆಯ ಸುಖಕರವಾದ ವಿಷಯವನ್ನು ಅನುಭವಿಸಿದ್ದು ಮತ್ತೆ

ಅದೇ ಪದಾರ್ಥವು ದೊರಕಿದಾಗ ಸುಖದ ಕಾರಣವನ್ನು ತಿಳಿದು ಮನುಷ್ಯನು ಅದನ್ನು ತೆಗೆದುಕೊಳ್ಳಲು ಇಷ್ಟಪಡುತ್ತಾನೆಯೋ–ಆ ಬಯಕೆಗೆ ಇಚ್ಛಾ ಎಂದು ಹೆಸರು. ಇದೂ ಜ್ಞೇಯ, ಅಂತಃಕರಣಧರ್ಮ. ದ್ವೇಷ-ಯಾವುದಾದರೊಂದು ಪದಾರ್ಥವನ್ನು ದುಃಖಕ್ಕೆ ಕಾರಣವೆಂದು ಅನುಭವಿಸಿದ್ದು ಮತ್ತೆ ಅದೇ ಜಾತಿಯ ಪದಾರ್ಥವು ಬಂದಾಗ ಅದನ್ನು ಮನುಷ್ಯನು ದ್ವೇಷಿಸುತ್ತಾನೆ. ಆ ಭಾವಕ್ಕೆ ದ್ವೇಷ ಎಂದು ಹೆಸರು. ಇದೂ ಜ್ಞೇಯ.

ಹಾಗೆಯೇ ಅನುಕೂಲವೂ, ಪ್ರಸನ್ನತಾರೂಪವೂ, ಸಾತ್ತ್ವಿಕವೂ ಆದುದು ಸುಖ. ಇದೂ ಜ್ಞೇಯ. ಹಾಗೆಯೇ ಪ್ರತಿಕೂಲತಾರೂಪವಾದ ದುಃಖವೂ ಜ್ಞೇಯ. ಸಂಘಾತ ಎಂದರೆ ದೇಹೇಂದ್ರಿಯಗಳ ಸಮೂಹ. ಅದರಲ್ಲಿ ಪ್ರಕಾಶಿತವಾಗಿರುವ ಅಂತಃಕರಣವೃತ್ತಿಯು ಚೇತನಾ ಎನಿಸುತ್ತದೆ. ಅಗ್ನಿಯಲ್ಲಿ ಪ್ರಜ್ವಲಿತವಾದ ಲೋಹಪಿಂಡದಂತೆ ಆತ್ಮಚೈತನ್ಯದ ಆಭಾಸರೂಪವಾದ ರಸದಿಂದ ಇದು ವ್ಯಾಪ್ತವಾಗಿದೆ. ಇದೂ ಜ್ಞೇಯ.

**ಧೃತಿಃ** = ವ್ಯಾಕುಲಗೊಂಡಿರುವ ಶರೀರೇಂದ್ರಿಯಾದಿಗಳು ಯಾವುದ ರಿಂದ ಧರಿಸಲ್ಪಟ್ಟಿವೆಯೋ ಅದು ಧೃತಿ. ಇದೂ ಜ್ಞೇಯ. ಇವುಗಳೆಲ್ಲವೂ ಜ್ಞೇಯಗಳೇ ಆಗಿರುವುದರಿಂದ ಕ್ಷೇತ್ರ ಎನಿಸುತ್ತವೆ. ಹೀಗೆ ಮಹತ್ತತ್ತ್ವದಿಂದ ಆರಂಭವಾದ ವಿಕಾರಗಳೊಡನೆ ಸೇರಿದ ಕ್ಷೇತ್ರದ ಸ್ವರೂಪವನ್ನು ಸಂಕ್ಷೇಪ ವಾಗಿ ಹೇಳಿಯಾಗಿದೆ. (ಶಂ. ಭಾ.)

ಇಚ್ಛೆ, ದ್ವೇಷ, ಸುಖ, ದುಃಖ–ಇವು ಕ್ಷೇತ್ರದ ಕಾರ್ಯಗಳಾದುದರಿಂದ ಕ್ಷೇತ್ರದ ವಿಕಾರಗಳು ಎನಿಸುತ್ತವೆ. ಇವು ಆತ್ಮಧರ್ಮಗಳೇ ಆಗಿದ್ದರೂ ಆತ್ಮ ನಿಗೆ ಕ್ಷೇತ್ರಸಂಬಂಧದಿಂದ ಉಂಟಾಗಿರುವುದರಿಂದ ಕ್ಷೇತ್ರದ ಕಾರ್ಯಗಳಾ ಗಿದ್ದು ಕ್ಷೇತ್ರದ ವಿಕಾರ ಎಂದು ಕರೆಯಲ್ಪಡುತ್ತವೆ. ಇವುಗಳು ಪುರುಷಧರ್ಮ ಗಳೆಂಬುದನ್ನು ಮುಂದೆ ೨೦ನೇ ಶ್ಲೋಕದಲ್ಲಿ ಭಗವಂತನು ಹೇಳುತ್ತಾನೆ. **ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ।** ಧೃತಿ ಎಂದರೆ ಆಧಾರ. ಸುಖ-ದುಃಖಗಳನ್ನು ಅನುಭವಿಸುತ್ತಿರುವ ಮತ್ತು ಭೋಗಾಪ ವರ್ಗಗಳನ್ನು ಸಾಧಿಸುವ ಚೇತನನಿಗೆ ಆಧಾರಕ್ಕಾಗಿ ಉತ್ಪನ್ನವಾದುದು. **ಭೂತಸಂಘಾತವು** ಹೀಗೆ ವಿಕಾರಸಹಿತವಾದುದರಿಂದ ಕಾರ್ಯಸಹಿತವಾದ ಕ್ಷೇತ್ರವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. (ರಾ. ಭಾ.)

ಆರನೇ ಶ್ಲೋಕದಲ್ಲಿ ಹೇಳಿರುವ ಇಚ್ಛಾ ಮುಂತಾದುವು ವಿಕಾರಗಳು. ಅದಕ್ಕೆ ಹಿಂದೆ ಹೇಳಿರುವುಗಳು ಕ್ಷೇತ್ರ. (ಮ. ಭಾ.)

ಕ್ಷೇತ್ರದ ವಿವರಣೆಯನ್ನು ಕೊಟ್ಟನಂತರ ಶ್ರೀಕೃಷ್ಣನು ಕ್ಷೇತ್ರಜ್ಞನನ್ನು ಅರಿಯುವ ಜ್ಞಾನವನ್ನು ಮೊದಲು ವರ್ಣಿಸುತ್ತಾನೆ.

**ಓಂ ಅಮಾನಿತ್ವಮದಮ್ಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥೭॥**

ಅಮಾನಿತ್ವ (ಅಭಿಮಾನಿಯಾಗದಿರುವಿಕೆ), ಅದಂಭಿತ್ವ (ದಾಂಭಿಕನಾಗದಿರುವಿಕೆ) ಅಹಿಂಸೆ, ಕ್ಷಾಂತಿ, ಋಜುತ್ವ, ಆಚಾರ್ಯನ ಉಪಾಸನೆ, ಶೌಚ, ಸ್ಥೈರ್ಯ, ಮನೋನಿಗ್ರಹ, (ಏತಜ್ಜ್ಞಾನಮಿತಿಪ್ರೋಕ್ತಂ=ಇದಕ್ಕೆ ಜ್ಞಾನವೆಂದು ಹೆಸರು.)

* * *

(ಇನ್ನುಮುಂದೆ ಶ್ರೀಕೃಷ್ಣನು ಜ್ಞಾನಿಯ ಲಕ್ಷಣಗಳನ್ನು ಹೊಗಳುತ್ತಾನೆ. ಇವು ಪಾಂಡಿತ್ಯದಿಂದ ಲಭ್ಯವಾಗುವ ಗುಣಗಳಲ್ಲ. ಅಭ್ಯಾಸದಿಂದ ಮಾತ್ರವೇ ಸಾಧಿಸಬಹುದಾಗಿರತಕ್ಕ ಗುಣಗಳು. ಜ್ಞಾನಿಯಾದವನಿಗೆ ಮಾತ್ರವೇ ಈ ಗುಣಗಳಿರಲು ಸಾಧ್ಯ ; ಅಥವಾ ಜ್ಞಾನಿಯಾಗಬೇಕಾದರೆ ಈ ಗುಣಗಳನ್ನೂ ಸಂಪಾದಿಸಬೇಕು.

**ಅಮಾನಿತ್ವಂ**= ಮಾನಿಯಾಗದೇ ಇರುವಿಕೆ. ಮಾನ-ಮರ್ಯಾದೆಗಳನ್ನು ಬಿಟ್ಟವನು. ಇಂತಹವನು ದುರ್ಗುಣಿಯೂ ಆಗುತ್ತಾನೆ. ಜ್ಞಾನಿಯೂ ಆಗುತ್ತಾನೆ. 'ಅವನೇನು? ಮಾನ-ಮರ್ಯಾದೆ ಎರಡನ್ನೂ ಬಿಟ್ಟಿದ್ದಾನೆ'– ಎಂದು ದುಷ್ಟನ ವಿಷಯದಲ್ಲಿ ಹೇಳುತ್ತೇವೆ. ದುಷ್ಟನು ಮಾನ-ಮರ್ಯಾದೆಗಳನ್ನು ಉಲ್ಲಂಘಿಸಿ ಯಾವುದೋ ಇಚ್ಛೆಯ ಪೂರಣಕ್ಕಾಗಿ ಕೆಟ್ಟಮಾರ್ಗದಲ್ಲಿ ಹೋಗುತ್ತಾನೆ. ಇಲ್ಲವನು ಹದ್ದುಮೀರಿ ನಡೆಯುವವನು ಎಂದಾಗುತ್ತದೆ. ಜ್ಞಾನಿಯ ವಿಷಯದಲ್ಲಿನ ಅಮಾನಿತ್ವವು ಅಂತಹುದಲ್ಲ. ಯಾವುದೇ ಕಾರಣದಿಂದಲೂ ಇವನು ಸಮಾಜದ ಮರ್ಯಾದೆಯನ್ನು ಉಲ್ಲಂಘಿಸಿ ನಡೆಯುವವನಲ್ಲ. ಅಪಮಾನವಾಗತಕ್ಕ ಕಾರ್ಯವನ್ನೂ ಮಾಡ

ತಕ್ಕವನಲ್ಲ. ಆದರೆ ತನ್ನ ಮಾನವು ಇಷ್ಟೆಂದು ಅಳತೆಗೋಲಿನಿಂದ ಅಳೆದು ಕೊಂಡಿರತಕ್ಕವನೂ ಅಲ್ಲ. ತನಗೆ ಇಂತಹುದೇ ಮರ್ಯಾದೆಯು ಸಮಾಜ ದಲ್ಲಿ ಸಿಕ್ಕಬೇಕೆಂದೂ ಆಶಿಸತಕ್ಕವನಲ್ಲ. ಜ್ಞಾನಿಗೆ 'ತಾನು' ಎಂಬ ಭಾವನೆಯೇ ಸಂಪೂರ್ಣವಾಗಿ ಅಳಿಸಿಹೋಗಿರುತ್ತದೆ. 'ಪರಮಾತ್ಮನೇ ಎಲ್ಲವನ್ನೂ ಮಾಡಿಸುತ್ತಾನೆ. ನಾನು ಸೂತ್ರದ ಗೊಂಬೆಯಂತೆ ಮಾತ್ರವೇ ಇದ್ದೇನೆ'– ಎಂಬುದನ್ನು ಚೆನ್ನಾಗಿ ಮನಸ್ಸಿನಲ್ಲಿ ದೃಢಪಡಿಸಿಕೊಂಡು ತಾನು ಯಾವುದೇ ಅಗಾಧವಾದ ಕಾರ್ಯಮಾಡುತ್ತಿದ್ದರೂ ಸಹ 'ನಾನು ಮಾಡಿದೆನು' ಎಂದು ಅಪ್ಪಿ-ತಪ್ಪಿಯೂ ಹೇಳುವುದಿಲ್ಲ. ಭಾವಿಸುವುದೂ ಇಲ್ಲ. 'ನಾನು' ಎಂಬುದನ್ನು ಸಂಪೂರ್ಣವಾಗಿ ತೊರೆದವನಿಗೆ 'ಮಾನ' ಎಂಬುದು ಹತ್ತಿರಕ್ಕೂ ಸುಳಿಯುವುದಿಲ್ಲ. ಹೀಗೆ ಆತ್ಮಶ್ಲಾಘನೆಯು ಇಲ್ಲದಿರುವಿಕೆಗೆ ಅಮಾನಿತ್ವ ಎಂದು ಹೆಸರು.

ಅದಮ್ಭಿತ್ವಂ= ದಾಂಭಿಕತ್ವವು ಇಲ್ಲದಿರುವಿಕೆ. ಪೂಜೆ, ತಪಸ್ಸು, ನಿತ್ಯ-ನೈಮಿತ್ತಿಕಕರ್ಮಗಳು, ದಾನ–ಇತ್ಯಾದಿಗಳೆಲ್ಲವನ್ನೂ ಮಾಡುವುದು ಆತ್ಮಸಂಸ್ಕಾರಕ್ಕಾಗಿ. ಇದಕ್ಕೆ ಸಂಬಂಧಿಸಿರುವವರೆಂದರೆ ಪೂಜಕ ಮತ್ತು ಪೂಜ್ಯ ಇಬ್ಬರು ಮಾತ್ರವೇ. ಮೂರನೆಯವರಿಗೆ ಅಲ್ಲಿ ಅವಕಾಶವೇ ಇಲ್ಲ. ದಾನವನ್ನು ಒಂದು ಕೈಯಿಂದ ಕೊಟ್ಟರೆ ಅದು ಮತ್ತೊಂದು ಕೈಗೆ ತಿಳಿಯಬಾರದೆಂದು ಹಿರಿಯರು ಹೇಳುತ್ತಾರೆ. ಆದರೆ ದಾನ, ಪೂಜೆ, ತಪಸ್ಸು ಇವುಗಳನ್ನು ಪ್ರತಿಷ್ಠೆಗಾಗಿ ಮಾಡಿದಾಗ ದಾಂಭಿಕಗಳೆನಿಸಿಕೊಳ್ಳುತ್ತವೆ. ತಾನು ಮಾಡಿದ ದಾನದ ಜಾಹಿರಾತನ್ನು ಪತ್ರಿಕೆಗಳಲ್ಲಿ ಹಾಕಿಸಬಯಸುತ್ತಾನೆ. ಪೂಜಕನು ತನ್ನ ಪೂಜೆಯ ವೈಶಿಷ್ಟ್ಯವನ್ನು ಜನರಿಗೆ ತೋರಿಸಲು ಬಯಸುತ್ತಾನೆ. ತಪಸ್ವಿಯು ದಾಂಭಿಕನಾದಲ್ಲಿ ತಾನು ಗಳಿಸಿದ್ದ ಅಲ್ಪಸ್ವಲ್ಪ ತಪಸ್ಸಿನ ಮಹಿಮೆಯನ್ನು ಪ್ರದರ್ಶಿಸಲು ಇಚ್ಛಿಸುತ್ತಾನೆ. ಇವುಗಳೆಲ್ಲವೂ ಕೇವಲ ಪ್ರತಿಷ್ಠೆಗಾಗಿ ನಡೆಯುತ್ತವೆ. ಅರಿಯದ ಜನರು ತಾತ್ಕಾಲಿಕವಾಗಿ ಈ ದಾಂಭಿಕನಿಗೆ ಮರ್ಯಾದೆತೋರಿಸಿದರೂ, ಅದರಿಂದವನು ಆರ್ಥಿಕವಾಗಿ ಪ್ರಯೋ ಜನವನ್ನು ಹೊಂದಿದರೂ, ದಾನಮಾಡಿದ ಕೀರ್ತಿಯೇ ಲಭಿಸಿದರೂ ಅವನಿಗೆ ಪಾರಮಾರ್ಥಿಕವಾದ ಪ್ರಯೋಜನವೇನೂ ಆಗುವುದಿಲ್ಲ. ಪೂಜೆ, ತಪಸ್ಸುಗಳು ಏಕಾಂತವಾಗಿರಬೇಕು. ದೇವರನ್ನು ಮೆಚ್ಚಿಸುವ ಏಕೈಕವಾದ

ಉದ್ದೇಶದಿಂದ ಇವುಗಳನ್ನು ಮಾಡಬೇಕೇ ಹೊರತು ಅದರಿಂದ ಕೀರ್ತಿಯನ್ನು ಗಳಿಸಲು ಯತ್ನಿಸಬಾರದು. ದಾನಕೊಡುವುದು ಕರ್ತವ್ಯ. ಕೊಟ್ಟುದನ್ನು ಮರೆಯಬೇಕು. ತಾನು ಇಂತಹ ದಾನಕೊಟ್ಟೆನೆಂದು ತಾನೇ ಅದನ್ನು ಪುನಃ ಸ್ಮರಣೆಮಾಡಿಕೊಳ್ಳಲೂಬಾರದು. 'ನಾನು ಕೊಟ್ಟೆನು' ಎಂದು ನಾಲ್ಕುಬಾರಿ ಹೇಳಿದರೆ ದಾಂಭಿಕತ್ವವು ತಿಳಿಯದಂತೆಯೇ ಮನಸ್ಸನ್ನು ಆವರಿಸಿಕೊಳ್ಳುತ್ತದೆ.

ಅದಾಂಭಿಕತೆಯ ಗುಣವುಳ್ಳವನು ತಾನು ಮಾಡಿದ ಸತ್ಕರ್ಮಗಳನ್ನು ಯಾವುದೇ ಕಾರಣದಿಂದಲೂ ಪ್ರಕಟಿಸುವುದಿಲ್ಲವೆಂಬುದಕ್ಕೆ ಸಂತಜ್ಞಾನೇಶ್ವರರು ಮನದಟ್ಟಾಗುವ ನಾಲ್ಕಾರು ಉದಾಹರಣೆಗಳನ್ನು ಕೊಟ್ಟಿರುತ್ತಾರೆ. ಜಿಪುಣನಾದವನು ಜೀವಹೋಗುವ ಸಮಯಬಂದರೂ ತನ್ನ ಬಳಿಯಲ್ಲಿರುವ ಧನಸಂಗ್ರಹವನ್ನು ಪ್ರಕಟಿಸದಂತೆ–ವೇಶ್ಯೆಯು ತನ್ನ ಮುಪ್ಪನ್ನು ಮುಚ್ಚಿಕೊಳ್ಳುವಂತೆ–ಅರಣ್ಯದಲ್ಲಿ ಸಿರಿವಂತನನ್ನು ಕಳ್ಳರು ಹಿಂಬಾಲಿಸಿದಾಗ ಅವನು ತನ್ನ ಸಿರಿವಂತಿಕೆಯನ್ನು ಮುಚ್ಚಿಕೊಳ್ಳುವಂತೆ–ಕುಲವಧುವು ಮರ್ಯಾದೆಯಿಂದ ತನ್ನ ಅವಯವಗಳನ್ನು ಮುಚ್ಚಿಕೊಳ್ಳುವಂತೆ–ಅದಾಂಭಿಕನು ತನ್ನಿಂದಾದ ದಾನ-ಧರ್ಮ ಮುಂತಾದ ಪುಣ್ಯಕರ್ಮಗಳನ್ನು ಗುಪ್ತವಾಗಿರಿಸುವನು. ಜ್ಞಾನಿಗೆ ದಾಂಭಿಕತೆಯು ಹತ್ತಿರವೂ ಸುಳಿಯುವುದಿಲ್ಲ. ಏಕೆಂದರೆ : ಅವನು ಪ್ರಪಂಚದ ಗೌರವ, ಅರ್ಥ–ಮುಂತಾದುವುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿಬಿಟ್ಟಿರುತ್ತಾನೆ. ಪ್ರಾಪಂಚಿಕವಾದ ಆನಂದಗಳೆಲ್ಲಕ್ಕೂ ಹೆಚ್ಚಿನದಾದ ಆತ್ಮಾನಂದವನ್ನು ಅವನು ಪಡೆದುಕೊಂಡುಬಿಟ್ಟಿರುತ್ತಾನೆ. ಆದುದರಿಂದ ತನ್ನ ಸತ್ಕರ್ಮಗಳನ್ನು ಪ್ರದರ್ಶಿಸಿ ಹೊಗಳಿಕೆಗೆ ಪಾತ್ರನಾಗಬೇಕೆಂಬ ಆಸೆಯು ಅವನಲ್ಲಿ ಇರಲು ಸಾಧ್ಯವಿಲ್ಲ.

ಅಹಿಂಸಾ=ಹಿಂಸೆ ಇಲ್ಲದ್ದು ಅಹಿಂಸೆ ಎಂದು ಸುಲಭವಾಗಿ ಅರ್ಥಮಾಡಬಹುದಾದರೂ 'ಹಿಂಸೆ ಎಂದರೆ ಯಾವುದು? ಅದರ ಸ್ವರೂಪವೇನು?'–ಮುಂತಾದುವುಗಳನ್ನು ನಿರೂಪಿಸುವುದು ಕಷ್ಟಸಾಧ್ಯವೇ ಸರಿ. ಯಾವ ಪ್ರಾಣಿಗೇ ಆದರೂ ಮನಸ್ಸಿನಿಂದಲೂ, ಮಾತಿನಿಂದಲೂ ಮತ್ತು ಶರೀರದ ಮೂಲಕವಾಗಿಯೂ ಕಷ್ಟಕೊಡದಿರುವುದು ಅಹಿಂಸೆ. ಮನಸ್ಸಿನಿಂದಲೂ ಸಹ ಯಾವ ಪ್ರಾಣಿಗೂ ಕೇಡನ್ನು ಬಯಸಬಾರದು. ಪ್ರಾಣಿಯ ಮನಸ್ಸು

ನೋಯುವ ರೀತಿಯಲ್ಲಿ ಮಾತನಾಡಬಾರದು. ಶರೀರದ ಮೂಲಕವಾಗಿ ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಇವು ಅಹಿಂಸೆಯ ಸಾಮಾನ್ಯ ನಿಯಮಗಳು.

**ಕ್ಷಾನ್ತಿಃ** = ಸಹನೆ, ಸೈರಣೆ, ತಾಳ್ಮೆ. ಶಕ್ತಿಯಿದ್ದರೂ ಇತರರಿಂದ ಆದ ಅಪಕಾರಕ್ಕೆ ಪ್ರತೀಕಾರಮಾಡದೆ ಸೈರಿಸುವುದು. ನಮ್ಮ ತಾಳ್ಮೆಯನ್ನು ಪರೀಕ್ಷಿಸುವ ಅನೇಕಸಂದರ್ಭಗಳು ಒದಗುತ್ತವೆ. ಅತಿಯಾದ ಕಷ್ಟವು ಪ್ರಾಪ್ತವಾಗುತ್ತದೆ. ಸದ್ಬೋಧೆಯನ್ನು ನಮ್ಮವರೇ ಕೇಳುವುದಿಲ್ಲ. ಧರ್ಮಕ್ಕೆ ವಿರೋಧವಾಗಿ ವರ್ತಿಸುತ್ತಾರೆ. ಅಂತಹ ಸಂದರ್ಭಗಳಲ್ಲಿ ಕ್ಷಮೆ ಎಂಬುದು ಮುಖ್ಯವಾಗಿ ಬೇಕಾಗುತ್ತದೆ. **ಕ್ಷಮಯಾ ಧರಿತ್ರೀ**–ಕ್ಷಮಾಗುಣಕ್ಕೆ ಭೂದೇವಿಯನ್ನು ಉದಾಹರಿಸುತ್ತಾರೆ. ಭೂಮಿಯು ನಾವು ಮಾಡುವ ಅಸಂಖ್ಯಾತವಾದ ಪಾಪಕಾರ್ಯಗಳಿಗೆ (ಅದರ ಮೇಲೆ ಮಲ-ಮೂತ್ರ ವಿಸರ್ಜನೆಮಾಡಿದರೂ) ಪ್ರತಿಕ್ರಿಯೆಯನ್ನು ತೋರಿಸುವುದಿಲ್ಲ. ಈ ರೀತಿಯ ಗುಣವು ಕ್ಷಾಂತಿ.

**ಆರ್ಜವಮ್**–ಸರಳತೆ, ಪ್ರಾಮಾಣಿಕತೆ, ವಂಚನೆಯಿಲ್ಲದಿರುವುದು–ಇತ್ಯಾದಿಗಳು ಇದಕ್ಕೆ ಅರ್ಥ. ಸತ್ಯವನ್ನು ಕಂಡ ಅಥವಾ ಸತ್ಯಾನ್ವೇಷಿಯಾದ ಇವನಿಗೆ ಋಜುತ್ವವು ಸ್ವಭಾವಗುಣವಾಗಿರುತ್ತದೆ. ಇವನು ಸತ್ಯದೊಡನೆ ಸತ್ಯಸ್ವರೂಪನಾದ ಪರಮಾತ್ಮನೊಡನೆ ವ್ಯವಹಾರವಿಟ್ಟುಕೊಂಡಿರತಕ್ಕವನು. ಆದುದರಿಂದ ಲೋಕದಲ್ಲಿಯೂ ಇವನ ವ್ಯವಹಾರವು ನೇರವಾಗಿರಬೇಕು. ವ್ಯವಹಾರದಲ್ಲಿ ವಕ್ರತೆಯಿರುವುದಿಲ್ಲ. ವಕ್ರಮಾರ್ಗದಿಂದ ಸತ್ಯಾನ್ವೇಷಣೆ ಯಾಗುವುದಿಲ್ಲ. ಯಾವಾಗಲೂ ಭಗವನ್ಮಾರ್ಗದಲ್ಲೇ ಸಂಚರಿಸುವ ಇವನಿಗೆ ಅಂತರಂಗ-ಬಹಿರಂಗಗಳು ಒಂದೇ ಆಗಿರುವುವು. ಹಿಂದೊಂದು-ಮುಂದೊಂದು ಹೇಳುವ ಸ್ವಭಾವವು ಇವನದಾಗಿರುವುದಿಲ್ಲ. ಇದ್ದುದನ್ನು ಇದ್ದಂತೆ ಹೇಳುವ ಇವನಿಗೆ ಅಪ್ರಾಮಾಣಿಕತೆ, ವಂಚನೆ ಎಂಬುವುಗಳು ಬಹಳ ದೂರವಾಗಿಯೇ ಉಳಿಯುವುವು. ಸರಳಜೀವಿ. ಆಡಂಬರವಿಲ್ಲದೇ ಇರುತ್ತಾನೆ. ಪರಮಾತ್ಮನೇ ತನ್ನ ಪ್ರಭುವೆಂದು ಭಾವಿಸಿ ಅವನ ಸಾನ್ನಿಧ್ಯವನ್ನು ಪಡೆಯಲು ಅನವರತವೂ ಪ್ರಯತ್ನಿಸುವ ಇವನು ಸ್ವಭಾವತಃ ಸರಳ ಜೀವಿಯೇ ಆಗಿರುತ್ತಾನೆ. ಇವನ ಹೃದಯವು ಸ್ಫಟಿಕದಂತೆ ಶುದ್ಧವಾಗಿರುತ್ತದೆ.

ಆಚಾರ್ಯೋಪಾಸನಂ=ಆಚಾರ್ಯ ಎಂದರೆ ಉಪಾಧ್ಯಾಯ. ಉಪನಯನಮಾಡಿ ಸಾಂಗವೇದಾಧ್ಯಯನವನ್ನು ಮಾಡಿಸುವ ಗುರು ; ಮಂತ್ರೋಪದೇಶಮಾಡುವ ಗುರು.

**ಉಪನೀಯ ತು ಯಃ ಶಿಷ್ಯಂ ವೇದಮಧ್ಯಾಪಯೇದ್ದ್ವಿಜಃ ।**
**ಸಾಙ್ಗಂ ಚ ಸರಹಸ್ಯಂ ಚ ತಮಾಚಾರ್ಯಂ ಪ್ರಚಕ್ಷತೇ ।**

ಮನು ೨-೧೪೦

**ಆಚಿನೋತಿ ಹಿ ಶಾಸ್ತ್ರಾರ್ಥಂ ಆಚಾರೇ ಸ್ಥಾಪಯತ್ಯಪಿ ।**
**ಸ್ವಯಮಾಚರತೇ ಯಸ್ಮಾತ್ತಸ್ಮಾದಾಚಾರ್ಯ ಉಚ್ಯತೇ ॥**

ಶಾಸ್ತ್ರಾರ್ಥಗಳನ್ನು ವಿವರಿಸಿ ತಾನೂ ಶಾಸ್ತ್ರಾನುಗುಣವಾಗಿ ನಡೆದುಕೊಂಡು ಜನರಿಗೆ ಮಾರ್ಗದರ್ಶಿಯಾಗಿರುವವನು ಆಚಾರ್ಯ.

ಇಂತಹ ಆಚಾರ್ಯರ ಉಪಾಸನೆಯು, ದೇವತೋಪಾಸನೆ ಅಥವಾ ಬ್ರಹ್ಮೋಪಾಸನೆಯಂತೆಯೇ–ಎಂದು ಶ್ರೀಕೃಷ್ಣನಿಲ್ಲಿ ಹೇಳಿದ್ದಾನೆ.

ದೇವಮಿವಾಚಾರ್ಯಮುಪಾಸೀತ–ಎಂದು ಶ್ರುತಿಯೂ ಸಾರುತ್ತದೆ.

ಸಂತಜ್ಞಾನೇಶ್ವರರು ಆರಾಧನಾಕ್ರಮವನ್ನು ರೂಪಕಾಲಂಕಾರದಲ್ಲಿ ಹೇಳಿದ್ದಾರೆ :

ಜ್ಞಾನರೂಪವಾದ ನೆಲಗಟ್ಟಿನ ಮೇಲೆ, ಶುದ್ಧಚಿತ್ತವೆಂಬ ಮಂದಿರದಲ್ಲಿ, ಉಪಾಸನಾದೈವವಾದ ಗುರುಮೂರ್ತಿಯನ್ನು ಸ್ಥಾಪಿಸಿ ಧ್ಯಾನಾಮೃತದ ಅಭಿಷೇಕವನ್ನು ಮಾಡಬೇಕು. ಜ್ಞಾನಸೂರ್ಯನು ಉದಯಿಸಿದೊಡನೆಯೇ ತನ್ನ ಬುದ್ಧಿರೂಪವಾದ ತಟ್ಟೆಯಲ್ಲಿ ಅಷ್ಟಸಾತ್ತ್ವಿಕಭಾವಗಳೆಂಬ ಕಮಲಗಳನ್ನು ತುಂಬಿ ಶ್ರೀ ಗುರುಮೂರ್ತಿಯ ಮೇಲೆ ಪುಷ್ಪವೃಷ್ಟಿಯನ್ನು ಮಾಡಬೇಕು. ಅವನ ಮುಂದೆ ಮೂರು ಕಾಲಗಳಲ್ಲಿಯೂ ಶುದ್ಧವಾತಾವರಣವನ್ನು ಕಲ್ಪಿಸಲು ಜೀವದಶಾರೂಪವಾದ ಧೂಪವನ್ನು ಸುಡಬೇಕು. ಜ್ಞಾನವೆಂಬ ದೀಪವನ್ನು ಬೆಳಗಿ ಐಕ್ಯಭಾವದ ನೈವೇದ್ಯವನ್ನು ಅಖಂಡವಾಗಿ ಅರ್ಪಿಸಬೇಕು.

**ತ್ವಂ ಪಿತಾ ತ್ವಂ ಚ ಮೇ ಮಾತಾ ತ್ವಂ ಬನ್ಧುಸ್ತ್ವಂ ಚ ದೈವತಮ್ ।**
**ಸಂಸಾರಪ್ರೀತಿಭಙ್ಗಾಯ ತುಭ್ಯಂ ಶ್ರೀಗುರವೇ ನಮಃ ॥**

ಎಂಬ ಮಂಗಳವನ್ನೂ ಹಾಡಬೇಕು. ಇದು ಗುರುವಿನ ಅಥವಾ ಆಚಾರ್ಯನ ಉಪಾಸನೆ.

ಶೌಚಂ = ಶುದ್ಧಿಮಾಡುವಿಕೆ. ಅಂತಃಶುದ್ಧಿ ಮತ್ತು ಬಹಿಃಶುದ್ಧಿ ಎಂದು ಅರ್ಥ. ನೀರು ಮುಂತಾದುವುಗಳಿಂದ ಶರೀರದ ಹೊರಗಿನ ಶುದ್ಧಿ ಯಾಗುತ್ತದೆ. ಶರೀರದ ಕೊಳೆಯನ್ನು ಮಾತ್ರ ತೊಳೆದುಹಾಕಿದರೆ ಸಾಲದು. ಇದು ಬ್ರಹ್ಮವಿದ್ಯಾಪ್ರಕರಣವಾದುದರಿಂದ ಇಲ್ಲಿ ಮುಖ್ಯವಾಗಿ ಆಗಬೇಕಾ ದುದು ಮಾನಸಿಕಶೌಚ. ಮನಸ್ಸಿನಲ್ಲಿರುವ ಕೊಳೆಯನ್ನೂ ತೆಗೆದುಹಾಕಬೇಕು. ಮನಸ್ಸು ಪರಿಶುದ್ಧವಾಗಬೇಕಾದರೆ ಸತ್ತ್ವಶುದ್ಧಿಯಾಗಬೇಕು. ಸತ್ತ್ವ ಶುದ್ಧಿಯಾಗಬೇಕಾದರೆ ಆಹಾರಶುದ್ಧಿಯಿರಬೇಕು. ಆಹಾರದ ಶುದ್ಧಿಗೆ ಸಂಪಾದನಾಕ್ರಮವು ನಿರ್ದುಷ್ಟವಾಗಿರಬೇಕು. ಮನಸ್ಸಿನಲ್ಲಿ ಹುಟ್ಟುವ ಕಲ್ಮಷ ಗಳೆಂದರೆ ಕಾಮ, ಕ್ರೋಧ, ಲೋಭ, ಮೋಹ–ಮುಂತಾದುವುಗಳೇ ಆಗಿವೆ. ಅವುಗಳನ್ನು ಮನಸ್ಸಿನಿಂದ ತೆಗೆದುಹಾಕಬೇಕು. ಆಗಲೇ ಮನಸ್ಸು ಶುದ್ಧಿ ಯಾಗುತ್ತದೆ. ಅಧ್ಯಾತ್ಮಸಾಧನೆಗೆ ಮನಃಶುದ್ಧಿಯೇ ಮೆಟ್ಟಿಲಾಗಿರುತ್ತದೆ. ಅಂತರಂಗಶುದ್ಧಿ ಅಥವಾ ಮನಃಶುದ್ಧಿಯಿಲ್ಲದೇ ಮಾಡಿದ ಸತ್ಕಾರ್ಯಗಳೆ ಲ್ಲವೂ ವ್ಯರ್ಥವಾಗುತ್ತವೆಂದು ಸಾದೃಶ್ಯದೊಡನೆ ಜ್ಞಾನೇಶ್ವರರು ನಿರೂಪಿಸಿ ದ್ದಾರೆ. ಹೆಂಡದ ಮಡಕೆಯ ಮೇಲೆ ಗಂಗಾಜಲವನ್ನು ಪ್ರೋಕ್ಷಿಸಿದರೆ ಹೆಂಡಕ್ಕೆ ಪರಿಶುದ್ಧಿಯುಂಟಾಗುತ್ತದೆಯೇ? ವಿಷಬೀಜಕ್ಕೆ ಬೆಲ್ಲವನ್ನು ಮೆತ್ತಿದರೆ ವಿಷವು ಹೋಗುವುದೇ? ಕಳಸಕ್ಕೆ ಬಂಗಾರದ ಹೊಳಪನ್ನು ಕೊಟ್ಟಮಾತ್ರಕ್ಕೆ ಒಳಗಿರುವ ಹಿತ್ತಾಳೆಯ ಗುಣವು ವ್ಯತ್ಯಾಸವಾಗುವುದೇ?

ಇವುಗಳಂತೆ ಕೇವಲ ಬಾಹ್ಯಕರ್ಮಗಳಿಂದ ಅಂತರಂಗಶುದ್ಧಿಯಾಗುವು ದಿಲ್ಲ. ಆದುದರಿಂದ ಶೌಚ ಎಂದರೆ ಮನಃಶುದ್ಧಿ ಮತ್ತು ದೇಹಶುದ್ಧಿ.

ಸ್ಥೈರ್ಯಂ=ಪರಮಾತ್ಮನನ್ನು ಕಾಣಬೇಕೆಂಬ ಸ್ಥಿರವಾದ ಮನಸ್ಸಿನಿಂದ ಕೂಡಿರುವುದು ಸ್ಥೈರ್ಯ. ಈ ಹಾದಿಯಲ್ಲಿ ಅನೇಕವಿಧವಾದ ಎಡರು-ತೊಡರುಗಳು ಬಂದೇ ಬರುತ್ತವೆ. ಹಾದಿಯು ಅಷ್ಟೇನೂ ಸುಗಮವಲ್ಲ. ಎಂತಹ ಸಂದರ್ಭದಲ್ಲಿಯೂ ಧೈರ್ಯಗೆಡದೇ ಸ್ಥಿರವಾದ, ದೃಢವಾದ ಮನಸ್ಸನ್ನು ಇಟ್ಟುಕೊಳ್ಳಬೇಕು. ಆದುದರಿಂದ ಸ್ಥೈರ್ಯವೂ ಸಹ ಪರಮಾತ್ಮ ಪ್ರಾಪ್ತಿಗೆ ಒಂದು ಮೆಟ್ಟಲಾಗಿದೆ.

**ಆತ್ಮವಿನಿಗ್ರಹಃ** = ಆತ್ಮ ಎಂದರೆ ಮನಸ್ಸು. ಇದರ ನಿಗ್ರಹವೆಂದರೆ ಮನೋನಿಗ್ರಹ. ಅಧ್ಯಾತ್ಮಸಾಧನೆಗೆ ಮನೋನಿಗ್ರಹವೇ ಬಹಳ ಮುಖ್ಯವಾದುದು. **ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ ।**

ಸಂಸಾರಬಂಧನಕ್ಕಾಗಲೀ, ಮೋಕ್ಷಸಾಧನೆಗಾಗಲೀ ಮನುಷ್ಯನಿಗೆ ಮನಸ್ಸೇ ಮುಖ್ಯವಾದ ಕಾರಣವಾಗಿರುತ್ತದೆ. ಆದುದರಿಂದ ಜ್ಞಾನಸಾಧಕನು ಮನಸ್ಸನ್ನು ಸಂಪೂರ್ಣವಾಗಿ ತನ್ನ ಹತೋಟಿಯಲ್ಲಿಟ್ಟುಕೊಳ್ಳಬೇಕು. ಅಧ್ಯಾತ್ಮಸಾಧಕನು ತನ್ನ ಮನೋವೃತ್ತಿಯನ್ನು ನಿತ್ಯವೂ ನಿಯಂತ್ರಿಸುವನು. ಇಂದ್ರಿಯಗಳತ್ತ ಹೋಗಗೊಡುವುದಿಲ್ಲ. ಇದಕ್ಕೆ ಆತ್ಮವಿನಿಗ್ರಹ ಎಂದು ಹೆಸರು.)

o o o

**ಅಮಾನಿತ್ವಂ**=ಆತ್ಮಶ್ಲಾಘನೆಯು ಇಲ್ಲದಿರುವಿಕೆ. **ಅದಮ್ಭಿತ್ವಂ**=ತನ್ನ ಧರ್ಮವನ್ನು ಪ್ರಕಟಿಸದೇ ಇರುವಿಕೆ. **ಅಹಿಂಸಾ**=ಪ್ರಾಣಿಗಳಿಗೆ ಕಷ್ಟಕೊಡದೇ ಇರುವಿಕೆ. **ಕ್ಷಾನ್ತಿಃ** = ಇತರರು ಅಪರಾಧಮಾಡಿದಾಗ ವಿಕಾರವಿಲ್ಲದೇ ಇರುವಿಕೆ.

**ಆರ್ಜವಂ**=ಋಜುಭಾವ. ವಕ್ರತೆ ಇಲ್ಲದಿರುವಿಕೆ. **ಆಚಾರ್ಯೋಪಾಸನಂ**=ಮೋಕ್ಷಸಾಧನವನ್ನು ಉಪದೇಶಮಾಡುವ ಆಚಾರ್ಯನನ್ನು ಶುಶ್ರೂಷೆ ಮುಂತಾದುವುಗಳ ಮೂಲಕ ಸೇವಿಸುವುದು.

**ಶೌಚಂ**=ಶರೀರದ ಮಲಗಳನ್ನು ಮಣ್ಣು-ನೀರುಗಳಿಂದಲೂ, ಮನಸ್ಸಿನ ರಾಗವೇ ಮುಂತಾದ ಮಲಗಳನ್ನು ಪ್ರತಿಪಕ್ಷಭಾವನೆಯಿಂದಲೂ (ಯಾವ ದೋಷವನ್ನು ದೂರಮಾಡಬೇಕಾಗಿದೆಯೋ ಅದಕ್ಕೆ ವಿರೋಧಿಯಾದ ಗುಣವನ್ನು ಭಾವಿಸಿಕೊಳ್ಳುವುದು ಪ್ರತಿಪಕ್ಷಭಾವನೆ) ತೊಳೆಯುವುದು.

**ಸ್ಥೈರ್ಯಂ**=ಸ್ಥಿರಭಾವ ; ಮೋಕ್ಷಮಾರ್ಗದಲ್ಲಿಯೇ ನಿಶ್ಚಯಮಾಡಿಕೊಳ್ಳುವಿಕೆ.

**ಆತ್ಮವಿನಿಗ್ರಹಃ** =ಆತ್ಮನಿಗೆ ಅಪಕಾರಮಾಡುವ ಮತ್ತು ಆತ್ಮ ಎಂದು ಹೇಳಲ್ಪಡುವ ಕಾರ್ಯ-ಕಾರಣಗಳ ಸಂಘಾತರೂಪವಾದ ಶರೀರವನ್ನು ನಿಗ್ರ

ಹಿಸುವಿಕೆ ; ತನ್ನ ಸ್ವಭಾವದಂತೆ ಎಲ್ಲ ಕಡೆಗಳಲ್ಲಿಯೂ ತೊಡಗುವ ಅದನ್ನು ಸನ್ಮಾರ್ಗದಲ್ಲಿ ಬಂಧಿಸುವಿಕೆ. (ಶಂ. ಭಾ.)

**ಅಮಾನಿತ್ವಂ** = ಉತ್ಕೃಷ್ಟಜನರನ್ನು ತಿರಸ್ಕರಿಸದೇ ಇರುವಿಕೆ.

**ಅದಮ್ಭಿತ್ವಂ** = ಧಾರ್ಮಿಕ ಎಂಬ ಕೀರ್ತಿಯು ಬರಲೆಂದು ಧರ್ಮಾನುಷ್ಠಾನಮಾಡುವುದು ದಂಭ. ಅದು ಇಲ್ಲದೇ ಇರುವಿಕೆ.

**ಅಹಿಂಸಾ** = ವಾಕ್ಕು-ಮನಸ್ಸು-ಕಾರ್ಯಗಳಿಂದ ಪರಪೀಡೆಯನ್ನು ಮಾಡದೇ ಇರುವಿಕೆ.

**ಕ್ಷಾನ್ತಿಃ** = ಪರರು ಪೀಡಿಸಿದರೂ ಅವರಲ್ಲಿ ಚಿತ್ತವಿಕಾರಗೊಳ್ಳದೇ ಇರುವಿಕೆ.

**ಆರ್ಜವಂ**=ಇತರರ ವಿಷಯದಲ್ಲಿ ವಾಕ್ಕು, ಮನಸ್ಸು ಮತ್ತು ಕಾರ್ಯಗಳು ಏಕರೂಪವಾಗಿರುವಿಕೆ.

**ಆಚಾರ್ಯೋಪಾಸನಂ**= ಆತ್ಮಜ್ಞಾನವನ್ನು ದಯಪಾಲಿಸುವ ಆಚಾರ್ಯನನ್ನು ನಮಸ್ಕಾರ, ಪರಿಪ್ರಶ್ನೆ–ಮುಂತಾದ ರೀತಿಯಲ್ಲಿ ಸೇವಿಸುವುದರಲ್ಲಿ ತೊಡಗಿರುವಿಕೆ.

**ಶೌಚಂ**=ಆತ್ಮಜ್ಞಾನ ಮತ್ತು ಅದಕ್ಕೆ ಸಾಧನವಾಗಿರುವ ಯೋಗ್ಯತೆ. ಮನಸ್ಸು, ವಾಣಿ ಮತ್ತು ಶರೀರಕ್ಕೆ ಸಂಬಂಧಪಟ್ಟಿದ್ದು. ಶಾಸ್ತ್ರಸಿದ್ಧವಾದ ತ್ರಿಕರಣಗಳ ಶುದ್ಧಿ.

**ಸ್ಥೈರ್ಯಂ** = ಅಧ್ಯಾತ್ಮಶಾಸ್ತ್ರವು ಹೇಳಿದ ವಿಷಯದಲ್ಲಿ ನಿಶ್ಚಲತ್ವ.

**ಆತ್ಮವಿನಿಗ್ರಹಃ** = ಆತ್ಮಸ್ವರೂಪವ್ಯತಿರಿಕ್ತವಾದ ವಿಷಯಗಳಿಂದ ಮನಸ್ಸನ್ನು ತಡೆಯುವಿಕೆ. (ರಾ. ಭಾ.)

**ಸ ಚ ಯೋ ಯತ್ಪ್ರಭಾವಶ್ಚ** ಎಂದು ಹೇಳಿದ್ದನ್ನು ವಿವರಿಸಲು ಜ್ಞಾನದ ಸಾಧನಗಳನ್ನು ಇಲ್ಲಿ ಹೇಳಿದೆ.

**ದಮ್ಭ** = ಎಂದರೆ ತನ್ನ ಕಾರ್ಯದ ಅಲ್ಪತ್ವವು ತಿಳಿದಿದ್ದರೂ ಕೂಡ ಅದು ಮಹತ್ತ್ವವುಳ್ಳದ್ದೆಂದು ಪ್ರದರ್ಶಿಸುವಿಕೆ.

ಆರ್ಜವಂ=ಮನಸ್ಸು-ವಾಣಿ-ಕರ್ಮಗಳು ಪರಸ್ಪರವಿರೋಧವಿಲ್ಲದೇ ಇರುವಿಕೆ. (ಮ. ಭಾ.)

**ಓಂ ಇನ್ದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥೮॥**

ಇಂದ್ರಿಯವಿಷಯಗಳಲ್ಲಿ ವೈರಾಗ್ಯವು ಮತ್ತು ಅಹಂಕಾರವಿಲ್ಲದೇ ಇರುವಿಕೆ. ಹುಟ್ಟು, ಸಾವು, ಮುಪ್ಪು, ರೋಗ ಮತ್ತು ದುಃಖಗಳಲ್ಲಿ ದುಃಖ-ದೋಷಗಳನ್ನು ಕಾಣುವುದು.

* * *

(**ಇನ್ದ್ರಿಯಾರ್ಥಗಳು**=ಎಂದರೆ ಇಂದ್ರಿಯಗಳಿಗೆ ಆಕರ್ಷಕವಾದ ವಿಷಯಗಳು–ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು. ಇವುಗಳಲ್ಲಿ ವೈರಾಗ್ಯ ವಿರುವುದು. ಇಂದ್ರಿಯಾರ್ಥಗಳನ್ನು ಅನುಭವಿಸಿ ತೃಪ್ತನಾದವನು ಯಾರೂ ಇಲ್ಲ. ಇಂದ್ರಿಯಸುಖಗಳನ್ನು ಅನುಭವಿಸಿದಷ್ಟೂ ಇನ್ನೂ ಅನುಭವಿಸಬೇಕು ಎನ್ನಿಸುತ್ತಲೇ ಇರುತ್ತದೆ. **ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ**–ಕಾಮನೆಗಳ ಉಪಭೋಗದಿಂದ ಕಾಮವು ಎಂದಿಗೂ ಉಪ ಶಮನಹೊಂದುವುದಿಲ್ಲ. ಆದುದರಿಂದ ಇಂದ್ರಿಯಾರ್ಥಗಳಲ್ಲಿ ವೈರಾಗ್ಯ ಹೊಂದುವುದೇ ಅವುಗಳನ್ನು ದೂರವಿಡಲು ಸರಿಯಾದ ಮಾರ್ಗ. ಇಂದ್ರಿ ಯಾರ್ಥಗಳನ್ನು ಎಂದರೆ ವಿಷಯಸುಖಗಳನ್ನು ಅನುಭವಿಸುತ್ತಾ ಸಂಸಾರ ಬಂಧನದಲ್ಲಿ ಬಿದ್ದು ತೊಳಲುತ್ತಿರುವವರನ್ನು ನಾವು ನಮ್ಮ ಸುತ್ತಲೂ ಕಾಣು ತ್ತಿದ್ದೇವೆ. ಅನೇಕವಿಧವಾದ ಎಡರು-ತೊಡರುಗಳು, ಮಾನಾಪಮಾನಗಳು, ಅರ್ಥಹಾನಿ–ಇವುಗಳಾವುದನ್ನೂ ಲೆಕ್ಕಿಸದೇ ಮನುಷ್ಯನು ವಿಷಯಸುಖ ಗಳನ್ನು ಪಡೆದುಕೊಳ್ಳಲು ಕಾತರಪಡುತ್ತಿರುತ್ತಾನೆ. ಇಂದ್ರಿಯಸುಖವೆಂಬ ವಿಷಚಕ್ರದಲ್ಲಿ ಸಿಕ್ಕಿದವರ ಪಾಡೆಲ್ಲವೂ ಹೀಗೆಯೇ. ಬಿಡಿಸಿಕೊಳ್ಳುವುದಕ್ಕೆ ಸಾಧ್ಯವಾಗದ ವಿಷಮಚಕ್ರವದು. ಅದರೊಳಗೆ ಸಿಕ್ಕಿ ಬಿಡಿಸಿಕೊಳ್ಳಲು ಕಷ್ಟ ಪಡುವುದಕ್ಕಿಂತಲೂ ಮೊದಲಿನಿಂದಲೂ ವಿಷಯಸುಖಗಳಲ್ಲಿ ವೈರಾಗ್ಯವನ್ನು ತಾಳುವುದೇ ಉತ್ತಮವಾದ ಮಾರ್ಗ. ಕೊಚ್ಚೆಯನ್ನು ತುಳಿದು ಕಾಲು ತೊಳೆದುಕೊಳ್ಳಲು ಯತ್ನಿಸುವುದಕ್ಕಿಂತಲೂ ಕೊಚ್ಚೆಯನ್ನು ತುಳಿಯದಂತೆ ಎಚ್ಚರಿಕೆವಹಿಸುವುದೇ ಉತ್ತಮವಲ್ಲವೇ?

**ಅನಹಂಕಾರ ಏವ ಚ** = ಆತ್ಮಾನಾತ್ಮವಿವೇಕವಿಲ್ಲದವನು, ದೇಹಾತ್ಮ ಭಾವವುಳ್ಳವನು. 'ನಾನು ಈ ಕೆಲಸ ಮಾಡಿದೆ. ನಾನು ಅವನಿಗೆ ಉಪಕಾರ ಮಾಡಿದೆ'–ಮುಂತಾಗಿ ಹೇಳಿಕೊಳ್ಳುತ್ತಾನೆ. ಅನ್ನ, ಅರ್ಥ, ಜನ, ವಿದ್ಯೆ ಮುಂತಾದ ನಾನಾಕಾರಣಗಳಿಂದ ಈ ಗರ್ವವು ಬರಬಹುದು. ಈ ಅಹಂಕಾರವು ಆತ್ಮಸಾಧನೆಗೆ ಹೆಚ್ಚು ಅಡಚಣೆಯನ್ನುಂಟುಮಾಡುತ್ತದೆ.

'ವಿದ್ಯಾ ದದಾತಿ ವಿನಯಂ' ಎಂಬ ಉಕ್ತಿಯಂತೆ ವಿದ್ಯೆಯು ವಿನಯವನ್ನು ಕೊಡಬೇಕು. ಆದರೆ ಅಧ್ಯಾತ್ಮವಿದ್ಯೆಯನ್ನು ಅಭ್ಯಾಸಮಾಡುವ ವೇದಾಂತಿಗಳೂ ಕೂಡ ಅಹಂಕಾರವೆಂಬ ಪಿಶಾಚಗ್ರಸ್ತರಾಗಿರುವುದನ್ನು ನೋಡುತ್ತೇವೆ. ಆ ವ್ಯಾಸಂಗದ ಫಲವಾದ ಆತ್ಮಾನಾತ್ಮವಿವೇಕ ಮತ್ತು ಅಹಂಕಾರತ್ಯಾಗಗಳು ಉಂಟಾಗಬೇಕಾಗಿದ್ದರೂ ಅವರು ಪರಮತಖಂಡನೆ ಮುಂತಾದುವುಗಳಲ್ಲಿಯೇ ಕಾಲಕ್ಷೇಪಮಾಡುತ್ತಾರೆ. ವೇದಾಂತವು ಕೇವಲ ವೇದಾಂತವಾಗಿ ಉಳಿದಿದೆ. ಆದರೆ ಅಧ್ಯಾತ್ಮಸಾಧನೆಗೆ ಈ ಅಹಂಕಾರತ್ಯಾಗವು ಅನಿವಾರ್ಯವಾದ ಒಂದು ಮುಖ್ಯಗುಣ.

**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್** = ಹುಟ್ಟು, ಮುಪ್ಪು, ರೋಗ, ದುಃಖ–ಇವು ಯಾವ ಮನುಷ್ಯನಿಗೂ ತಪ್ಪಿದ್ದಲ್ಲ. ಈ ಚಕ್ರದಲ್ಲಿ ಪ್ರತಿಯೊಬ್ಬನೂ ಸಿಕ್ಕಿ ನರಳಲೇಬೇಕಾಗುತ್ತದೆ. ಈ ಐದೂ ದೋಷ ಗಳು. ಇವುಗಳಲ್ಲಿ ಪ್ರತಿಯೊಂದೂ ದೋಷಯುಕ್ತವಾದುದು–ಎಂದು ಭಾವಿಸಿ ಆ ದೋಷವನ್ನು ಪದೇ ಪದೇ ಸ್ಮರಿಸುತ್ತಿದ್ದರೆ ವೈರಾಗ್ಯಕ್ಕೆ ಸಹಾಯವಾಗುತ್ತದೆ. ಯಾವಾಗ ಸ್ಮರಿಸಬೇಕು? ಸ್ಮರಿಸುವ ಕಾಲ ಯಾವುದು? ಹುಟ್ಟಿದೊಡನೆಯೇ ಈ ವಿಧವಾಗಿ ಯೋಚಿಸುವ ಸಾಧ್ಯತೆಯಿಲ್ಲ.

ಮಗುವು ಹೊಟ್ಟೆಯಲ್ಲಿರುವಾಗ 'ವಿಣ್ಮೂತ್ರಾಮೇಧ್ಯಗಳ ಮಧ್ಯೆ ಇರುವೆ ನಲ್ಲಾ'-ಎಂದು ಗೋಳಿಡುತ್ತಿರುತ್ತದೆಯಂತೆ. ಹೊರಬಂದು ಭೂಸ್ಪರ್ಶವಾದ ನಂತರ ಅದಕ್ಕೆ ಹಿಂದಿನದೆಲ್ಲವೂ ಮರೆತೇ ಹೋಗುವುದಂತೆ. ಸಾಮಾನ್ಯವಾಗಿ ಯೌವನವು ಪ್ರಾಪ್ತವಾಗುವವರೆಗೂ ಜನ್ಮ-ಮೃತ್ಯು-ಜರಾ-ವ್ಯಾಧಿ-ದುಃಖ ಗಳು ದೋಷಗಳೆಂದು ಮನಗಾಣಲು ಸಾಧ್ಯವಾಗುವುದಿಲ್ಲ. ಯುವಕನಾದಾಗ ಸ್ವಲ್ಪ ವಿವೇಚಿಸಿದರೆ ಇದನ್ನು ಮನಗಾಣಬಹುದು. ಹೇಗೆಂದರೆ : ಆ ವೇಳೆಗೆ

ಅನೇಕ ವೃದ್ಧರನ್ನೂ, ಮುಪ್ಪಿನಿಂದ ಅವರು ಪಡುವ ಸಂಕಷ್ಟಗಳನ್ನೂ ಅವನು ಕಂಡಿರುತ್ತಾನೆ. ವಿವೇಚಿಸುವ ಸಾಮರ್ಥ್ಯವು ಅವನಿಗೆ ಬಂದಿರುತ್ತದೆ. ಆದರೆ ಹೀಗೆ ಪ್ರತ್ಯಕ್ಷದರ್ಶನದಿಂದ ವೈರಾಗ್ಯವುಂಟಾಗುವುದು ಅಪರೂಪ. ಮುಪ್ಪನ್ನು ನೆನೆದು ಮನುಷ್ಯನು ಅದರಲ್ಲಿ ದೋಷವೆಣಿಸುವುದರ ಬದಲು ತನ್ನ ಮುಪ್ಪನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುತ್ತಾನೆ. ಎಚ್ಚರಿಕೆ ವಹಿಸುತ್ತಾನೆ. ಕೂದಲುಗಳನ್ನು ಕಪ್ಪುಮಾಡಿಕೊಳ್ಳುತ್ತಾನೆ. ಯುವಕನಿಗಿಂತಲೂ ತಾನು ಸಮರ್ಥನೆಂಬುದನ್ನು ತೋರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಅದರಿಂದ ಪ್ರಯೋಜನವೇನೂ ಇಲ್ಲ. ಮುಪ್ಪು ಆಕ್ರಮಣಮಾಡಿಯೇ ತೀರುತ್ತದೆ.

ಅವೆಲ್ಲವನ್ನೂ ಇವನು ಅನುಭವಿಸಿಯೇ ತೀರಬೇಕಾಗುತ್ತದೆ. ಸಂತ ಜ್ಞಾನೇಶ್ವರರ ಮಾತಿನಲ್ಲಿ-ವೃದ್ಧಾಪ್ಯದಲ್ಲಿ ಆಷಾಢಮಾಸದಲ್ಲಿ ದನದ ಕಾಲು ಶೆಲೆತು ಕೊಳೆಯುವಂತೆ ಈ ಶರೀರದ ಸ್ಥಿತಿಯಾಗುವುದು. ಕಮಲದೊಂದಿಗೆ ಸ್ಪರ್ಧಿಸುವ ಕಣ್ಣುಗಳು ಹಣ್ಣಾದ ಪಡವಲಕಾಯಿಯಂತೆ ಕಳೆಗುಂದುವುವು. ಹುಬ್ಬುಗಳು ಒಣಗಿದ ತೊಗಟೆಯಂತೆ ಕೆಳಗಿರುವ ಕಣ್ಣುಗಳ ಮೇಲೆ ಜೋತಾಡುವುವು. ಕಣ್ಣೀರಿನ ಮಳೆಯಿಂದ ಎದೆಯು ತೊಳೆಯುವಂತಾಗು ವುದು. ಜೊಲ್ಲಿನಿಂದ ಬಾಯಿಯು ಜಿಗುಟಾಗುವುದು. ಮೂಗಿನಿಂದ ಯಾವಾ ಗಲೂ ನೀರಿನ ಗುಳ್ಳೆಗಳು ಹೊರಬರುವುವು. ಸುಂದರವಾಗಿದ್ದ ಮುಖದಿಂದ ಜೊಲ್ಲು ತೆರೆತೆರೆಯಾಗಿ ಪ್ರವಹಿಸುವುದು. ಬಾಯಿಯೊಳಗಿನ ಹಲ್ಲುಗಳೆಲ್ಲಾ ದವಡೆ-ವಸಡುಗಳಿಂದ ಕಿತ್ತುಬೀಳುವುವು. ನಾಲಿಗೆಯು ಸರಿಯಾಗಿ ಹೊರಳು ವುದಿಲ್ಲ. ಕಿವಿಗಳು ಕಿವುಡಾಗುವುವು. ದೇಹವು ಮುದಿಮಂಗನಂತಾಗುವುದು. ಹೊಲದಲ್ಲಿನ ಹುಲ್ಲುಗೊಂಬೆಯು (ಬೆದರು ಗೊಂಬೆ) ಗಾಳಿಗೆ ಅಲ್ಲಾಡುವಂತೆ ಶರೀರವು ಯಾವಾಗಲೂ ತರತರನೆ ನಡುಗುತ್ತಿರುವುದು. ಕೈಗಳು ಡೊಂಕಾಗುವುವು. ಮಲ-ಮೂತ್ರದ್ವಾರಗಳು ಸೋರುವ ಪಾತ್ರೆ ಯಂತಾಗುವುವು. ಈ ಮುದುಕನು ಬೇಗ ಸಾಯಲಿ–ಎಂದು ಬೇರೆಯವರು ಹರಕೆಹೊರುವರು. ಆಪ್ತೇಷ್ಟರು ಬೇಸರಪಟ್ಟುಕೊಳ್ಳುವರು. ಹೆಂಗಸರು ಭೂತದರ್ಶನವಾದಂತೆ ಭಾವಿಸುವರು. ಮಕ್ಕಳು ಅಂಜುವರು. ಎಲ್ಲರಿಗೂ ಅಸಹ್ಯವೆನಿಸುವ ಸ್ಥಿತಿಯುಂಟಾಗುವುದು. ರಾತ್ರಿಯಲ್ಲಿ ಹೆಚ್ಚಾಗುವ ಕೆಮ್ಮಿ

ನಿಂದ ಮನೆಯವರಿಗೂ, ಪಕ್ಕದ ಮನೆಯವರಿಗೂ ನಿದ್ರೆಹತ್ತುವುದಿಲ್ಲ. 'ಈ ಮುದುಕನು ಇನ್ನೂ ಎಷ್ಟು ದಿವಸಗಳು ಕಾಡುವನೋ ಯಾರು ಬಲ್ಲರು?'–ಎಂದು ಎಲ್ಲರೂ ಅವನಿಗೂ ಕೇಳಿಸುವಂತೆಯೇ ಮೂದಲಿಸುವರು.

ಶ್ರೀಶಂಕರರ ಮಾತಿನಲ್ಲಿ :–

**ಅಙ್ಗಂ ಗಲಿತಂ ಪಲಿತಂ ಮುಣ್ಡಂ**
**ದಶನವಿಹೀನಂ ಜಾತಂ ತುಣ್ಡಮ್ ।**
**ವೃದ್ಧೋ ಯಾತಿ ಗೃಹೀತ್ವಾ ದಣ್ಡಂ**
**ತದಪಿ ನ ಮುಞ್ಚತ್ಯಾಶಾಪಿಣ್ಡಮ್ ॥**

(ಭಜಗೋವಿಂದಸ್ತೋತ್ರ)

ಅಂಗವು ಶಿಥಿಲವಾಗಿದೆ. ತಲೆಗೆ ನರೆಬಂದಿದೆ. ಹಲ್ಲುಗಳು ಉದುರಿ ಬೊಚ್ಚುಬಾಯಾಗಿದೆ. ದೊಣ್ಣೆಯನ್ನು ಊರಿಕೊಂಡು ಮುದುಕನು ನಡೆಯುತ್ತಾನೆ. ಆದರೂ ಅವನನ್ನು ಆಶೆಯ ಪಿಂಡವು ಬಿಡುವುದಿಲ್ಲ.

ಈ ದುರವಸ್ಥೆಯನ್ನು ಅಥವಾ ಮುಪ್ಪಿನ ದೋಷವನ್ನು ಯುವಕನಾಗಿದ್ದಾಗಲೇ ಮನಗಾಣಬೇಕು. ಇದನ್ನು ಪದೇ-ಪದೇ ಯೋಚಿಸುತ್ತಲೇ ಇರಬೇಕು. ಇದರಿಂದ ಅವನಿಗೆ ವೈರಾಗ್ಯವುಂಟಾಗುತ್ತದೆ. ದೇಹಾಭಿಮಾನವು ಕಡಿಮೆಯಾಗುತ್ತದೆ. ದೇಹವನ್ನು ಕೇವಲ ಕವಚ ಎಂದು ಭಾವಿಸುತ್ತಾನೆ. ಮುಂದೆ ಒದಗುವ ಮುಪ್ಪನ್ನೂ ಮತ್ತು ಸಾವನ್ನೂ ಕೂಡ ಧೈರ್ಯದಿಂದ ಎದುರಿಸುತ್ತಾನೆ. ಅದನ್ನು ದಾಟುವ ಪ್ರಯತ್ನವನ್ನು ಸತತವಾಗಿ ಮಾಡುತ್ತಾನೆ. ರೋಗಗಳನ್ನು ನಾವೇ ಅನುಭವಿಸಿ ಪಾಠ ಕಲಿಯುವುದು ಒಂದು ವಿಧಾನ. ಮತ್ತೊಬ್ಬರು ಅನುಭವಿಸುತ್ತಿರುವುದನ್ನು ನೋಡಿ ರೋಗದ ರಹಸ್ಯವನ್ನು ಗ್ರಹಿಸುವುದು ಉತ್ತಮವಾದ ಮತ್ತೊಂದು ವಿಧಾನ. ಈ ದೇಹಕ್ಕೆ ರೋಗ-ರುಜಿನಾದಿಗಳ ಬಾಧೆಗಳು ಇದ್ದೇ ಇರುತ್ತವೆ. ಈ ದೋಷವನ್ನೂ ಯುವಕನಾಗಿದ್ದಾಗಲೇ ಮನಗಾಣಬೇಕು. ಆಗ ಈ ನಶ್ವರಶರೀರದ ಮೇಲೆ ಜುಗುಪ್ಸೆಯುಂಟಾಗುತ್ತದೆ. ಮನಸ್ಸು ಅಧ್ಯಾತ್ಮಸಾಧನೆಯತ್ತ ಮನುಷ್ಯನನ್ನು ಒಯ್ಯುತ್ತದೆ. ಇವುಗಳಲ್ಲದೇ ಇತರ ಕಾರಣಗಳಿಂದಲೂ

ಸಂಸಾರವು ದುಃಖಮಯವಾಗಿದೆ. ಅದರ ಸ್ವಭಾವವೇ ಹಾಗೆ. ಇದನ್ನು ಮನಗಾಣಬೇಕು–ಎಂದು ಶ್ರೀಕೃಷ್ಣನು ಹೇಳುತ್ತಾನೆ.)

o o o

ಜನ್ಮಮೃತ್ಯು.... ದರ್ಶನಮ್ ।

ಹುಟ್ಟಿನಲ್ಲಿ ಗರ್ಭವಾಸ ಮತ್ತು ಯೋನಿಯ ಮೂಲಕ ಹೊರಬರುವ ದೋಷ, ಮೃತ್ಯುವಿನಿಂದ ಉಂಟಾಗುವ ದೋಷ, ಮುಪ್ಪಿನಲ್ಲಿ ಪ್ರಜ್ಞೆ-ಶಕ್ತಿ-ತೇಜಸ್ಸುಗಳು ಮಾಯವಾಗುವಿಕೆ ಮತ್ತು ತಿರಸ್ಕಾರಕ್ಕೆ ಪಾತ್ರರಾಗುವಿಕೆ ಎಂಬ ದೋಷ, ವ್ಯಾಧಿಗಳಲ್ಲಿ ತಲೆಯ ಬೇನೆ ಮುಂತಾದ ದೋಷ, ಹಾಗೆಯೇ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಮುಂತಾದ ದುಃಖಗಳಲ್ಲಿ ಎಂದರೆ ದುಃಖನಿಮಿತ್ತಗಳಲ್ಲಿ ದೋಷಗಳುಂಟೆಂಬುದನ್ನು ಆಲೋಚನೆಮಾಡುವಿಕೆ ಅಥವಾ ದುಃಖಗಳನ್ನೇ ದೋಷವೆಂದು ಆಲೋಚಿಸುವಿಕೆ.

ಜನ್ಮ ಮುಂತಾದುವುಗಳು ದುಃಖನಿಮಿತ್ತವಾಗಿರುವುದರಿಂದ ದುಃಖಗಳೇ ಹೊರತು ಜನ್ಮಾದಿಗಳು ಸ್ವರೂಪತಃ ದುಃಖವೇನೂ ಅಲ್ಲ. ಹೀಗೆ ಇವುಗಳಲ್ಲಿ ದುಃಖದೋಷಗಳನ್ನು ಆಲೋಚಿಸುವುದರಿಂದ ವಿಷಯಭೋಗಗಳಲ್ಲಿ ವೈರಾಗ್ಯವುಂಟಾಗುತ್ತದೆ. ಅದರಿಂದ ಕರಣಗಳಿಗೆ ಆತ್ಮಸಾಕ್ಷಾತ್ಕಾರಮಾಡಿಕೊಳ್ಳಬೇಕೆಂಬ ಪ್ರವೃತ್ತಿಯುಂಟಾಗುತ್ತದೆ.

ಹೀಗೆ ದೋಷಪರ್ಯಾಲೋಚನೆಯು ಜ್ಞಾನಕ್ಕೆ ಕಾರಣವಾಗುವುದರಿಂದ ಜ್ಞಾನ ಎಂದೇ ಕರೆಯಲ್ಪಟ್ಟಿದೆ. (ಶಂ. ಭಾ.)

ಇನ್ದ್ರಿಯಾರ್ಥೇಷು ವೈರಾಗ್ಯಂ = ಆತ್ಮವ್ಯತಿರಿಕ್ತವಾದ ಉಳಿದ ಎಲ್ಲ ವಿಷಯಗಳೂ ದೋಷಯುಕ್ತವಾದುವು–ಎಂದು ಅನುಸಂಧಾನಮಾಡುತ್ತಾ ಅವುಗಳಲ್ಲಿ ಜಿಹಾಸೆಹೊಂದುವಿಕೆ. ಅನಹಂಕಾರಃ = ದೇಹದಲ್ಲಿ ಆತ್ಮಾಭಿಮಾನವನ್ನು ತೊರೆಯುವಿಕೆ ಮತ್ತು ಆತ್ಮಕ್ಕೆ ಸಂಬಂಧಪಡದೇ ಇರುವ ಪದಾರ್ಥಗಳನ್ನು ಆತ್ಮೀಯ ಎಂದು ಭಾವಿಸುವ ಅಭಿಮಾನವನ್ನು ತೊರೆಯುವಿಕೆ. ಜನ್ಮ.... ದರ್ಶನಂ = ಮನುಷ್ಯನು ಸಶರೀರನಾಗಿದ್ದರೆ ಹುಟ್ಟು, ಸಾವು, ಮುಪ್ಪು, ರೋಗ ಮತ್ತು ದುಃಖರೂಪವಾದ ದೋಷವು ಅನಿವಾರ್ಯ– ಎಂದು ಅನುಸಂಧಾನಮಾಡುವಿಕೆ. (ರಾ. ಭಾ.)

**ಓಂ ಅಸಕ್ತಿರನಭಿಷ್ವಙ್ಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥೯॥**

ಮಕ್ಕಳು, ಹೆಂಡತಿ, ಮನೆ ಮುಂತಾದುವುಗಳಲ್ಲಿ ಅಸಕ್ತಿ (ಆಸಕ್ತಿಯಿಲ್ಲದೇ ಇರುವುದು), ತನ್ಮಯತೆಯಿಲ್ಲದೇ ಇರುವುದು ; ಪ್ರಾಪ್ತವಾದ ಇಷ್ಟಾನಿಷ್ಟಗಳಲ್ಲಿ ನಿತ್ಯವೂ ಸಮಚಿತ್ತನಾಗಿರುವುದು–ಇವುಗಳು ಜ್ಞಾನಪ್ರಾಪ್ತಿಗೆ ಸಾಧನೆಗಳು.

* * *

(ಅಸಕ್ತಿಃ–ಅಂಟಿಕೊಂಡಿಲ್ಲದಿರುವುದು.

ಅಭಿಷ್ವಙ್ಗಃ–ಪ್ರೀತಿ, ಅನುರಾಗ. ಅನಭಿಷ್ವಙ್ಗಃ = ಪ್ರೀತಿ ಅಥವಾ ಅನುರಾಗವಿಲ್ಲದೇ ಇರುವುದು. ಮಡದಿ, ಮಕ್ಕಳು ಮತ್ತು ಮನೆ–ಇವುಗಳಲ್ಲಿ ಅನುರಾಗವಿಲ್ಲದಿರುವುದು ಮತ್ತು ಇವುಗಳಿಗೆ ಅಂಟಿಕೊಳ್ಳದೇ ಇರುವುದು. ಮನುಷ್ಯನನ್ನು ಸಂಸಾರವೆಂಬ ಬಲೆಯಲ್ಲಿ ಹಾಕತಕ್ಕುವು ಮಡದಿ, ಮಕ್ಕಳು ಮತ್ತು ಮನೆ. ಕೆಲವು ಸಮಯಗಳಲ್ಲಿ ಇವುಗಳಿಗಾಗಿ ಮನುಷ್ಯನು ಪ್ರಾಣಬಿಡಲೂ ಕೂಡ ಸಿದ್ಧನಾಗುವನು. ಇವುಗಳಿಲ್ಲದಿದ್ದರೆ ಸಂಸಾರ ವೆಂಬುದೇ ಇಲ್ಲ. ಇವುಗಳಿಗಾಗಿಯೇ ಮನುಷ್ಯನು ಧರ್ಮ-ಕರ್ಮಗಳೆಲ್ಲ ವನ್ನೂ ಬಿಟ್ಟು ಕತ್ತೆಯಂತೆ ದುಡಿಯುತ್ತಾನೆ. ಆದರೆ ಈ ಪ್ರಕರಣದಲ್ಲಿ ಅವರ ನ್ನೆಲ್ಲಾ ಬಿಟ್ಟುಬಿಡಬೇಕೆಂದು ಹೇಳುವುದಿಲ್ಲ. ಅವುಗಳಿಗೆ ಅಂಟಿಕೊಳ್ಳಬೇಡ. ತಾವರೇ ಎಲೆಯ ಮೇಲಿನ ನೀರಿನಂತೆ ಅನಾಸಕ್ತಿಯಿಂದಿರಲು ಅಭ್ಯಸಿಸು. ಅವುಗಳ ಮೇಲೆ ಮಿತಿಮೀರಿದ ಅನುರಾಗಬೇಡ. ಅವುಗಳಲ್ಲಿಯೇ ಆಸಕ್ತ ನಾಗಬೇಡ. ಅವುಗಳನ್ನು ಮೀರಿಯೂ ಸಾಧಿಸಬೇಕಾದುದು ಬೇರೆ ಇದೆ–ಎಂಬುದನ್ನು ಮನಗಾಣು–ಎಂಬುದನ್ನು ಮಾತ್ರವೇ ಇಲ್ಲಿ ಹೇಳಿದೆ.

ಶ್ರೀಶಂಕರರೂ ಸಹ ಸಂಸಾರದ ವಿಷಯವಾಗಿ ಮನಮುಟ್ಟುವಂತೆ ಹೇಳಿದ್ದಾರೆ :

**ಕಾ ತೇ ಕಾನ್ತಾ ಕಸ್ತೇ ಪುತ್ರಃ**
**ಸಂಸಾರೋಽಯಮತೀವ ವಿಚಿತ್ರಃ ।**
**ಕಸ್ಯ ತ್ವಂ ವಾ ಕುತ ಆಯಾತಃ**
**ತತ್ತ್ವಂ ಚಿನ್ತಯ ನಾತಿಭ್ರಾನ್ತಃ ॥೬॥**

ಭಜಗೋವಿಂದಸ್ತೋತ್ರ

ನಿನ್ನ ಹೆಂಡತಿ ಯಾರು? ನಿನ್ನ ಮಗನಾರು? ಸಂಸಾರವೆಂಬುದು ಬಹಳ ವಿಚಿತ್ರವಾದುದು. ನೀನು ಯಾರವನು? ಎಲ್ಲಿಂದ ಬಂದವನು? ಹೆಚ್ಚು ಭ್ರಾಂತನಾಗದೇ ಈ ತತ್ತ್ವವನ್ನು ಪದೇ-ಪದೇ ಚಿಂತಿಸು.

ಧರ್ಮಶಾಲೆಯಲ್ಲಿ ಒಟ್ಟಾಗಿ ಸೇರಿದ ಜನಗಳಂತೆ ತನ್ನ ಸಂಸಾರದ ಮಡದಿ-ಮಕ್ಕಳನ್ನು ಜ್ಞಾನಿಯಾದವನು ಕಾಣುತ್ತಾನೆ–ಎಂದು ಜ್ಞಾನೇಶ್ವರರು ವಿವರಿಸುತ್ತಾರೆ.

**ಇಷ್ಟಾನಿಷ್ಟೋಪಪತ್ತಿಷು**=ಇಷ್ಟವೆಂದರೆ ಇಷ್ಟರಾದವರು, ಇಷ್ಟವಾದ ವಸ್ತು, ಇಷ್ಟವಾದ ವಿಷಯ, ಇಷ್ಟವಾದ ಘಟನೆ–ಇತ್ಯಾದಿಗಳು. ಅನಿಷ್ಟ ವೆಂದರೆ ಇಷ್ಟವಿಲ್ಲದವರು, ಇಷ್ಟವಿಲ್ಲದ ವಸ್ತು, ಇಷ್ಟವಿಲ್ಲದ ವಿಷಯ, ಇಷ್ಟ ವಿಲ್ಲದ ಘಟನೆ–ಇತ್ಯಾದಿಗಳು. ಇಷ್ಟಾನಿಷ್ಟಗಳು ಮನುಷ್ಯನಿಗೆ ಒಂದಾದ ಮೇಲೆ ಮತ್ತೊಂದು ಒದಗಬಹುದು. ಕೆಲವು ಸಮಯಗಳಲ್ಲಿ ಅನವರತ ವಾಗಿ ಇಷ್ಟವಾದುದೇ ಲಭಿಸಬಹುದು ಅಥವಾ ಅನಿಷ್ಟಪರಂಪರೆಯೇ ಬಂದು ಬಿಡಬಹುದು. ಇವುಗಳು ಯಾವಾಗ, ಹೇಗೆ ಬರುತ್ತವೆ–ಎಂಬುದನ್ನು ಊಹಿ ಸಲೂ ಸಾಧ್ಯವಾಗುವುದಿಲ್ಲ. ಇಷ್ಟವಾದುದು ಬಂದಾಗ ಸಾಮಾನ್ಯವಾಗಿ ಮನುಷ್ಯನು ಹಿಗ್ಗುತ್ತಾನೆ. ಅನಿಷ್ಟವು ಪ್ರಾಪ್ತವಾದಾಗ ಕೊರಗುತ್ತಾನೆ. ಜ್ಞಾನ ಮಾರ್ಗಾವಲಂಬಿಯು ಹಾಗೆ ಮಾಡಬಾರದು ಮತ್ತು ಇವುಗಳು ಕರ್ಮಗಳ ಫಲವಾಗಿ ಬಂದಿರುವುವು-ಎಂಬುದನ್ನು ಮನಗಾಣಬೇಕು. ಸರ್ವದಾ ಒಂದೇ ಸಮನಾದ ಸಮಾಧಾನದ ಬುದ್ಧಿಯಿಂದ ಇರಬೇಕು. ಸೂರ್ಯನು ಉದಯಿ ಸುವಾಗಲೂ (ಪ್ರವೃದ್ಧಿದೆಸೆಯಲ್ಲಿಯೂ) ಕೆಂಪುಬಣ್ಣದಿಂದ ಕೂಡಿದ್ದು ನಗು ತ್ತಿರುತ್ತಾನೆ. ಅಸ್ತಮಿಸುವಾಗಲೂ (ಕೆಳಕ್ಕೆ ಬಿದ್ದಾಗಲೂ) ಕೆಂಪುಬಣ್ಣದಿಂದ ಕೂಡಿದ್ದು ನಗುತ್ತಿರುತ್ತಾನೆ. ಹಾಗೆಯೇ ಸಾಧಕನು ಸಂಪತ್ತು-ವಿಪತ್ತು ಗಳಲ್ಲಿಯೂ, ಇಷ್ಟ-ಅನಿಷ್ಟಗಳಲ್ಲಿಯೂ ಸಮಬುದ್ಧಿಯಿಂದಿರಬೇಕು.)

O O O

**ಅಸಕ್ತಿಃ** = ಸಕ್ತಿ ಎಂದರೆ ಆಸಕ್ತಿಗೆ ಕಾರಣವಾದ ವಿಷಯಗಳಲ್ಲಿ ಪ್ರೀತಿ. ಅದು ಇಲ್ಲದೇ ಇರುವುದು ಅಸಕ್ತಿ.

**ಅನಭಿಷ್ವಙ್ಗಃ** = ಅಭಿಷ್ವಂಗ ಎಂದರೆ ವಿಶೇಷವಾದ ಆಸಕ್ತಿ-ಮೋಹ ದಿಂದ ವಿಷಯಗಳಲ್ಲಿ ಅನನ್ಯಭಾವವನ್ನು ಹೊಂದುವಿಕೆ. ಅದಿಲ್ಲದಿರುವುದು.

ಇನ್ನೊಬ್ಬನು ಸುಖಿಯೂ-ದುಃಖಿಯೂ ಆದರೆ ತಾನೇ ಸುಖೀ-ದುಃಖೀ ಎಂದು ಭಾವಿಸುವಿಕೆ. ಮತ್ತೊಬ್ಬನು ಬದುಕಿದರೆ-ಸತ್ತರೆ ತಾನೇ ಬದುಕಿದ್ದೇನೆ-ಸತ್ತಿದ್ದೇನೆ ಎಂದು ತಿಳಿಯುವಿಕೆ.

**ನಿತ್ಯಂ ಚ** = ಇಷ್ಟಗಳು ಒದಗಿದಾಗ ಹಿಗ್ಗದೇ ಇರುವಿಕೆ ; ಅನಿಷ್ಟವು ಒದಗಿದಾಗ ಕುಗ್ಗದೇ ಇರುವಿಕೆ. ಅವುಗಳನ್ನು ಸಮಭಾವದಿಂದ ನೋಡುವಿಕೆ. (ಶಂ. ಭಾ.)

**ಅಸಕ್ತಿಃ** = ಆತ್ಮಭಿನ್ನವಾದ ಎಲ್ಲ ಪರಿಗ್ರಹಗಳಲ್ಲಿಯೂ ಸಂಗವನ್ನು ತೊರೆಯುವಿಕೆ. **ಅನಭಿಷ್ವಙ್ಗಃ** = ಮಕ್ಕಳು, ಮಡದಿ, ಮನೆ–ಮುಂತಾದುವುಗಳಲ್ಲಿ ಶಾಸ್ತ್ರೀಯವಾದ ಕ್ರಮಗಳಿಗೆ ಅವರು ಸಾಧನವಾಗುವ ಪ್ರಕಾರಗಳಲ್ಲಲ್ಲದೇ ಬೇರೆ ರೀತಿಗಳಲ್ಲಿ ಅವರೊಡನೆ ಅಂಟಿಕೊಳ್ಳದೇ ಇರುವಿಕೆ.

**ನಿತ್ಯಂ ಚ...** = ಇಷ್ಟ-ಅನಿಷ್ಟ ಮುಂತಾದುವುಗಳು ಸಂಕಲ್ಪಗಳಿಂದ ಉಂಟಾಗುತ್ತವೆ. ಆದುದರಿಂದ ಅವುಗಳಲ್ಲಿ ಹರ್ಷೋದ್ವೇಗಗಳನ್ನು ಹೊಂದದೇ ಇರುವಿಕೆ. (ರಾ. ಭಾ.)

**ಸಕ್ತಿಃ** ಎಂದರೆ ಸ್ನೇಹ, ಆ ಸ್ನೇಹವೇ ಅತಿಪಕ್ವವಾದರೆ ಅಭಿಷ್ವಂಗ ಎನಿಸುತ್ತದೆ. **ಸ್ನೇಹಃ ಸಕ್ತಿಃ, ಏವಾತಿಪಕ್ವೋऽಭಿಷ್ವಙ್ಗ ಉಚ್ಯತೇ** (ಮ. ಭಾ.)

**ಓಂ ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥೧೦॥**

ಅನನ್ಯಯೋಗದ ಮೂಲಕವಾಗಿ ನನ್ನಲ್ಲಿ ಏಕನಿಷ್ಠೆಯಾದ ಭಕ್ತಿ, ಏಕಾಂತಸ್ಥಳದ ಸೇವನೆ ಮತ್ತು ಜನಸಮೂಹದಲ್ಲಿ ಸೇರಲು ಅಕ್ಕರೆಯಿಲ್ಲದೇ ಇರುವುದು–ಇವುಗಳು ಜ್ಞಾನಕ್ಕೆ ಸಾಧನಗಳು.

* * *

(ಅಧ್ಯಾತ್ಮಯೋಗಸಾಧಕನು ನನ್ನಲ್ಲಿ ಅನನ್ಯಯೋಗದಿಂದಿರುತ್ತಾನೆ. ಅನ್ಯಯೋಗ ಎಂದರೆ ಬೇರೆಯವರೊಡನೆ ಸೇರಿಕೊಳ್ಳುವುದು. ಕಂಡ-ಕಂಡ ದೇವತೆಗಳಿಗೆ ಕೈಮುಗಿಯುವುದು. ಜನಸಾಮಾನ್ಯರು ಹೀಗೆ ಮಾಡುತ್ತಾರೆ. ಆದರೆ ಜ್ಞಾನಿಯಾದವನು ಬೇರೊಬ್ಬ ದೇವತೆಯ ಬಳಿಗೆ ಹೋಗುವುದಿಲ್ಲ. ನನ್ನಲ್ಲಿಯೇ ಅನನ್ಯಯೋಗದಿಂದ ಇದ್ದುಬಿಡುತ್ತಾನೆ. ‘ವಾಸುದೇವನೇ

ಸರ್ವಸ್ವ : ಅವನೊಬ್ಬನೇ ದೇವತೆ. ನನಗೆ ಆಶ್ರಯಸ್ಥಾನನು ಅವನೇ'– ಎಂದು ದೃಢವಾಗಿ ನನ್ನೊಬ್ಬನನ್ನೇ ಹಿಡಿದುಕೊಳ್ಳುತ್ತಾನೆ. ಅವನ ಭಕ್ತಿಯು ಅವ್ಯಭಿಚಾರಿಣಿಯಾಗಿರುತ್ತದೆ. ಬೇರೆಯ ದೇವತೆಗಳ ಕಡೆಗೆ ಹರಿದು ಹೋಗುವುದಿಲ್ಲ. ಹಿಡಿದಿರುವ ಮಾರ್ಗದಿಂದ ಪಲ್ಲಟವಾಗುವುದಿಲ್ಲ.

**ವಿವಿಕ್ತದೇಶಸೇವಿತ್ವಂ** = ವಿವಿಕ್ತದೇಶಗಳೆಂದರೆ ಏಕಾಂತಸ್ಥಳಗಳು. ಶುದ್ಧ ವಾಗಿರುವ ಸ್ಥಳಗಳು. ಹಾವು-ಹಲ್ಲಿ ಮೊದಲಾದುವುಗಳಿಂದ ಶೂನ್ಯ ವಾಗಿರುವ ಸ್ಥಳಗಳು. ಸಾಮಾನ್ಯವಾಗಿ ನದಿಗಳ ತೀರಪ್ರದೇಶ, ಪರ್ವತದ ಗುಹೆಗಳು, ಜನಜಂಗುಳಿಯಿಲ್ಲದ ದೇವಾಲಯಪ್ರದೇಶಗಳು. ಇಂತಹ ಸ್ಥಳ ಗಳು ಜ್ಞಾನಪ್ರಾಪ್ತಿಗೆ ಸಹಾಯಕವಾಗುತ್ತವೆ. ಏಕಾಂತದಲ್ಲಿ ಪರಮಾತ್ಮನನ್ನು ಆರಾಧಿಸುವುದು; ಧ್ಯಾನಮಾಡುವುದು ಇವನಿಗೆ ಹಿತವಾಗುತ್ತದೆ.

**ಅರತಿರ್ಜನಸಂಸದಿ** = ಜನಜಂಗುಳಿಯಲ್ಲಿ ವಿಶೇಷವಾಗಿ ಸೇರುವ ಅಭಿಲಾಷೆಯು ಇವನಿಗಿರುವುದಿಲ್ಲ. ಯಾವಾಗಲೂ ಪ್ರಾಕೃತಜನರಿಂದ ದೂರವಾಗಿರಲು ಪ್ರಯತ್ನಿಸುತ್ತಾನೆ. ಆದರೆ ನಿಃಸಂಗತ್ವಕ್ಕೆ ಕಾರಣವಾಗುವ ಸತ್ಸಂಗವನ್ನು ಮಾಡುವುದು ನಿಷಿದ್ಧವಲ್ಲ. ಸತ್ಪುರುಷರನ್ನು ಸಂದರ್ಶಿಸುವುದು ಇವನ ಸಾಧನೆಗೆ ಪೋಷಕವಾಗುತ್ತದೆ.)

O O O

**ಅನನ್ಯಯೋಗೇನ....ಚಾರಿಣೀ** = ಈಶ್ವರನಾದ ನನ್ನಲ್ಲಿ ಐಕ್ಯರೂಪ ವಾದ ಸಮಾಧಿಯಿಂದ ಇರುವಿಕೆ. ಭಗವಂತನಾದ ವಾಸುದೇವನಿಂದ ಬೇರೆ ಯಾದವನು ಯಾರೂ ಇಲ್ಲ. ಅವನೇ ನನಗೆ ಗತಿ–ಎಂಬ ನಿಶ್ಚಿತವಾದ ಬುದ್ಧಿ.

**ಅರತಿಃ ಜನಸಂಸದಿ** = ಪ್ರಾಕೃತರೂ, ಸಂಸ್ಕಾರಶೂನ್ಯರೂ, ಅವಿ ನೀತರೂ ಆದ ಜನರ ಸಮೂಹದಲ್ಲಿ ಬೆರೆಯದೇ ಇರುವಿಕೆ. ಸಂಸ್ಕಾರ ವಂತರೂ ವಿನೀತರೂ ಆದ ಜನರ ಸಹವಾಸವನ್ನು ತ್ಯಜಿಸಬೇಕಾಗಿಲ್ಲ. ಏಕೆಂದರೆ ಅದು ಜ್ಞಾನಕ್ಕೆ ಉಪಕಾರಕ.

ಆದುದರಿಂದ ಪ್ರಾಕೃತಜನರ ಸಮುದಾಯದಲ್ಲಿ ಪ್ರೀತಿಯಿಲ್ಲದೇ ಇರುವಿಕೆಯು ಜ್ಞಾನಕ್ಕೆ ಸಾಧನವಾದುದರಿಂದ ಜ್ಞಾನವೆಂದು ಕರೆದಿದೆ.

(ಶಂ. ಭಾ.)

**ಮಯಿ.....ಚಾರಿಣೀ** = ಸರ್ವೇಶ್ವರನಾದ ನನ್ನಲ್ಲಿ ಐಕಾಂತ್ಯಯೋಗ ದಿಂದ ಸ್ಥಿರವಾದ ಭಕ್ತಿ. (ರಾ. ಭಾ.)

**ಓಂ ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥೧೧॥**

ಅಧ್ಯಾತ್ಮಜ್ಞಾನದಲ್ಲಿ ನಿತ್ಯನಾಗಿರುವುದು ; ಮೋಕ್ಷದ ವಿಷಯವಾಗಿ ಆಲೋಚಿಸುತ್ತಿರುವುದು. ಇದು ಜ್ಞಾನವೆಂದು ಹೇಳಲ್ಪಟ್ಟಿರುವುದು. ಇದಕ್ಕೆ ಬೇರೆಯಾದುದು ಯಾವುದೋ ಅದು ಅಜ್ಞಾನ.

* * *

(**ಅಧ್ಯಾತ್ಮಜ್ಞಾನನಿತ್ಯತ್ವಂ** = ಅಧ್ಯಾತ್ಮ ಎಂದರೆ ಆತ್ಮನನ್ನು ಕುರಿತದ್ದು. ಅದರ ಜ್ಞಾನ ಅಧ್ಯಾತ್ಮಜ್ಞಾನ. ಆತ್ಮನನ್ನು ಕುರಿತು ಹೇಳುವುದೆಂದರೆ, ಆತ್ಮವು ಅವಿನಾಶೀ, ಅನಾದಿ, ಅವ್ಯಯ, ನಿತ್ಯ ; ದೇಹವೇ ಆತ್ಮನಲ್ಲ ; ಆತ್ಮನು ದೇಹದಲ್ಲಿದ್ದರೂ ಅವನಿಗೂ ದೇಹಕ್ಕೂ ಸಂಬಂಧವಿಲ್ಲ ; ದೇಹನಾಶ ವಾದರೂ ಆತ್ಮನಾಶವಾಗುವುದಿಲ್ಲ ; ಆತ್ಮಕ್ಕೆ ದೇಹವು ಕವಚಪ್ರಾಯ ವಾಗಿರುತ್ತದೆ ; ಈ ಆತ್ಮನೇ ಕ್ಷೇತ್ರಜ್ಞನು ; ಸರ್ವಕ್ಷೇತ್ರದಲ್ಲಿಯೂ ಅವನಿದ್ದಾನೆ; ಅಕ್ಷರ, ಪ್ರಣವ ಈ ಹೆಸರುಗಳಿಂದ ಕರೆಯಲ್ಪಡುವವನೂ ಇವನೇ ಆಗಿದ್ದಾನೆ. ಇತ್ಯಾದಿ ಆತ್ಮಾನಾತ್ಮವಿವೇಕಯುಕ್ತವಾದ ಜ್ಞಾನಕ್ಕೆ ಅಧ್ಯಾತ್ಮಜ್ಞಾನವೆಂದು ಹೆಸರು. ಇದನ್ನು ನಿತ್ಯವೂ ಅನುಸಂಧಾನಮಾಡುತ್ತಿರಬೇಕು. ಏಕೆಂದರೆ : ನಾವಿರುವುದು ದೇಹಾತ್ಮಭಾವದಿಂದ. ಪ್ರತ್ಯಕ್ಷದಲ್ಲಿ ಕಾಣುವುದೂ ಸಹ ಹಾಗೆಯೇ. ಈ ಭಾವನೆಯನ್ನು ತಿದ್ದಿಕೊಳ್ಳಬೇಕಾದರೆ ಇದಕ್ಕೆ ಸತ್ಯಾರ್ಥದ ನಿತ್ಯಾನುಸಂಧಾನವೇ ಬೇಕು. ಇದಕ್ಕೆ ಅಧ್ಯಾತ್ಮಜ್ಞಾನನಿತ್ಯತ್ವ ಎಂದು ಹೆಸರು.

**ತತ್ತ್ವಜ್ಞಾನಾರ್ಥದರ್ಶನಮ್** = ನಿತ್ಯಾನುಸಂಧಾನವಾದರೆ ಸಾಲದು. ತಿಳಿದುಕೊಂಡ ತತ್ತ್ವಗಳ ಪ್ರಯೋಜನವನ್ನೂ ಕಂಡುಕೊಳ್ಳಬೇಕು. ನಮ್ಮ ಅಧ್ಯಾತ್ಮತತ್ತ್ವಗಳು ಕೇವಲ ಬೌದ್ಧಿಕವಾದ ತಿಳಿವಳಿಕೆಯಲ್ಲ. ಅನುಭವ ದಿಂದ ಕಾಣುವುದೂ ಆಗಿವೆ. ಅವನ್ನು ಕಾಣಲು ಧ್ಯಾನಯೋಗ-ಭಕ್ತಿಯೋಗಗಳ ಮೂಲಕವಾಗಿ ಸತತವಾಗಿ ಪ್ರಯತ್ನವನ್ನು ಮಾಡಬೇಕು.

ಆಗಲೇ ತತ್ತ್ವಜ್ಞಾನಾರ್ಥದ ದರ್ಶನವಾಗುವುದು. **ತತ್ತ್ವಜ್ಞಾನಾರ್ಥ ದರ್ಶನಂ**–ಎನ್ನುವುದು ಸಾಕ್ಷಾತ್ ಅಪರೋಕ್ಷಜ್ಞಾನವೇ ಆಗಿದೆ. ಇದಕ್ಕೇ ಜ್ಞಾನ ಎಂದು ಹೆಸರು. **ಅಮಾನಿತ್ವ, ಅದಮ್ಭಿತ್ವ** ಮುಂತಾದುವು ಜ್ಞಾನಸಾಧನೋಪಾಯಗಳಾದರೂ ಭಗವಂತನು ಅವುಗಳನ್ನು ಜ್ಞಾನವೆಂದೇ ಕರೆದಿದ್ದಾನೆ. ಏಕೆಂದರೆ : ಈ ಸಾಧನೋಪಾಯಗಳನ್ನು ಅನುಷ್ಠಾನಕ್ಕೆ ತಂದವನು ಜ್ಞಾನಿಯೇ ಆಗುತ್ತಾನೆ. ಜ್ಞಾನಿಯಿಂದ ಮಾತ್ರವೇ ಇವುಗಳ ಅನುಷ್ಠಾನವು ಸಾಧ್ಯವಾಗುತ್ತದೆ. ಇದಕ್ಕೆ ವಿರುದ್ಧವಾದುದೇ ಅಜ್ಞಾನ, ಅರ್ಥಾತ್ ಮಾನ, ದಂಭ, ಹಿಂಸಾಚರಣೆ, ಉದ್ವೇಗ, ಕುಟಿಲತೆ, ಆಚಾರ್ಯ ನಿಂದೆ, ಅಶುಚಿ, ಭಯ, ಇಂದ್ರಿಯಗಳನ್ನು ನಿಗ್ರಹಿಸದಿರುವುದು, ಇಂದ್ರಿಯ ವಿಷಯಗಳಲ್ಲಿ ಚಾಪಲ್ಯ, ಅಹಂಕಾರ, ಹುಟ್ಟು-ಸಾವು-ಮುಪ್ಪು-ರೋಗ-ದುಃಖಗಳಲ್ಲಿ ದೋಷವೆಣಿಸದೇ ಇರುವುದು ; ಮಡದಿ-ಮಕ್ಕಳು-ಮನೆಗಳಲ್ಲಿ ಹೆಚ್ಚಿನ ಆಸಕ್ತಿ ; ಇಷ್ಟವಾದುದು ಪ್ರಾಪ್ತವಾದರೆ ಹಿಗ್ಗುವುದು ; ಅನಿಷ್ಟವು ಪ್ರಾಪ್ತವಾದರೆ ಕುಗ್ಗುವುದು ; ಮನಸ್ಸಿನ ಕಾಮನೆಯನ್ನು ಪೂರೈಸಿಕೊಳ್ಳಲು ಕಂಡ ಕಂಡ ದೇವತೆಗಳಿಗೆ ಕೈಮುಗಿಯುವುದು ; ಪೂಜಾದಿಗಳನ್ನು ಜನ-ಜಂಗುಳಿ ಇರುವಲ್ಲಿಯೇ ಮಾಡುವುದು ; ಜನರ ಸಮೂಹದಲ್ಲೇ ಇರಬೇಕೆಂಬ ಬಯಕೆ; ದೇಹದ ತುಷ್ಟಿ–ಮುಂತಾದುವನ್ನು ಇಷ್ಟವಾಗಿ ಚಿಂತಿಸುವುದು ; ತತ್ತ್ವವೆಂದರೆ ಏನೆಂಬುದನ್ನೇ ತಿಳಿದುಕೊಳ್ಳದಿರುವುದು–ಇವುಗಳಿಗೆ ಅಜ್ಞಾನವೆಂದು ಹೆಸರು.)

o o o

**ತತ್ತ್ವಜ್ಞಾನಾರ್ಥದರ್ಶನಂ** = ಅಮಾನಿತ್ವವೇ ಮುಂತಾದ ಜ್ಞಾನ ಸಾಧನೆಗಳ ಭಾವನೆಗಳ ಪರಿಪಕ್ವತೆಯಿಂದ ಉಂಟಾದ ಯಾವ ತತ್ತ್ವಜ್ಞಾನ ವುಂಟೋ ಅದರ ಪ್ರಯೋಜನವಾದ ಮೋಕ್ಷ ಮತ್ತು ಸಂಸಾರಗಳ ಉಪರತಿ ಗಳನ್ನು ಆಲೋಚನೆಮಾಡುವುದು ಜ್ಞಾನ. ತತ್ತ್ವಜ್ಞಾನದ ಫಲವನ್ನು ಆಲೋಚನೆಮಾಡಿದರೇನೇ ಅದರ ಸಾಧನೆಗಳನ್ನು ಅನುಷ್ಠಾನಮಾಡುವ ವಿಷಯದಲ್ಲಿ ಪ್ರವೃತ್ತಿಯುಂಟಾಗುತ್ತದೆ. (ಶಂ. ಭಾ.)

**ತತ್ತ್ವಜ್ಞಾನಾರ್ಥದರ್ಶನಮ್** = ತತ್ತ್ವಜ್ಞಾನವನ್ನೇ ಪ್ರಯೋಜನವನ್ನಾಗಿ ಉಳ್ಳ ಯಾವ ಚಿಂತನೆಯುಂಟೋ ಅದರಲ್ಲಿ ನಿರತನಾಗಿರುವಿಕೆ.

ಇವೆಲ್ಲವೂ ಜ್ಞಾನ, ಆತ್ಮಜ್ಞಾನಕ್ಕೆ ಸಾಧನ. ಜ್ಞಾಯತೇ ಅನೇನ ಆತ್ಮಾ ಇತಿ ಜ್ಞಾನಮ್. ಕ್ಷೇತ್ರಸಂಬಂಧಿಯಾದ ಪುರುಷನಿಗೆ ಅಮಾನಿತ್ವವೇ ಮುಂತಾದ ಗುಣಸಮೂಹವೇ ಆತ್ಮಜ್ಞಾನಕ್ಕೆ ಉಪಯೋಗವಾಗುವುದು. ಉಳಿದುವುಗಳೆಲ್ಲಾ ಕ್ಷೇತ್ರಕ್ಕೆ ಸಂಬಂಧಿಸಿದ ಕಾರ್ಯಗಳು. ಆತ್ಮಜ್ಞಾನಕ್ಕೆ ವಿರೋಧಿಗಳು ಆದುದರಿಂದ ಅಜ್ಞಾನ. (ರಾ. ಭಾ.)

**ತತ್ತ್ವ....ದರ್ಶನಂ** = ಅಪರೋಕ್ಷಜ್ಞಾನಕ್ಕೋಸ್ಕರ ಶಾಸ್ತ್ರಗಳನ್ನು ಅಭ್ಯಾಸಮಾಡುವುದು. (ಮ. ಭಾ.)

**ಓಂ ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೨॥**

ಯಾವುದು ಜ್ಞೇಯವೋ ಅದನ್ನು ಹೇಳುತ್ತೇನೆ. ಅದನ್ನರಿತುಕೊಂಡರೆ ಅಮೃತವನ್ನು ಹೊಂದುತ್ತಾನೆ. ಅದು ಯಾವುದೆಂದರೆ : ಆದಿಯಿಲ್ಲದ ಶ್ರೇಷ್ಠವಾದ ಬ್ರಹ್ಮ. ಅದು ಸತ್ ಎನಿಸುವುದಿಲ್ಲ ; ಅಸತ್ ಎನಿಸುವುದೂ ಇಲ್ಲ.

* * *

(ಇದುವರೆಗೂ ಜ್ಞಾನವನ್ನು ಹೇಳಿದ್ದಾಯಿತು. ಇನ್ನು ಜ್ಞಾನದ ಮೂಲಕ ತಿಳಿಯಬೇಕಾದುದನ್ನು ಚೆನ್ನಾಗಿ ಹೇಳುತ್ತೇನೆ ಎನ್ನುತ್ತಾನೆ ಶ್ರೀಕೃಷ್ಣ. ಜ್ಞಾನವಾಯಿತೆಂದರೆ ಜ್ಞೇಯವು ಸಿದ್ಧಿಸಿತೆಂದೇ ಅರ್ಥ. ಜ್ಞಾನದ ಪರಮಾರ್ಥವೇ ಜ್ಞೇಯವನ್ನು ಅರಿತುಕೊಳ್ಳುವುದು. ಇದನ್ನು ಅರಿತುಕೊಂಡಿದ್ದರಿಂದ ಆಗುವ ಪ್ರಯೋಜನವಾದರೂ ಏನು? ಜ್ಞೇಯವನ್ನು ತಿಳಿದುಕೊಂಡವನು ಅಮೃತಪ್ರಾಶನಮಾಡುತ್ತಾನೆ ಅರ್ಥಾತ್ ಅಮೃತನೇ ಆಗುತ್ತಾನೆ. ಜನ್ಮ-ಮೃತ್ಯು-ಜರಾ-ವ್ಯಾಧಿಗಳಿಂದ ವಿಮುಕ್ತನಾಗುತ್ತಾನೆ.

ಈ ಜ್ಞೇಯವನ್ನೇ ಪರಮಾತ್ಮನು ವರ್ಣಿಸಲು ಉಪಕ್ರಮಿಸುತ್ತಾನೆ.

**ಅನಾದಿಮತ್** = ಅನಾದಿ ಎಂಬ ಹೆಸರನ್ನು ಹೊಂದಿರತಕ್ಕದ್ದು. ಅರ್ಥಾತ್ ಅನಾದಿಯಾದುದು. ಅದಕ್ಕೆ ಆದಿ-ಅಂತ್ಯಗಳೊಂದೂ ಇಲ್ಲ. ನಿತ್ಯವಾದುದು. ಶ್ರೇಷ್ಠವಾದುದು. ಅದು ಬ್ರಹ್ಮಸ್ವರೂಪವಾದುದು. ಅದರಲ್ಲಿ ಮತ್ತೊಂದು ವಿಚಿತ್ರವಾದ ವಿಶೇಷವಿದೆ. ಈ ಬ್ರಹ್ಮವನ್ನು **ಸತ್** ಎಂದೂ ಹೇಳಲಾಗುವುದಿಲ್ಲ ; **ಅಸತ್** ಎಂದೂ ಹೇಳಲಾಗುವುದಿಲ್ಲ. ಸತ್ ಎಂದರೆ

ಪ್ರತ್ಯಕ್ಷವಾಗಿ ಕಾಣಿಸುವುದು. ಆದರೆ ಇದು ಇಂದ್ರಿಯಗಳಿಗೆ ಗೋಚರವಲ್ಲ ದುದರಿಂದ ಸತ್ ಅಲ್ಲ. ರೂಪ, ವರ್ಣ, ವ್ಯಕ್ತಿ, ಹೃದಯ, ದ್ರಷ್ಟಾ–ಮೊದ ಲಾದ ಯಾವ ಸ್ಥಿತಿಯೂ ಅದಕ್ಕೆ ಸಂಬಂಧಿಸಿರುವುದಿಲ್ಲ. ಹಾಗಾದರೆ ಅದು ಅಸತ್ತೇ–ಇಲ್ಲದಿರುವುದೇ? ಎಂದರೆ : ಮಹದಾದಿ ಪ್ರಪಂಚವು ಇದರ ಸತ್ತೆ ಯಿಂದಲೇ ತೋರುತ್ತಿದೆ. ಇದರ ಆಧಾರವಿಲ್ಲದಿದ್ದರೆ ಯಾವುದೂ ನಿಲ್ಲುವು ದಿಲ್ಲ. ಅದು ನಿತ್ಯ. ಸಾಕ್ಷಿಯಾಗಿದೆ. ವಿಶ್ವವೆಂಬ ಮಹಾಸೌಧವು ನಿಂತಿರುವುದೇ ಇದರ ಮೇಲೆ. ನಾವು ಮಹಾಸೌಧವನ್ನು ನೋಡುತ್ತಿದ್ದೇವೆ. ತಳಪಾಯವನ್ನು ನೋಡುತ್ತಿಲ್ಲ. ನೋಡಲು ಸಾಧ್ಯವೂ ಆಗುವುದಿಲ್ಲ. ಸಾಮಾನ್ಯರಿಗೆ ನೋಡಲು ಸಾಧ್ಯವಾಗದೇ ಇರುವುದರಿಂದ ಅದು ಇಲ್ಲ; 'ಅಸತ್' ಎಂದೂ ಹೇಳುವುದಕ್ಕಾಗುವುದಿಲ್ಲ. ಇಂತಹ ವಿಚಿತ್ರಧರ್ಮವುಳ್ಳದ್ದು ಜ್ಞೇಯವಾದ ಬ್ರಹ್ಮವಸ್ತು.)

o o o

**ಅಮೃತಂ ಅಶ್ನುತೇ** = ಅಮೃತತ್ವವನ್ನು ಪಡೆಯುತ್ತಾನೆ. ಮತ್ತೆ ಸಾಯುವುದಿಲ್ಲ. **ಅನಾದಿಮತ್**=ಆದಿಮತ್–ಎಂದರೆ ಆದಿಯುಳ್ಳದ್ದು. ಆದಿಮತ್ ಅಲ್ಲದ್ದು **ಅನಾದಿಮತ್**. ಅದು ಯಾವುದೆಂದರೆ ನಿರತಿಶಯವಾದ ಪರಬ್ರಹ್ಮ.

**ಜ್ಞೇಯ**–ಎಂದು ಈ ಪ್ರಕರಣದಲ್ಲಿ ವರ್ಣಿಸಲ್ಪಟ್ಟಿರುವುದು. ಅದು **ಸತ್** ಎಂದೂ ಕರೆಯಲ್ಪಡಲಾಗುವುದು. **ಅಸತ್** ಎಂದೂ ಕರೆಯಲ್ಪಡಲಾಗು ವುದು. ಬ್ರಹ್ಮವು ವಾಣಿಗೆ ವಿಷಯವಾಗದೇ ಇರುವುದರಿಂದ ಉಪ ನಿಷತ್ತುಗಳು ಅದನ್ನು 'ನೇತಿ ನೇತಿ–ಹೀಗಿಲ್ಲ, ಹೀಗಿಲ್ಲ. **ಅಸ್ಥೂಲ ಮನಣು**= ಅದು ಸ್ಥೂಲವೂ ಅಲ್ಲ ; ಸೂಕ್ಷ್ಮವೂ ಅಲ್ಲ'–ಎಂದು ವಿಶೇಷ ಗಳನ್ನು ಅದರ ಬಗೆಗೆ ನಿಷೇಧಿಸುವುದರ ಮೂಲಕ ಅದನ್ನು ತಿಳಿಸುತ್ತದೆಯೇ ಹೊರತು ಅದು 'ಇದೆ' ಎಂದು ನೇರವಾಗಿ ಹೇಳುವುದಿಲ್ಲ. ಇಂದ್ರಿಯಗಳಿಗೆ ಯಾವುದು ಗಮ್ಯವಾಗುತ್ತದೆಯೋ ಅಂತಹ ಮಡಕೆ ಮುಂತಾದ ಪದಾರ್ಥ ವನ್ನು ಅಸ್ತಿ ಅಥವಾ ನಾಸ್ತಿ ಎಂದು ಹೇಳಬಹುದು. ಆದರೆ ಅತೀಂದ್ರಿಯ ವಾಗಿ ಶಬ್ದಪ್ರಮಾಣದಿಂದಲೇ ತಿಳಿಯಬೇಕಾಗಿರುವ ಬ್ರಹ್ಮವನ್ನು **ಸತ್** ಎಂದೂ ಹೇಳುವುದಕ್ಕಾಗುವುದಿಲ್ಲ ; **ಅಸತ್** ಎಂದೂ ಹೇಳುವುದಕ್ಕಾಗುವು

ದಿಲ್ಲ ; ಹೀಗೆ ಹೇಳುವುದು ಪರಸ್ಪರವಿರುದ್ಧವಲ್ಲವೇ?–ಎಂದರೆ ಶ್ರುತಿಯೂ ಅದನ್ನು ಹಾಗೆಯೇ ಹೇಳುತ್ತದೆ.

**ಅನ್ಯದೇವ ತದ್ವಿದಿತಾತ್ ಅಥೋಽವಿದಿತಾದಧಿ** (ಕೇನ ೧-೩)

ಈ ಬ್ರಹ್ಮವು ನಾವು ತಿಳಿದಿರುವುದಕ್ಕಿಂತಲೂ ಬೇರೆಯಾದುದು. ತಿಳಿಯದೇ ಇರುವುದಕ್ಕಿಂತಲೂ ಬೇರೆಯಾದುದು. ಬ್ರಹ್ಮಕ್ಕೆ ಜಾತಿಯಿಲ್ಲ. ಆದುದರಿಂದ ಅದನ್ನು ಸತ್ ಮುಂತಾದ ಶಬ್ದಗಳಿಂದಲೂ ಹೇಳುವುದಕ್ಕಾಗುವುದಿಲ್ಲ. ಅದು ನಿರ್ಗುಣ. ಆದುದರಿಂದ ಗುಣವಾಚಕಶಬ್ದಗಳಿಂದಲೂ ಅದನ್ನು ಹೇಳುವುದಕ್ಕಾಗುವುದಿಲ್ಲ. ಅದು ನಿಷ್ಕ್ರಿಯವಾದುದರಿಂದ ಕ್ರಿಯಾವಾಚಕಶಬ್ದಗಳಿಂದಲೂ ಅದನ್ನು ಹೇಳುವುದಕ್ಕಾಗುವುದಿಲ್ಲ.

**ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್**

(ಶ್ವೇ. ೬-೧೯)

ಅದು ಏಕವೂ, ಅದ್ವಿತೀಯವೂ, ಇಂದ್ರಿಯಗಳಿಗೆ ಅವಿಷಯವೂ ಮತ್ತು ಆತ್ಮವೂ ಆಗಿರುವುದರಿಂದ ಅದು ಯಾವುದರ ಸಂಬಂಧಿಯೂ ಅಲ್ಲ. ಆದುದರಿಂದ ಅದನ್ನು ಯಾವ ಶಬ್ದದಿಂದಲೂ ಹೇಳುವುದಕ್ಕಾಗದೇ ಇರುವುದು ಉಚಿತವಾಗಿಯೇ ಇದೆ.

**ಯತೋ ವಾಚೋ ನಿವರ್ತನ್ತೇ** ತೈ. ೨-೪-೯ (ಶಂ. ಭಾ.)

ಅಮಾನಿತ್ವವೇ ಮುಂತಾದ ಸಾಧನೆಗಳಿಂದ ಜ್ಞೇಯ (ಪ್ರಾಪ್ಯ ) ವಾಗಿರುವ ಯಾವ ಪ್ರತ್ಯಗಾತ್ಮಸ್ವರೂಪವುಂಟೋ–ಅದನ್ನು ಚೆನ್ನಾಗಿ ಹೇಳುವೆನು; ಕೇಳು. ಅದನ್ನರಿತವನು ಹುಟ್ಟು-ಮುಪ್ಪು-ಸಾವು ಮುಂತಾದ ಪ್ರಾಕೃತಧರ್ಮಗಳಿಲ್ಲದೇ ಅಮೃತನಾಗಿರುವ ಆತ್ಮನನ್ನು ಹೊಂದುತ್ತಾನೆ.

ಆ ಪ್ರತ್ಯಗಾತ್ಮನು ಅನಾದಿಯು. ಅದಕ್ಕೆ ಉತ್ಪತ್ತಿಯಿಲ್ಲ. (ಆದುದರಿಂದಲೇ ಅದಕ್ಕೆ ಅಂತ್ಯವೂ ಇಲ್ಲ.) **ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್।** (ಕಠ ೨-೧೮)

ಅದು ಮತ್ಪರವಾದುದು. ಮತ್ಪರಂ ಎಂದರೆ ನನ್ನನ್ನೇ ಪರವನ್ನಾಗಿ ಹೊಂದಿರುವುದು.

**ಇತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ಜೀವಭೂತಾಂ**

ಗೀತಾ ೭-೫

ಎಂದು ಭಗವಂತನೇ ಹಿಂದೆ ಹೇಳಿರುವಂತೆ ಭಗವಂತನಿಗೆ ಶರೀರವಾಗಿರುವುದರಿಂದ ಆತನಿಗೆ ಶೇಷಭೂತವಾಗಿರುವಿಕೆಯೊಂದನ್ನೇ ರಸವನ್ನಾಗಿ ಉಳ್ಳದ್ದು ಆತ್ಮಸ್ವರೂಪ.

**ಯ ಆತ್ಮನಿ ತಿಷ್ಠನ್ ಆತ್ಮನೋಽನ್ತರೋಽಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ।** ಬೃ. ೫-೭-೨೨

ಅದು ಬ್ರಹ್ಮವೂ ಆಗಿದೆ. ಬೃಹತ್ವಗುಣವುಳ್ಳದ್ದು. ಶರೀರವೇ ಮುಂತಾದುವುಗಳಿಗಿಂತ ಬೇರೆಯಾದ ಪದಾರ್ಥ. ಅದಕ್ಕೆ ಸ್ವರೂಪತಃ ಶರೀರ ಪರಿಚ್ಛೇದವಿಲ್ಲ. ಅಪರಿಚ್ಛೇದವು ಅದಕ್ಕೆ ಕರ್ಮದಿಂದ ಬಂದದ್ದು. ಕರ್ಮ ಬಂಧವು ಮುಕ್ತವಾದರೆ ಅದಕ್ಕೆ ಆನನ್ತ್ಯ.

**ಸ ಚಾನನ್ತ್ಯಾಯ ಕಲ್ಪತೇ.** ಶ್ವೇತ ೫-೯

ಬ್ರಹ್ಮ ಎಂಬ ಶಬ್ದವನ್ನು ಜೀವಾತ್ಮನಿಗೂ ಉಪಯೋಗಿಸಬಹುದು.

**ಸ ಗುಣಾನ್ಸಮತೀತ್ಯೈತಾನ್ಬ್ರಹ್ಮಭೂಯಾಯ ಕಲ್ಪತೇ ।**
**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**

ಗೀ. ೧೪-೨೭

ಅದನ್ನು **ಸತ್** ಎಂದೂ ಕರೆಯುವುದಕ್ಕಾಗುವುದಿಲ್ಲ. **ಅಸತ್** ಎಂದೂ ಕರೆಯುವುದಕ್ಕಾಗುವುದಿಲ್ಲ. ಏಕೆಂದರೆ : ಅದಕ್ಕೆ ಕಾರ್ಯರೂಪದ ಅವಸ್ಥೆಯಾಗಲೀ–ಕಾರಣರೂಪದ ಅವಸ್ಥೆಯಾಗಲೀ ಇಲ್ಲ.

ಕಾರ್ಯರೂಪದ ಅವಸ್ಥೆಯಲ್ಲಿರುವುದು ದೇವ, ಮನುಷ್ಯ– ಮುಂತಾದ ನಾಮ-ರೂಪಗಳನ್ನು ಹೊಂದಿರುವುದರಿಂದ **ಸತ್** ಎನ್ನಿಸುತ್ತದೆ. ಅದಕ್ಕೆ ಯೋಗ್ಯವಲ್ಲದ್ದು, ಕಾರಣಾವಸ್ಥೆಯಲ್ಲಿರುವುದು **ಅಸತ್** ಎನಿಸುತ್ತದೆ. ಪ್ರತ್ಯಗಾತ್ಮನಿಗೆ ಈ ಅವಸ್ಥೆಗಳು ಯಾವುವೂ ಸ್ವರೂಪತಃ ಇಲ್ಲ. (ನಾಮ-ರೂಪಗಳಿಗೆ) ಅದು ಕರ್ಮರೂಪವಾದ ಅವಿದ್ಯೆಯಿಂದ ಬಂದದ್ದು. ಆದುದರಿಂದ ಆತ್ಮಸ್ವರೂಪವನ್ನು **ಸತ್** ಅಥವಾ **ಅಸತ್** ಎಂಬ ಯಾವ ಶಬ್ದದಿಂದಲೂ ಹೇಳುವುದಕ್ಕಾಗುವುದಿಲ್ಲ. (ರಾ. ಭಾ.)

**ಪರಂ ಬ್ರಹ್ಮ**= ಇಲ್ಲಿ ಸ ಚ ಯಃ (೧೩-೩) ಎಂದು ಹಿಂದೆ

ಪ್ರತಿಜ್ಞೆಮಾಡಿದ್ದನ್ನು ನಿರೂಪಿಸಿದೆ. ಉಳಿದುದೆಲ್ಲವೂ **ಯತ್ಪ್ರಭಾವಃ** ಎಂದು ಅದೇ ಶ್ಲೋಕದಲ್ಲಿ ಪ್ರತಿಜ್ಞೆಮಾಡಿರುವುದಕ್ಕೆ ವಿವರಣೆ.

**ಅನಾದಿಮತ್ = ಆದಿಮತ್** ಎಂದರೆ ಆದಿಯುಳ್ಳವುಗಳು.

(ಆದಿಃ ಏಷಾಂ ಅಸ್ತಿ ಇತಿ ಆದಿಮನ್ತಿ–ದೇಹೇಂದ್ರಿಯಗಳು, ಗುಣ, ಕ್ರಿಯೆ–ಮುಂತಾದುವುಗಳು.) ಅವುಗಳು ಇಲ್ಲದ್ದು. **ಅನಾದಿಮತ್ ನ ವಿದ್ಯನ್ತೇ ಆದಿಮನ್ತಿ ಯಸ್ಯ ತತ್ ।** (ಮ. ಭಾ.)

**ಓಂ ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೩॥**

ಅದು ಎಲ್ಲ ಕಡೆಗಳಲ್ಲಿಯೂ ಕೈ ಮತ್ತು ಕಾಲುಗಳುಳ್ಳದ್ದು. ಎಲ್ಲ ಕಡೆಗಳಲ್ಲಿಯೂ ಕಣ್ಣು ಮತ್ತು ಮುಖಗಳುಳ್ಳದ್ದು. ಎಲ್ಲ ಕಡೆಗಳಲ್ಲಿಯೂ ಕಿವಿಗಳುಳ್ಳದ್ದು. ಲೋಕದಲ್ಲಿ ಎಲ್ಲವನ್ನೂ ಆವರಿಸಿಕೊಂಡಿರುತ್ತದೆ.

* * *

(**ಸತ್–ಅಸತ್** ಎರಡೂ ಅಲ್ಲದ **ಅನಾದಿಮತ್** ಆದ ಬ್ರಹ್ಮವಸ್ತುವನ್ನು ಶ್ರೀಕೃಷ್ಣನೇ ವರ್ಣಿಸುತ್ತಾನೆ. ಒಂದು ರೀತಿಯಲ್ಲಿ ಇದು ವಿಶ್ವರೂಪದ ವರ್ಣನೆಯೂ ಆಗಿದೆ. ಅರ್ಜುನನು ವಿಶ್ವರೂಪವನ್ನು ನೋಡಿ ಹಿಂದೆ ಹೀಗೆ ವರ್ಣಿಸಿದ್ದಾನೆ :

**ಅನೇಕ ಬಾಹೂದರವಕ್ತ್ರನೇತ್ರಂ** ೧೧-೧೬
**ರೂಪಂ ಮಹತ್ತೇ ಬಹುವಕ್ತ್ರನೇತ್ರಮ್ ।**
**ಮಹಾಬಾಹೋ ಬಹುಬಾಹೂರುಪಾದಂ**
**ಬಹೂದರಂ ಬಹುದಂಷ್ಟ್ರಾಕರಾಲಮ್** ೧೧-೨೩

ಶ್ರೀಕೃಷ್ಣನು ವರ್ಣಿಸುತ್ತಿರುವ ಬ್ರಹ್ಮವಸ್ತುವು ಸರ್ವತ್ರ ಕೈಗಳನ್ನೂ, ಕಾಲುಗಳನ್ನೂ ಹೊಂದಿದೆ. ಕಣ್ಣುಗಳನ್ನೂ, ಶಿರಸ್ಸುಗಳನ್ನೂ, ಮುಖಗಳನ್ನೂ ಹೊಂದಿದೆ. ಸರ್ವತ್ರ ಅದಕ್ಕೆ ಕಿವಿಗಳಿವೆ. ಎಲ್ಲವನ್ನೂ ಆವರಿಸಿ ಇದು ಕುಳಿತಿದೆ. ಹೀಗೆ ಅದನ್ನು ವಿಶ್ವರೂಪದ ವರ್ಣನೆಯೆಂದೂ ಹೇಳಬಹುದು. ಅಥವಾ ಇದು ಕ್ಷೇತ್ರ-ಕ್ಷೇತ್ರಜ್ಞರ ಅಧ್ಯಾಯವಾದುದರಿಂದ

ಮತ್ತು ಅದೇ ವಿಷಯವನ್ನು ಶ್ರೀಕೃಷ್ಣನು ಹೇಳುತ್ತಿರುವುದರಿಂದ ಈ ಶ್ಲೋಕಕ್ಕೆ ಹೀಗೂ ಅರ್ಥಮಾಡಬಹುದಾಗಿದೆ. **ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ।** ಎಂದು ಇದೇ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ಹೇಳಿದ್ದಾನೆ. ೫ ಮತ್ತು ೬ನೆಯ ಶ್ಲೋಕಗಳಲ್ಲಿ ಕ್ಷೇತ್ರ ಎಂದರೆ ಯಾವುದೆಂಬುದನ್ನೂ ವಿವರಿಸಿದ್ದಾನೆ. ಅಲ್ಲಿಯ ವಿವರಣೆಯ ಪ್ರಕಾರ ಎಲ್ಲ ಪ್ರಾಣಿಗಳ ಶರೀರಗಳೂ ಕ್ಷೇತ್ರಗಳೇ ಆಗುತ್ತವೆ. ಆ ಎಲ್ಲ ಕ್ಷೇತ್ರಗಳಲ್ಲಿಯೂ ಕ್ಷೇತ್ರಜ್ಞನಾಗಿರತಕ್ಕವನು ಶ್ರೀಕೃಷ್ಣ. ಅರ್ಥಾತ್ **ಅನಾದಿಮತ್ ಪರಬ್ರಹ್ಮ.** ಕ್ಷೇತ್ರಜ್ಞನು ಅಥವಾ ಪರಬ್ರಹ್ಮವಸ್ತುವು ಎಲ್ಲ ಕ್ಷೇತ್ರಗಳಲ್ಲಿಯೂ ಇರುವುದರಿಂದ ಆ ಕ್ಷೇತ್ರಗಳಿಗೆ ಸಂಬಂಧಿಸಿದ ಕೈ-ಕಾಲುಗಳು, ಕಣ್ಣುಗಳು, ಮುಖ, ಶಿರಸ್ಸು, ಎಲ್ಲ ಅಂಗಗಳೂ ಸಹ ಕ್ಷೇತ್ರಜ್ಞನವೇ ಎಂದು ಹೇಳಬಹುದು. ಹೀಗೆ ಕ್ಷೇತ್ರಜ್ಞನು ಸರ್ವತ್ರ ಕೈ-ಕಾಲುಗಳನ್ನೂ, ಮುಖಗಳನ್ನೂ, ಕಿವಿಗಳನ್ನೂ ಹೊಂದಿದ್ದಾನೆ.

**ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್**–ಎಂಬ ಪುರುಷಸೂಕ್ತಮಂತ್ರವೂ ಇದೇ ಅಭಿಪ್ರಾಯದಲ್ಲಿ ಹೇಳಲ್ಪಟ್ಟಿದೆ.)

o o o

ಕ್ಷೇತ್ರಜ್ಞನ ಅಸ್ತಿತ್ವವು ಎಲ್ಲ ಪ್ರಾಣಿಗಳ ಇಂದ್ರಿಯಗಳೆಂಬ ಉಪಾಧಿಗಳ ಮೂಲಕ ಪ್ರಕಟವಾಗುತ್ತದೆ. ಆ ಕ್ಷೇತ್ರದ ಉಪಾಧಿಯಿಂದಲೇ ಅವನಿಗೆ ಕ್ಷೇತ್ರಜ್ಞ ಎಂದು ಹೆಸರು. ಕ್ಷೇತ್ರವೆಂಬ ಉಪಾಧಿಯು ಕಾಲು-ಕೈ–ಮುಂತಾದ ಅನೇಕಭೇದಗಳಿಂದ ಅನೇಕಪ್ರಕಾರವಾಗಿದೆ. ವಿಶೇಷಗಳೆಲ್ಲವೂ ಮಿಥ್ಯೆ. ಆದರೂ ಬ್ರಹ್ಮದ ಅಸ್ತಿತ್ವವನ್ನು ತಿಳಿಸುವುದಕ್ಕೋಸ್ಕರ ಈ ಉಪಾಧಿಕೃತವಾದ ಮಿಥ್ಯಾರೂಪವನ್ನೂ ಕೂಡ ಜ್ಞೇಯವಸ್ತುವಿನ ಧರ್ಮವೆಂದೇ ಕಲ್ಪಿಸಿಕೊಂಡು ಅದಕ್ಕೆ ಎಲ್ಲೆಲ್ಲಿಯೂ ಕೈ-ಕಾಲುಗಳು ಮುಂತಾದುವುಗಳಿವೆ ಎಂದು ಮೊದಲಾಗಿ ಹೇಳಲ್ಪಟ್ಟಿದೆ. (ಶಂ. ಭಾ.)

ಪರಿಶುದ್ಧಾತ್ಮ ಸ್ವರೂಪವು ಎಲ್ಲೆಲ್ಲಿಯೂ ಕೈ-ಕಾಲು ಮುಂತಾದುವುಗಳ ಕಾರ್ಯಗಳಲ್ಲಿ ಸಾಮರ್ಥ್ಯವುಳ್ಳದ್ದು. ಹಾಗೆಯೇ ಎಲ್ಲೆಡೆಯಲ್ಲಿಯೂ ಕಣ್ಣು,

ತಲೆ, ಮುಖ, ಕಿವಿ ಮುಂತಾದುವುಗಳ ಕೆಲಸದ ಸಾಮರ್ಥ್ಯವುಳ್ಳದ್ದು. ಬ್ರಹ್ಮಕ್ಕೆ ಕೈ-ಕಾಲು ಮುಂತಾದುವು ಯಾವುದೂ ಇಲ್ಲವಾದರೂ ಕೂಡ ಎಲ್ಲೆಲ್ಲಿಯೂ ಕೈ-ಕಾಲು ಮುಂತಾದುವುಗಳ ಕಾರ್ಯದ ಸಾಮರ್ಥ್ಯವುಂಟೆಂದು ಶ್ರುತಿಯು ಹೇಳುತ್ತದೆ.

**ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ |**

ಅದಕ್ಕೆ ಕೈ-ಕಾಲುಗಳಿಲ್ಲದಿದ್ದರೂ ಅದು ಅತ್ಯಂತವೇಗವುಳ್ಳದ್ದು ಮತ್ತು ಎಲ್ಲವನ್ನೂ ಹಿಡಿದುಕೊಳ್ಳುವುದು. ಅದು ಕಣ್ಣಿಲ್ಲದೆಯೇ ನೋಡುವುದು. ಕಿವಿಯಿಲ್ಲದೆಯೇ ಕೇಳುವುದು.

ಪರಿಶುದ್ಧವಾದ ಪ್ರತ್ಯಗಾತ್ಮವೂ ಕೂಡ ಪರಬ್ರಹ್ಮಸಾಮರಸ್ಯವನ್ನು ಹೊಂದುವುದರಿಂದ ಅದಕ್ಕೂ ಮೇಲ್ಕಂಡ ಯೋಗ್ಯತೆಯಿರುವುದು ಶ್ರುತಿ ಯಿಂದಲೇ ಸಿದ್ಧವಾಗುತ್ತದೆ.

**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಞ್ಜನಃ ಪರಮಂ ಸಾಮ್ಯಮುಪೈತಿ** ಮುಂಡಕ ೩-೧-೩

ಗೀತೆಯಲ್ಲಿಯೂ ಕೂಡ **ಮಮ ಸಾಧರ್ಮ್ಯಮಾಗತಾಃ** ಎಂದು ಮುಂದೆ ಹೇಳುತ್ತಾನೆ. -ಗೀ-೧೪-೨

ಅದು ಲೋಕದಲ್ಲಿರುವ ಎಲ್ಲ ವಸ್ತುಗಳನ್ನೂ ವ್ಯಾಪಿಸಿಕೊಂಡಿದೆ. ದೇಹವೇ ಮುಂತಾದ ಪರಿಚ್ಛೇದವು ಇಲ್ಲವಾದುದರಿಂದ ಪರಿಶುದ್ಧವಾದ ಪ್ರತ್ಯಗಾತ್ಮವು ಸರ್ವಗತವಾದುದು. (ಈ ವ್ಯಾಪಕತ್ವವು ಧರ್ಮಭೂತಜ್ಞಾನದ ಮೂಲಕ. ಏಕೆಂದರೆ ಜೀವವು ಅಣುರೂಪ.) (ರಾ. ಭಾ.)

ಈ ಕ್ಷೇತ್ರಗಳ ಮೂಲಕವಾಗಿ ಕ್ಷೇತ್ರಜ್ಞನು ಸರ್ವವನ್ನೂ ಆವರಿಸಿ ಬಿಟ್ಟಿದ್ದಾನೆ.

**ಓಂ ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿಯವಿವರ್ಜಿತಮ್ |**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ||೧೪||**

ಎಲ್ಲ ಇಂದ್ರಿಯಗಳ ಗುಣಗಳಿಂದ ಕೂಡಿರುವಂತೆ ತೋರುವುದು. ಯಾವ ಇಂದ್ರಿಯಗಳೂ ಇಲ್ಲದಂತಹುದು. ಯಾವುದರಲ್ಲಿಯೂ ಸಂಗ ವಿಲ್ಲದೇ ಇರುವುದು. ಸರ್ವವಸ್ತುಗಳನ್ನೂ ಧರಿಸಿರುವುದು. ನಿರ್ಗುಣ ವಾದುದು. ಗುಣಗಳನ್ನು ಭೋಗಿಸತಕ್ಕುದೂ ಆಗಿದೆ.

* * *

(ಇಲ್ಲಿಯೂ ಸಹ ಶ್ರೀಕೃಷ್ಣನು ಕ್ಷೇತ್ರದಲ್ಲಿರುವ ಅರ್ಥಾತ್ ಸಕಲ ಪ್ರಾಣಿಗಳ ಶರೀರದಲ್ಲಿರುವ ಕ್ಷೇತ್ರಜ್ಞನ ಸ್ವರೂಪವನ್ನೇ ವರ್ಣಿಸುತ್ತಾನೆ. ಇವನಿಗೆ (ಕ್ಷೇತ್ರಜ್ಞನಿಗೆ) ಎಲ್ಲ ಇಂದ್ರಿಯಗಳ ಗುಣಗಳೂ ಇರುವಂತೆ ಕಾಣು ತ್ತದೆ. ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಅಂತಃ ಕರಣ–ಇವುಗಳೆಲ್ಲವೂ ಕ್ಷೇತ್ರಜ್ಞನಿಗೆ ಇವೆ. ಈ ಬಹಿರಿಂದ್ರಿಯ ಮತ್ತು ಅಂತರಿಂದ್ರಿಯಗಳ ಗುಣಗಳಿಂದ ಕ್ಷೇತ್ರಜ್ಞನು ಕೂಡಿರುವಂತೆ ಭಾಸವಾಗು ತ್ತದೆ. ಆದರೆ ನಿಜವಾಗಿ ಇವನಿಗೆ ಯಾವ ಇಂದ್ರಿಯಗಳೂ ಇಲ್ಲ. ಕ್ಷೇತ್ರಜ್ಞನು ಇಂದ್ರಿಯಗಳಿಂದ ವಿವರ್ಜಿತನಾಗಿರತಕ್ಕವನು. ಇವನಿಗೂ ಇಂದ್ರಿಯಗಳ ವ್ಯಾಪಾರಕ್ಕೂ ಯಾವ ಸಂಬಂಧವೂ ಇಲ್ಲ. ಇವನಿಗೆ ಯಾವ ಸಂಶ್ಲೇಷವೂ ಇಲ್ಲ. ಆದರೆ ಇವನೇ ಎಲ್ಲವನ್ನೂ ಧರಿಸಿದ್ದಾನೆ. ಆಸಕ್ತಿಯಿಲ್ಲದ ಕಾರಣದಿಂದ ಇದರ ಧಾರಣ-ಪೋಷಣೆಗಳನ್ನು ಇವನು ಬಿಟ್ಟಿರುವುದಿಲ್ಲ. ಎಲ್ಲ ಕ್ಷೇತ್ರಗಳನ್ನೂ ಇವನೇ ಧರಿಸಿದ್ದಾನೆ. ಕ್ಷೇತ್ರಜ್ಞನು ವಸ್ತುತಃ ನಿರ್ಗುಣ. ಇವನಿಗೆ ಸತ್ತ್ವ-ರಜಸ್ತಮೋಗುಣಗಳ ಸಂಬಂಧವೇ ಇಲ್ಲ. ಆದರೆ ಇವನು ಗುಣಭೋಕ್ತೃವಿನಂತೆ ಕಾಣುತ್ತಾನೆ. ಶಬ್ದ, ಸ್ಪರ್ಶ ಮೊದಲಾದುವುಗಳ ಮೂಲಕ ಸುಖ-ದುಃಖಗಳನ್ನು ಅನುಭವಿಸುವಂತೆ ಕಾಣುತ್ತಾನೆ. ಇದನ್ನು ಶ್ರುತಿಯೂ ಪ್ರತಿಪಾದಿಸುತ್ತದೆ :

**ಅಪಾಣಿಪಾದೋ ಜವನೋ ಗೃಹೀತಾ**
**ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ ।**
**ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ**
**ತಮಾಹುರಗ್ರ್ಯಂ ಪುರುಷಂ ಮಹಾನ್ತಮ್ ॥೧೯॥**

ಶ್ವೇತಾಶ್ವತರ ೩

ಅವನು ಕೈ-ಕಾಲುಗಳಿಲ್ಲದಿದ್ದರೂ ದೂರಹೋಗಬಲ್ಲನು. ಕೈಗಳಿಲ್ಲ

ದಿದ್ದರೂ ಎಲ್ಲವನ್ನೂ ತೆಗೆದುಕೊಳ್ಳಬಲ್ಲನು. ಕಣ್ಣಿಲ್ಲದಿದ್ದರೂ ನೋಡಬಲ್ಲನು. ಕಿವಿಗಳಿಲ್ಲದಿದ್ದರೂ ಕೇಳಬಲ್ಲನು. ಮನಸ್ಸಿಲ್ಲದಿದ್ದರೂ ತಿಳಿದು ಕೊಳ್ಳಬೇಕಾದುದನ್ನೆಲ್ಲಾ ಅರಿಯುತ್ತಾನೆ. ಆದರೆ ಅವನನ್ನು ಅರಿಯಬಲ್ಲವರು ಯಾರೂ ಇಲ್ಲ. ಅವನನ್ನು ಸರ್ವಾಗ್ರಣಿ ; ಪರಿಪೂರ್ಣಸ್ವರೂಪನು ; ಮಹಾತ್ಮನು–ಎಂದು ಋಷಿಗಳು ಹೇಳುತ್ತಾರೆ.

**ಅಸಕ್ತಃ = ಅಸಙ್ಗೋ ಹ್ಯಯಂ ಪುರುಷಃ ಅಸಙ್ಗೋ ನ ಹಿ ಸಜ್ಜತೇ** (ಶ್ರುತಿಃ)

ಈ ಪುರುಷನು ಅಸಂಗನಾಗಿರುವನು. ಅಸಂಗನಾದ ಇವನು ಯಾರೊಡನೆಯೂ ಸಂಬಂಧವನ್ನು ಹೊಂದುವುದಿಲ್ಲ.

**ನಿರ್ಗುಣಃ =ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ** (ಶ್ರುತಿಃ)

ಪರಮಾತ್ಮನು ಸಾಕ್ಷಿಯಾಗಿಯೂ, ಚೇತನನಾಗಿಯೂ, ಎರಡನೆಯವ ನಿಲ್ಲದವನಾಗಿಯೂ, ಗುಣರಹಿತನಾಗಿಯೂ ಇರುವನು.

o o o

**ಸರ್ವೇನ್ದ್ರಿಯಗುಣಾಭಾಸಂ** = ಇಲ್ಲಿ ಸರ್ವೇಂದ್ರಿಯಗಳು ಎಂದರೆ ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಲ್ಲದೇ ಬುದ್ಧಿ-ಮನಸ್ಸುಗಳೆಂಬ ಎರಡು ಅಂತಃಕರಣಗಳನ್ನೂ ತೆಗೆದುಕೊಳ್ಳಬೇಕು. ಆದುದರಿಂದ ಉಪಾಧಿಗಳಾ ಗಿರುವ ಅಂತಃಕರಣ ಮತ್ತು ಬಾಹ್ಯಕರಣಗಳೆಂಬ ಈ ಎಲ್ಲ ಇಂದ್ರಿಯಗಳ ಗುಣಗಳಾದ ನಿಶ್ಚಯ-ಸಂಕಲ್ಪ-ಶ್ರವಣ ಮುಂತಾದುವುಗಳ ಮೂಲಕ ಜ್ಞೇಯವಸ್ತುವು ಪ್ರತಿಭಾಸಿತವಾಗುತ್ತದೆ ಎಂದರೆ : ಆ ಇಂದ್ರಿಯಗಳ ಕ್ರಿಯೆಯಿಂದ ಇದೂ ಕೂಡ ಕ್ರಿಯೆಯನ್ನು ಹೊಂದಿರುವಂತೆ ತೋರುತ್ತದೆ.

**ಧ್ಯಾಯತೀವ ಲೇಲಾಯತೀವ.** ಬೃ-೪-೩-೭ (ಶಂ. ಭಾ.)

**ಸರ್ವೇನ್ದ್ರಿಯಗುಣಾಭಾಸಂ** = ಇಂದ್ರಿಯಗುಣಗಳೆಂದರೆ ವೃತ್ತಿ ಗಳು. ಆ ಎಲ್ಲ ಇಂದ್ರಿಯಗಳ ವೃತ್ತಿಗಳಿಂದಲೂ ಕೂಡ ವಿಷಯ ಗಳನ್ನು ತಿಳಿಯಲು ಸಮರ್ಥನಾದವನು ಪ್ರತ್ಯಗಾತ್ಮ. ಇವನು ಸ್ವಭಾವತಃ

ಯಾವ ಇಂದ್ರಿಯಗಳೂ ಇಲ್ಲದವನು. ಇಂದ್ರಿಯವೃತ್ತಿಗಳಿಲ್ಲದೆಯೇ ತಾನೇ ಎಲ್ಲವನ್ನೂ ತಿಳಿದಿರುವವನು.

ಇವನು ಅಸಕ್ತ. ಸ್ವಭಾವತಃ ದೇವ, ಮನುಷ್ಯ–ಮುಂತಾದ ಯಾವ ದೇಹಗಳ ಸಂಗವೂ ಇಲ್ಲದವನು. ಆದರೂ ಎಲ್ಲವನ್ನೂ ಭಾವಿಸಿರುವವನು. ದೇವತೆಗಳೇ ಮುಂತಾದ ಎಲ್ಲ ದೇಹಗಳನ್ನೂ ಭಾವಿಸುವ ಸಾಮರ್ಥ್ಯವುಳ್ಳವನು.

**ಸ ಏಕಧಾ ಭವತಿ ತ್ರಿಧಾ ಭವತಿ** ಛಾಂ. ೭-೨೬-೨

ಇವನು ಸ್ವಭಾವತಃ ಸತ್ತ್ವವೇ ಮುಂತಾದ ಯಾವ ಗುಣವೂ ಇಲ್ಲದವನು. ಆದರೆ ಸತ್ತ್ವವೇ ಮುಂತಾದ ಗುಣಗಳನ್ನು ಭೋಗಿಸುವ ಸಾಮರ್ಥ್ಯವುಳ್ಳವನು. (ರಾ. ಭಾ.)

**ಸರ್ವೇನ್ದ್ರಿಯಗುಣಾಭಾಸಂ** = ಎಲ್ಲ ಇಂದ್ರಿಯಗಳನ್ನೂ ಎಂದರೆ ಇಂದ್ರಿಯವಿಷಯಗಳನ್ನೂ ಪ್ರಕಾಶಪಡಿಸುವವನು. ಅರಿಯುವಂತೆ ಮಾಡುವವನು ಅಥವಾ ಅರಿಯುವವನು. **(ಗುಣಾನ್ ತದ್ವಿಷಯಾನ್ ಆಭಾಸಯತಿ ಪ್ರತ್ಯಾಪಯತಿ ಪ್ರತ್ಯೇತಿ ಇತಿ ವಾ)** (ಮ. ಭಾ.)

**ಓಂ ಬಹಿರನ್ತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥೧೫॥**

ಜ್ಞೇಯವಸ್ತುವು ಭೂತಗಳ ಒಳಗೂ-ಹೊರಗೂ ಇದೆ. ಚಲಿಸುವುದೂ-ಚಲಿಸದೇ ಇರುವುದೂ ಆಗಿದೆ. ಸೂಕ್ಷ್ಮವಾದುದರಿಂದ ಅದು ಅರಿಯಲು ಅಶಕ್ಯವಾದುದು. ಅದು ದೂರದಲ್ಲಿರುವುದು ಮತ್ತು ಹತ್ತಿರವೂ ಇರುವುದು.

* * *

(ಪ್ರಾಣಿಗಳ ಹೊರಗೂ ಮತ್ತು ಒಳಗೂ ಆ ಬ್ರಹ್ಮವಸ್ತುವಿದೆ. ಪ್ರಾಣಿಗಳ ಒಳಗೆ ಕ್ಷೇತ್ರಜ್ಞನಾಮಕವಾಗಿರುವುದೂ ಆ ಬ್ರಹ್ಮವಸ್ತುವೇ. ಅದು ವಿಶ್ವವನ್ನೇ ವ್ಯಾಪಿಸಿದೆ.

**ತದನ್ತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ**–ಆ ಬ್ರಹ್ಮವೇ ಎಲ್ಲ ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವುದು. **ಸರ್ವಂ ಹ್ಯೇತದ್ಬ್ರಹ್ಮ**–ಈ ಎಲ್ಲವೂ ಬ್ರಹ್ಮವೇ. ನೀರಿನಲ್ಲಿ ಮುಳುಗಿಸಿರುವ ಕೊಡದ ಒಳಗೂ, ಹೊರಗೂ, ಸುತ್ತಲೂ ನೀರಿರುವಂತೆ–ಈ ವಿಶ್ವದಲ್ಲಿ

ಪ್ರಾಣಿಗಳ ಒಳಗೂ ಮತ್ತು ಹೊರಗೂ ಬ್ರಹ್ಮವು ಆವರಿಸಿದೆ. ಈ ಮಾತಿನಿಂದಲೇ ಚರದಲ್ಲಿಯೂ ಇದೆ, ಅಚರದಲ್ಲಿಯೂ ಇದೆ ಎಂದು ಹೇಳಿದಂತಾಯಿತು. ವಿಷಯವನ್ನು ಸ್ಪಷ್ಟಗೊಳಿಸಲು ಭಗವಂತನು **ಚರಂ ಚಾಚರಮೇವ ಚ**–ಈ ಬ್ರಹ್ಮವಸ್ತುವು ಕ್ಷೇತ್ರಜ್ಞರೂಪದಿಂದ ಚರವನ್ನೂ ವ್ಯಾಪಿಸಿದೆ, ಅಚರವನ್ನೂ ವ್ಯಾಪಿಸಿದೆ. ಅರ್ಥಾತ್ ಮನುಷ್ಯರ (ನಮ್ಮ ಹಿಂದೆ-ಮುಂದೆ-ಮೇಲೆ-ಕೆಳಗೆ ಮತ್ತು ಒಳಗೆ ಎಲ್ಲ ಕಡೆಗಳಲ್ಲಿಯೂ ಬ್ರಹ್ಮವೇ ಇದೆ ಎಂದು ಹೇಳಿದ್ದಾನೆ. ಹೀಗಿರುವುದಾದರೆ ನಮಗೇಕೆ ಅದರ ಅರಿವಾಗಿಲ್ಲ? ಎಂಬುದಕ್ಕೆ ಭಗವಂತನೇ ಸಮಾಧಾನಹೇಳುತ್ತಾನೆ : **ಸೂಕ್ಷ್ಮತ್ವಾತ್ತದವಿಜ್ಞೇಯಂ**–ಅತ್ಯಂತಸೂಕ್ಷ್ಮವಾಗಿರುವುದರಿಂದ ಅದನ್ನು ಅರಿಯುವ ಸಾಧ್ಯತೆಯಿಲ್ಲ ಎಂದರೆ ಅದು ಅರಿಯಲು ಅಸಾಧ್ಯವಾದುದು. **ಅಣೋರಣೀಯಾನ್**–ಅಣುವಿಗಿಂತಲೂ ಅಣುವು. **ಸೂಕ್ಷ್ಮಾತ್ಸೂಕ್ಷ್ಮತರಂ ನಿತ್ಯಂ**–ಬ್ರಹ್ಮವು ಆಕಾಶಾದಿ ಸೂಕ್ಷ್ಮಪದಾರ್ಥಗಳಿಗಿಂತಲೂ ಬಹಳ ಸೂಕ್ಷ್ಮವಾದುದು ಮತ್ತು ನಿತ್ಯವಾದುದು.

**ದೂರಸ್ಥಂ ಚಾನ್ತಿಕೇ ಚ ತತ್**=ಇನ್ನೂ ಒಂದು ವಿಚಿತ್ರವಾದ ಗುಣವನ್ನು ಈ ಬ್ರಹ್ಮವಸ್ತುವು ಹೊಂದಿದೆ. ಇದು ಬಹಳ ದೂರವಾಗಿಯೂ ಇದೆ. ಬಹಳ ಹತ್ತಿರದಲ್ಲೂ ಇದೆ. ಇದು ಹೇಗೆ? ಎಂದರೆ ಇದನ್ನು ಕುರಿತು ಯೋಚಿಸದವರಿಗೆ ಇದು ಅವರಲ್ಲಿಯೇ ಇದ್ದರೂ, ಅವರ ಸುತ್ತಮುತ್ತಲೂ ಇದ್ದರೂ–ಕೋಟಿಯೋಜನದೂರದಲ್ಲಿರುವುದೆಂದು ತಿಳಿಯಬೇಕು. ಇದರ ವಿಷಯವಾಗಿ ಆಲೋಚಿಸದೆ ಇರುವವರಿಗೆ ಇದನ್ನು ಕಂಡುಕೊಳ್ಳಲು ಇಚ್ಛೆಯಿರದಿದ್ದವರಿಗೆ ಇದು ಲಭಿಸುವ ವಸ್ತುವಲ್ಲ. ಹತ್ತಿರದಲ್ಲಿದ್ದರೂ ದೂರವಾಗಿಯೇ ಉಳಿಯುತ್ತದೆ. ಇದನ್ನು ಕಂಡುಕೊಳ್ಳುವ ಆಶಯವಿರುವವರಿಗೆ ; ಜ್ಞಾನಿಗಳಿಗೆ ಇದು ಅವರ ಹೃದಯದಲ್ಲೇ ಕುಳಿತಿರುವ ಬ್ರಹ್ಮವಸ್ತು ಅಥವಾ ಕ್ಷೇತ್ರಜ್ಞವಾಗಿದೆ.)

O O O

ಬ್ರಹ್ಮವು ಎಲ್ಲ ಭೂತಗಳ ಹೊರಗೂ ಮತ್ತು ಒಳಗೂ ಇದೆ. ಅವಿದ್ಯೆಯಿಂದ ಚರ್ಮದ ಧಾತುವಿನವರೆಗಿರುವ ಶರೀರವನ್ನೇ ಆತ್ಮವೆಂದು ಕಲ್ಪಿಸಿಕೊಂಡು ಅದನ್ನು ಅವಧಿಯಾಗಿಟ್ಟುಕೊಂಡರೆ ಜ್ಞೇಯವು ಅದಕ್ಕಿಂತಲೂ

ಹೊರಗಿದೆ ಎನ್ನುತ್ತಾನೆ. ಹಾಗೆಯೇ ಪ್ರತ್ಯಗಾತ್ಮನನ್ನು ಲಕ್ಷ್ಯವನ್ನಾಗಿಯೂ, ಶರೀರವನ್ನು ಅವಧಿಯನ್ನಾಗಿಯೂ ಮಾಡಿಕೊಂಡೇ ಜ್ಞೇಯವನ್ನು ಅದರ ಒಳಗಡೆ ಇದೆ ಎಂದು ಹೇಳಿದೆ.

**ದೂರಸ್ಥಂ ಚಾನ್ತಿಕೇ ಚ ತತ್** = ಅಜ್ಞಾನಿಗಳಿಗೆ ಅದು ಸಹಸ್ರ ವರ್ಷ-ಕೋಟಿವರ್ಷಗಳಾದರೂ ಅರಿವಿಗೆ ಬರದೇ ಇರುವುದರಿಂದ ಅವರಿಗೆ ಅತ್ಯಂತದೂರ. ಆದರೆ ಜ್ಞಾನಿಗಳಿಗೆ ಆತ್ಮವೇ ಆಗಿರುವುದರಿಂದ ಅವರಿಗೆ ಅದು ಬಹಳ ಹತ್ತಿರದ ಪದಾರ್ಥ. (ಶಂ. ಭಾ.)

ಪೃಥಿವಿಯೇ ಮುಂತಾದ ಭೂತಗಳನ್ನು ಬಿಟ್ಟು ಶರೀರವಿಲ್ಲದೇ ಪ್ರತ್ಯಗಾತ್ಮನು ಹೊರಗೂ ಇದ್ದಾನೆ. ಅವುಗಳ ಒಳಗೂ ಇದ್ದಾನೆ. ಸ್ವಭಾವತಃ ಅಚರನಾಗಿದ್ದರೂ ದೇಹಿಯಾದಾಗ ಚರವಾಗುತ್ತಾನೆ. ಅತ್ಯಂತಸೂಕ್ಷ್ಮ ವಾಗಿರುವುದರಿಂದ ಅವನನ್ನು ಸಂಸಾರಿಗಳಿಗೆ ತಿಳಿಯಲಾಗುವುದಿಲ್ಲ. ಸರ್ವ ಶಕ್ತಿಯುತವೂ ಸರ್ವಜ್ಞವೂ ಆಗಿರುವ ಆತ್ಮತತ್ತ್ವವು ಈ ಕ್ಷೇತ್ರದಲ್ಲೇ ಇದ್ದರೂ ಕೂಡ ಅತಿಸೂಕ್ಷ್ಮವಾಗಿರುವುದರಿಂದ ಸಂಸಾರಿಗಳು ಅದನ್ನು ದೇಹದಿಂದ ಬೇರೆಯಾಗಿ ತಿಳಿಯಲಾರರು. ಅದು ಅತ್ಯಂತದೂರದಲ್ಲಿದೆ. ಅದು ಸತ್ತ್ವವೇ ಮುಂತಾದ ಗುಣವಿಲ್ಲದೇ ಅದಕ್ಕೆ ವಿರುದ್ಧವಾದ ಗುಣವುಳ್ಳವರಿಗೆ ತಮ್ಮ ದೇಹದಲ್ಲೇ ಇದ್ದರೂ ಅದು ಅತಿದೂರವೇ. ಹಾಗೆಯೇ ಅಮಾನಿತ್ವವೇ ಮುಂತಾದ ಗುಣವುಳ್ಳವರಿಗೆ ಅದು ಬಹಳ ಹತ್ತಿರದ ಪದಾರ್ಥವಾಗಿದೆ.

(ರಾ. ಭಾ.)

**ಓಂ ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥೧೬॥**

ವಿಭಕ್ತವಾಗದೇ ಇರುವುದು. ಆದರೆ ಭೂತಗಳಲ್ಲಿ ವಿಭಕ್ತವಾಗಿರು ವಂತೆಯೂ ತೋರುತ್ತಿರುವುದು. ಈ ಜ್ಞೇಯಪದಾರ್ಥವು ಪ್ರಾಣಿಗಳನ್ನು ಧರಿಸಿರುವುದೂ, ಎಲ್ಲವನ್ನೂ ನುಂಗುವ ಸ್ವಭಾವವುಳ್ಳದ್ದೂ, ಉಂಟು ಮಾಡುವ ಸ್ವಭಾವವುಳ್ಳದ್ದೂ ಆಗಿರುವುದು.

* * *

(ಆ ಬ್ರಹ್ಮವಸ್ತುವು ಅಥವಾ ಜ್ಞೇಯವು ಅವಿಭಕ್ತವಾದುದು, ಅಖಂಡ

ವಾದುದು. ಆದರೆ ಭೂತಗಳಲ್ಲಿ (ಪ್ರಾಣಿಗಳಲ್ಲಿ) ಇದು ವಿಭಕ್ತವಾದಂತೆ ಭಿನ್ನ-ಭಿನ್ನವಾಗಿರುವಂತೆ ಕಾಣುತ್ತದೆ. ಬೆಳಗಾಗುತ್ತಲೇ ಹಿಮಮಣಿಯಲ್ಲಿ ಸಾವಿರಾರು ಸೂರ್ಯಬಿಂಬಗಳು ಕಾಣುತ್ತವೆ. ಆದರೆ ಇರುವವನು ಒಬ್ಬನೇ ಸೂರ್ಯ. ಹತ್ತಾರು ಪಾತ್ರೆಗಳಲ್ಲಿರುವ ನೀರಿನಲ್ಲಿ ಚಂದ್ರಬಿಂಬವು ಬೀಳು ವುದು. ಆದರೆ ಅಲ್ಲಿ ಹತ್ತಾರು ಚಂದ್ರರ ಅಸ್ತಿತ್ವವೇನೂ ಇರುವುದಿಲ್ಲ. ಇರುವವನು ಒಬ್ಬನೇ ಒಬ್ಬ ಚಂದ್ರ. ಸೊನ್ನೆಯನ್ನು ಕೂಡಲಿ, ಕಳೆಯಲಿ, ಗುಣಿಸಲಿ, ಭಾಗಿಸಲಿ–ಸೊನ್ನೆಯೇ ಉಳಿಯುತ್ತದೆ. ಸಾವಿರ ಸೊನ್ನೆಗಳಿಗೂ ಒಂದೇ ಸೊನ್ನೆಯ ಬೆಲೆ. ಸೊನ್ನೆಗಳು ಅಧಿಕವಾದರೆ ಮೌಲ್ಯದ ವ್ಯತ್ಯಾಸ ವಾಗುವುದಿಲ್ಲ. ಅದೇ ರೀತಿಯಲ್ಲಿ ಭೂತಗಳಲ್ಲಿ ಬ್ರಹ್ಮವಸ್ತುವು ವಿಭಾಗ ವಾಗಿರುವಂತೆ ಕಂಡರೂ ಅದು ವಸ್ತುತಃ ವಿಭಾಗಹೊಂದಿಲ್ಲ. ವಿಭಾಗವಾದಂತೆ ಕಾಣುತ್ತದೆ. ಆಕಾಶವು ಅನೇಕಾನೇಕ ಪಾತ್ರೆಗಳಲ್ಲಿ ಪ್ರತ್ಯೇಕವಾಗಿರುವಂತೆ ಭಾಸವಾಗುವುದು. ಆದರೆ ಪ್ರತ್ಯೇಕವಾಗಿ ಆಕಾಶವು ಯಾವಾಗಲೂ ಉಳಿಯುವುದಿಲ್ಲ. ಪ್ರತಿಯೊಂದು ಪ್ರಾಣಿಯಲ್ಲಿಯೂ ಪರಬ್ರಹ್ಮವಸ್ತುವು ಕ್ಷೇತ್ರಜ್ಞ ಎಂಬ ಹೆಸರಿನಿಂದ ಇರುವುದು ನಿಜ. ಒಂದೇ ಬ್ರಹ್ಮವು ಎಲ್ಲ ಶರೀರಗಳನ್ನೂ ಅದೇ ಹೆಸರಿನಿಂದ ಆಕ್ರಮಿಸಿ ನಿಂತಿದೆ.

ಆ ಜ್ಞೇಯವು ಎಂದರೆ ಪರಬ್ರಹ್ಮವಸ್ತುವು **ಭೂತಭೃತ್**–ಪ್ರಾಣಿಗಳಿಗೆ ಆಧಾರವಾಗಿರುವುದು. ಪರಮಾತ್ಮನು ಅವುಗಳ ರಕ್ಷಣೆಯನ್ನು ಮಾಡು ವವನು. ವಿಷ್ಣು ಎಂಬ ಹೆಸರಿನಿಂದ ವಿಶ್ವರಕ್ಷಕನು ಅವನೇ ಆಗಿದ್ದಾನೆ. ಗ್ರಸಿಷ್ಣುವೂ ಅವನೇ. ಪ್ರಲಯಕಾಲದಲ್ಲಿ ಪ್ರಾಣಿಗಳೆಲ್ಲವನ್ನೂ ನುಂಗತಕ್ಕವನೂ ಅವನೇ ಆಗಿದ್ದಾನೆ. ರುದ್ರ ಎಂಬ ಹೆಸರಿನಲ್ಲಿ ಅದೇ ಪರಬ್ರಹ್ಮವಸ್ತುವು ವಿಶ್ವವನ್ನು ಲಯಗೊಳಿಸುತ್ತದೆ. **ಪ್ರಭವಿಷ್ಣು ಚ** ಬ್ರಹ್ಮನಾಗಿ ವಿಶ್ವವನ್ನು ಪುನಃ ಸೃಷ್ಟಿಸುವವನೂ ಅವನೇ ಆಗಿರುತ್ತಾನೆ.

ಸೃಷ್ಟಿ-ಸ್ಥಿತಿ-ಲಯಗಳು ಒಂದಕ್ಕೊಂದಕ್ಕೆ ಸಂಬಂಧಿಸಿ ನಡೆಯುತ್ತವೆ. ಸಮುದ್ರಕ್ಕೆ ಹಗಲು-ರಾತ್ರಿಗಳೆನ್ನದೇ ಸಾವಿರಾರು ನದಿಗಳು ಸೇರುತ್ತಲೇ ಇರುತ್ತವೆ. ಆವಿಯ ರೂಪದಿಂದ ನೀರೂ ಸಹ ಇಂಗಿಹೋಗುತ್ತಲೇ ಇರು ತ್ತದೆ. ಈ ಎರಡು ಕಾರ್ಯಗಳೂ ಅನವರತವಾಗಿ ನಡೆಯುವುದರಿಂದ ಸಮುದ್ರವು ಉಕ್ಕಿಹರಿಯುವುದೂ ಇಲ್ಲ. ಬತ್ತಿಹೋಗುವುದೂ ಇಲ್ಲ. ಇದ

ರಂತೆಯೇ ಸೃಷ್ಟಿ-ಸ್ಥಿತಿ-ಲಯಗಳೂ ವ್ಯವಸ್ಥಿತವಾಗಿ ಪರಮಾತ್ಮನಿಂದಲೇ ನಡೆಯುತ್ತಿರುತ್ತವೆ.)

* * *

ಅವಿಭಕ್ತಂ...ಸ್ಥಿತಂ = ಜ್ಞೇಯವಸ್ತುವು ಪ್ರತಿಯೊಂದು ಶರೀರದಲ್ಲಿಯೂ ಆಕಾಶದಂತೆ ಅಖಂಡವಾಗಿದೆ. ಆದರೆ ಅದರ ಪ್ರತೀತಿಯು ಶರೀರಗಳಲ್ಲಿಯೇ ಆಗುತ್ತಿರುವುದರಿಂದ ಎಲ್ಲ ಪ್ರಾಣಿಗಳಲ್ಲಿಯೂ ಅದು ವಿಭಕ್ತವಾಗಿರುವಂತೆ ತೋರುತ್ತದೆ. ಮಿಥ್ಯೆಯಿಂದ ಕಲ್ಪಿತವಾದ ಹಾವು ಮುಂತಾದುವುಗಳಲ್ಲಿ ಹಗ್ಗ ಮುಂತಾದುವು ಇರುವಂತೆ. ಆ ಜ್ಞೇಯವಸ್ತುವು ಸ್ಥಿತಿಕಾಲದಲ್ಲಿ ಭೂತಗಳನ್ನು ಧರಿಸಿ ಪೋಷಿಸುತ್ತದೆ. ಪ್ರಲಯಕಾಲದಲ್ಲಿ ಎಲ್ಲವನ್ನೂ ನುಂಗುವ ಸ್ವಭಾವವುಳ್ಳದ್ದು ಮತ್ತು ಉತ್ಪತ್ತಿಕಾಲದಲ್ಲಿ ಎಲ್ಲವನ್ನೂ ಸೃಷ್ಟಿಮಾಡುವ ಸ್ವಭಾವವುಳ್ಳದ್ದು. ಹಗ್ಗ ಮುಂತಾದುವು ಮಿಥ್ಯೆಯಿಂದ ಕಲ್ಪಿತವಾದ ಸರ್ಪ ಮುಂತಾದುವುಗಳಿಗೆ ಕಾರಣವಾಗುವಂತೆ ಅದು ಭೂತಗಳ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವಾಗಿದೆ. (ಶಂ. ಭಾ.)

ದೇವತೆಗಳು, ಮನುಷ್ಯರು–ಮುಂತಾದ ಭೂತಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಇರುವ ಆತ್ಮವಸ್ತುವು 'ವೇದಿತಾ' 'ತಿಳಿಯುವವನು' ಎಂಬ ಆಕಾರದಿಂದ ಅವಿಭಕ್ತವಾಗಿದೆ. ಆದರೆ ಅಜ್ಞಾನಿಗಳ ದೃಷ್ಟಿಯಲ್ಲಿ ಅದು ದೇವತೆಗಳು ಮುಂತಾದ ಆಕಾರದಲ್ಲಿ ಕಾಣುವುದರಿಂದ ಅದು ದೇವತೆ, ಮನುಷ್ಯ–ಎಂದು ಮೊದಲಾಗಿ ವಿಭಾಗಗೊಂಡಿರುವಂತೆ ಅವರಿಗೆ ಕಂಡುಬರುತ್ತದೆ. ಅದು ದೇಹದೊಡನೆ ಇದ್ದರೂ ಅದರಿಂದ ಬೇರೆಯಾದ ಪದಾರ್ಥವೆಂದು ತಿಳಿಯಬೇಕು. ಅದು ಭೂತಗಳ ಭರ್ತೃವಾಗಿದೆ. ದೇಹರೂಪದಿಂದ ಒಟ್ಟಿಗೆ ಸೇರಿಕೊಂಡಿರುವ ಪೃಥಿವಿಯೇ ಮುಂತಾದ ಭೂತಗಳನ್ನು ಭಾವಿಸುತ್ತದೆ. ಹಾಗೆ ಭಾವಿಸಲ್ಪಡಬೇಕಾಗಿರುವ ಭೂತಗಳಿಂದ ಪ್ರತ್ಯೇಕವಾದ ಪದಾರ್ಥ ಎಂದು ಅದನ್ನು ತಿಳಿಯಲು ಸಾಧ್ಯ. ಹಾಗೆಯೇ ಅದು ಅನ್ನವೇ ಮುಂತಾದ ಭೌತಿಕಪದಾರ್ಥಗಳನ್ನು ತಿನ್ನುವುದಾಗಿದೆ. ಹಾಗೆ ತಿನ್ನಲ್ಪಡುವ ಭೂತಗಳಿಗಿಂತ ಅವುಗಳನ್ನು ತಿನ್ನುವ ಇದು ಬೇರೆ ಪದಾರ್ಥ ಎಂದು ತಿಳಿಯಲು ಸಾಧ್ಯ. ಹಾಗೆಯೇ ಅದು ಉತ್ಪತ್ತಿಗೂ ಕಾರಣವಾದುದು. ತಾನು ತಿಂದ ಅನ್ನ ಮುಂತಾದುವು ಬೇರೇ ಆಕಾರದಲ್ಲಿ ಪರಿಣಾಮಗೊಳ್ಳುವುದರಿಂದ ಉತ್ಪತ್ತಿಗೆ

ಕಾರಣವಾದುದು. ಹಾಗೆ ಉತ್ಪನ್ನವಾದ ಪದಾರ್ಥಗಳಿಗಿಂತಲೂ ಬೇರೆಯೆಂದು ತಿಳಿಯಲು ಸಾಧ್ಯವಾದುದು. ಸತ್ತುಹೋದ ಶರೀರದಲ್ಲಿ ತಿನ್ನುವುದು ಹುಟ್ಟುವುದು-ಮುಂತಾದುವು ಕಂಡುಬರದೇ ಇರುವುದರಿಂದ ಭೂತ ಸಂಘಾತರೂಪವಾದ ಕ್ಷೇತ್ರವು ತಿನ್ನುವುದು, ಹುಟ್ಟಿಸುವುದು, ಭಾವಿಸುವುದು ಇವುಗಳಿಗೆ ಕಾರಣವಾಗುವುದಿಲ್ಲ. (ರಾ. ಭಾ.)

**ಓಂ ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥**

ಎಲ್ಲ ಜ್ಯೋತಿಗಳಿಗೂ ಜ್ಯೋತಿಯು. ತಮಸ್ಸಿಗಿಂತಲೂ ಆಚೆ ಇರುವುದೆಂದು ಹೇಳಲ್ಪಟ್ಟಿದೆ. ಇದು ಜ್ಞಾನವೂ, ಜ್ಞೇಯವೂ, ಜ್ಞಾನಗಮ್ಯವೂ ಆಗಿರುತ್ತದೆ. ಪ್ರತಿಯೊಬ್ಬರ ಹೃದಯದಲ್ಲಿಯೂ ವಿಶೇಷರೂಪದಿಂದ ನೆಲೆಸಿದೆ.

* * *

(ಚಂದ್ರ, ಸೂರ್ಯ, ಮಿಂಚು, ನಕ್ಷತ್ರಗಳು, ಅಗ್ನಿ-ಮುಂತಾದ ಜ್ಯೋತಿಗಳೆಲ್ಲಕ್ಕೂ ಈ ಪರಬ್ರಹ್ಮವು ಜ್ಯೋತಿಯಾಗಿದೆ. ಈ ಪರಬ್ರಹ್ಮದ ಜ್ಯೋತಿಯಿಂದಲೇ ಉಳಿದ ಜ್ಯೋತಿಗಳೆಲ್ಲವೂ ಬೆಳಗುತ್ತಿವೆ. ಸೂರ್ಯನ ಪ್ರಕಾಶದಿಂದ ಚಂದ್ರನು ಬೆಳಗುತ್ತಾನೆ. ಆ ಸೂರ್ಯನೂ ಸಹ ಈ ಪರಬ್ರಹ್ಮವಸ್ತುವಿನ ಪ್ರಕಾಶದಿಂದ ಬೆಳಗುತ್ತಾನೆ.

ಇದನ್ನೇ ಕಠೋಪನಿಷತ್ತು ಹೀಗೆ ಹೇಳಿದೆ :

**ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ**
**ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ ।**
**ತಮೇವ ಭಾನ್ತಮನುಭಾತಿ ಸರ್ವಂ**
**ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೧೫॥**

ಅಧ್ಯಾಯ ೨

ಅಲ್ಲಿ (ಬ್ರಹ್ಮನಲ್ಲಿ) ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ-ಪ್ರಕಾಶಿಸುವುದಿಲ್ಲ. ಈ ಮಿಂಚುಗಳೂ ಪ್ರಕಾಶಿಸುವುದಿಲ್ಲ. ಇನ್ನು ಈ ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ (ಪರಮಾತ್ಮನನ್ನೇ) ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುವು. ಅವನ ಪ್ರಕಾಶ

ದಿಂದಲೇ ಇವೆಲ್ಲವೂ ಪ್ರಕಾಶಿಸುತ್ತಿರುವುವು. (ಈ ಜಗತ್ತಿನಲ್ಲಿರುವ ಇತರ ವಸ್ತುಗಳನ್ನು ತಮ್ಮ ಪ್ರಕಾಶದಿಂದ ಬೆಳಗಿಸಿ ತೋರಿಸಿಕೊಡುವ ಸೂರ್ಯ-ಚಂದ್ರಾದಿಗಳು ಕೂಡ ಬ್ರಹ್ಮವಸ್ತುವನ್ನು ಬೆಳಗಿಸಿ ತೋರಿಸಲಾರವು. ಏಕೆಂದರೆ ಅವುಗಳಲ್ಲಿರುವ ಬೆಳಗುವ ಶಕ್ತಿಯೂ ಬ್ರಹ್ಮಚೈತನ್ಯದಿಂದಲೇ ಉಂಟಾಗಿದೆ.)

o o o

**ತಮಸಃ ಪರಮುಚ್ಯತೇ** = ಅದು ಕತ್ತಲೆಗಿಂತಲೂ ಆಚೆ ಇರುವುದು. ಜ್ಯೋತಿಗಳಿಗೂ ಜ್ಯೋತಿಯಾದಮೇಲೆ ಅದು ಘೋರಾಂಧಕಾರಕ್ಕಿಂತಲೂ ಆಚೆಯೇ ಇರಬೇಕು. ಜ್ಯೋತಿಯು ಇರುವೆಡೆಯಲ್ಲಿ ಅಂಧಕಾರವಿರುವುದಿಲ್ಲ ಅಥವಾ ಅಜ್ಞಾನವಿರುವುದಿಲ್ಲ. ಅಜ್ಞಾನವಿರುವೆಡೆಯಲ್ಲಿ ; ಕತ್ತಲಿರುವ ಜಾಗದಲ್ಲಿ ಜ್ಯೋತಿಯಿರುವುದಿಲ್ಲ. ಒಂದಕ್ಕೊಂದು ಸೇರಿಕೊಂಡು ಇರಲು ಸಾಧ್ಯವೇ ಇಲ್ಲ.

**ವೇದಾಹಮೇತಂ ಪುರುಷಂ ಮಹಾನ್ತಂ ಆದಿತ್ಯವರ್ಣಂ ತಮಸಸ್ತು ಪಾರೇ** ಎಂದು ಶ್ರುತಿಯು ಹಾಡುತ್ತದೆ. ಆ ಬ್ರಹ್ಮವಸ್ತುವು ಅಥವಾ ಕ್ಷೇತ್ರಜ್ಞನು ನಮ್ಮಲ್ಲಿಯೇ ಇದ್ದಾನೆ. ಆದರೆ ಅಜ್ಞಾನಕ್ಕೆ ಅವನು ಬಹುದೂರನಾಗಿದ್ದಾನೆ. **ದೂರಸ್ಥಂ ಚಾನ್ತಿಕೇ ಚ**–ಅಜ್ಞಾನಕ್ಕೆ ದೂರನಾಗುತ್ತಾನೆ. ಜ್ಞಾನಕ್ಕೆ ಹತ್ತಿರವಾಗುತ್ತಾನೆ.

**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ** = ಜ್ಞಾನವೂ ಅವನೇ, ಜ್ಞೇಯವೂ ಅವನೇ, ಜ್ಞಾನಗಮ್ಯನೂ ಅವನೇ ಆಗಿರುತ್ತಾನೆ.

ಅವನಿಗೆ ಜ್ಞಾನೋದಯವಾಯಿತು–ಎಂದರೆ ಜ್ಞೇಯವನ್ನು ತಿಳಿದುಕೊಂಡನು ಎಂದೇ ಅರ್ಥ. ಜ್ಞೇಯವನ್ನು ಅರಿತನು–ಎಂದರೆ ಜ್ಞಾನದಿಂದ ಅವನನ್ನು ಸಂಪಾದಿಸಿದನು ಎಂದರ್ಥ. ಜ್ಞಾನಗಮ್ಯ–ಎಂದರೆ ಪರಬ್ರಹ್ಮವಸ್ತು ಎಂದು ನೇರವಾದ ಅರ್ಥವೇ ಆಗುತ್ತದೆ.

**ಅಮಾನಿತ್ವವೇ** ಮುಂತಾದುವು ಜ್ಞಾನದ ಸಾಧನೆಗಳು ಅಥವಾ ಜ್ಞಾನಿಯ ಲಕ್ಷಣಗಳು. ಜ್ಞಾನಿಯು ಮಾತ್ರವೇ ಇಷ್ಟು ಗುಣಗಳಿಂದ ಸಂಪನ್ನನಾಗಿರಬಲ್ಲನು. ಇಷ್ಟು ಗುಣಸಂಪನ್ನತೆಯು ಜ್ಞಾನಕ್ಕೆ ಒಯ್ಯುತ್ತದೆ.

ಆದುದರಿಂದ 'ಜ್ಞಾನ' ಎಂದರೂ ಅವನೇ, 'ಜ್ಞೇಯ' ಎಂದರೂ ಅವನೇ, 'ಜ್ಞಾನಗಮ್ಯ' ಎಂದರೂ ಅವನೇ ಆಗುತ್ತಾನೆ.

**ಹೃದಿ ಸರ್ವಸ್ಯ ವಿಷ್ಠಿತಮ್**= ಜ್ಞಾನಗಮ್ಯವೂ ಜ್ಞಾನವೂ ಆದ ಈ ಜ್ಞೇಯವು (ಪರಬ್ರಹ್ಮವಸ್ತುವು) ಎಲ್ಲರ ಹೃದಯದಲ್ಲಿಯೂ **ವಿಷ್ಠಿತಮ್** ವಿಶೇಷವಾಗಿ ಕುಳಿತಿದೆ. ಇದು ಕೇವಲ ಜ್ಞಾನಗಮ್ಯವಾದುದರಿಂದ ಜ್ಞಾನದಿಂದಲೇ ಇದನ್ನು ಹೃದಯಗುಹೆಯಲ್ಲಿ ಹುಡುಕಬೇಕು. ಅಲ್ಲಿಯೇ ಇದು ಸುಪ್ರತಿಷ್ಠಿತವಾಗಿದೆ.

ಬ್ರಹ್ಮವಸ್ತುವು ಆಕಾಶದಂತೆ ಹೊರಗೂ ತುಂಬಿದೆಯಾದರೂ ಅದನ್ನು ನಾವು ಅನುಭವಿಸಬೇಕಾದರೆ ಹೃದಯಗುಹೆಯಲ್ಲಿಯೇ. ಹೃದಿಸ್ಥವಾಗಿರುವ ಬ್ರಹ್ಮವಸ್ತುವನ್ನು ಅಥವಾ ಕ್ಷೇತ್ರಜ್ಞನನ್ನು ಜ್ಞಾನದಿಂದ ಕಂಡುಕೊಂಡು ಅದರ ಆನಂದವನ್ನೂ ಅನುಭವಿಸಬಹುದು.)

O O O

**ತಮಸಃ ಪರಂ**= ಅಜ್ಞಾನಕ್ಕಿಂತಲೂ ಹೊರಗಿರುವುದು ಎಂದರೆ ಅಜ್ಞಾನದ ಸ್ಪರ್ಶವೇ ಇಲ್ಲದಿರುವುದು. **ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ**=ಜ್ಞಾನಂ ಎಂದರೆ ಅಮಾನಿತ್ವವೇ ಮುಂತಾದುವುಗಳು. ಜ್ಞೇಯಂ ಎಂದರೆ ಜ್ಞೇಯಂ **ಯತ್ತತ್ಪ್ರವಕ್ಷ್ಯಾಮಿ**–ಎಂದು ಮೊದಲಾಗಿ ಹೇಳಲ್ಪಟ್ಟಿರುವ ಪರಮಾತ್ಮನ ಸ್ವರೂಪ. **ಜ್ಞಾನಗಮ್ಯ** ಎಂದರೆ ಜ್ಞೇಯವಸ್ತುವನ್ನೇ ಅದರ ಜ್ಞಾನವುಂಟಾದಾಗ ಅದು ಜ್ಞಾನದ ಫಲವಾಗುವುದರಿಂದ ಅದನ್ನು ಮೊದಲು ಜ್ಞಾನಗಮ್ಯ ಎಂದು ಹೇಳುತ್ತೇವೆ ಮತ್ತು ಅದರ ಜ್ಞಾನಬಂದಾದ ಮೇಲೆ ಅದೇ ಜ್ಞೇಯವೆನಿಸುತ್ತದೆ.

ಇವು ಮೂರೂ ಬುದ್ಧಿಯಲ್ಲಿ ಮಾತ್ರವೇ ಪ್ರಕಾಶಿತವಾಗುವುದರಿಂದ ಅವನ್ನು ಪ್ರಾಣಿಗಳ ಹೃದಯದಲ್ಲಿ ನೆಲೆಗೊಂಡಿವೆ–ಎಂದು ಹೇಳಿದೆ.

(ಶಂ. ಭಾ.)

ದೀಪ, ಆದಿತ್ಯ, ಮಣಿ–ಇವೇ ಮುಂತಾದ ಜ್ಯೋತಿಗಳಿಗೂ ಕೂಡ ಆತ್ಮವೇ ಜ್ಯೋತಿಯು–ಎಂದರೆ ಪ್ರಕಾಶವು. ಆತ್ಮಪ್ರಭಾರೂಪವಾದ ಜ್ಞಾನವೇ ಅವುಗಳನ್ನು ಪ್ರಕಾಶಪಡಿಸುವುದು. ದೀಪ ಮುಂತಾದುವುಗಳಾದರೋ ವಿಷಯ ಮತ್ತು ಇಂದ್ರಿಯಗಳ ಸನ್ನಿಕರ್ಷಕ್ಕೆ ವಿರೋಧಿಯಾದ ಕತ್ತಲೆಯನ್ನು

ಹೋಗಲಾಡಿಸುವ ಕೆಲಸವನ್ನು ಮಾತ್ರವೇ ಮಾಡುತ್ತವೆ. ಅಷ್ಟುಮಾತ್ರದಿಂದಲೇ ಅವುಗಳ ಪ್ರಕಾಶಕತ್ವ. **ತಮಸಃ ಪರಮುಚ್ಯತೇ**=ಅದು ಪ್ರಕೃತಿಗಿಂತಲೂ ಬೇರೆಯಾಗಿ ಅದಕ್ಕಿಂತಲೂ ಪ್ರಧಾನವಾದುದು. ಇಲ್ಲಿ ತಮಃ ಎಂಬ ಶಬ್ದವು ಸೂಕ್ಷ್ಮಾವಸ್ಥೆಯಲ್ಲಿರುವ ಪ್ರಕೃತಿಯನ್ನು ಸೂಚಿಸುತ್ತದೆ. **ಯಸ್ಯ ತಮಃ ಶರೀರಂ** ಬೃ. ೫-೭-೧೩

**ತಮ ಆಸೀತ್ತಮಸಾ ಗೂಢಮಗ್ರೇ ಪ್ರಕೇತಮ್**

ಯಜುರ್ವೇದ ೨-೮-೯-೪

**ಆಸೀದಿದಂ ತಮೋಭೂತಂ** ಮನು. ೧-೯

ಮುಂತಾದ ಶ್ರುತಿ-ಸ್ಮೃತಿವಚನಗಳಲ್ಲಿ ಹೇಳಿರುವಂತೆ **ತಮಃ** ಶಬ್ದವು ಮೂಲಪ್ರಕೃತಿಯನ್ನು ಸೂಚಿಸುತ್ತದೆ.

ಆದುದರಿಂದ ಅದು ಜ್ಞಾನವೂ ಜ್ಞೇಯವೂ ಆಗಿದೆ. ಎಂದರೆ ಕೇವಲ ಜ್ಞಾನಾಕಾರವಾಗಿದೆ. ಅಮಾನಿತ್ವವೇ ಮುಂತಾದ ಜ್ಞಾನಸಾಧನಗಳಿಂದ ಹೊಂದಲ್ಪಡಬೇಕಾಗಿರುವುದರಿಂದ ಅದು ಜ್ಞಾನಗಮ್ಯ. (ರಾ. ಭಾ.)

**ಓಂ ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥೧೮॥**

ಹೀಗೆ ಕ್ಷೇತ್ರವನ್ನೂ, ಜ್ಞಾನವನ್ನೂ ಹಾಗೂ ಜ್ಞೇಯವನ್ನೂ ಸಂಗ್ರಹವಾಗಿ ಹೇಳಿದ್ದಾಯಿತು. ನನ್ನ ಭಕ್ತನಾದವನು ಇದನ್ನು ತಿಳಿದು ನನ್ನ ಭಾವವನ್ನು ಹೊಂದುವುದಕ್ಕೆ ತಕ್ಕವನಾಗುತ್ತಾನೆ.

* * *

(ಅರ್ಜುನ! ಹೀಗೆ ನಾನು ಕ್ಷೇತ್ರ ಎಂದರೆ ಯಾವುದೆಂಬುದನ್ನು **ಮಹಾಭೂತಾನಿ** ಮತ್ತು **ಇಚ್ಛಾದ್ವೇಷಃ**–ಎಂಬ ಶ್ಲೋಕಗಳಲ್ಲಿ ವರ್ಣಿಸಿದ್ದೇನೆ. ಜ್ಞಾನ ಎಂದರೆ ಯಾವುದೆಂಬುದನ್ನು **ಅಮಾನಿತ್ವಂ ; ಇನ್ದ್ರಿಯಾರ್ಥೇಷು ; ಅಸಕ್ತಿರನಭಿಷ್ವಙ್ಗಃ; ಮಯಿ ; ಅಧ್ಯಾತ್ಮಜ್ಞಾನನಿತ್ಯತ್ವಂ**–ಈ ಐದು ಶ್ಲೋಕಗಳಲ್ಲಿ ವಿವರಿಸಿದ್ದೇನೆ. ಜ್ಞೇಯವನ್ನು (ಪರಬ್ರಹ್ಮವಸ್ತುವನ್ನು ) **ಅನಾದಿಮತ್ ; ಸರ್ವತಃ ಪಾಣಿಪಾದಂ ; ಸರ್ವೇನ್ದ್ರಿಯಗುಣಾಭಾಸಂ ; ಬಹಿರನ್ತಶ್ಚ ; ಅವಿಭಕ್ತಂ ; ಜ್ಯೋತಿಷಾಮಪಿ**–ಈ ಶ್ಲೋಕಗಳಲ್ಲಿ ವಿವರಿಸಿದ್ದೇನೆ.

**ಮದ್ಭಕ್ತಃ ಏತದ್ವಿಜ್ಞಾಯ ಮದ್ಭಾವಾಯ ಉಪಪದ್ಯತೇ ।**

**ಏತದ್ವಿಜ್ಞಾಯ** = ಕ್ಷೇತ್ರ, ಜ್ಞಾನ, ಜ್ಞೇಯ–ಇವುಗಳನ್ನು ತಿಳಿದು ಕೊಳ್ಳಬೇಕು ಮತ್ತು ಜ್ಞೇಯವನ್ನು ತಿಳಿದುಕೊಳ್ಳಲು ಹೇಳಿರುವ ಜ್ಞಾನದಂತೆ ಭಕ್ತನು ನಡೆದುಕೊಳ್ಳಬೇಕು. ಹೀಗೆ ನಡೆದುಕೊಳ್ಳುವವನು **ಮದ್ಭಕ್ತಃ** –ನನ್ನ ಭಕ್ತನು ಎನ್ನುತ್ತಾನೆ ಭಗವಂತ. ಕೇವಲ ಭಕ್ತನೆಂದು ಹೇಳುವುದಿಲ್ಲ. ಏಕೆಂದರೆ ಕೇವಲ ಭಕ್ತನಾದರೆ ಅವನ ಭಾವವನ್ನು ಹೊಂದಿದಂತಾಗುವುದಿಲ್ಲ. ಆದುದರಿಂದ **ಮದ್ಭಕ್ತಃ** ಎನ್ನುತ್ತಾನೆ. **ಮದ್ಭಕ್ತಃ** ಎಂಬುದಕ್ಕೆ ವಾಸುದೇವನೇ ಸರ್ವಸ್ವವೂ ಎಂದು ಭಾವಿಸುವುದು. ತಂದೆ-ತಾಯಿ-ಗುರು- ಸ್ನೇಹಿತ ಎಲ್ಲವೂ ಅವನೇ ಎಂದು ಭಾವಿಸುವುದು. ಅವನ ಪೂಜಾ-ಕೀರ್ತನ-ಧ್ಯಾನಗಳನ್ನೇ ಪರಮಸುಖವನ್ನಾಗಿಯೂ, ಅವನ ವಿಸ್ಮರಣೆಯನ್ನು ಮಹಾದುಃಖವನ್ನಾಗಿಯೂ ಭಾವಿಸುವುದು. ಕನಸು, ನನಸುಗಳಲ್ಲಿಯೂ ವಾಸುದೇವನ ದಿವ್ಯಮೂರ್ತಿಯನ್ನೇ ಕಾಣುವುದು. ಹಿಂದೆ-ಮುಂದೆ-ಹೃದಯದಲ್ಲಿ ಸರ್ವತ್ರ ವಾಸುದೇವನೇ ಇದ್ದಾನೆಂದು ಭಾವಿಸುವುದು. ಈ ರೀತಿಯಲ್ಲಿ ವಾಸುದೇವನ ಪರಮಭಕ್ತನಾಗಿ ತನ್ಮಯನೇ ಆದವನು ಅವನ ಭಾವವನ್ನೇ ಹೊಂದುತ್ತಾನೆ.)

o o o

**ಸಮಾಸತಃ** = ಎಲ್ಲ ವೇದಾರ್ಥಗಳನ್ನೂ ಮತ್ತು ಗೀತಾರ್ಥವನ್ನೂ ಒಂದುಕಡೆ ಸೇರಿಸಿ ಹೀಗೆ ಸಂಕ್ಷೇಪವಾಗಿ ಹೇಳಿದ್ದೇನೆ. ಸಮ್ಯಗ್ದರ್ಶನಕ್ಕೆ ಅಧಿಕಾರಿಯು ಯಾರು ಎಂದರೆ : ನನ್ನ ಭಕ್ತ. ಎಂದರೆ ಈಶ್ವರನೂ ಸರ್ವ ಜ್ಞನೂ, ಪರಮಗುರುವೂ, ವಾಸುದೇವನೂ ಆದ ನನ್ನಲ್ಲಿ ತನ್ನ ಎಲ್ಲ ಭಾವ ಗಳನ್ನೂ ಸಮರ್ಪಣೆಮಾಡಿ ನೋಡುವುದು ; ಕೇಳುವುದು ; ಮುಟ್ಟು ವುದು–ಎಲ್ಲವೂ ಕೂಡ ಭಗವಂತನಾದ ವಾಸುದೇವನೇ ಎಂಬ ನಿಶ್ಚಿತವಾದ ಬುದ್ಧಿಯುಳ್ಳವನು. ಅವನು ಮೇಲೆ ಹೇಳಿದಂತೆ ಈ ಯಥಾರ್ಥಜ್ಞಾನವನ್ನು ತಿಳಿದು ನನ್ನ ಭಾವವನ್ನು ಎಂದರೆ ಪರಮಾತ್ಮಭಾವವನ್ನು (ಮೋಕ್ಷವನ್ನು ) ಹೊಂದುತ್ತಾನೆ. (ಶಂ. ಭಾ.)

**ಏತತ್ ವಿಜ್ಞಾಯ** = ಕ್ಷೇತ್ರದ ಯಾಥಾತ್ಮ್ಯ, ಕ್ಷೇತ್ರದಿಂದ ಪ್ರತ್ಯೇಕ ಮಾಡಲ್ಪಟ್ಟ ಆತ್ಮಸ್ವರೂಪದ ಪ್ರಾಪ್ತಿಯ ಉಪಾಯದ ಬಗೆಗೆ ಯಥಾರ್ಥ

ವಾದ ತಿಳಿವಳಿಕೆ ಮತ್ತು ಕ್ಷೇತ್ರಜ್ಞನ ಬಗೆಗೆ ಯಥಾರ್ಥವಾದ ತಿಳಿವಳಿಕೆ– ಇವುಗಳನ್ನು ಹೊಂದಿ ನನ್ನ ಭಾವವನ್ನು ಎಂದರೆ ಅಸಂಸಾರಿತ್ವವನ್ನು ಹೊಂದುತ್ತಾನೆ. (ರಾ. ಭಾ.)

ಜ್ಞಾನಸಾಧನವು ವಿಕಾರಗಳಲ್ಲಿ ಅಂತರ್ಗತವಾಗುವುದರಿಂದ ಅದನ್ನು ಮೊದಲು ಹೇಳಿದೆ. ಅನಂತರದಲ್ಲಿ ಪ್ರಭಾವವನ್ನು ಹೇಳುವ ಕಾರಣ ಅದು ಬಹುವಾಗಿರುವುದರಿಂದ ಮತ್ತು ಸಾಧನಗಳಿಗೆ ಅತ್ಯಂತವಾಗಿ ಉಪಯೋಗ ವಾಗುವುದರಿಂದ. (ಮ. ಭಾ.)

**ಓಂ ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಮ್ಭವಾನ್ ॥೧೯॥**

ಪ್ರಕೃತಿ ಮತ್ತು ಪುರುಷ ಈ ಎರಡನ್ನೂ ಅನಾದಿಗಳೆಂದು ತಿಳಿ ಮತ್ತು ವಿಕಾರಗಳೂ ಗುಣಗಳೂ ಪ್ರಕೃತಿಯಿಂದ ಉಂಟಾದುವುಗಳೆಂದು ತಿಳಿ.

* * *

(ಈ ಹಿಂದೆ ಹೇಳಿದ ಕ್ಷೇತ್ರ-ಕ್ಷೇತ್ರಜ್ಞ ಎಂಬುದನ್ನು ಶ್ರೀಕೃಷ್ಣನಿಲ್ಲಿ ಹೆಚ್ಚು ವ್ಯಾಪಕಾರ್ಥದಲ್ಲಿ ಹೇಳಿದ್ದಾನೆ. ಕ್ಷೇತ್ರವೇ ಪ್ರಕೃತಿ. ಕ್ಷೇತ್ರಜ್ಞನೇ ಪುರುಷ. ಪ್ರಕೃತಿ ಮತ್ತು ಪುರುಷ ಎರಡೂ ಅನಾದಿ ಎನ್ನುತ್ತಾನೆ ಪರಮಾತ್ಮ. ಎರಡಕ್ಕೂ ಆದಿ ಎಂಬುದಿಲ್ಲ.

ಹಗಲಿಗೆ ರಾತ್ರಿಯು ಅಂಟಿಕೊಂಡಿರುವಂತೆ–ಪುರುಷನಿಗೆ ಪ್ರಕೃತಿಯು ಅಂಟಿಕೊಂಡಿದೆ. ಅನಾದಿಯಾದ ಪುರುಷನಲ್ಲಿ ಪ್ರಕೃತಿಯು ಇದ್ದುಬಿಟ್ಟಿರು ವುದರಿಂದಲೇ ಅದೂ ಅನಾದಿಯಾಗಿದೆ. ನೆರಳಿಗೆ ರೂಪವಿಲ್ಲದ್ದರಿಂದ ಅದಕ್ಕೆ ಬೆಲೆಯಿಲ್ಲವೆಂಬುದು ನಿಜ. ಆದರೆ ಅದು ರೂಪದ ಜೊತೆಯಲ್ಲಿಯೇ ಇರು ವುದರಿಂದ ಅದನ್ನು ತಿರಸ್ಕರಿಸುವುದಕ್ಕಾಗುವುದಿಲ್ಲ. ಆದುದರಿಂದಲೇ ರಾತ್ರಿಯ ರೂಪವಾಗಿರುವ ಪ್ರಕೃತಿಯೂ ಸಹ ಅನಾದಿ ಎನಿಸಿಕೊಂಡಿದೆ.

ಇಲ್ಲಿ ಪುರುಷ ಎಂದರೆ ಜೀವಾತ್ಮ. ಜೀವಾತ್ಮನನ್ನು ಅನಾದಿ ಎಂದು ಹೇಳಿದ್ದಾನೆ ಪರಮಾತ್ಮ. ಜೀವಾತ್ಮನು ಅಜ್ಞಾನದ ಪೊರೆಯನ್ನು ತೆಗೆದುಹಾಕಿ ಪರಮಾತ್ಮನಲ್ಲಿ ಸೇರಿಕೊಳ್ಳುವವರೆಗೂ ನಾನಾರೂಪಗಳಲ್ಲಿ ಅನೇಕಾ ಕಾರಗಳಲ್ಲಿ ಎಂದೆಂದಿಗೂ ಇರತಕ್ಕವನೇ.

ಪಂಚಮಹಾಭೂತಗಳು, ಅಹಂಕಾರ, ಬುದ್ಧಿ, ಮನಸ್ಸು, ಹತ್ತು ಇಂದ್ರಿಯಗಳು–ಇವುಗಳು ವಿಕಾರಗಳು. ಗುಣಗಳು ಎಂದರೆ ಸತ್ತ್ವ-ರಜಸ್ತಮೋಗುಣಗಳು. ಇವುಗಳೂ ಪ್ರಕೃತಿಯಿಂದ ಹುಟ್ಟಿದುವುಗಳೆಂದು ತಿಳಿ– ಎನ್ನುತ್ತಾನೆ ಶ್ರೀಕೃಷ್ಣ.)

O O O

ಈಶ್ವರನಿಗೆ ಪ್ರಕೃತಿಗಳಾಗಿರುವ ಪ್ರಕೃತಿ ಮತ್ತು ಪುರುಷ ಇಬ್ಬರೂ ಕೂಡ ಆದಿಯಿಲ್ಲದವರು. ಈಶ್ವರನ ಈಶ್ವರತ್ವವು ನಿತ್ಯವಾಗಿರುವುದರಿಂದ ಅವನ ಎರಡು ಪ್ರಕೃತಿಗಳೂ ಕೂಡ ನಿತ್ಯವಾಗಿರುವುದು ಉಚಿತವೇ ಆಗಿದೆ. ಈ ಎರಡು ಪ್ರಕೃತಿಗಳಿಂದ ಕೂಡಿರುವಿಕೆಯೇ ಈಶ್ವರನ ಈಶ್ವರತ್ವ. ತನ್ನ ಯಾವ ಎರಡು ಪ್ರಕೃತಿಗಳಿಂದ ಈಶ್ವರನು ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನಾಗುತ್ತಾನೆಯೋ ಅವೆರಡೂ ಅನಾದಿಸಿದ್ಧವಾಗಿಯೇ ಇದ್ದು ಸಂಸಾರಕ್ಕೆ ಕಾರಣವಾಗಿವೆ. ವಿಕಾರಗಳು ಮತ್ತು ಗುಣಗಳು ಎಂದರೆ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುವಂತೆ ಬುದ್ಧಿಯಿಂದ ಆರಂಭಿಸಿ ಶರೀರ ಮತ್ತು ಇಂದ್ರಿಯಗಳವರೆಗಿನ ಪದಾರ್ಥಗಳನ್ನು ಮತ್ತು ಸುಖ-ದುಃಖ, ಮೋಹ ಮುಂತಾದ ವೃತ್ತಿಗಳ ರೂಪದಲ್ಲಿ ಪರಿಣಾಮಗೊಳ್ಳುವ ಗುಣಗಳನ್ನು ಪ್ರಕೃತಿಯಿಂದ ಉಂಟಾದುವುಗಳು ಎಂಬುದಾಗಿ ಭಾವಿಸು. ಪ್ರಕೃತಿ ಪರಿಣಾಮಗಳು ಎಂದು ತಿಳಿ. ಪ್ರಕೃತಿ ಎಂಬುದು ಈಶ್ವರನ ತ್ರಿಗುಣಾತ್ಮಕವಾದ ಮಾಯಾಶಕ್ತಿ ; ವಿಕಾರಗಳಿಗೆ ಕಾರಣರೂಪವಾದ ಶಕ್ತಿ. (ಶಂ. ಭಾ.)

ಪ್ರಕೃತಿ ಮತ್ತು ಆತ್ಮ–ಇವುಗಳ ಸ್ವಭಾವಗಳು ಸರ್ವಥಾ ಭಿನ್ನವಾದುವುಗಳು. ಆದರೆ ಅವುಗಳ ಸಂಸರ್ಗವು ಅನಾದಿಯಾಗಿದೆ. ಅವೆರಡರ ಸಂಸರ್ಗದಲ್ಲಿ ಅವುಗಳ ಕಾರ್ಯಭೇದ, ಅವುಗಳ ಸಂಸರ್ಗಕ್ಕೆ ಕಾರಣ–ಇವುಗಳನ್ನು ಮುಂದೆ ನಿರೂಪಿಸುತ್ತಾನೆ. ಬಂಧನಕ್ಕೆ ಕಾರಣವಾಗಿರುವ ಇಚ್ಛಾದ್ವೇಷ ಮುಂತಾದ ವಿಕಾರಗಳನ್ನೂ ಮತ್ತು ಮೋಕ್ಷಕ್ಕೆ ಕಾರಣವಾದ ಅಮಾನಿತ್ವವೇ ಮುಂತಾದ ವಿಕಾರಗುಣಗಳನ್ನೂ ಪ್ರಕೃತಿಯಿಂದ ಹುಟ್ಟಿರುವುವೆಂದು ತಿಳಿ. ಪರಸ್ಪರಸಂಸೃಷ್ಟವಾಗಿರುವ ಪ್ರಕೃತಿ ಮತ್ತು ಪುರುಷ ಇಬ್ಬರೂ ಅನಾದಿಗಳು ಎಂದು ತಿಳಿ.

ಪುರುಷನ ಜೊತೆಯಲ್ಲಿ ಸಂಸರ್ಗಹೊಂದಿ ಅನಾದಿಕಾಲದಿಂದ ಪ್ರವೃತ್ತ

ವಾಗಿ ಕ್ಷೇತ್ರದ ಆಕಾರವಾಗಿ ಪರಿಣಾಮಗೊಂಡಿರುವ ಪ್ರಕೃತಿಯು ಇಚ್ಛಾ, ದ್ವೇಷ ಮುಂತಾದ ತನ್ನ ವಿಕಾರಗಳಿಂದ ಪುರುಷನ ಬಂಧನಕ್ಕೆ ಕಾರಣವಾಗುತ್ತದೆ. ಅದೇ ಪ್ರಕೃತಿಯೇ ಅಮಾನಿತ್ವವೇ ಮುಂತಾದ ತನ್ನ ವಿಕಾರಗಳಿಂದ ಪುರುಷನ ಮೋಕ್ಷಕ್ಕೆ ಕಾರಣವಾಗುತ್ತದೆ–ಎಂದು ಅರ್ಥ. (ರಾ. ಭಾ.)

**ಗುಣಾಃ** = ಸತ್ತ್ವವೇ ಮುಂತಾದುವುಗಳು. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳು ಕೂಡ ಪ್ರಕೃತಿಯ ವಿಕಾರಗಳೇ ಆಗಿರುವುದರಿಂದ ವಿಕಾರಗಳನ್ನೂ ಮತ್ತು ಗುಣಗಳನ್ನೂ ಎಂದು ಭಗವಂತನು ಏಕೆ ಪ್ರತ್ಯೇಕವಾಗಿ ಹೇಳಿದ್ದಾನೆ? ಎಂದರೆ : ಸತ್ತ್ವಾದಿ ತ್ರಿಗುಣಗಳು ಲಯಕ್ಕೆ ಮೊದಲು ಸೃಷ್ಟಿ ಕಾಲದಲ್ಲಿ ಅಲ್ಪವಿಕಾರಗಳನ್ನು ಹೊಂದಿರುತ್ತವೆ. ಇಚ್ಛಾದಿಗಳು ಬಹುವಿಕಾರಗಳನ್ನು ಹೊಂದಿರುತ್ತವೆ. ಇದನ್ನು ಜ್ಞಾಪಿಸಲು ಎರಡನ್ನೂ ಪ್ರತ್ಯೇಕವಾಗಿ ಹೇಳಿದೆ.

**ಕಾರ್ಯಾಕಾರ್ಯಗುಣಾಸ್ತಿಸ್ರೋ ಯತಃ ಸ್ವಲ್ಪೋದ್ಭವೋ ಜನೌ ।**
(ಮ. ಭಾ.)

**ಓಂ ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥೨೦॥**

ಕಾರ್ಯ ಮತ್ತು ಕಾರಣಗಳ (ಕರಣಗಳ) ಯಾವ ಕರ್ತೃತ್ವವುಂಟೋ ಅದಕ್ಕೆ ಪ್ರಕೃತಿಯು ಕಾರಣವೆಂದು ಹೇಳಲ್ಪಟ್ಟಿದೆ. ಸುಖ ಮತ್ತು ದುಃಖಗಳ ಯಾವ ಭೋಕ್ತೃತ್ವವುಂಟೋ ಅದಕ್ಕೆ ಪುರುಷನು ಕಾರಣನೆಂದು ಹೇಳಲ್ಪಟ್ಟಿದ್ದಾನೆ.

* * *

(ಪ್ರಕೃತಿ ಮತ್ತು ಪುರುಷರ ವಿಶಿಷ್ಟವಾದ ವ್ಯಾಪಾರವನ್ನು ಇಲ್ಲಿ ನಿರೂಪಿಸಲಾಗಿದೆ. ಕಾರ್ಯ ಎಂದರೆ ವಿಕಾರಗಳು : ಪರಿಣಾಮಗಳು. ಹನ್ನೊಂದು ಇಂದ್ರಿಯಗಳು ಮತ್ತು ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಐದು ಇಂದ್ರಿಯವಿಷಯಗಳು–ಇವು ವಿಕಾರಗಳಾದುದರಿಂದ ಕಾರ್ಯ ಎನಿಸುತ್ತವೆ. ಕಾರಣ ಎಂದರೆ ಪ್ರಕೃತಿ ಮತ್ತು ವಿಕೃತಿ ಎರಡೂ ಆಗಿರುವುದರಿಂದ, ಕಾರಣಗಳೂ ಆಗಿರುವ ಮಹತ್ತು, ಅಹಂಕಾರ, ಭೂತತನ್ಮಾತ್ರೆಗಳು ಎಂಬ

ಏಳು ಕಾರಣ ಎಂಬುದರ ಬದಲು ಕರಣ ಎಂಬ ಪಾಠವನ್ನಿಟ್ಟುಕೊಂಡರೂ ಅದೂ ವಿಕಾರಹೊಂದುವ ಈ ಏಳು ಪದಾರ್ಥಗಳು ಕಾರಣ ಎಂಬ ಅರ್ಥವನ್ನು ಹೇಳುತ್ತದೆ.

ಈ ಕಾರ್ಯ ಮತ್ತು ಕಾರಣ (ಕರಣ) ಇವುಗಳು ಉತ್ಪನ್ನವಾಗುವಿಕೆಗೆ ಮತ್ತು ಕಾರ್ಯಕಾರಿಯಾಗುವುದಕ್ಕೆ ಕರ್ತೃತ್ವ ಎಂದು ಹೆಸರು. ಇವುಗಳು ಪರಿಣಾಮರೂಪವಾದ ಕಾರ್ಯಮಾಡುವುದಕ್ಕೆ ಕಾರಣವಾದುದು ಪ್ರಕೃತಿ. ಇವುಗಳೆಲ್ಲವೂ ತಮ್ಮ ಕ್ರಿಯೆಗಳನ್ನು ಮಾಡುವುದಕ್ಕೆ ಪುರುಷನ ಅಧಿಷ್ಠಾನ ದಿಂದ ಕೂಡಿದ ಪ್ರಕೃತಿಯೇ ಕಾರಣ. ಆದುದರಿಂದ ಪ್ರಕೃತಿಯು ಕಾರ್ಯ- ಕಾರಣಗಳ ಕರ್ತೃತ್ವಕ್ಕೆ ಕಾರಣ ಎಂದು ಹೇಳಬಹುದು. ಹಾಗಾದರೆ ಪುರುಷನ ವ್ಯಾಪಾರವೇನು? ಅವನು ಯಾವುದಕ್ಕೆ ಕಾರಣ? ಎಂದರೆ—ಸುಖ ಮತ್ತು ದುಃಖಗಳ ಭೋಕ್ತೃತ್ವಕ್ಕೆ ಎಂದರೆ ಅವುಗಳನ್ನು ಭೋಗಿಸುವುದಕ್ಕೆ ಅವನು ಕಾರಣ. ಹೀಗೆ ಪ್ರಕೃತಿಯ ವ್ಯಾಪಾರ—ಕರ್ತೃತ್ವ ಮತ್ತು ಪುರುಷನ ವ್ಯಾಪಾರ— ಭೋಕ್ತೃತ್ವ. ಕಾರ್ಯ-ಕಾರಣ-ಸುಖ-ದುಃಖರೂಪವಾಗಿ ಪ್ರಕೃತಿಯು ಪರಿಣಾಮದ ಕಾರ್ಯವನ್ನು ಮಾಡುವುದರಿಂದ ಅದಕ್ಕೆ ಕರ್ತೃತ್ವ. ಭೋಗ್ಯವಾದ ಪ್ರಕೃತಿಯಿಂದ ಸುಖ-ದುಃಖಗಳನ್ನು ಅನುಭವಿಸುವವನು ಚೇತನ (ಪುರುಷ).

ಪ್ರಕೃತಿಯು ಸ್ವತಃ ಕರ್ತೃವಾಗುತ್ತದೆ—ಎಂಬುದು ಸಾಂಖ್ಯರ ಮತ. ಆದರೆ ಜಡವಾದ ಪ್ರಕೃತಿಯು ಸ್ವತಃ ಕಾರ್ಯಮಾಡಲಾರದು. ಪುರುಷನಿಂದ ಅಧಿಷ್ಠಿತವಾದಾಗಲೇ ಅದಕ್ಕೆ ಕಾರ್ಯಮಾಡಲು ಸಾಮರ್ಥ್ಯ—ಎಂಬುದು ವೇದಾಂತಿಗಳ ಅಭಿಪ್ರಾಯ.)

o o o

ಕಾರ್ಯ ಎಂದರೆ ಶರೀರ ಮತ್ತು ಅದನ್ನು ಆರಂಭಿಸುವ ಭೂತಗಳು ಹಾಗೂ ಇಂದ್ರಿಯವಿಷಯಗಳು. ಕರಣ ಎಂದರೆ ಹತ್ತು ಇಂದ್ರಿಯಗಳು ಮತ್ತು ಅವುಗಳನ್ನು ಆಶ್ರಯಿಸಿರುವ ಸುಖ-ದುಃಖ-ಮೋಹಾತ್ಮಕವಾದ ಸತ್ತ್ವ-ರಜಸ್ತಮೋಗುಣಗಳು ಒಟ್ಟು—ಹದಿಮೂರು. ಇವು ಕರಣಗಳನ್ನು ಆಶ್ರಯಿಸಿರುವುದರಿಂದ ಕರಣ ಎಂದು ಕರೆಯಲ್ಪಡುತ್ತವೆ. ಈ ಕರಣಗಳ

ಕರ್ತೃತ್ವವಿರುವುದರಿಂದ ಎಂದರೆ ಅವುಗಳನ್ನು ಪ್ರಾರಂಭಿಸುವ ಪ್ರಕೃತಿಯು ಕಾರಣ ಎನಿಸುತ್ತದೆ. ಕಾರ್ಯ ಮತ್ತು ಕರಣಗಳನ್ನು ಉತ್ಪಾದನೆಮಾಡುವುದರಿಂದ ಪ್ರಕೃತಿಯು ಸಂಸಾರಕ್ಕೆ ಕಾರಣವಾಗಿದೆ.

ಕರಣ ಎನ್ನುವುದರ ಬದಲು ಕಾರಣ ಎಂಬ ಪಾಠವನ್ನಿಟ್ಟುಕೊಂಡರೂ ಅರ್ಥವು ಅದೇ ಆಗುತ್ತದೆ. ಯಾವುದು ಯಾವುದರ ವಿಪರಿಣಾಮವೋ ಅದು ಅದರ ಕಾರ್ಯ (ವಿಕಾರ), ವಿಕಾರಿಯಾದುದಕ್ಕೆ ಕಾರಣ. ಆ ವಿಕಾರ ಮತ್ತು ವಿಕಾರಿಗಳಿಗೆ ಉತ್ಪಾದಕವಾದುದರಿಂದ ಪ್ರಕೃತಿಯು ಸಂಸಾರಕ್ಕೆ ಕಾರಣ.

ಅಥವಾ ಕಾರ್ಯ ಎಂದರೆ ಹದಿನಾರು ವಿಕಾರಗಳು. ಕಾರಣ ಎಂದರೆ ಪ್ರಕೃತಿ-ವಿಕೃತಿಗಳಾದ ಏಳು ಪದಾರ್ಥಗಳು. ಅವುಗಳನ್ನು ಪ್ರಾರಂಭಿಸುವುದರಿಂದ ಪ್ರಕೃತಿಯು ಹೇತು (ಕಾರಣ) ಎನಿಸುತ್ತದೆ.

ಪುರುಷನು ಸಂಸಾರಕ್ಕೆ ಹೇಗೆ ಕಾರಣ ಎಂಬುದನ್ನು ಶ್ಲೋಕದ ಉತ್ತರಾರ್ಧವು ಹೇಳುತ್ತದೆ. ಪುರುಷ, ಜೀವ, ಕ್ಷೇತ್ರಜ್ಞ, ಭೋಕ್ತಾ—ಇವುಗಳು ಪರ್ಯಾಯಪದಗಳು. ಪುರುಷನು ಸುಖ-ದುಃಖ—ಮುಂತಾದ ಭೋಗ್ಯಗಳನ್ನು ಭೋಗಿಸುವುದಕ್ಕೆ ಕಾರಣ ಎನಿಸುತ್ತಾನೆ.

ಹೀಗೆ ಕಾರ್ಯ-ಕಾರಣಗಳ ಕರ್ತೃವಾಗಿರುವುದರಿಂದಲೂ ಸುಖ-ದುಃಖಗಳ ಭೋಕ್ತೃವಾಗಿರುವುದರಿಂದಲೂ ಪ್ರಕೃತಿ-ಪುರುಷರು ಸಂಸಾರಕ್ಕೆ ಹೇಗೆ ಕಾರಣ ಎಂದರೆ : ಕಾರ್ಯ-ಕರಣ ಮತ್ತು ಸುಖ-ದುಃಖ ಮುಂತಾದ ರೂಪವಾದ ಕಾರಣ ಮತ್ತು ಫಲದ ರೂಪದಲ್ಲಿ ಪ್ರಕೃತಿಯ ಪರಿಣಾಮವನ್ನು ಹೊಂದದಿದ್ದರೆ ಮತ್ತು ಚೇತನನಾದ ಪುರುಷನು ಅವುಗಳ ಭೋಕ್ತೃವಾಗಿರದಿದ್ದರೆ ಸಂಸಾರವು ಸಿದ್ಧವಾಗುವುದಿಲ್ಲ. ಹಾಗೆ ಪರಿಣಾಮಹೊಂದುವ ಭೋಗ್ಯವಾದ ಪ್ರಕೃತಿಯೊಡನೆ, ಅದಕ್ಕೆ ವಿರುದ್ಧಗುಣವುಳ್ಳ ಪುರುಷನು ಭೋಕ್ತೃವಾಗಿ ಅವಿದ್ಯಾರೂಪವಾದ ಸಂಯೋಗವನ್ನು ಯಾವಾಗ ಹೊಂದುವನೋ ಆಗಲೇ ಸಂಸಾರ.

ಪುರುಷನಿಗೆ ಸುಖ-ದುಃಖಗಳ ಸಂಯೋಗವೇ ಸಂಸಾರ. ಸಂಸಾರಿಯಾಗಿರುವಿಕೆ ಎಂದರೆ ಅವನು ಸುಖ-ದುಃಖಗಳನ್ನು ಭೋಗಿಸುವಿಕೆ. ಸುಖ–

**ದುಃಖಸಂಭೋಗಃ ಸಂಸಾರಃ । ಪುರುಷಸ್ಯ ಚ ಸುಖ-ದುಃಖಾನಾಂ ಸಂಭೋಕ್ತೃತ್ವಂ ಸಂಸಾರಿತ್ವಂ** (ಶಂ. ಭಾ.)

ಪ್ರಕೃತಿ-ಪುರುಷರ ಕಾರ್ಯಭೇದಗಳು : ಕಾರ್ಯ ಎಂದರೆ ಶರೀರ. ಕಾರಣಗಳು ಎಂದರೆ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು ಮತ್ತು ಮನಸ್ಸು. ಇವುಗಳು ಕ್ರಿಯೆಗಳನ್ನು ಮಾಡುವುದಕ್ಕೆ ಪುರುಷನಿಂದ ಅಧಿಷ್ಠಿತವಾದ ಪ್ರಕೃತಿಯೇ ಕಾರಣ. ಕಾರ್ಯಶಬ್ದವು ಭೋಗಾಯತನವಾಗಿರುವಿಕೆ ಎಂಬ ಕಾರ್ಯವಿಶೇಷವನ್ನು ಹೇಳುವುದರಿಂದ ಶರೀರವು ಕಾರ್ಯ-ಕಾರಣವೆಂದರೆ **ಇನ್ದ್ರಿಯಾಣಿ ದಶೈಕಂ ಚ** ಎಂದು ಹೇಳಲ್ಪಟ್ಟಿರುವ ಹನ್ನೊಂದು. ಇಲ್ಲಿ ಕರ್ತೃತ್ವ ಎಂದರೆ ಪ್ರಯತ್ನವೇ ಮುಂತಾದುವುಗಳಿಗೆ ಆಶ್ರಯವಾಗಿರು ವಿಕೆಯಲ್ಲ. ಅಚೇತನವಾದ ಪ್ರಕೃತಿಗೆ ಆ ಧರ್ಮವೆಲ್ಲಿ ಬಂತು? ಆದುದರಿಂದ ಕರ್ತೃತ್ವ ಎಂದರೆ ವ್ಯಾಪಾರಕ್ಕೆ ಆಶ್ರಯವಾಗಿರುವಿಕೆ–ಕ್ರಿಯಾಕಾರಿತ್ವ. ಭೋಗ ಸಾಧನಭೂತವಾದ ಕ್ರಿಯೆಗಳು ಪುರುಷನಿಂದ ಅಧಿಷ್ಠಿತವಾಗಿ ಕ್ಷೇತ್ರದ ರೂಪದಲ್ಲಿ ಪರಿಣಾಮಹೊಂದಿರುವ ಪ್ರಕೃತಿಯನ್ನು ಆಶ್ರಯಿಸಿದೆ ಎಂದು ಅರ್ಥ. ಪುರುಷನಲ್ಲಾದರೋ ಅಧಿಷ್ಠಾನವಾಗಿರುವಿಕೆಯು ಮಾತ್ರವೇ ಪ್ರಕೃತಿ ಗಿಂತಲೂ ಅಧಿಕವಾದ ಗುಣ ಎಂಬ ಅಭಿಪ್ರಾಯವು **ಕರ್ತಾ ಶಾಸ್ತ್ರಾರ್ಥ ವತ್ತ್ವಾತ್** ಬ್ರ. ಸೂ. ೨-೩-೩೩ ಮುಂತಾದ ಕಡೆಗಳಲ್ಲಿ ಹೇಳಲ್ಪಟ್ಟಿದೆ. ಹೀಗೆ (ಪುರುಷಾಧಿಷ್ಠಿತವಾದ) ಪ್ರಕೃತಿಗೆ ಕರ್ತೃತ್ವವಾದರೆ ಭೋಕ್ತೃತ್ವವು ಯಾರಿಗೆ ಎಂದರೆ-ಪುರುಷನಿಗೆ. ಅವನು ಸುಖ-ದುಃಖಗಳ ಭೋಕ್ತೃತ್ವಕ್ಕೆ ಕಾರಣ ಎಂದರೆ ಸುಖ-ದುಃಖಗಳ ಅನುಭವಕ್ಕೆ ಆಶ್ರಯ. (ರಾ. ಭಾ.)

**ಕಾರ್ಯ** ಎಂದರೆ ಶರೀರ. **ಶರೀರಂ ಕಾರ್ಯಮುಚ್ಯತೇ**. ಕಾರಣ ಗಳು ಎಂದರೆ ಇಂದ್ರಿಯಗಳು. ಪುರುಷನು ಸುಖ-ದುಃಖಗಳ ಭೋಕ್ತಾ ಎಂಬಲ್ಲಿ ಭೋಗ ಎಂದರೆ ಅನುಭವ. ತನ್ನದು ಎಂದು ಸಾಕ್ಷಾತ್ಕರಿಸಿ ಕೊಳ್ಳುವಿಕೆ. ಆ ಅನುಭವವು ಚಿದ್ರೂಪನಾಗಿರುವ ಪುರುಷನಿಗೆ ಸಾಧ್ಯವೇ ಹೊರತು ಪ್ರಕೃತಿಗೆ ಸಾಧ್ಯವಿಲ್ಲ. ಏಕೆಂದರೆ : ಅದು ಜಡ-ಅಚೇತನ. ಹಾಗಾದರೆ ಜಡವಾದ ಪ್ರಕೃತಿಯು ಕರ್ತೃವು ಹೇಗೆ ಆಗುತ್ತದೆ? ಎಂದರೆ :

ಪರಿಣಾಮವಾಗುವುದಕ್ಕೆ ಕಾರಣವಾಗಿರುವುದರಿಂದ ಅದರಲ್ಲಿ ಕರ್ತೃತ್ವವನ್ನು ಔಪಚಾರಿಕವಾಗಿ ಹೇಳಿದೆ. (ಮ. ಭಾ.)

ಕಾರ್ಯ ಎಂದರೆ ಬಂಧ ಮತ್ತು ಮೋಕ್ಷರೂಪವಾದುದು. ಅದಕ್ಕೆ ಕಾರಣರೂಪವಾದುವುಗಳು ವಿಕಾರಗಳು ಮತ್ತು ಗುಣಗಳು. ಇವುಗಳು ಸಮುತ್ಪಾದಕವಾಗಿರುವುದಕ್ಕೆ ಪ್ರಕೃತಿಯೇ ಕಾರಣ. ಪುರುಷನಿಗಾದರೋ ಆ ಪ್ರಕೃತಿಯೊಳಗಡೆ ಜ್ಞಾನವನ್ನು ಉಂಟುಮಾಡುವಿಕೆಯೇ ಕರ್ತೃತ್ವಕ್ಕಿಂತಲೂ ಹೆಚ್ಚಾಗಿದೆ. ಅವನು ಪ್ರಕೃತಿಸಂಸೃಷ್ಟವಾಗಿ ಅದರಿಂದ ಉಂಟಾಗುವ ಸುಖ-ದುಃಖಗಳ ಭೋಕ್ತೃತ್ವಕ್ಕೆ ಕಾರಣನಾಗುತ್ತಾನೆ ಎಂದರೆ : ಸುಖ-ದುಃಖಾದ್ಯನುಭವಕ್ಕೆ ಆಶ್ರಯನಾಗುತ್ತಾನೆ. ಇವೆರಡೂ ಕ್ಷೇತ್ರಧರ್ಮಗಳೇ ಎಂದು ಹೇಳಬೇಕಾಗಿದ್ದರೂ ವಿಕಾರವು ಜಡದಲ್ಲಿ ಪರ್ಯವಸಾನವಾಗುವುದರಿಂದ ಆ ಬಗೆಗೆ ಕ್ಷೇತ್ರಕ್ಕೇ ಪ್ರಾಧಾನ್ಯ. ಭೋಗವು (ಚಿತ್) ಜ್ಞಾನದಲ್ಲಿ ಪರ್ಯವಸಾನವಾಗುವುದರಿಂದ ಆ ಬಗೆಗೆ ಚೈತನ್ಯಕ್ಕೇ ಪ್ರಾಧಾನ್ಯ.

–ಶ್ರೀವಲ್ಲಭಾಚಾರ್ಯರು.

ಕಾರ್ಯವು ಭೂತ ಮತ್ತು ತನ್ಮಾತ್ರರೂಪದಲ್ಲಿ ಹತ್ತುಬಗೆ. ಕಾರಣ ಎಂಬುದು ಬುದ್ಧಿ ಮತ್ತು ಅಹಂಕಾರ ಮುಂತಾದ ರೂಪದಲ್ಲಿ ಹದಿಮೂರು ಬಗೆ. ಅವುಗಳ ಸ್ವರೂಪೋತ್ಪತ್ತಿಗೆ ಮತ್ತು ಪ್ರತಿಕ್ಷಣವೂ ಪರಿಣಾಮ ಹೊಂದುವುದಕ್ಕೆ ಮೂಲಪ್ರಕೃತಿಯು ಕಾರಣ. ಸುಖ-ದುಃಖಗಳನ್ನು ಭೋಗಿಸುವುದಕ್ಕೆ ಪುರುಷನು ಕಾರಣ–ಎಂದು ಕೆಲವರು ವ್ಯಾಖ್ಯಾನ ಮಾಡುತ್ತಾರೆ.

ಈ ವಿಷಯವನ್ನೇ ಮುಂದೆ ಶ್ರೀಕೃಷ್ಣನು ಸ್ಪಷ್ಟಪಡಿಸುತ್ತಾನೆ :

**ಓಂ ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ॥೨೧॥**

ಪುರುಷನು ಪ್ರಕೃತಿಸ್ಥನಾಗಿರುವುದರಿಂದಲೇ ಪ್ರಕೃತಿಯಿಂದಾಗಿರುವ ಗುಣಗಳನ್ನು ಭೋಗಿಸುತ್ತಿರುವನು. ಗುಣಸಂಗವೇ ಪುರುಷನಿಗೆ ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಹುಟ್ಟುವುದಕ್ಕೆ ಕಾರಣವು.

* * *

(ಪುರುಷನು ಸ್ವಭಾವತಃ ನಿತ್ಯಶುದ್ಧ–ನಿತ್ಯಬುದ್ಧ–ಪರಿಪೂರ್ಣನು. ಆದರೆ ಪ್ರಕೃತಿಯೊಡನೆ ಸೇರಿಕೊಂಡುಬಿಟ್ಟರೆ ಸ್ಫಟಿಕಶಿಲೆಯ ಬಣ್ಣವು ಅದರ ಹಿಂದಿರುವ ಬಣ್ಣದ ಕಾಗದದ ಬಣ್ಣಕ್ಕೆ ತಿರುಗುವಂತೆ ಪುರುಷನ ಬಣ್ಣವು ಬದಲಾಯಿಸುತ್ತದೆ. ಪ್ರಕೃತಿಯ ಒಳಹೊಕ್ಕ ಶುದ್ಧಪುರುಷನು ಸಹವಾಸ ದಿಂದಾಗಿ ಪ್ರಕೃತಿಯ ವಿಕಾರಗಳೆಲ್ಲವನ್ನೂ 'ನಾನು-ನನ್ನದು' ಎಂದೇ ಭಾವಿ ಸುವನು. ಇದಕ್ಕೆ ದೇಹಾತ್ಮಭಾವ ಎನ್ನುತ್ತಾರೆ. ಪುರುಷನು ಸ್ಥೂಲ, ಸೂಕ್ಷ್ಮ ಮತ್ತು ಕಾರಣ–ಈ ಮೂರು ಶರೀರಗಳಲ್ಲಿರುವವರೆಗೂ ಪ್ರಕೃತಿಯಲ್ಲಿ ಹುಟ್ಟಿದ ಗುಣಗಳನ್ನು, ಸುಖ-ದುಃಖಾದಿಗಳನ್ನು ಭೋಗಿಸುತ್ತಲೇ ಇರುತ್ತಾನೆ. ಇಷ್ಟು ಮಾತ್ರವಲ್ಲ. **ಸತ್** ಎಂದರೆ ದೇವತೆಗಳೇ ಮುಂತಾದ ಒಳ್ಳೆಯ ಯೋನಿಗಳಲ್ಲಿ, **ಅಸತ್** ಎಂದರೆ ಪಶು-ಪಕ್ಷಿ ಮುಂತಾದ ಅಧಮ ಯೋನಿಗಳಲ್ಲಿ, **ಸದಸದ್ಯೋನಿ** ಎಂದರೆ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಸೇರಿರುವ ಮನುಷ್ಯರ ಯೋನಿಗಳಲ್ಲಿ ಜನ್ಮತಾಳಲು ಈ ಪುರುಷನು ಪ್ರಕೃತಿಜನ್ಯವಾದ ಗುಣಗಳೊಡನೆ (ಸತ್ತ್ವ-ರಜಸ್ತಮೋಗುಣಗಳೊಡನೆ) ಸಂಪರ್ಕವನ್ನು ಹೊಂದಿರುವುದೇ ಕಾರಣವಾಗಿರುತ್ತದೆ.)

o o o

**ಪ್ರಕೃತಿಸ್ಥಃ** = ಕಾರ್ಯ ಮತ್ತು ಕರಣಗಳ ರೂಪದಲ್ಲಿ ಪರಿಣಾಮ ಗೊಂಡಿರುವ ಅವಿದ್ಯಾರೂಪವಾದ ಪ್ರಕೃತಿಯಲ್ಲಿರುತ್ತಾನೆ. ಪುರುಷನು ಹೀಗೆ ಪ್ರಕೃತಿಯಲ್ಲಿರುವುದರಿಂದ ಪ್ರಕೃತಿಯನ್ನೇ ತನ್ನ ಸ್ವರೂಪವೆಂದು ತಿಳಿಯುತ್ತಾನೆ. ಪ್ರಕೃತಿಯಿಂದುಂಟಾದ ಸುಖ-ದುಃಖ ಮತ್ತು ಮೋಹರೂಪದಿಂದ ಪ್ರಕಟಗೊಂಡ ಗುಣಗಳನ್ನು 'ನಾನು ಸುಖೀ, ನಾನು ದುಃಖೀ, ನಾನು ಮೂಢ, ನಾನು ಪಂಡಿತ'–ಎಂದು ಭಾವಿಸುತ್ತಾ ಭೋಗಿಸುತ್ತಾನೆ.

ಜನ್ಮಕ್ಕೆ ಕಾರಣ ಅವಿದ್ಯೆ. ಆದರೂ ಕೂಡ ಜನ್ಮರೂಪವಾದ ಸಂಸಾರಕ್ಕೆ ಪ್ರಧಾನಕಾರಣ : ಪುರುಷನು ಅನುಭವಿಸಲ್ಪಡುತ್ತಿರುವ ಸುಖ-ದುಃಖ-ಮೋಹರೂಪವಾದ ಗುಣಗಳಲ್ಲಿ ಆಸಕ್ತನಾಗುವಿಕೆ ; ತದ್ರೂಪನಾಗುವಿಕೆ.

ಸಂಸಾರಕ್ಕೆ ಕಾರಣ ಪ್ರಕೃತಿಯಲ್ಲಿ ಇರುವಿಕೆ ಎಂಬ ಅವಿದ್ಯೆ ಮತ್ತು ಗುಣಗಳಲ್ಲಿ ಆಸಕ್ತಿ. ಇವುಗಳನ್ನು ಬಿಟ್ಟುಬಿಡಬೇಕಾಗಿರುವುದರಿಂದ ಇವುಗಳ

ಸ್ವರೂಪವನ್ನು ಇಲ್ಲಿ ಹೇಳಿದ್ದಾನೆ. ಇವುಗಳಿಂದ ನಿವೃತ್ತಿಹೊಂದಲು ಸಾಧನ : ಸಂನ್ಯಾಸಸಹಿತವಾದ ಜ್ಞಾನ-ವೈರಾಗ್ಯಗಳು. (ಶಂ. ಭಾ.)

ಪುರುಷನು ಸ್ವತಃ ಸ್ವಾನುಭವಸುಖಸ್ವರೂಪನಾಗಿದ್ದರೂ ಅವನಿಗೆ ವಿಷಯಸುಖ-ದುಃಖಗಳ ಅನುಭವವು ಹೇಗೆ ಬರುತ್ತದೆ?–ಎಂಬುದನ್ನು ಇಲ್ಲಿ ಹೇಳಲಾಗಿದೆ. ಇಲ್ಲಿ **ಗುಣಃ** ಎಂಬ ಶಬ್ದವು ಔಪಚಾರಿಕವಾಗಿ ಗುಣದ ಕಾರ್ಯಗಳನ್ನು ಹೇಳುತ್ತದೆ. ಸ್ವತಃ ಸ್ವಾನುಭವೈಕಸುಖನಾದ ಪುರುಷನು ಪ್ರಕೃತಿಯಲ್ಲಿ ಸಂಸೃಷ್ಟವಾಗಿ ಆ ಪ್ರಕೃತಿಯ ಗುಣಗಳನ್ನು ಎಂದರೆ ಪ್ರಕೃತಿಯ ಸಂಸರ್ಗವೆಂಬ ಉಪಾಧಿಯಿಂದ ಬಂದ ಸತ್ತ್ವಾದಿಗುಣಗಳ ಕಾರ್ಯವಾದ ಸುಖ-ದುಃಖಗಳನ್ನು ಅನುಭವಿಸುತ್ತಾನೆ. ಇವನು ಒಳ್ಳೆಯ ಅಥವಾ ಕೆಟ್ಟ ಯೋನಿಗಳಲ್ಲಿ ಜನ್ಮಹೊಂದುವುದಕ್ಕೆ ಕಾರಣ ಈ ಗುಣಕಾರ್ಯಗಳ ಸಂಗ.

ಹಿಂದು-ಹಿಂದಿನ ಪ್ರಕೃತಿಪರಿಣಾಮವಾದ ದೇವ-ಮನುಷ್ಯಾದಿ ಯೋನಿ ವಿಶೇಷಗಳಲ್ಲಿ ಸೇರಿದ ಪುರುಷನು ಆಯಾ ಯೋನಿಗೆ ಅನುಗುಣವಾದ ಸತ್ತ್ವಾದಿಗುಣಮಯವಾದ ಸುಖ-ದುಃಖಾದಿಗಳಲ್ಲಿ ಆಸಕ್ತನಾಗಿ ಅದಕ್ಕೆ ಸಾಧನ ವಾದ ಪಾಪ-ಪುಣ್ಯಕರ್ಮಗಳಲ್ಲಿ ತೊಡಗುತ್ತಾನೆ. ಅನಂತರ ಆ ಪಾಪ-ಪುಣ್ಯ ಗಳ ಫಲವನ್ನು ಅನುಭವಿಸುವುದಕ್ಕೋಸ್ಕರ ಸದಸದ್ಯೋನಿಗಳಲ್ಲಿ ಹುಟ್ಟು ತ್ತಾನೆ. ಅನಂತರ ಕರ್ಮಗಳನ್ನು ಮಾಡುತ್ತಾನೆ. ಅನಂತರ ಅದಕ್ಕೆ ತಕ್ಕಂತೆ ಹುಟ್ಟುತ್ತಾನೆ. ಅಮಾನಿತ್ವವೇ ಮುಂತಾದ ಆತ್ಮಸಾಧನೆಯ ಗುಣಗಳನ್ನು ಸೇವಿಸುವವರೆಗೂ ಹೀಗೆಯೇ ಸಂಸರಣವನ್ನು ಹೊಂದುತ್ತಿರುತ್ತಾನೆ. (ಈ ಸಂಸಾರಪ್ರವಾಹವು ಅನಾದಿಯಾದರೂ ಅನಂತವೇನೂ ಅಲ್ಲ.) (ರಾ. ಭಾ.)

**ಓಂ ಉಪದ್ರಷ್ಟಾನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥೨೨॥**

ಈ ದೇಹದಲ್ಲಿರುವ ಪರಮಪುರುಷನು ಉಪದ್ರಷ್ಟನು, ಅನುಮತಿಸು ವವನು, ಸ್ವಾಮಿಯು, ಭೋಕ್ತೃವು, ಮಹೇಶ್ವರನು ಮತ್ತು ಪರ ಮಾತ್ಮನು–ಎಂದು ಕರೆಯಲ್ಪಡುತ್ತಾನೆ.

* * *

(ಶ್ರೇಷ್ಠನಾದ ಈ ಪುರುಷನು ಉಪದ್ರಷ್ಟಾ–ಹತ್ತಿರದಲ್ಲೇ ಇದ್ದು ಇಂದ್ರಿಯಗಳ ಮೂಲಕವಾಗಿ, ಮನಸ್ಸಿನ ಮೂಲಕವಾಗಿ ಆಗುತ್ತಿರುವ ಕರ್ಮ

ಗಳೆಲ್ಲವನ್ನೂ ನೋಡುತ್ತಲೇ ಇರುವವನು. ಕೇವಲ ನೋಡುವುದು ಮಾತ್ರ ವಲ್ಲ. **ಅನುಮನ್ತಾ**–ಮನಸ್ಸಿನಿಂದ ಪ್ರೇರಿತನಾಗಿ ಬುದ್ಧಿಯು ಹೇಳುವುದಕ್ಕೆ ಅಂಗೀಕಾರಮುದ್ರೆಯನ್ನೊತ್ತುವವನು. **ಭರ್ತಾ**–ದೇಹವನ್ನು ಧರಿಸಿರತಕ್ಕ ವನು ಇವನೇ. ಅರ್ಥಾತ್ ಇವನಿದ್ದರೇ ದೇಹದ ವ್ಯಾಪಾರಗಳು ನಡೆಯು ವುವು. ಇವನಿಲ್ಲದಿದ್ದರೆ ದೇಹದ ವ್ಯಾಪಾರವೇ ಇಲ್ಲ. ಈ ಕಾರಣದಿಂದಲೇ ಈ ದೇಹವನ್ನು ಇವನು ಧರಿಸುವವನು ಅಥವಾ ಈ ದೇಹಕ್ಕೆ ಇವನು ಸ್ವಾಮಿಯು. **ಭೋಕ್ತಾ**-ಭೋಕ್ತೃವೂ ಇವನೇ. ಪ್ರಕೃತಿಯಲ್ಲಿ ಇರುವವನಾದು ದರಿಂದ ಪ್ರಕೃತಿಜನ್ಯವಾದ ಗುಣಗಳ ಸಂಗದಿಂದಾಗಿ ಸುಖ-ದುಃಖಗಳನ್ನೂ ಸಹ ಇವನು ಅನುಭವಿಸುತ್ತಾನೆ. **ಮಹೇಶ್ವರಃ**–ಪ್ರಕೃತಿಯನ್ನು ಕಳೆದು ಸ್ವಸ್ವರೂಪದಲ್ಲಿ ಸೇರಿಕೊಂಡಾಗ ಇವನು ಪರಮೇಶ್ವರನು. ಇಂದ್ರಾದಿ ಲೋಕಪಾಲಕರುಗಳಿಗೂ ಈಶ್ವರನಾಗುತ್ತಾನೆ. ಇವನೇ ಪರಮಾತ್ಮನೆಂಬ ಹೆಸರಿನಿಂದಲೂ ಕರೆಯಲ್ಪಡುತ್ತಾನೆ.

ಇದಕ್ಕೆ ಶ್ರೀ ವಿನೋಬಾ ಅವರ ವಿವರಣೆ ಈ ರೀತಿಯಾಗಿದೆ :

ದೇವರು ಮೊದಲು ತಟಸ್ಥನಾಗಿದ್ದು ನೋಡುತ್ತಾನೆ. ನೈತಿಕ ಜೀವನ ಕ್ಕಾರಂಭವಾಗಿ ಸತ್ಕರ್ಮಗಳಿಗೆ ಮೊದಲಾದಾಗ 'ಶಾಬಾಸ್' ಎನ್ನುತ್ತಾನೆ. ಚಿತ್ತದ ಸೂಕ್ಷ್ಮವಾದ ಕೊಳೆಯನ್ನು ತೊಳೆದುಹಾಕಲು ತನ್ನ ಪ್ರಯತ್ನವು ಸಾಲದೆ ಭಕ್ತನು ಕರೆದಾಗ ಆ ಅನಾಥನಾಥನು ಸಹಾಯಕ್ಕಾಗಿ ಧಾವಿಸುತ್ತಾನೆ. ಅನಂತರ, ಫಲವನ್ನು ಅವನಿಗೇ ಅರ್ಪಿಸಿ, ಅವನನ್ನು ಭೋಕ್ತನನ್ನಾಗಿ ಮಾಡಬೇಕು. ಕೊನೆಗೆ ಸಂಕಲ್ಪಗಳೆಲ್ಲವನ್ನೂ ಅವನ ಮೇಲೆಯೇ ಬಿಟ್ಟು ಜೀವನವೆಲ್ಲವನ್ನೂ ಹರಿಮಯವನ್ನಾಗಿ ಮಾಡಬೇಕು. ಮಾನವನ ಅಂತಿಮಸಾಧ್ಯ ಇದು. ಕರ್ಮಯೋಗ, ಭಕ್ತಿಯೋಗಗಳೆಂಬ ರೆಕ್ಕೆಗಳಿಂದ ಹಾರುತ್ತಾ ಸಾಧಕನು ಈ ಕೊನೆಯ ಮೆಟ್ಟಿಲನ್ನು ಏರಬೇಕು.)

o o o

ಉಪದ್ರಷ್ಟಾ= ತಾನು ಕ್ರಿಯೆಯಲ್ಲಿ ತೊಡಗದೇ ಸಮೀಪದಲ್ಲಿದ್ದು ನೋಡುವವನು. ಋತ್ವಿಕ್, ಯಜಮಾನನೇ–ಮುಂತಾದವರು ಯಜ್ಞಕರ್ಮ ದಲ್ಲಿ ತೊಡಗಿರುವಾಗ ಯಜ್ಞವಿದ್ಯೆಯಲ್ಲಿ ಕುಶಲನಾದ ಮತ್ತೊಬ್ಬನು ತಟಸ್ಥನಾಗಿ ಋತ್ವಿಕ್, ಯಜಮಾನ–ಮುಂತಾದವರು ಮಾಡುವ ಕೆಲಸಗಳ

ಗುಣ-ದೋಷಗಳನ್ನು ನೋಡುವಂತೆ ಕಾರ್ಯ ಮತ್ತು ಕರಣಗಳ ವ್ಯಾಪಾರಗಳಲ್ಲಿ ತಾನು ತೊಡಗದೇ ಆ ವ್ಯಾಪಾರಗಳನ್ನು ಹತ್ತಿರದಲ್ಲಿದ್ದು ನೋಡುತ್ತಿರುವ ವಿಲಕ್ಷಣವಾಗಿರುವ ಆತ್ಮಾ ಅಥವಾ ದೇಹ. ಕಣ್ಣು, ಮನಸ್ಸು, ಬುದ್ಧಿ, ಆತ್ಮ ಇವೆಲ್ಲವೂ ದ್ರಷ್ಟ್ರಾಕಾರವೇ. ಅವುಗಳಲ್ಲಿ ಹೊರಗಡೆಯ ದ್ರಷ್ಟಾ ದೇಹ. ಅದರಿಂದ ಆರಂಭಿಸಿ ಒಳಗೊಳಗೆ ಹೋಗುತ್ತಾ ಎಲ್ಲಕ್ಕಿಂತಲೂ ಹತ್ತಿರದಲ್ಲಿರುವ ಪ್ರತ್ಯಗಾತ್ಮನು ಯಾವನುಂಟೋ, ಯಾವನಿಗಿಂತಲೂ ಒಳಗೆ ಬೇರೊಬ್ಬ ದ್ರಷ್ಟಾ ಇಲ್ಲವೋ ಅವನೇ ಅತ್ಯಂತಸಮೀಪದಿಂದ ನೋಡುವುದರಿಂದ ಉಪದ್ರಷ್ಟಾ ಅಥವಾ ಯಜ್ಞದಲ್ಲಿರುವ ಉಪದ್ರಷ್ಟನಂತೆ ಎಲ್ಲವನ್ನೂ ಅನುಭವಿಸುವವನಾದ ಆತ್ಮ.

**ಅನುಮನನ**–ಎಂದರೆ ಅನುಮೋದನ. ಕ್ರಿಯೆಯಲ್ಲಿ ತೊಡಗಿರುವ ಅಂತಃಕರಣ ಮತ್ತು ಇಂದ್ರಿಯಗಳೇ ಮುಂತಾದುವುಗಳ ಕ್ರಿಯೆಗಳಲ್ಲಿ ಸಂತೋಷರೂಪವಾದ ಅನುಮೋದನವನ್ನು ಮಾಡುವವನು **ಅನುಮನ್ತಾ**, ಅಥವಾ ಕಾರ್ಯ-ಕರಣಗಳ ಪ್ರಕೃತಿಯಲ್ಲಿ ತಾನು ತೊಡಗದೇ ಇದ್ದರೂ ಅವುಗಳಲ್ಲೇ ಅನುಕೂಲವಾಗಿ ಪ್ರವೃತ್ತನಾಗಿರುವಂತೆ ಕಂಡುಬರುವವನು. ಅಥವಾ ತಮ್ಮ ತಮ್ಮ ವ್ಯಾಪಾರಗಳಲ್ಲಿ ತೊಡಗಿರುವ ಅಂತಃಕರಣ, ಇಂದ್ರಿಯ ಮುಂತಾದುವುಗಳಿಗೆ ಸಾಕ್ಷಿಯಾಗಿದ್ದರೂ ಅವುಗಳನ್ನು ನಿವಾರಣೆಮಾಡದೇ ಇರುವವನು–**ಅನುಮನ್ತಾ**. (ಶಂ. ಭಾ.)

**ಉಪದ್ರಷ್ಟಾ, ಅನುಮನ್ತಾ**= ಈ ದೇಹದಲ್ಲಿರುವ ಪುರುಷನು ದೇಹದ ಪ್ರಕೃತಿಗೆ ಅನುಗುಣವಾದ ಸಂಕಲ್ಪವೇ ಮುಂತಾದ ರೂಪದಿಂದ ದೇಹವನ್ನು ನೋಡುತ್ತಿರುವವನೂ ಮತ್ತು ಅನುಮತಿಸುವವನೂ ಆಗಿದ್ದಾನೆ. ಈ ದೇಹವನ್ನು ಭರಿಸುವುದರಿಂದ ಅವನು **ಭರ್ತಾ**. ದೇಹದ ಪ್ರವೃತ್ತಿಯಿಂದ ಉಂಟಾದ ಸುಖ-ದುಃಖಗಳನ್ನು ಅನುಭವಿಸುವುದರಿಂದ **ಭೋಕ್ತಾ**. ಅಂತೆಯೇ ದೇಹವನ್ನು ನಿಯಮಿಸುವುದರಿಂದಲೂ, ಭರಿಸುವುದರಿಂದಲೂ, ಅದಕ್ಕೆ ಶೇಷಿಯಾಗಿರುವುದರಿಂದಲೂ ಈತನು ದೇಹೇಂದ್ರಿಯ-ಮನಸ್ಸುಗಳ ವಿಷಯದಲ್ಲಿ ಮಹೇಶ್ವರನೂ ಆಗಿದ್ದಾನೆ. **ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ**. (೧೫-೮)

ಈ ದೇಹದಲ್ಲಿ ದೇಹ, ಇಂದ್ರಿಯ ಮತ್ತು ಮನಸ್ಸುಗಳನ್ನು ಕುರಿತು

ಪರಮಾತ್ಮನು (ಪರಮನಾದ ಆತ್ಮನೂ) ಆಗಿದ್ದಾನೆ. ಆತ್ಮಶಬ್ದವನ್ನು ದೇಹ ಮತ್ತು ಮನಸ್ಸುಗಳಿಗೂ ಗೀತೆಯಲ್ಲೇ ಮುಂದೆ ಬಳಸಿದೆ. **ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ । ಪುರುಷಃ ಪರಃ, ಅನಾದಿಮತ್ಪರಂ** ಎಂದು ಮುಂತಾಗಿ ಹೇಳಲ್ಪಟ್ಟಿರುವ ಅಪರಿಚ್ಛಿನ್ನವಾದ ಜ್ಞಾನಶಕ್ತಿಯುಳ್ಳ ಈ ಪುರುಷನು ಅನಾದಿಯಾದ ಪ್ರಕೃತಿಸಂಬಂಧದಿಂದುಂಟಾದ ಗುಣಸಂಗದಿಂದ ದೇಹಮಾತ್ರಕ್ಕೆ ಮಹೇಶ್ವರನೂ ದೇಹಮಾತ್ರಕ್ಕೆ ಪರಮಾತ್ಮನೂ ಆಗಿದ್ದಾನೆ.

(ರಾ. ಭಾ.)

**ಯತಶ್ಚ ಯತ್** ೧೩-೪ ಎಂದು ಹಿಂದೆ ಹೇಳಿದ್ದನ್ನೇ ಇಲ್ಲಿ ನಿರೂಪಿಸಲಾಗಿದೆ.

**ಅನುಮನ್ತಾ** = ಮತ್ತೆ ಮತ್ತೆ ವಿಶೇಷವಾಗಿ ನಿರೂಪಿಸುವವನು. ಕರ್ತವ್ಯವನ್ನು ಆಲೋಚಿಸುವವನು. **ಪುರುಷಃ ಸುಖದುಃಖಾನಾಂ** ಎಂಬಲ್ಲಿ ಪುರುಷ ಎಂದರೆ ಜೀವ. (ಏಕೆಂದರೆ ಸುಖ-ದುಃಖಗಳನ್ನು ಭೋಗಿಸುವವನು ಎಂಬ ಲಕ್ಷಣವನ್ನು ಅಲ್ಲಿ ಹೇಳಿದೆ.) **ಪುರುಷಂ ಪ್ರಕೃತಿಂ ಚೈವ** ಎಂಬಲ್ಲಿ ಪುರುಷಶಬ್ದವು ಜೀವ ಮತ್ತು ಈಶ್ವರ ಇಬ್ಬರನ್ನೂ ಒಟ್ಟಿಗೆ ಹೇಳುತ್ತದೆ. ಉಪದ್ರಷ್ಟಾ ಮುಂತಾದುವುಗಳು ಈಶ್ವರನಿಗೂ ಅನ್ವಯಿಸುತ್ತವೆ.

(ಮ. ಭಾ.)

**ಓಂ ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥೨೩॥**

ಯಾವನು ಹೀಗೆ ಪುರುಷನನ್ನೂ, ಗುಣಗಳೊಡನೆ ಕೂಡಿದ ಪ್ರಕೃತಿಯನ್ನೂ ಅರಿತುಕೊಳ್ಳುವನೋ ಅವನು–ಹೇಗೇ ಇದ್ದರೂ ಮತ್ತೆ ಹುಟ್ಟುವುದಿಲ್ಲ.

* * *

**(ಯ ಏವಂ ವೇತ್ತಿ ಪುರುಷಂ**–ಯಾವನು ಈ ರೀತಿಯಲ್ಲಿರುವ (ಉಪದ್ರಷ್ಟಾ, ಅನುಮಂತಾ, ಭರ್ತಾ, ಭೋಕ್ತಾ, ಮಹೇಶ್ವರ ಮತ್ತು ಪರಮಾತ್ಮರೂಪಗಳಲ್ಲಿರುವ) ಪುರುಷನನ್ನು ತಿಳಿಯುತ್ತಾನೆಯೋ–ಅವನು ಪುನಃ ಹುಟ್ಟುವುದಿಲ್ಲ. ಇಲ್ಲಿ ತಿಳಿದುಕೊಳ್ಳುವುದು ಎಂದರೆ ಕೇವಲ ಆತ್ಮಾನಾತ್ಮವಿವೇಕಜ್ಞಾನವಲ್ಲ. ಆ ಪುರುಷನನ್ನು ತನ್ನ ಹೃದಯಗುಹೆಯಲ್ಲಿ

ಕಂಡುಕೊಳ್ಳುವುದು, ಅಥವಾ ತನ್ನನ್ನು ತಾನೇ ಕಂಡುಕೊಳ್ಳುವುದು, ತನ್ನ ನಿಜಸ್ವರೂಪವನ್ನು ಅರಿಯುವುದು. **ಪ್ರಕೃತಿಂ ಚ ಗುಣೈಃ ಸಹ**–ಪ್ರಕೃತಿಯನ್ನೂ ಅದರ ಸತ್ತ್ವ-ರಜಸ್ತಮಸ್ಸುಗಳೆಂಬ ಗುಣಗಳೊಡನೆ ಅರಿಯಬೇಕು ಎನ್ನುತ್ತಾನೆ ಶ್ರೀಕೃಷ್ಣ. ಪುರುಷನನ್ನು ಅರಿಯುವ ಮೊದಲೇ ಪ್ರಕೃತಿಯನ್ನೂ ಪ್ರಕೃತಿಯ ಗುಣಗಳನ್ನೂ ತಿಳಿದು ಅವುಗಳನ್ನು ದಾಟಿ ಪರಮಾತ್ಮನನ್ನು ಮುಟ್ಟಬೇಕಾಗುತ್ತದೆ. ಪ್ರಕೃತಿಯನ್ನು ಅಥವಾ ಅದರ ಸ್ವರೂಪವನ್ನು ತಿಳಿದುಕೊಂಡು ಅದನ್ನು ದಾಟುವ ಉಪಾಯವನ್ನೂ ತಿಳಿದುಕೊಂಡು ಪರಮಾತ್ಮನೇ ಹೇಳಿರುವ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ–ಈ ಮೂರರಲ್ಲಿ ತನ್ನ ಪ್ರಕೃತಿಗೆ ಒಗ್ಗುವ ಯಾವುದಾದರೂ ಯೋಗದ ಮೂಲಕವಾಗಿ ಪ್ರಕೃತಿಯನ್ನು ದಾಟಿ ಪರಮಾತ್ಮನನ್ನು ತನ್ನ ಹೃದಯಗುಹೆಯಲ್ಲಿ ಕಂಡುಕೊಳ್ಳಬೇಕು. ಅಂತಹವನು **ನ ಸ ಭೂಯೋಽಭಿಜಾಯತೇ**–ಹೀಗೆ ಆತ್ಮಸಾಕ್ಷಾತ್ಕಾರಮಾಡಿಕೊಂಡವನು ಪುನಃ ಜನ್ಮತಾಳುವುದಿಲ್ಲ.

ಶ್ರೀಕೃಷ್ಣನಿಲ್ಲಿ '**ಸರ್ವಥಾ ವರ್ತಮಾನೋಽಪಿ**' ಎಂಬ ಮಾತನ್ನೂ ಹೇಳಿದ್ದಾನೆ. ಅವನು ಹೇಗೇ ಇದ್ದರೂ ಪ್ರಕೃತಿಯ ಸ್ವರೂಪವನ್ನು ತಿಳಿದುಕೊಂಡ ಪುರುಷನನ್ನು ಸಾಕ್ಷಾತ್ಕರಿಸಿದ ಅವನಿಗೆ ಪುನರ್ಜನ್ಮವಿಲ್ಲ. ಹೇಗೇ ಇದ್ದರೂ ಎಂಬುದಕ್ಕೆ ದುಷ್ಟನಾಗಿದ್ದರೂ–ದುರಾಚಾರಿಯಾಗಿದ್ದರೂ ಎಂಬ ಅರ್ಥಮಾಡಬಾರದು. ದುರಾಚಾರಿಗಳಿಗೆ ಅಥವಾ ದುಷ್ಟರಿಗೆ ಅಧ್ಯಾತ್ಮದ ಹೊಸಲಿನ ಸಮೀಪಕ್ಕೂ ಹೋಗುವ ಸಾಧ್ಯತೆಯಿಲ್ಲ. ಆದುದರಿಂದ '**ಸರ್ವಥಾ ವರ್ತಮಾನೋಽಪಿ**' ಎಂದರೆ ಅವನು ಯಾವುದೇ ಆಶ್ರಮದಲ್ಲಿದ್ದರೂ, ವರ್ಣದಲ್ಲಿದ್ದರೂ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಅವನಿಗೆ ಪುನರ್ಜನ್ಮವಿಲ್ಲ ಎಂದು ಅರ್ಥ. ಅಮಾನಿತ್ವ, ಅದಂಭಿತ್ವಾದಿ ಇಪ್ಪತ್ತು ಗುಣಗಳು ಯಾವನಲ್ಲಿಯೇ ಇದ್ದರೂ ಅವನು ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಳ್ಳುತ್ತಾನೆ. ಆತ್ಮಸಾಕ್ಷಾತ್ಕಾರವನ್ನು ಪಡೆದನಂತರ ಅವನಿಗೆ ಮರುಹುಟ್ಟು ಇಲ್ಲ.)

o o o

**ಯ ಏವಂ ವೇತ್ತಿ ಪುರುಷಂ..ಗುಣೈಃ ಸಹ**=ಮೇಲೆ ಹೇಳಿರುವ ರೀತಿಯಲ್ಲಿ ಯಾವನು ಈ ಪುರುಷನನ್ನು ಸಾಕ್ಷಾತ್ ಆತ್ಮಭಾವದಿಂದ–'ಅವನು

ನಾನೇ ಆಗಿದ್ದೇನೆ'-ಎಂದು ಅರಿಯುತ್ತಾನೆಯೋ, ಮೇಲೆ ಹೇಳಿದಂತೆ ಅವಿದ್ಯಾ ರೂಪವಾದ ಪ್ರಕೃತಿಯನ್ನು ವಿಕಾರರೂಪವಾದ ಗುಣಗಳೊಡನೆ ವಿದ್ಯೆಯಿಂದ ನಿವೃತ್ತಿಹೊಂದಿದ್ದನ್ನಾಗಿ ತಿಳಿಯುತ್ತಾನೆಯೋ–ಅಂತಹ ಜ್ಞಾನಿಯು ಹೇಗೇ ಇದ್ದರೂ ತನ್ನ ಈ ಶರೀರವು ಬಿದ್ದುಹೋದ ಮೇಲೆ ಮತ್ತೊಂದು ದೇಹವನ್ನು ಹೊಂದುವುದಿಲ್ಲ. ಹೇಗಿದ್ದರೂ ಕೂಡ ಎಂಬ ಅರ್ಥಬರುವ ಅಪಿ ಶಬ್ದವನ್ನು ಉಪಯೋಗಿಸಿರುವುದರಿಂದ ತನ್ನ ವರ್ಣಾಶ್ರಮಧರ್ಮಕ್ಕೆ ಅನುಗುಣವಾಗಿ ನಡೆಯುವವನಿಗಂತೂ ಪುನರ್ಜನ್ಮವಿಲ್ಲವೇ ಇಲ್ಲ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ–ಎಂಬ ಅರ್ಥವೂ ವ್ಯಕ್ತವಾಗುತ್ತದೆ. (ಶಂ. ಭಾ.)

ಮೇಲೆ ಹೇಳಿದ ಸ್ವಭಾವವುಳ್ಳ ಪುರುಷನನ್ನು ಮತ್ತು ಮೇಲೆ ಹೇಳಲ್ಪಟ್ಟಿರುವ ಸ್ವಭಾವವುಳ್ಳ ಪ್ರಕೃತಿಯನ್ನು ಮುಂದೆ ಹೇಳುವ ಸ್ವಭಾವವುಳ್ಳ ಅದರ ಗುಣಗಳೊಡನೆ ಯಾವನು ವಿವೇಕದಿಂದ ತಿಳಿಯುತ್ತಾನೆಯೋ ಅವನು ಹೇಗೆಯೇ ಇದ್ದರೂ–ಎಂದರೆ ದೇವ, ಮನುಷ್ಯ ಮುಂತಾದ ದೇಹಗಳಲ್ಲಿ ಅತ್ಯಂತಕ್ಲಿಷ್ಟರೂಪದಲ್ಲಿದ್ದರೂ ಅವನಿಗೆ ಮತ್ತೆ ಹುಟ್ಟಿಲ್ಲ. ಮತ್ತೆ ಪ್ರಕೃತಿಯ ಸಂಸರ್ಗವಿಲ್ಲ. ಅಪರಿಚ್ಛಿನ್ನಜ್ಞಾನವುಳ್ಳ ಅಪಹತಪಾಪ್ಮನಾದ ಆತ್ಮನನ್ನು ಆ ದೇಹಗಳೊಡನೆಯೇ ಅವನು ಹೊಂದುತ್ತಾನೆ. (ರಾ. ಭಾ.)

ಈ ಪುರುಷನನ್ನು ಅಥವಾ ಆತ್ಮನನ್ನು ಹೇಗೆ ಸಾಕ್ಷಾತ್ಕರಿಸಿಕೊಳ್ಳುತ್ತಾರೆ?–ಎಂಬುದನ್ನೂ ಭಗವಂತನು ಈ ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ:

**ಓಂ ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥೨೪॥**

ಕೆಲವರು ಧ್ಯಾನದಿಂದ ಆತ್ಮನಲ್ಲಿ ಆತ್ಮನನ್ನು ಆತ್ಮನಿಂದ ಕಂಡುಕೊಳ್ಳುತ್ತಾರೆ. ಮತ್ತೆ ಕೆಲವರು ಸಾಂಖ್ಯಯೋಗದಿಂದ ಕಂಡುಕೊಳ್ಳುವರು. ಇನ್ನು ಕೆಲವರು ಕರ್ಮಯೋಗದಿಂದ ಕಂಡುಕೊಳ್ಳುವರು.

* * *

(**ಧ್ಯಾನೇನ :** ಧ್ಯಾನಶಬ್ದವು ಧ್ಯೈ = ಚಿನ್ತಾಯಾಂ–ಚಿಂತಾರ್ಥಕವಾದ ಧ್ಯೈಧಾತುವಿನಿಂದ ನಿಷ್ಪತ್ತಿಯಾಗಿದೆ. ಇದು ಆಳವಾದ ಚಿಂತನೆ. ಭಗವಂತನ ಚಿಂತನೆ. ಸಾಧಕರು ಪ್ರಯತ್ನಪೂರ್ವಕವಾಗಿ ಮಾಡಬೇಕಾಗಿರುವ ಚಿಂತನೆ. ಚಿಂತಿಸಬೇಕಾದುದು ಭಗವಂತನನ್ನು. ಧ್ಯಾನವೆಂಬುದೂ

ಚಿಂತೆಯಾದರೂ ಭಗವಚ್ಚಿಂತನೆಯೆಂಬ ಈ ಧ್ಯಾನವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ಮನಸ್ಸಿನ ಸ್ವಭಾವ ಎಂತಹುದೆಂದರೆ ಬೇಕಾಗುವುದನ್ನು ಬಯಸುವುದಿಲ್ಲ ; ಬೇಡವಾದುದನ್ನು ಬಯಸುತ್ತದೆ. ಇದಕ್ಕೆ ಪ್ರಕೃತಿಗುಣಗಳ ಸಂಪರ್ಕವೇ ಕಾರಣ. ತುಂಟಕುದುರೆಯನ್ನು ಪಳಗಿಸುವಂತೆ ಧ್ಯಾನವೆಂಬ ಭಗವಚ್ಚಿಂತನೆಗೆ ಮನಸ್ಸನ್ನು ಪಳಗಿಸಬೇಕು. ಬಹಿರಂಗದ ಶಬ್ದ-ಸ್ಪರ್ಶಾದಿಗಳಿಂದ ಜ್ಞಾನೇಂದ್ರಿಯಗಳು ಒಳಸರಿಯುವಂತೆ ಮಾಡಬೇಕು. ಅರ್ಥಾತ್ ಇಂದ್ರಿಯಗಳನ್ನು ಮನಸ್ಸಿನಲ್ಲಿ ಲೀನಗೊಳಿಸಬೇಕು. ಅನಂತರ ಆ ಮನಸ್ಸನ್ನು ಧ್ಯೇಯವಾದ ಆತ್ಮವಸ್ತುವಿನಲ್ಲಿಡಬೇಕು. ಇದಕ್ಕೆ ಧ್ಯಾನವೆಂದು ಹೆಸರು. ಈ ವಿಧವಾದ ಧ್ಯಾನಯೋಗದ ಮೂಲಕವಾಗಿ ಸಾಧಕರು ಆತ್ಮನಲ್ಲಿ ಎಂದರೆ ಹೃದಯಗುಹೆಯಲ್ಲಿ ಆತ್ಮನನ್ನು ಎಂದರೆ ಪ್ರತ್ಯಗಾತ್ಮನನ್ನು ಅಥವಾ ಪರಮಾತ್ಮನನ್ನು ಆತ್ಮನಿಂದ, ಬುದ್ಧಿಯಿಂದ ಕಂಡುಕೊಳ್ಳುತ್ತಾರೆ ಅಥವಾ ನೋಡುತ್ತಾರೆ. ಅನಂತರ ಸಾಂಖ್ಯಯೋಗದಿಂದಲೂ ಮತ್ತು ಕರ್ಮಯೋಗದಿಂದಲೂ ಆತ್ಮನಿಂದ ಆತ್ಮನನ್ನು ಆತ್ಮನಲ್ಲಿ ನೋಡುತ್ತಾರೆ ಎನ್ನುತ್ತಾನೆ ಶ್ರೀಕೃಷ್ಣ. ಸಾಂಖ್ಯಯೋಗ ಎಂದರೆ ಜ್ಞಾನಯೋಗ. ಜ್ಞಾನಯೋಗದಲ್ಲಿ ಅಮಾನಿತ್ವ ಅದಂಭಿತ್ವ ಇತ್ಯಾದಿಗಳಿಂದ ಜ್ಞಾನಿಯಾಗುತ್ತಾನೆ. ಸಾಕ್ಷಾತ್ಕಾರಕ್ಕೆ ಧ್ಯಾನವೇ ಮುಖ್ಯವಾದ ಬಾಗಿಲು. ಸಾಧನೆಯಿಲ್ಲದಿದ್ದರೆ ಆತ್ಮಾನುಭವವಾಗುವುದಿಲ್ಲ. ಈ ಸಾಧನೆಯೆಂಬುದೇ ಧ್ಯಾನ. ಕರ್ಮಯೋಗದ ಮೂಲಕ ಆತ್ಮನನ್ನು ಕಂಡುಕೊಳ್ಳುತ್ತಾನೆ ಎಂಬುವುದಕ್ಕೂ ಇದೇ ಅರ್ಥವೆ. ಈಶ್ವರಾರ್ಪಣಬುದ್ಧಿಯಿಂದ ಫಲಾಭಿಸಂಧಿಯಿಲ್ಲದೇ ಕರ್ಮಮಾಡುವುದರಿಂದ ಸತ್ತ್ವಶುದ್ಧಿಯಾಗುತ್ತದೆ. ಅನಂತರ ಜ್ಞಾನೋತ್ಪತ್ತಿ. ಅನಂತರ ಧ್ಯಾನದ ಮೂಲಕ ಆತ್ಮದರ್ಶನವಾಗುತ್ತದೆ. ಪ್ರತ್ಯಗಾತ್ಮನು ಅಥವಾ ಪರಮಾತ್ಮನು ಧ್ಯಾನಗಮ್ಯನೇ ಹೊರತು ಇಂದ್ರಿಯಗಳಿಗೆ ಗೋಚರಿಸತಕ್ಕವನಲ್ಲ. ಆದುದರಿಂದ ಸಾಂಖ್ಯಯೋಗವಾಗಲೀ ; ಕರ್ಮಯೋಗವಾಗಲೀ ಧ್ಯಾನದಲ್ಲಿಯೇ ಪರ್ಯವಸಾನವನ್ನು ಹೊಂದಬೇಕು. ಅನಂತರವೇ ಆತ್ಮದರ್ಶನ.)

o o o

**ಧ್ಯಾನ** = ಶಬ್ದವೇ ಮುಂತಾದ ವಿಷಯಗಳ ದೆಸೆಯಿಂದ ಕಿವಿಯೇ ಮುಂತಾದ ಇಂದ್ರಿಯಗಳನ್ನು ತಡೆಗಟ್ಟಿ, ಅವುಗಳನ್ನು ಮನಸ್ಸಿನಲ್ಲಿ ಉಪ

ಸಂಹಾರಮಾಡಿ ಮನಸ್ಸನ್ನು ಪ್ರತ್ಯಗಾತ್ಮನಲ್ಲಿ ಇಟ್ಟು ಏಕಾಗ್ರಭಾವದಿಂದ ಚಿಂತಿಸುವಿಕೆಯೇ ಧ್ಯಾನ. ಇದಕ್ಕೆ **ಧ್ಯಾಯತೀವ ಬಕಃ**–ಬಕಪಕ್ಷಿಯು ಧ್ಯಾನ ಮಾಡುವಂತೆ, **ಧ್ಯಾಯತೀವ ಪೃಥಿವೀ**–ಪೃಥಿವಿಯು ಧ್ಯಾನಮಾಡುವಂತೆ, **ಧ್ಯಾಯನ್ತೀವ ಪರ್ವತಾಃ**–ಪರ್ವತಗಳು ಧ್ಯಾನಮಾಡುತ್ತಿರುವಂತೆ–ಎಂದು ಮೊದಲಾದ ಉಪಮಾನಗಳನ್ನು ಕೊಡುವುದರಿಂದ ತೈಲಧಾರೆಯಂತೆ ನಿರಂತರವಾಗಿ ಅವಿಚ್ಛಿನ್ನಭಾವದಿಂದ ಮಾಡುವ ಚಿಂತನೆಯು ಧ್ಯಾನ. ಕೆಲವರು ಯೋಗಿಗಳು ಧ್ಯಾನದಿಂದ ಆತ್ಮದಲ್ಲಿ (ಬುದ್ಧಿಯಲ್ಲಿ) ಆತ್ಮವನ್ನು (ಪ್ರತ್ಯಕ್ ಚೈತನ್ಯವನ್ನು) ಆತ್ಮದಿಂದ ಧ್ಯಾನಸಂಸ್ಕೃತವಾದ ಅಂತಃಕರಣದಿಂದ ನೋಡುತ್ತಾರೆ. ಬೇರೆ ಕೆಲವರು ಸಾಂಖ್ಯಯೋಗದಿಂದ ಹಾಗೆ ನೋಡುತ್ತಾರೆ. ಸಾಂಖ್ಯ ಎಂದರೆ : 'ಈ ಸತ್ತ್ವ-ರಜಸ್ತಮೋಗುಣಗಳು ನನ್ನಿಂದ ನೋಡಲ್ಪಡು ತ್ತಿವೆ. ನಾನು ಅವುಗಳಿಗಿಂತ ಭಿನ್ನನಾಗಿ ಅವುಗಳ ವ್ಯಾಪಾರಕ್ಕೆ ಸಾಕ್ಷಿಯಾಗಿ ಆ ಗುಣಗಳಿಂದ ವಿಲಕ್ಷಣನೂ, ನಿತ್ಯನೂ ಆದ ಆತ್ಮನು'–ಎಂದು ಚಿಂತಿಸುವಿಕೆ. ಇದೇ ಯೋಗ. ಮತ್ತೆ ಕೆಲವರು ಕರ್ಮಯೋಗದಿಂದ ಪ್ರತ್ಯಗಾತ್ಮನನ್ನು ನೋಡುತ್ತಾರೆ. ಕರ್ಮಯೋಗವೆಂದರೆ ಕರ್ಮವೇ ಒಂದು ಯೋಗ. ಈಶ್ವ ರಾರ್ಪಣಬುದ್ಧಿಯಿಂದ ಅನುಷ್ಠಾನಮಾಡಲ್ಪಡುವ ಚೇಷ್ಟೆಗೆ ಕರ್ಮ ಎಂದು ಹೆಸರು. ಅದು ಯೋಗಕ್ಕೆ ಸಾಧನವಾದುದರಿಂದ ಗೌಣಾರ್ಥದಲ್ಲಿ ಅದನ್ನು ಯೋಗ ಎಂದು ಕರೆದಿದೆ. ಅಂತಹ ಕರ್ಮಯೋಗದ ಮೂಲಕ ಸತ್ತ್ವಶುದ್ಧಿಯನ್ನು ಪಡೆದು ಅದರಿಂದ ಜ್ಞಾನಪ್ರಾಪ್ತಿಯುಂಟಾಗಲು ಅವರು ಬುದ್ಧಿಯಲ್ಲಿ ಆತ್ಮನನ್ನು ನೋಡುತ್ತಾರೆ. (ಶಂ. ಭಾ.)

ಕೆಲವರು ಎಂದರೆ ಯೋಗಸಿದ್ಧಿಹೊಂದಿದವರು. ಆತ್ಮನಲ್ಲಿ ತಮ್ಮ ಶರೀರದಲ್ಲಿ ಇರುವ ಆತ್ಮನನ್ನು, ಆತ್ಮನಿಂದ ಎಂದರೆ ಮನಸ್ಸಿನಿಂದ, ಧ್ಯಾನ ದಿಂದ (ಯೋಗದಿಂದ) ನೋಡುತ್ತಾರೆ. ಹೀಗೆ ಯೋಗಪರಿಪಾಕವಿಲ್ಲದವರು ಸಾಂಖ್ಯಯೋಗದಿಂದ (ಜ್ಞಾನಯೋಗದಿಂದ) ಮನಸ್ಸನ್ನು ಯೋಗಯೋಗ್ಯ ವನ್ನಾಗಿ ಮಾಡಿಕೊಂಡು ಆತ್ಮನನ್ನು ಕಂಡುಕೊಳ್ಳುತ್ತಾರೆ. ಮತ್ತೆ ಕೆಲವರು ಎಂದರೆ ಜ್ಞಾನಯೋಗಕ್ಕೆ ಅಧಿಕಾರಿಗಳಲ್ಲದವರು ಮತ್ತು ಅಧಿಕಾರಿಗಳಾಗಿ ದ್ದರೂ ಸುಲಭವಾದ ಉಪಾಯದಲ್ಲಿ ಆಸಕ್ತರಾದ ಮಹಾತ್ಮರು ಅಂತರ್ಗತ

ಜ್ಞಾನಯೋಗವಾದ ಕರ್ಮಯೋಗದಿಂದ ಮನಸ್ಸನ್ನು ಯೋಗಯೋಗ್ಯವನ್ನಾಗಿ ಮಾಡಿಕೊಂಡು ಆತ್ಮನನ್ನು ಕಂಡುಕೊಳ್ಳುತ್ತಾರೆ. (ರಾ. ಭಾ.)

ಸಾಂಖ್ಯದಿಂದ ಎಂದರೆ ವೇದದಲ್ಲಿ ಹೇಳಲ್ಪಟ್ಟಿರುವ ಭಗವತ್ಸ್ವರೂಪದ ಜ್ಞಾನದಿಂದ ಎಂದು ಅರ್ಥ. (ಕಾಪಿಲತಂತ್ರವು ಅವೈದಿಕವಾದುದರಿಂದ ಇಲ್ಲಿ ಹೇಳಿರುವ ಸಾಂಖ್ಯವು ಅದಲ್ಲ.) ಇಲ್ಲಿ ಜ್ಞಾನ ಎಂದರೆ ಪರೋಕ್ಷಜ್ಞಾನ. ಕರ್ಮಿಗಳೂ ಕೂಡ ಭಗವಂತನ ಸ್ವರೂಪದ ವಿಷಯವನ್ನು ಕೇಳಿ, ತಿಳಿದು, ಧ್ಯಾನಮಾಡಿ, ದರ್ಶನಪಡೆಯಬೇಕು. ಕೇಳುವವರು ತಿಳಿದು ಧ್ಯಾನಮಾಡಿ ದರ್ಶನವನ್ನು ಪಡೆಯಬೇಕು. ಸಾಂಖ್ಯರು ಧ್ಯಾನಮಾಡಿ ಭಗವಂತನ ದರ್ಶನವನ್ನು ಪಡೆಯುತ್ತಾರೆ. ಅನ್ಯೇ ಎಂಬ ಪದವು ಅಶಕ್ತರಿಗೂ ಕೂಡ ಉಪಾಯವನ್ನ ತೋರಿಸಲು ಹೇಳಲ್ಪಟ್ಟಿದೆ. (ಮ. ಭಾ.)

**ಓಂ ಅನ್ಯೇ ತ್ವೇವಮಜಾನನ್ತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥೨೫॥**

ಆದರೆ ಬೇರೆ ಕೆಲವರು ಹೀಗೆ ತಿಳಿದುಕೊಳ್ಳದೇ ಮತ್ತೊಬ್ಬರಿಂದ ಕೇಳಿ ಉಪಾಸನೆಮಾಡುತ್ತಾರೆ. ಅವರೂ ಕೇಳುವುದರಲ್ಲಿ ನಿಷ್ಠೆಯನ್ನು ಹೊಂದಿರುವುದರಿಂದ ಮೃತ್ಯುವನ್ನು ದಾಟಿಯೇ ತೀರುತ್ತಾರೆ.

* * *

(ಶ್ರೀಕೃಷ್ಣನು ಹೇಳಿರುವ ಈ ಮಾತು ಬಹುಮುಖ್ಯವಾದುದು. ಅನೇಕರಿಗೆ ಕರ್ಮಯೋಗ ಎಂದರೆ ಏನೆಂಬುದು ತಿಳಿಯದಿರಬಹುದು ; ಜ್ಞಾನಯೋಗ ಎಂದರೆ ಏನೆಂಬುದು ತಿಳಿಯದಿರಬಹುದು ; ಧ್ಯಾನಯೋಗದ ಪ್ರಕರಣವೇ ತಿಳಿಯದಿರಬಹುದು. ಅಂತಹವರಿಗೆ ಮೋಕ್ಷವೆಂಬುದೇ ಇಲ್ಲವೇ?–ಎಂದರೆ : ಅಂತಹವರಿಗೂ ಒಂದು ಮಾರ್ಗವು ಇದೆ ಎನ್ನುತ್ತಾನೆ ಭಗವಂತ. ಪ್ರಪಂಚದಲ್ಲಿ ಶ್ರೀರಾಮಕೃಷ್ಣರಂತಹ, ಶ್ರೀರಂಗಮಹಾಗುರುಗಳಂತಹ ಅವತಾರಪುರುಷರು ಆಗಿಂದಾಗ್ಗೆ ಹುಟ್ಟುತ್ತಲೇ ಇರುತ್ತಾರೆ. ಸಾಧ್ಯವಾದಷ್ಟು ಮಂದಿಯನ್ನು ಮೋಕ್ಷಮಾರ್ಗಕ್ಕೆ ಸೆಳೆಯುವುದೇ ಅವರ ಅವತಾರದ ಉದ್ದೇಶವಾಗಿರುತ್ತದೆ. ಅಂತಹವರು ಆತ್ಮೋದ್ಧಾರಕ್ಕಾಗಿ ಕೆಲವು ಮಾರ್ಗಗಳನ್ನು ಉಪದೇಶಿಸಿ ಅನುಗ್ರಹಿಸುತ್ತಾರೆ. ಅವರು ಹೇಳಿದಂತೆ ಮಾಡುವುದೊಂದೇ ಶಿಷ್ಯನ ಕರ್ತವ್ಯವಾಗಿರುತ್ತದೆ. ಪರಮಶ್ರದ್ಧಾಯುಕ್ತನಾದ

ಶಿಷ್ಯನು ಅವರ ಅನುಗ್ರಹದಿಂದಾಗಿ ಕಾಲಾನುಕ್ರಮದಲ್ಲಿ ಅಥವಾ ಅವನ ಪ್ರಕೃತಿಯ ಒಲವಿನಂತೆ ಆತ್ಮದರ್ಶನವನ್ನು ಮಾಡುತ್ತಾನೆ. ಶಿಷ್ಯರು ಶ್ರುತಿ ಪರಾಯಣರಾಗಿರಬೇಕು. ವೇದಾಧ್ಯಯನ ಮಾಡುತ್ತಿರಬೇಕೆಂಬ ಅರ್ಥವಲ್ಲ. ಸದ್ಗುರುವು ಕಿವಿಯಲ್ಲಿ ಹೇಳಿದುದನ್ನು ಚಾಚೂ ತಪ್ಪದೇ ಶ್ರದ್ಧೆಯಿಂದ ಅನುಷ್ಠಾನಮಾಡುತ್ತಿರಬೇಕು. ಗುರುವು ಮನಸ್ಸುಮಾಡಿದರೆ ಶಿಷ್ಯನಿಗೆ ಒಮ್ಮೆಲೇ ಆತ್ಮದರ್ಶನವನ್ನು ಮಾಡಿಸಬಲ್ಲ. ಆದರೆ ಶಿಷ್ಯನ ಸಾಧನೆಯನ್ನೂ ಸಾಮಾನ್ಯವಾಗಿ ಗುರುವು ಅಪೇಕ್ಷಿಸುತ್ತಾನೆ. ಆದುದರಿಂದ ಶ್ರೀಗುರುವು ಶಿಷ್ಯನ ಹೃದಯದಲ್ಲಿ ಬ್ರಹ್ಮವಸ್ತುವಿನ ಬೀಜಾವಾಪಮಾಡಿ ಧ್ಯಾನದ ಮೂಲಕವಾಗಿ ಕೃಷಿಮಾಡುವಂತೆ ಆಜ್ಞಾಪಿಸುತ್ತಾನೆ. ಶಿಷ್ಯನು ಶ್ರದ್ಧಾಯುಕ್ತವಾದ ಧ್ಯಾನದ ಮೂಲಕ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೆ. ಇಲ್ಲಿ ಶ್ರೀಕೃಷ್ಣನು **ಮೃತ್ಯುಂ ಚ ಅತಿತರನ್ತ್ಯೇವ**–ಇಂತಹವರೂ ಮೃತ್ಯುವನ್ನು ದಾಟಿಯೇ ದಾಟುತ್ತಾರೆ ಎಂದು ಹೇಳಿ ಮಂದಾಧಿಕಾರಿಗಳಿಗೂ ಸಂಪೂರ್ಣವಾದ ಭರವಸೆ ನೀಡಿದ್ದಾನೆ.)

o o o

ಮೇಲೆ ಹೇಳಿದ ಮಾರ್ಗಗಳೊಂದನ್ನೂ ಅರಿಯದ ಕೆಲವರು ಆಚಾರ್ಯರಿಂದ ವಿಷಯವನ್ನು ಕೇಳಿ–'ನೀವು ಇದನ್ನೇ ಚಿಂತಿಸುತ್ತಿರಿ'– ಎಂದು ಅವರ ಆಜ್ಞೆಪಡೆದು ಶ್ರದ್ಧಾಪೂರ್ವಕವಾಗಿ ಉಪಾಸನೆಮಾಡುತ್ತಾರೆ. ಆಚಾರ್ಯರ ಮಾತಿನ ಶ್ರವಣವನ್ನೇ ಮೋಕ್ಷಮಾರ್ಗದ ಪ್ರವೃತ್ತಿಯಲ್ಲಿ ಪರಮಪ್ರಮಾಣವನ್ನಾಗಿ ತಿಳಿದು ಸಾಧನೆಮಾಡುವ ಅವರೂ ಕೂಡ ಮೃತ್ಯುಯುಕ್ತವಾದ ಸಂಸಾರವನ್ನು ದಾಟಿಯೇ ದಾಟುತ್ತಾರೆ. ವಿವೇಕರಹಿತರಾಗಿ ಪರೋಪದೇಶವನ್ನು ಪ್ರಮಾಣವಾಗಿ ಇಟ್ಟುಕೊಂಡಿರುವ ಇವರೇ ಸಂಸಾರವನ್ನು ದಾಟುವಾಗ ಪ್ರಮಾಣದ ವಿಷಯದಲ್ಲಿ ಸ್ವತಂತ್ರವಿಚಾರವುಳ್ಳ ವಿವೇಕಿಗಳು ಮೃತ್ಯುವನ್ನು ದಾಟುತ್ತಾರೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

(ಶಂ. ಭಾ.)

ಮತ್ತೆ ಕೆಲವರು ಎಂದರೆ ಕರ್ಮಯೋಗವೇ ಮುಂತಾದ ಆತ್ಮದರ್ಶನ ಸಾಧನೆಗಳಿಗೆ ಅಧಿಕಾರವಿಲ್ಲದವರು ತತ್ತ್ವದರ್ಶಿಗಳಾದ ಜ್ಞಾನಿಗಳಿಂದ ಆ ವಿಷಯವನ್ನು ತಿಳಿದು ಕರ್ಮಯೋಗವೇ ಮುಂತಾದುವುಗಳಿಂದ ಆತ್ಮನನ್ನು ಉಪಾಸನೆಮಾಡುತ್ತಾರೆ.

ಅವರೂ ಕೂಡ ಎಂದರೆ ಆಚಾರ್ಯರ ಮಾತನ್ನು ಕೇಳುವುದರಲ್ಲಿ ನಿಷ್ಠೆಯುಳ್ಳವರೂ ಕೂಡ ಆತ್ಮದರ್ಶನದಿಂದ ಮೃತ್ಯುವನ್ನು ದಾಟಿಯೇ ದಾಟುತ್ತಾರೆ. ಹೇಗೆ?–ಎಂದರೆ : ಶ್ರವಣದಲ್ಲಿ ನಿಷ್ಠೆಯುಳ್ಳವರು ಪಾಪಗಳನ್ನು ಕಳೆದುಕೊಂಡು ಶುದ್ಧರಾಗಿ, ಕ್ರಮವಾಗಿ ಕರ್ಮಯೋಗವೇ ಮುಂತಾದುವುಗಳನ್ನು ಪ್ರಾರಂಭಿಸಿ ಮೃತ್ಯುವನ್ನು ದಾಟಿಯೇ ದಾಟುತ್ತಾರೆ.

ಅಪಿ ಎಂಬ ಶಬ್ದವು ಇಂತಹವರು ಕೆಳಮಟ್ಟದವರು ಎಂಬುದನ್ನು ಸೂಚಿಸುತ್ತದೆ. ಇವರೇ ಮೃತ್ಯುವನ್ನು ದಾಟುವಾಗ ಇನ್ನು ಮೇಲೆ ಹೇಳಿದವರು ಅದನ್ನು ದಾಟಿಯೇ ದಾಟುತ್ತಾರೆ–ಎಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. (ರಾ. ಭಾ.)

**ಓಂ ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಙ್ಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥೨೬॥**

ಭರತಶ್ರೇಷ್ಠನೇ! ಸ್ಥಾವರ-ಜಂಗಮರೂಪವಾದ ವಸ್ತುವು ಯಾವುದು ಕಿಂಚಿನ್ಮಾತ್ರವಾದರೂ ಹುಟ್ಟುವುದೋ ಅದು ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದಲೇ (ಹುಟ್ಟಿದ್ದು) ಎಂದು ತಿಳಿ.

* * *

(ಶ್ರೀಕೃಷ್ಣನು ಈ ಶ್ಲೋಕದಲ್ಲಿ ದೊಡ್ಡದೊಂದು ವಿಜ್ಞಾನವನ್ನು ಹೇಳಿದ್ದಾನೆ. ಇದುವರೆಗೆ ಕ್ಷೇತ್ರ ಎಂದರೆ **ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ**–ಎಂದು ಅವನೇ ಹೇಳಿದ್ದಂತೆ ಶರೀರಮಾತ್ರಕ್ಕೆ ಕ್ಷೇತ್ರವೆಂದು ಹೆಸರು–ಎಂಬುದನ್ನು ನಾವು ತಿಳಿದಿದ್ದೆವು. ಕ್ಷೇತ್ರರೂಪವಾದ ಎಲ್ಲ ಶರೀರಗಳಲ್ಲಿಯೂ ಕ್ಷೇತ್ರಜ್ಞನಾಗಿ ಅವನಿದ್ದಾನೆ. ಈ ತತ್ತ್ವವನ್ನೂ ತಿಳಿದೆವು. ಅದೇ ಕ್ಷೇತ್ರ-ಕ್ಷೇತ್ರಜ್ಞರ ವಿಷಯವನ್ನು ಈ ಶ್ಲೋಕದಲ್ಲಿ ಬಹುವ್ಯಾಪಕವಾಗಿ ಹೇಳಿದ್ದಾನೆ.

ಯಾವುದೇ **ಸತ್ತ್ವಂ**-ವಸ್ತುವು ಎಲ್ಲಿಂದ ಬೇಕಾದರೂ ಹುಟ್ಟಿರಲಿ-ಎಂದರೆ ಚರವೇ ಆಗಿರಲಿ ಅಥವಾ ಅಚರವೇ ಆಗಿರಲಿ ; ಜಂಗಮದಿಂದಲಾದರೂ ಹುಟ್ಟಿರಲಿ–ಅದು ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದಲೇ ಹುಟ್ಟಿದ್ದು ಎಂದು ತಿಳಿ. ದೇವ, ಮನುಷ್ಯ, ಪಶು, ಪಕ್ಷಿ–ಮುಂತಾದ ಗಮನವಿರುವ ಪ್ರಾಣಿಗಳು ಜಂಗಮಗಳು. ಗಿಡ, ಮರ–ಮುಂತಾದುವು ಸ್ಥಾವರಗಳು ; ಚಲಿಸದೇ

ಇರತಕ್ಕುವುಗಳು. ಈ ಎಲ್ಲವೂ ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದಲೇ ಹುಟ್ಟಿವೆ. ಇವುಗಳ ಮೂಲಕವಾಗಿ ಯಾವುದು ಹುಟ್ಟಬೇಕಾದರೂ ಅವೂ ಸಹ ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದಲೇ ಹುಟ್ಟುವುವು ಎನ್ನುತ್ತಾನೆ, ಶ್ರೀಕೃಷ್ಣ.)

O O O

ಕ್ಷೇತ್ರ ಮತ್ತು ಕ್ಷೇತ್ರಜ್ಞರು ಕ್ರಮವಾಗಿ ವಿಷಯ ಮತ್ತು ವಿಷಯಿಗಳು. ಇವೆರಡರ ಸ್ವಭಾವಗಳು ಬೇರೆ ಬೇರೆ. ಇವುಗಳಲ್ಲಿ ಒಂದರಲ್ಲಿ ಮತ್ತೊಂದು ಧರ್ಮವನ್ನು ಅಭ್ಯಾಸಮಾಡುವಿಕೆಯೆಂಬ ಯಾವ ಸಂಯೋಗವುಂಟೋ ಅದು ಕ್ಷೇತ್ರ ಮತ್ತು ಕ್ಷೇತ್ರಜ್ಞರ ವಾಸ್ತವಿಕಸ್ವರೂಪವನ್ನು ತಿಳಿಯದೇ ಇರುವುದರಿಂದ ಉಂಟಾಗಿರುವುದು. (ಶಂ. ಭಾ.)

ಸ್ಥಾವರ-ಜಂಗಮಾತ್ಮವಾದ ಯಾವ ಯಾವ ಜಂತುಗಳು ಹುಟ್ಟುತ್ತವೆಯೋ–ಅವೆಲ್ಲವೂ ಕ್ಷೇತ್ರ-ಕ್ಷೇತ್ರಜ್ಞರ ಪರಸ್ಪರಸಂಯೋಗದೊಡನೆಯೇ ಆಗುತ್ತದೆ. ಅವು ಪರಸ್ಪರ ಅಗಲಿದ್ದರೆ ಆಗುವುದಿಲ್ಲ. (ರಾ. ಭಾ.)

ಮತ್ತೆ ಇಲ್ಲಿ ಪ್ರಕೃತಿ-ಪರಮೇಶ್ವರಸ್ವರೂಪವನ್ನು ಸಾಮ್ಯಾದಿ ಧರ್ಮಗಳೊಡನೆ ಸೇರಿಸಿ ೨೬ ರಿಂದ ೨೯ರವರೆಗಿನ ಶ್ಲೋಕಗಳಲ್ಲಿ ನಿರೂಪಿಸಿದೆ. (ಮ. ಭಾ.)

**ಓಂ ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥೨೭॥**

ಸರ್ವಭೂತಗಳಲ್ಲಿಯೂ ಒಂದೇ ಸಮನಾಗಿ ಇರುವವನೂ, ಅವು ನಾಶವಾದರೂ ವಿನಾಶಹೊಂದದೇ ಇರುವವನೂ ಆಗಿರುವ ಪರಮೇಶ್ವರನನ್ನು ಯಾವನು ಕಂಡುಕೊಳ್ಳುತ್ತಾನೆಯೋ ಅವನೇ ಕಾಣುವವನು. (ಅವನು ಯಥಾರ್ಥವಾಗಿ ತಿಳಿದವನು.)

* * *

(ಎಲ್ಲ ಪ್ರಾಣಿಗಳಲ್ಲಿಯೂ ಪರಮೇಶ್ವರನು ಒಂದೇ ಸಮನಾಗಿದ್ದಾನೆ. ದಡ್ಡ, ಬುದ್ಧಿವಂತ, ಕುರುಡ-ಕುಂಟ, ಕತ್ತೆ, ಕುದುರೆ, ಹಸು–ಎಲ್ಲದರಲ್ಲಿಯೂ ಇದ್ದಾನೆ. ತಾರತಮ್ಯವಿಲ್ಲದೇ ಇದ್ದಾನೆ. ಆದರೆ ಅವನಿರತಕ್ಕ ಕ್ಷೇತ್ರಗಳೆಲ್ಲವೂ ವಿನಾಶಹೊಂದತಕ್ಕುವುಗಳೇ ಆಗಿವೆ. ಆದರೆ ವಿನಾಶಹೊಂದುವ ಕ್ಷೇತ್ರಗಳ ಜೊತೆಯಲ್ಲಿ ಇವನು ವಿನಾಶಹೊಂದುವುದಿಲ್ಲ. ಈ ವಿಷಯವನ್ನು

ಯಾರು ಅರಿತಿರುವನೋ–ಅವನೇ ಅವನನ್ನು ಅರಿತವನಾಗಿರುತ್ತಾನೆ. ಅವನೇ ಜ್ಞಾನೀ. ಪ್ರತ್ಯಕ್ಷವಾಗಿ ಕಾಣುತ್ತಿರುವ ಭೇದದಲ್ಲಿ ಭೇದವಿಲ್ಲವೆಂಬುದನ್ನು ಮನಗಾಣುವುದು ಕಷ್ಟ. ನಾಯಿಯಲ್ಲಿಯೂ ಪರಮಾತ್ಮನಿದ್ದಾನೆಂಬುದು ನಿಜ. ಆದರೆ ನಾಯಿಯನ್ನು ಮುಟ್ಟಲು ಮನುಷ್ಯನು ಹಿಂದೆ- ಮುಂದೆ ನೋಡುತ್ತಾನೆ. ಮನುಷ್ಯರಲ್ಲಿಯೇ ನೋಡಲಾಗದಷ್ಟು ಅಸಹ್ಯವ್ಯಕ್ತಿಗಳಿರುತ್ತಾರೆ. ಅವರಲ್ಲಿಯೂ ಪರಮಾತ್ಮನು ಎಲ್ಲರಲ್ಲೂ ಇರುವಂತೆ ಇರುತ್ತಾನೆಂಬುದು ನಿಜ. ಆದರೆ ಅದನ್ನು ಅವನು ಮನಗಾಣುವುದು ಹೇಗೆ? ಮನಗಾಣುವವರು ಯಾರು?–ಈ ತತ್ತ್ವವನ್ನು ಮನಗೊಂಡವನಿಗೂ ಸಹ ತಾರತಮ್ಯವನ್ನು ಎಣಿಸದಿರಲು ಸಾಧ್ಯವಾಗುವುದಿಲ್ಲ. ಆತ್ಮಜ್ಞಾನಿಯೊಬ್ಬನಿಗೆ ಮಾತ್ರವೇ ಇದು ಸಾಧ್ಯವಾಗುವುದು. ಆದರೂ ಸಹ ಬ್ರಾಹ್ಮೀಭಾವದಲ್ಲಿರುವಾಗ ಅವನು ಎಲ್ಲೆಡೆಯಲ್ಲೂ ಬ್ರಹ್ಮನನ್ನೇ ಕಾಣುವನು. ಬೇರಾವುದನ್ನೂ ಅವನಿಗೆ ಕಾಣಲು ಸಾಧ್ಯವೇ ಆಗುವುದಿಲ್ಲ. ಜಡಪದಾರ್ಥಗಳೂ ಕೂಡ ಅವನಿಗೆ ಬ್ರಹ್ಮಮಯವಾಗಿಯೇ ಕಾಣುವುವು. ಯಾವಾಗಲೂ ಬ್ರಹ್ಮಭಾವವನ್ನೇ ಅನುಭವಿಸುವ ಅವಧೂತನೂ ಸಹ ಯಾವುದರಲ್ಲಿಯೂ ತಾರತಮ್ಯವನ್ನು ಕಾಣುವುದಿಲ್ಲ. ಇಂತಹವನನ್ನೇ ಶ್ರೀಕೃಷ್ಣನಿಲ್ಲಿ ಯಃ ಪಶ್ಯತಿ ಸ ಪಶ್ಯತಿ ಯಾವನು ಸರ್ವತ್ರ ಬ್ರಹ್ಮನನ್ನೇ ಕಾಣುತ್ತಾನೆಯೋ ಅವನೇ ಯಥಾರ್ಥದರ್ಶೀ ಎನ್ನುತ್ತಾನೆ.)

o o o

ಭೂತಗಳಿಗೂ ಮತ್ತು ಪರಮೇಶ್ವರನಿಗೂ ಇರುವ ಅತ್ಯಂತವೈಲಕ್ಷಣ್ಯ ವನ್ನು ತೋರಿಸಲು ಅವುಗಳಿಗೆ ಕ್ರಮವಾಗಿ ನಾಶಹೊಂದುವ ಮತ್ತು ಅವಿನಾಶಿ ಯಾದ ಎಂಬ ವಿಶೇಷಣಗಳನ್ನು ಕೊಟ್ಟಿದೆ. ಈ ಪರಮೇಶ್ವರನು ಬ್ರಹ್ಮಾದಿ ಸ್ಥಾವರಾಂತವಾದ ಎಲ್ಲ ಪ್ರಾಣಿಗಳಲ್ಲಿಯೂ ಸಮವಾಗಿ ನಿರ್ವಿಶೇಷವಾಗಿ ಏಕೈಕವಾಗಿದ್ದಾನೆ–ಎಂದು ಯಾವನು ನೋಡುತ್ತಾನೆಯೋ ಅವನೇ ನೋಡು ವವನು. ಹಾಗಾದರೆ ಇತರ ಜನರು ನೋಡುವುದಿಲ್ಲವೇ ಎಂದರೆ ಇತರರು ವಿರುದ್ಧವಾಗಿ ನೋಡುತ್ತಾರೆ. ಇವನು ಯಥಾರ್ಥವಾಗಿ ನೋಡುವುದರಿಂದ ಇವನೇ ನೋಡುತ್ತಾನೆ ಎಂದು ವಿಶೇಷಣವನ್ನು ಹೇಳಿದೆ. ತಿಮಿರರೋಗ ದಿಂದ ಕೂಡಿದವನು ಅನೇಕಚಂದ್ರರನ್ನು ಕಾಣುತ್ತಾನೆ. ಅವನಿಗೆ ಹೋಲಿಸಿ

ಏಕಚಂದ್ರನನ್ನು ನೋಡುವವನನ್ನು 'ಅವನೇ ನೋಡುವವನು' ಎಂದು ವಿಶೇಷದಿಂದ ಹೇಳುವಂತೆ–ಎಲ್ಲ ಭೂತಗಳಲ್ಲಿಯೂ ಅವಿಭಕ್ತವಾಗಿರುವ ಏಕಾತ್ಮನನ್ನು ಯಾವನು ನೋಡುತ್ತಾನೆಯೋ ಅವನು ವಿಭಕ್ತವಾಗಿ ಅನೇಕಾತ್ಮಗಳನ್ನು ನೋಡುವ ವಿಪರೀತದರ್ಶಿಗಳಿಗಿಂತಲೂ ವಿಶಿಷ್ಟನೆಂದು ತೋರಿಸಲು 'ಸರಿಯಾಗಿ ನೋಡುವವನು ಅವನೇ' ಎಂದು ಹೇಳುವಂತೆ ಇತರರು ಅನೇಕ ಚಂದ್ರರನ್ನು ನೋಡುವವರಂತೆ ವಿಪರೀತಭಾವದಿಂದ ನೋಡುವವರಾದುದರಿಂದ ಅವರು ಕಾಣುತ್ತಿದ್ದರೂ ಕಾಣದವರು. (ಶಂ. ಭಾ.)

ಬೇರೆ ಬೇರೆ ಆಕಾರಗಳುಳ್ಳ ಭೂತಗಳಲ್ಲಿ ಆಯಾ ಆಕಾರಗಳಿಂದ ಬೇರೆಯಾಗಿ ಆಯಾ ದೇಹ, ಇಂದ್ರಿಯ, ಮನಸ್ಸುಗಳ ಬಗೆಗೆ ಪರಮೇಶ್ವರನಂತೆ ಇರುವ ಆತ್ಮನನ್ನು ಜ್ಞಾತೃತ್ವದಿಂದ ಸಮಾನಾಕಾರವುಳ್ಳವನನ್ನಾಗಿಯೂ, ನಾಶಹೊಂದುತ್ತಿರುವ ಆಯಾ ದೇಹಗಳಲ್ಲಿ ತಾನು ಮಾತ್ರ ನಾಶಹೊಂದದೇ ಇರುವವನನ್ನಾಗಿಯೂ (ಏಕೆಂದರೆ ಅವನಿಗೆ ನಾಶಹೊಂದಲು ಯೋಗ್ಯವಾದ ಸ್ವಭಾವವೇ ಇಲ್ಲ.) ನೋಡುತ್ತಾನೆಯೋ ಅವನೇ ನೋಡುವವನು. ಆತ್ಮನನ್ನು ಯಥಾವತ್ತಾಗಿ ನೋಡುವವನು. ಯಾವನು ದೇವತೆಗಳೇ ಮುಂತಾದ ವಿಷಮಾಕಾರವನ್ನು ಕಂಡು ಆತ್ಮನೂ ಕೂಡ ವಿಷಮಾಕಾರವುಳ್ಳವನು, ಜನ್ಮ-ವಿನಾಶ ಮುಂತಾದುವುಗಳುಳ್ಳವನು–ಎಂದು ನೋಡುತ್ತಾನೆಯೋ ಅವನು ಸದಾ ಸಂಸಾರದಲ್ಲಿ ಸುತ್ತುತ್ತಿರುತ್ತಾನೆ. (ರಾ. ಭಾ.)

**ಓಂ ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥೨೮॥**

ಎಲ್ಲೆಲ್ಲಿಯೂ ಸಮವಾಗಿರತಕ್ಕ ಈಶ್ವರನನ್ನು ಸಮವಾಗಿ ಕಾಣುತ್ತಿರುವವನು ತನ್ನಿಂದ ತನ್ನನ್ನು ಕೊಂದುಕೊಳ್ಳುವುದಿಲ್ಲ. ಅದರಿಂದ ಪರಮಗತಿಯನ್ನು ಹೊಂದುತ್ತಾನೆ.

* * *

(ಎಲ್ಲ ಕಡೆಗಳಲ್ಲಿಯೂ ಸಮವಾಗಿರತಕ್ಕ ಈಶ್ವರನನ್ನು–ಸರ್ವತ್ರ ಸಮಂ ಸಮವಸ್ಥಿತಮೀಶ್ವರಮ್ । ಪರಮೇಶ್ವರನು ಎಲ್ಲ ಪ್ರಾಣಿಗಳ

ಲ್ಲಿಯೂ ಸಮನಾಗಿದ್ದಾನೆ. ಯಾವ ಪ್ರಾಣಿಗಳ ವಿಷಯದಲ್ಲಿಯೂ ಅವನಿಗೆ ಪಕ್ಷಪಾತವಿಲ್ಲ. ಪಂಡಿತನಲ್ಲೂ ಇದ್ದಾನೆ ; ಪಾಮರನಲ್ಲೂ ಇದ್ದಾನೆ. ನಾಯಿಯಲ್ಲೂ ಇದ್ದಾನೆ ; ಪತಿತನಲ್ಲೂ ಇದ್ದಾನೆ. ಪಂಡಿತನಾದವನು ಹೀಗಿರುವ ಪರಮಾತ್ಮನನ್ನು ಹೀಗೆಯೇ ತಿಳಿದುಕೊಳ್ಳಬೇಕು. ಪಂಡಿತ, ಪಾಮರ, ಬಂಧು, ದ್ವೇಷಿ, ನಾಯಿ, ಕತ್ತೆ–ಎಲ್ಲದರಲ್ಲಿಯೂ ಅವನೇ ಇದ್ದಾನೆಂಬುದನ್ನು ಮನಗಾಣಬೇಕು. ಹೀಗೆ ಸಮತ್ವವುಂಟಾಗಬೇಕಾದರೆ ತಾನು ಆತ್ಮದರ್ಶಿಯಾಗಿ ಎಲ್ಲರಲ್ಲಿಯೂ ಅದೇ ಆತ್ಮವಿದೆಯೆಂಬುದನ್ನು ಮನಗಾಣಬೇಕು. ತನಗೆ ಹಸಿವಾದರೆ ಇನ್ನೊಬ್ಬರಿಗೂ ಹಸಿವಾಗುವುದೆಂಬುದು ತಿಳಿಯುತ್ತದೆ. ತನಗೆ ಖಾಯಿಲೆ ಬಂದರೆ ಮತ್ತೊಬ್ಬರಿಗೂ ಖಾಯಿಲೆ ಬರುವುದೆಂಬುದು ತಿಳಿಯುತ್ತದೆ. ಪರಮಾತ್ಮನು ತನಗೆ ಒಳ್ಳೆಯದನ್ನು ಮಾಡಿದರೆ ಇನ್ನೊಬ್ಬರಿಗೂ ಅವನು ಒಳ್ಳೆಯದನ್ನು ಮಾಡುವನೆಂಬ ನಂಬಿಕೆಯುಂಟಾಗುತ್ತದೆ. ಈ ಅರಿವುಂಟಾದೊಡನೆಯೇ ಅಂತಹವನಿಗೆ ಎಲ್ಲವೂ ಬ್ರಹ್ಮಮಯವೆಂಬ ಸದ್ಭಾವನೆ ಅಥವಾ ಸಮಭಾವನೆಯುಂಟಾಗುತ್ತದೆ. ಇಂತಹವನು **ನ ಹಿನಸ್ತ್ಯಾತ್ಮನಾತ್ಮಾನಂ** ತನ್ನಿಂದ ತನ್ನ ಆತ್ಮನನ್ನು ಹಿಂಸಿಸುವುದಿಲ್ಲ. ಆತ್ಮನನ್ನು ಹಿಂಸಿಸುವುದೆಂದರೇನು? ಪ್ರಪಂಚದಲ್ಲಿ ಹುಟ್ಟುವ ಜೀವಗಳೆಲ್ಲಕ್ಕೂ ಸಂಸಾರವೆಂಬ ಬಂಧನದಿಂದ ಬಿಡುಗಡೆಹೊಂದುವ ಆಶಯವಿದ್ದೇ ಇರುತ್ತದೆ. ಬಂದೀಖಾನೆಯಲ್ಲೇ ಹುಟ್ಟಿ-ಬೆಳೆದು ಸಾಯುವ ಪ್ರಾಣಿಗಳಿಗೆ ತಾವು ಬಂದೀಖಾನೆಯಲ್ಲಿದ್ದೇವೆಂಬ ಅರಿವೇ ಆಗದಿರಬಹುದು. ಅದರಂತೆ ಸಂಸಾರಬಂಧನದಲ್ಲಿರುವ ಚೇತನಕ್ಕೆ ತಾನು ಬಂಧನದಲ್ಲಿದ್ದೇನೆಂಬ ಅರಿವೇ ಉಂಟಾಗದಿರಬಹುದು. ಹಾಗಿದ್ದರೂ ಸಹ ಜೀವವು ಸ್ಥೂಲ ಶರೀರವನ್ನು ಬಿಟ್ಟು, ಸೂಕ್ಷ್ಮ ಮತ್ತು ಕಾರಣಶರೀರಗಳನ್ನು ಹೊಕ್ಕಾಗ ತಾಯಿಯ ಗರ್ಭದಲ್ಲಿರುವಾಗ ತಾನು ಬಂಧನದಲ್ಲಿದ್ದೇನೆ, ಹೇಗಾದರೂ ಈ ಬಂಧನದಿಂದ ತಪ್ಪಿಸಿಕೊಳ್ಳಬೇಕು ಎಂಬ ಅರಿವುಂಟಾಗುತ್ತದೆ. ಸತ್ತ್ವ-ರಜಸ್ತಮೋಗುಣಗಳಿಂದ ಬಂಧಿತನಾದ ಮನುಷ್ಯನು ಸ್ಥೂಲಶರೀರವನ್ನು ಹೊಕ್ಕೊಡನೆಯೇ ಎಂದರೆ ತಾಯಿಯ ಗರ್ಭದಿಂದ ಹೊರಬಂದೊಡನೆಯೇ ಶಠ ಎಂಬ ವಾಯುವು ಆವರಿಸಿಕೊಳ್ಳುವುದರಿಂದ ಜೀವನು ತಾನು ಬಂಧನದಲ್ಲಿದ್ದೇನೆಂಬುದನ್ನೇ ಮರೆಯುತ್ತಾನೆ. ಜರಾ-ಮರಣಗಳಿಂದ ತಪ್ಪಿಸಿಕೊಳ್ಳುವ ಪ್ರಯತ್ನವನ್ನೇ ಮಾಡುವುದಿಲ್ಲ. ತನ್ನ ಆತ್ಮವು

ಉದ್ಧಾರವಾಗುವ ಯಾವ ಕಾರ್ಯವನ್ನೂ ಮಾಡುವುದಿಲ್ಲ. ಹೀಗೆ ಮಾಡುವುದರಿಂದ ಅವನು ತನ್ನ ಆತ್ಮಕ್ಕೆ ಘಾತವನ್ನುಂಟುಮಾಡಿದ ಹಾಗಾಗುತ್ತದೆ.

**ನೃದೇಹಮಾದ್ಯಂ ಸುಲಭಂ ಸುದುರ್ಲಭಂ**
**ಪ್ಲವಂ ಸುಕಲ್ಪಂ ಗುರುಕರ್ಣಧಾರಮ್ ।**
**ಮಯಾನುಕೂಲೇನ ನಭಸ್ವತೇರಿತಂ**
**ಪುಮಾನ್ಭವಾಬ್ಧಿಂ ನ ತರೇತ್ಸ ಆತ್ಮಹಾ ॥**

ಭಾಗವತ ೧೧-೨೦-೧೭

ಮನುಷ್ಯನ ದೇಹವೆಂಬುದು ಶ್ರೇಷ್ಠವಾದುದು. ಸುಲಭವಾಗಿ ಸಿಕ್ಕ ತಕ್ಕದ್ದಲ್ಲ. ಹಾಗಿದ್ದರೂ ಸುಲಭವಾಗಿ ಸಿಕ್ಕಿದೆ. ಈ ಸಂಸಾರವನ್ನು ದಾಟಲು ಇದೊಂದು ಚೆನ್ನಾಗಿ ರಚಿಸಿರುವ ದೋಣಿಯೇ ಆಗಿದೆ. ಈ ದೋಣಿಗೆ 'ಗುರು' ಎಂಬ ಪ್ರವೀಣನಾದ ನಾವಿಕನಿದ್ದಾನೆ. ನಾನು ಈ ನಾವೆಗೆ ಅನುಕೂಲನಾದ ಗಾಳಿಯಂತಿದ್ದೇನೆ. ಹೀಗಿದ್ದರೂ ಸಹ ನೃದೇಹವನ್ನು ಪಡೆದುಕೊಂಡವನು ಈ ಸಂಸಾರಸಾಗರವನ್ನು ದಾಟದಿದ್ದರೆ ಅವನೊಬ್ಬ ಆತ್ಮಹನನೇ ಸರಿ ; ಆತ್ಮಘಾತಕನೇ ಸರಿ ಎಂದು ಭಗವಂತನೇ ಹೇಳಿದ್ದಾನೆ.

ಆತ್ಮದರ್ಶನಮಾಡಿ ಸಂಸಾರಬಂಧನದಿಂದ ಮುಕ್ತನಾದ ಜ್ಞಾನಿಯು ಆತ್ಮ ಘಾತಕನಾಗುವುದಿಲ್ಲ ಮತ್ತು ಇವನು **ತತೋ ಯಾನ್ತಿ ಪರಾಂ ಗತಿಮ್**–ದೇಹಾವಸಾನವಾದನಂತರ ಶ್ರೇಷ್ಠವಾದ ವಿಷ್ಣುಪದವನ್ನು ಸೇರುತ್ತಾನೆ.

ಆತ್ಮಜ್ಞಾನವಿಲ್ಲದಿದ್ದವನು ಶರೀರವನ್ನೇ ಆತ್ಮವೆಂದು ತಿಳಿಯುತ್ತಾನೆ. ಅವನ ಶರೀರವು ನಾಶಹೊಂದಿದಾಗ ಮತ್ತೊಂದು ಶರೀರವು ಬರುತ್ತದೆ. ಅದೂ ನಾಶಹೊಂದಿ ಮಗದೊಂದು ಶರೀರವು ಬರುತ್ತದೆ. ಹೀಗೆ ಮಾಡಿಕೊಂಡ ಶರೀರರೂಪವಾದ ಅನೇಕಾತ್ಮಗಳ ಹನನವನ್ನು ಅವನು ಮಾಡಿಕೊಳ್ಳುತ್ತಾನೆ. ಈ ಅರ್ಥದಲ್ಲಿಯೂ ಕೂಡ ಅಜ್ಞಾನಿಯು ಆತ್ಮಘಾತಕನಾಗುತ್ತಾನೆ. ಶಾಶ್ವತವಾದ ಆತ್ಮಸ್ವರೂಪವನ್ನು ಅರಿತವನು ಅಮರವಾದ ಆತ್ಮದ ಸಹಜಾನಂದದಲ್ಲಿ ಇರುವುದರಿಂದ ಅವನಿಗೆ ಆತ್ಮಹಾನಿಯಿಲ್ಲ. ಅಂತಹವನು ಪರಾಗತಿಯನ್ನು ಹೊಂದುತ್ತಾನೆ.

ಲೋಕದಲ್ಲಿ ಜನರು ಸಾಮಾನ್ಯವಾಗಿ ಯಾವುದನ್ನು ಆತ್ಮಹತ್ಯೆ ಎಂದು

ಕರೆಯುತ್ತಾರೆಯೋ ಅದು ಅವರು ತಮ್ಮ ಶರೀರವನ್ನು ಕೃತಕವಾಗಿ ಕಳೆದು ಕೊಳ್ಳುವುದೇ ಆಗಿದೆ. ಆದುದರಿಂದ ಅದು ಶರೀರಹತ್ಯೆ. ಆದರೆ ಅದೂ ಶಾಸ್ತ್ರೀಯವಾಗಿ ನಿಷಿದ್ಧವೇ. ಏಕೆಂದರೆ : ಆ ದೇಹದಲ್ಲಿ ಇನ್ನೂ ಅನೇಕಕಾಲ ಇದ್ದು ಆತ್ಮಸಾಧನೆಯನ್ನು ಮಾಡಿಕೊಳ್ಳದೇ ಪುನಃ-ಪುನಃ ಹುಟ್ಟಿ ಸಂಸಾರದ ಕಷ್ಟದಲ್ಲಿಯೇ ಇರುವಂತಾಗುವುದರಿಂದ ಅದು ಆತ್ಮಹಿಂಸೆ. ಇದಲ್ಲದೆ ಕೃತಕ ವಾಗಿ ದೇಹವನ್ನು ಬಿಟ್ಟಮೇಲೆ ಅವನು ಪಿಶಾಚಾದಿ ಯೋನಿಗಳಲ್ಲಿ ಕೆಲವು ಕಾಲ ಹೆಚ್ಚು ಕಷ್ಟವನ್ನೇ ಅನುಭವಿಸಬೇಕಾಗಿರುವುದರಿಂದಲೂ ಅದು ಆತ್ಮನಿಗೆ ಹಿಂಸೆಯನ್ನು ಉಂಟುಮಾಡುವುದರಿಂದ ಅದು ಪಾತಕ.)

O O O

**ನ ಹಿನಸ್ತಿ ಆತ್ಮನಾ ಆತ್ಮಾನಂ**–ಯಾವ ಪ್ರಾಣಿಯೂ ತನಗೆ ತಾನೇ ಹಿಂಸೆಮಾಡಿಕೊಳ್ಳುವುದಿಲ್ಲ. ಹೀಗಿರುವಾಗ ಈ ಆಗದೇ ಇರುವುದರ ಬಗೆಗೆ ಅವನು 'ತನಗೆ ಹಿಂಸೆಮಾಡಿಕೊಳ್ಳುವುದಿಲ್ಲ' ಎಂಬ ನಿಷೇಧವನ್ನು ಈ ಗೀತೆಯಲ್ಲಿ ಏಕೆ ಹೇಳುತ್ತಾನೆ? ಇದು 'ಭೂಮಿಯ ಮೇಲೆ ಮತ್ತು ಅಂತರಿಕ್ಷದಲ್ಲಿ ಬೆಂಕಿಯನ್ನು ಉರಿಸಬಾರದು' ಎಂದು ಹೇಳಿದಂತೆ ಆಗುತ್ತದೆ. 'ಭೂಮಿಯ ಮೇಲೆ ಅಲ್ಲದೆ ಬೇರೆಲ್ಲಿ ಅಗ್ನಿಯನ್ನು ಉರಿಸಲು ಸಾಧ್ಯ? ಅಂತರಿಕ್ಷದಲ್ಲಿ ಬೆಂಕಿಯನ್ನು ಉರಿಸಬಾರದು' ಎಂದು ನಿಷೇಧಮಾಡುವುದೇ ತಪ್ಪು. ಏಕೆಂದರೆ : ಅಲ್ಲಿ ಅಗ್ನಿಯನ್ನು ಉರಿಸಲು ಸಾಧ್ಯವೇ ಇಲ್ಲ.

ಮೇಲೆ ಹೇಳಿರುವ ನಿಷೇಧದಲ್ಲಿ ದೋಷವಿಲ್ಲ. ಏಕೆಂದರೆ : ಅಜ್ಞಾನಿ ಗಳೆಲ್ಲರೂ ಆತ್ಮಘಾತಿಗಳೇ. ಅವರು ತಮ್ಮ ಆತ್ಮಕ್ಕೆ ತಿರಸ್ಕಾರಮಾಡಿಕೊಳ್ಳು ತ್ತಾರೆ. ಅದರ ಮೇಲೆ ತೆರೆಯನ್ನು ಹಾಕಿಕೊಂಡಿರುತ್ತಾರೆ. ಅವರು ಅತ್ಯಂತ ಪ್ರಸಿದ್ಧನಾಗಿರುವ ಶುದ್ಧದೃಷ್ಟಿಗೆ ಪ್ರತ್ಯಕ್ಷನಾಗುವ ಆತ್ಮನನ್ನು ಮುಚ್ಚಿಕೊಂಡು, ಅನಾತ್ಮವಾದ ಶರೀರಾದಿಗಳನ್ನೇ ಆತ್ಮಾ ಎಂದು ಭಾವಿಸುತ್ತಾರೆ. ಧರ್ಮ ಮತ್ತು ಅಧರ್ಮಗಳನ್ನು ಆಚರಿಸಿ ತಾವು ಪಡೆದುಕೊಂಡಿದ್ದ ಶರೀರರೂಪ ವಾದ ಆತ್ಮವನ್ನು ಪಡೆಯುತ್ತಾರೆ. ಅನಂತರ ಹಾಗೆಯೇ ಅದನ್ನೂ ನಾಶಪಡಿಸಿಕೊಂಡು ಮತ್ತೊಂದು ಶರೀರರೂಪವಾದ ಆತ್ಮವನ್ನು ಪಡೆಯು ತ್ತಿರುತ್ತಾರೆ. ಈ ರೀತಿಯಲ್ಲಿ ಮತ್ತೆ-ಮತ್ತೆ ಶರೀರರೂಪವಾದ ಆತ್ಮವನ್ನು ಪಡೆದು ಅದಕ್ಕೆ ಹಿಂಸೆಕೊಡುತ್ತಿರುತ್ತಾರೆ. ಆದುದರಿಂದ ಎಲ್ಲ ಅಜ್ಞಾನಿಗಳೂ

ಆತ್ಮಘಾತಿಗಳು. ಇದಲ್ಲದೇ ಅವರಿಗೆ ಪಾರಮಾರ್ಥಿಕವಾದ ಯಾವ ಆತ್ಮ ವುಂಟೋ ಅದು ಅವಿದ್ಯೆಯಿಂದ ಅವರ ಅರಿವಿಗೆ ಬರದೇ ಇರುವುದರಿಂದ ಅದು ಸತ್ತಿರುವಂತೆಯೇ. ಏಕೆಂದರೆ ಅವರಿಗೆ ಅದರಿಂದ ಆಗಬೇಕಾಗಿರುವ ಫಲವುಂಟಾಗುವುದಿಲ್ಲ. ಆದುದರಿಂದಲೂ ಎಲ್ಲ ಅಜ್ಞಾನಿಗಳನ್ನೂ ಆತ್ಮಘಾತಿ ಗಳು ಎಂದೇ ಕರೆಯಬೇಕು. ಮೇಲೆ ಹೇಳಿದಂತೆ ಯಥಾರ್ಥವಾದ ಆತ್ಮ ಸ್ವರೂಪವನ್ನು ತಿಳಿದ ಜ್ಞಾನಿಗಳಿಗಾದರೋ ಮೇಲ್ಕಂಡ ಎರಡು ಅರ್ಥಗಳ ಲ್ಲಿಯೂ ಆತ್ಮಘಾತವಾಗುವುದಿಲ್ಲ. ಆದುದರಿಂದ ಅವರು ಪರಮಗತಿ ಎಂಬ ಫಲವನ್ನು ಪಡೆಯುತ್ತಾರೆ. (ಶಂ. ಭಾ.)

ದೇವತೆಗಳೇ ಮುಂತಾದ ಶರೀರಗಳಲ್ಲಿ ಅವುಗಳಿಗೆ ಶೇಷಿಯಾಗಿಯೂ, ಆಧಾರವಾಗಿಯೂ, ನಿಯಾಮಕನಾಗಿಯೂ ಇರುವ ಈಶ್ವರನಾದ ಪ್ರತ್ಯಗಾತ್ಮ ನನ್ನು ದೇಹಾದಿ ವೈಷಮ್ಯಗಳಿಲ್ಲದೇ, ಜ್ಞಾನೈಕಾಕಾರದಿಂದ ಸಮವಾಗಿ ನೋಡುವವನು ಆತ್ಮದಿಂದ (ಮನಸ್ಸಿನಿಂದ) ತನ್ನ ಆತ್ಮವನ್ನು ಹಿಂಸಿಸಿ ಕೊಳ್ಳುವುದಿಲ್ಲ ; ಎಂದರೆ ರಕ್ಷಿಸಿಕೊಳ್ಳುತ್ತಾನೆ. ಸಂಸಾರದಿಂದ ಬಿಡುಗಡೆ ಮಾಡಿಕೊಳ್ಳುತ್ತಾನೆ. ಸಮಾನದರ್ಶನದಿಂದ ಪರಾಗತಿಯನ್ನು ಹೊಂದುತ್ತಾನೆ. ಪರಾಗತಿ ಎಂದರೆ ಶ್ರೇಷ್ಠವಾದ ಗಮ್ಯವಸ್ತು. ಯಥಾವಸ್ಥಿತವಾಗಿರುವ ಆತ್ಮಸ್ವರೂಪ. ಆ ಆತ್ಮವನ್ನು ವಿಷಮವಾಗಿ ನೋಡುವವನು ಆತ್ಮವನ್ನು ಹಿಂಸಿಸಿದವನಾಗುತ್ತಾನೆ. ಎಂದರೆ ಸಂಸಾರಸಾಗರದ ಮಧ್ಯದಲ್ಲಿ ಬೀಳಿಸಿಕೊಳ್ಳುತ್ತಾನೆ. (ರಾ. ಭಾ.)

**ಓಂ ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥೨೯॥**

ಸರ್ವಪ್ರಕಾರದಿಂದಲೂ ಪ್ರಕೃತಿಯಿಂದಲೇ ಸರ್ವಕರ್ಮಗಳೂ ನಡೆ ಯುತ್ತಿರುವುದೆಂದು ಯಾವನು ಕಂಡುಕೊಂಡಿರುವನೋ ಹಾಗೂ ಆತ್ಮನು ಅಕ್ರಿಯನೆಂದು ಯಾವನು ಕಂಡುಕೊಂಡಿರುವನೋ–ಅವನೇ ಕಂಡಿರುತ್ತಾನೆ.

* * *

(ಪ್ರಾಣಿಗಳು ಮಾಡುವ ಎಲ್ಲ ಬಗೆಯ ಕರ್ಮಗಳೂ ಸರ್ವಪ್ರಕಾರ ದಿಂದಲೂ ಪ್ರಕೃತಿಯಿಂದಲೇ ಮಾಡಲ್ಪಡುತ್ತಿವೆ. ಅರ್ಥಾತ್ ಮನುಷ್ಯನು

ಮಾತನಾಡುವುದಕ್ಕೆ, ಕುಳಿತುಕೊಳ್ಳುವುದಕ್ಕೆ, ಓಡಾಡುವುದಕ್ಕೆ, ಕೇಳುವುದಕ್ಕೆ, ವಾಸನೆ ನೋಡುವುದಕ್ಕೆ ಎಲ್ಲಕ್ಕೂ ಪ್ರಕೃತಿಯೇ ಕಾರಣ. ಮಹತ್ತತ್ತ್ವ, ಅಹಂಕಾರ, ಬುದ್ಧಿ, ಮನಸ್ಸು, ಹತ್ತು ಇಂದ್ರಿಯಗಳು, ಪಂಚತನ್ಮಾತ್ರೆಗಳು–ಎಲ್ಲವೂ ಪ್ರಕೃತಿಜನ್ಯವಾದುವುಗಳೆಂದು ಈ ಹಿಂದೆಯೇ ಹೇಳಿದೆ. ಆದರೆ ಇವುಗಳ ಕ್ರಿಯೆಯೂ ಪ್ರಕೃತಿಯದೇ ಆಗುತ್ತದೆಯೇ? ಎಂದರೆ : ಈ ಕ್ರಿಯೆಗಳಿಗೆ ಕಾರಣಗಳಾದ ಸತ್ತ್ವ-ರಜಸ್ತಮೋಗುಣಗಳೂ ಸಹ ಪ್ರಕೃತಿಜನ್ಯ ವಾದುವುಗಳೇ. ಆದರೆ ಅವುಗಳನ್ನಂಟಿಸಿಕೊಂಡ ಒಬ್ಬನಿಂದ ಈ ಕ್ರಿಯೆಗಳು ನಡೆಯುತ್ತಿರುವಂತೆ ನಮಗೆ ಕಾಣುತ್ತಿದೆ. ಆದರೆ ಪ್ರಕೃತಿಜನ್ಯವಾದ ಈ ವಾಸನೆಗಳಿಂದ ಈ ಕರ್ಮಗಳು ನಡೆಯುತ್ತಿರುವುವೇ ಹೊರತು ಈ ಗುಣಗಳಿವೆಯೆಂದು ಭಾಸವಾಗುವ ಆತ್ಮನಿಂದ ಈ ಕ್ರಿಯೆಗಳು ನಡೆಯುತ್ತಿಲ್ಲ. ಆತ್ಮನು ಅಕರ್ತೃ, ಅಕರ್ಮಿ ಎಂಬುದನ್ನು ಯಾವನು ತಿಳಿಯುತ್ತಾನೆಯೋ ಅವನೇ ಆತ್ಮದ್ರಷ್ಟಾ–ಆತ್ಮನನ್ನು ಕಂಡವನಾಗುತ್ತಾನೆ ಎನ್ನುತ್ತಾನೆ ಶ್ರೀಕೃಷ್ಣ.

ಈ ಗುಣಗಳು ಆತ್ಮನಿಗೆ ಎಲ್ಲಿಯವರೆಗೆ ಕವಿದುಕೊಂಡಿರುತ್ತವೆಯೋ ಅಲ್ಲಿಯವರೆಗೂ ಆತ್ಮನನ್ನು ನೋಡುವ ಸಾಧ್ಯತೆಯಿಲ್ಲ. ಅಮಾನಿತ್ವ, ಅದಂಭಿತ್ವ ಇತ್ಯಾದಿ ಉಪದೇಶಗಳೆಲ್ಲವೂ ಆತ್ಮನಿಗೆ ಅಂಟಿಕೊಂಡಂತಿರುವ ಸತ್ತ್ವ-ರಜಸ್ತಮೋಗುಣಗಳನ್ನು ದೂರವಾಗಿಡುವುದಕ್ಕಾಗಿಯೇ. ಆತ್ಮನನ್ನು ಕಾಣಬೇಕಾದರೆ ಮನಸ್ಸು ನಿರ್ವಿಕಾರವಾಗಿ, ನಿತ್ಯಶುದ್ಧವಾಗಿ, ನಿತ್ಯಬುದ್ಧ ವಾಗಿರಬೇಕು. ಆತ್ಮದರ್ಶನದಲ್ಲಿ ಎಲ್ಲ ಕ್ರಿಯೆಗಳೂ ಲಯವಾಗಿಬಿಡುತ್ತವೆ. ಆದುದರಿಂದ ಕ್ಷೇತ್ರಜ್ಞನಿಗೆ ಕ್ಷೇತ್ರಜ್ಞನ ನಿಜಸ್ವರೂಪವು, ಅವನು ಅಕ್ರಿಯ, ನಿರ್ಗುಣ ಎಂಬ ವಿಷಯವು ತಿಳಿಯುವುದೇ ಹೊರತು ಬೇರೆಯವರಿಗೆ ತಿಳಿಯುವ ಸಾಧ್ಯತೆಯೇ ಇಲ್ಲ. ಅವನು ಜ್ಞಾನಿಯೇ ಅಲ್ಲವೇ–ಎಂಬುದಕ್ಕೆ ಇದೊಂದು ಪರೀಕ್ಷೆ. ಜ್ಞಾನಿಯಾದವನು, ಆತ್ಮನು ಅಕರ್ತೃವೆಂದೂ ಪ್ರಕೃತಿಯೇ ಎಲ್ಲ ಕರ್ಮಗಳನ್ನೂ ಮಾಡುವುದೆಂದೂ ಅನುಭವದಿಂದ ತಿಳಿಯುತ್ತಾನೆ. ಆಗಲೇ ಅವನು ಆತ್ಮನನ್ನು ನೋಡಿದವನಾಗುತ್ತಾನೆ. ಬ್ರಹ್ಮವಿದನಾಗುತ್ತಾನೆ.)

o o o

ಪ್ರಕೃತಿ ಎಂದರೆ ತ್ರಿಗುಣಾತ್ಮಕವಾದ ಭಗವಂತನ ಮಾಯೆ. ಮಹತ್ತು ಮುಂತಾದ ಕಾರ್ಯ-ಕರಣಗಳ ಆಕಾರದಲ್ಲಿ ಪರಿಣಾಮಹೊಂದಿರುವ ಆ ಪ್ರಕೃತಿಯಿಂದಲೇ ಮನಸ್ಸು, ಮಾತು ಮತ್ತು ಶರೀರಗಳಲ್ಲಿ ನಡೆಯುವ ಎಲ್ಲ ಬಗೆಯ ಕರ್ಮಗಳೂ ನಡೆಯುತ್ತವೆ–ಎಂದು ಯಾವನು ನೋಡುತ್ತಾನೆಯೋ ಮತ್ತು ಹಾಗೆಯೇ ಆತ್ಮನು (ಕ್ಷೇತ್ರಜ್ಞನು) ಅಕರ್ತೃ, ಯಾವ ಉಪಾಧಿಯೂ ಇಲ್ಲದವನು–ಎಂದು ನೋಡುತ್ತಾನೆಯೋ ಅವನೇ ಪರಮಾರ್ಥದರ್ಶಿಯು. ನಿರ್ಗುಣವೂ, ಅಕರ್ತೃವೂ, ನಿರ್ವಿಶೇಷವೂ ಆಗಿ ಆಕಾಶದಂತೆ ಇರುವ ಆತ್ಮದಲ್ಲಿ ಭೇದವಿರುವುದಕ್ಕೆ ಪ್ರಮಾಣವಿಲ್ಲ ಎಂದು ಅರ್ಥ. (ಶಂ. ಭಾ.)

ಎಲ್ಲ ಕರ್ಮಗಳೂ **ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ** (೧೩-೨೦) ಎಂದು ಹಿಂದೆ ಹೇಳಿದಂತೆ ಪ್ರಕೃತಿಯಿಂದಲೇ ಮಾಡಲ್ಪಡುತ್ತಿವೆ–ಎಂಬುದಾಗಿಯೂ, ಹಾಗೆಯೇ ಜ್ಞಾನಾಕಾರವಾಗಿರುವ ಆತ್ಮವು ಅಕರ್ತೃ ಎಂಬುದಾಗಿಯೂ ಯಾವನು ನೋಡುತ್ತಾನೆಯೋ, (ಆತ್ಮನಿಗೆ) ಅವನಿಗೆ ಪ್ರಕೃತಿಸಂಯೋಗ, ಅದರ ಅಧಿಷ್ಠಾನ, ಅದರಿಂದ ಉಂಟಾದ ಸುಖ-ದುಃಖಾನುಭವ–ಇವುಗಳೆಲ್ಲವೂ ಕರ್ಮರೂಪವಾದ ಅಜ್ಞಾನದಿಂದ ಮಾಡಲ್ಪಟ್ಟುವುಗಳು ಎಂದು ತಿಳಿಯುತ್ತಾನೆಯೋ–ಅವನು ಯಥಾರ್ಥವಾದ ರೀತಿಯಲ್ಲಿ ಆತ್ಮನನ್ನು ನೋಡುತ್ತಾನೆ. (ರಾ. ಭಾ.)

ಪ್ರಕೃತಿಯಿಂದಲೇ ಕರ್ಮಗಳು ಮಾಡಲ್ಪಡುತ್ತಿವೆ ಎಂದು ಯಾವನು ನೋಡುತ್ತಾನೆಯೋ ಅವನು ಆತ್ಮವನ್ನು ಅಕರ್ತೃವನ್ನಾಗಿ ನೋಡುತ್ತಾನೆ ಎಂದು ಕೆಲವರು ಅನ್ವಯಮಾಡಿ ಅರ್ಥಹೇಳುತ್ತಾರೆ. ಇದು ಸರಿಯಲ್ಲ. ಹಾಗೆ ಹೇಳಿದರೆ **'ತಥಾ'** ಎಂಬ ಶಬ್ದವು ವ್ಯರ್ಥವಾಗುತ್ತದೆ. ಆದುದರಿಂದ, ಯಾವನು ಆತ್ಮವನ್ನು ಅಕರ್ತೃವನ್ನಾಗಿಯೂ ನೋಡುತ್ತಾನೆಯೋ ಅವನು (ಪರಮೇಶ್ವರನನ್ನು ) ನೋಡುತ್ತಾನೆ. **ಆತ್ಮಾನಂ ಅಕರ್ತಾರಂ ಪಶ್ಯತಿ** ಎಂದು ಅನ್ವಯಾನುಸಾರವಾಗಿಯೇ ಅರ್ಥಹೇಳಬೇಕು. (ಜಯತೀರ್ಥರು.)

**ಓಂ ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಮ್ಪದ್ಯತೇ ತದಾ ॥೩೦॥**

ಪ್ರಾಣಿಗಳ (ಭೂತಗಳ) ಪ್ರತ್ಯೇಕತೆ ಎಂಬ ಭಾವವು ಒಂದರಲ್ಲಿ ಇದೆ ಎಂಬುದನ್ನೂ ಮತ್ತು ಅದರಿಂದಲೇ ವಿಸ್ತಾರಗೊಳ್ಳುತ್ತದೆ ಎಂಬುದನ್ನೂ ಯಾವಾಗ ಕಂಡುಕೊಳ್ಳುತ್ತಾನೆಯೋ ಆಗ ಅವನು ಬ್ರಹ್ಮನನ್ನೇ ಹೊಂದುತ್ತಾನೆ.

* * *

(**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ**–ಎಂದು ಈ ಅಧ್ಯಾಯದ ೧೬ನೆಯ ಶ್ಲೋಕದಲ್ಲಿ ಹೇಳಿರುವುದನ್ನೇ ಭಗವಂತನು ಇಲ್ಲಿಯೂ ಹೇಳಿದ್ದಾನೆ.

ಪ್ರಾಣಿಗಳು ಅನೇಕವಾಗಿವೆ. ಒಂದೊಂದು ಜಾತಿಯ ಪ್ರಾಣಿಯಲ್ಲೂ ನಾನಾಭೇದಗಳಿವೆ. ಅನೇಕಕೋಟಿ ಮನುಷ್ಯರಿದ್ದರೂ ಒಬ್ಬನಂತೆ ಮತ್ತೊಬ್ಬ ನಿರುವುದಿಲ್ಲವೆಂದು ಹೇಳುತ್ತಾರೆ. ಎಷ್ಟು ಕೋಟಿ ಮನುಷ್ಯರಿದ್ದಾರೆಯೋ ಅಷ್ಟು ಕೋಟಿ ಬಗೆಯ ಜನರೇ ಇದ್ದಾರೆ. ಆ ಎಲ್ಲ ಮನುಷ್ಯರಲ್ಲಿ, ಪ್ರಾಣಿಗಳಲ್ಲಿ, ದೇವತೆಗಳಲ್ಲಿ, ಮರ-ಗಿಡಗಳಲ್ಲಿಯೂ ಸಹ ಇರುವವನು ಅವನೊಬ್ಬನೇ.

ನಾವು ಸಾವಿರಾರು ಸಂಕಲ್ಪಗಳನ್ನು ಮಾಡುತ್ತೇವೆ. ಸಾವಿರಾರು ಬಗೆಯಾಗಿ ಯೋಚಿಸುತ್ತೇವೆ. ಒಂದು ಯೋಚನೆಗೂ ಅಥವಾ ಸಂಕಲ್ಪಕ್ಕೂ ಮತ್ತೊಂದಕ್ಕೂ ಅಪಾರವಾದ ವ್ಯತ್ಯಾಸವಿರುತ್ತದೆ. ಆದರೆ ಎಲ್ಲ ಯೋಚನೆಗಳೂ ಒಂದೇ ಆದ ಮನಸ್ಸಿನಿಂದ ಉದ್ಭೂತವಾದುವುಗಳು. ಅದರಂತೆ ಭಿನ್ನ-ಭಿನ್ನವಾದ ಪ್ರಾಣಿಕೋಟಿಗಳಿದ್ದರೂ ಸಹ ಅವೆಲ್ಲವೂ ಒಂದೇ ಬ್ರಹ್ಮವಸ್ತುವಿನಿಂದಲೇ ಉಂಟಾದುವುಗಳು ಅಥವಾ ಬ್ರಹ್ಮವಸ್ತುವು ಆ ಎಲ್ಲ ಪ್ರಾಣಿಗಳಲ್ಲೂ ಸಮವಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಅಂತೆಯೇ ಈ ಬ್ರಹ್ಮದಿಂದಲೇ ಎಲ್ಲರ ಉತ್ಪತ್ತಿ-ವಿಕಾಸಗಳೂ ಆಗಿವೆ ಎಂದೂ ತಿಳಿಯಬೇಕು. ಪ್ರಕೃತಿಯು ಬ್ರಹ್ಮನ ವಿಸ್ತಾರವೇ ಆಗಿದೆ ಎಂಬುದನ್ನೂ ಅರಿಯಬೇಕು. ಈ ವಿಜ್ಞಾನವು ತಿಳಿಯಬೇಕಾದರೆ ಅವನು ಜ್ಞಾನಿಯಾಗಬೇಕು. ಬ್ರಹ್ಮನನ್ನು ಹೃದಯಗುಹೆಯಲ್ಲಿ ಕಂಡುಕೊಂಡಿರಬೇಕು. ಅಂತಹವನಿಗೆ ಮಾತ್ರವೇ **ಸರ್ವಂ ಖಲ್ವಿದಂ ಬ್ರಹ್ಮ** ಎಂಬುದೂ, ಅದೇ ಬ್ರಹ್ಮವು ಭೂತಗಳಲ್ಲಿ

ವಿಭಕ್ತವಾಗಿರುವ ರಹಸ್ಯವೂ ತಿಳಿಯುವುದು. ಇದನ್ನು ತಿಳಿದನಂತರ ಅವನೂ [ಯಥಾರ್ಥವಾಗಿ ಕಂಡಿರುವವನು] ಬ್ರಹ್ಮನನ್ನೇ ಹೊಂದುತ್ತಾನೆ.)

o o o

ಅನುಪಶ್ಯತಿ= ಶಾಸ್ತ್ರ ಮತ್ತು ಆಚಾರ್ಯರ ಉಪದೇಶದಿಂದ ತಿಳಿದು **ಆತ್ಮೈವೇದಂ ಸರ್ವಂ**–ಎಂದು ಹೇಳುವಂತೆ ಆತ್ಮವನ್ನು ಪ್ರತ್ಯಕ್ಷವಾಗಿ ನೋಡುತ್ತಾನೆಯೋ. **ತತ ಏವ ಚ ವಿಸ್ತಾರಂ**= ಆತ್ಮದಿಂದಲೇ ಎಲ್ಲದರ ಉತ್ಪತ್ತಿ-ವಿಕಾಸಗಳೂ ಆಗಿವೆ ಎಂಬುದನ್ನು ನೋಡುತ್ತಾನೆಯೋ.

**ಆತ್ಮತಃ ಪ್ರಾಣಃ ಆತ್ಮತ ಆಶಾ ಆತ್ಮತಃ ಸ್ಮರ ಆತ್ಮತ ಆಕಾಶಃ.**

ಛಾಂ ೭-೨೬-೧

ಬ್ರಹ್ಮ ಸಂಪದ್ಯತೇ–ಬ್ರಹ್ಮವೇ ಆಗಿಬಿಡುತ್ತಾನೆ. (ಶಂ. ಭಾ.)

ದೇವತೆಗಳೇ ಮುಂತಾದ ಎಲ್ಲ ಭೂತಗಳೂ ಪ್ರಕೃತಿ-ಪುರುಷ ಎಂಬ ತತ್ತ್ವದ್ವಯಾತ್ಮಕವಾಗಿವೆ. ಆದರೆ ಅವರ ದೇವತ್ವ, ಮನುಷ್ಯತ್ವ, ದೀರ್ಘತ್ವ, ಹ್ರಸ್ವತ್ವ–ಮುಂತಾದ ಪ್ರತ್ಯೇಕಭಾವಗಳು ಏಕಸ್ಥವಾಗಿವೆ. ಪ್ರಕೃತಿ ಎಂಬ ಒಂದು ತತ್ತ್ವದಲ್ಲಿವೆ. ಅವು ಆತ್ಮದಲ್ಲಿಲ್ಲ–ಎಂದು ಯಾವನು ಕಾಣುತ್ತಾನೆಯೋ ಮತ್ತು ಆ ಪ್ರಕೃತಿಯಿಂದಲೇ ಮುಂದೆ ಮಕ್ಕಳು-ಮೊಮ್ಮಕ್ಕಳು ಮುಂತಾದ ಬೇರೆ ವಿಸ್ತಾರವುಂಟಾಗುತ್ತದೆ–ಎಂದು ನೋಡುತ್ತಾನೆಯೋ ಆಗಲೇ ಅವನು ವಿಚ್ಛೇದರಹಿತನೂ ಜ್ಞಾನೈಕಾಕಾರನೂ ಆದ ಬ್ರಹ್ಮ (ಆತ್ಮ) ವನ್ನು ಹೊಂದಿಬಿಡುತ್ತಾನೆ. (ರಾ. ಭಾ.)

ಏಕಸ್ಥಂ= ವಿಷ್ಣುವೊಬ್ಬನಲ್ಲಿಯೇ ಇದೆ (ಈ ಭೂತಗಳ ಪ್ರತ್ಯೇಕದ ಅಭಾವವೆಲ್ಲವೂ ವಿಷ್ಣುವೊಬ್ಬನಲ್ಲಿಯೇ ಇದೆ ) ಮತ್ತು ಆ ವಿಷ್ಣುವಿನಿಂದಲೇ ವಿಸ್ತಾರ ಮತ್ತು ಉತ್ಪತ್ತಿಗಳನ್ನು ಹೊಂದುತ್ತವೆ–ಎಂದು ಯಾವಾಗ ತಿಳಿಯುತ್ತಾನೆಯೋ ಆಗ ಬ್ರಹ್ಮವನ್ನು ಹೊಂದುತ್ತಾನೆ. (ಮ. ಭಾ.)

**ಓಂ ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ ॥೩೧॥**

ಕೌಂತೇಯ! ಅನಾದಿಯಾಗಿರುವುದರಿಂದಲೂ, ನಿರ್ಗುಣನಾಗಿರುವುದ

ರಿಂದಲೂ ಈ ಅವ್ಯಯನಾದ ಪರಮಾತ್ಮನು ಶರೀರದಲ್ಲಿದ್ದರೂ ಯಾವ ಕರ್ಮವನ್ನೂ ಮಾಡುವುದಿಲ್ಲ. ಲೇಪವನ್ನೂ ಹೊಂದುವುದಿಲ್ಲ.

*  *  *

(ಪರಮಾತ್ಮನ ಅಕರ್ತೃತ್ವ ಮತ್ತು ನಿರ್ಲಿಪ್ತತೆಗೆ ಕಾರಣವನ್ನು ಭಗವಂತನು ಹೇಳುತ್ತಾನೆ. ಇವನು ಅನಾದಿ. ಆದಿಯಿದ್ದವನಿಗೆ ಅಂತ್ಯವೂ ಇದೆ. ಆದಿಯೇ ಇಲ್ಲದವನಿಗೆ ಅಂತ್ಯವೂ ಇಲ್ಲ. ಹುಟ್ಟು-ಸಾವುಗಳೆಂಬುದೂ ಇಲ್ಲ. ಅವನು ನಿರ್ಗುಣ. ಸತ್ತ್ವ, ರಜಸ್ಸು ಮತ್ತು ತಮಸ್ಸು ಈ ಮೂರು ವಿಧವಾದ ಗುಣಗಳೂ ಇಲ್ಲದವನು. ಆದುದರಿಂದಲೇ ಪರಮಾತ್ಮನು ಅವ್ಯಯನು. ವಿಕಾರರಹಿತನು. ಈ ಕಾರಣದಿಂದಲೇ ಅವನು ಎಲ್ಲ ಪ್ರಾಣಿಗಳ ಶರೀರಗಳಲ್ಲಿದ್ದರೂ ಯಾವ ಕಾರ್ಯವನ್ನೂ ಮಾಡುವುದಿಲ್ಲ ಮತ್ತು ಪ್ರಕೃತಿಯು ಮಾಡಿದ ಕ್ರಿಯೆಗಳ ಅಂಟೂ ಅವನಿಗೆ ಇರುವುದಿಲ್ಲ.)

O  O  O

**ಪರಮಾತ್ಮನು ಅವ್ಯಯ :–** ಕ್ಷಯಹೊಂದದವನು. ನ ವ್ಯೇತಿ ಇತಿ ಅವ್ಯಯಃ ಏಕೆಂದರೆ : ಅವನಿಗೆ ಆದಿಯಿಲ್ಲ. ಯಾವ ವಸ್ತುವಿಗೆ ಆದಿ ಯಿದೆಯೋ ಅದು ಸ್ವರೂಪದಿಂದ ಕ್ಷಯಹೊಂದುತ್ತದೆ. ಆದರೆ ಪರಮಾತ್ಮ ನಿಗೆ ಆದಿಯಿಲ್ಲ. ಅವಯವಗಳೂ ಇಲ್ಲ. ಅವಯವಗಳೇ ಇಲ್ಲದಿದ್ದ ಮೇಲೆ ಕ್ಷಯವೆಲ್ಲಿಂದ ಬಂತು? ಆದುದರಿಂದ ಕ್ಷಯವೂ ಇಲ್ಲ. ಸಗುಣನಾಗಿದ್ದವನಿಗೆ ಗುಣಗಳ ವ್ಯಯದಿಂದ ವ್ಯಯ (ಕ್ಷಯ) ವುಂಟಾಗುತ್ತದೆ. ಆದರೆ ಆತ್ಮನು ನಿರ್ಗುಣನೂ ಆಗಿರುವುದರಿಂದ ಅವನಿಗೆ ಕ್ಷಯವಿಲ್ಲ. ಇವನು ಪೂರ್ಣವಾಗಿ ಅಕ್ಷಯನಾದುದರಿಂದ ಇವನು ಶರೀರದಲ್ಲಿ ಇದ್ದಂತೆ ಕಂಡರೂ ಇವನಿಗೆ ಕರ್ತೃತ್ವವಿಲ್ಲ. ಏನೂ ಮಾಡದೇ ಇರುವುದರಿಂದ ಫಲದ ಲೇಪವೂ ಇಲ್ಲ. ಕರ್ತೃವಾಗಿದ್ದರೆ ಅವನಿಗೆ ಕರ್ಮಫಲದ ಲೇಪ. ಅಕರ್ತೃವಾಗಿರುವುದರಿಂದ ಇವನಿಗೆ ಫಲದ ಲೇಪವಿಲ್ಲ. (ಶಂ. ಭಾ.)

ಈ ಪರಮಾತ್ಮನನ್ನು (ಪ್ರತ್ಯಗಾತ್ಮನನ್ನು ), ದೇಹದಿಂದ ಪ್ರತ್ಯೇಕವಾದ ಸ್ವಭಾವವುಳ್ಳವನೆಂದು ಅದರ ಸ್ವರೂಪವನ್ನು ನಿರೂಪಿಸಿರುವುದರಿಂದ ಇವನು ಶರೀರದಲ್ಲಿದ್ದರೂ ಆದಿಯುಳ್ಳವನಲ್ಲ (ಆರಂಭ ಹೊಂದುವವನಲ್ಲ.) ಇವನು ಅವ್ಯಯನು, ವಿಕಾರವಿಲ್ಲದವನು ಮತ್ತು ನಿರ್ಗುಣನು. ಸತ್ತ್ವವೇ

ಮುಂತಾದ ಗುಣಗಳಿಲ್ಲದವನು. ಆದುದರಿಂದ ಅವನು ಕರ್ಮವನ್ನು ಮಾಡುವುದಿಲ್ಲ. ದೇಹದ ಸ್ವಭಾವಗಳಿಂದ ಲೇಪಿಸಲ್ಪಟ್ಟಿರುವುದೂ ಇಲ್ಲ. ಬಂಧಿಸಲ್ಪಡುವುದೂ ಇಲ್ಲ. (ರಾ. ಭಾ.)

ಪರಮಾತ್ಮನಿಗೆ ವ್ಯಯ (ವಿಕಾರ) ಮುಂತಾದುವುಗಳಿಲ್ಲ ಎಂದು ಇಲ್ಲಿ ನಿರೂಪಿಸಿದೆ. ಅವನಿಗೆ ಆದಿಯಿಲ್ಲ. ಯಾವುದಕ್ಕೆ ವ್ಯಯವಿದೆಯೋ ಅದು ಸಾಮಾನ್ಯವಾಗಿ ಆದಿಯುಳ್ಳದ್ದಾಗಿರುತ್ತದೆ ಮತ್ತು ಗುಣಾತ್ಮಕವಾಗಿರುತ್ತದೆ. ಆದರೆ ಪರಮಾತ್ಮನಿಗೆ ಇದು ಯಾವುದೂ ಇಲ್ಲ. ಅವನು ಅಕರ್ತೃವಾಗಿದ್ದಾನೆ ಎಂದರೆ ಅವನಿಗೆ ಲೌಕಿಕವಾದ ಕ್ರಿಯೆಗಳಿಲ್ಲ. (ಮ. ಭಾ.)

**ಓಂ ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥೩೨॥**

ಸರ್ವಗತವಾದ ಆಕಾಶವು ಸೂಕ್ಷ್ಮವಾಗಿರುವುದರಿಂದ ಹೇಗೆ ಯಾವುದ ರಿಂದಲೂ ಲಿಪ್ತವಾಗುವುದಿಲ್ಲವೋ–ಅದರಂತೆ ಎಲ್ಲ ದೇಹಗಳಲ್ಲೂ ಎಲ್ಲೆಡೆ ಯಲ್ಲೂ ಇರುವ ಆತ್ಮನು (ಅಥವಾ ಎಲ್ಲೆಡೆಯಲ್ಲೂ ಇರುವ ಆತ್ಮನು ದೇಹ ದಲ್ಲಿ ) ಲೇಪಹೊಂದುವುದಿಲ್ಲ.

* * *

(ದೇಹದಲ್ಲಿರುವ ಆತ್ಮನು ದೇಹಧರ್ಮಗಳಿಂದ ಹೇಗೆ ಲಿಪ್ತನಾಗುವು ದಿಲ್ಲ ಎಂಬುದಕ್ಕೆ ಶ್ರೀಕೃಷ್ಣನೇ ನಿದರ್ಶನವನ್ನು ಕೊಡುತ್ತಾನೆ. ಆಕಾಶವು ಎಲ್ಲೆ ಲ್ಲಿಯೂ ಇದೆ. ಎಲ್ಲವನ್ನೂ ವ್ಯಾಪಿಸಿದೆ. ಆಕಾಶವಿಲ್ಲದ ಸ್ಥಳವೇ ಇಲ್ಲ. ಆದರೆ ಇದು ಅತ್ಯಂತಸೂಕ್ಷ್ಮವಾಗಿರುವುದರಿಂದ ಯಾವುದಕ್ಕೂ ಅಂಟಿಕೊಂಡಿರು ವುದಿಲ್ಲ. ಯಾವುದಕ್ಕೂ ಸಂಬಂಧಿಸದಂತೆಯೇ ಆಕಾಶವಿರುತ್ತದೆ. ಹೊಗೆ-ಮಂಜು ಮುಂತಾದ ಯಾವುದೂ ಇದಕ್ಕೆ ಅಂಟಿಕೊಳ್ಳುವುದಿಲ್ಲ. ಅದೇ ರೀತಿಯಲ್ಲಿ ಆತ್ಮನು ಸರ್ವತ್ರವ್ಯಾಪ್ತನಾಗಿದ್ದಾನೆ. ಎಲ್ಲವೂ ಅವನೇ ಆಗಿದ್ದಾನೆ. ಅಣೋರಣೀಯನೂ, ಮಹತೋಮಹೀಯನೂ ಆಗಿದ್ದಾನೆ. ಪ್ರಾಣಿಗಳ ದೇಹಗಳಲ್ಲಿಯೂ ಇದ್ದಾನೆ. ಹೀಗಿದ್ದರೂ ಸಹ ಅವನು ಅತಿಸೂಕ್ಷ್ಮ ವಾಗಿರುವುದರಿಂದ ದೇಹಧರ್ಮದೊಡನೆ ಅಂಟಿಕೊಳ್ಳುವುದಿಲ್ಲ. ಕಮಲ

ದೆಲೆಯಮೇಲಿರುವ ನೀರಿನಂತೆ ದೇಹದೊಳಗಿದ್ದೂ ದೇಹಕ್ಕೆ ಅಂಟಿಕೊಂಡಿರುವುದಿಲ್ಲ.)

o o o

ಆತ್ಮನು ಯಾವುದರಂತೆ ಅಕರ್ತೃ ಮತ್ತು ನಿರ್ಲಿಪ್ತ ಎಂಬುದಕ್ಕೆ ಇಲ್ಲಿ ದೃಷ್ಟಾಂತವನ್ನು ಕೊಡಲಾಗಿದೆ. (ಶಂ. ಭಾ.)

ಆತ್ಮನು ನಿರ್ಗುಣನಾಗಿರುವುದರಿಂದ ಇವನು ಅಕರ್ತೃವೂ ಆಗಿರಬಹುದು ; ಆದರೆ ಅವನು ದೇಹದೊಡನೆ ನಿತ್ಯಸಂಯೋಗವನ್ನು ಹೊಂದಿರುವುದರಿಂದ ಅವನಿಗೆ ದೇಹಸ್ವಭಾವಗಳು ಅಂಟಲೇ ಬೇಕಲ್ಲವೇ?

**ಸಂಸರ್ಗಜಾ ದೋಷಗುಣಾ ಭವನ್ತಿ ।**
**ಶುಷ್ಕೇಣಾರ್ದ್ರಂ ದಹ್ಯತೇ ಮಿತ್ರಭಾವಾತ್ ।**
**ಯಂ ಪ್ರಾಪ್ಯಾತಿಪವಿತ್ರಾಣಿ ವಸ್ತ್ರಾಣ್ಯಾಭರಣಾನಿ ಚ ।**
**ಅಶುಚಿತ್ವಂ ಕ್ಷಣಾದ್ಯಾನ್ತಿ ಕಿಮನ್ಯದಶುಚಿಸ್ತತಃ ॥**

ಗುಣ ಮತ್ತು ದೋಷಗಳು ಸಂಸರ್ಗದಿಂದ ಉಂಟಾಗುತ್ತವೆ. ಒಣಗಿದುದರ ಜೊತೆಯಲ್ಲಿ ಸ್ನೇಹಮಾಡಿದುದರಿಂದ ಹಸಿಯಾದುದೂ ಸುಟ್ಟು ಹೋಗುತ್ತದೆ. ಅತ್ಯಂತಪವಿತ್ರವಾದ ಬಟ್ಟೆಗಳೂ ಮತ್ತು ಆಭರಣಗಳೂ ಕೂಡ ಯಾವುದರ ಸಹವಾಸದಿಂದ ಕ್ಷಣಮಾತ್ರದಲ್ಲಿ ಅಶುಚಿಯಾಗುತ್ತವೆಯೋ ಅಂತಹ ದೇಹಕ್ಕಿಂತಲೂ ಅಶುಚಿಯಾದ ವಸ್ತುವು ಯಾವುದುಂಟು?

ಆಕಾಶವು ಸರ್ವವ್ಯಾಪಕವಾಗಿದೆ. ಎಲ್ಲ ವಸ್ತುಗಳ ಜೊತೆಯಲ್ಲೂ ಸೇರಿಕೊಂಡೇ ಇದೆ. ಆದರೂ ಅದು ಸೂಕ್ಷ್ಮವಾಗಿರುವುದರಿಂದ ಅದಕ್ಕೆ ಯಾವ ವಸ್ತುಸ್ವಭಾವಗಳೂ ಅಂಟಿಕೊಳ್ಳುವುದಿಲ್ಲ. ಪರಸ್ಪರವಿರುದ್ಧವಾದ ಅನಂತಸ್ವಭಾವಗಳಿದ್ದರೂ ಅವು ಯಾವುವೂ ಅದಕ್ಕೆ ಅಂಟಿಕೊಳ್ಳುವುದಿಲ್ಲ. ಹಾಗೆಯೇ ಆತ್ಮನು ಅತ್ಯಂತಸೂಕ್ಷ್ಮನಾಗಿರುವುದರಿಂದ ದೇವ, ಮನುಷ್ಯ ಮುಂತಾದ ಶರೀರಗಳಲ್ಲಿದ್ದರೂ ಆಯಾ ದೇಹಸ್ವಭಾವಗಳು ಆತ್ಮನಿಗೆ ಅಂಟುವುದಿಲ್ಲ. ಆಕಾಶವು ಇತರ ಭೂತಗಳಿಗಿಂತಲೂ ಸೂಕ್ಷ್ಮವಾದುದು. ಆದರೆ ಆತ್ಮನು ಅದಕ್ಕಿಂತಲೂ ಸೂಕ್ಷ್ಮನು. ಕೆಲವು ಪದಾರ್ಥಗಳು ಕೆಲವು ಪದಾರ್ಥಗಳ ಸಂಸರ್ಗವಾದಾಗ ಅವುಗಳ ಸ್ವಭಾವಲೇಪವನ್ನು ಹೊಂದಿದ್ದರೂ

ಬೇರೆ ಕೆಲವು ಪದಾರ್ಥಗಳ ಸಂಸರ್ಗವು ಉಂಟಾದಾಗ ಅವುಗಳ ಸ್ವಭಾವವೂ ಅದಕ್ಕೆ ಅಂಟಿಕೊಳ್ಳುತ್ತದೆ. ಆದರೆ ಆಕಾಶ ಮತ್ತು ಆತ್ಮಗಳಿಗೆ ಯಾವುದರ ಸಂಸರ್ಗದಿಂದಲೂ ಯಾವ ಒಂದು ದೋಷವೂ ಉಂಟಾಗುವುದಿಲ್ಲ.

(ರಾ. ಭಾ.)

**ಓಂ ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥೩೩॥**

ಭಾರತ! ಸೂರ್ಯನು ಈ ಲೋಕವನ್ನೆಲ್ಲಾ ತಾನೊಬ್ಬನೇ ಹೇಗೆ ಬೆಳಗುತ್ತಿರುವನೋ ಹಾಗೆಯೇ ಕ್ಷೇತ್ರಿಯು ಕ್ಷೇತ್ರವೆಲ್ಲವನ್ನೂ ಬೆಳಗುತ್ತಾನೆ.

* * *

(ಒಬ್ಬನೇ ಒಬ್ಬ ಸೂರ್ಯನು ಈ ಎಲ್ಲ ಲೋಕವನ್ನೂ ಬೆಳಗುವಂತೆ ಒಬ್ಬನೇ ಒಬ್ಬ ಆತ್ಮನು ಈ ಲೋಕದಲ್ಲಿರುವ ಸಮಸ್ತಕ್ಷೇತ್ರಗಳನ್ನೂ ಬೆಳಗುತ್ತಾನೆ. ಒಬ್ಬನೇ ಸೂರ್ಯನು ಉಚ್ಚ, ನೀಚ, ಹೇಸಿಗೆ, ಹೊಲಸು ಎಂಬ ತಾರತಮ್ಯವೇ ಇಲ್ಲದೇ ಎಲ್ಲ ಪ್ರದೇಶಗಳನ್ನೂ ತನ್ನ ಕಿರಣಗಳಿಂದ ಬೆಳಗಿಸುತ್ತಾನೆ. ಆದರೆ ಸೂರ್ಯನು ಬೆಳಗಿಸುವ ವಸ್ತುಗಳಲ್ಲಿನ ಗುಣಗಳು ಅವನಿಗೆ ಅಂಟಿಕೊಳ್ಳುವುದಿಲ್ಲ. ಸೂರ್ಯನು ಸಾಕ್ಷೀಭೂತನಾಗಿರುತ್ತಾನೆ. ಆದರೆ ಪ್ರಾಣಿಗಳು ಮಾಡುವ ದುಷ್ಕರ್ಮಗಳ ಅಥವಾ ಸತ್ಕರ್ಮಗಳ ಪಾಪ-ಪುಣ್ಯ ಫಲಗಳು ಇವನಿಗೆ ಅಂಟುವುದಿಲ್ಲ. ಸೂರ್ಯನ ಬೆಳಕಿಲ್ಲದಿದ್ದರೆ ಪ್ರಾಣಿಗಳು ಉಳಿಯಲಾರವು.

ಹಾಗೆಯೇ ಆತ್ಮನೂ ಒಬ್ಬನೇ ಇದ್ದಾನೆ. ಲೋಕದ ಎಲ್ಲ ಪ್ರಾಣಿಗಳಲ್ಲಿ ಕ್ಷೇತ್ರಜ್ಞನಾಗಿದ್ದುಕೊಂಡು ಆ ಪ್ರಾಣಿಗಳನ್ನು ಬೆಳಗುತ್ತಾನೆ. ಅಥವಾ ಕ್ಷೇತ್ರದೊಳಗೆಲ್ಲಾ ಪೂರ್ತಿ ತುಂಬಿರುತ್ತಾನೆ. ಆತ್ಮನ ಅಸ್ತಿತ್ವವಿಲ್ಲದಿದ್ದರೆ ಪ್ರಾಣಿಗಳು ಬದುಕಲಾರವು. ಅವುಗಳು ಮಾಡುವ ಸತ್ಕರ್ಮ-ದುಷ್ಕರ್ಮಗಳಿಗೆ ಇವನು ಸಾಕ್ಷಿಯಾಗಿರುತ್ತಾನೆ. ಕರ್ಮಗಳ ಫಲಭೋಕ್ತೃವು ಇವನಲ್ಲ.

ಸೂರ್ಯನು ಯಾವ ರೀತಿಯಲ್ಲಿ ಉಚ್ಚ-ನೀಚತಾರತಮ್ಯವಿಲ್ಲದೇ ಎಲ್ಲ ಪ್ರಾಣಿಗಳ ಮೇಲೂ ಬೆಳಕುಚೆಲ್ಲುತ್ತಾನೆಯೋ–ಅದೇ ರೀತಿಯಲ್ಲಿ ಪರಮಾತ್ಮನೂ ಸಹ ಪ್ರಾಣಿಗಳಲ್ಲಿ ಉಚ್ಚ-ನೀಚತಾರತಮ್ಯವಿಲ್ಲದೇ ಅವುಗಳ ದೇಹಗಳೊಳಗೆ ಸೇರಿಕೊಂಡಿರುತ್ತಾನೆ.)

o o o

ಒಬ್ಬನೇ ಆದಿತ್ಯನು ಎಲ್ಲ ಲೋಕಗಳನ್ನೂ ಸಂಪೂರ್ಣವಾಗಿ ಪ್ರಕಾಶಪಡಿಸುವಂತೆ ಒಬ್ಬನೇ ಆಗಿರುವ ಕ್ಷೇತ್ರಜ್ಞನು (ಪರಮಾತ್ಮನು) ಮಹಾಭೂತಾದಿಯಿಂದ ಧೃತಿಯವರೆಗಿನ ಎಲ್ಲ ಕ್ಷೇತ್ರಗಳನ್ನೂ ಪ್ರಕಾಶಗೊಳಿಸು ತ್ತಾನೆ.

ಇಲ್ಲಿ ಸೂರ್ಯನ ದೃಷ್ಟಾಂತವನ್ನು ಪರಮಾತ್ಮನಿಗೆ ಕೊಡಲು ಎರಡು ಕಾರಣ. ಸೂರ್ಯನಂತೆ ಎಲ್ಲ ಕ್ಷೇತ್ರಗಳಲ್ಲೂ ಒಬ್ಬನೇ ಆಗಿದ್ದಾನೆ. ಅವನು ಸೂರ್ಯನಂತೆ ನಿರ್ಲಿಪ್ತನೂ ಆಗಿದ್ದಾನೆ. (ಶಂ. ಭಾ.)

ಒಬ್ಬನೇ ಆದಿತ್ಯನು ತನ್ನ ಪ್ರಭೆಯಿಂದ ಈ ಲೋಕವನ್ನೆಲ್ಲಾ ಪ್ರಕಾಶಪಡಿಸುವಂತೆ ಕ್ಷೇತ್ರಜ್ಞನೂ ಕೂಡ–ಈ ರೀತಿ ಇರುವ ಈ ಕ್ಷೇತ್ರವು ನನ್ನದು–ಎಂದು ಇಡೀ ಕ್ಷೇತ್ರವನ್ನು ಹೊರಗೆ ಮತ್ತು ಒಳಗೆ ಅಡಿಯಿಂದ ಮುಡಿಯವರೆಗೆ ತನ್ನ ಜ್ಞಾನದಿಂದ ಪ್ರಕಾಶಪಡಿಸುತ್ತಾನೆ. ಆದುದರಿಂದ ಪ್ರಕಾಶಪಡಿಸಲ್ಪಡುವ ಲೋಕಕ್ಕಿಂತಲೂ ಪ್ರಕಾಶಕನಾದ ಆದಿತ್ಯನು ಬೇರೆಯಾಗಿರುವಂತೆ ವೇದಿತೃ (ಜ್ಞಾತೃ )ವಾಗಿರುವ ಕ್ಷೇತ್ರಜ್ಞನು ವೇದ್ಯವಾಗಿರುವ ಕ್ಷೇತ್ರಕ್ಕಿಂತಲೂ ಅತ್ಯಂತವಿಲಕ್ಷಣನಾದವನು. (ರಾ. ಭಾ.)

**ಓಂ ಕ್ಷೇತ್ರಕ್ಷೇತ್ರಜ್ಞಯೋರೇವಮನ್ತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ॥**

ಹೀಗೆ ಜ್ಞಾನದ ಕಣ್ಣಿನಿಂದ ಕ್ಷೇತ್ರ-ಕ್ಷೇತ್ರಜ್ಞರುಗಳಿಗೆ ವ್ಯತ್ಯಾಸವನ್ನೂ ಭೂತಗಳ ಪ್ರಕೃತಿಯ ಮೋಕ್ಷವನ್ನೂ ಯಾರು ತಿಳಿದುಕೊಳ್ಳುವರೋ– ಅವರು ಪರಾಗತಿಯನ್ನು ಪಡೆಯುತ್ತಾರೆ.

* * *

(ಇಲ್ಲಿ ಶ್ರೀಕೃಷ್ಣನು ಪರತತ್ತ್ವವನ್ನು ಹೇಳುತ್ತಾನೆ. ಕ್ಷೇತ್ರ-ಕ್ಷೇತ್ರಜ್ಞರ ವಿಷಯವನ್ನು ನಾನೇನೋ ಹೇಳಿದೆ. ಸವಿಸ್ತರವಾಗಿಯೇ ಹೇಳಿದ್ದೇನೆ. ಉದಾಹರಣೆಗಳ ಮೂಲಕವಾಗಿ ಮನದಟ್ಟಾಗುವಂತೆ ಹೇಳಿದ್ದೇನೆ. ಆದರೂ ಸಹ ಕ್ಷೇತ್ರ-ಕ್ಷೇತ್ರಜ್ಞರ ಅಂತರವನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಕ್ಷೇತ್ರಜ್ಞನ ವಿಷಯವು ಊಹೆಗೆ ಎಟುಕದ ವಿಷಯ. ದೇಹಾತ್ಮಬುದ್ಧಿಯು ಮನುಷ್ಯನಿಗೆ ಸ್ವಾಭಾವಿಕವಾಗಿಯೇ ಇರುತ್ತದೆ. ದೇಹವೇ ಬೇರೆ, ಆತ್ಮವೇ

ಬೇರೆ–ಎಂಬುದನ್ನು ಪ್ರಾಕೃತಿಕವಾದ ಅನುಭವದಲ್ಲಿ ಪಡೆಯಲು ಸಾಧ್ಯವಾಗುವುದಿಲ್ಲ. ಜ್ಞಾನವೆಂಬ ಕಣ್ಣಿನಿಂದ ಇದನ್ನು ನೋಡಿ ತಿಳಿದುಕೊಳ್ಳಬೇಕು. ಜ್ಞಾನವೆಂದರೆ ಕೇವಲ ಶಾಸ್ತ್ರಜ್ಞಾನವಲ್ಲ. ಶಾಸ್ತ್ರಗಳ ಮತ್ತು ಆಚಾರ್ಯರ ಉಪದೇಶದಿಂದ ಪಡೆದ ಜ್ಞಾನವನ್ನು ತನ್ನ ಅನುಭವಕ್ಕೆ ತಂದುಕೊಳ್ಳುವ ಶುದ್ಧದೃಷ್ಟಿಯೇ ಜ್ಞಾನದ ಕಣ್ಣು. ಅಂತಹ ಜ್ಞಾನದ ಕಣ್ಣಿನಿಂದ ಮಾತ್ರವೇ ಕ್ಷೇತ್ರಜ್ಞನು ನಿರ್ಲಿಪ್ತ-ನಿರ್ಗುಣ ಎಂಬುದನ್ನು ಕಂಡುಕೊಳ್ಳಲು ಸಾಧ್ಯ. ಕಾಣುವುದು ; ಕೇವಲ ಅರಿಯುವುದಲ್ಲ.

ಭೂತಪ್ರಕೃತಿಮೋಕ್ಷಂ=ಭೂತಗಳ ಪ್ರಕೃತಿ ಎಂದರೆ : ಭೂತಗಳ ಸ್ವಭಾವ. ಪ್ರಕೃತಿಜನ್ಯವಾದ ಗುಣಗಳಿಂದ ಕೂಡಿರುವಿಕೆ ; ಅದರ ಮೋಕ್ಷವೆಂದರೆ ಅದರಿಂದ ಬಿಡುಗಡೆಹೊಂದುವಿಕೆ. ಎಂದರೆ ಅಜ್ಞಾನದ ನಿರಸನ. ಅರ್ಥಾತ್ ಅಧ್ಯಾತ್ಮದರ್ಶನ. ಇದನ್ನು ಯಾರು ತಿಳಿದಿರುತ್ತಾರೆಯೋ ಅವರು ಪರಮಶ್ರೇಷ್ಠವಾದ ಬ್ರಹ್ಮವನ್ನು ಸೇರುತ್ತಾರೆ.

ಏತೇನ =ಜ್ಞಾನದೃಷ್ಟಿಯಿಂದ ಕ್ಷೇತ್ರ-ಕ್ಷೇತ್ರಜ್ಞರ ಅಂತರವನ್ನು ತಿಳಿದವರು ಅರ್ಥಾತ್ ಆತ್ಮದರ್ಶನಮಾಡಿದವರು ಪ್ರಾಣಿಗಳ ಸ್ವಭಾವದ ಮೋಕ್ಷ ಅಥವಾ ಅಜ್ಞಾನದ ಮೋಕ್ಷವನ್ನೂ ತಿಳಿದವರು ಪರಬ್ರಹ್ಮವನ್ನು ಸೇರುತ್ತಾರೆ.)

o o o

ಅನ್ತರಂ=ವೈಲಕ್ಷಣ್ಯ ವಿಶೇಷವನ್ನು. ಜ್ಞಾನಚಕ್ಷುಷಾ=ಶಾಸ್ತ್ರ ಮತ್ತು ಆಚಾರ್ಯರ ಅನುಗ್ರಹೋಪದೇಶದಿಂದುಂಟಾದ ಆತ್ಮಪ್ರತ್ಯಯವೆಂಬ ಜ್ಞಾನದ ಕಣ್ಣಿನಿಂದ, ಭೂತಪ್ರಕೃತಿಮೋಕ್ಷಂ ಚ=ಭೂತಪ್ರಕೃತಿ ಎಂದರೆ ಅವಿದ್ಯೆ ಎಂಬ ಲಕ್ಷಣವುಳ್ಳ ಅವ್ಯಕ್ತ, ಅದರ ಮೋಕ್ಷಣ ಎಂದರೆ ಅಭಾವ ಹೊಂದುವಿಕೆ.

ಪರಂ ಯಾನ್ತಿ = ಪರಮಾರ್ಥತತ್ತ್ವವಾದ ಬ್ರಹ್ಮವನ್ನು ಹೊಂದುತ್ತಾರೆ ಮತ್ತೆ ದೇಹವನ್ನು ಸ್ವೀಕರಿಸುವುದಿಲ್ಲ. (ಶಂ. ಭಾ.)

ಜ್ಞಾನಚಕ್ಷುಷಾ = ಕ್ಷೇತ್ರ-ಕ್ಷೇತ್ರಜ್ಞರ ವಿವೇಕವಿಷಯವಾದ ಜ್ಞಾನವೆಂಬ ಕಣ್ಣಿನಿಂದ. ಪರಂ ಯಾನ್ತಿ = ಬಂಧರಹಿತನಾದ ಆತ್ಮನನ್ನು ಹೊಂದು

ತ್ತಾರೆ. ಮೋಕ್ಷವೆಂದರೆ ಯಾವುದರಿಂದ ಬಿಡುಗಡೆಯು ಉಂಟಾಗುತ್ತದೆಯೋ ಅದು. **ಮೋಕ್ಷ್ಯತೇ ಅನೇನ ಇತಿ ಮೋಕ್ಷಃ.** ಅಮಾನಿತ್ವವೇ ಮುಂತಾದುವು ಮೋಕ್ಷಸಾಧನ.

ಕ್ಷೇತ್ರ ಮತ್ತು ಕ್ಷೇತ್ರಜ್ಞರ ವಿವೇಕವನ್ನು, ಆ ವಿವೇಕದ ವಿಷಯವಾಗಿ ಮೇಲೆ ಹೇಳಿದ ಜ್ಞಾನದಿಂದ ತಿಳಿದು ಭೂತಾಕಾರವಾಗಿ ಪರಿಣಾಮಗೊಂಡಿರುವ ಪ್ರಕೃತಿಯಿಂದ ಬಿಡುಗಡೆಹೊಂದುವುದಕ್ಕೆ ಉಪಾಯವಾಗಿರುವ ಅಮಾನಿತ್ವವೇ ಮುಂತಾದ ಸಾಧನಗಳನ್ನು ಅರಿತು ಯಾರು ಆಚರಿಸುತ್ತಾರೆಯೋ ಅವರು ಬಂಧನವನ್ನು ಕಳೆದುಕೊಂಡು ಸ್ವಸ್ವರೂಪದಲ್ಲಿರುವ ಅನವಚ್ಛಿನ್ನಜ್ಞಾನಸ್ವರೂಪನಾದ ಆತ್ಮನನ್ನು ಹೊಂದುತ್ತಾರೆ. (ರಾ. ಭಾ.)

**ಭೂತಪ್ರಕೃತಿಮೋಕ್ಷಂ = ಭೂತೇಭ್ಯಃ ಪ್ರಕೃತೇಶ್ಚ ಮೋಕ್ಷಸಾಧನಂ**–ಪೃಥಿವಿಯೇ ಮುಂತಾದ ಭೂತಗಳ ದೆಸೆಯಿಂದಲೂ ಬಿಡುಗಡೆ ಹೊಂದಲು ಸಾಧನವಾದ ಅಮಾನಿತ್ವವೇ ಮುಂತಾದುವುಗಳನ್ನು. (ಅಮಾನಿತ್ವವೇ ಮುಂತಾದುವುಗಳು ಜ್ಞಾನಸಾಧನಗಳಾಗಿದ್ದರೂ ಪರಂಪರಾಸಂಬಂಧದಿಂದ ಮೋಕ್ಷಸಾಧನವೂ ಆಗಿವೆ.) (ಮ. ಭಾ.)

**ಇತಿ ಶ್ರೀಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕ್ಷೇತ್ರ-ಕ್ಷೇತ್ರಜ್ಞವಿಭಾಗ ಯೋಗೋನಾಮ ತ್ರಯೋದಶೋಽಧ್ಯಾಯಃ**

ಭಗವದ್ಗೀತೆಯಲ್ಲಿ ೧೩ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೩೭ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೧೪ನೆಯ ಅಧ್ಯಾಯ

೩೮ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಜ್ಞಾನದ ಮಹಿಮೆ : ಪ್ರಕೃತಿ-ಪುರುಷರಿಂದ ಜಗದುತ್ಪತ್ತಿಯು ಮತ್ತು ಸತ್ತ್ವ, ರಜಸ್ಸು ಮತ್ತು ತಮಸ್ಸುಗಳ ವರ್ಣನೆ : ಭಗವತ್ಪ್ರಾಪ್ತಿಗೆ ಉಪಾಯ : ಗುಣಾತೀತಪುರುಷನ ಲಕ್ಷಣಗಳ ವರ್ಣನೆ

**ಶ್ರೀಭಗವಾನುವಾಚ :**

**ಓಂ ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥೧॥**

ಶ್ರೀಭಗವಂತನು ಹೇಳುತ್ತಾನೆ :

ಜ್ಞಾನಗಳಲ್ಲಿ ಸರ್ವಶ್ರೇಷ್ಠವಾದ ಜ್ಞಾನವನ್ನು ಇನ್ನೊಮ್ಮೆ ಹೇಳುವೆನು. ಇದನ್ನರಿತು ಮುನಿಗಳೆಲ್ಲರೂ ಇಲ್ಲಿಂದ (ಈ ಸಂಸಾರದಿಂದ ಬಿಡುಗಡೆ ಹೊಂದಿ) ಪರಮಸಿದ್ಧಿಯನ್ನು ಪಡೆದರು.

* * *

(**ಭೂಯಃ ಪ್ರವಕ್ಷ್ಯಾಮಿ**–ಎನ್ನುತ್ತಾನೆ ಭಗವಂತ. ಪುನಃ ಹೇಳುತ್ತೇನೆ. ಪುನಃ ಹೇಳುತ್ತೇನೆ ಎಂದರೆ ಹಿಂದೆ ಹೇಳಿದುದನ್ನೇ ಪುನಃ ಹೇಳುತ್ತೇನೆ ಎಂದರ್ಥ. ಯಾವುದನ್ನು? ಎಂದರೆ **ಜ್ಞಾನಾನಾಂ ಉತ್ತಮಂ ಪರಂ ಜ್ಞಾನಂ**–ಜ್ಞಾನಗಳಲ್ಲೆಲ್ಲಾ ಉತ್ತಮವಾದ, ಶ್ರೇಷ್ಠವಾದ ಜ್ಞಾನ. ಎಂದರೆ ಪರಮಾತ್ಮವಿಷಯಕವಾದ ಜ್ಞಾನ. ಈ ಜ್ಞಾನವು ಯಜ್ಞ, ಕರ್ಮ, ದೇವತೆಗಳು ಮುಂತಾದ ಉಳಿದ ಎಲ್ಲದರ ವಿಷಯವಾದ ಜ್ಞಾನಕ್ಕಿಂತಲೂ ಶ್ರೇಷ್ಠವಾದುದು. ಇದನ್ನು ಪುನಃ ಹೇಳುತ್ತೇನೆ. ಈ ಜ್ಞಾನದ ವಿಶೇಷ ವಾದರೂ ಏನು? ಎಂದರೆ : **ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ**–ನಾನು ಇದುವರೆಗೂ ಹೇಳಿದ ಮತ್ತು ಪುನಃ ಹೇಳಲಿರುವ ಈ ಉತ್ಕೃಷ್ಟವಾದ ಜ್ಞಾನವನ್ನು ತಿಳಿದು ಎಲ್ಲ ಮುನಿಗಳೂ ಶ್ರೇಷ್ಠವಾದ ಸಿದ್ಧಿಯನ್ನು ಪಡೆದು ಈ ಸಂಸಾರದಿಂದ ಹೊರಟುಹೋದರು.

ಇಲ್ಲಿ ಸಿದ್ಧಿ ಎಂದರೆ ಅಷ್ಟಸಿದ್ಧಿಗಳಲ್ಲ ; ಆತ್ಮಸಿದ್ಧಿ. ಆತ್ಮಸಿದ್ಧಿಯನ್ನು ಅಥವಾ ಆತ್ಮದರ್ಶನವನ್ನು ಪಡೆದು ಈ ಸಂಸಾರದಿಂದ ಬಿಡುಗಡೆಹೊಂದಿ ಹೊರಟು ಹೋದರು. ಅರ್ಥಾತ್ ಪರಮಪದವನ್ನು ಸೇರಿದರು.)

o o o

ಜ್ಞಾನವು ಪರವಸ್ತುವಿಷಯವಾದುದರಿಂದ ಅದಕ್ಕೆ ಪರಂ ಎಂಬ ವಿಶೇಷಣವನ್ನು ಕೊಟ್ಟಿದೆ. ಅದು ಉತ್ತಮಫಲವನ್ನು ಕೊಡುವುದರಿಂದ ಉಳಿದ ಎಲ್ಲ ಜ್ಞಾನಗಳಿಗಿಂತಲೂ ಶ್ರೇಷ್ಠವಾದುದು. ಉಳಿದ ಎಲ್ಲ ಜ್ಞಾನಗಳಿಗಿಂತಲೂ ಎಂದರೆ ಅಮಾನಿತ್ವವೇ ಮುಂತಾದ ಗುಣಗಳಿಗಿಂತಲೂ ಎಂದು ಅರ್ಥವಲ್ಲ. ಯಜ್ಞವೇ ಮುಂತಾದ ಜ್ಞೇಯವಸ್ತುಗಳ ವಿಷಯವಾದ ಜ್ಞಾನಗಳಿಗಿಂತಲೂ ಎಂದರ್ಥ. ಏಕೆಂದರೆ : ಅಮಾನಿತ್ವಾದಿಗಳು ಮೋಕ್ಷಕ್ಕೆ ಸಾಧನವಾದುದರಿಂದ ಅದನ್ನು ಪರ, ಉತ್ತಮ—ಎಂಬ ಎರಡು ಶಬ್ದಗಳಿಂದ ಸ್ತುತಿಸಿದೆ.

ಪ್ರಕೃತಿಯಲ್ಲಿರುವಿಕೆ, ಗುಣಗಳಲ್ಲಿ ಆಸಕ್ತಿ—ಇವು ಸಂಸಾರಕ್ಕೆ ಕಾರಣ—ಎಂದು ಹಿಂದಿನ ಅಧ್ಯಾಯದ ೨೨ನೆಯ ಶ್ಲೋಕದಲ್ಲಿ ಹೇಳಿತ್ತು. ಇಲ್ಲಿ ಯಾವ ಗುಣದಲ್ಲಿ ಹೇಗೆ ಸಂಗವುಂಟಾಗುತ್ತದೆ? ಗುಣಗಳು ಯಾವುವು? ಅವು ಹೇಗೆ ಕಟ್ಟಿಹಾಕುತ್ತವೆ? ಮತ್ತು ಈ ಗುಣಗಳ ದೆಸೆಯಿಂದ ಬಿಡುಗಡೆಯು ಹೇಗೆ ಆಗುತ್ತದೆ? ಮುಕ್ತನ ಲಕ್ಷಣವೇನು?—ಮುಂತಾದುವುಗಳನ್ನು ಇಲ್ಲಿ ಭಗವಂತನು ಹೇಳುತ್ತಾನೆ. (ಶಂ. ಭಾ.)

ಗುಣಗಳು ಹೇಗೆ ಬಂಧನಕ್ಕೆ ಕಾರಣವಾಗುತ್ತವೆ? ಅವುಗಳನ್ನು ದೂರ ಮಾಡುವುದೆಂತು?—ಎಂಬುದನ್ನು ಇಲ್ಲಿ ನಿರೂಪಿಸಿದೆ.

ಪರಂ ಎಂದರೆ ಹಿಂದೆ ಹೇಳಿದುದಕ್ಕಿಂತಲೂ ಬೇರೆಯಾದುದು. ಹಿಂದೆ ಪ್ರಕೃತಿ-ಪುರುಷರಿಗೆ ಸಂಬಂಧಪಟ್ಟಂತೆ ಸತ್ತ್ವವೇ ಮುಂತಾದ ಗುಣಗಳ ವಿಷಯವಾದ ಯಾವ ಜ್ಞಾನವನ್ನು ಸಂಗ್ರಹವಾಗಿ ಹೇಳಿತ್ತೋ ಅದನ್ನು ಇಲ್ಲಿ ವಿಸ್ತಾರವಾಗಿ ಮತ್ತೆ ಹೇಳುತ್ತೇನೆ. ಈ ಜ್ಞಾನವು ಪ್ರಕೃತಿ-ಪುರುಷವಿಷಯ ವಾದ ಎಲ್ಲ ಜ್ಞಾನಗಳಿಗಿಂತಲೂ ಶ್ರೇಷ್ಠವಾದುದು. ಈ ಜ್ಞಾನವನ್ನರಿತ ಮುನಿ ಗಳು (ಮನನಶೀಲರಾದವರು) ಈ ಸಂಸಾರಮಂಡಲವನ್ನು ಬಿಟ್ಟು ಪರಿ

ಶುದ್ಧಾತ್ಮಸ್ವರೂಪವನ್ನು ಹೊಂದುವಿಕೆಯೆಂಬ ಪರಮಸಿದ್ಧಿಯನ್ನು ಪಡೆದರು. (ಪಡೆದಿದ್ದಾರೆ.) ಅಂತಹ ಉತ್ತಮವಾದ ಜ್ಞಾನವಿದು. (ರಾ. ಭಾ.)

ಮುಂದಿನ ಅಧ್ಯಾಯಗಳಲ್ಲಿ ಪ್ರಧಾನವಾಗಿ ಸಾಧನವನ್ನು (ಗುಣ ಸಂಬಂಧವನ್ನು ದಾಟುವ ಸಾಧನವನ್ನು ) ಹೇಳಲಾಗುತ್ತದೆ. (ಮ. ಭಾ.)

**ಓಂ ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ ॥೨॥**

ಈ ಜ್ಞಾನವನ್ನು ಆಶ್ರಯಿಸಿಕೊಂಡು ನನ್ನ ಸಾಧರ್ಮ್ಯವನ್ನು ಹೊಂದಿದವರು ಸೃಷ್ಟಿಯಲ್ಲಿ (ಸೃಷ್ಟಿಯ ಕಾಲದಲ್ಲಿ) ಹುಟ್ಟುವುದಿಲ್ಲ. ಪ್ರಲಯದಲ್ಲಿ ವ್ಯಥೆಪಡುವುದೂ ಇಲ್ಲ.

* * *

(ಜ್ಞಾನಗಳಲ್ಲೆಲ್ಲಾ ಶ್ರೇಷ್ಠವಾದ, ಉತ್ತಮೋತ್ತಮವಾದ ಈ ಆತ್ಮಜ್ಞಾನವನ್ನು ಆಶ್ರಯಿಸಿದ್ದೇ ಆದರೆ–ಜ್ಞಾನದೃಷ್ಟಿಯ ಮೂಲಕ ಆತ್ಮನನ್ನು ಕಂಡುಕೊಂಡಿದ್ದೇ ಆದರೆ–ಅಂತಹವರು ನನ್ನ ಸಾಧರ್ಮ್ಯವನ್ನೇ ಹೊಂದುತ್ತಾರೆ. ಅರ್ಥಾತ್ ನನ್ನನ್ನೇ–ನನ್ನ ಸಮಾನಧರ್ಮವನ್ನೇ ಹೊಂದುತ್ತಾರೆ. ಧಗ-ಧಗಿಸುವ ಕೆಂಡದಲ್ಲಿ ಬಿದ್ದ ಇದ್ದಿಲು ಕೆಂಡವಾಗಿ ಪರಿವರ್ತನೆಯಾಗುತ್ತದೆ. ಅದು ಕೆಂಡದ ಸಾಧರ್ಮ್ಯವನ್ನು ಪಡೆಯುತ್ತದೆ. ಪರಮಾತ್ಮಾನುಭವವನ್ನು ಪಡೆದವನು ಪರಮಾತ್ಮನ ಸಾಧರ್ಮ್ಯವನ್ನು ಪಡೆಯುತ್ತಾನೆ ಎಂದರೂ ಹೀಗೆಯೇ. ನನ್ನನ್ನು ಹೊಂದಿದನಂತರ ಅವರಿಗೆ ಜನ್ಮ-ಮೃತ್ಯುಗಳಿರುವುದಿಲ್ಲ. ಸೃಷ್ಟಿಯ ಕಾಲದಲ್ಲಿಯೂ ಅವರು ಹುಟ್ಟುವುದಿಲ್ಲ. ಪ್ರಲಯಕಾಲದಲ್ಲಿ ನನ್ನಲ್ಲಿಯೇ ಇರುವ ಅವರಿಗೆ ಯಾವ ವಿಧವಾದ ಬಾಧೆಯೂ ಉಂಟಾಗುವುದಿಲ್ಲ.)

O O O

**ಮಮ ಸಾಧರ್ಮ್ಯಮಾಗತಾಃ** = ಪರಮೇಶ್ವರನಾದ ನನ್ನ ಸ್ವರೂಪವನ್ನೇ ಪಡೆದವರಾಗಿ. ಇಲ್ಲಿ **ಸಾಧರ್ಮ್ಯ** ಎಂದರೆ ಸಮಾನಧರ್ಮತೆಯಲ್ಲ. ಏಕೆಂದರೆ : ಗೀತಾಶಾಸ್ತ್ರದಲ್ಲಿ ಕ್ಷೇತ್ರಜ್ಞ ಮತ್ತು ಈಶ್ವರರ ಭೇದವನ್ನು ಅಂಗೀಕರಿಸಿಲ್ಲ. ಹೀಗೆ ನನ್ನ ಸ್ವರೂಪವನ್ನು ಪಡೆದವರು ಸೃಷ್ಟಿಕಾಲದಲ್ಲಿಯೂ ಹುಟ್ಟುವುದಿಲ್ಲ. ಪ್ರಲಯದಲ್ಲಿಯೂ ಕೂಡ ಎಂದರೆ ಬ್ರಹ್ಮನ

ವಿನಾಶಸಮಯದಲ್ಲಿಯೂ ಕೂಡ ವ್ಯಥೆಯನ್ನು ಹೊಂದುವುದಿಲ್ಲ. ತಮ್ಮ ಸ್ಥಾನದಿಂದ ಜಾರುವುದಿಲ್ಲ. (ಶಂ. ಭಾ.)

ಈ ಮುಂದೆ ಹೇಳುವ ಜ್ಞಾನವನ್ನು ಆಶ್ರಯಿಸಿ ನನ್ನ ಸಾಧರ್ಮ್ಯವನ್ನು ಹೊಂದಿದವರು ಎಂದರೆ ನನ್ನ ಸಾಮ್ಯವನ್ನು ಪಡೆದವರು, ಸೃಷ್ಟಿಯಲ್ಲಿಯೂ ಕೂಡ ಹುಟ್ಟಿಗೆ ಲಕ್ಷ್ಯರಾಗುವುದಿಲ್ಲ ಮತ್ತು ಪ್ರಲಯದಲ್ಲಿಯೂ ಕೂಡ ಸಂಹಾರಕ್ಕೆ (ಮರಣಕ್ಕೆ ) ಲಕ್ಷ್ಯರಾಗುವುದಿಲ್ಲ. (ರಾ. ಭಾ.)

**ಓಂ ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್ ।**
**ಸಮ್ಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥೩॥**

ದೊಡ್ಡದಾಗಿರುವ ಬ್ರಹ್ಮವು ನನ್ನ ಯೋನಿಯಾಗಿದೆ. ಅದರಲ್ಲಿ ನಾನು ಗರ್ಭವನ್ನು ಇರಿಸುತ್ತೇನೆ. ಭಾರತನೇ! ಎಲ್ಲ ಪ್ರಾಣಿಗಳ ಉತ್ಪತ್ತಿಯೂ ಅದರಿಂದ ಆಗುತ್ತದೆ.

* * *

(ಶ್ರೀಕೃಷ್ಣನು ಹೇಳಿರುವ ಮಹದ್ಬ್ರಹ್ಮವೆಂಬುದು ಮಹಾಕ್ಷೇತ್ರವಾದ ಪ್ರಕೃತಿ. ಮಹತ್ತತ್ತ್ವಾದಿ ಎಲ್ಲ ಪ್ರಪಂಚಕ್ಕೂ ಇದು ವಿಶ್ರಾಂತಿಸ್ಥಾನವಾಗಿ ಸರ್ವಕಾರಣವಾಗಿ ಎಲ್ಲವೂ ಇದರಿಂದ ವಿಸ್ತಾರಗೊಳ್ಳುವುದರಿಂದ ಭಗವಂತನು ಇದನ್ನು ಮಹದ್ಬ್ರಹ್ಮ ಎಂದು ಕರೆದಿರುತ್ತಾನೆ. ಬ್ರಹ್ಮನಿಗೂ ದೊಡ್ಡದಾದುದರಿಂದಲೇ ಮಹದ್ಬ್ರಹ್ಮ. ಇದನ್ನು ಅವ್ಯಕ್ತ ಮತ್ತು ಮಾಯೆ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಈ ಮಹದ್ಬ್ರಹ್ಮವನ್ನೇ ಭಗವಂತನು ನನ್ನ ಯೋನಿ ಎನ್ನುತ್ತಾನೆ.

**ತಸ್ಮಿನ್ಗರ್ಭಂ ದಧಾಮ್ಯಹಂ**–ಆ ಯೋನಿಯಲ್ಲೇ ನಾನು ಗರ್ಭವನ್ನು ಇರಿಸುತ್ತೇನೆ. ಅಥವಾ ಗರ್ಭರೂಪನಾಗುತ್ತೇನೆ. ಅನಂತರ ಅದರಿಂದ ಸರ್ವಭೂತಗಳ ಉತ್ಪತ್ತಿಯೂ ಆಗುತ್ತದೆ. ಮಹಾಪ್ರಲಯಕಾಲದಲ್ಲಿ ಸಕಲ ಚರಾಚರವಸ್ತುಗಳೂ ಬೀಜರೂಪದಿಂದ–ಶ್ರೀಕೃಷ್ಣನಿಲ್ಲಿ ಮಹದ್ಬ್ರಹ್ಮವೆಂದು ಹೇಳಿರುವ–ಮೂಲಪ್ರಕೃತಿಯಲ್ಲಿ ಇರುತ್ತವೆ. ಅನಾದಿಯಾದ ಈ ಮೂಲಪ್ರಕೃತಿಯೂ ಸಹ ಪರಮಾತ್ಮನಲ್ಲಿಯೇ ಇರುತ್ತದೆ. ಆದುದ ರಿಂದ ಸಕಲಚರಾಚರಜಗತ್ತೂ ಬೀಜರೂಪವಾಗಿ ಪರಮಾತ್ಮನ ಗರ್ಭ

ದಲ್ಲಿಯೇ ಇರುತ್ತದೆ. ಸೃಷ್ಟಿಕಾಲವು ಪ್ರಾರಂಭವಾದನಂತರ ಸರ್ವಪ್ರಾಣಿಗಳ ಉತ್ಪತ್ತಿಯೂ ಬ್ರಹ್ಮನಿಂದ ಅನುಕ್ರಮವಾಗಿ ಆರಂಭವಾಗುತ್ತದೆ.)

o o o

**ಮಹದ್ಬ್ರಹ್ಮ** = ಭಗವಂತನ ಸ್ವತ್ತಾಗಿರುವ ತ್ರಿಗುಣಾತ್ಮಿಕವಾದ ಪ್ರಕೃತಿ. ಅದು ಎಲ್ಲ ಭೂತಗಳಿಗೂ ಕಾರಣವಾದುದರಿಂದ ಯೋನಿ ಎಂದು ಕರೆಯಲ್ಪಟ್ಟಿದೆ. ತನ್ನ ಎಲ್ಲ ಕಾರ್ಯಗಳಿಗಿಂತಲೂ 'ಮಹತ್' ದೊಡ್ಡದು ಆಗಿರುವುದರಿಂದಲೂ, ಅವೆಲ್ಲಕ್ಕೂ ಕಾರಣವಾಗಿರುವುದರಿಂದಲೂ ಮತ್ತು ತನ್ನ ವಿಕಾರಗಳೆಲ್ಲವನ್ನೂ ವಿಸ್ತಾರಗೊಳಿಸುವುದರಿಂದಲೂ ಅದು ಮಹದ್ಬ್ರಹ್ಮ. ಮಹದ್ಬ್ರಹ್ಮದಲ್ಲಿ ಹಿರಣ್ಯಗರ್ಭನ ಜನ್ಮದ ಬೀಜವನ್ನು ಪರಮಾತ್ಮನು ಹಾಕುತ್ತಾನೆ. ಇದು ಸಮಸ್ತಭೂತಗಳ ಜನ್ಮಕ್ಕೂ ಕಾರಣವಾದ ಬೀಜ. ಕ್ಷೇತ್ರ- ಕ್ಷೇತ್ರಜ್ಞ ಎಂಬ ಎರಡು ಪ್ರಕೃತಿಶಕ್ತಿಗಳುಳ್ಳ ಈಶ್ವರನಾದ ನಾನು ಅವಿದ್ಯಾ-ಕಾಮ-ಕರ್ಮ-ಉಪಾಧಿಸ್ವರೂಪವನ್ನು ಅನುಸರಿಸುವ ಕ್ಷೇತ್ರಜ್ಞನನ್ನು ಕ್ಷೇತ್ರದೊಡನೆ ಸೇರಿಸುತ್ತೇನೆ. ಆ ಗರ್ಭಾಧಾನದಿಂದ ಹಿರಣ್ಯಗರ್ಭನ ಉತ್ಪತ್ತಿಯ ಮೂಲಕ ಸಮಸ್ತಭೂತಗಳ ಉತ್ಪತ್ತಿಯೂ ಆಗುತ್ತದೆ.

(ಶಂ. ಭಾ.)

**ಮಹದ್ಬ್ರಹ್ಮ**–ಎಂದರೆ ಅಚೇತನವಾದ ಪ್ರಕೃತಿ.

**ಭೂಮಿರಾಪೋನಲೋ ವಾಯುಃ...ಭಿನ್ನಾ ಪ್ರಕೃತಿರಷ್ಟಧಾ ।** (೭-೪) ಎಂಬಲ್ಲಿ ನಿರ್ದೇಶಮಾಡಲ್ಪಟ್ಟಿರುವ ಅಚೇತನವಾದ ಪ್ರಕೃತಿಯು ಮಹತ್ತು, ಅಹಂಕಾರ ಮುಂತಾದ ವಿಕಾರಗಳಿಗೆಲ್ಲಾ ಕಾರಣವಾದುದರಿಂದ ಮಹದ್ಬ್ರಹ್ಮ ಎಂದು ಕರೆಯಲ್ಪಟ್ಟಿದೆ. (ಶ್ರುತಿಯಲ್ಲಿಯೂ ಬಹಳ ಕಡೆ ಪ್ರಕೃತಿಯು ಬ್ರಹ್ಮವೆಂದು ಕರೆಯಲ್ಪಟ್ಟಿದೆ.)

**ಯಃ ಸರ್ವಜ್ಞಃ ಸರ್ವವಿತ್ ಯಸ್ಯ ಜ್ಞಾನಮಯಂ ತಪಃ ।**
**ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ ॥**

ಮುಂಡಕ ೧-೧-೯

**ಗರ್ಭಂ** = ಇಲ್ಲಿ ಹೇಳಿರುವ ಗರ್ಭವು ಇತಸ್ತ್ವನ್ಯಾಂ....ಜೀವಭೂತಾಂ। (೭-೫) ಎಂಬಲ್ಲಿ ಹೇಳಲ್ಪಟ್ಟಿರುವ ಚೇತನಪುಂಜರೂಪವಾದ

ಪರಾಪ್ರಕೃತಿ. ಸಕಲಪ್ರಾಣಿಗಳಿಗೂ ಬೀಜವಾದುದರಿಂದ ಅದು ಗರ್ಭ ಎಂದು ಹೇಳಲ್ಪಟ್ಟಿದೆ. ಅಚೇತನವೂ, ಯೋನಿಯೂ ಆದ ಮಹದ್ಬ್ರಹ್ಮದಲ್ಲಿ (ಜಡಪ್ರಕೃತಿಯಲ್ಲಿ) ಇರಿಸುತ್ತೇನೆ. ಭೋಗಕ್ಷೇತ್ರವಾದ ಅಚೇತನಪ್ರಕೃತಿಯೊಡನೆ ಭೋಕ್ತೃಪುಂಜರೂಪವಾದ ಚೇತನಪ್ರಕೃತಿಯನ್ನು ಸೇರಿಸುತ್ತೇನೆ. ನನ್ನ ಸಂಕಲ್ಪದಿಂದಾಗಿರುವ ಆ ಎರಡು ಪ್ರಕೃತಿಗಳ ಸಂಯೋಗದಿಂದ ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲ ಭೂತಗಳ ಉತ್ಪತ್ತಿಯೂ ಆಗುತ್ತದೆ.

(ರಾ. ಭಾ.)

**ಮಹದ್ಬ್ರಹ್ಮ** ಎಂದರೆ ಪ್ರಕೃತಿ. ಶ್ರೀಃ, **ಭೂಃ**, **ದುರ್ಗಾ**—ಎಂಬುದಾಗಿ ಅದರ ಭೇದಗಳು. ಉಮಾ, ಸರಸ್ವತೀ—ಮುಂತಾದವರಾದರೋ ಅದರ ಅಂಶದಿಂದ ಕೂಡಿದ ಇತರ ಜೀವಗಳು. **ಮಹತ್**ಬ್ರಹ್ಮ ಎಂದರೆ ಜಡವಾದ ಅವಿದ್ಯೆಯಲ್ಲ. ಪ್ರಕೃತಿ—ಎಂದರೆ : ಮಹಾಲಕ್ಷ್ಮೀ. ಜಡಪ್ರಕೃತಿಗೆ ಅಭಿಮಾನಿಯಾದುದರಿಂದ ಅದರ ಕಾರ್ಯವಾದ ಸತ್ತ್ವವೇ ಮುಂತಾದ ಗುಣಗಳಿಗೂ ಅಭಿಮಾನಿನಿಯಾಗಿ ಈ ಮೂರು ರೂಪಗಳಲ್ಲಿಯೂ ಇರುತ್ತಾಳೆ. ಭಗವತೀ, ಮಾಹೇಶ್ವರೀ, ಬ್ರಾಹ್ಮೀ, ಕೌಮಾರೀ, ಮಾಹೇಂದ್ರೀ, ಶ್ರೀ, ಭೂ, ದುರ್ಗಾ—ಎಂದು ಈಕೆಗೆ ಏಳು ಭೇದಗಳು ಎಂದು ಆಗಮಗಳು ಹೇಳುತ್ತವೆಯಲ್ಲಾ? ಅವಳಿಗೆ ಮೂರು ಭೇದಗಳು ಎಂದು ಹೇಗೆ ಹೇಳಿದಿರಿ?—ಎಂದರೆ : ಮೊದಲನೆಯ ನಾಲ್ವರು ಭಗವತಿಯಿಂದ ಬೇರೆಯಾದವರು ; ಜೀವಗಳು ; ಆಕೆಯ ಅಂಶದಿಂದ ಕೂಡಿ ಆಕೆಯ ಸಾನ್ನಿಧ್ಯವುಳ್ಳವುಗಳು. ಆದುದರಿಂದ ಆಕೆಯು ತದ್ರೂಪಗಳೆಂದು ಹೇಳಲ್ಪಟ್ಟಿದ್ದಾಳೆ.

**ಮಮ ಯೋನಿಃ**—ಇಲ್ಲಿ ಯೋನಿ ಎಂದರೆ ತಾಯಿ ಎಂದು ಅರ್ಥವಲ್ಲ. ಏಕೆಂದರೆ : **ತಸ್ಮಿನ್ ಗರ್ಭಂ ದಧಾಮ್ಯಹಮ್** ಎಂಬ ವಾಕ್ಯಶೇಷದಿಂದ ಅದು ಭಗವಂತನ ಭಾರ್ಯೆ ಎಂಬ ಅರ್ಥವು ನಿಶ್ಚಿತವಾಗುತ್ತದೆ.

(ಮ. ಭಾ.)

**ಓಂ ಸರ್ವಯೋನಿಷು ಕೌನ್ತೇಯ ಮೂರ್ತಯಃ ಸಮ್ಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥೪॥**

ಕೌಂತೇಯ! ಎಲ್ಲ ಯೋನಿಗಳಲ್ಲಿಯೂ ಯಾವ ಮೂರ್ತಿಗಳು

ಉಂಟಾಗುತ್ತಿರುವುವೋ ಅವುಗಳಿಗೆ ಮಹತ್ತಾದ ಬ್ರಹ್ಮವು ಯೋನಿಯು, ನಾನು ಬೀಜವನ್ನು ಇಡುವ ತಂದೆ.

*   *   *

(ಸರ್ವಪ್ರಾಣಿಗಳ ಹುಟ್ಟಿಗೆ ಕಾರಣವಾದ ಕ್ಷೇತ್ರ ಮತ್ತು ಬೀಜಗಳು ಯಾವುವುಂಟೋ ಅವುಗಳ ಉತ್ಪತ್ತಿ ಹೇಗೆ ಆಗುತ್ತದೆ? ಅವುಗಳಿಗೆ ತಾನು ಹೇಗೆ ಕಾರಣ? ಪ್ರಕೃತಿಯು ಹೇಗೆ ಕಾರಣ–ಎಂಬುದನ್ನು ಪರಮಾತ್ಮನು ಈ ಶ್ಲೋಕದಲ್ಲಿ ಹೇಳುತ್ತಾನೆ.

ಏಳನೆಯ ಅಧ್ಯಾಯದ ಆರನೆಯ ಶ್ಲೋಕದಲ್ಲಿ–**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ**–ನಾನು ಈ ಎಲ್ಲ ಜಗತ್ತಿನ ಹುಟ್ಟುವಿಕೆಗೆ ಕಾರಣನು ಎಂದು ಹೇಳಿದುದನ್ನು ಇಲ್ಲಿ ವಿವರಿಸಿ ಹೇಳಿದ್ದಾನೆ.

ಬ್ರಹ್ಮಾಂಡದಲ್ಲಿ ಎಂಬತ್ತು ನಾಲ್ಕು ಲಕ್ಷ ಯೋನಿಗಳಿವೆ. ಅವುಗಳಿಂದ ದೇವ, ಪಿತೃ , ಮನುಷ್ಯ, ಪಶು, ಪಕ್ಷಿ, ಕ್ರಿಮಿ–ಇತ್ಯಾದಿ ಎಂಬತ್ತು ನಾಲ್ಕು ಲಕ್ಷ ಮೂರ್ತಿಗಳೇ ಹುಟ್ಟುತ್ತವೆ. ಲಕ್ಷೋಪಲಕ್ಷ ಯೋನಿಗಳಿಗೂ ಸಹ ಮೂಲಪ್ರಕೃತಿಯೇ (ತ್ರಿಗುಣಾತ್ಮಿಕವಾದ ಮಾಯಾಶಕ್ತಿಯೇ) ಮಹದ್ಯೋನಿ. ಎಂದರೆ ತಾಯಿಯ ಸ್ಥಾನದಲ್ಲಿರುವುದು. ನಾನು ಬೀಜಪ್ರದನಾದ ತಂದೆ ಯಾಗಿರುವೆನು.)

O   O   O

**ಮೂರ್ತಯಃ** = ಶರೀರಾಕಾರವಾಗಿ ಬೇರೆ ಬೇರೆ ಅಂಗಗಳ ರಚನೆ ಯುಳ್ಳ ವ್ಯಕ್ತಿಗಳು. **ಬ್ರಹ್ಮ ಮಹದ್ಯೋನಿಃ**=ಮಹತ್ತಾದ ಬ್ರಹ್ಮರೂಪವಾದ ನನ್ನ ಮಾಯೆಯೇ ಗರ್ಭವನ್ನು ಧರಿಸುವ ಯೋನಿಯು. **ಸರ್ವ ಯೋನಿಷು**=ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು–ಮುಂತಾದ ಎಲ್ಲ ಯೋನಿಗಳಲ್ಲಿ. (ಶಂ. ಭಾ.)

ಕಾರ್ಯಾವಸ್ಥೆಯಲ್ಲಿರುವ ಚಿದಚಿತ್ಪ್ರಕೃತಿಗಳ ಸಂಸರ್ಗವೂ ಕೂಡ ತನ್ನಿಂದಲೇ ಮಾಡಲ್ಪಟ್ಟಿದೆ–ಎಂದು ಭಗವಂತನು ಇಲ್ಲಿ ನಿರೂಪಿಸುತ್ತಾನೆ. ಹಿಂದೆ ಹೇಳಿದ ಪ್ರಕೃತಿ, ನೈಮಿತ್ತಿಕಸೃಷ್ಟಿಗಳಿಗೆ ಮಾತ್ರವಲ್ಲದೇ–ನಿತ್ಯಸೃಷ್ಟಿಗೂ ಕೂಡ ತಾನೇ ಕಾರಣ–ಎಂದು ಹೇಳುತ್ತಾನೆ.

ಯೋನಿಃ ಎಂದರೆ ಕಾರಣ. ನನ್ನಿಂದ ಚೇತನವರ್ಗಗಳ ಸಂಯೋಗ

ವನ್ನು ಪಡೆದ ಪ್ರಕೃತಿಯು (ಮಹತ್ತಿನಿಂದ ಆರಂಭಿಸಿ ಪಂಚಭೂತಗಳವರೆಗಿನ ಪ್ರಕೃತಿಯು) ಎಲ್ಲ ಯೋನಿಗಳಲ್ಲಿಯೂ ಸಂಭವಿಸುವ ಮೂರ್ತಿಗಳಿಗೆಲ್ಲಾ ಕಾರಣವು. ಅವುಗಳಲ್ಲಿ ಬೀಜವನ್ನು ಹಾಕುವ ತಂದೆಯು ನಾನು ಎಂದರೆ ಅವರವರ ಕರ್ಮಕ್ಕೆ ಅನುಗುಣವಾಗಿ ಚೇತನವರ್ಗವನ್ನು ಪ್ರವೃತ್ತಿಯಲ್ಲಿ ಸಂಯೋಜನೆಮಾಡುವವನು ನಾನೇ. ಗುಣಗಳು ಯಾವುವು? ಅವು ಹೇಗೆ ಕಟ್ಟಿಹಾಕುತ್ತವೆ?–ಎಂಬುದನ್ನು ಭಗವಂತನು ಇಲ್ಲಿ ನಿರೂಪಿಸುತ್ತಾನೆ.

(ರಾ. ಭಾ.)

**ಓಂ ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಮ್ಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥೫॥**

ಮಹಾಬಾಹುವೇ! ಸತ್ತ್ವ, ರಜಸ್ಸು ಮತ್ತು ತಮಸ್ಸು–ಎಂಬ ಗುಣಗಳು ಪ್ರಕೃತಿಯಿಂದ ಹುಟ್ಟಿದುವುಗಳು. ಅವ್ಯಯನಾದ ದೇಹಿಯನ್ನು (ಇವು) ದೇಹದಲ್ಲಿ ಕಟ್ಟಿಹಾಕುವುವು.

* * *

(ದೇಹದಲ್ಲಿರುವ ಇಪ್ಪತ್ತುನಾಲ್ಕು ತತ್ತ್ವಗಳು ಪ್ರಕೃತಿಸಂಭವವಾದುವು ಗಳು. ಅದರಂತೆಯೇ ಸತ್ತ್ವ-ರಜಸ್ತಮೋಗುಣಗಳೂ ಸಹ ಪ್ರಕೃತಿಸಂಭೂತ ವಾದುವುಗಳೇ. ತತ್ತ್ವಗಳ ಜೊತೆಗೆ ಈ ಗುಣಗಳೂ ಸೇರಿ ಪರಮಾತ್ಮನ ಬೀಜರೂಪವಾಗಿರುವ ಅಂಶವಾಗಿರುವ ನಾಶರಹಿತನಾದ ದೇಹಿಯನ್ನು (ಜೀವನನ್ನು ) ಬಂಧಿಸುವುವು.

ಗುಣಗಳು ಹೇಗೆ ಬಂಧಿಸುವುವು? ಪರಮಾತ್ಮನ ಬೀಜರೂಪವಾದ ಜೀವನ ಮೇಲೆ ಇದರಿಂದಾಗುವ ಪರಿಣಾಮವೇನು?–ಎಂಬುದನ್ನು ಹೀಗೆ ನಿರೂಪಿಸಬಹುದಾಗಿದೆ.

**ಮೇಘಚ್ಛನ್ನೇಹ್ನಿ ದುರ್ದಿನಂ**–ಮೇಘವು ದಿನಪೂರ್ತಿಯಾಗಿ ಸೂರ್ಯನಿಗೆ ಮುಸುಕಿಕೊಂಡಿದ್ದರೆ ಅಂದು ದುರ್ದಿನವೆನಿಸಿಕೊಳ್ಳುತ್ತದೆ. ಯದ್ಯಪಿ ಅಂದು ಸೂರ್ಯನು ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಮೇಘಗಳು ಅವನನ್ನು ಮುಚ್ಚಿಬಿಟ್ಟಿರುತ್ತವೆ. ಅದರ ಪರಿಣಾಮವು ಪ್ರಪಂಚಕ್ಕೆ ಆಗುತ್ತದೆ. ಅಂದು ದುರ್ದಿನವೆನಿಸಿಕೊಂಡು ಅನೇಕ ದುಷ್ಪರಿ

ಣಾಮಗಳಾಗುತ್ತವೆ. ಅದರಂತೆಯೇ ಶುದ್ಧನಾದ ಜೀವನಿಗೆ ಸತ್ತ್ವ-ರಜಸ್ತಮೋ ಗುಣಗಳು ಪರಸ್ಪರಮಿಶ್ರಣದಿಂದ ಮುಸುಕಿಕೊಂಡಿರುತ್ತವೆ. ಅದರಿಂದ ಪ್ರಪಂಚದ ಮೇಲೆ ಆ ಗುಣಗಳ ಪ್ರಭಾವಾನುಗುಣವಾಗಿ ಪರಿಣಾಮವಾಗುವುದು ನಿಜ. ಆ ಗುಣಗಳು ನಿರಸನವಾಗುವವರೆಗೂ ಜೀವನು ತನ್ನ ಶುದ್ಧ ಸ್ವರೂಪವನ್ನು ಪ್ರಪಂಚಕ್ಕೆ ತೋರಿಸುವಂತೆಯೇ ಇಲ್ಲ. ಮಸುಕು ಹರಿಯಿತೆಂದರೆ ಪರಮಾತ್ಮನ ಅಂಶವೂ ಪರಮಾತ್ಮನಂತೆಯೇ ಆಗುತ್ತದೆ.)

o o o

**ಗುಣಾಃ ಪ್ರಕೃತಿಸಮ್ಭವಾಃ** = ಇಲ್ಲಿ ಗುಣ ಎಂಬ ಶಬ್ದವು ಪಾರಿಭಾಷಿಕ. ರೂಪ-ರಸ ಮುಂತಾದುವುಗಳಂತೆ ಯಾವುದಾದರೂ ದ್ರವ್ಯವನ್ನು ಆಶ್ರಯಿಸಿರುವ ಗುಣಗಳು ದ್ರವ್ಯಕ್ಕೆ ಅಧೀನವಾಗಿರುವಂತೆ ಈ ಸತ್ತ್ವವೇ ಮುಂತಾದ ಗುಣಗಳು ಯಾವಾಗಲೂ ಕ್ಷೇತ್ರಜ್ಞನಿಗೆ ಅಧೀನವಾಗಿದ್ದುಕೊಂಡೇ ಅವಿದ್ಯಾತ್ಮಕವಾಗಿರುವುದರಿಂದ ಕ್ಷೇತ್ರಜ್ಞನನ್ನು ಕಟ್ಟಿಹಾಕುತ್ತವೆಯೋ ಅಥವಾ ಕಟ್ಟಿಹಾಕಿವೆಯೋ—ಎಂಬಂತೆ ತೋರುತ್ತದೆ. ಕ್ಷೇತ್ರಜ್ಞನನ್ನು ಆಶ್ರಯಿಸಿಕೊಂಡೇ ಈ ಗುಣಗಳು ತಮ್ಮ ಸ್ವರೂಪವನ್ನು ಪ್ರಕಟಪಡಿಸುವ ವಿಷಯದಲ್ಲಿ ಸಮರ್ಥವಾಗುತ್ತವೆ. ಆದುದರಿಂದ ಅವು ಕಟ್ಟಿಹಾಕುತ್ತವೆ ಎಂದು ಹೇಳಿದೆ.

**ದೇಹೀ ನ ಲಿಪ್ಯತೇ**=ದೇಹಿಯು ಲೇಪಕ್ಕೆ ಒಳಗಾಗುವುದಿಲ್ಲ ಎಂದು ಹಿಂದೆ ಹೇಳಿರುವಾಗ ಗುಣಗಳು ದೇಹಿಯನ್ನು ಕಟ್ಟಿಹಾಕುತ್ತವೆ ಎಂದು ಈ ಶ್ಲೋಕದಲ್ಲಿ ಹೇಳುವುದು ಸರಿಯೇ?—ಎಂದರೆ : ಕ್ಷೇತ್ರಜ್ಞನನ್ನು ಕಟ್ಟಿಹಾಕುವಂತೆ ತೋರುತ್ತದೆ—ಎಂಬ ಅರ್ಥವನ್ನು ಇದಕ್ಕೋಸ್ಕರವೇ ಹೇಳಿದೆ.

(ಶಂ. ಭಾ.)

ಹೀಗೆ ಸೃಷ್ಟಿಯ ಪ್ರಾರಂಭದಲ್ಲಿ ಪ್ರಾಚೀನಕರ್ಮದಿಂದ ಅಚಿತ್ ಸಂಬಂಧವನ್ನು ಹೊಂದಿ ದೇವಾದಿ ಯೋನಿಗಳಲ್ಲಿ ಹುಟ್ಟಿದವರು ಮತ್ತೆ- ಮತ್ತೆ ದೇವಾದಿ ಭಾವದಿಂದ ಜನ್ಮಹೊಂದುವುದಕ್ಕೆ ಕಾರಣವೇನೆಂಬುದನ್ನು ಇಲ್ಲಿ ಹೇಳಲಾಗಿದೆ. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಈ ಮೂರೂ ಪ್ರಕೃತಿಯ ಗುಣಗಳು. ಅದರ ಸ್ವರೂಪಕ್ಕೆ ಸೇರಿಕೊಂಡ ಸ್ವಭಾವವಿಶೇಷಗಳು. ಪ್ರಕಾಶವೇ ಮುಂತಾದ ಅವುಗಳ ಕಾರ್ಯಗಳಿಂದಲೇ ನಿರೂಪಿಸಲು ಸಾಧ್ಯ

ವಾದುವುಗಳು. ಅವು ಪ್ರಕೃತಿಯ ಅವಸ್ಥೆಯಲ್ಲಿ ಅನುದ್ಭೂತವಾಗಿರುತ್ತವೆ. ಆದರೆ ಮಹತ್ತೇ ಮುಂತಾದ ಪ್ರಕೃತಿಯ ವಿಕಾರಗಳಲ್ಲಿ ಉದ್ಭವಿಸುತ್ತವೆ. ಹಾಗೆ ಉದ್ಭವಿಸಿ ದೇಹಸಂಬಂಧಿಯಾಗಿರುವ ಅವ್ಯಯವಾದ ಜೀವವನ್ನು ಸ್ವತಃ ಗುಣಸಂಬಂಧಕ್ಕೆ ಯೋಗ್ಯನಲ್ಲದಿದ್ದರೂ ದೇಹದಲ್ಲಿ ಸೇರಿಕೊಂಡಿರುವ ಜೀವನನ್ನು ಕಟ್ಟಿಹಾಕುತ್ತವೆ. ಎಂದರೆ ದೇಹದಲ್ಲಿರುವಿಕೆ ಎಂಬ ಉಪಾಧಿ ಯಿಂದ ಕಟ್ಟಿಹಾಕುತ್ತವೆ. ಅವ್ಯಯಂ ಎಂದರೆ ಸ್ವತಃ ಗುಣಸಂಬಂಧಕ್ಕೆ ಯೋಗ್ಯ ನಲ್ಲದ ಎಂದು ಅರ್ಥ. (ರಾ. ಭಾ.)

ಸಾಧನೆಗಳನ್ನು ಅನುಷ್ಠಾನಮಾಡುವುದಕ್ಕೋಸ್ಕರ ಬಂಧಪ್ರಕಾರವನ್ನು ಇಲ್ಲಿ ಭಗವಂತನು ತೋರಿಸುತ್ತಾನೆ. 'ನಾನು ಬದ್ಧನಾಗಿದ್ದೇನೆ' ಎಂದು ತಿಳಿ ದರೆ ತಾನೇ ಅವನು ಆ ಬಂಧನದಿಂದ ನಿವೃತ್ತಿಹೊಂದುವ ಸಾಧನಗಳನ್ನು ತಿಳಿಯಲು ಬಯಸಿ ತಿಳಿದುಕೊಂಡು ಅದರಂತೆ ಅನುಷ್ಠಾನಮಾಡುತ್ತಾನೆ? ಆದುದರಿಂದ ಬಂಧಪರಿಹಾರದ ಸಾಧನೆಯನ್ನು ಅನುಷ್ಠಾನಮಾಡುವುದ ಕ್ಕೋಸ್ಕರ, ಅದನ್ನು ಜ್ಞಾಪಿಸಿಕೊಡಲು, ಆ ಬಗೆಯ ಜಿಜ್ಞಾಸೆಯನ್ನು ಉಂಟು ಮಾಡುವುದಕ್ಕೋಸ್ಕರ ತ್ರಿಗುಣಗಳು ಹೇಗೆ ಸಂಬಂಧಿಸಿವೆ ಎಂಬ ಪ್ರಕಾರ ವನ್ನು ಇಲ್ಲಿ ಪ್ರಾರಂಭದಲ್ಲಿ ಭಗವಂತನು ಹೇಳುತ್ತಾನೆ. (ಮ. ಭಾ.)

ಮುಂದೆ ಭಗವಂತನು ಸತ್ತ್ವಾದಿಗುಣಗಳ ಲಕ್ಷಣಗಳನ್ನು ಹೇಳುತ್ತಾನೆ.

**ಓಂ ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।**
**ಸುಖಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚಾನಘ ॥೬॥**

ದೋಷರಹಿತನೇ! ಇವುಗಳಲ್ಲಿ ಸತ್ತ್ವವು ನಿರ್ಮಲವಾಗಿರುವುದರಿಂದ ಪ್ರಕಾಶಪಡಿಸುವುದೂ ಆಧಿ-ವ್ಯಾಧಿಗಳಿಲ್ಲದ್ದೂ ಆಗಿದೆ. ಅದು ಸುಖದ ಸಂಗ ದಿಂದಲೂ, ಜ್ಞಾನದ ಸಂಗದಿಂದಲೂ (ಜೀವನನ್ನು ) ಬಂಧಿಸುತ್ತದೆ.

* * *

(ಸತ್ತ್ವಗುಣವು ಸ್ಫಟಿಕದಂತೆ ನಿರ್ಮಲವಾದುದು. ಮಲರಹಿತವಾಗಿರು ವುದರಿಂದಲೇ ಇದು ಪ್ರಕಾಶಕವೂ ಆಗಿದೆ. ಅನಾಮಯ ಎಂದರೆ ಸೌಖ್ಯ ವುಳ್ಳದ್ದೂ ಆಗಿದೆ ಅಥವಾ ಆಲಸ್ಯರಹಿತವೂ ಆಗಿದೆ. ಆದರೆ ಈ ಸತ್ತ್ವಗುಣವು

ಜೀವನನ್ನು ಸುಖದಲ್ಲಿ ಮತ್ತು ಜ್ಞಾನದಲ್ಲಿ ಆಸಕ್ತಿಯನ್ನುಂಟುಮಾಡಿಸಿ ಆ ಮೂಲಕ ಅವನ ಬಂಧನಕ್ಕೆ ಕಾರಣವಾಗುತ್ತದೆ.

ಸತ್ತ್ವವು ಶುದ್ಧಗುಣವಾದುದರಿಂದ ಅದು ಆ ಶುದ್ಧಾತ್ಮನ ಸುಖ ಮತ್ತು ಜ್ಞಾನಗಳಲ್ಲಿ ಆಸಕ್ತಿಯನ್ನುಂಟುಮಾಡುತ್ತದೆ. ಆ ಆಸಕ್ತಿಯಿಂದ ಚೇತನವನ್ನು ಕಟ್ಟಿಹಾಕುತ್ತದೆ. ಇಂತಹ ಶುದ್ಧವಾದ ಬಂಧನಕ್ಕೆ ಒಳಗಾದ ಚೇತನವು ಆ ಸುಖ ಮತ್ತು ಜ್ಞಾನಗಳ ಪ್ರಾಪ್ತಿಗೆ ಅನುಗುಣವಾದ ಸಾಧನಗಳನ್ನು ನಿಷ್ಠೆಯಿಂದ ಆಚರಿಸುತ್ತದೆ. ಭೂತದಯೆ ಮುಂತಾದ ಆತ್ಮಗುಣಗಳಲ್ಲಿಯೂ ಸದಾಚಾರ-ಸತ್ಕಾರ್ಯಗಳಲ್ಲಿಯೂ ಪ್ರವೃತ್ತಿಯನ್ನು ಉಂಟುಮಾಡುತ್ತದೆ. ಇವುಗಳ ಫಲವಾಗಿ ಚಿತ್ತವು ಸಂಪೂರ್ಣವಾಗಿ ಶುದ್ಧವಾದಾಗ ಶುದ್ಧಜ್ಞಾನ ಸುಖಸ್ವರೂಪವಾದ ಪರಮಾತ್ಮನ ಅನುಭವವು ಉಂಟಾಗುತ್ತದೆ. ಸಾತ್ತ್ವಿಕನು ಸದಾ ಧರ್ಮಪರಾಯಣನಾಗಿರುತ್ತಾನೆ. ಧರ್ಮಾಚರಣೆಯಿಂದ ಪರಿಶುದ್ಧ ವಾದ ಆತನ ಪ್ರಕೃತಿಯು ಬ್ರಹ್ಮಸಾಕ್ಷಾತ್ಕಾರವನ್ನು ಅವಶ್ಯವಾಗಿ ಉಂಟು ಮಾಡಿಸುತ್ತದೆ. ಸಾತ್ತ್ವಿಕನು ಸದಾ ಲೋಕಕಲ್ಯಾಣಕರವಾದ ಕಾರ್ಯಗಳಲ್ಲಿ ತೊಡಗಿರುತ್ತಾನೆ. ಇವನಿಂದ ಯಾರಿಗೂ ಹಿಂಸೆಯಾಗುವುದಿಲ್ಲ. ಎಲ್ಲರಿಗೂ ಉಪಕಾರಪರಂಪರೆಯೇ ಆಗುತ್ತದೆ. ಹೀಗಿರುವುದರಿಂದ ಸತ್ತ್ವಗುಣವು ಬಂಧಕವೇ ಆಗಿದ್ದರೂ ಅದು ಅತ್ಯಂತಶ್ರೇಷ್ಠವಾದ ಬಂಧನ ; ಸುಖ ಮತ್ತು ಜ್ಞಾನಗಳಲ್ಲಿ ನಿಷ್ಠೆಯನ್ನುಂಟುಮಾಡಿ ಸಾಧನೆಯಲ್ಲಿ ತೊಡಗಿಸಿ ಬ್ರಹ್ಮಸಾಕ್ಷಾ ತ್ಕಾರದ ಮೂಲಕ ಎಲ್ಲ ಬಂಧನಗಳನ್ನೂ ಕಳಚಿಹಾಕುವ ಅದ್ಭುತವಾದ ಬಂಧನ. ಹೀಗೆ ಆತ್ಮಮೋಕ್ಷವನ್ನಲ್ಲದೇ–ಜಗತ್ತಿಗೂ ಹಿತವನ್ನುಂಟುಮಾಡು ವುದರಿಂದ ಅಪೇಕ್ಷಣೀಯವಾದ, ಹೃದ್ಯವೂ, ಪವಿತ್ರವೂ ಆದ ಆನಂದ ಮಯವಾದ ಬಂಧನ. ಸಂಗವನ್ನುಂಟುಮಾಡಿದರೂ ನಿಸ್ಸಂಗತೆಯ ಸುಖ ವನ್ನು ಉಂಟುಮಾಡುವ ಬಂಧನ.

ಆದರೆ ಸತ್ತ್ವಗುಣದ ಬಂಧನವು ಕೆಲವು ವೇಳೆ ಸಂಸಾರಬಂಧನಕ್ಕೂ ಕಾರಣವಾಗಬಹುದು. ಸತ್ತ್ವಗುಣಾನುಷ್ಠಾನದ ಲಕ್ಷ್ಯವು ಅತೀಂದ್ರಿಯವೂ, ಧರ್ಮಾಧರ್ಮವಿವರ್ಜಿತವೂ, ಗಮನಾಗಮನರಹಿತವೂ ಆದ ಬ್ರಾಹ್ಮೀಸ್ಥಿತಿ ಯಲ್ಲಿ ನೆಲೆಗೊಳಿಸುವುದು. ಆದರೆ ಈ ಲಕ್ಷ್ಯವನ್ನು ಮರೆತು ಕೇವಲ

ಪರೋಪಕಾರ, ಲೋಕಸಂಗ್ರಹ–ಮುಂತಾದ ಕರ್ಮಗಳಲ್ಲಿಯೇ ತೊಡಗಿದ್ದು ಅದಕ್ಕಾಗಿಯೇ ಮತ್ತೆ ಮತ್ತೆ ಜನ್ಮಗಳನ್ನು ಪಡೆಯುವ ಅಪೇಕ್ಷೆಯಲ್ಲಿಯೇ ಮಿತಿಮೀರಿ ಚರಿತಾರ್ಥವಾಗಿಸಿದರೆ ಆಗ ಅದರಿಂದ ನಿವೃತ್ತಿಯ ಬದಲು ಪ್ರವೃತ್ತಿಯೇ ಉಂಟಾಗುವುದರಿಂದ ಅದು ಜ್ಞಾನಿಗಳ ಮೆಚ್ಚುಗೆಗೆ ಪಾತ್ರವಾಗುವುದಿಲ್ಲ. ಹೀಗಲ್ಲದೇ ಸತ್ತ್ವಗುಣವು ತನ್ನ ನೈರ್ಮಲ್ಯದಿಂದ ಪ್ರಕಾಶಪಡಿಸಿದ ಸುಖ ಮತ್ತು ಜ್ಞಾನಗಳ ಮೂಲಸ್ರೋತಸ್ಸಿನಲ್ಲಿ ಅವಗಾಹನೆಯನ್ನು ಮಾಡಿಸುವುದಕ್ಕೆ ಕಾರಣವಾದರೆ ನಿಜವಾಗಿಯೂ ಅದು ಬಂಧನವನ್ನು ಬಿಡಿಸುವ ಬಂಧನ. (ಮುಳ್ಳನ್ನು ತೆಗೆಯುವ ಮುಳ್ಳು.) ಸಂಗವನ್ನು ತೊಲಗಿಸುವ ಸತ್ಸಂಗದ ಜೀವಾತು ಎಂದು ಅತ್ಯಂತ ಆದರದಿಂದ ಸಾಧಕರು ಆಶ್ರಯಿಸಬೇಕಾದ ಶ್ರೇಷ್ಠಗುಣವೇ ಸತ್ತ್ವ. ಇದು ಪ್ರಾಕೃತವಾದುದರಿಂದ ಕೃತ್ಯಗಳಲ್ಲಿ ತೊಡಗಿಸಿದರೂ ಆ ಕೃತ್ಯಗಳು ನೈಷ್ಕರ್ಮ್ಯಸಿದ್ಧಿಯಲ್ಲಿಯೇ ವಿಶ್ರಾಂತಿಯನ್ನು ಪಡೆಯುತ್ತವೆ ಎಂಬುದನ್ನು ಮರೆಯಬಾರದು.)

o o o

ಸತ್ತ್ವಗುಣವು ಸ್ಫಟಿಕಮಣಿಯಂತೆ ನಿರ್ಮಲವಾದುದು. ಪ್ರಕಾಶಕವಾದುದು. ಉಪದ್ರವವನ್ನು ಮಾಡದೇ ಇರುವುದು. ಆದರೂ ಇದು ಕಟ್ಟಿಹಾಕುವ ಗುಣ. ಯಾವುದರಿಂದ ಕಟ್ಟಿಹಾಕುತ್ತದೆ ಎಂದರೆ ಸುಖದ ಆಸಕ್ತಿಯಿಂದ ಮತ್ತು ಜ್ಞಾನದ ಆಸಕ್ತಿಯಿಂದ. ಇಲ್ಲಿ ಹೇಳಿರುವ ಸುಖ ಮತ್ತು ಜ್ಞಾನಗಳು ಕ್ಷೇತ್ರದ ಅಥವಾ ಅಂತಃಕರಣದ ಧರ್ಮಗಳೇ ಹೊರತು ಆತ್ಮದ ಧರ್ಮಗಳಲ್ಲ ; ಅವು ವಿಷಯಧರ್ಮಗಳು. ಅವುಗಳನ್ನು ವಿಷಯಿಯಾದ ಆತ್ಮನ ಧರ್ಮಗಳೆಂದು ತಿಳಿದು 'ನಾನು ಸುಖೀ, ನಾನು ಜ್ಞಾನೀ' ಎಂದು ಭಾವಿಸುವ ವೃತ್ತಿಯು ಸಂಗರೂಪವಾದುದರಿಂದ ಬಂಧನಕ್ಕೆ ಕಾರಣವಾಗುತ್ತದೆ. (ಶಂ. ಭಾ.)

ಸತ್ತ್ವ-ರಜಸ್ಸು ಮತ್ತು ತಮಸ್ಸು ಈ ಮೂರು ಗುಣಗಳಲ್ಲಿ ಸತ್ತ್ವಗುಣದ ಸ್ವರೂಪವೇನೆಂದರೆ ನಿರ್ಮಲವಾಗಿರುವುದರಿಂದ ಪ್ರಕಾಶವನ್ನುಂಟು ಮಾಡುವುದು. ನಿರ್ಮಲತೆಯೆಂದರೆ ಪ್ರಕಾಶ. ಆವರಣವಿಲ್ಲದೇ ಇರುವಿಕೆ. ಪ್ರಕಾಶ ಮತ್ತು ಸುಖವನ್ನು ಪ್ರಕಟಪಡಿಸುವ ಐಕಾಂತಿಕಸ್ವಭಾವವನ್ನು

ಹೊಂದಿರುವುದರಿಂದ ಸತ್ತ್ವಗುಣವು ಪ್ರಕಾಶ ಮತ್ತು ಸುಖಕ್ಕೆ ಕಾರಣ ವಾದುದು. ಪ್ರಕಾಶ ಎಂದರೆ ವಸ್ತುವಿನ ಯಥಾರ್ಥಸ್ವರೂಪಜ್ಞಾನವನ್ನು ಉಂಟುಮಾಡುವುದು ಮತ್ತು ಸತ್ತ್ವಗುಣವು ಅನಾಮಯವಾದುದು–ರೋಗ ವಿಲ್ಲದೇ ಇರುವಿಕೆಗೆ ಕಾರಣವಾದುದು. ಈ ಸತ್ತ್ವಗುಣವು ಪುರುಷನಿಗೆ ಸುಖ ದಲ್ಲಿ ಮತ್ತು ಜ್ಞಾನದಲ್ಲಿ ಆಸೆಯನ್ನುಂಟುಮಾಡುವುದು. ಜ್ಞಾನ ಮತ್ತು ಸುಖಗಳಲ್ಲಿ ಆಸಕ್ತಿಯುಂಟಾದರೆ ಮನುಷ್ಯನು ಅವುಗಳನ್ನು ಪಡೆಯುವ ಲೌಕಿಕವಾದ ಮತ್ತು ವೈದಿಕವಾದ ಸಾಧನಗಳಲ್ಲಿ ತೊಡಗುತ್ತಾನೆ ಮತ್ತು ಆ ಕರ್ಮಗಳ ಫಲವನ್ನು ಅನುಭವಿಸಲು ಸಾಧನವಾದ ಯೋನಿಗಳಲ್ಲಿ ಜನ್ಮವನ್ನು ತಾಳುತ್ತಾನೆ. ಹೀಗೆ ಸತ್ತ್ವಗುಣವು ಸುಖ ಮತ್ತು ಜ್ಞಾನಗಳಲ್ಲಿ ಆಸಕ್ತಿಯನ್ನುಂಟುಮಾಡುವುದರ ಮೂಲಕ ಜೀವನನ್ನು ಕಟ್ಟಿಹಾಕುತ್ತದೆ. ಒಟ್ಟು ತಾತ್ಪರ್ಯವೇನೆಂದರೆ : ಸತ್ತ್ವಗುಣವು ಜ್ಞಾನವನ್ನೂ ಸುಖವನ್ನೂ ಉಂಟುಮಾಡುವುದೂ ಆಗಿದೆ ಮತ್ತು ಅನಂತರ ಅವುಗಳಲ್ಲಿ ಆಸಕ್ತಿಯನ್ನೂ ಕೂಡ ಉಂಟುಮಾಡುವುದಾಗಿದೆ. (ರಾ. ಭಾ.)

**ಓಂ ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಙ್ಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಙ್ಗೇನ ದೇಹಿನಮ್ ॥೭॥**

ರಜೋಗುಣವು ರಾಗಾತ್ಮಕವಾಗಿರುವುದೆಂದು ಮತ್ತು ತೃಷ್ಣೆಯ ಸಂಗದಿಂದ ಹುಟ್ಟಿದುದೆಂದು ತಿಳಿ. ಕೌಂತೇಯ! ಅದು ಕರ್ಮದ ಸಂಗದಿಂದ ದೇಹಿಯನ್ನು ಬಂಧಿಸುತ್ತದೆ.

* * *

(ಸತ್ತ್ವಗುಣವು ನಿರ್ಮಲವಾಗಿರುವುದರಿಂದ ಪ್ರಕಾಶಮಾನವಾಗಿದೆ. ಆದುದರಿಂದಲೇ ಅದರ ಬಣ್ಣವು ಬಿಳುಪು ಎಂದು ಹೇಳುತ್ತಾರೆ. ರಜೋ ಗುಣವು ರಾಗಾತ್ಮಕವಾದುದು. ಅನುರಾಗವನ್ನೊಳಗೊಂಡಿರುವುದು. ಕೆಂಪು ಬಣ್ಣದ್ದು. ತೃಷ್ಣಾಸಙ್ಗಸಮುದ್ಭವಂ–ತೃಷ್ಣಾ ಎಂದರೆ ದಾಹ ಅರ್ಥಾತ್ ಅತ್ಯಾಸೆ, ಲೋಭ ಎಂದೂ ಆಗುತ್ತದೆ. ಅತ್ಯಾಸೆಯ ಸಂಗದಿಂದ ಹುಟ್ಟಿದುದು ರಜೋಗುಣ. ಈ ಅತ್ಯಾಸೆ ಅಥವಾ ತೃಷ್ಣೆ ಎಂಬುದೇ ದೇಹಿಯನ್ನು ಕರ್ಮ

ದಿಂದ ಬಂಧಿಸುತ್ತದೆ. ಆಸೆಯುಳ್ಳವನು ತನ್ನ ಆಸೆಯನ್ನು ತೀರಿಸಿಕೊಳ್ಳುವುದಕ್ಕಾಗಿ ಯಾವುದಾದರೂ ಕರ್ಮವನ್ನು ಮಾಡುತ್ತಲೇ ಇರುತ್ತಾನೆ. ಕಾಮ್ಯಗಳಾಗಬಹುದು ; ಲೌಕಿಕಕರ್ಮಗಳಾಗಬಹುದು ; ವ್ರತಾನುಷ್ಠಾನಗಳಾಗಬಹುದು ; ಯಜ್ಞ-ಯಾಗಾದಿಗಳೂ ಆಗಬಹುದು ; ಒಂದು ಕಾರ್ಯದಿಂದ ಫಲವು ದೊರೆಯಲಿಲ್ಲವೆಂದರೆ ಮತ್ತೊಂದು ಕಾರ್ಯಕ್ಕೆ ಕೈಹಚ್ಚುತ್ತಾನೆ. ಇವನಿಗೆ ಸುಮ್ಮನಿರುವುದೆಂದರೆ ಸಾಧ್ಯವೇ ಆಗುವುದಿಲ್ಲ. ಯಾವಾಗಲೂ ಯಾವುದಕ್ಕಾದರೂ ಚಡಪಡಿಸುತ್ತಿರುತ್ತಾನೆ. ತೃಷ್ಣೆಯ ಸ್ವಭಾವವೇ ಅಂತಹುದು. ಇದನ್ನಪ್ಪಿಕೊಂಡ ಮನುಷ್ಯನನ್ನು ಅದು ಸುಮ್ಮನಿರಗೊಡಿಸುವುದಿಲ್ಲ. ಒಂದು ಆಸೆಯು ತೀರಿತೆಂದರೆ ಮತ್ತೊಂದರ ಮೇಲಿನ ಆಸೆಯನ್ನು ಕೆರಳಿಸುತ್ತದೆ. ಈ ರೀತಿಯಲ್ಲಿ ರಜೋಗುಣವು ದೇಹಿಯನ್ನು (ಪರಮಾತ್ಮನ ಅಂಶವಾಗಿರುವ ದೇಹಿಯನ್ನು) ನಾನಾವಿಧವಾದ ಕರ್ಮಗಳಿಂದ ಬಂಧಿಸಿಬಿಡುತ್ತದೆ. ಇಂತಹ ತೃಷ್ಣಾಸಮುದ್ಭವವಾದ ರಜೋಗುಣವನ್ನು ತ್ಯಜಿಸಲು ಶ್ರೀಶಂಕರರು ಭಜಗೋವಿಂದಸ್ತೋತ್ರದಲ್ಲಿ ಹೀಗೆ ಉಪದೇಶನೀಡಿದ್ದಾರೆ :

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥೭॥**

ಮೂಢ! ಹಣವು ಹೆಚ್ಚಾಗಿ ಬರಬೇಕೆಂಬ ದುರಾಸೆಯನ್ನು ಬಿಟ್ಟುಬಿಡು. ದುರಾಸೆಯನ್ನು ಬಿಟ್ಟು ಮನಸ್ಸಿನಲ್ಲಿ ಒಳ್ಳೆಯ ಬುದ್ಧಿಯನ್ನು ತಂದುಕೋ. ನೀನು ಹಿಂದೆ ಮಾಡಿದ ಕರ್ಮದ ಫಲವಾಗಿ ಎಷ್ಟು ಸಿಗುವುದೋ ಅಷ್ಟು ವಿತ್ತದಿಂದಲೇ ಮನಸ್ಸನ್ನು ಸಂತೋಷಗೊಳಿಸು.)

o o o

**ರಜಃ ರಾಗಾತ್ಮಕಂ**=ರಜೋಗುಣವು ರಾಗಾತ್ಮಕವಾದುದು. ಗೈರಿಕವೇ ಮುಂತಾದ ಧಾತುಗಳು ಸಂಸ್ಪರ್ಶದಿಂದ ಆ ಧಾತುಗಳ ಬಣ್ಣಬರುವಂತೆ ಮಾಡುತ್ತವೆ. ಹಾಗೆಯೇ ಪುರುಷನಿಗೆ ವಿಷಯಗಳಲ್ಲಿ ಆಸಕ್ತಿಯುಂಟಾಗುವಂತೆ ಮಾಡಿ ತದ್ರೂಪನನ್ನಾಗಿ ಮಾಡುವುದರಿಂದ ರಜಸ್ಸು ರಾಗಾತ್ಮಕವಾಗಿದೆ.

**(ರಞ್ಜನಾತ್ ರಾಗಃ) ತೃಷ್ಣಾಸಙ್ಗಸಮುದ್ಭವಂ =** ತೃಷ್ಣಾ ಎಂದರೆ ದೊರೆಯದೇ ಇರುವ ವಸ್ತುವಿನಲ್ಲಿ ಅಭಿಲಾಷೆ. ಆಸಂಗ ಎಂದರೆ ದೊರೆತ ವಿಷಯಗಳಲ್ಲಿ ಮನಸ್ಸಿನ ಪ್ರೀತಿಯೆಂಬ ಸ್ನೇಹ (ಸಂಶ್ಲೇಷ). ರಜೋಗುಣವು ತೃಷ್ಣೆ ಮತ್ತು ಆಸಕ್ತಿಗಳ ಉತ್ಪತ್ತಿಗೆ ಕಾರಣವಾಗಿದೆ. **ತೃಷ್ಣಾ = ಅಪ್ರಾಪ್ತಾಭಿಲಾಷಃ. ಆಸಙ್ಗಃ = ಪ್ರಾಪ್ತೇ ವಿಷಯೇ ಮನಸಃ ಪ್ರೀತಿ ಲಕ್ಷಣಃ ಸಂಶ್ಲೇಷಃ. ತೃಷ್ಣಾಸಙ್ಗಯೋಃ ಸಮುದ್ಭವಂ ತೃಷ್ಣಾ ಸಙ್ಗಸಮುದ್ಭವಮ್.** (ಶಂ. ಭಾ.)

**ರಾಗಾತ್ಮಕಂ** = ರಾಗಕ್ಕೆ ಕಾರಣವಾದುದು. ರಾಗ ಎಂದರೆ ಸ್ತ್ರೀ ಮತ್ತು ಪುರುಷರ ಪರಸ್ಪರವಾದ ಆಸೆ. ಇದು ತೃಷ್ಣೆ ಮತ್ತು ಸಂಗಗಳಿಗೆ ಕಾರಣ ವಾದುದು (ಉದ್ಭವಸ್ಥಾನ). ತೃಷ್ಣಾ ಎಂದರೆ ಶಬ್ದವೇ ಮುಂತಾದ ಎಲ್ಲ ವಿಷಯಗಳಲ್ಲೂ ಇರುವ ಆಸೆ. ಸಂಗ ಎಂದರೆ ಪುತ್ರ-ಮಿತ್ರರೇ ಮುಂತಾದ ನೆಂಟರಲ್ಲಿ ಸೇರಿಕೊಂಡಿರಬೇಕೆಂಬ ಆಸೆ. ಇದು ಆಸೆಯನ್ನುಂಟುಮಾಡು ವುದರ ಮೂಲಕ ದೇಹಿಯನ್ನು ಕರ್ಮಗಳಲ್ಲಿ ಕಟ್ಟಿಹಾಕುತ್ತದೆ. ದೇಹಿಯು ಕ್ರಿಯೆಗಳ ಮೇಲಿನ ಆಸೆಯಿಂದ ಯಾವ ಕ್ರಿಯೆಗಳನ್ನು ಆರಂಭಿಸುತ್ತಾನೆಯೋ ಆ ಕ್ರಿಯೆಗಳು ಪುಣ್ಯ-ಪಾಪರೂಪವಾಗಿರುವುದರಿಂದ ಆಯಾ ಫಲಗಳನ್ನು ಅನುಭವಿಸುವುದಕ್ಕೆ ಸಾಧನವಾಗಿರುವುದು. ಯೋನಿಗಳಲ್ಲಿ ಜನ್ಮವನ್ನು ಕೊಡಲು ಕಾರಣವಾಗುತ್ತದೆ. ಆದುದರಿಂದ ಕರ್ಮಸಂಗವನ್ನು ಉಂಟುಮಾಡುವುದರ ಮೂಲಕ ಅದು ದೇಹಿಯನ್ನು ಕಟ್ಟಿಹಾಕುತ್ತದೆ ಎನ್ನ ಬಹುದು. ಹೀಗೆ ರಜೋಗುಣವು ರಾಗ-ತೃಷ್ಣೆಗಳ ಸಂಗಕ್ಕೆ ಕಾರಣವಾದುದು ಮತ್ತು ಕರ್ಮಸಂಗಕ್ಕೂ ಕಾರಣವಾದುದು. (ರಾ. ಭಾ.)

**ತೃಷ್ಣಾಸಙ್ಗಸಮುದ್ಭವಮ್** = ತೃಷ್ಣೆ ಮತ್ತು ಸಂಗಗಳಿಗೆ ಕಾರಣ ವಾದುದು.

**ತೃಷ್ಣಾಸಙ್ಗಯೋಃ ಸಮುದ್ಭವಂ-ತಯೋಃ ಕಾರಣಂ**

(ಮ. ಭಾ.)

**ಓಂ ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥೮॥**

ತಮಸ್ಸು ಅಜ್ಞಾನದಿಂದ ಹುಟ್ಟಿದುದು. ಸರ್ವದೇಹಿಗಳನ್ನೂ ಮೋಹಗೊಳಿಸತಕ್ಕದ್ದು ಎಂದು ತಿಳಿ. ಭಾರತ! ಅದು ಪ್ರಮಾದ, ಆಲಸ್ಯ ಮತ್ತು ನಿದ್ರೆಗಳಿಂದ ದೇಹಿಯನ್ನು ಬಂಧಿಸುತ್ತದೆ.

O O O

(ತಮೋಗುಣವು ಅಜ್ಞಾನದಿಂದ ಹುಟ್ಟುತ್ತದೆ ಎಂದು ತಿಳಿ, ಎನ್ನುತ್ತಾನೆ ಭಗವಂತ. ಸತ್ತ್ವ, ರಜಸ್ಸು ಮತ್ತು ತಮಸ್ಸು–ಈ ಮೂರು ಗುಣಗಳೂ ಅಜ್ಞಾನಜನ್ಯವಾದುವುಗಳೇ. ದೇಹವೇ ಆತ್ಮವೆಂಬ ಜ್ಞಾನವಿರುವವರೆಗೂ ಈ ಮೂರು ಗುಣಗಳೂ ಜೀವಾತ್ಮನನ್ನು ಮುಸುಕಿಕೊಂಡೇ ಇರುತ್ತವೆ. ಆದರೆ ತಮೋಗುಣವು ಅಜ್ಞಾನದ ಪರಮಾವಧಿಯಾದುದರಿಂದ ಇದನ್ನು ಅಜ್ಞಾನದಿಂದ ಹುಟ್ಟಿದ್ದೆಂದು ಭಗವಂತನು ಹೇಳಿದ್ದಾನೆ. ಅಜ್ಞಾನ ಎಂದರೆ ತಮಸ್ಸು. ಕತ್ತಲೆಯಂತೆ ಪ್ರಕಾಶವನ್ನು ಮುಚ್ಚುವುದು. ಜ್ಞಾನಕ್ಕೆ ಆವರಣವಾಗಿರುವುದು. ಆದುದರಿಂದಲೇ ಅದಕ್ಕೂ ಸಹ ತಮಸ್ಸೆಂಬ ಹೆಸರೇ ಬಂದಿದೆ. ಕಪ್ಪು ಇದರ ಬಣ್ಣ. ತಮಸ್ಸು ಕಾಳರಾತ್ರಿಯ ಸ್ವರೂಪದಲ್ಲಿರುವುದರಿಂದ ಎಲ್ಲ ಪ್ರಾಣಿಗಳಿಗೂ ಮೋಹವನ್ನುಂಟುಮಾಡುವುದಾಗಿದೆ. ಅಮಾವಾಸ್ಯೆಯ ರಾತ್ರಿಯು ಕಣ್ಣನ್ನು ಕುರುಡಾಗಿಸಿ ನೋಟದಿಂದ ಉಂಟಾಗಬೇಕಾದ ಉಳಿದ ಕೆಲಸಗಳನ್ನು ಸ್ತಂಭಿಸುತ್ತದೆ. ಅದರಂತೆಯೇ ತಮೋಗುಣದಿಂದ ಆವೃತರಾದವರ ವಿವೇಕದೃಷ್ಟಿಯು ಪೂರ್ಣವಾಗಿ ಕುರುಡಾಗುತ್ತದೆ. ವಿವೇಕದರ್ಶನ ಮೂಲಕವಾದ ಉಳಿದ ಕೆಲಸಗಳೆಲ್ಲವೂ ಸ್ತಬ್ಧವಾಗುತ್ತವೆ.

**ಸರ್ವದೇಹಿನಾಂ**–ಎಂದು ಏಕೆ ಹೇಳಿದ್ದಾನೆಂದರೆ : ಪ್ರಪಂಚದಲ್ಲಿ ಹೆಚ್ಚು ಜನ ತಾಮಸಪ್ರಕೃತಿಯವರೇ ಆಗಿರುತ್ತಾರೆ. ತಮೋಗುಣವು ಪ್ರಮಾದ, ಆಲಸ್ಯ, ನಿದ್ರೆ–ಇವುಗಳಿಂದ ಜೀವನನ್ನು ಬಂಧಿಸಿಬಿಟ್ಟಿರುತ್ತದೆ. ಪ್ರಮಾದ ಎಂದರೆ ಸಾವಧಾನತೆಯಿಲ್ಲದೇ ಇರುವುದು. ಇದರ ಫಲವಾಗಿ ಮಾಡಬೇಕಾದ ಕಾರ್ಯವನ್ನು ಮಾಡದೇ ಇರುವುದು. ಮಾಡಲಾಗದ ಅಥವಾ ಸಾಧ್ಯವಾಗದ ಕಾರ್ಯಕ್ಕೆ ಸಕಲಪ್ರಯತ್ನವನ್ನೂ ಮಾಡುವುದು. ಆಲಸ್ಯ ಎಂದರೆ ಇಂದು ಮಾಡಬೇಕಾದ ಕಾರ್ಯವನ್ನು ನಾಳೆಗೆ ತಳ್ಳುವುದು. ಯಾವುದಾದರೂ ಕಾರಣದಿಂದ ಆ ಕಾರ್ಯವನ್ನು ಮಾಡದಂತಾದರೆ ಸಾಕೆಂಬ ಮನೋಭಾವ. ಮೈಮುರಿಯುವುದು, ಕ್ಷಣಕ್ಕೊಮ್ಮೆ ಆಕಳಿಸುವುದು,

ತೂಕಡಿಸುವುದು, ಕರ್ತವ್ಯಕರ್ಮಗಳಲ್ಲಿ ಪ್ರವೃತ್ತಿಯಿಲ್ಲದೇ ಇರುವುದು, ಕೆಲಸ ಮಾಡದೆಯೇ ಇರುವುದು–ಮುಂತಾದುವುಗಳು ತಾಮಸಿಯ ಸ್ವಭಾವವಾಗಿರುತ್ತದೆ. ಇವುಗಳು ಆಲಸ್ಯದ ಕೆಲವು ಲಕ್ಷಣಗಳು. ತಾಮಸಿಗೆ ನಿದ್ರೆಯು ಬಹಳ ಪ್ರಿಯವಾಗಿರುತ್ತದೆ. ದಿನವಿಡೀ ನಿದ್ರೆಮಾಡಿದರೂ ಸಾಕೆನ್ನಿಸುವುದಿಲ್ಲ. ನಿದ್ರೆಯ ಸುಖದ ಮುಂದೆ ಅವನಿಗೆ ಸ್ವರ್ಗಸುಖವೂ ತುಚ್ಛವಾಗುವುದು. ಶಾಸ್ತ್ರವಿಹಿತವಾದ ಮಾರ್ಗಕ್ಕಿಂತಲೂ ಶಾಸ್ತ್ರಕ್ಕೆ ವಿರೋಧವಾದ ಮಾರ್ಗವೇ ಹಿತವಾಗಿ ಕಾಣುವುದು. ತಮೋಗುಣವು ಇಂತಹ ಪ್ರಮಾದಾಲಸ್ಯ–ನಿದ್ರೆಗಳಿಂದ ಜೀವಾತ್ಮನನ್ನು ಬಂಧಿಸಿಬಿಡುತ್ತದೆ–ಎಂದು ಭಗವಂತನು ಅರ್ಜುನನಿಗೆ ಹೇಳುತ್ತಾನೆ.)

O O O

**ಮೋಹನಂ**–ಜೀವಿಗಳ ಅಂತಃಕರಣದಲ್ಲಿ ಅವಿವೇಕವನ್ನುಂಟುಮಾಡುವುದು. (ಶಂ. ಭಾ.)

**ಅಜ್ಞಾನಂ** = ಜ್ಞಾನಕ್ಕೆ ವಿಪರೀತವಾದುದು. ಜ್ಞಾನ ಎಂದರೆ ವಸ್ತುವಿನ ಯಥಾರ್ಥತೆಯ ತಿಳಿವಳಿಕೆ. ಅದಕ್ಕೆ ವಿರುದ್ಧವಾದುದು ವಿಪರ್ಯಯಜ್ಞಾನ. ತಮಸ್ಸು ಎಂಬುದು ವಸ್ತುವಿನ ಯಥಾರ್ಥತೆಗೆ ವಿಪರೀತವಿಷಯವಾದ ಜ್ಞಾನದಿಂದ ಉಂಟಾದುದು. ಮೋಹ ಎಂದರೆ ವಿಪರ್ಯಯಜ್ಞಾನ. ಅದಕ್ಕೆ ಕಾರಣವಾದುದು ಮೋಹನ. **ಪ್ರಮಾದಃ** = ಕರ್ತವ್ಯವಾದ ಕರ್ಮವನ್ನು ಬಿಟ್ಟು ಬೇರೆ ಕರ್ಮಗಳಲ್ಲಿ ಪ್ರವೃತ್ತಿಯನ್ನುಂಟುಮಾಡಲು ಕಾರಣವಾದ ಅಸಾವಧಾನತೆ. ಆಲಸ್ಯ ಎಂದರೆ ಕರ್ಮಗಳನ್ನು ಆರಂಭಿಸದೆಯೇ ಇರುವ ಸ್ವಭಾವ, ಸ್ತಬ್ಧತೆ. ನಿದ್ರಾ ಎಂದರೆ ಮನುಷ್ಯನು ಇಂದ್ರಿಯವ್ಯಾಪಾರಗಳಲ್ಲಿ ತೊಡಗಿ ಆಯಾಸಗೊಂಡಿದ್ದರಿಂದ ಎಲ್ಲ ಇಂದ್ರಿಯವ್ಯಾಪಾರಗಳೂ ನಿಲ್ಲುವಿಕೆ. ಅದರಲ್ಲಿ ( ಹೊರಗಡೆಯ ಇಂದ್ರಿಯಗಳ ವ್ಯಾಪಾರವು ಮಾತ್ರವೇ ನಿಂತರೆ ಸ್ವಪ್ನ, ಮನಸ್ಸಿನ ವ್ಯಾಪಾರವು ನಿಂತರೆ ಸುಷುಪ್ತಿ. ) ನಿದ್ರೆಯು ಹೇಗೆ ಬಂಧಕವಾಗುತ್ತದೆ ಎಂದರೆ : ಶಾಸ್ತ್ರವು ಹೇಳುವ ಕರ್ಮಾನುಷ್ಠಾನಕ್ಕೆ ವಿರುದ್ಧವಾಗಿ ಅಕಾಲದಲ್ಲಿ ಕರ್ಮಮಾಡಿಸುವುದರಿಂದ, ಸಕಾಲದಲ್ಲಿ

ಕರ್ಮಮಾಡದಂತೆ ಮಾಡುವುದರಿಂದ ಮತ್ತು ಪಾಪಿಷ್ಠವಾದ ಸ್ವಪ್ನಗಳನ್ನು ಉಂಟುಮಾಡುವುದರಿಂದ. ಅದಕ್ಕೇ ಗೀತೆಯಲ್ಲಿ **ಯುಕ್ತಸ್ವಪ್ನಾವಬೋಧಸ್ಯ** ೬-೧೭ ಎಂಬ ನಿಯಮವನ್ನು ಹೇಳಿದೆ. (ರಾ. ಭಾ.)

**ಅಜ್ಞಾನಜಂ ತಮಃ**–ಎಂದರೆ ಅಜ್ಞಾನವು ಯಾವುದರಿಂದ ಹುಟ್ಟುತ್ತದೆಯೋ ಅದು ಅಜ್ಞಾನಕ್ಕೆ ಕಾರಣವಾದುದು. **ಅಜ್ಞಾನಂ ಜಾಯತೇ ಯತಃ ತತ್ ಅಜ್ಞಾನಜಂ**–ಅಜ್ಞಾನದಿಂದ ಉಂಟಾದುದು. **ಅಜ್ಞಾನಾಜ್ಜಾತಂ** ಎಂದು ಅರ್ಥಮಾಡುವುದು ತಪ್ಪಾಗುತ್ತದೆ. ಏಕೆಂದರೆ : ತಮಸ್ಸಿನಿಂದ ಪ್ರಮಾದ-ಮೋಹಗಳೂ ಮತ್ತು ಅಜ್ಞಾನವೂ ಉಂಟಾಗುತ್ತವೆ. **ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ**–೧೭ ಎಂಬ ಉಳಿಕೆ ವಾಕ್ಯವಿದೆ. (ಮ. ಭಾ.)

**ಓಂ ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥೯॥**

ಭಾರತನೇ! ಸತ್ತ್ವವು ಸುಖದಲ್ಲಿ ಸಂಗವನ್ನುಂಟುಮಾಡುತ್ತದೆ. ರಜಸ್ಸು ಕಾರ್ಯದಲ್ಲಿ ಸಂಗವನ್ನುಂಟುಮಾಡುತ್ತದೆ. ತಮಸ್ಸಾದರೋ ಜ್ಞಾನವನ್ನು ಆವರಿಸಿಕೊಂಡು ಪ್ರಮಾದದಲ್ಲಿ ಸಂಗವನ್ನುಂಟುಮಾಡುತ್ತದೆ.

* * *

(ಸತ್ತ್ವಗುಣವು ನಿರ್ಮಲವೂ, ಪ್ರಕಾಶವೂ, ನಿರುಪದ್ರವವೂ ಆಗಿರುವುದರಿಂದ ಸುಖದೊಡನೆ ಕೂಡಿಸುತ್ತದೆ. ಹಿಂದೆ ಆರನೆಯ ಶ್ಲೋಕದಲ್ಲಿಯೂ **ಸುಖಸಙ್ಗೇನ ಬಧ್ನಾತಿ** ಎಂದೇ ಭಗವಂತನು ಹೇಳಿದ್ದಾನೆ.

ಸಾತ್ತ್ವಿಕನಾದವನು ಧರ್ಮಿಷ್ಠನಾಗಿ ಜ್ಞಾನಮಾರ್ಗದಲ್ಲಿರುತ್ತಾನೆ. ಪ್ರಾಪಂಚಿಕವಾದ ಕಷ್ಟ-ಸುಖಗಳನ್ನು ಹೆಚ್ಚಿಗೆ ಹಚ್ಚಿಕೊಳ್ಳುವುದಿಲ್ಲ. ದ್ವಂದ್ವಗಳ ಸ್ವರೂಪವನ್ನು ಅವನು ಜ್ಞಾನದ ಮೂಲಕ ತಿಳಿದುಕೊಂಡಿರುತ್ತಾನೆ. ಸಾತ್ತ್ವಿಕನ ಸುಖವೆಂದರೆ ಐಹಿಕವಾದ ಧರ್ಮವಿರುದ್ಧವಾದ ಸುಖವಲ್ಲ. ಪರಮಾತ್ಮನ ಸಾಧನೆಗೆ ವಿರೋಧವಿಲ್ಲದಿರುವ ಧರ್ಮಾವಿರುದ್ಧವಾದ ಸುಖ. ಪ್ರಾಪಂಚಿಕವಾದ ಸುಖವು ರಜೋಗುಣಪ್ರಧಾನವಾದ ಕರ್ಮಿಗೂ ಸಿಕ್ಕುತ್ತದೆ.

ತಮೋಗುಣಪ್ರಧಾನನಾದ ತಾಮಸಿಗೂ ಸಿಕ್ಕುತ್ತದೆ. ತಾಮಸಿಯು ನಿದ್ರೆಯೇ ಪರಮಸುಖವೆಂದು ಭಾವಿಸುವನಲ್ಲವೇ? ಆದುದರಿಂದ–'ಸತ್ತ್ವವು ಸುಖದಲ್ಲಿ ತೊಡಗಿಸುತ್ತದೆ'–ಎಂದರೆ ಆತ್ಮನನ್ನು ಸುಖದಲ್ಲಿ ಅಥವಾ ಜ್ಞಾನಮೂಲವಾದ ಸುಖದಲ್ಲಿ ತೊಡಗಿಸುತ್ತದೆ–ಎಂದೇ ಅರ್ಥಮಾಡಬೇಕು.

ರಜೋಗುಣವು ಕರ್ಮದಲ್ಲಿ ತೊಡಗಿಸುತ್ತದೆ. **'ಕರ್ಮಸಙ್ಗೇನ ದೇಹಿನಂ ಬಧ್ನಾತಿ'** ಎಂದು ಈ ಹಿಂದೆ ಭಗವಂತನು ೭ನೆಯ ಶ್ಲೋಕದಲ್ಲೂ ಹೇಳಿದ್ದಾನೆ.

ತಮಸ್ಸಾದರೋ ಜ್ಞಾನವನ್ನು ಸಂಪೂರ್ಣವಾಗಿ ಆವರಿಸಿಬಿಟ್ಟಿರುತ್ತದೆ. ಇಲ್ಲಿ ಜ್ಞಾನ ಎಂದರೆ ವಿವೇಕ. ಕಾರ್ಯಾಕಾರ್ಯವಿವೇಚನೆಯು ಜ್ಞಾನ. ಆತ್ಮಾನಾತ್ಮಜ್ಞಾನವಂತೂ ತಾಮಸಿಗೆ ಬಹಳ ದೂರವಾಗಿಯೇ ಉಳಿಯುತ್ತದೆ. ತಮೋಗುಣವು ವಿವೇಕವನ್ನೇ ಹಾಳುಮಾಡಿಬಿಟ್ಟಿರುತ್ತದೆ. ಕತ್ತಲಿನಲ್ಲಿ ಯಾವುದೊಂದೂ ಕಾಣಿಸುವುದಿಲ್ಲ. ಕತ್ತಲಿನಲ್ಲಿ ಮಾಡಿದ ಕಾರ್ಯಗಳೆಲ್ಲವೂ ಪ್ರಮಾದಗಳೇ ಆಗುತ್ತವೆ. ಕತ್ತಲಿನ ರೂಪವಾದ ಗುಣವನ್ನು ಹೊಂದಿರುವ ಮನುಷ್ಯನೂ ಸಹ ಮಾಡಬಾರದ ಕಾರ್ಯವನ್ನು ಮಾಡುತ್ತಾನೆ. ಮಾಡಬೇಕಾದ ಕಾರ್ಯದ ಸ್ಮರಣೆಯೇ ಅವನಿಗೆ ಬರುವುದಿಲ್ಲ. ಆದುದರಿಂದ ತಮಸ್ಸು ಪ್ರಮಾದದೊಡನೆ ಸಂಗವನ್ನುಂಟುಮಾಡುವುದು ಸ್ವಾಭಾವಿಕವೇ ಆಗಿದೆ.)

o o o

ಗುಣಗಳ ವ್ಯಾಪಾರವನ್ನು ಇಲ್ಲಿ ಮತ್ತೆ ಸಂಕ್ಷೇಪವಾಗಿ ಹೇಳುತ್ತಾನೆ.

**ಜ್ಞಾನಂ....ಸಂಜಯತಿ** = ತಮಸ್ಸು ತನ್ನ ಆವರಣಾತ್ಮಕವಾದ ಸ್ವಭಾವದಿಂದ ಸತ್ತ್ವಗುಣದಿಂದುಂಟಾದ ವಿವೇಕಜ್ಞಾನವನ್ನು ಮುಚ್ಚಿ ಮತ್ತೆ ಪ್ರಮಾದದಲ್ಲಿ ತೊಡಗಿಸುತ್ತದೆ. ಪ್ರಮಾದ ಎಂದರೆ ಪ್ರಾಪ್ತವಾದ ಕರ್ತವ್ಯ ವನ್ನು ಮಾಡದಿರುವಿಕೆ. ಪ್ರಮಾದೋ ನಾಮ ಪ್ರಾಪ್ತಕರ್ತವ್ಯಾಕರಣಂ

(ಶಂ. ಭಾ.)

ಸತ್ತ್ವವೇ ಮುಂತಾದ ಗುಣಗಳ ಮಧ್ಯೆ ಬಂಧನಕ್ಕೆ ಕಾರಣವಾದುವು ಗಳಲ್ಲಿ ಮುಖ್ಯವಾದುವುಗಳನ್ನು ಇಲ್ಲಿ ಹೇಳುತ್ತಾನೆ. ಸತ್ತ್ವವು ಸುಖಸಂಗ

ಪ್ರಧಾನವಾದುದು. (ಜ್ಞಾನಸಂಗವೂ ಕೂಡ ಸುಖಕ್ಕೋಸ್ಕರವೇ ಇರುವುದು.) ರಜಸ್ಸು ಕರ್ಮಸಂಗಪ್ರಧಾನವಾದುದು. ( ರಾಗ-ತೃಷ್ಣಾ ಮುಂತಾದುವುಗಳು ಕೂಡ ಕರ್ಮದಲ್ಲಿಯೇ ಪರ್ಯವಸಾನಹೊಂದುತ್ತವೆ.) ತಮಸ್ಸಾದರೋ ವಸ್ತುವಿನ ಯಥಾರ್ಥತೆಯ ಜ್ಞಾನವನ್ನು ಆವರಿಸಿಕೊಂಡು ವಿಪರೀತಜ್ಞಾನಕ್ಕೆ ಕಾರಣವಾಗುವುದರಿಂದ ಕರ್ತವ್ಯಕ್ಕೆ ವಿಪರೀತವಾದ ಪ್ರವೃತ್ತಿಯಲ್ಲಿ ಸಂಗವನ್ನುಂಟುಮಾಡುವುದನ್ನೇ ಪ್ರಧಾನಗುಣವನ್ನಾಗಿ ಹೊಂದಿದೆ.

(ರಾ. ಭಾ.)

ಮಧ್ವಮತಾನುಸಾರಿಯಾದ ಒಂದು ಟೀಕೆಯಲ್ಲಿ ಈ ಶ್ಲೋಕದಲ್ಲಿರುವ ಕೆಲವು ಪದಗಳಿಗೆ ಹೀಗೆ ಅರ್ಥವನ್ನು ಹೇಳಿದೆ.

ಸತ್ತ್ವಂ–ಎಂದರೆ ಸತ್ತ್ವಗುಣವು ಮತ್ತು ಅದಕ್ಕೆ ಅಭಿಮಾನಿಯಾದ ಶ್ರೀದೇವೀ. ರಜಃ–ಎಂದರೆ ರಜೋಗುಣ ಮತ್ತು ಅದಕ್ಕೆ ಅಭಿಮಾನಿಯಾದ ಭೂದೇವೀ. ತಮಃ–ಎಂದರೆ ತಮೋಗುಣ ಮತ್ತು ಅದಕ್ಕೆ ಅಭಿಮಾನಿಯಾದ ದುರ್ಗಾದೇವೀ. ಸುಖೇ ಸಂಜಯತಿ = ಸುಖ ವಿಷಯದಲ್ಲಿ ತೊಡಗಿಸುತ್ತದೆ. ಕರ್ಮಣಿ = ಕರ್ಮವಿಷಯದಲ್ಲಿ. ಜ್ಞಾನಂ ಆವೃತ್ಯ = ಮನಸ್ಸಿನ ತತ್ತ್ವ ಜ್ಞಾನಶಕ್ತಿಯನ್ನು ತಡೆಗಟ್ಟಿ. ಪ್ರಮಾದೇ=ಅಧರ್ಮದಲ್ಲಿ ಧರ್ಮಬುದ್ಧಿಯನ್ನು ಉಂಟುಮಾಡುವಿಕೆಯೇ ಮುಂತಾದ ರೂಪದ ಪ್ರಮಾದದಲ್ಲಿ. ಉತ= ಪ್ರಮಾದದಲ್ಲಿ ಮಾತ್ರವಲ್ಲದೇ ಆಲಸ್ಯವೇ ಮುಂತಾದುವುಗಳಲ್ಲಿಯೂ ಕೂಡ.

**ಓಂ ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥೧೦॥**

ಭಾರತನೇ! ರಜಸ್ಸನ್ನೂ–ತಮಸ್ಸನ್ನೂ ತಿರಸ್ಕರಿಸಿ ಸತ್ತ್ವವುಂಟಾಗುತ್ತದೆ. ಸತ್ತ್ವವನ್ನೂ-ತಮಸ್ಸನ್ನೂ ತಿರಸ್ಕರಿಸಿ ರಜಸ್ಸುಂಟಾಗುತ್ತದೆ. ಅದರಂತೆ ಸತ್ತ್ವವನ್ನೂ–ರಜಸ್ಸನ್ನೂ ತಿರಸ್ಕರಿಸಿ ತಮಸ್ಸುಂಟಾಗುತ್ತದೆ.

* * *

(ಭಗವಂತನು ಈ ಶ್ಲೋಕದಲ್ಲಿ ಇನ್ನೂ ಒಂದು ರಹಸ್ಯವನ್ನು ಹೊರಗೆಡಹಿದ್ದಾನೆ. ಅದೇನೆಂದರೆ : ಎಲ್ಲ ವ್ಯವಹಾರಗಳಲ್ಲಿರುವ ಎಲ್ಲ ಮನುಷ್ಯ

ರಲ್ಲಿಯೂ ಈ ಮೂರು ಗುಣಗಳೂ ಇರುತ್ತವೆ. ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ಈ ಮೂರು ಗುಣಗಳೂ ಜನ್ಮತಃ ಬಂದಿದ್ದರೂ ಸಾಧನೆ ಯಿಂದ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಈ ಮೂರು ಗುಣಗಳಲ್ಲಿ ಯಾವ ಗುಣವನ್ನಾದರೂ ಪ್ರಧಾನವನ್ನಾಗಿ ರೂಢಿಸಿಕೊಳ್ಳಲು ಸಾಧ್ಯವಿದೆ. ಸತ್ತ್ವಗುಣವು ಮೇಲೆದ್ದು ಬರಬೇಕಾದರೆ ರಜಸ್ಸು ಮತ್ತು ತಮೋಗುಣಗಳನ್ನು ಕೆಳಕ್ಕೆ ತುಳಿಯುತ್ತದೆ. ರಜೋಗುಣವು ಮೇಲೆದ್ದು ಬರಬೇಕಾದರೆ ಸತ್ತ್ವ ಮತ್ತು ತಮೋಗುಣಗಳನ್ನು ತಿರಸ್ಕರಿಸುತ್ತದೆ. ತಮೋಗುಣವು ಮೇಲೆ ಬರಬೇಕಾದರೆ ಸತ್ತ್ವ-ರಜಸ್ಸುಗಳನ್ನು ತಿರಸ್ಕರಿಸಿ ಮೇಲೆ ಬರುತ್ತದೆ.)

O O O

ತ್ರಿಗುಣಗಳು ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಆದರೆ ಇವು ವಿರೋಧಿಸ್ವಭಾವಗಳಾದುದರಿಂದ ಪರಸ್ಪರಶತ್ರುಗಳೂ ಆಗಿವೆ. ಬೇರೆ ಎರಡು ಗುಣಗಳನ್ನು ಮೆಟ್ಟಿ ತನ್ನ ಉತ್ಕರ್ಷವನ್ನೇ ಸಾಧಿಸಲು ಈ ಮೂರು ಗುಣಗಳೂ ಪ್ರಯತ್ನಿಸುತ್ತಿರುತ್ತವೆ. ತ್ರಿಗುಣಾತೀತಸ್ಥಿತಿಯಲ್ಲಿ ಮಾತ್ರವೇ ಇವುಗಳ ಸಾಮ್ಯ.

ರಜಃ...ಭವತಿ = ರಜೋಗುಣ ಮತ್ತು ತಮೋಗುಣಗಳನ್ನೂ ಮೆಟ್ಟಿ ಯಾವಾಗ ಸತ್ತ್ವಗುಣವು ಹುಟ್ಟುತ್ತದೆಯೋ, ವೃದ್ಧಿಹೊಂದುತ್ತದೆಯೋ–ಆಗ ತನ್ನ ಸ್ವರೂಪವನ್ನು ಪಡೆದ ಆ ಸತ್ತ್ವಗುಣವು ತನ್ನ ಕಾರ್ಯವಾದ ಜ್ಞಾನ- ಸುಖ ಮುಂತಾದುವುಗಳನ್ನು ಪ್ರಾರಂಭಿಸುತ್ತದೆ. ಹಾಗೆಯೇ ರಜೋಗುಣವು ಸತ್ತ್ವವನ್ನೂ-ತಮಸ್ಸನ್ನೂ ಮೆಟ್ಟಿ ವೃದ್ಧಿಹೊಂದಿದಾಗ ಕರ್ಮಗಳಲ್ಲಿ ತೃಷ್ಣೆ ಯನ್ನು ಉಂಟುಮಾಡುವುದೇ ಮುಂತಾದ ತನ್ನ ಕೆಲಸವನ್ನು ಆರಂಭಿಸು ತ್ತದೆ. ಸತ್ತ್ವ-ರಜಸ್ಸುಗಳನ್ನು ಮೆಟ್ಟಿ ತಮಸ್ಸು ವೃದ್ಧಿಹೊಂದಿದಾಗ ಜ್ಞಾನವನ್ನು ಆವರಿಸುವುದೇ ಮುಂತಾದ ಕಾರ್ಯವನ್ನು ಆರಂಭಿಸುತ್ತದೆ. (ಶಂ. ಭಾ.)

ಸತ್ತ್ವವೇ ಮುಂತಾದ ಮೂರು ಗುಣಗಳೂ ಪ್ರಕೃತಿಯೊಡನೆ ಸಂಸೃಷ್ಟ ವಾಗಿರುವ ಆತ್ಮಸ್ವರೂಪಕ್ಕೆ ಸೇರಿಕೊಂಡಿರುವುದರಿಂದ ಯಾವಾಗಲೂ ಜೊತೆ ಯಲ್ಲಿಯೇ ಇರತಕ್ಕುವು ಮತ್ತು ಸಹೋದರರು. ಹಾಗಿದ್ದರೂ ಪರಸ್ಪರ ವಿರುದ್ಧವಾದ ಕಾರ್ಯಗಳನ್ನು ಆರಂಭಿಸುತ್ತವೆ. ಚೇತನನ ಪ್ರಾಚೀನಕರ್ಮ

ಮತ್ತು ಆಹಾರವೈಷಮ್ಯದಿಂದ ಇವುಗಳು ಪರಸ್ಪರ ಸಮುದ್ಭವಕ್ಕೂ ಕಾರಣವಾಗುತ್ತವೆ ; ಅಭಿಭವಕ್ಕೂ ಕಾರಣವಾಗುತ್ತವೆ. ಕೆಲವು ವೇಳೆ ರಜಸ್ತಮಸ್ಸುಗಳನ್ನು ಮೆಟ್ಟಿ ಸತ್ತ್ವವು ಉದ್ರಿಕ್ತವಾಗುತ್ತದೆ. ಕೆಲವು ವೇಳೆ ತಮಃಸತ್ತ್ವಗಳನ್ನು ಮೆಟ್ಟಿ ರಜಸ್ಸು ಉದ್ರಿಕ್ತವಾಗುತ್ತದೆ. ಕೆಲವು ವೇಳೆ ಸತ್ತ್ವ-ರಜಸ್ಸುಗಳನ್ನು ಮೆಟ್ಟಿ ತಮಸ್ಸು ಉದ್ರಿಕ್ತವಾಗುತ್ತದೆ. (ರಾ. ಭಾ.)

**ಸತ್ತ್ವಂ ಭವತಿ** = ಸತ್ತ್ವ-ರಜಸ್ತಮಸ್ಸುಗಳಲ್ಲಿ ಒಂದೊಂದೂ ಉತ್ಕಟವಾದಾಗ ತಮ್ಮ-ತಮ್ಮ ಕಾರ್ಯಮಾಡಲು ಸಮರ್ಥವಾಗುತ್ತವೆ. ಇಲ್ಲಿ ಸತ್ತ್ವವೇ ಮುಂತಾದ ಶಬ್ದಗಳು ಆಯಾ ಗುಣಗಳನ್ನು ಮಾತ್ರ ಹೇಳುತ್ತವೆ. ಆಯಾ ಗುಣಗಳಿಗೆ ಅಭಿಮಾನಿಗಳಾದ ದೇವಿಯರನ್ನು ಹೇಳುವುದಿಲ್ಲ. ಅವರು ಉದಾಸೀನರಾಗಿಯೇ ಇರುತ್ತಾರೆ ಮತ್ತು ಆ ಗುಣಗಳಿಗೆ ಪ್ರೇರಕನಾದವನು ಈಶ್ವರನೇ ಎಂದು ತಿಳಿಯಬೇಕು. (ಮ. ಸಂ. ಟೀಕಾ)

**ಓಂ ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥೧೧॥**

ಈ ದೇಹದಲ್ಲಿ ಎಲ್ಲ ದ್ವಾರಗಳಲ್ಲಿಯೂ ಯಾವಾಗ ಜ್ಞಾನವೆಂಬ ಪ್ರಕಾಶವುಂಟಾಗುವುದೋ–ಆಗ ಸತ್ತ್ವವು ಬೆಳೆದುಕೊಂಡಿದೆ ಎಂದು ತಿಳಿಯಬೇಕು.

* * *

(ದೇಹದಲ್ಲಿರುವ ಸರ್ವದ್ವಾರಗಳಲ್ಲಿಯೂ ಜ್ಞಾನದ ಪ್ರಕಾಶವು ಯಾವಾಗ ಕಾಣಿಸುತ್ತದೆಯೋ ಆಗ ಆ ದೇಹಿಯು ಸತ್ತ್ವಗುಣದಿಂದ ಆವೃತನಾಗಿದ್ದಾನೆಂದು ತಿಳಿ ಎನ್ನುತ್ತಾನೆ ಶ್ರೀಕೃಷ್ಣ. ಜ್ಞಾನದ ಬೆಳಕು ದ್ವಾರಗಳಲ್ಲಿ ಹೊರಸೂಸುವುದು ಹೇಗೆ? ಎಂದರೆ : ಅಂತಃಕರಣದಲ್ಲಿರುವ ಜ್ಞಾನವನ್ನಾಗಲೀ, ಅಜ್ಞಾನವನ್ನಾಗಲೀ, ರಾಗವನ್ನಾಗಲೀ ನಾವು ದೇಹಿಯ ಹೊರಗಿನ ಅವಯವಗಳಿಂದ ಕಾಣಬಹುದು. ಅವನ ಅವಯವಗಳು ಅವನ ಅಂತರಂಗವನ್ನು ಬಹಿರಂಗಪಡಿಸುತ್ತವೆ. ಕಣ್ಣುಗಳಲ್ಲೇ ಸಾತ್ತ್ವಿಕತೆಯು ಹೊರ ಹೊಮ್ಮುತ್ತಿರುತ್ತದೆ. ಅದರಲ್ಲಿ ಕ್ರೌರ್ಯವಾಗಲೀ, ರಾಗವಾಗಲೀ ಇರುವುದಿಲ್ಲ. ಸೌಮ್ಯತೆಯಿರುತ್ತದೆ. ಆ ಕಣ್ಣುಗಳನ್ನೇ ಪುನಃ ಪುನಃ ನೋಡ

ಬೇಕೆನ್ನಿಸುತ್ತದೆ. ಇದು ಅವನ ಅಂತಃಕರಣದಲ್ಲಡಗಿರುವ ಜ್ಞಾನದ ಅಥವಾ ಸತ್ತ್ವಗುಣದ ಪ್ರಭಾವ. ಮಾತಿನಲ್ಲಿ ಮಾರ್ದವವಿರುತ್ತದೆ. ಆ ಮಾತು ಕೂಡ ಜ್ಞಾನಕ್ಕೆ ಸಂಬಂಧಿಸಿದುದೇ ಆಗಿರುತ್ತದೆ. ಕೆಟ್ಟಮಾತು, ಬೈಗುಳ, ಪರ ದೂಷಣೆ–ಇತ್ಯಾದಿಗಳು ಅವನ ಬಾಯಿಂದ ಹೊರಡುವುದಿಲ್ಲ. ಅಂತಹವನ ಮಾತನ್ನು ಇನ್ನೂ ಕೇಳಬೇಕೆನ್ನಿಸುತ್ತಿರುತ್ತದೆ. ಅವನ ಮಾತಿಗೂ ಉಪನಿ ಷತ್ತುಗಳ ಮಾತಿಗೂ ವ್ಯತ್ಯಾಸವೇನೂ ಇರುವುದಿಲ್ಲ. ಅವನ ಕಿವಿಗಳು ಯಾವಾಗಲೂ ಭಗವನ್ನಾಮಗಳನ್ನು ಕೇಳುವುದರಲ್ಲಿಯೇ ಆಸಕ್ತವಾಗಿರುತ್ತವೆ. ಧರ್ಮಕ್ಕೆ ವಿರುದ್ಧವಾದ ಮಾತುಗಳನ್ನು ಕೇಳುವುದರಲ್ಲಿ ಆ ಕಿವಿಗಳಿಗೆ ಆಸಕ್ತಿಯಿರುವುದಿಲ್ಲ. ಪರನಿಂದೆಯನ್ನು ಆತನ ಕಿವಿಗಳು ಕೇಳಲು ಇಷ್ಟಪಡು ವುದಿಲ್ಲ. ಭಗವಂತನ ಸಂಬಂಧವಾದ ಕಥೆಗಳನ್ನು ಸದಾಕಾಲದಲ್ಲಿಯೂ ಕೇಳಬೇಕೆಂದು ತವಕಿಸುತ್ತಿರುತ್ತವೆ. ಅವನ ಮುಖವು ಶಾಂತವಾಗಿರುತ್ತದೆ. ತೇಜೋಮಯವಾಗಿರುತ್ತದೆ. ಇಲ್ಲಿ **ಸರ್ವದ್ವಾರ**–ಎಂದರೆ ಐದು ಜ್ಞಾನೇಂದ್ರಿಯಗಳು ; ನವದ್ವಾರಗಳಲ್ಲ. ಅಂತಃಕರಣದಲ್ಲಿ ಉದಯವಾದ ಜ್ಞಾನವು ಹೊರಕಾಣಬೇಕಾದರೆ ಜ್ಞಾನೇಂದ್ರಿಯಗಳ ಮೂಲಕವೇ. ಮುಖ, ಮಾತು, ಕಣ್ಣುಗಳು ಮತ್ತು ಅವನ ಶ್ರವಣೇಚ್ಛೆಗಳಿಂದಲೇ ಮನುಷ್ಯನಲ್ಲಿರುವ ಸತ್ತ್ವಗುಣದ ವೃದ್ಧಿಯನ್ನು ನಾವು ಕಾಣಬಹುದಾಗಿದೆ. ಮೇಲೆ ಹೇಳಿದ ಗುರುತುಗಳು ಮನುಷ್ಯನಲ್ಲಿ ಯಾವಾಗ ಕಂಡುಬರುತ್ತವೆಯೋ ಆಗ ಅವನಲ್ಲಿ ಸತ್ತ್ವಗುಣವು ವೃದ್ಧಿಹೊಂದಿದೆ ಎಂದು ತಿಳಿಯಬೇಕು.)

o o o

**ಸರ್ವದ್ವಾರೇಷು** = ಆತ್ಮದ ಉಪಲಬ್ಧಿಗೆ ದ್ವಾರವಾಗಿರುವ ಕಿವಿಯೇ ಮುಂತಾದ ಇಂದ್ರಿಯಗಳಲ್ಲಿ.

**ಪ್ರಕಾಶಃ** = ಅಂತಃಕರಣ ಅಥವಾ ಬುದ್ಧಿಯ ವೃತ್ತಿಗೆ ಪ್ರಕಾಶ ಎಂದು ಹೆಸರು. ಇದೇ ಜ್ಞಾನ. ಈ ಜ್ಞಾನವೆಂಬ ಪ್ರಕಾಶವು ಶರೀರದ ಎಲ್ಲ ದ್ವಾರ ಗಳಲ್ಲಿಯೂ ಯಾವಾಗ ಉತ್ಪನ್ನವಾಗುತ್ತದೆಯೋ ಆಗ ಆ ಪ್ರಕಾಶರೂಪವಾದ ಗುರುತಿನಿಂದ ಸತ್ತ್ವಗುಣವು ವೃದ್ಧಿಯಾಗಿದೆ ಎಂದು ತಿಳಿಯಬೇಕು.

(ಶಂ. ಭಾ.)

**ಯದಾ ಪ್ರಕಾಶೇ ಜ್ಞಾನಂ ಉಪಜಾಯತೇ ತದಾ** = ವಸ್ತು ಯಾಥಾತ್ಮ್ಯದ ಪ್ರಕಾಶದಲ್ಲಿ ಯಾವಾಗ ಜ್ಞಾನವು ಉಂಟಾಗುತ್ತದೆಯೋ ಆಗ. (ರಾ. ಭಾ.)

**ಪ್ರಕಾಶಃ**= ಜ್ಞಾನಾತ್ಮಕವಾದ ಪ್ರಕಾಶವು. (ಮ. ಟೀಕಾ)

**ಓಂ ಲೋಭಃ ಪ್ರವೃತ್ತಿರಾರಮ್ಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ॥೧೨॥**

ಭರತಶ್ರೇಷ್ಠನೇ! ಲೋಭ, ಪ್ರವೃತ್ತಿ, ಕರ್ಮಗಳ ಆರಂಭ, ಅಶಾಂತಿ, ಸ್ಪೃಹೆ–ಇವುಗಳು ರಜಸ್ಸು ಬೆಳೆದುಕೊಂಡರೆ ಉಂಟಾಗುವುವು.

* * *

(ರಜೋಗುಣದ ಆವರಣದಿಂದ ಆಗುವ ಪರಿಣಾಮಗಳೇನು? ರಜೋಗುಣವು ವೃದ್ಧಿಯಾದಾಗ ಮನುಷ್ಯನು ಹೇಗೆ ವರ್ತಿಸುತ್ತಾನೆ?– ಎಂಬುದನ್ನು ಭಗವಂತನು ಈ ಶ್ಲೋಕದಲ್ಲಿ ವಿವರಿಸಿದ್ದಾನೆ.

ಪ್ರಪಂಚದಲ್ಲಿ ಹೆಚ್ಚಾಗಿ ರಜೋಗುಣವೇ ಮುಖ್ಯವಾಗಿರುವುದರಿಂದ ಇದನ್ನು ಗುರುತಿಸಲು ಅಷ್ಟೇನೂ ಕಷ್ಟವಾಗುವುದಿಲ್ಲ. ನಾವೆಲ್ಲರೂ ಸಾಮಾನ್ಯ ವಾಗಿ ರಜೋಗುಣಿಗಳೇ. ಪ್ರಮಾಣದಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು.

**ಲೋಭಃ** = ಹಣದ ಲಾಲಸೆಗೆ ಲೋಭ ಎಂದು ಹೆಸರು. ಹಣವು ಯಾರಿಗೆ ಬೇಡ? ಎಲ್ಲರಿಗೂ ಹಣವು ಬೇಕೇ ಬೇಕು. ಆದರೆ ಬಹುಮಂದಿ ಪರದ್ರವ್ಯವನ್ನು ಅಪಹರಿಸುವುದು, ತನ್ನ ದ್ರವ್ಯವನ್ನು ಒಳ್ಳೆಯ ಕೆಲಸಕ್ಕಾಗಿ ತ್ಯಾಗಮಾಡದೇ ಇರುವುದು–ಮುಂತಾದ ರೀತಿಯಲ್ಲಿ ದುರಾಸೆಯನ್ನು ಹಣದ ಬಗೆಗೆ ಹೊಂದಿರುತ್ತಾರೆ. ಇದೇ ಲೋಭ. ಈ ಲೋಭಕ್ಕೆ ಎಲ್ಲರೂ ಕಟ್ಟುಬಿದ್ದಿರುವವರೇ ಆಗಿದ್ದಾರೆ. ರಜೋಗುಣಿಯಲ್ಲಿ ಈ ಲೋಭವು ಮುಖ್ಯ ಗುಣವಾಗಿರುತ್ತದೆ. ಲಾಭಃ –ಹಣವು ಹೆಚ್ಚು-ಹೆಚ್ಚು ಬರಬೇಕೆಂಬ ಪ್ರಯತ್ನ. ಅನಂತರ ಲೋಭಃ–ಬಂದ ಹಣವನ್ನು ಕೂಡಿಡಬೇಕೆಂಬ ಆಸೆ. ಅಂತಹವನೇ ಲೋಭಿ ಎನಿಸಿಕೊಳ್ಳುತ್ತಾನೆ.

**ಪ್ರವೃತ್ತಿಃ** = ಕರ್ಮಗಳಲ್ಲಿ ಎರಡು ಮಾರ್ಗಗಳು. ಒಂದು ಪ್ರವೃತ್ತಿ

ಮಾರ್ಗ, ಮತ್ತೊಂದು ನಿವೃತ್ತಿಮಾರ್ಗ. ಇವುಗಳಲ್ಲಿ ಪ್ರವೃತ್ತಿಮಾರ್ಗವು ಪ್ರಾರಂಭವಾಗುವುದು ರಜಸ್ಸಿನಿಂದ. ರಜೋಗುಣವಿಲ್ಲದಿದ್ದರೆ ಸೃಷ್ಟಿಯೇ ಮುಂದುವರಿಯುತ್ತಿರಲಿಲ್ಲ. ನಾನಾವಿಧವಾದ ಕಾರ್ಯಗಳನ್ನು ಮಾಡಬೇಕೆಂದು ಮನಸ್ಸು ಜಾಗ್ರತಗೊಳ್ಳುವುದಕ್ಕೆ ಪ್ರವೃತ್ತಿ ಎಂದು ಹೆಸರು. ಸಂಸಾರವನ್ನು ಬೆಳೆಸಿಕೊಂಡು ಹೋಗುವುದಕ್ಕೂ ಪ್ರವೃತ್ತಿ ಎಂದು ಹೆಸರು. ನಾನಾವಿಧವಾದ ಕಾಮ್ಯಕರ್ಮಗಳಲ್ಲಿ, ಲೌಕಿಕಕರ್ಮಗಳಲ್ಲಿ, ಯೋಚನೆಗಳಲ್ಲಿ ತೊಡಗುವುದೇ ಪ್ರವೃತ್ತಿ.

**ಆರಮ್ಭಃ** = ಈ ರಜೋಗುಣವು ಅನೇಕಾನೇಕಕಾರ್ಯಗಳನ್ನು ಆರಂಭಿಸುವಂತೆ ಪ್ರಚೋದಿಸುತ್ತದೆ. ಅವುಗಳಲ್ಲಿ ಉಂಟಾಗಬಹುದಾದ ಕಷ್ಟ-ನಷ್ಟಗಳ ಕಡೆಗೆ ಯೋಚಿಸಲು ಅವಕಾಶವನ್ನೇ ಕೊಡುವುದಿಲ್ಲ.

**ಕರ್ಮಣಾಂ ಆರಮ್ಭಃ** = ಸತ್ತ್ವಗುಣವು ಕೆಲಸಮಾಡುತ್ತಿರುವಾಗಲಾದರೋ ಕರ್ಮಗಳ ಪ್ರವೃತ್ತಿಯು ನಿಂತು ಉಪಶಮನವುಂಟಾಗಿರುತ್ತದೆ. ಎಲ್ಲ ಕಾರ್ಯಗಳನ್ನೂ ಆರಂಭಿಸುವುದು ರಜೋಗುಣದ ಕಾರ್ಯ. ಹಾಗೂ 'ಸಂಪಾದನೆಗೆ ಯಾವ ಕಾರ್ಯವನ್ನು ಆರಂಭಿಸಬೇಕು? ಯಾವ ಕಾರ್ಯವನ್ನು ಆರಂಭಿಸಕೂಡದು?–ಎಂಬ ವಿವೇಚನೆಯೇ ಇರುವುದಿಲ್ಲ. ಪ್ರಾರಂಭಿಸಿದ ಕಾರ್ಯವು ಯಶಸ್ವಿಯಾಗಿ ಮುಗಿಯುವುದೇ?–ಎಂಬ ವಿವೇಚನೆಯೂ ಇರುವುದಿಲ್ಲ. ಅವಸರವಾಗಿಯೇ ಕಾರ್ಯಗಳನ್ನು ಆರಂಭಿಸುತ್ತಾನೆ. ಅವಸರವಾಗಿಯೇ ಮುಗಿಸಿಯೂ ಬಿಡುತ್ತಾನೆ. ಅವಸರವಾಗಿಯೇ ಮತ್ತೊಂದು ಕಾರ್ಯವನ್ನೂ ಆರಂಭಿಸುತ್ತಾನೆ. ಇದು ರಜೋಗುಣಿಯ ಕಾರ್ಯವಾಗಿರುತ್ತದೆ.

**ಅಶಮಃ** = ಶಮ ಎಂದರೆ ಶಾಂತಿ. ಅಶಮಃ ಎಂದರೆ ಅಶಾಂತಿ. ಯಾವಾಗಲೂ ರಾಜಸಿಯ ಮನಸ್ಸಿನಲ್ಲಿ ಅಶಾಂತಿಯೇ ಇರುತ್ತದೆ. ವಾಸಿಸಲು ಅರಮನೆಯಂತಹ ಸೌಧವಿರುತ್ತದೆ. ಸೇವಕರಿರುತ್ತಾರೆ. ರೂಪವತಿಯಾದ ಹೆಂಡತಿಯೂ ಇರುತ್ತಾಳೆ. ಬೇಕಾದಷ್ಟು ಹಣವೂ ಇರುತ್ತದೆ. ಆದರೂ ಸಹ ರಜೋಗುಣಿಗೆ ಮನಸ್ಸಿನಲ್ಲಿ ಶಾಂತಿಯೆಂಬುದು ಕಿಂಚಿತ್ತಾದರೂ ಇರುವುದಿಲ್ಲ.

ಸ್ಪೃಹಾ ಎಂದರೆ ಆಸೆ. ಸಮುದ್ರವನ್ನು ನೀರಿನಿಂದ ತುಂಬಲಾಗುವು

ದಿಲ್ಲ ; ಅಗ್ನಿಗೆ ಸೌದೆಯನ್ನು ಹಾಕಿ ತಣಿಸಲಾಗುವುದಿಲ್ಲ–ಎಂದು ಹಿರಿಯರು ಹೇಳುತ್ತಾರೆ. ಆದರೆ ರಜೋಗುಣೆಯ ಆಸೆ ಎಂಬುದರ ಮುಂದೆ ಸಮುದ್ರ ವಾಗಲೀ–ಅಗ್ನಿಯಾಗಲೀ ನಾಚಬೇಕಾಗುತ್ತದೆ. ಆಸೆ ಎಂಬುದಕ್ಕೆ ಮಿತಿ ಎಂಬುದೇ ಇಲ್ಲ. ಅದು ಬೆಳೆಯುತ್ತಲೇ ಹೋಗುತ್ತದೆ. ರಜಸ್ಸು ವೃದ್ಧಿಯಾದರೆ ಇವುಗಳೆಲ್ಲವೂ ದೇಹಿಯಲ್ಲಿ ಹುಟ್ಟಿಕೊಳ್ಳುತ್ತವೆ ಎನ್ನುತ್ತಾನೆ ಭಗವಂತ.)

O O O

ಲೋಭಃ= ಪರದ್ರವ್ಯಗಳನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆ. ಪ್ರವೃತ್ತಿಃ = ಸಾಮಾನ್ಯವಾಗಿರುವ ಸಾಂಸಾರಿಕವಾದ ಚೇಷ್ಟೆ. **ಆರಮ್ಭಃ** = ಕೆಲಸಗಳ ಪ್ರಾರಂಭ. **ಅಶಮಃ** = ಶಾಂತಿಯಿಲ್ಲದೇ ಇರುವಿಕೆ. ಹರ್ಷ, ರಾಗ ಮುಂತಾದುವುಗಳಲ್ಲಿ ತೊಡಗುವಿಕೆ. ಸ್ಪೃಹಾ = ಲಾಲಸೆ. ಸಾಮಾನ್ಯವಾಗಿ ಎಲ್ಲ ವಸ್ತುಗಳ ವಿಷಯದಲ್ಲಿಯೂ ಅದು ಬೇಕು ಎಂಬ ಬಯಕೆ. (ಶಂ. ಭಾ.)

ಲೋಭಃ = ದ್ರವ್ಯವನ್ನು ತ್ಯಾಗಮಾಡದೇ ಇರುವ ಸ್ವಭಾವ. ಪ್ರವೃತ್ತಿಃ = ಪ್ರಯೋಜನವೇ ಇಲ್ಲದಿದ್ದರೂ ಚಲಿಸುವ ಸ್ವಭಾವ. **ಕರ್ಮಣಾಂ ಆರಮ್ಭಃ** = ಫಲಕ್ಕೆ ಸಾಧನವಾದ ಕರ್ಮಗಳನ್ನು ಪ್ರಾರಂಭಿಸುವಿಕೆ. **ಅಶಮಃ** = ಇಂದ್ರಿಯಗಳು ಉದ್ರೇಕಗೊಂಡಿರುವಿಕೆ. ಸ್ಪೃಹಾ = ವಿಷಯೇಚ್ಛೆ. ಇವುಗಳೆಲ್ಲಾ ಯಾವಾಗ ಇರುತ್ತವೆಯೋ ಆಗ ರಜೋಗುಣವು ವೃದ್ಧಿಹೊಂದಿದೆ ಎಂದು ತಿಳಿಯಬೇಕು. (ರಾ. ಭಾ.)

ಲೋಭಃ = ಹಣ ಮುಂತಾದುವುಗಳನ್ನು ತ್ಯಾಗಮಾಡದಿರುವ ಇಚ್ಛೆ. ಪ್ರವೃತ್ತಿಃ = ವ್ಯರ್ಥವಾದ ಉದ್ಯಮ. **ಕರ್ಮಣಾಂ ಆರಮ್ಭಃ** = ಕಾಮ್ಯಕರ್ಮಗಳನ್ನು ಪ್ರಾರಂಭಿಸುವಿಕೆ. **ಅಶಮಃ** = ಚಿತ್ತದ ಉಪರತಿ ಯಿಲ್ಲದೇ ಇರುವಿಕೆ. ಸ್ಪೃಹಾ = ದೊರಕದೇ ಇರುವ ಪದಾರ್ಥಗಳ ಬಗೆಗೆ ಅಭಿಲಾಷೆ. (ಮ. ಟೀಕಾ)

**ಓಂ ಅಪ್ರಕಾಶೋऽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನನ್ದನ ॥೧೩॥**

ಕುರುನಂದನ! ತಮಸ್ಸು ವೃದ್ಧಿಹೊಂದಿದರೆ ಅಪ್ರಕಾಶ, ಪ್ರವೃತ್ತಿಯಿಲ್ಲದಿರುವುದು, ಪ್ರಮಾದ, ಮೋಹ–ಇವುಗಳು ಉಂಟಾಗುವುವು.

* * *

(ಅಪ್ರಕಾಶ ಎಂದರೆ ಸತ್ತ್ವಗುಣಕ್ಕೆ ತೀರಾ ವಿರುದ್ಧವಾಗಿ ಇಂದ್ರಿಯಗಳ ಸರ್ವದ್ವಾರಗಳಲ್ಲಿಯೂ, (ಐದು ಜ್ಞಾನೇಂದ್ರಿಯಗಳಲ್ಲಿಯೂ) ತಮಸ್ಸೇ ಹೊರಸೂಸುತ್ತಿರುವುದು. ಈ ಗುಣವುಳ್ಳವನಿಗೆ ಸಾಮಾನ್ಯವಾಗಿ ಕಣ್ಣುಗಳು ಯಾವಾಗಲೂ ಕೆಂಪಾಗಿರುವಿಕೆ, ಬಾಯಲ್ಲಿ ಯಾವಾಗಲೂ ಅಪಶಬ್ದಗಳು, ಹೊಲಸು ಮಾತುಗಳನ್ನೇ ಹೇಳುವ ಮತ್ತು ಕೇಳುವ ಆಸೆ–ಇತ್ಯಾದಿಗಳು ಇರುತ್ತವೆ. **ಅಪ್ರವೃತ್ತಿಃ** = ಸಾತ್ತ್ವಿಕನಿಗೂ ಕರ್ಮಗಳಲ್ಲಿ ಪ್ರವೃತ್ತಿಯಿರುವುದಿಲ್ಲ. ಧರ್ಮವಿರುದ್ಧವಾದ ಸಾಂಸಾರಿಕಕರ್ಮಗಳನ್ನು ಅವನು ಆರಂಭಿಸುವುದಿಲ್ಲ. ತಾಮಸಿಯದಾದರೋ ಕೇವಲ ಜಾಡ್ಯ. ಆದರೆ ಸಾತ್ತ್ವಿಕನ ಅಪ್ರವೃತ್ತಿಯು ಸಂಸಾರಕ್ಕೆ ಅಂಟಿರಕೂಡದೆಂಬ ಉದ್ದೇಶದಿಂದ. ತಾಮಸಿಯ ಅಪ್ರವೃತ್ತಿಯು ಕೆಲಸಮಾಡಬೇಕಾಗುವುದೆಂಬ ಅಲಸಿಕೆಯಿಂದ. ಇವನಿಗೆ ಯಾವಾಗಲೂ ಕೆಲಸಮಾಡುವುದೇ ಬೇಡ. ಸದಾ ನಿದ್ರಿಸುತ್ತಿರಬೇಕು. ಈ ವಿಧವಾದ ಪ್ರವೃತ್ತಿ ಇವನದು. **ಪ್ರಮಾದಃ** = ಕೆಲಸಗಳಲ್ಲಿ ಸಾವಧಾನತೆಯಿಲ್ಲದಿರುವುದು. ಆದರಿಂದ ಕೆಲಸಗಳನ್ನು ಹುಚ್ಚಾಪಟ್ಟೆ ಮಾಡುವುದು. **ಮೋಹ** ಎಂದರೆ ವಿವೇಕಶೂನ್ಯತೆ ಅಥವಾ ಮೈಮರೆಯುವಿಕೆ. ಮಿತಿಮೀರಿ ತೂಕಡಿಸುತ್ತಾ, ಆಕಳಿಸುತ್ತಾ, ಮೈಮುರಿಯುತ್ತಾ ಇರುವುದು. ತಮಸ್ಸು ವೃದ್ಧಿಯಾದರೆ ಈ ವಿಧವಾದ ಲಕ್ಷಣಗಳು ಮನುಷ್ಯನಲ್ಲಿ ಕಂಡುಬರುತ್ತವೆ.)

O O O

**ಅಪ್ರಕಾಶಃ** = ಅತ್ಯಂತವಾದ ಅವಿವೇಕ. **ಅಪ್ರವೃತ್ತಿಃ** = ಪ್ರವೃತ್ತಿಯ ಅಭಾವ. **ಪ್ರಮಾದಃ** = ಅದರ ಕಾರ್ಯವಾದ ಅಸಾವಧಾನತೆ. **ಮೋಹಃ** = ಅವಿವೇಕರೂಪವಾದ ಮೌಢ್ಯ. (ಶಂ. ಭಾ.)

**ಅಪ್ರಕಾಶಃ** = ಜ್ಞಾನವು ಹುಟ್ಟದೇ ಇರುವಿಕೆ. **ಅಪ್ರವೃತ್ತಿಃ** = ಸ್ತಬ್ಧತೆ. **ಪ್ರಮಾದಃ** = ಅಸಾವಧಾನತೆ. ಇದರ ಫಲ ಅಕಾರ್ಯದಲ್ಲಿ ಪ್ರವೃತ್ತಿ. **ಮೋಹಃ** = ವಿಪರೀತಜ್ಞಾನ. (ರಾ. ಭಾ.)

**ಅಪ್ರಕಾಶಃ** = ಕಿವಿಯೇ ಮುಂತಾದುವುಗಳಲ್ಲಿ ಶಬ್ದವೇ ಮುಂತಾದ ಜ್ಞಾನವು ಉಂಟಾಗದೇ ಇರುವಿಕೆ. **ಅಪ್ರವೃತ್ತಿಃ** = ಅನುಪಕ್ರಮ. **ಪ್ರಮಾದಃ** = ಅನವಧಾನತೆ. **ಮೋಹಃ** = ವಿಪರ್ಯಯ. (ಮ. ಟೀಕಾ)

**ಓಂ ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥೧೪॥**

ಸತ್ತ್ವಗುಣವು ವೃದ್ಧಿಹೊಂದಿದ ಸಮಯದಲ್ಲಿ ದೇಹಧಾರಿಯು ಯಾವಾಗ ಪ್ರಲಯವನ್ನು ಹೊಂದುವನೋ ಆಗ ಅವನು ಉತ್ತಮವಿದರ ದೋಷರಹಿತವಾದ ಲೋಕಗಳನ್ನು ಹೊಂದುತ್ತಾನೆ.

* * *

(ಜನ್ಮಾಂತರಗಳಲ್ಲಿ ಈ ಗುಣಗಳಿಂದಾಗುವ ಫಲವನ್ನು ಶ್ರೀಕೃಷ್ಣನು ಹೇಳುತ್ತಾನೆ.

ದೇಹಿಯ ಅವಸಾನಕಾಲಕ್ಕೆ ಅವನಲ್ಲಿ ಸತ್ತ್ವಗುಣವೇ ವೃದ್ಧಿಯಾಗಿದ್ದು ದಾದರೆ ಅವನು ಒಳ್ಳೆಯ ಗುಣಗಳುಳ್ಳ ಜ್ಞಾನಿಗಳ ನಿರ್ಮಲವಾದ ಲೋಕಗಳನ್ನು ಹೊಂದುತ್ತಾನೆ. **ಉತ್ತಮವಿದಾಂ**–ಎಂಬುದಕ್ಕೆ ಉತ್ತಮ ತತ್ತ್ವಗಳನ್ನರಿತವರ ಅಥವಾ ದೇವಾದಿಗಳ ನಿರ್ಮಲವಾದ ಲೋಕಗಳು– ಎಂದರೆ ಸ್ವರ್ಗಾದಿಲೋಕಗಳು. ಹಿರಣ್ಯಗರ್ಭನೇ ಮೊದಲಾದ ಉತ್ತಮರಿಗೆ ದೊರೆಯುವಂತಹ ಪಾಪರಹಿತವಾದ ಲೋಕಗಳು. ಪರ್ಯಾಯತಃ–ಪುಣ್ಯ ಲೋಕಗಳು ಎಂದು ಅರ್ಥಮಾಡಬಹುದಾಗಿದೆ. ಯದ್ಯಪಿ ಇಲ್ಲಿ ಶ್ರೀಕೃಷ್ಣನು ಸತ್ತ್ವವೃದ್ಧಿಯಿದ್ದವನು ಪುನರ್ಜನ್ಮವನ್ನು ಪಡೆಯುತ್ತಾನೆಂದು, ರಾಜಸಿಗಳಿಗೆ ಅಥವಾ ತಾಮಸಿಗಳಿಗೆ ಹೇಳಿರುವಂತೆ ಹೇಳಿರದಿದ್ದರೂ, ಉತ್ತಮಲೋಕ ಗಳನ್ನು ಎಂದು ಹೇಳಿರುವುದರಿಂದಲೇ ಪುನರಾವೃತ್ತಿಯಿರುವ ಲೋಕಗಳು ಎಂದು ಅರ್ಥವಾಗುತ್ತದೆ. ಅಲ್ಲಿ ಅನೇಕ ಸಾವಿರ ವರ್ಷಗಳವರೆಗೆ ಸುಖ ವಾಗಿದ್ದು ಪುನಃ ಅವನು ಮನುಷ್ಯಲೋಕದಲ್ಲಿ **ಶುಚೀನಾಂ ಶ್ರೀಮತಾಂ ಗೇಹೇ**–ಶುಚಿಗಳಾದವರ, ಶ್ರೀಮಂತರಾದವರ ಮನೆಯಲ್ಲಿ ಹುಟ್ಟ ಬೇಕಾಗುತ್ತದೆ.)

o o o

ಮರಣಸಮಯದ ಅವಸ್ಥೆಯ ಮೂಲಕ ಉಂಟಾಗುವ ಫಲವೂ ಕೂಡ

ಸಂಗ ಮತ್ತು ರಾಗಗಳಿಂದ ಉಂಟಾಗತಕ್ಕದ್ದು ಮತ್ತು ಗುಣಜನ್ಯವೇ ಆಗಿದೆ– ಎಂಬುದನ್ನು ತೋರಿಸಲು ಈ ಶ್ಲೋಕವನ್ನು ಹೇಳುತ್ತಾನೆ. **ಉತ್ತಮವಿದಾಂ**= ಮಹತ್ತು ಮುಂತಾದ ತತ್ತ್ವಗಳನ್ನು ಬಲ್ಲವರ. (ಶಂ. ಭಾ.)

**ಉತ್ತಮವಿದಾಂ** = ಉತ್ತಮ ತತ್ತ್ವವನ್ನು ಬಲ್ಲವರ, ಆತ್ಮ ಯಾಥಾರ್ಥ್ಯವನ್ನು ಬಲ್ಲವರ, **ಲೋಕಾನ್** =ಸಮೂಹಗಳನ್ನು. **ಅಮಲಾನ್**= ಮಲರಹಿತವಾದ ; ಅಜ್ಞಾನರಹಿತವಾದ. ಸತ್ತ್ವವು ವೃದ್ಧಿಹೊಂದಿರುವಾಗ ಮರಣಹೊಂದಿದವನಾದರೋ ಆತ್ಮವಿದರ ವಂಶಗಳಲ್ಲಿ ಹುಟ್ಟಿ ಆತ್ಮ ಯಾಥಾತ್ಮ್ಯಜ್ಞಾನಕ್ಕೆ ಸಾಧನಗಳಾದ ಪುಣ್ಯಕರ್ಮಗಳಲ್ಲಿ ಅಧಿಕೃತನಾಗುತ್ತಾನೆ. (ರಾ. ಭಾ.)

**ಪ್ರಲಯಂ ಯಾತಿ** = ಮರಣಹೊಂದುತ್ತಾನೆ. **ಉತ್ತಮವಿದಾಂ ಲೋಕಾನ್**=ವಿಷ್ಣುಜ್ಞಾನಿಗಳ ಲೋಕಗಳನ್ನು (ದೇಹಗಳನ್ನು ) ಹೊಂದು ತ್ತಾನೆ. ಸಾತ್ತ್ವಿಕಕುಲದಲ್ಲಿ ಹುಟ್ಟುತ್ತಾನೆ. (ಮ. ಟೀಕಾ)

**ಓಂ ರಜಸಿ ಪ್ರಲಯಂ ಗತ್ವಾ ಕರ್ಮಸಙ್ಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥೧೫॥**

ರಜಸ್ಸಿನಲ್ಲಿ ಪ್ರಲಯವನ್ನು ಹೊಂದಿದರೆ (ಮರಣಹೊಂದಿದರೆ) ಕರ್ಮ ಸಂಗಿಗಳಲ್ಲಿ ಹುಟ್ಟುತ್ತಾನೆ. ಹಾಗೆಯೇ ತಮಸ್ಸಿನಲ್ಲಿ ಪ್ರಲಯಹೊಂದಿದವನು ಮೂಢಯೋನಿಗಳಲ್ಲಿ ಹುಟ್ಟುತ್ತಾನೆ.

* * *

(ರಜೋಗುಣದ ಆಧಿಕ್ಯವಿರುವವನು ಅವಸಾನಹೊಂದಿದರೆ ಪುನಃ ಅವನು ರಜೋಗುಣಿಯಾಗಿಯೇ ಹುಟ್ಟುತ್ತಾನೆ. ಕರ್ಮಿಷ್ಠರ ಮಧ್ಯದಲ್ಲೇ ಹುಟ್ಟುತ್ತಾನೆ. ತಮೋಗುಣವು ವೃದ್ಧಿಹೊಂದಿರುವಾಗ ಅವಸಾನವನ್ನು ಹೊಂದುವವನು ಮೂಢಯೋನಿಗಳಲ್ಲಿ ಜನ್ಮತಾಳುತ್ತಾನೆ.

ಆಯಾ ಗುಣಗಳಿಗೆ ಅನುಗುಣವಾದ ಯೋನಿಗಳಿಗೆ ಅವುಗಳು ಆಕ ರ್ಷಿತವಾಗುತ್ತವೆ. ಬದುಕಿರುವಾಗಲೂ ಸಹ ಮನುಷ್ಯನು ತನಗೆ ಸಮಾನ ವಾದ ಗುಣವಿರುವವನನ್ನೇ ಸ್ನೇಹಮಾಡಲು ಆರಿಸಿಕೊಳ್ಳುತ್ತಾನೆ. ಆದರೆ ಸತ್ತ ಮೇಲೆ ಈ ಗುಣಗಳಿಂದ ಆವೃತನಾಗಿರುವ ಜೀವನು ಅದಕ್ಕೆ ತಕ್ಕುದಾದ

ಯೋನಿಗಳಿಗೆ ಅಸ್ವತಂತ್ರನಾಗಿ ಸೆಳೆಯಲ್ಪಡುತ್ತಾನೆ. ಗುಣಗಳ ಪ್ರಚೋದನೆಯಿಂದ ಜೀವನು ಮಾಡಿದ ಪಾಪ-ಪುಣ್ಯಕರ್ಮಗಳಿಗೆ ಅನುಗುಣವಾಗಿ ಆ ಜೀವನನ್ನು ಆ ಗುಣಗಳೊಡನೆಯೇ ಅವನಿಗೆ ತಕ್ಕುದಾದ ಅಚ್ಚುಗಳಲ್ಲಿ ಹಾಕುತ್ತಾರೆ. ಪರೀಕ್ಷೆಗೆ ಕುಳಿತವರನ್ನು ಅವರು ತೆಗೆದುಕೊಂಡ ಅಂಕಗಳನ್ನೇ ಪರಿಮಾಣವನ್ನಾಗಿಟ್ಟುಕೊಂಡು ಪ್ರಥಮ ಶ್ರೇಣಿ, ದ್ವಿತೀಯ ಶ್ರೇಣಿ, ತೃತೀಯ ಶ್ರೇಣಿ, ಚತುರ್ಥ ಶ್ರೇಣೀ–ಇವೇ ಮೊದಲಾದ ಶ್ರೇಣಿಗಳಲ್ಲಿ ಪರೀಕ್ಷಕರು ವಿಂಗಡಿಸುವಂತೆ–ಕರ್ಮಾಧ್ಯಕ್ಷನು ಜೀವಿಗಳ ಪಾಪ-ಪುಣ್ಯಕರ್ಮಗಳಿಗೆ ಅನುಸಾರವಾಗಿ ಉತ್ತಮ, ಮಧ್ಯಮ, ಅಧಮಗಳೆಂದು ವಿಂಗಡಿಸಿ ಜೀವಿಗಳ ಮುಂದಿನ ಜನ್ಮವನ್ನು ನಿರ್ಣಯಿಸಿ ಅದಕ್ಕೆ ಒಗೆಯುತ್ತಾನೆ.

ಇವೆಲ್ಲವೂ ಪ್ರಕೃತಿಜನ್ಯವಾದ ಸತ್ತ್ವ-ರಜಸ್ತಮೋಗುಣಗಳ ಪ್ರಚೋದನೆಯಂತೆಯೇ ನಡೆಯುತ್ತವೆ.)

o o o

**ಕರ್ಮಸಙ್ಗಿಷು** = ಕರ್ಮದಲ್ಲಿ ಆಸಕ್ತಿಯುಳ್ಳ ಮನುಷ್ಯರಲ್ಲಿ. **ಮೂಢಯೋನಿಷು**=ಪಶುಗಳೇ ಮುಂತಾದ ಯೋನಿಗಳಲ್ಲಿ. (ಶಂ. ಭಾ.)

**ಕರ್ಮಸಙ್ಗಿಷು ಜಾಯತೇ** = ಫಲಪ್ರಾಪ್ತಿಗೋಸ್ಕರ ಕರ್ಮ ಮಾಡುವವರ ಉದರದಲ್ಲಿ ಹುಟ್ಟುತ್ತಾನೆ. ಅಲ್ಲಿ ಹುಟ್ಟಿ ಸ್ವರ್ಗವೇ ಮುಂತಾದ ಫಲಗಳಿಗೆ ಸಾಧನವಾದ ಕರ್ಮಗಳಲ್ಲಿ ಅಧಿಕೃತನಾಗುತ್ತಾನೆ. ತಮಸ್ಸು ವೃದ್ಧಿಹೊಂದಿದಾಗ ಮರಣಹೊಂದಿದವನು ನಾಯಿ, ಹಂದಿ ಮುಂತಾದ ಯೋನಿಗಳಲ್ಲಿ ಹುಟ್ಟುತ್ತಾನೆ. ಯಾವ ಪುರುಷಾರ್ಥಗಳನ್ನು ಸಾಧಿಸಲೂ ಸಹ ಅನರ್ಹನಾಗಿ ಹುಟ್ಟುತ್ತಾನೆ. (ರಾ. ಭಾ.)

**ಪ್ರಲಯಂ ಗತ್ವಾ** = ಮರಣಹೊಂದಿ. **ಕರ್ಮಸಙ್ಗಿಷು** = ಕಾಮ್ಯಕರ್ಮಿಗಳ ಕುಲದಲ್ಲಿ. **ಮೂಢಯೋನಿಷು**= ದೈತ್ಯರ ಕುಲದಲ್ಲಿ. (ಮ. ಟೀಕಾ)

**ಓಂ ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥೧೬॥**

ಸುಕೃತಕರ್ಮದ ನಿರ್ಮಲವಾದ ಫಲವನ್ನು ಸತ್ತ್ವಗುಣದ್ದೆಂದು ಹೇಳು

ತ್ತಾರೆ. ದುಃಖವೆಂಬ ಫಲವು ರಜಸ್ಸಿನದೆಂದೂ, ಅಜ್ಞಾನಫಲವು ತಮಸ್ಸಿನದೆಂದೂ ಹೇಳುತ್ತಾರೆ.

* * *

(ಪುಣ್ಯಕೆಲಸಮಾಡುವುದು, ನಿರ್ಮಲವಾದ ದೋಷರಹಿತವಾದ ಫಲವನ್ನು ಪಡೆದುಕೊಳ್ಳುವುದು–ಇವು ಸತ್ತ್ವಗುಣದ ಆಧಿಕ್ಯದಿಂದ ಉಂಟಾಗುವ ಪ್ರಯೋಜನ. ಸಾತ್ತ್ವಿಕನು ಕೆಟ್ಟಕೆಲಸವನ್ನು ನೆನೆಯುವುದೂ ಇಲ್ಲ. ಸತ್ಕಾರ್ಯಗಳನ್ನೇ ಮಾಡುತ್ತಾನೆ. ಕೀರ್ತಿಗಾಗಿ ಮಾಡುವುದಿಲ್ಲ. ಪರೋಪಕಾರಕ್ಕಾಗಿ ಮಾಡುತ್ತಾನೆ. ಪ್ರತ್ಯುಪಕಾರವನ್ನು ನಿರೀಕ್ಷಿಸಿ ಮಾಡುವುದಿಲ್ಲ. ಒಬ್ಬನ ಮನಸ್ಸು ನೋಯುವಂತೆ ಮಾತನಾಡುವುದಿಲ್ಲ. ಹೂಗಳನ್ನು ಕಿತ್ತರೆ ಗಿಡಗಳಿಗೆಲ್ಲಿ ತೊಂದರೆಯಾಗುವುದೋ ಎಂದು ಭಯಪಡುತ್ತಾನೆ. ಪ್ರಾಣಿಗಳ ವಿಷಯದಲ್ಲಿ ದಯಾಮಯನಾಗಿರುತ್ತಾನೆ. ಇಂತಹವನಿಗೆ ಸಿಕ್ಕುವುದು ನಿರ್ಮಲವಾದ ಫಲ. ಇದರಿಂದಾಗಿ ಅವನಿಗೆ ಪುಣ್ಯಲೋಕಗಳು ಲಭಿಸುತ್ತವೆ. ರಜೋಗುಣಕ್ಕೆ ದುಃಖವೇ ಫಲ. ಇದನ್ನು ರಜೋಗುಣಿಗಳು ಸಾಮಾನ್ಯವಾಗಿ ಒಪ್ಪಿಕೊಳ್ಳುವುದಿಲ್ಲ. ತಾವು ತಮ್ಮ ಎಡೆಬಿಡದ ಕಾರ್ಯಕಲಾಪಗಳಿಂದಾಗಿ ಅತ್ಯಂತಸುಖಿಗಳಾಗಿರುವಂತೆ ತೋರಿಸಿಕೊಳ್ಳುತ್ತಾರೆ. ಅವರಲ್ಲಿರುವ ಮನ ಸ್ಸಿನ ಆತಂಕವು, ದೇಹದ ಅನಾರೋಗ್ಯವು ದರಿದ್ರನಾದವನೊಬ್ಬನಿಗೂ ಖಂಡಿತವಾಗಿಯೂ ಇರುವುದಿಲ್ಲ. ಧನವನ್ನು ಸಂಪಾದಿಸಬೇಕೆನ್ನುವ ಧಾವಂತ; ಬಂದ ಹಣವನ್ನು ವೆಚ್ಚಮಾಡದೆ ಕೂಡಿಡಬೇಕೆನ್ನುವ ಧಾವಂತ ; ಕೂಡಿಟ್ಟಿರುವುದನ್ನು ಯಾರು ಯಾವಾಗ ಅಪಹರಿಸಿಬಿಡುವರೋ ಎಂಬ ಚಿಂತೆ ಮತ್ತು ಅದನ್ನು ಕೂಡಿಡುವ ಧಾವಂತ.

ಶ್ರೀಶಂಕರರು ಈ ಅರ್ಥದ ವಿಷಯವಾಗಿ ಹಿಂದೆಯೇ ಈ ಮಾತನ್ನು ಹೇಳಿಬಿಟ್ಟಿದ್ದಾರೆ. ಮುತ್ತಿನಂತಹ ಮಾತಿದು.

ಅರ್ಥಮನರ್ಥಂ ಭಾವಯ ನಿತ್ಯಂ
ನಾಸ್ತಿ ತತಃ ಸುಖಲೇಶಃ ಸತ್ಯಮ್ ।
ಪುತ್ರಾದಪಿ ಧನಭಾಜಾಂ ಭೀತಿಃ
ಸರ್ವತ್ರೈಷಾ ವಿಹಿತಾ ರೀತಿಃ ॥

ಅರ್ಥವನ್ನು (ಹಣವನ್ನು) ಅನರ್ಥಕಾರಿಯಾದುದು ಎಂದು ಅನು

ದಿನವೂ ಪ್ರತಿಕ್ಷಣದಲ್ಲಿಯೂ ಅನುಸಂಧಾನಮಾಡು. ಏಕೆಂದರೆ ಆ ಅರ್ಥದಲ್ಲಿ ಸುಖಲೇಶವೂ ಇಲ್ಲ. ಹಣವಂತರಿಗೆ ತಮ್ಮ ಮಗನ ದೆಸೆಯಿಂದಲೂ ಭಯವಿರುತ್ತದೆ. ತಾನು ಕೂಡಿಟ್ಟ ಹಣವನ್ನು ತನ್ನ ಮಗನೆಲ್ಲಿ ಬರಿದುಮಾಡಿ ಬಿಡುತ್ತಾನೋ ಎಂದು ಕಳವಳಪಡುತ್ತಿರುತ್ತಾನೆ. ಹಣಕ್ಕಾಗಿ ಮಗನು ತಂದೆಗೆ ಎದುರಾಗಲೂ ಬಹುದು. ಈ ವಿಷಯವು ಎಲ್ಲೆಲ್ಲಿಯೂ ಇರುವುದೇ ಆಗಿದೆ. ಆದುದರಿಂದ ರಜೋಗುಣಿಗೆ ದುಃಖವೆಂಬುದು ಕಟ್ಟಿಟ್ಟ ಬುತ್ತಿ.

ತಮಸ್ಸಿನ ಫಲ ಅಜ್ಞಾನ. ಅಜ್ಞಾನ ಎಂದರೆ ಗಾಢಾಂಧಕಾರ. ಅಮಾವಾಸ್ಯೆಯ ಕತ್ತಲಿನಲ್ಲಿ ಕೈಯಲ್ಲಿ ದೀಪವನ್ನು ಹಿಡಿದುಕೊಳ್ಳದೇ ಒಬ್ಬನು ಪ್ರಯಾಣಹೊರಟಿರುತ್ತಾನೆ. ಹಳ್ಳ-ಕೊಳ್ಳಗಳಲ್ಲಿ ಬಿದ್ದು ಏಳುತ್ತಿರುತ್ತಾನೆ. ಕಾಲುಗಳಿಗೆ ಮುಳ್ಳು ನೆಟ್ಟು ರಕ್ತವು ಸುರಿಯುತ್ತಿರುತ್ತದೆ. ಆದರೂ ಸಹ ಅವನಿಗೆ–ಪ್ರಯಾಣವನ್ನು ನಿಲ್ಲಿಸಬೇಕೆಂದಾಗಲೀ ಅಥವಾ ದೀಪ ಹಿಡಿದು ಹೋಗಬೇಕೆಂದಾಗಲೀ-ವಿವೇಕವು ಬರುವುದಿಲ್ಲ. ಇದೇ ಸ್ವಭಾವವೇ ತಾಮಸಿ ಯದು. ಗೊತ್ತು-ಗುರಿಯಿಲ್ಲದೇ ಕೆಲಸಗಳನ್ನು ಮಾಡುತ್ತಿರುತ್ತಾನೆ. ಮಾಡ ಬಾರದುದನ್ನೇ ಮಾಡುತ್ತಿರುತ್ತಾನೆ. ಮಾಡಬೇಕಾದ ಕಾರ್ಯದಲ್ಲಿ ಆಲಸ್ಯ ವನ್ನು ತೋರಿಸುತ್ತಾನೆ. ದೀರ್ಘಸೂತ್ರಿಯಾಗಿರುತ್ತಾನೆ. ಇಂದು ಮಾಡ ಬೇಕಾದುದನ್ನು ಹಲವಾರು ದಿವಸಗಳು ಕಳೆದನಂತರ ಮಾಡಲು ಹೋಗು ತ್ತಾನೆ. ಹೀಗೆ ಅಜ್ಞಾನಿಯಾಗಿರುವುದೇ ತಮೋಗುಣದ ಫಲವಾಗಿರುತ್ತದೆ.

ಇಲ್ಲಿ ಭಗವಂತನು ರಜೋಗುಣದ ಫಲವು ದುಃಖ, ತಮೋಗುಣದ ಫಲವು ಅಜ್ಞಾನ–ಎಂದು ಹೇಳಿದ್ದಾನೆ. ಕಡುದುಃಖವನ್ನು ಅನುಭವಿ ಸುವುದಕ್ಕಿಂತಲೂ ತಿಳುವಳಿಕೆಯಿಲ್ಲದಿರುವ ಅಜ್ಞಾನವೇ ಲೇಸು. ಆದುದರಿಂದ ರಜೋಗುಣಕ್ಕಿಂತಲೂ ತಮೋಗುಣವೇ ಶ್ರೇಷ್ಠ–ಎಂದು ಶಂಕೆಮಾಡಬಾರದು. ರಜೋಗುಣವು ದುಃಖಭೂಯಿಷ್ಠವಾದ ಬಹಳ ವಾದ ಕರ್ಮಗಳನ್ನು ಮಾಡಿಸುತ್ತಿದ್ದರೂ ರಜೋಗುಣಿಯು ನಿರಂತರ ವಾಗಿ ಕರ್ಮಶೀಲನಾಗಿರುವುದರಿಂದ ಆ ದುಃಖಾನುಭವದಿಂದ ಪಾಠ ಕಲಿತು ಎಂದಾದರೊಂದು ದಿನ ಸುಖಸಾಧಕವಾದ ಸತ್ತ್ವವನ್ನಾ ಶ್ರಯಿಸುವುದಕ್ಕೆ ಅವಕಾಶವಿರುತ್ತದೆ. ತಮೋಗುಣಿಯು ಅಲಸನೂ, ಸ್ತಬ್ಧನೂ, ಜಡನೂ ಆಗಿರುವುದರಿಂದ ಯಾವ ಕೆಲಸದಲ್ಲೂ ತೊಡ

ಗುವುದಿಲ್ಲ. ಆದುದರಿಂದ ಅವನಿಗೆ ಸುಖಸಾಧನೆಯ ಕರ್ಮಗಳಲ್ಲಿ ಪ್ರವೃತ್ತಿ ಯುಂಟಾಗುವ ಸಂಭವವೇ ತುಂಬ ಕಡಿಮೆ. ಆದುದರಿಂದ ಕೇವಲ ಜಾಡ್ಯ ಕರವಾದ ಮತ್ತು ಪ್ರಕಾಶವನ್ನೇ ಕಾಣಿಸದಿರುವ ತಮೋಗುಣಕ್ಕಿಂತಲೂ ಜೀವನದಲ್ಲಿ ದುಃಖಾನುಭವದಿಂದ ಪಾಠವನ್ನು ಕಲಿಸಿ ಸುಖಕ್ಕೆ ಸಾಧನವಾಗ ಬಹುದಾದ ರಜೋಗುಣವೇ ಶ್ರೇಷ್ಠವೆಂದು ಹೇಳಬೇಕು.)

O O O

ಹಿಂದಿನ ಶ್ಲೋಕಗಳ ಅರ್ಥವನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿದೆ. **ರಜಸಸ್ತು ಫಲಂ ದುಃಖಂ**='ಕರ್ಮಾಧಿಕಾರವಾದುದರಿಂದ ರಾಜಸಕರ್ಮದ ಫಲವೂ ಕೂಡ ತನ್ನ ಕಾರಣಕ್ಕೆ ಅನುಗುಣವಾಗಿ ದುಃಖರೂಪವಾದ ರಾಜ ಸವೇ ಆಗುತ್ತದೆ. ಹಾಗೆಯೇ ತಾಮಸರೂಪವಾದ ಅಧರ್ಮದ ಪಾಪ ಕರ್ಮದ ಫಲವು ಅಜ್ಞಾನವೇ ಆಗುತ್ತದೆ'–ಎಂದು ಶಿಷ್ಟರು ಹೇಳುತ್ತಾರೆ.

(ಶಂ. ಭಾ.)

ಹೀಗೆ ಸತ್ತ್ವಗುಣವು ಪ್ರವೃದ್ಧವಾಗಿರುವಾಗ ಮರಣಹೊಂದಿದವನು ಆತ್ಮವಿದರ ವಂಶದಲ್ಲಿ ಹುಟ್ಟುತ್ತಾನೆ. ಅವನು ಮಾಡಿದ ಸುಕೃತದ ಎಂದರೆ ಫಲಾಭಿಸಂಧಿರಹಿತವಾದ ಆರಾಧನಾರೂಪವಾದ ಕರ್ಮದ ಫಲವು ಮತ್ತೆ ಇನ್ನೂ ಅಧಿಕಸತ್ತ್ವದಿಂದ ಪ್ರವೃದ್ಧವಾಗಿ ನಿರ್ಮಲವಾಗಿರುತ್ತದೆ. ದುಃಖ ಗಂಧರಹಿತವಾಗಿರುತ್ತದೆ–ಎಂದು ಸತ್ತ್ವಗುಣದ ಪರಿಣಾಮವನ್ನು ಬಲ್ಲವರು ಹೇಳುತ್ತಾರೆ. ಅಂತ್ಯಕಾಲದಲ್ಲಿ ವೃದ್ಧಿಹೊಂದಿರುವ ರಜೋಗುಣದ ಫಲ ವಾದರೂ ಏನು? ಎಂದರೆ : ಕರ್ಮಸಾಧ್ಯವಾದ ಫಲಗಳಲ್ಲಿ ಆಸಕ್ತರಾದವರ ವಂಶದಲ್ಲಿ ಜನ್ಮತಾಳುವಿಕೆ ; ಫಲಾಭಿಸಂಧಿಪೂರ್ವಕವಾದ ಕರ್ಮಗಳ ಆರಂಭ; ಅದರ ಫಲವನ್ನು ಅನುಭವಿಸಲು ಪುನರ್ಜನ್ಮ; ರಜೋಗುಣ ವೃದ್ಧಿ; ಫಲಾಭಿಸಂಧಿಪೂರ್ವಕವಾದ ಕರ್ಮಗಳ ಆರಂಭಪರಂಪರೆ–ಎಂಬ ರೂಪವಾಗಿ ಪ್ರಾಯಿಕವಾಗಿ ಸಾಂಸಾರಿಕದುಃಖಪ್ರಾಯವೇ ಆಗಿದೆ–ಎಂದು ಆ ಗುಣದ ಸ್ವರೂಪವನ್ನು ಬಲ್ಲವರು ಹೇಳುತ್ತಾರೆ. ಹೀಗೆಯೇ ಅಂತ್ಯಕಾಲದಲ್ಲಿ ವೃದ್ಧಿಹೊಂದಿದ ತಮಸ್ಸಿನ ಫಲವು ಅಜ್ಞಾನದ ಪರಂಪರೆ. (ರಾ. ಭಾ.)

ರಜಸ್ಸಿನ ಫಲ ದುಃಖ–ಎಂದರೆ ಅಲ್ಪಸುಖ. ಹಾಗಲ್ಲದೇ ಕೇವಲ ದುಃಖ ವೆಂದೇ ಅರ್ಥಮಾಡಿದರೆ ಅದನ್ನು ಅನುಭವಿಸಲು ಅತಿಕಷ್ಟವಾದುದರಿಂದ

ರಜೋಗುಣವು ತಮೋಗುಣಕ್ಕಿಂತಲೂ ಉತ್ತಮವಾಗುವುದಿಲ್ಲ. ದುಃಖಾನುಭವವು ತಮಸ್ಸಿನ ಫಲವಾದ ಅಜ್ಞಾನದ ಅನುಭವಕ್ಕಿಂತಲೂ ಅತಿಕಷ್ಟವಾದುದರಿಂದ ದುಃಖಫಲವನ್ನು ಕೊಡುವ ಆ ರಜೋಗುಣವು ತಮೋಗುಣಕ್ಕಿಂತಲೂ ಕೆಳಮಟ್ಟದ್ದಾಗುತ್ತದೆ. ಆದುದರಿಂದ ದುಃಖ ಎಂದರೆ ಅಲ್ಪಸುಖ.

**ರಜಸೋ ಹ್ಯೇವ ಜಾಯತೇ ಮಾತ್ರಯಾ ಸುಖಂ ದುಃಖಂ ತತ್ ತಸ್ಮಾತ್ತಾನ್ಸುಖಿನೋ ದುಃಖಿನ ಇತ್ಯಾಚಕ್ಷತೇ ।** (ಶಾಕರರಾಕ್ಷಶಾಖೆ.)

(ಮ. ಭಾ.)

**ಓಂ ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥೧೭॥**

ಸತ್ತ್ವದಿಂದ ಜ್ಞಾನವುಂಟಾಗುತ್ತದೆ. ರಜಸ್ಸಿನಿಂದ ಲೋಭವುಂಟಾಗುತ್ತದೆ. ತಮಸ್ಸಿನಿಂದ ಪ್ರಮಾದ-ಮೋಹಗಳೂ, ಅಜ್ಞಾನವೂ ಉಂಟಾಗುತ್ತವೆ.

* * *

(ಸತ್ತ್ವಗುಣದಿಂದ ಜ್ಞಾನವು ಹುಟ್ಟುತ್ತದೆ. ಅರ್ಥಾತ್ ಸತ್ತ್ವಗುಣದ ಅನುಸರಣೆಯಿಂದ ಜ್ಞಾನವು ಸಿಕ್ಕುತ್ತದೆ. ಹೇಗೆಂದರೆ : ಸತ್ತ್ವಗುಣದ ಫಲವಾಗಿ ಅವನು ಶುದ್ಧಾಂತಃಕರಣನಾಗಿ ಜ್ಞಾನದ ದಾರಿಯನ್ನು ಕಂಡುಕೊಂಡು ಸಾಧನೆಮಾಡಿ ಪರೋಕ್ಷಜ್ಞಾನವನ್ನು ಸಂಪಾದಿಸುತ್ತಾನೆ. ಹೀಗೆ ಪರಂಪರಾ ಸಂಬಂಧದಿಂದ ಸತ್ತ್ವಗುಣವು ಜ್ಞಾನಪ್ರಾಪ್ತಿಗೆ ಸಾಧನವಾಗುತ್ತದೆ ಅಥವಾ ಜ್ಞಾನವೆಂಬ ಶಬ್ದಕ್ಕೆ ಜ್ಞಾನಾಧಿಕಾರವೆಂದೂ, ಜ್ಞಾನಮಾರ್ಗವೆಂದೂ ಅರ್ಥಮಾಡಬಹುದು. ಆಗ ಸತ್ತ್ವಗುಣದ ಫಲವಾಗಿ ಜ್ಞಾನಾಧಿಕಾರವೂ, ಜ್ಞಾನಮಾರ್ಗವೂ ದೊರೆಯುತ್ತದೆ–ಎಂದು ಅರ್ಥವಾಗುತ್ತದೆ.

ರಜೋಗುಣದಿಂದ ಲೋಭವು ಹುಟ್ಟುತ್ತದೆ. ರಜೋಗುಣಿಯು ಲೋಭಿಯಾಗಿರುತ್ತಾನೆ. 'ಮಿತಿಮೀರಿ ಹಣಸಂಪಾದನೆ ಮಾಡಬೇಕು. ಬಹಳ ದೊಡ್ಡದಾದ ಮನೆ-ಮಠಗಳನ್ನು ಕಟ್ಟಿಸಬೇಕು. ಇಂದ್ರಿಯಸುಖಗಳನ್ನು ಅನುಭವಿಸಬೇಕು'–ಇತ್ಯಾದಿ ಆಸೆಗಳು ತಲೆದೋರುತ್ತಿದ್ದರೆ ಅದು ರಜೋಗುಣದ ಫಲ.

ತಮಸ್ಸಿನಿಂದ ಪ್ರಮಾದ ಮತ್ತು ಮೋಹಗಳು ಹುಟ್ಟುತ್ತವೆ. ಅಜ್ಞಾ

ನವೂ ಸಹ ಇದರಿಂದಲೇ ಹುಟ್ಟುತ್ತದೆ. ಜಾಗರೂಕತೆ ಇಲ್ಲದಿರುವುದು ; ವಿವೇಕವಿಲ್ಲದಿರುವುದು ; ಜ್ಞಾನಶೂನ್ಯನಾಗಿರುವುದು. ಇಲ್ಲಿ ಅಜ್ಞಾನವೆಂದರೆ ಆತ್ಮಜ್ಞಾನದ ಅಭಾವ ಎಂದಷ್ಟೇ ಅರ್ಥಮಾಡಬಾರದು. ಪ್ರಾಪಂಚಿಕವಾದ ತಿಳಿವಳಿಕೆಯು ಇಲ್ಲದಿರುವುದೂ ಅಜ್ಞಾನ. ಇವುಗಳು ತಮೋಗುಣದಿಂದ ಹುಟ್ಟುತ್ತವೆ.)

o o o

**ಸತ್ತ್ವಾತ್** = ಉತ್ಕರ್ಷವನ್ನು ಹೊಂದಿದ ಸತ್ತ್ವಗುಣದಿಂದ.

(ಶಂ. ಭಾ.)

ಹೀಗೆ ಪರಂಪರೆಯಿಂದ ಉಂಟಾದ ಅತ್ಯಧಿಕಸತ್ತ್ವದ ಫಲವಾಗಿ ಆತ್ಮ ಯಾಥಾತ್ಮ್ಯದ ಅಪರೋಕ್ಷಜ್ಞಾನವು ದೊರೆಯುತ್ತದೆ. ಹಾಗೆಯೇ ವೃದ್ಧಿ ಹೊಂದಿದ ರಜಸ್ಸಿನ ಫಲವಾಗಿ ಸ್ವರ್ಗಾದಿ ಫಲಗಳಲ್ಲಿ ಲೋಭವು ಉಂಟಾಗುತ್ತದೆ. ಹಾಗೆಯೇ ವೃದ್ಧಿಹೊಂದಿದ ತಮಸ್ಸಿನಿಂದ ಪ್ರಮಾದದ ಎಂದರೆ ಅಸಾವಧಾನತೆಯ ಕಾರಣವಾಗಿ ಅಸತ್ಕರ್ಮಗಳಲ್ಲಿ ಪ್ರವೃತ್ತಿಯು ಉಂಟಾಗುತ್ತದೆ. ಅದರಿಂದ ಮೋಹವೂ (ವಿಪರೀತಜ್ಞಾನವೂ) ಉಂಟಾಗುತ್ತದೆ. ಅದಕ್ಕಿಂತಲೂ ಅಧಿಕತರವಾದ ತಮಸ್ಸಿನಿಂದ–(ಅಜ್ಞಾನವು) ಜ್ಞಾನದ ಅಭಾವವು ಉಂಟಾಗುತ್ತದೆ. (ರಾ. ಭಾ.)

**ಜ್ಞಾನಂ**= ಪರಾಪರತತ್ತ್ವವಿಷಯವಾದ ಜ್ಞಾನ. **ಲೋಭಃ** = ಸ್ವರ್ಗಾದಿ ವಿಷಯಗಳಲ್ಲಿ ಆಸಕ್ತಿ. **ಭವತ ಏವ**–ಎಂದು ಅನ್ವಯ. ಪ್ರಮಾದ-ಮೋಹಗಳು ಆಗಿಯೇ ಆಗುತ್ತವೆ ಮತ್ತು ಅಜ್ಞಾನವೂ ಉಂಟಾಗುತ್ತದೆ.

(ಮ. ಟೀಕಾ)

**ಓಂ ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛನ್ತಿ ತಾಮಸಾಃ ॥೧೮॥**

ಸತ್ತ್ವದಲ್ಲಿರುವವರು ಮೇಲಕ್ಕೆ ಹೋಗುವರು. ರಾಜಸರು ಮಧ್ಯದಲ್ಲಿಯೇ ಇರುವರು. ನಿಹೀನಗುಣಗಳ ಆಚರಣೆಯಲ್ಲಿರುವ ತಾಮಸರು ಕೆಳಕ್ಕೆ ಹೋಗುತ್ತಾರೆ.

* * *

(ಸತ್ತ್ವಗುಣಸಂಪನ್ನರು **ಊರ್ಧ್ವಂ ಗಚ್ಛನ್ತಿ** ಎಂದರೆ ಅವಸಾನಾನಂತರದಲ್ಲಿ ಊರ್ಧ್ವಲೋಕಗಳಿಗೆ, ದೇವಲೋಕಗಳಿಗೆ ಅಥವಾ ಪುಣ್ಯಲೋಕಗಳಿಗೆ ಹೋಗುತ್ತಾರೆ. ರಜೋಗುಣದವರು **ಮಧ್ಯೇ ತಿಷ್ಠನ್ತಿ** ಮಧ್ಯದಲ್ಲೇ ಇರುತ್ತಾರೆ ಎಂದರೆ ಮನುಷ್ಯಲೋಕದಲ್ಲಿಯೇ ಪುನಃ ಹುಟ್ಟುತ್ತಾರೆ. ದೇವತೆಗಳು, ಮನುಷ್ಯರು ಮತ್ತು ಪಶುಗಳು–ಎಂಬ ಮೂರು ವರ್ಗಗಳಲ್ಲಿ ಮನುಷ್ಯರು ಮಧ್ಯಮವರ್ಗದವರಾಗುತ್ತಾರೆ. ಆದುದರಿಂದ **ಮಧ್ಯೇ ತಿಷ್ಠನ್ತಿ** ಎಂದರೆ ರಾಜಸರು ಪುನಃ ಮನುಷ್ಯರಾಗಿಯೇ ಹುಟ್ಟುತ್ತಾರೆ ಎಂದರ್ಥ. **ಜಘನ್ಯಗುಣವೃತ್ತಿಸ್ಥಾಃ**–ಜಘನ್ಯಗುಣ ಎಂದರೆ ಅಧಮವಾದ ತಮೋಗುಣ. ಅದರ ವೃತ್ತಿ ಎಂದರೆ ವರ್ತನೆ. ಅಧಮಗುಣಗಳ ವರ್ತನೆ ಎಂದರೆ ನಿದ್ರೆ, ಆಲಸ್ಯ, ಪ್ರಮಾದ, ಮೋಹ–ಇತ್ಯಾದಿಗಳು. ಇವುಗಳಲ್ಲಿಯೇ ಇರತಕ್ಕ ತಾಮಸರು **ಅಧೋ ಗಚ್ಛನ್ತಿ**–ಬಹಳ ಕೀಳಾದ ಪಶುಗಳೇ ಮುಂತಾದ ಯೋನಿಗಳಲ್ಲಿ ಹುಟ್ಟುತ್ತಾರೆ.)

o o o

**ಊರ್ಧ್ವಂ ಗಚ್ಛನ್ತಿ** = ದೇವಲೋಕವೇ ಮುಂತಾದ ಉಚ್ಚಲೋಕಗಳಲ್ಲಿ ಹುಟ್ಟುತ್ತಾರೆ. (ಶಂ. ಭಾ.)

ಮೇಲೆ ಹೇಳಿದ ಕ್ರಮದಲ್ಲಿ ಸತ್ತ್ವಗುಣದಲ್ಲಿರತಕ್ಕವರು ಮೇಲಕ್ಕೆ ಹೋಗುತ್ತಾರೆ ಎಂದರೆ ಕ್ರಮವಾಗಿ ಸಂಸಾರಬಂಧನವನ್ನು ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾರೆ. ರಾಜಸರು ಸ್ವರ್ಗಾದಿ ಫಲಲೋಭದಿಂದ ಆ ಫಲಕ್ಕೆ ಸಾಧನವಾದ ಕರ್ಮವನ್ನಾಚರಿಸಿ ಫಲವನ್ನನುಭವಿಸಿದ ಬಳಿಕ ಮತ್ತೆ ಹುಟ್ಟಿ ಅದೇ ಕರ್ಮಾನುಷ್ಠಾನವನ್ನೇ ಮಾಡುತ್ತಾರೆ. ಇದು ಪುನರಾವೃತ್ತಿ ರೂಪವಾದುದರಿಂದ ದುಃಖಪ್ರಾಯವೇ ಆಗಿದೆ. ತಾಮಸರಾದರೋ ಕೀಳು ಮಟ್ಟದ ಗುಣದ ನಡೆಯಲ್ಲಿದ್ದು ಮುಂದು-ಮುಂದಕ್ಕೆ ನಿಕೃಷ್ಟವೇ ಆಗಿರುವ ತಮೋಗುಣವೃತ್ತಿಗಳಲ್ಲಿದ್ದು ಕೆಳಕ್ಕೆ ಬೀಳುತ್ತಾರೆ. ಅಂತ್ಯಯೋನಿ, ಅನಂತರ ತಿರ್ಯಗ್ಯೋನಿ, ಅನಂತರ ಕ್ರಿಮಿ-ಕೀಟಾದಿ ಜನ್ಮಗಳು, ಅನಂತರ ಸ್ಥಾವರ ಜನ್ಮ ಅನಂತರ ಪೊದೆ, ಬಳ್ಳಿಗಳ ರೂಪ, ಅನಂತರ ಕಾಷ್ಠ-ಲೋಷ್ಟ, ಹುಲ್ಲು ಮುಂತಾದ ಜನ್ಮಗಳನ್ನು ಹೊಂದುತ್ತಾರೆ. (ರಾ. ಭಾ.)

**ಓಂ ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥೧೯॥**

ದ್ರಷ್ಟೃವು ಯಾವಾಗ ಗುಣಗಳಿಗಿಂತಲೂ ಬೇರೊಬ್ಬ ಕರ್ತೃವಿಲ್ಲವೆಂದು ಕಂಡುಕೊಳ್ಳುತ್ತಾನೆಯೋ ಮತ್ತು ಆತ್ಮನನ್ನು ಗುಣಗಳಿಗಿಂತಲೂ ಆಚೆ ಇರುವವನನ್ನಾಗಿ ಅರಿತುಕೊಳ್ಳುತ್ತಾನೆಯೋ, ಆಗ ಅವನು ನನ್ನ ಭಾವವನ್ನು ಹೊಂದುವನು.

* * *

(ಶ್ರೀಕೃಷ್ಣನು ಈ ಹಿಂದಿನ ಶ್ಲೋಕದಲ್ಲಿ ಮಾತ್ರ ಸತ್ತ್ವಸ್ಥರು, ರಾಜಸರು ಮತ್ತು ತಾಮಸರು ಎಂದು ಹೇಳಿರುವನೇ ಹೊರತು ೫ನೆಯ ಶ್ಲೋಕದಿಂದ ೧೭ನೆಯ ಶ್ಲೋಕದವರೆಗೆ ಗುಣಗಳ ವರ್ಣನೆಯನ್ನು ಮಾತ್ರ ಮಾಡಿದ್ದಾನೆ. ಗುಣಗಳ ಪ್ರಭಾವವೇನೆಂಬುದನ್ನು ಬಹುಸ್ಪಷ್ಟವಾಗಿ ಹೇಳಿದ್ದಾನೆ. ಪ್ರಕೃತಿಜನ್ಯವಾದ ಗುಣಗಳೇ ಪ್ರಾಕೃತವಾದ ಎಲ್ಲ ಕರ್ಮಗಳಿಗೂ ಕಾರಣವೆಂದು ಹೇಳಿದ್ದಾನೆ. ಅರ್ಥಾತ್ ದೇಹಿಯು ಈ ಕರ್ಮಗಳನ್ನು ಮಾಡುವಂತೆ ತೋರಿದರೂ ಸಹ ಎಲ್ಲ ಕರ್ಮಗಳಿಗೂ ಕಾರಣವು ಈ ಮೂರು ಗುಣಗಳೇ. ಆತ್ಮನಿಗೂ ಈ ಕರ್ಮಗಳಿಗೂ ಯಾವ ಸಂಬಂಧವೂ ಇಲ್ಲ ಎಂಬುದನ್ನು ಬಹುಸ್ಪಷ್ಟವಾಗಿ ಹೇಳಿದ್ದಾನೆ.

ಇಲ್ಲಿ ದ್ರಷ್ಟಾ ಎಂದರೆ ಜೀವಾತ್ಮನು ಅಥವಾ ದೇಹೀ. 'ಕರ್ಮಗಳೆಲ್ಲವನ್ನೂ ಮಾಡಿಸುವುದು ಈ ತ್ರಿಗುಣಗಳಲ್ಲದೇ ಬೇರೆ ಏನೂ ಅಲ್ಲ'–ಎಂಬುದನ್ನು ಈ ದೇಹಿಯು ಯಾವಾಗ ಅರಿಯುತ್ತಾನೆಯೋ, ಅಧೋಗತಿ, ಊರ್ಧ್ವಗತಿ, ಮಧ್ಯಗತಿಗಳಿಗೆ ಈ ಗುಣಗಳೇ ಕಾರಣವೆಂಬುದನ್ನು ಅರಿಯುತ್ತಾನೆಯೋ ಮತ್ತು ಹಾಗೆ ತಿಳಿದುಕೊಂಡು ಗುಣಗಳ ಸಂಬಂಧವನ್ನು ಕಡಿದುಕೊಳ್ಳುತ್ತಾನೆಯೋ ಮತ್ತು ಗುಣಗಳಿಗೆ ಆಚೆಯವನಾದ, ಗುಣಾತೀತನಾದ, ಗುಣವ್ಯಾಪಾರಗಳಿಗೆ ಸಾಕ್ಷಿಯಾದ ತನ್ನನ್ನು (ಆತ್ಮನನ್ನು) ಯಾವಾಗ ಅರಿತುಕೊಳ್ಳುವನೋ–ಆಗ ಆ ದ್ರಷ್ಟೃವು ನನ್ನ ಭಾವವನ್ನೇ ಹೊಂದುವನು ಎನ್ನುತ್ತಾನೆ ಶ್ರೀಕೃಷ್ಣ. ದೇಹಿಯು ಸಾಮಾನ್ಯವಾಗಿ ದೇಹಾತ್ಮಬುದ್ಧಿಯುಳ್ಳವನೇ ಆಗಿರುವುದರಿಂದ ಯಾವ ಕಾರ್ಯವನ್ನೇ ಮಾಡಿದರೂ–'ನಾನೇ ಮಾಡುತ್ತೇನೆ. ನನಗಾಗಿ ಮಾಡುತ್ತೇನೆ'–ಮುಂತಾದ ಭಾವನೆಗಳಿಂದಲೇ

ತುಂಬಿರುತ್ತಾನೆ. 'ನಾನು ಏನನ್ನೂ ಮಾಡುತ್ತಿಲ್ಲ. ಎಲ್ಲ ಕರ್ಮಗಳಿಗೂ ಸಹ ಸತ್ತ್ವ-ರಜಸ್ತಮೋಗುಣಗಳೇ ಕಾರಣ'–ಎಂಬುದನ್ನು ಅವನು ಅರಿಯ ಬೇಕಾದರೆ ಅವನು ದ್ರಷ್ಟೃವಾಗಬೇಕು. ದ್ರಷ್ಟೃ ಶಬ್ದಕ್ಕೆ ಸಾಕ್ಷಾತ್ಕರ್ತಾ ಎಂಬ ಅರ್ಥವೂ ಇದೆ. ಶಾಸ್ತ್ರಗಳ ಅಧ್ಯಯನದಿಂದ ಮತ್ತು ಆಚಾರ್ಯರ ಉಪದೇಶದಿಂದ ಆತ್ಮಾನಾತ್ಮವಿವೇಕವನ್ನು ತಿಳಿದು ಆತ್ಮಸಾಧನೆಯನ್ನು ಮಾಡುತ್ತಿರುವವನು ಅಥವಾ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡವನು ದ್ರಷ್ಟಾ.

**ನಾನ್ಯಂ ಗುಣೇಭ್ಯಃ ಕರ್ತಾರಂ**–ಗುಣಗಳಿಗಿಂತಲೂ ಕರ್ಮಮಾಡ ತಕ್ಕವನು ಬೇರೊಬ್ಬನಿಲ್ಲ–ಎಂಬುದಾಗಿ ತಿಳಿಯುತ್ತಾನೆ. ಯಾವ ಸ್ಥಿತಿಯಲ್ಲಿ ಇವನು **ಗುಣಾ ಗುಣೇಷು ವರ್ತನ್ತೇ**–ಎಂದು ಹಿಂದೆ ಶ್ರೀಕೃಷ್ಣನೇ ಹೇಳಿರು ವಂತೆ ಗುಣಗಳಲ್ಲಿ ಇಂದ್ರಿಯಗಳು ವರ್ತಿಸುತ್ತಿವೆಯೇ ಹೊರತು ನನಗೂ ಆ ಕರ್ಮಗಳಿಗೂ ಯಾವ ಸಂಬಂಧವೂ ಇಲ್ಲ–ಎಂದು ಅನುಭವಪೂರ್ವಕವಾಗಿ ತಿಳಿದು, ತನ್ನನ್ನು **ಗುಣೇಭ್ಯಃ ಪರಂ ವೇತ್ತಿ**–ಗುಣಗಳಿಂದ ಆಚೆ ಇರುವವನು ಎಂದು ತಿಳಿಯುತ್ತಾನೆಯೋ ಆಗ **ಮದ್ಭಾವಂ ಸೋಽಧಿಗಚ್ಛತಿ**–ನನ್ನ (ಪರಮಾತ್ಮನ) ಭಾವವನ್ನೇ ಹೊಂದುತ್ತಾನೆ. ಪರಮಾತ್ಮನ ಅಂಶವೇ ಆಗಿರುವ ಜೀವನು ಕರ್ಮಪ್ರೇರಕಗಳಾದ ಗುಣಗಳ ಸಂಬಂಧವನ್ನು ಸಂಪೂರ್ಣವಾಗಿ ತೊಡೆದುಕೊಂಡ ಮೇಲೆ ಅವನಂತೆಯೇ ಆಗಬೇಕಲ್ಲವೇ?

ಸಮುದ್ರದಿಂದ ಹೊರಕ್ಕೆ ಬಂದಿರುವ ಅಲೆಗಳು ಮತ್ತೆ ತಮ್ಮ ನೆಲೆಗೆ ಹಿಂದಿರುಗಿ ಸಮುದ್ರಭಾವವನ್ನೇ ತಳೆಯುವಂತೆ ಇವನು ತಮ್ಮ ಮೂಲವಾದ ಪರಮಾತ್ಮಭಾವವನ್ನೇ ಪಡೆಯುತ್ತಾನೆ.)

O O O

ಸಮ್ಯಕ್‌ಜ್ಞಾನದಿಂದ ಮೋಕ್ಷವು ಹೇಗೆ ದೊರೆಯುತ್ತದೆ?–ಎಂಬುದನ್ನು ತಿಳಿಸಲು ಭಗವಂತನು ಇದನ್ನು ಹೇಳುತ್ತಾನೆ. ಯಾವ ಪುರುಷನು ಜ್ಞಾನಿಯಾಗಿ ಕಾರ್ಯ, ಕರಣ ಮತ್ತು ವಿಷಯಗಳ ಆಕಾರದಲ್ಲಿ ಪರಿಣಾಮ ಗೊಂಡಿರುವ ಗುಣಗಳಿಗಿಂತಲೂ ಬೇರೆ ಕರ್ತೃವಿಲ್ಲ. ಗುಣಗಳೇ ಎಲ್ಲ ಅವಸ್ಥೆ ಗಳಲ್ಲಿಯೂ ಎಲ್ಲ ಕರ್ಮಗಳಿಗೂ ಕರ್ತೃಗಳು–ಎಂದು ತಿಳಿಯುತ್ತಾನೆಯೋ ಮತ್ತು ಗುಣಗಳ ವ್ಯಾಪಾರಕ್ಕೆ ಸಾಕ್ಷಿಯಾಗಿರುವ ಆತ್ಮನು ಗುಣಗಳಿಂದ

ಬೇರೆಯಾಗಿ ಅದಕ್ಕೆ ಆಚೆ ಇರುವವನು–ಎಂದು ತಿಳಿಯುತ್ತಾನೆಯೋ ಆ ದ್ರಷ್ಟೃವು ನನ್ನ ಭಾವವನ್ನು ಹೊಂದುತ್ತಾನೆ. (ಶಂ. ಭಾ.)

ಆಹಾರವಿಶೇಷಗಳ ಸೇವನೆಯಿಂದಲೂ–ಫಲಾಭಿಸಂಧಿಯಿಲ್ಲದ ಸುಕೃತ ವಿಶೇಷಗಳಿಂದಲೂ ಸತ್ತ್ವವೃತ್ತಿಯನ್ನು ಹೊಂದಿದವರು ಗುಣಗಳನ್ನು ದಾಟುವ ಮೂಲಕ ಹೇಗೆ ಊರ್ಧ್ವಗತಿಯನ್ನು ಹೊಂದುತ್ತಾರೆ?–ಎಂಬುದನ್ನು ಇಲ್ಲಿ ಹೇಳುತ್ತಾನೆ ಭಗವಂತ. ಸಾತ್ತ್ವಿಕವಾದ ಆಹಾರಸೇವನೆಯಿಂದಲೂ, ಫಲಾಭಿಸಂಧಿಯಿಲ್ಲದೇ ಭಗವದಾರಾಧನಾರೂಪವಾದ ಕರ್ಮಗಳ ಅನುಷ್ಠಾನದಿಂದಲೂ ರಜಸ್ಸು ಮತ್ತು ತಮಸ್ಸುಗಳನ್ನು ಪೂರ್ಣವಾಗಿ ಮೆಟ್ಟಿ, ಉತ್ಕೃಷ್ಟವಾದ ಸತ್ತ್ವದಲ್ಲಿ ನೆಲೆಗೊಂಡ ಯಾವ ದ್ರಷ್ಟೃವು ಗುಣಗಳಿಗಿಂತಲೂ ಬೇರೆ ಕರ್ತೃವಿಲ್ಲ–ಎಂದು ನೋಡುತ್ತಾನೆಯೋ, ಗುಣಗಳೇ ತಮಗೆ ಅನುಗುಣವಾದ ಪ್ರವೃತ್ತಿಗಳಲ್ಲಿ ಕರ್ತೃಗಳಾಗಿವೆ–ಎಂದು ತಿಳಿಯುತ್ತಾನೆಯೋ ಮತ್ತು ಕರ್ತೃಗಳಿಗಿಂತಲೂ, ಗುಣಗಳಿಗಿಂತಲೂ ಪರನಾಗಿರುವವನು (ಅಗುಣ, ಅಕರ್ತೃ ) ಎಂದು ಆತ್ಮನನ್ನು ತಿಳಿಯುತ್ತಾನೆಯೋ–ಅವನು ನನ್ನ ಭಾವವನ್ನು ಹೊಂದುತ್ತಾನೆ. ಒಟ್ಟು ತಾತ್ಪರ್ಯವೇನೆಂದರೆ : ಆತ್ಮನು ಸ್ವತಃ ಪರಿಶುದ್ಧಸ್ವಭಾವವುಳ್ಳವನು. ಆದುದರಿಂದ ಅವನಿಗೆ ಬಗೆ-ಬಗೆಯ ಕರ್ಮಗಳಲ್ಲಿ ಕರ್ತೃತ್ವವುಂಟಾಗುವುದು ಹಿಂದು ಹಿಂದಿನ ಕರ್ಮಗಳಿಗೆ ಮೂಲವಾದ ಗುಣಸಂಗದಿಂದ ಬಂದಿರುವುದು. ಸ್ವಭಾವತಃ ಅವನು ಅಕರ್ತೃ-ಅಖಂಡವಾದ ಜ್ಞಾನೈಕಾಕಾರವುಳ್ಳವನು–ಎಂದು ಆತ್ಮಸ್ವರೂಪವನ್ನು ಕಂಡುಕೊಂಡಾಗ ಅವನು ನನ್ನ ಭಾವವನ್ನು ಹೊಂದುತ್ತಾನೆ. (ರಾ. ಭಾ.)

ನಾನ್ಯಂ ಪಶ್ಯತಿ = ದ್ರಷ್ಟೃವು, ಯಾವಾಗ ಗುಣಗಳಿಗಿಂತಲೂ ಬೇರೆ ಕರ್ತೃವು ಅಲ್ಲ ಎಂದರೆ ಪರಿಣಾಮಹೊಂದುವ ಕರ್ತೃವು ಅಲ್ಲ–ಎಂದು ತಿಳಿಯುತ್ತಾನೆಯೋ ಆಗ. ಕರ್ತಾರಂ–ಎಂದೇ ಅರ್ಥಹೇಳಬೇಕು. ಇಲ್ಲ ದಿದ್ದರೆ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ಎಂಬ ಶ್ರುತಿಗಳಿಗೆ ವಿರೋಧವಾಗುತ್ತದೆ.

ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ –ಎಂಬ ಮೋಕ್ಷಧರ್ಮವಚನಕ್ಕೂ ವಿರೋಧವಾಗುತ್ತದೆ.

(ಮ. ಭಾ.)

ಶ್ರೀಕೃಷ್ಣನು ಈ ಗುಣಗಳ ವಿಷಯವನ್ನೇ ಇನ್ನೂ ಸ್ಪಷ್ಟಪಡಿಸಿ ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ :

**ಓಂ ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥೨೦॥**

ದೇಹಿಯು ದೇಹದಲ್ಲಿ ಹುಟ್ಟಿರುವ ಈ ಮೂರು ಗುಣಗಳನ್ನೂ ದಾಟಿದರೆ ಹುಟ್ಟು-ಸಾವು-ಮುಪ್ಪು ಮತ್ತು ದುಃಖಗಳಿಂದ ಬಿಡುಗಡೆಯನ್ನು ಹೊಂದಿ ಅಮೃತವನ್ನು (ಮೋಕ್ಷವನ್ನು ) ಅನುಭವಿಸುತ್ತಾನೆ.

* * *

(ದೇಹಸಮುದ್ಭವಗಳಾದ ಮೂರು ಗುಣಗಳು ಎನ್ನುತ್ತಾನೆ ಭಗವಂತ. ದೇಹವು ಹುಟ್ಟಲು ಕಾರಣವೂ ಈ ಗುಣಗಳೇ. ಅನಂತರ ದೇಹದಲ್ಲಿರತಕ್ಕುವುಗಳೂ ಈ ಗುಣಗಳೇ. ರೇತಸ್ಸಿನಲ್ಲೇ ಸೇರಿಕೊಂಡಿದ್ದು ಅನುರೂಪವಾದ ಯೋನಿಯಲ್ಲಿ ಪ್ರವೇಶಿಸಿ ಗರ್ಭದೊಡನೆ ಬೆಳೆಯುತ್ತಿದ್ದು ಪ್ರಾಣಿಯು ಹುಟ್ಟಿದ ಮೇಲೂ ಸಹ ಅವಿಭಾಜ್ಯವಾದ ಅಂಗವೋ ಎಂಬಂತೆ ಈ ಮೂರು ಗುಣಗಳೂ ಕಾರ್ಯಮಾಡುತ್ತಿರುತ್ತವೆ. ಇವುಗಳು ತಾವಾಗಿಯೇ ಬಿಟ್ಟು ಹೋಗುವ ಗುಣಗಳಲ್ಲ. ರೇಷ್ಮೆಯ ಹುಳುವು ತನ್ನನ್ನು ತಾನೇ ಬಂಧಿಸಿಕೊಳ್ಳುವುದು. ಅದು ಹೊರಕ್ಕೆ ಬರಬೇಕಾದರೆ ಅದರ ಗೂಡು ದಾರಿಮಾಡಿಕೊಡುವುದಿಲ್ಲ. ಆ ಗೂಡನ್ನು ಕತ್ತರಿಸಿಕೊಂಡು ರೇಷ್ಮೆಯ ಹುಳುವೇ ಹೊರಕ್ಕೆ ಬರಬೇಕಾಗುವುದು. ಆತ್ಮನು ಗುಣವೆಂಬ ಪಂಜರವನ್ನು ಕಟ್ಟಿಕೊಂಡುಬಿಟ್ಟಿದ್ದಾನೆ. ಮೇಲಾಗಿ ಅಜ್ಞಾನದಿಂದ–'ಪಂಜರವು ಬೇರೆ, ನಾನೇ ಬೇರೆ'–ಎಂಬ ಭಾವನೆಯೇ ಇವನಿಗೆ ಹೋಗಿಬಿಟ್ಟಿರುತ್ತದೆ. ಪಂಜರವು ತಾನೇ ತಾನಾಗಿ ಕಳಚಿಬೀಳುವುದಿಲ್ಲ. ಜೀವನು ಮೊದಲು ತಾನು ಬೇರೆ, ಪಂಜರವು ಬೇರೆ–ಎಂಬುದನ್ನು ಅರಿಯಬೇಕು. ಅನಂತರ ಜ್ಞಾನವೆಂಬ ಕತ್ತಿಯಿಂದ ಪಂಜರವನ್ನು ಸೀಳಿ ಹೊರಕ್ಕೆ ಬರಬೇಕು. ಅವಿಭಕ್ತವಾಗಿರುವಂತೆ ತೋರುವ ಈ ತ್ರಿಗುಣಗಳನ್ನು ದಾಟಬೇಕು ಎನ್ನುತ್ತಾನೆ ಶ್ರೀಕೃಷ್ಣ. ದಾಟುವುದು ಎಂದರೇನು? ದಾಟಿದರೆ ಏನಾಗುತ್ತದೆ? ಎಂದರೆ ತ್ರಿಗುಣಗಳನ್ನು ದಾಟುವುದು ಎಂದರೆ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುವುದು. ಹೃದಯಗುಹೆಯಲ್ಲಿ ಆತ್ಮನು ಜ್ಯೋತಿಸ್ಸ್ವರೂಪನಾಗಿ, ನಿರ್ಗುಣನಾಗಿ,

ನಿರಾಕಾರನಾಗಿ ಕಾಣುತ್ತಾನೆ. ಅವನನ್ನು ಕಂಡುಕೊಂಡನಂತರ ಗುಣಗಳಿಗೂ–ತನಗೂ ಯಾವ ಸಂಬಂಧವೂ ಇಲ್ಲ ಎಂಬ ಅರಿವುಂಟಾಗುವುದು. ಶುದ್ಧಚೈತನ್ಯದ ದರ್ಶನದಿಂದ ಆಗುವ ಆನಂದವು ಗುಣಗಳ ಸಂಬಂಧದಿಂದ ಸಿಕ್ಕುವ ಆನಂದಕ್ಕಿಂತಲೂ ಅನಂತಪಾಲು ಹೆಚ್ಚಿನದೆಂಬ ಅರಿವುಂಟಾಗುವುದು. ಆತ್ಮಾನುಭವಕ್ಕೆ ಗುಣಗಳ ಸಹಕಾರ ಅನಾವಶ್ಯಕವೆಂಬ ಅರಿವಾಗುವುದು. ಇದರಿಂದಾಗಿ ಗುಣಗಳ ಪ್ರಾಬಲ್ಯವು ಉಡುಗಿಹೋಗುವುದು ಮತ್ತು ಪ್ರಕೃತಿರೂಪವಾದ ದೇಹವು ಕೇವಲ ಕವಚ ಎಂಬ ಅರಿವಾಗುವುದು. ಜನ್ಮ, ಮೃತ್ಯು, ಜರಾ, ವ್ಯಾಧಿಗಳು ದೇಹಕ್ಕಲ್ಲದೇ ಆತ್ಮನಿಗಲ್ಲವೆಂಬ ಜ್ಞಾನವಾಗುವುದು. ಇಂತಹ ಜ್ಞಾನವು ಅನುಭವಕ್ಕೆ ಬಂದೊಡನೆಯೇ ಹುಟ್ಟು-ಸಾವು-ಮುಪ್ಪು-ದುಃಖ ಇವುಗಳಿಂದ ಮುಕ್ತಿಹೊಂದಿದಂತೆಯೇ ಸರಿ. ದೇಹವು ನಾನು; ಅದು ನನ್ನದು–ಎಂಬ ಅಜ್ಞಾನದ ಅನುಭವವಿರುವವರೆಗೆ ಅದರಲ್ಲಾಗುವ ಬದಲಾವಣೆ, ಅದಕ್ಕೆ ತಗಲುವ ವ್ಯಾಧಿಗಳು ಎಲ್ಲವೂ 'ನನ್ನದು' ಎಂದೇ ಭಾಸವಾಗುವುದು. ಆತ್ಮಾನಾತ್ಮವಿವೇಕವುಂಟಾಗಿ ಆತ್ಮಾನುಭವವಾದೊಡನೆಯೇ ದೇಹವು ಕೇವಲ ಕವಚವಾಗಿದೆ. ಕವಚವು ಹರಿದು ಹೋಗಿದ್ದರೆ ದುಃಖಪಡಲು ಕಾರಣವಿಲ್ಲ–ಎಂಬ ಜ್ಞಾನಾನುಭವವುಂಟಾಗುತ್ತದೆ. ಹೀಗೆಂಬುದೇ ಅವುಗಳಿಂದ ಮುಕ್ತಿಹೊಂದುವಿಕೆ.

ಇವುಗಳಿಂದ ಮುಕ್ತನಾದನಂತರ **ಅಮೃತಮಶ್ನುತೇ**–ಅಮೃತವನ್ನು ಕುಡಿಯುತ್ತಾನೆ ಎಂದರೆ ಅಮೃತನೇ ಆಗುತ್ತಾನೆ. ಹುಟ್ಟು-ಸಾವುಗಳಿಲ್ಲದವನು ಅಮೃತನೇ ಅಲ್ಲವೇ? ಅಮೃತತತ್ತ್ವವನ್ನು ಹೊಂದುತ್ತಾನೆ.)

O O O

ದೇಹಿಯು–ದೇಹೋತ್ಪತ್ತಿಗೆ ಬೀಜವಾಗಿರುವ, ಮಾಯೆಯ ಉಪಾಧಿಯಾಗಿರುವ ಮೇಲ್ಕಂಡ ತ್ರಿಗುಣಗಳನ್ನು ದಾಟಿ–ಎಂದರೆ ಜೀವಂತನಾಗಿರುವಾಗಲೇ ಹುಟ್ಟು-ಸಾವು-ಮುಪ್ಪು–ಮುಂತಾದ ದುಃಖಗಳಿಂದ ಬಿಡುಗಡೆ ಹೊಂದಿ ಅಮೃತವನ್ನು ಅನುಭವಿಸುತ್ತಾನೆ. ಈ ರೀತಿಯಲ್ಲಿ ನನ್ನ ಭಾವವನ್ನು ಹೊಂದುತ್ತಾನೆ. (ಶಂ. ಭಾ.)

ಕರ್ತೃಗಳಿಗಿಂತಲೂ, ಗುಣಗಳಿಗಿಂತಲೂ ಬೇರೆಯಾಗಿರುವ ಆತ್ಮನನ್ನು

ಕಂಡವನು ಭಗವದ್ಭಾವವನ್ನು ಹೊಂದುತ್ತಾನೆ–ಎಂದು ಹಿಂದೆ ಹೇಳಿದೆ. ಆ ಭಗವದ್ಭಾವವು ಯಾವುದು?–ಎಂಬುದನ್ನು ಇಲ್ಲಿ ಭಗವಂತನು ಹೇಳುತ್ತಾನೆ.

ದೇಹಿಯು ದೇಹಸಮುದ್ಭವಗಳಾದ ಎಂದರೆ ದೇಹದ ಆಕಾರದಲ್ಲಿ ಪರಿಣಾಮಗೊಂಡಿರುವ ಪ್ರಕೃತಿಯಿಂದ ಉಂಟಾಗಿರುವ ಸತ್ತ್ವವೇ ಮುಂತಾದ ತ್ರಿಗುಣಗಳನ್ನು ದಾಟಿ ಅವುಗಳಿಂದ ಬೇರೆಯಾಗಿ ಕೇವಲ ಜ್ಞಾನಾಕಾರನಾಗಿರುವ ಆತ್ಮನನ್ನು (ನನ್ನನ್ನು) ನೋಡುತ್ತಾ ಹುಟ್ಟು-ಸಾವು-ಮುಪ್ಪುಗಳಿಂದಲೂ ಮತ್ತು ಅವುಗಳಿಂದ ಉಂಟಾಗುವ ದುಃಖದಿಂದಲೂ ಬಿಡುಗಡೆಹೊಂದಿ ಅಮೃತನಾದ ಆತ್ಮನನ್ನು ಅನುಭವಿಸುತ್ತಾನೆ. ಇದೇ ನನ್ನ ಭಾವ.

(ರಾ. ಭಾ.)

**ಅರ್ಜುನ ಉವಾಚ :**

**ಓಂ ಕೈರ್ಲಿಙ್ಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥೨೧॥**

ಅರ್ಜುನನು ಪ್ರಶ್ನಿಸುತ್ತಾನೆ :

ಪ್ರಭುವೇ! ಈ ಮೂರು ಗುಣಗಳನ್ನೂ ದಾಟಿದವನು ಯಾವ ಗುರುತುಗಳಿಂದ ಕೂಡಿರುವನು? ಅವನು ಯಾವ ಆಚಾರದವನು? ಮತ್ತು ಈ ಮೂರು ಗುಣಗಳನ್ನೂ ಹೇಗೆ ಮೀರುವನು?

* * *

(ಇಲ್ಲಿ ಅರ್ಜುನನು ಮೂರು ಪ್ರಶ್ನೆಗಳನ್ನು ಕೇಳುತ್ತಾನೆ :

1) ಈ ಮೂರು ಗುಣಗಳನ್ನೂ ದಾಟಿರುವವನು ಯಾವ ಯಾವ ಗುರುತುಗಳಿಂದ ಅರ್ಥಾತ್ ಲಕ್ಷಣಗಳಿಂದ ಕೂಡಿರುತ್ತಾನೆ?

2) ಅವನು ಯಾವ ಯಾವ ವಿಧವಾದ ಆಚಾರವನ್ನು ಇಟ್ಟುಕೊಂಡಿರುತ್ತಾನೆ? ಅವನ ನಡೆ ಹೇಗಿರುತ್ತದೆ?

3) ಅವನು ಯಾವ ರೀತಿಯಲ್ಲಿ ಈ ಮೂರು ಗುಣಗಳನ್ನೂ ಅತಿಕ್ರಮಿಸುತ್ತಾನೆ?

ಪರ್ಯಾಯಾಂತರವಾಗಿ ಈ ಪ್ರಶ್ನೆಗಳನ್ನು ಹೀಗೆ ವಿವರಿಸಬಹುದಾಗಿದೆ : ತ್ರಿಗುಣಾತೀತನು ಎಂದರೆ ಜ್ಞಾನೀ. ಇವನ ಲಕ್ಷಣಗಳೇನು? ಇವನ

ಆಚಾರ-ವ್ಯವಹಾರಗಳೇನು? ಮೂರನೆಯದಾಗಿ ಇವನು ಮೂರು ಗುಣಗಳನ್ನೂ ಹೇಗೆ ದಾಟುತ್ತಾನೆ? ಎಂದರೆ ಜ್ಞಾನಿಯು ಹೇಗೆ ಆಗುತ್ತಾನೆ? )

o o o

**ಕಥಂ ತ್ರೀನ್ ಗುಣಾನ್ ಅತಿವರ್ತತೇ**=ಯಾವ ಪ್ರಕಾರದಿಂದ ಯಾವ ಉಪಾಯದಿಂದ ಮನುಷ್ಯನು ಈ ತ್ರಿಗುಣಗಳನ್ನು ಮೀರಿದವನಾಗುತ್ತಾನೆ? (ಶಂ.ಭಾ.)

ಸತ್ತ್ವವೇ ಮುಂತಾದ ಈ ಮೂರು ಗುಣಗಳನ್ನೂ ದಾಟಿದವನು ಯಾವ ಲಕ್ಷಣಗಳಿಂದ ಉಪಲಕ್ಷಿತನಾಗುತ್ತಾನೆ? ಇವನು ಯಾವ ಆಚಾರದಿಂದ ಕೂಡಿರುತ್ತಾನೆ? ಇವನ ಸ್ವರೂಪವನ್ನು ತಿಳಿಯುವುದಕ್ಕೆ ಸೂಚಕವಾದ ಆಚಾರವು ಯಾವ ರೀತಿಯದು ಮತ್ತು ಯಾವ ಉಪಾಯದಿಂದ ಇವನು ತ್ರಿಗುಣಗಳನ್ನು ದಾಟುತ್ತಾನೆ? (ರಾ. ಭಾ.)

**ಶ್ರೀಭಗವಾನುವಾಚ :**

**ಓಂ ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಣ್ಡವ ।**
**ನ ದ್ವೇಷ್ಟಿ ಸಮ್ಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥೨೨॥**

**ಶ್ರೀಭಗವಂತನು ಹೇಳುತ್ತಾನೆ :**

ಪಾಂಡವ! (ಗುಣಾತೀತನು) ಪ್ರಕಾಶವೂ, ಪ್ರವೃತ್ತಿಯೂ ಮತ್ತು ಮೋಹವೂ ಬಂದೊದಗಿದಾಗ ದ್ವೇಷಿಸುವುದಿಲ್ಲ. ಅವು ಹೊರಟು ಹೋದಾಗ ಅವುಗಳನ್ನು ಬಯಸುವುದಿಲ್ಲ.

* * *

(ಶ್ರೀಕೃಷ್ಣನು ಗುಣಾತೀತನ ಲಕ್ಷಣಗಳನ್ನು ಹೇಳುತ್ತಿದ್ದಾನೆ, ಎಂದರೆ ಆತ್ಮಜ್ಞಾನಿಯ ಲಕ್ಷಣಗಳನ್ನು ಹೇಳತೊಡಗುತ್ತಾನೆ. ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡವನು-ಗುಣಗಳಿಗೂ ತನಗೂ ಯಾವ ಸಂಬಂಧವೂ ಇಲ್ಲ. **ಗುಣಾ ಗುಣೇಷು ವರ್ತನ್ತೇ**–ಗುಣಗಳು ಇಂದ್ರಿಯಗಳಲ್ಲಿ ತಮ್ಮ ಕಾರ್ಯಗಳನ್ನು ಮಾಡುತ್ತವೆ–ಎಂದು ನಿಶ್ಚಯಿಸಿರುತ್ತಾನೆ. ಈ ವಿಧವಾದ ನಿಶ್ಚಯ ಬುದ್ಧಿಯಿರುವುದರಿಂದಲೇ ಇವನು **ಪ್ರಕಾಶಂ** ಎಂದರೆ ಸತ್ತ್ವಗುಣಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಇವನ ಇಂದ್ರಿಯಗಳು ಮಾಡಬೇಕಾಗಿಬಂದಾಗ,

**ಪ್ರವೃತ್ತಿಂ** ಎಂದರೆ ರಾಜಸಗುಣಕ್ಕೆ ಸಂಬಂಧಿಸಿದ ಕರ್ಮಗಳನ್ನು ಇವನ ಇಂದ್ರಿಯ ಗಳು ಮಾಡುತ್ತಿರುವಾಗ, **ಮೋಹಂ** ಎಂದರೆ ತಮೋಗುಣಕ್ಕೆ ಸಂಬಂಧಿಸಿದ ಕರ್ಮಗಳನ್ನು ಇವನ ಇಂದ್ರಿಯಗಳು ಮಾಡುವಾಗ–ಆ ಕರ್ಮಗಳ ಬಗೆಗೆ ದ್ವೇಷಮಾಡುವುದಿಲ್ಲ. ಆ ಕರ್ಮಗಳಿಗೂ, ಆ ಕರ್ಮಗಳಿಂದ ಲಭ್ಯವಾಗುವ ಶುಭಾಶುಭಫಲಗಳಿಗೂ ಮತ್ತು ತನಗೂ ಯಾವ ಸಂಬಂಧವೂ ಇಲ್ಲ– ಎಂದು ಇವನು ಅನುಭವದ ಮೂಲಕವಾಗಿ ತಿಳಿದುಕೊಂಡಿರುತ್ತಾನೆ. ಒಂದು ವೇಳೆ ಇವನ ಇಂದ್ರಿಯಗಳ ಮೂಲಕ ಸತ್ತ್ವ-ರಜಸ್ತಮೋಗುಣಗಳಿಗೆ ಸಂಬಂಧಿಸಿದ ಕರ್ಮಗಳು ನಡೆಯದೇ ಹೋದಾಗಲೂ ಸಹ ಇವನು ಆ ಕರ್ಮಗಳನ್ನು ಮಾಡಬೇಕೆಂದು ಬಯಸುವುದಿಲ್ಲ. ತಾನು ಯಾವ ಕರ್ಮ ಗಳನ್ನೂ ಮಾಡುತ್ತಿಲ್ಲ. ಕೇವಲ ಗುಣಗಳೇ ಕರ್ಮಗಳನ್ನು ಮಾಡಿಸುತ್ತವೆ ಎಂದ ಮೇಲೆ ಕರ್ಮಗಳು ನಡೆಯದೇ ಇರುವುದಕ್ಕೆ ಇವನೇಕೆ ದುಃಖಪಟ್ಟಾನು ? ತನಗೆ ಸಂಬಂಧಿಸದೇ ಇರುವ ಆ ಕರ್ಮಗಳ ವಿಷಯದಲ್ಲಿ ತ್ರಿಗುಣಾತೀತನಿಗೆ ದ್ವೇಷವೂ ಇಲ್ಲ ; ಪ್ರೀತಿಯೂ ಇಲ್ಲ. ಕರ್ಮಗಳು ನಡೆದರೆ ನಡೆಯಬಹುದು, ನಡೆಯದಿದ್ದರೆ ಬಿಡಬಹುದು.

ಆತ್ಮನ ತ್ರಿಗುಣಾತೀತತ್ವವನ್ನು ಹೀಗೆ ವಿವರಿಸಬಹುದಾಗಿದೆ : **ಸೂರ್ಯ ಆತ್ಮಾ ಜಗತಃ**–ಜಗತ್ತಿಗೆ ಸೂರ್ಯನೇ ಆತ್ಮನು. ಅವನ ಮೇಲೆ ಸತ್ತ್ವಗುಣ ರೂಪದ ಬಿಳಿಯ ಮೋಡಗಳು ಮುಸುಕಿರುತ್ತವೆ. ಆ ಸಮಯದಲ್ಲಿ ಸೂರ್ಯನು ಅಷ್ಟೋ-ಇಷ್ಟೋ ಕಾಣಿಸುತ್ತಾನೆ. ಮತ್ತೊಮ್ಮೆ ರಜೋಗುಣ ಸದೃಶವಾಗಿರುವ ಕೆಂಪುಮೋಡದಿಂದ ಆವೃತನಾಗಿರುತ್ತಾನೆ. ಆ ಸಮಯದಲ್ಲಿ ಸೂರ್ಯನ ಪ್ರಕಾಶವು ಭೂಮಿಯ ಮೇಲೆ ಬಹಳ ಕಡಿಮೆ ಬೀಳುತ್ತದೆ. ಮತ್ತೊಮ್ಮೆ ಅದೇ ಸೂರ್ಯನು ಕಪ್ಪಾದ ಕಾರ್ಮುಗಿಲಿನಿಂದ ಆವೃತ ವಾಗಿರುತ್ತಾನೆ. ಆ ಸಮಯದಲ್ಲಿ ಪ್ರಪಂಚವೆಲ್ಲಾ ಗಾಢಾಂಧಕಾರದಿಂದ ಆವೃತ ವಾಗುತ್ತದೆ. ಈ ಮೂರು ವಿಧವಾದ ಮೋಡಗಳೂ ಪ್ರಪಂಚದ ಮೇಲೆ ಮತ್ತು ಪ್ರಪಂಚದ ಜನರ ಮೇಲೆ ಯಥೋಕ್ತಪರಿಣಾಮವನ್ನುಂಟುಮಾಡು ತ್ತವೆ. ಆದರೆ ಈ ಮೋಡಗಳ ಹಿಂಬದಿಯಲ್ಲಿರುವ ಸೂರ್ಯನು ತನ್ನ ಸ್ವರೂಪದಿಂದ ಯಾವ ವಿಧವಾದ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಈ ಮೋಡಗಳು ಬಂದುಹೋಗಿದ್ದರಿಂದ ಅವನಿಗೆ ಯಾವ ಕೊರತೆಯಾಗಲೀ,

ಸಂತೋಷವಾಗಲೀ ಇರುವುದಿಲ್ಲ. ಮೋಡಗಳು ತನ್ನನ್ನು ಆವರಿಸಬೇಕೆಂದು ಬಯಸುವುದಿಲ್ಲ. ಆವರಿಸಿದ ಮೋಡಗಳು ಹೊರಟುಹೋಗಬೇಕೆಂದೂ ಬಯಸುವುದಿಲ್ಲ. ಆ ಮೂರು ವಿಧವಾದ ಮೋಡಗಳ ಪರಿಣಾಮವು ಯಾವ ವಿಧವಾಗಿಯೂ ಸೂರ್ಯನ ಮೇಲೆ ಉಂಟಾಗುವುದಿಲ್ಲ. ಆತ್ಮಜ್ಞಾನಿಯಾದವನೂ ಸಹ ಸೂರ್ಯನಂತೆಯೇ ಈ ಮೂರು ಗುಣಗಳಿಂದ ಯಾವ ರೀತಿಯಲ್ಲಿಯೂ ಬಾಧಿತನಾಗುವುದಿಲ್ಲ.)

O O O

ಗುಣಾತೀತನು ವಿಷಯಭಾವದಿಂದ ಚೆನ್ನಾಗಿ ಉದ್ಭವಿಸಿದ ಸತ್ತ್ವಕಾರ್ಯವಾದ ಪ್ರಕಾಶವನ್ನಾಗಲೀ, ರಜಸ್ಸಿನ ಕಾರ್ಯವಾದ ಪ್ರವೃತ್ತಿಯನ್ನಾಗಲೀ, ತಮಸ್ಸಿನ ಕಾರ್ಯವಾದ ಮೋಹವನ್ನಾಗಲೀ ದ್ವೇಷಿಸುವುದಿಲ್ಲ. ಸಾಮಾನ್ಯಮನುಷ್ಯನಿಗೆ ಯಥಾರ್ಥಜ್ಞಾನವಿಲ್ಲವಾದುದರಿಂದ ಅವನು 'ನನ್ನಲ್ಲಿ ತಾಮಸಭಾವವುಂಟಾಗಿದೆ. ಆದುದರಿಂದ ಮೋಹಿತನಾಗಿದ್ದೇನೆ. ದುಃಖರೂಪವಾದ ರಾಜಸೀಪ್ರವೃತ್ತಿಯು ನನ್ನಲ್ಲಿ ಉಂಟಾಗಿದೆ. ಆ ರಾಜಸಭಾವವು ನನ್ನನ್ನು ಕಾರ್ಯದಲ್ಲಿ ತೊಡಗಿಸಿದೆ. ನನ್ನ ಸ್ವರೂಪದಿಂದ ಕದಲಿಸಿಬಿಟ್ಟಿದೆ. ಹೀಗೆ ಸ್ವರೂಪದಿಂದ ಕದಲಿರುವುದು ಮಹಾದುಃಖಕ್ಕೆ ಕಾರಣ ಮತ್ತು ಪ್ರಕಾಶಮಯವಾದ ಸಾತ್ತ್ವಿಕಗುಣವು ವಿವೇಕವನ್ನು ಕೊಟ್ಟು ಸುಖದಲ್ಲಿ ತೊಡಗಿಸಿ ಬಂಧಿಸುತ್ತದೆ'–ಎಂದು ಮೊದಲಾದ ಭಾವನೆಯಿಂದ ಆ ಗುಣಗಳನ್ನು ದ್ವೇಷಿಸುತ್ತಾನೆ. ಆದರೆ ಗುಣಾತೀತನಿಗೆ ಅವುಗಳಲ್ಲಿ ಹಾಗೆ ದ್ವೇಷವಿಲ್ಲ.

ಹಾಗೆಯೇ ಸಾತ್ತ್ವಿಕ-ರಾಜಸ-ತಾಮಸಪುರುಷರು ಸಾತ್ತ್ವಿಕಾದಿಭಾವಗಳು ತಮ್ಮ ಸ್ವರೂಪವನ್ನು ತೋರಿಸಿ ಹೊರಟುಹೋದನಂತರ ಮತ್ತೆ ಅವುಗಳನ್ನು ಬೇಕೆಂದು ಬಯಸುತ್ತಾರೆ. ಆದರೆ ತ್ರಿಗುಣಾತೀತನು ಹಾಗೆ ಹೊರಟುಹೋದ ಗುಣಗಳ ಕಾರ್ಯವನ್ನು ಚಿಂತಿಸುವುದೂ ಇಲ್ಲ. (ಶಂ. ಭಾ.)

ಆತ್ಮವ್ಯತಿರಿಕ್ತವಾದ ವಸ್ತುಗಳು ಇಷ್ಟ ಮತ್ತು ಅನಿಷ್ಟ ಎಂದು ಎರಡು ಬಗೆ. ಇವುಗಳಲ್ಲಿ ಅನಿಷ್ಟವಾದ ವಸ್ತುಗಳು, ಅವುಗಳ ಸಾಧನಗಳು ಬಂದೊದಗಿದಾಗ ಲೋಕದಲ್ಲಿ ಪ್ರಾಕೃತರಿಗೆ ದ್ವೇಷವುಂಟಾಗುತ್ತದೆ. ಹಾಗೆಯೇ ಇಷ್ಟ

ವಸ್ತುಗಳು, ಅವುಗಳ ಸಾಧನಗಳು ಹೊರಟುಹೋದಾಗ ಅವುಗಳು ಬೇಕು ಎಂಬ ಆಸೆಯುಂಟಾಗುತ್ತದೆ. ಆದರೆ ಗುಣಾತೀತನು ಆ ಅನಿಷ್ಟವಸ್ತುಗಳಿಗೆ ಸಾಧನಗಳಾಗಿ ಗುಣಕಾರ್ಯಗಳು ಬಂದಾಗ ಅವುಗಳನ್ನು ದ್ವೇಷಿಸುವುದೂ ಇಲ್ಲ ; ಗುಣಕಾರ್ಯಗಳು ಇಷ್ಟವಸ್ತುಗಳಿಗೆ ಸಾಧನಗಳಾಗಿದ್ದು ಹೊರಟು ಹೋದಾಗ ಅವುಗಳು ಮತ್ತೆ ಬೇಕು ಎಂದು ಬಯಸುವುದೂ ಇಲ್ಲ.

ಪ್ರಕಾಶ, ಪ್ರವೃತ್ತಿ, ಮೋಹ–ಇವು ಮೂರೂ ಇಷ್ಟಸಾಧನ, ಅನಿಷ್ಟ ಸಾಧನ ಎರಡೂ ಆಗಬಹುದು. ಭಯ ಮುಂತಾದುವುಗಳಿಗೆ ಯಾವುದು ಕಾರಣವಾಗಿದೆಯೋ ಅದರ ಬಗೆಗೆ ಪ್ರಕಾಶವುಂಟಾದರೆ ಆ ಪ್ರಕಾಶವು ಅನಿಷ್ಟ ಸಾಧನವಾಗುತ್ತದೆ. ಅದೇ ಪ್ರಕಾಶವು (ತಿಳಿವಳಿಕೆಯು) ಅನುಕೂಲವಾದ ವಿಷಯಗಳಲ್ಲಿ ಉಂಟಾದರೆ ಅದು ಇಷ್ಟಸಾಧನವಾಗುತ್ತದೆ. ಹಾಗೆಯೇ ಪ್ರವೃತ್ತಿಯು ಅಪಥ್ಯವಿಷಯದಲ್ಲಿ ಉಂಟಾದರೆ ಅದು ಅನಿಷ್ಟಸಾಧನ. ಔಷಧಸೇವನೆ ಮುಂತಾದ ವಿಷಯದಲ್ಲಾದರೆ ಅದು ಇಷ್ಟಸಾಧನ.

ಮೋಹದಿಂದ, ಅನುಕೂಲವಾದ ವಿಷಯಗಳಲ್ಲಿ ಅವು ಪ್ರತಿಕೂಲ ಎಂಬ ಬುದ್ಧಿಯುಂಟಾಗಿ ಅನಿಷ್ಟವಾಗಿ ಕಾಣುತ್ತದೆ. ಹಾಗೆಯೇ ಪ್ರತಿಕೂಲ ವಾದ ವಸ್ತುಗಳಲ್ಲಿ ಅವು ಅನುಕೂಲ ಎಂಬ ಬುದ್ಧಿಯುಂಟಾಗಿ ಅದು ಇಷ್ಟ ವಾಗಿ ಕಾಣುತ್ತದೆ.

ತ್ರಿಗುಣಾತೀತನಾದವನಿಗೆ ಪ್ರಕಾಶ, ಪ್ರವೃತ್ತಿ ಮತ್ತು ಮೋಹಗಳ ಪ್ರವೃತ್ತಿ-ನಿವೃತ್ತಿಗಳ ಬಗೆಗೆ ದ್ವೇಷವಾಗಲೀ, ಬೇಕೆಂಬ ಬಯಕೆಯಾಗಲೀ ಯಾವುದೂ ಉಂಟಾಗುವುದಿಲ್ಲ. ಏಕೆಂದರೆ ಅವನು ಆತ್ಮಾರಾಮನು. ಉಳಿದ ವಸ್ತುಗಳೆಲ್ಲವೂ ಆತ್ಮವ್ಯತಿರಿಕ್ತವಾದುವು ಎಂದವನು ತಿಳಿದಿರುತ್ತಾನೆ.

(ರಾ. ಭಾ.)

**ನ ದ್ವೇಷ್ಟಿ ನ ಕಾಂಕ್ಷತಿ** ಎಂದರೆ ಸಾಮಾನ್ಯವಾಗಿ ದ್ವೇಷಿಸುವುದಿಲ್ಲ. ಬಯಸುವುದಿಲ್ಲ ಎಂದು ಅರ್ಥಮಾಡಬೇಕು. ಏಕೆಂದರೆ ದೈವವಶದಿಂದ ಕೆಲವೊಮ್ಮೆ ಜ್ಞಾನಿಯು, ಸೂಕ್ಷ್ಮತಮವಾದ ತಮಸ್ಸು ಅವನನ್ನು ಪ್ರವೇಶಿಸಿ ದರೆ, ಅದನ್ನು ದ್ವೇಷಿಸುತ್ತಾನೆ ; ತ್ಯಜಿಸಿಬಿಡುತ್ತಾನೆ. ಹಾಗೆಯೇ ಅವನಲ್ಲಿ ಸೂಕ್ಷ್ಮವಾದ ಸತ್ತ್ವಗುಣವಿರಬಹುದು. ಆಗ ಅವನಿಗೆ ಅದರ ಫಲದಲ್ಲಿ

ಆಕಾಂಕ್ಷೆಯು ಇರುತ್ತದೆ. ಸತ್ತ್ವಾದಿಗುಣದಲ್ಲಿ ಎರಡು ಬಗೆ. ಸ್ಥೂಲ ಮತ್ತು ಸೂಕ್ಷ್ಮ ಎಂದು. ಅವುಗಳಲ್ಲಿ ಸ್ಥೂಲವಾಗಿರುವ ಗುಣಗಳಿಂದ ಲೌಕಿಕವಾದ ಪ್ರಕಾಶ, ಪ್ರವೃತ್ತಿ ಮತ್ತು ಮೋಹಗಳು ಉಂಟಾಗುತ್ತವೆ. ಸೂಕ್ಷ್ಮವಾದುವುಗಳಿಂದ ಪರಮೇಶ್ವರ ಮುಂತಾದುವುಗಳ ವಿಷಯದಲ್ಲಿ ಅವುಗಳು ಉಂಟಾಗುತ್ತವೆ. ಅವುಗಳಲ್ಲಿ ಮೊದಲನೆಯ ವರ್ಗದ ಗುಣಗಳ ಬಗೆಗೆ ಗುಣಾತೀತನಿಗೆ ಸಾಮಾನ್ಯವಾಗಿ ದ್ವೇಷ ಮತ್ತು ಆಕಾಂಕ್ಷೆಗಳು ಇರುವುದಿಲ್ಲ. ಸರ್ವಥಾ ಇರುವುದೇ ಇಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಪ್ರಾರಬ್ಧವಶದಿಂದ ಕೆಲವೊಮ್ಮೆ ಅವುಗಳು ಅವನಿಗೆ ತಲೆದೋರಬಹುದು. ಎರಡನೆಯ ವರ್ಗದ ವಿಷಯಗಳಲ್ಲಿ ಅವನಿಗೆ ಆಕಾಂಕ್ಷೆ ಮುಂತಾದುವು ಇದ್ದೇ ಇರುತ್ತವೆ.

**ರಜಸ್ತಮಃ ಸತ್ತ್ವಗುಣಾನ್ಪ್ರವೃತ್ತಾ-**
**ನ್ಪ್ರಾಯೋ ನ ಚ ದ್ವೇಷ್ಟಿ ನ ಚಾಪಿ ಕಾಂಕ್ಷತಿ ।**
**ತಥಾಪಿ ಸೂಕ್ಷ್ಮಂ ಸತ್ತ್ವಗುಣಂ ಚ ಕಾಂಕ್ಷೇತ**
**ಯದಿ ಪ್ರವಿಷ್ಟಂ ಸುತಮಶ್ಚ ಜಹ್ಯಾತ್ ॥**

ಸಾಮವೇದ-ಭಲ್ಲವೇಯಶಾಖಾ.

ಸಾತ್ತ್ವಿಕನು ರಜಸ್ಸು, ತಮಸ್ಸು ಮತ್ತು ಸತ್ತ್ವಗುಣಗಳು ಪ್ರವೃತ್ತವಾದಾಗ ಸಾಮಾನ್ಯವಾಗಿ ಅವುಗಳನ್ನು ದ್ವೇಷಿಸುವುದಿಲ್ಲ. ಬಯಸುವುದೂ ಇಲ್ಲ. ಆದರೂ ಸೂಕ್ಷ್ಮವಾದ ಸತ್ತ್ವಗುಣವಾಗಲೀ ರಜಸ್ಸಾಗಲೀ ಅವನಲ್ಲಿ ಸೇರಿಕೊಂಡಿದ್ದರೆ ಅವನು ಮೊದಲನೆಯದನ್ನು ಬಯಸುತ್ತಾನೆ ; ಎರಡನೆಯದನ್ನು ದ್ವೇಷಿಸುತ್ತಾನೆ.

**ನ ಹಿ ದೇವಾಃ ಋಷಯಶ್ಚ ಸತ್ತ್ವಸ್ಥಾ ನೃಪಸತ್ತಮ ।**
**ಹೀನಾಃ ಸತ್ತ್ವೇನ ಸೂಕ್ಷ್ಮೇಣ ತತೋ ವೈಕಾರಿಕಾ ಮತಾಃ ।**
**ಕಥಂ ವೈಕಾರಿಕೋ ಗಚ್ಛೇತ್ ಪುರುಷಃ ಪುರುಷೋತ್ತಮಮ್ ॥**

ಎಂದು ಮೋಕ್ಷಧರ್ಮವು ಹೇಳುತ್ತದೆ. ದೇವತೆಗಳಲ್ಲೂ ಮತ್ತು ಋಷಿಗಳಲ್ಲೂ ಸೂಕ್ಷ್ಮವಾದ ಸತ್ತ್ವವೂ ಇಲ್ಲದಿದ್ದ ಪಕ್ಷದಲ್ಲಿ ಆಗ ಅವರು ಸತ್ತ್ವಸ್ಥರು ಎಂದು ಕರೆಯಲ್ಪಡುತ್ತಲೇ ಇರಲಿಲ್ಲ. ಅವರು ವೈಕಾರಿಕರಾಗಿ ಬಿಡುತ್ತಿದ್ದರು. ವೈಕಾರಿಕನು ಪುರುಷೋತ್ತಮನನ್ನು ಹೇಗೆ ಹೊಂದು

ತ್ತಾನೆ? ಆಗ ಸತ್ತ್ವಸ್ಥರಿಗೆ ಮೋಕ್ಷವೇ ದೊರಕುತ್ತಿರಲಿಲ್ಲ. ಆದರೆ ಅವರಿಗೆ ಮೋಕ್ಷವುಂಟು. ಆದುದರಿಂದ ಅವರಲ್ಲಿ ಸೂಕ್ಷ್ಮಸತ್ತ್ವವು ಇದ್ದೇ ಇದೆ. ಸಾತ್ತ್ವಿಕ ಎಂದರೆ ಸೂಕ್ಷ್ಮಸತ್ತ್ವವುಳ್ಳವನು. ಏಕೆಂದರೆ :

**ಸುಸೂಕ್ಷ್ಮಸತ್ತ್ವಸಂಯುಕ್ತಃ ಸಂಯುಕ್ತಸ್ತ್ರಿಭಿರಕ್ಷರೈಃ ।**
**ಪುರುಷಃ ಪುರುಷಂ ಗಚ್ಛೇತ್ ನಿಷ್ಕ್ರಿಯಃ ಪಞ್ಚವಿಂಶಕಃ ॥**

ಎಂದು ಸೂಕ್ಷ್ಮಸತ್ತ್ವಪ್ರಕರಣದಲ್ಲಿ ಈ ಶ್ಲೋಕವು ಬಂದಿದೆ.

ಭವೇನ್ಮೋಕ್ಷಾರ್ಥನಿಶ್ಚಿತಃ – ಸಾತ್ತ್ವಿಕನು ಮೋಕ್ಷವೆಂಬ ಪುರುಷಾರ್ಥ ದಲ್ಲಿ ನಿಶ್ಚಯವುಳ್ಳವನು ಎಂದು ಶಾಸ್ತ್ರವು ಹೇಳುತ್ತದೆ.

(ಮ. ಭಾ.)

**ಓಂ ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತನ್ತ ಇತ್ಯೇವ ಯೋಽವತಿಷ್ಠತಿ ನೇಙ್ಗತೇ ॥೨೩॥**

ಉದಾಸೀನನಂತೆ ಕುಳಿತಿರುವವನಾಗಿ ಯಾವನು ಗುಣಗಳಿಂದ ಚಲಿತ ನಾಗದೇ ಇರುವನೋ, ಗುಣಗಳು ವರ್ತಿಸುತ್ತವೆ ಎಂಬ ಸ್ಥಿರವಾದ ನಿಲು ವನ್ನು ತಾಳಿರುತ್ತಾನೆಯೋ–ಅವನು ಚಲಿಸದಿರುತ್ತಾನೆ.

* * *

(ಲೋಕದಲ್ಲಿ ಉದಾಸೀನ ಎಂದರೆ ಶತ್ರುಪಕ್ಷವನ್ನಾಗಲೀ ಮಿತ್ರಪಕ್ಷ ವನ್ನಾಗಲೀ ಸೇರದೇ ತಟಸ್ಥನಾಗಿರುವವನು. ಶತ್ರುಪಕ್ಷವನ್ನು ಸೇರುವುದೂ ಬೇಡ. ಮಿತ್ರಪಕ್ಷವನ್ನು ಸೇರುವುದೂ ಬೇಡ–ಎಂದು ನಿರ್ಧರಿಸುವವನು ಉದಾಸೀನ. ಇಲ್ಲಿಯೂ ಇದು ಚೆನ್ನಾಗಿ ಹೊಂದಿಕೊಳ್ಳುತ್ತದೆ. ಶತ್ರುಗುಣ ಗಳೆನಿಸಿದ ರಾಜಸ-ತಾಮಸಗಳ ಹತ್ತಿರ ಇವನು ಹೋಗುವಂತೆಯೂ ಇಲ್ಲ. ಮಿತ್ರಗುಣವೆನಿಸಿದ ಸತ್ತ್ವದ ಸಹವಾಸವೂ ಬೇಡವೆಂದು ನಿರ್ಧರಿಸಿರತಕ್ಕವನು. ಆದರೆ ಇದನ್ನು ಕಾರ್ಯತಃ ಮಾಡಲು ಯಾವನಿಗೂ ಸಾಧ್ಯವಾಗುವುದಿಲ್ಲ. ಸಾತ್ತ್ವಿಕಕರ್ಮಗಳನ್ನು ಮಾಡಬೇಕಾಗಿ ಬಂದಾಗಲೂ ಆ ಕಾರ್ಯಗಳನ್ನು ತಾನು ಮಾಡುತ್ತಿದ್ದೇನೆಂಬ ಭಾವನೆಯಿಂದ ಅವನು ಮಾಡುವುದಿಲ್ಲ. ಗುಣ ಗಳಿಂದ ಆಯಾ ಗುಣಗಳಿಗೆ ಸಂಬಂಧಿಸಿದ ಕರ್ಮಗಳಿಂದ ಇವನ ಮನಸ್ಸು ವಿಕಾರಗೊಳ್ಳುವುದಿಲ್ಲ. ಒಬ್ಬನಿಗೆ ದಾನಕೊಡಬೇಕು, 'ಕೊಡುತ್ತಾನೆ'

ತಾನು ಕೊಟ್ಟೆನು, ತನಗಿದರಿಂದ ಪುಣ್ಯವೋ-ಕೀರ್ತಿಯೋ ಬರುತ್ತದೆ– ಎಂದು ಅವನು ಭಾವಿಸುವುದಿಲ್ಲ. ಅವುಗಳ ವಿಷಯದಲ್ಲಿ ಉದಾಸೀನನಂತೆ ಇರುತ್ತಾನೆ. ವಿಕಾರಗೊಳ್ಳುವುದಿಲ್ಲ.

**ಗುಣಾಃ ವರ್ತನ್ತೇ**–ಪ್ರಕೃತಿಜನ್ಯವಾದ ಗುಣಗಳು ಈ ಕಾರ್ಯಗಳನ್ನು ಮಾಡುತ್ತಿವೆ–ಎಂದು ಭಾವಿಸುತ್ತಾನೆ. ಕಾರ್ಯ-ಕಾರಣ ಎರಡೂ ಅವುಗಳಿಗೇ ಸೇರಿದ್ದು. ನಾನು ಕಾರ್ಯವೂ ಅಲ್ಲ, ಕಾರಣನೂ ಅಲ್ಲ, ಸಾಕ್ಷಿ ಮಾತ್ರನು–ಎಂಬುದಾಗಿ ಭಾವಿಸಿ ಅವನು ತನ್ನ ಸಾಧನಾಮಾರ್ಗದಲ್ಲಿ ಸುಸ್ಥಿರನಾಗಿರುತ್ತಾನೆ. ಅಲ್ಲಾಡುವುದಿಲ್ಲ. ಯಾವ ಕಾರಣದಿಂದಲೂ ಇವನು ವಿಚಲಿತನಾಗುವುದಿಲ್ಲ.)

o o o

**ಉದಾಸೀನವತ್....ವಿಚಾಲ್ಯತೇ** = ಉದಾಸೀನನು ಹೇಗೆ ಯಾವ ಪಕ್ಷಕ್ಕೂ ಸೇರುವುದಿಲ್ಲವೋ, ಹಾಗೆಯೇ ಗುಣಾತೀತನಾಗಲು ಉಪಾಯವಾದ ಮಾರ್ಗದಲ್ಲಿರುವ ಆತ್ಮಜ್ಞಾನಿಯಾದ ಸಂನ್ಯಾಸಿಯು, ಗುಣಗಳ ಮೂಲಕ ವಿವೇಕದರ್ಶನದ ಸ್ಥಿತಿಯಿಂದ ವಿಚಲಿತನಾಗದೇ ಇರುತ್ತಾನೆ. ಅವನನ್ನು ವಿಚಲಿತಗೊಳಿಸಲು ಸಾಧ್ಯವಿಲ್ಲ.

**ಗುಣಾಃ...ನೇಙ್ಗತೇ**= ಕಾರ್ಯ, ಕರಣ ಮತ್ತು ವಿಷಯಗಳ ಆಕಾರ ದಲ್ಲಿ ಪರಿಣಾಮಗೊಂಡಿರುವ ಗುಣಗಳೇ ಒಂದರಲ್ಲಿ ಮತ್ತೊಂದರಂತೆ ಕೆಲಸಮಾಡುತ್ತಿವೆ–ಎಂದು ತಿಳಿದು ಸ್ವರೂಪಾವಸ್ಥೆಯಿಂದ ಚಲಿಸುವುದಿಲ್ಲ.

(ಶಂ. ಭಾ.)

ಗುಣಗಳಿಂದ ವ್ಯತಿರಿಕ್ತನಾದ ಆತ್ಮನನ್ನು ನೋಡುತ್ತಾ ಸಂತೃಪ್ತನಾಗಿರುವುದರಿಂದ ಇವನು ಉಳಿದ ವಿಷಯಗಳಲ್ಲಿ ಉದಾಸೀನನಂತೆ ಇರುತ್ತಾನೆ ಎಂದರೆ ಆ ಗುಣಗಳ ಕಾರ್ಯಗಳ ಬಗೆಗೆ ದ್ವೇಷವನ್ನಾಗಲೀ, ಆಕಾಂಕ್ಷೆಯನ್ನಾಗಲೀ ಹೊಂದುವುದಿಲ್ಲ. ದ್ವೇಷ ಮತ್ತು ಆಕಾಂಕ್ಷೆಗಳ ಮೂಲಕ ಗುಣಗಳಿಂದ ಅವನು ಚಲಿಸುವುದಿಲ್ಲ. ಗುಣಗಳು ಪ್ರಕಾಶವೇ ಮುಂತಾದ ತಮ್ಮ-ತಮ್ಮ ಕೆಲಸಗಳಲ್ಲಿ ವರ್ತಿಸುತ್ತಿವೆ–ಎಂದು ಅನುಸಂಧಾನಮಾಡಿ ಸುಮ್ಮನೆ ಇರು

ತ್ತಾನೆ. ಗುಣಗಳ ಕಾರ್ಯಗಳಿಗೆ ಅನುಗುಣವಾಗಿ ತಾನು ಕೆಲಸಮಾಡುವು ದಿಲ್ಲ. (ರಾ. ಭಾ.)

ಗುಣಾತೀತನ ಆಚಾರವು ಹೇಗೆ?–ಎಂಬ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು ಉತ್ತರಿಸುತ್ತಾನೆ.

**ಓಂ ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥೨೪॥**

ದುಃಖವೂ-ಸುಖವೂ ಯಾವನಿಗೆ ಒಂದೇ ಆಗಿರುವುದೋ, ಯಾವನು ಸ್ವಸ್ಥನಾಗಿರುವನೋ, ಯಾವನಿಗೆ ಮಣ್ಣುಹೆಂಟೆ, ಕಲ್ಲು ಮತ್ತು ಚಿನ್ನ ಇವುಗಳು ಒಂದೇ ಆಗಿರುವುವೋ, ಯಾವನು ಪ್ರಿಯ ಮತ್ತು ಅಪ್ರಿಯಗಳನ್ನು ಒಂದೇ ಆಗಿ ಕಾಣುವನೋ ಮತ್ತು ನಿಂದೆ-ಸ್ತುತಿಗಳನ್ನು ಒಂದೇ ಆಗಿ ಕಾಣುವನೋ–ಅಂತಹ ಧೀರನೇ ಗುಣಾತೀತನು.

* * *

(ಸ್ಥಿತಪ್ರಜ್ಞನ ಮತ್ತು ಭಕ್ತೋತ್ತಮನ ಲಕ್ಷಣಗಳನ್ನೇ ಶ್ರೀಕೃಷ್ಣನು ಇಲ್ಲಿಯೂ ಶಬ್ದಾಂತರಗಳಿಂದ ಹೇಳಿದ್ದಾನೆ.

**ಸಮದುಃಖಸುಖಃ** = ತ್ರಿಗುಣಾತೀತನು ಯಾವಾಗ **'ಗುಣಾ ವರ್ತನ್ತೇ**–ಗುಣಗಳು ಕಾರ್ಯಗಳಲ್ಲಿ ವರ್ತಿಸುತ್ತವೆ'–ಎಂದು ತಿಳಿಯುತ್ತಾ ನೆಯೋ ಆಗ ತನ್ನ ಶರೀರಕ್ಕೆ ಒದಗುವ ಸುಖ ಮತ್ತು ದುಃಖ ಎರಡೂ ಒಂದೇ ಆಗಿ ಅವನಿಗೆ ಕಾಣುತ್ತವೆ. ದುಃಖವೊದಗಿದಾಗ ಗುಣಾತೀತನಿಗೆ ಕಾಯಕ್ಲೇಶವಾಗುವುದಿಲ್ಲ ಎಂಬ ಅರ್ಥವಲ್ಲ. ಕಾಯಕ್ಲೇಶವಾಗಬಹುದು. ಆದರೆ ಆ ದುಃಖದ ಪರಿಣಾಮವು ಅವನ ಮನಸ್ಸಿನ ಮೇಲೆ ಆಗುವುದಿಲ್ಲ. ಶರೀರಕ್ಕೆ ಉಂಟಾದ ಸುಖವೂ ಮನಸ್ಸಿನ ಮೇಲೆ ಪರಿಣಾಮ (ಮಿತಿಮೀರಿದ ಹಿಗ್ಗುವಿಕೆ) ವನ್ನುಂಟುಮಾಡುವುದಿಲ್ಲ. ಅವನಿಗೆ ಸುಖ-ದುಃಖಗಳು ಒದಗು ವುದಿಲ್ಲ ಎಂಬ ಅರ್ಥವಲ್ಲ. ಸಾಮಾನ್ಯನಿಗೆ ಸುಖ-ದುಃಖಗಳು ಮನಸ್ಸಿನಲ್ಲಿ ಏರು-ಪೇರುಗಳನ್ನುಂಟುಮಾಡುತ್ತವೆ. ತ್ರಿಗುಣಾತೀತನಿಗೆ ಮನಸ್ಸಿನಲ್ಲಿ ಏರು-ಪೇರುಗಳು ಉಂಟಾಗುವುದಿಲ್ಲ. ಅವನು ಎರಡನ್ನೂ ಸಮವಾಗಿ ಕಾಣುತ್ತಾನೆ. ಸ್ವಸ್ಥನಾಗಿದ್ದುಬಿಡುತ್ತಾನೆ. ದುಃಖವನ್ನಾಗಲೀ–ಸುಖವನ್ನಾಗಲೀ

ಮನಸ್ಸಿಗೆ ಹಚ್ಚಿಕೊಳ್ಳದೇ ಯಾವಾಗಲೂ ಪ್ರಸನ್ನತೆಯಿಂದಲೇ ಇದ್ದುಬಿಡುತ್ತಾನೆ.

**ಸಮಲೋಷ್ಟಾಶ್ಮಕಾಞ್ಚನಃ** = ಒಂದು ಪದಾರ್ಥಕ್ಕೆ ಬೆಲೆಯು ಯಾವಾಗ ಇರುವುದೆಂದರೆ ಅದನ್ನು ಉಪಯೋಗಕ್ಕೆ ತೆಗೆದುಕೊಂಡಾಗ. ಅದನ್ನು ಉಪಯೋಗಕ್ಕೆ ತೆಗೆದುಕೊಳ್ಳದಿರುವಾಗ ಅದಕ್ಕೆ ಯಾವ ಬೆಲೆಯೂ ಇಲ್ಲ. ಚಿನ್ನಕ್ಕೇನೋ ಬೆಲೆಯಿದೆ. ಅದನ್ನು ಉಪಯೋಗಿಸುವವರ ದೃಷ್ಟಿ ಯಿಂದ ಅದಕ್ಕೆ ಬೆಲೆಯಿದೆ. ಅದನ್ನು ಉಪಯೋಗಿಸದವರ ದೃಷ್ಟಿಯಿಂದ ಅದಕ್ಕೆ ಬೆಲೆಯಿಲ್ಲ. ಆತ್ಮಸುಖದಲ್ಲಿ ತೃಪ್ತನಾದ ತ್ರಿಗುಣಾತೀತನಿಗೆ ಚಿನ್ನದಿಂದ ಆಗಬೇಕಾದುದು ಏನೂ ಇಲ್ಲ. ಚಿನ್ನ, ಮಣ್ಣಿನ ಹೆಂಟೆ, ಕಲ್ಲು– ಇವುಗಳೆಲ್ಲವೂ ಭೌತಿಕದ್ರವ್ಯಗಳು. ಭೌತಿಕವಾದ ಸುಖವನ್ನು ಧ್ಯೇಯವನ್ನಾಗಿ ಹೊಂದಿರುವವನಿಗೆ ಅವುಗಳ ಉಪಯೋಗ, ಪರಸ್ಪರ ಮೌಲ್ಯಮಾಪನ ಇವುಗಳು ಇರುತ್ತವೆ. ಆದರೆ ಆತ್ಮಸುಖಕ್ಕೆ ಇವು ಯಾವುವೂ ಸಾಧನಗಳಲ್ಲ ಎಂಬ ದೃಷ್ಟಿಯಿಂದ ಜ್ಞಾನಿಯು ಅವುಗಳನ್ನು ಒಂದೇ ಸಮನಾಗಿ ಕಾಣುತ್ತಾನೆ.

**ತುಲ್ಯಪ್ರಿಯಾಪ್ರಿಯಃ** = ಇವನಿಗೆ ಪ್ರಪಂಚದಲ್ಲಿ ಬೇಕಾದ ವಸ್ತು, ಬೇಡವಾದ ವಸ್ತು ಎಂಬುದೇ ಇಲ್ಲ. ಯಾವ ವಸ್ತುವನ್ನೂ ಇವನು ಪ್ರಿಯವೆಂದಾಗಲೀ, ಅಪ್ರಿಯವೆಂದಾಗಲೀ ಭಾವಿಸುವುದಿಲ್ಲ. ಮನಸ್ಸಿನಲ್ಲಿ ರಾಗ-ದ್ವೇಷಗಳಿದ್ದರೆ ಪ್ರಿಯರಾದವರು, ಅಪ್ರಿಯರಾದವರು, ಪ್ರಿಯವಾದ ವಸ್ತು, ಅಪ್ರಿಯವಾದ ವಸ್ತು–ಎಂಬುದು ಹುಟ್ಟಿಕೊಳ್ಳುತ್ತದೆ. ರಾಗ-ದ್ವೇಷಗಳನ್ನೇ ತೊಡೆದುಹಾಕಿದನಂತರ ಪ್ರಿಯಾಪ್ರಿಯಗಳ ವಿಷಯವೇ ಮನಸ್ಸಿನಲ್ಲಿ ಉದ್ಭವಿಸುವುದಿಲ್ಲ.

**ತುಲ್ಯನಿನ್ದಾತ್ಮಸ್ತುತಿಃ** = ನಿಂದೆ ಮತ್ತು ಸ್ತುತಿ ಎರಡನ್ನೂ ಸಹ ಇವನು ಒಂದೇ ಸಮನಾಗಿ ಕಾಣುತ್ತಾನೆ. ನಿಂದಾ-ಸ್ತುತಿಗಳು ಗುಣಗಳಿಗೆ ಮತ್ತು ದೇಹಕ್ಕೆ ಸಂಬಂಧಿಸಿದುವುಗಳು. ಸತ್ತ್ವ-ರಜಸ್ತಮೋಗುಣಗಳ ಪ್ರಚೋದನೆಯಿಂದ ಆ ಗುಣಗಳ ಕಾರ್ಯಗಳನ್ನು ಇತರರಲ್ಲಿ ಕಂಡ ಜನರು ಕೆಲವರನ್ನು ಸ್ತುತಿಸುತ್ತಾರೆ ಅಥವಾ ನಿಂದಿಸುತ್ತಾರೆ. ಆತ್ಮನನ್ನು ಯಾರೂ

ನಿಂದಿಸುವುದೂ ಇಲ್ಲ ; ಸ್ತುತಿಸುವುದೂ ಇಲ್ಲ. ಆದುದರಿಂದಲೇ ನಿಂದಾ-ಸ್ತುತಿಗಳೆಲ್ಲವೂ ಗುಣಗಳಿಗೆ ಸಂಬಂಧಿಸಿವೆ. ಆತ್ಮಾನುಸಂಧಾನದಲ್ಲಿರುವ ತ್ರಿಗುಣಾತೀತನು ತನಗೆ ನಿಂದೆಯಾಗಲೀ–ಸ್ತುತಿಯಾಗಲೀ ಸಂಬಂಧಿಸಿದ್ದಲ್ಲವೆಂದು ಅವುಗಳ ಬಗೆಗೆ ಯಾವ ವಿಕಾರವನ್ನೂ ಹೊಂದುವುದಿಲ್ಲ.

ಧೀರಃ = ಇವನೇ ಧೀರ ಎಂದು ಭಗವಂತನು ಹೇಳುತ್ತಾನೆ. ಹೇಡಿಗಳಾದವರಿಗೆ ಹೀಗಿರಲು ಸಾಧ್ಯವಾಗುವುದಿಲ್ಲ. ಆತ್ಮಜ್ಞಾನವು ಧೀರರಾದವರಿಗೆ ಮಾತ್ರವೇ ಮೀಸಲಾದುದು.

ಧೀರನೆಂದರೆ ವಿಕಾರಕ್ಕೆ ಕಾರಣವಾದ ವಸ್ತುಗಳು ಇದ್ದಾಗಲೂ ಯಾವನ ಮನಸ್ಸು ಕದಲುವುದಿಲ್ಲವೋ–ಅವನು.

**ವಿಕಾರಹೇತೌ ಸತಿ ವಿಕ್ರಿಯನ್ತೇ ಯೇಷಾಂ ನ ಚೇತಾಂಸಿ**
**ತ ಏವ ಧೀರಾಃ ।** (ಕುಮಾರಸಂಭವ)

o o o

**ಸ್ವಸ್ಥಃ** = ತನ್ನ ಆತ್ಮಸ್ವರೂಪದಲ್ಲಿ ನೆಲೆಗೊಂಡವನು, ಪ್ರಸನ್ನನಾದವನು.
**ಸ್ವೇ ಆತ್ಮನಿ ಸ್ಥಿತಃ = ಪ್ರಸನ್ನಃ** (ಶಂ. ಭಾ.)

**ಸಮದುಃಖಸುಖಃ** = ಸುಖ-ದುಃಖಗಳೆರಡರಲ್ಲಿಯೂ ಸಮವಾದ ಚಿತ್ತವುಳ್ಳವನು. ಸ್ವಸ್ಥಃ = ಸ್ವಸ್ಮಿನ್ ಸ್ಥಿತಃ –ತನ್ನಲ್ಲಿಯೇ ನೆಲೆಗೊಂಡಿರುವವನು. ಆತ್ಮವೊಂದನ್ನೇ ಪ್ರಿಯವನ್ನಾಗಿ ತಿಳಿದು ಅದರಿಂದ ಭಿನ್ನವಾದ ಪುತ್ರ ಮುಂತಾದವರ ಹುಟ್ಟು-ಸಾವು ಮುಂತಾದ ಸುಖ-ದುಃಖಗಳಲ್ಲಿ ಸಮವಾದ ಚಿತ್ತವುಳ್ಳವನು. ಆದುದರಿಂದಲೇ (ಸ್ವಸ್ಥನಾಗಿರುವುದರಿಂದಲೇ) ಮಣ್ಣುಹೆಂಟೆ-ಕಲ್ಲು-ಚಿನ್ನಗಳನ್ನು ಸಮವಾಗಿ ಕಾಣುತ್ತಾನೆ. ಅದೇ ಕಾರಣದಿಂದಲೇ (ಸ್ವಸ್ಥನಾಗಿರುವುದರಿಂದಲೇ) ಪ್ರಿಯ ಮತ್ತು ಅಪ್ರಿಯವಿಷಯ ಗಳನ್ನು ಸಮವಾಗಿ ಎಣಿಸುತ್ತಾನೆ. ಧೀರಃ = ಧೀರನಾಗಿರುತ್ತಾನೆ. ಪ್ರಕೃತಿ- ಆತ್ಮಗಳ ವಿವೇಕದಲ್ಲಿ ಕುಶಲನಾಗಿದ್ದಾನೆ. ಧೀ ವಿಶೇಷಣವನ್ನು ಹೊಂದಿರುವವನು ಧೀರ. ಧೀರಪ್ರಕೃತಿ, ಆತ್ಮವಿವೇಕಕುಶಲನಾಗಿರುವುದರಿಂದ ಅವನು ನಿಂದಾ-ಸ್ತುತಿಗಳನ್ನು ಸಮವಾಗಿ ಎಣಿಸುತ್ತಾನೆ. ಆತ್ಮನಲ್ಲಿ ಮನುಷ್ಯ

ಮುಂತಾದ ಅಭಿಮಾನವನ್ನಿಟ್ಟುಕೊಂಡು ಅದರಿಂದುಂಟಾದ (ಗುಣಾಗುಣಗಳ ಕಾರಣದಿಂದ ಉಂಟಾದ) ಸ್ತುತಿ, ನಿಂದೆ ಎರಡೂ ಕೂಡ ತನಗೆ ಸಂಬಂಧಪಟ್ಟುವುಗಳಲ್ಲ–ಎಂದು ಅನುಸಂಧಾನಮಾಡಿ ಅವುಗಳ ಬಗೆಗೆ ಸಮವಾದ ಚಿತ್ತವನ್ನು ಹೊಂದಿರುತ್ತಾನೆ. (ರಾ. ಭಾ.)

**ತುಲ್ಯ** ಎಂಬ ಪದಕ್ಕೂ **ಸಮದುಃಖಸುಖಃ** ಮುಂತಾದ ಕಡೆಗಳಲ್ಲಿ ಸಮ ಎನ್ನುವುದಕ್ಕೆ ಹೇಳಿರುವ ಅರ್ಥವನ್ನೇ ತಿಳಿಯಬೇಕು. **ಪ್ರಜಹಾತಿ ಯದಾ ಕಾಮಾನ್** ಎಂಬಲ್ಲಿ ಎಲ್ಲ ಕಾಮಗಳನ್ನೂ ಬಿಟ್ಟುಬಿಡುತ್ತಾನೆ ಎಂದರೆ ಪ್ರಾಯಃ ಎಲ್ಲ ಕಾಮಗಳನ್ನೂ ಬಿಟ್ಟುಬಿಡುತ್ತಾನೆ ಎಂದು ಎರಡನೆಯ ಅಧ್ಯಾಯದಲ್ಲಿ ಅರ್ಥ ಹೇಳಿದೆವು. ಅದೇ ರೀತಿಯ ಅರ್ಥವನ್ನೇ ಇಲ್ಲಿಯೂ ತೆಗೆದುಕೊಳ್ಳಬೇಕು. (ಮ. ಭಾ.)

**ಓಂ ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಮ್ಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥೨೫॥**

ಮಾನಾಪಮಾನಗಳಲ್ಲಿ ಸಮನಾಗಿರುವವನು, ಮಿತ್ರ-ಶತ್ರುಗಳಲ್ಲಿ ಸಮನಾಗಿರುವವನು, ಎಲ್ಲ ಆರಂಭವನ್ನೂ ಪರಿತ್ಯಾಗಮಾಡಿರುವವನು– ಗುಣಾತೀತನೆಂದು ಹೇಳಲ್ಪಡುತ್ತಾನೆ.

* * *

(**ಮಾನಾಪಮಾನಯೋಸ್ತುಲ್ಯಃ** = ಇವನಲ್ಲಿ ಅಡಕವಾಗಿರುವ ಗುಣಗಳ ವರ್ತನೆಯಿಂದ ಅಥವಾ ಎದುರಾಳಿಗಳಲ್ಲಿ ಅಡಕವಾಗಿರುವ ಗುಣಗಳ ವರ್ತನೆಯಿಂದ ಬಹುಮಾನಿಸುವುದು, ಅವಮಾನಿಸುವುದು ಇತ್ಯಾದಿ ಕ್ರಿಯೆಗಳು ನಡೆಯುತ್ತವೆ. ಗುಣಾತೀತನಿಗೆ ಅಥವಾ **ಗುಣಾ ಗುಣೇಷು ವರ್ತನ್ತೇ** ಎಂದು ಭಾವಿಸಿರುವವನಿಗೆ ಮಾನಾಪಮಾನಗಳ ಅರಿವೇ ಆಗುವುದಿಲ್ಲ. ಶರೀರವನ್ನೇ ನಾನು ಎಂದು ಭಾವಿಸಿದಾಗ ಮಾನಾಪಮಾನಗಳು ಪರಿಣಾಮವನ್ನುಂಟುಮಾಡುತ್ತವೆ. ಶರೀರವನ್ನು ಒಂದು ಕವಚ ಎಂದು ಭಾವಿಸಿದಾಗ ಮಾನಾಪಮಾನಗಳು ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ.

**ತುಲ್ಯೋ ಮಿತ್ರಾರಿಪಕ್ಷಯೋಃ** = ಸತ್ವಾದಿಗುಣಗಳಿಗೆ ಅಧೀನನಾಗಿದ್ದರೆ ಅಥವಾ ಗುಣಗಳಲ್ಲಿ ಅಭಿನ್ನತೆಯನ್ನು ಹೊಂದಿದ್ದರೆ ಅಂತಹವನಿಗೆ

ಶತ್ರುಪಕ್ಷ, ಮಿತ್ರಪಕ್ಷ–ಎಂಬ ಭೇದವಿರಲು ಸಾಧ್ಯವಾಗುತ್ತದೆ. ಮೂಲದಲ್ಲಿಯೇ ಬದಲಾವಣೆಯಾಗಿರುವಾಗ, ರಾಗ-ದ್ವೇಷಗಳನ್ನುಂಟುಮಾಡುವ ಗುಣತ್ರಯಗಳನ್ನೇ ವಿಸರ್ಜಿಸಿರುವಾಗ ಮಿತ್ರನೂ ಇಲ್ಲ, ಶತ್ರುವೂ ಇಲ್ಲ– ಎಂಬ ಸಮಭಾವನೆಯು ತಾನಾಗಿಯೇ ಉಂಟಾಗುತ್ತದೆ.

**ಸರ್ವಾರಮ್ಭಪರಿತ್ಯಾಗೀ** = ಇವನು ಯಾವ ಕಾರ್ಯವನ್ನೂ ಆರಂಭಿಸಲು ಹೋಗುವುದಿಲ್ಲ. ಕಾರ್ಯಗಳ ಆರಂಭಗಳೆಲ್ಲವೂ ಗುಣಗಳ ಪ್ರಚೋದನೆಯಿಂದ ಆಗತಕ್ಕುವುಗಳು. ಆ ಮೂರು ಗುಣಗಳನ್ನೂ ವಿವೇಕವೆಂಬ ಬಾಣಲೆಯಲ್ಲಿ ಹುರಿದುಹಾಕಿಬಿಟ್ಟಿರುವುದರಿಂದ ಅವು ಯಾವ ವಿಧವಾದ ಪ್ರಚೋದನೆಯನ್ನೂ ಮಾಡಲು ಅಸಮರ್ಥವಾಗುತ್ತವೆ. ಯೋಗಾನುಗುಣವಾದ ಶರೀರಸ್ಥಿತಿಗೋಸ್ಕರ ಅನಿವಾರ್ಯವಾಗಿ ಅಥವಾ ಆತ್ಮಪ್ರೇರಣೆಯಿಂದ ಇವನು ಕೆಲವು ಕರ್ಮಗಳನ್ನು ಮಾಡಬಹುದು. ಆದರೆ ಆ ಕರ್ಮಗಳು ಇವನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಆದುದರಿಂದ ಇವನು ಕರ್ಮಗಳನ್ನು ಆರಂಭಿಸಿದರೂ ಆರಂಭಿಸಿಲ್ಲವೆಂದೇ ಹೇಳಬೇಕು. ಇಂತಹವನನ್ನು ಗುಣಾತೀತನೆಂದು ಕರೆಯುತ್ತಾರೆ.)

o o o

ಇವನು ಮಾನಾಪಮಾನಗಳಲ್ಲಿ ಸಮ ಎಂದರೆ ನಿರ್ವಿಕಾರನಾಗಿರುತ್ತಾನೆ. ಶತ್ರು ಮತ್ತು ಮಿತ್ರಪಕ್ಷಗಳಿಗೆ ಇವನು ಸಮವಾಗಿರುತ್ತಾನೆ. ಕೆಲವರು ತಮ್ಮ ಅಭಿಪ್ರಾಯದಲ್ಲಿ ಇತರರ ಬಗೆಗೆ ಉದಾಸೀನರಾಗಿರುತ್ತಾರೆ. ಆದರೆ ಇತರರ ದೃಷ್ಟಿಯಲ್ಲಿ ಅವರು ಮಿತ್ರಪಕ್ಷ ಅಥವಾ ಶತ್ರುಪಕ್ಷದವರು ಆಗಿರಬಹುದು. ಆದುದರಿಂದ ಗುಣಾತೀತನ ಬಗೆಗೆ ಅವನು ಮಿತ್ರ ಮತ್ತು ಶತ್ರುಪಕ್ಷಗಳಿಗೂ ಸಮನಾದವನು ಎಂದು ಹೇಳಿದೆ.

ಅವನು ಎಲ್ಲ ಆರಂಭಗಳನ್ನೂ ತ್ಯಾಗಮಾಡಿಬಿಟ್ಟಿರುತ್ತಾನೆ. ಆರಂಭ ಎಂದರೆ ದೃಷ್ಟವಾದ ಮತ್ತು ಅದೃಷ್ಟವಾದ ಫಲಕ್ಕೋಸ್ಕರ ಮಾಡಲ್ಪಡುವ ಕರ್ಮಗಳು. ಇಂತಹ ಎಲ್ಲ ಕರ್ಮಗಳನ್ನೂ ತ್ಯಾಗಮಾಡುವುದು ಅವನ ಸ್ವಭಾವವಾಗಿರುವುದರಿಂದ ಅವನು ಸರ್ವಾರಂಭಪರಿತ್ಯಾಗೀ ಎಂದರೆ ಕೇವಲ ಶರೀರಧಾರಣೆಗೋಸ್ಕರ ಆವಶ್ಯಕವಾದ ಕರ್ಮಗಳನ್ನು ಬಿಟ್ಟು ಉಳಿದ ಎಲ್ಲ ಕರ್ಮಗಳನ್ನೂ ತ್ಯಾಗಮಾಡಿಬಿಟ್ಟಿರುತ್ತಾನೆ. ಇಂತಹವನು ಗುಣಾತೀತ.

**ಉದಾಸೀನವತ್**–ಎಂಬಲ್ಲಿಂದ ಆರಂಭಿಸಿ **ಗುಣಾತೀತಃ ಉಚ್ಯತೇ** ಎನ್ನುವವರೆಗೆ ಹೇಳಿರುವುದೆಲ್ಲವೂ ಸಾಧನವೂ ಆಗುತ್ತದೆ, ಸಹಜಲಕ್ಷಣವೂ ಆಗುತ್ತದೆ. ಮೋಕ್ಷವನ್ನು ಬಯಸುವ ಸಂನ್ಯಾಸಿಯು ಅವುಗಳನ್ನು ಪ್ರಯತ್ನಪೂರ್ವಕವಾಗಿ ಅನುಷ್ಠಾನಮಾಡಿ ಗುಣಾತೀತತ್ವಸ್ಥಿತಿಯನ್ನು ಹೊಂದುವುದರಿಂದ ಅವನಿಗೆ ಅವು ಮೊದಲು ಸಾಧನಗಳಾಗುತ್ತವೆ. ಆದರೆ ಅವುಗಳು ಅವನಲ್ಲಿ ಸ್ಥಿರವಾಗಿ ಉಳಿದ ಬಳಿಕ ಅವು ಗುಣಾತೀತನಾದ ಯತಿಗೆ ಲಕ್ಷಣಗಳೇ ಆಗಿಬಿಡುತ್ತವೆ. **ಸಂನ್ಯಾಸಿನಃ ಅನುಷ್ಠೇಯಂ ಗುಣಾತೀತತ್ವ ಸಾಧನಂ ಮುಮುಕ್ಷೋಃ ಸ್ಥಿರೀಭೂತಂ ತು ಸ್ವಸಂವೇದ್ಯಂ ಸತ್ ಗುಣಾತೀತಸ್ಯ ಯತೇಃ ಲಕ್ಷಣಂ ಭವತಿ.** (ಶಂ. ಭಾ.)

ಇವನು ಸ್ವಸ್ಥನಾಗಿರುವುದರಿಂದ ಎಂದರೆ ತನ್ನಲ್ಲಿ ತಾನು ನೆಲೆಗೊಂಡು ಆತ್ಮವೊಂದನ್ನೇ ಪ್ರಿಯವಾಗಿ ತಿಳಿಯುವುದರಿಂದ ಜನರು ಪ್ರಕೃತಿಸಂಬಂಧ ದಿಂದ ಮಾಡುವ ಮಾನಾಪಮಾನಗಳು, ಅದರಿಂದ ಉಂಟಾಗುವ ಮಿತ್ರ-ಶತ್ರುಪಕ್ಷಗಳು–ಇವುಗಳಿಗೂ, ತನ್ನ ಆತ್ಮಸ್ವರೂಪಕ್ಕೂ ಯಾವ ಸಂಬಂಧವೂ ಇಲ್ಲವಾದುದರಿಂದ ಅವುಗಳ ಬಗೆಗೆ ಅವನು ಸಮಚಿತ್ತನಾಗಿರುತ್ತಾನೆ. ಹಾಗೆಯೇ ಇವನು ಸಂಸಾರಕ್ಕೆ ಸಂಬಂಧಪಟ್ಟ ಎಲ್ಲ ಆರಂಭಗಳನ್ನೂ ತ್ಯಜಿಸಿ ಬಿಡುವ ಸ್ವಭಾವವುಳ್ಳವನು. ಇವನು ಗುಣಾತೀತ.

ಹಿಂದಿನ ಶ್ಲೋಕದಲ್ಲಿರುವ **ಧೀರಃ** ಎಂಬ ಪದದವರೆಗೆ ಇರುವು ದೆಲ್ಲವೂ ಗುಣಾತೀತನ ಒಳಗಿನ ಲಕ್ಷಣಗಳು. ಅಲ್ಲಿಂದ ಮುಂದೆ **ತುಲ್ಯನಿನ್ದಾತ್ಮ ಸಂಸ್ತುತಿಃ** –ಇಲ್ಲಿಂದ **ಸರ್ವಾರಮ್ಭ ಪರಿತ್ಯಾಗೀ**–ಇಲ್ಲಿಯವರೆಗೆ ಇರುವುದೆಲ್ಲವೂ ಬಾಹ್ಯಾಚಾರದ ಲಕ್ಷಣಗಳು. (ರಾ. ಭಾ.)

ಈ ಗುಣಗಳನ್ನು ಹೇಗೆ ದಾಟಬೇಕೆಂಬುದಕ್ಕೆ ಉಪಾಯವನ್ನು ಶ್ರೀಕೃಷ್ಣನು ಹೇಳುತ್ತಾನೆ :

**ಓಂ ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ಬ್ರಹ್ಮಭೂಯಾಯ ಕಲ್ಪತೇ ॥೨೬॥**

ಯಾವನು ನನ್ನನ್ನು ಅವ್ಯಭಿಚರಿತವಾದ ಭಕ್ತಿಯೋಗದಿಂದ ಸೇವಿಸು

ತ್ತಾನೆಯೋ–ಅವನು ಈ ಗುಣಗಳನ್ನು ಸಂಪೂರ್ಣವಾಗಿ ದಾಟಿ ಬ್ರಹ್ಮ ಭಾವವನ್ನು ಹೊಂದುವುದಕ್ಕೆ ಸಮರ್ಥನಾಗುತ್ತಾನೆ.

*　　　*　　　*

(ಕಥಂ ಚೈತಾನ್ ತ್ರೀನ್ಗುಣಾನತಿವರ್ತತೇ?–ಈ ಮೂರು ಗುಣಗಳನ್ನು ಹೇಗೆ ದಾಟುತ್ತಾನೆ?–ಎಂಬ ಅರ್ಜುನನ ಪ್ರಶ್ನೆಗೆ ಭಗವಂತನಿಲ್ಲಿ ಉತ್ತರ ಹೇಳುತ್ತಾನೆ.

ಅವ್ಯಭಿಚಾರ, ಅವ್ಯಭಿಚಾರಿಣೀ ಭಕ್ತಿ–ಎಂಬುದನ್ನು ಶ್ರೀಕೃಷ್ಣನು ಪದೇ-ಪದೇ ಹೇಳುತ್ತಲೇ ಇರುತ್ತಾನೆ.

ವ್ಯಭಿಚಾರ ಎಂದರೆ ಸನ್ಮಾರ್ಗದಿಂದ ಬಿಟ್ಟುಹೋಗುವುದು ; ವಿಚಲಿತ ವಾಗುವುದು ; ಚಂಚಲವಾಗುವುದು. ಹೆಂಗಸಿನ ವಿಷಯದಲ್ಲಿ ಪತಿವ್ರತಾ ಧರ್ಮದಿಂದ ಬಿಟ್ಟುಹೋಗುವುದು. ಗಂಡಸಿನ ವಿಷಯದಲ್ಲಿಯೂ ಸಹ ಪತ್ನಿಗೆ ದ್ರೋಹಮಾಡಿ ಅನ್ಯಸ್ತ್ರೀಯರ ಬಳಿಗೆ ಹೋಗುವುದಕ್ಕೆ ವ್ಯಭಿಚಾರವೆನ್ನುತ್ತಾರೆ ಅಥವಾ ಅಂತಹವನನ್ನು ವ್ಯಭಿಚಾರೀ (ಸಂಸಾರದ ವ್ಯವಹಾರದಲ್ಲಿ) ಎನ್ನುತ್ತಾರೆ. ಇಲ್ಲಿಯೂ ಸಹ ವ್ಯಭಿಚಾರವೆಂದರೆ ನೆಚ್ಚಿದ ಇಷ್ಟದೇವತೆಯನ್ನು ಬಿಟ್ಟು ದೇವತಾಂತರಗಳನ್ನು ಕಾಮ್ಯಫಲಗಳಿಗಾಗಿ ಪೂಜಿಸುವುದು, ಅಥವಾ ಪರಮಾತ್ಮನಲ್ಲಿ ಭಕ್ತಿಯನ್ನು ಒಮ್ಮೆ ಹೊಂದಿರುವುದು. ಒಮ್ಮೆ ಶಿಥಿಲಗೊಳಿಸುವುದು–ಹೀಗೆ ನಿಷ್ಠೆಯಲ್ಲಿ ಚಾಂಚಲ್ಯವನ್ನೂ ಹೊಂದುವುದು ಭಕ್ತಿಯಲ್ಲಿ ವ್ಯಭಿಚಾರ ಎನ್ನಿಸುತ್ತದೆ. ಹಾಗೆ ಮಾಡಕೂಡದೆಂಬುದೇ ಶ್ರೀಕೃಷ್ಣನ ಅಭಿಪ್ರಾಯವಾಗಿದೆ.

ಭಕ್ತಿಯೋಗ ಎಂದರೆ ಭಕ್ತಿ ; ಅವ್ಯಭಿಚಾರಿಯಾದ ಭಕ್ತಿ ; ಅನನ್ಯಭಕ್ತಿ. ನಿಷ್ಠೆಯಲ್ಲಿ ಚಾಂಚಲ್ಯವಿಲ್ಲದೇ ಏಕಾಂತಭಾವದಿಂದ ಪರಮಾತ್ಮನನ್ನು ಸೇವಿಸುವುದು. ಇದರಿಂದ ಯಾವನು ನನ್ನ ಸೇವೆಮಾಡುತ್ತಾನೆಯೋ ಅವನು ಈ ಮೂರು ಸತ್ತ್ವ-ರಜಸ್ತಮೋಗುಣಗಳನ್ನೂ ದಾಟಿ ಬ್ರಹ್ಮಭಾವವನ್ನು ಹೊಂದಲು ಸಮರ್ಥನಾಗುತ್ತಾನೆ.

ಬೆರಕೆಚಿನ್ನವನ್ನು ಪುಟಕ್ಕೆ ಹಾಕಿ ಶುದ್ಧಗೊಳಿಸಿದನಂತರ ಅದು ಸ್ವಚ್ಛ ಸುವರ್ಣದ ಜೊತೆಗೆ ಸುಲಭವಾಗಿಯೇ ಹೊಂದಿಕೊಳ್ಳುತ್ತದೆಯಲ್ಲವೇ? )

o　　　o　　　o

**ಮಾಂ ಸೇವತೇ** =ಯಾವ ಯತಿಯು (ಕರ್ಮಿಯು) ಎಲ್ಲ ಭೂತಗಳ ಹೃದಯಗಳಲ್ಲಿಯೂ ಇರುವ ಪರಮೇಶ್ವರನಾದ ನಾರಾಯಣನಾದ ನನ್ನನ್ನು ಎಂದಿಗೂ ವಿಚಲಿತವಾಗದ ಭಕ್ತಿಯೋಗದ ಮೂಲಕ ಸೇವಿಸುತ್ತಾನೆಯೋ– ಅವನು ಮೇಲೆ ಹೇಳಿದ ತ್ರಿಗುಣಗಳನ್ನು ಬಿಟ್ಟು ಬ್ರಹ್ಮಭಾವವನ್ನು ಎಂದರೆ ಮೋಕ್ಷವನ್ನು ಹೊಂದಲು ಸಮರ್ಥನಾಗುತ್ತಾನೆ. ಭಕ್ತಿ ಎಂದರೆ ಭಜನೆ. ಅದೇ ಯೋಗ-ಭಕ್ತಿಯೋಗ. (ಶಂ. ಭಾ.)

**ನಾನ್ಯಂ ಗುಣೇಭ್ಯಃ ಕರ್ತಾರಂ** (೧೯) ಎಂದು ಮೊದಲಾಗಿ ಹೇಳಲ್ಪಟ್ಟಿರುವ ಪ್ರಕೃತಿ ಮತ್ತು ಆತ್ಮಗಳ ವಿವೇಕಾನುಸಂಧಾನವನ್ನು ಮಾಡುವಷ್ಟರಿಂದಲೇ ಗುಣಾತೀತತ್ವವು ಉಂಟಾಗುವುದಿಲ್ಲ. ಏಕೆಂದರೆ : ಅನಾದಿ ಕಾಲದಿಂದ ಬಂದಿರುವ ವಿಪರೀತವಾಸನೆಯು ಅದನ್ನು ಬಾಧಿಸಬಹುದು. ಆದುದರಿಂದ ಭಗವಂತನನ್ನು ಏಕಾಂತಭಕ್ತಿಯೋಗದಿಂದ ಸೇವಿಸಿದರೆ ಆ ಗುಣಾತೀತತ್ವ ಸ್ಥಿತಿಯನ್ನು ಪಡೆಯಲು ಸಾಧ್ಯ.

ಸತ್ಯಸಂಕಲ್ಪನೂ, ಪರಮಕಾರುಣಿಕನೂ, ಆಶ್ರಿತವಾತ್ಸಲ್ಯಜಲಧಿಯೂ ಆದ ನನ್ನನ್ನು ಅವ್ಯಭಿಚಾರಿಯಾದ ಎಂದರೆ ಏಕಾಂತಭಾವದಿಂದ ಕೂಡಿದ ಭಕ್ತಿಯೋಗದಿಂದ ಯಾವನು ಸೇವೆಮಾಡುತ್ತಾನೆಯೋ, ಅವನು ದಾಟಲು ಕಷ್ಟವಾಗಿರುವ ಸತ್ತ್ವಾದಿ ಗುಣಗಳನ್ನು ದಾಟಿ ಬ್ರಹ್ಮಭಾವವನ್ನು ಹೊಂದಲು ಯೋಗ್ಯನಾಗುತ್ತಾನೆ. ಯಥಾವಸ್ಥಿತನಾಗಿ ಅಮೃತನೂ, ಅವ್ಯಯನೂ ಆಗಿರುವ ಆತ್ಮನನ್ನು ಹೊಂದುತ್ತಾನೆ. (ರಾ. ಭಾ.)

**ಬ್ರಹ್ಮಭೂಯಾಯ ಕಲ್ಪತೇ** = ಬ್ರಹ್ಮಭೂಯ ಎಂದರೆ ಬ್ರಹ್ಮನಂತೆ (ಪ್ರಕೃತಿಯಂತೆ) ಭಗವಂತನಿಗೆ ಪ್ರಿಯವಾಗುವುದು.

**ಬ್ರಹ್ಮವತ್ = ಪ್ರಕೃತಿವತ್ ಭಗವತ್ಪ್ರಿಯತ್ವಂ ಬ್ರಹ್ಮಭೂಯಂ.**

ಪ್ರಕೃತಿಯು (ರಮಾದೇವಿಯು) ಪರಮಾತ್ಮನಿಗೆ ಎಷ್ಟು ಪ್ರಿಯವಾಗಿರುವಳೋ ಅಷ್ಟು ಪ್ರಿಯವಾಗಿರಲು ಸಾಧ್ಯವಿಲ್ಲ. ಆದರೆ ಆಕೆಯು ಪ್ರಿಯಳಾಗಿರುವಂತೆ ಪ್ರಿಯವಾಗುವುದು.

**ಬದ್ಧಾ ವಾ ಸಾ ತು ಮುಕ್ತಾ ವಾ ನ ರಮಾವತ್ ಪ್ರಿಯಾ ಹರೇಃ ।**
**ಭೂಯಾಯ=ಭಾವಾಯ.** (ಮ. ಭಾ.)

ಓಂ ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾನ್ತಿಕಸ್ಯ ಚ ॥೨೭॥

ಅಮೃತವೂ ಅವ್ಯಯವೂ ಆಗಿರುವ ಆ ಬ್ರಹ್ಮಕ್ಕೂ, ಶಾಶ್ವತವಾದ ಧರ್ಮಕ್ಕೂ, ಐಕಾಂತಿಕವಾದ ಸುಖಕ್ಕೂ ನಾನು ನೆಲೆಯಾಗಿರುತ್ತೇನೆ.

* * *

(ಹಿಂದಿನ ಶ್ಲೋಕದಲ್ಲಿ ಜೀವನು **ಬ್ರಹ್ಮಭೂಯಾಯ ಕಲ್ಪತೇ**–ಬ್ರಹ್ಮಭಾವವನ್ನು ಹೊಂದಲು ಸಮರ್ಥನಾಗುತ್ತಾನೆ–ಎಂದು ಶ್ರೀಕೃಷ್ಣನು ಹೇಳಿ, ಬ್ರಹ್ಮಭೂಯನಾದ ಜೀವಾತ್ಮನ ವಿಷಯವಾಗಿಯೇ ಮುಂದುವರಿದು ಈ ಶ್ಲೋಕವನ್ನು ಹೇಳಿದ್ದಾನೆ. ಶ್ರೀಕೃಷ್ಣನು ಹಿಂದೆಯೇ ಅನೇಕಬಾರಿ ಪರಬ್ರಹ್ಮನ ತಾದಾತ್ಮ್ಯಭಾವದಿಂದ ಮಾತನಾಡಿದ್ದಾನೆ. ಈಗಲೂ ಅದೇ ತಾದಾತ್ಮ್ಯಭಾವದಿಂದಲೇ ಹೇಳುತ್ತಾನೆ.

ಬ್ರಹ್ಮಶಬ್ದಕ್ಕೆ ವೇದ, ತಪಸ್ಸು, ಪರಬ್ರಹ್ಮ, ಪ್ರಕೃತಿ, ಶುದ್ಧನಾಗಿರುವ ಜೀವ–ಎಂಬ ಅನೇಕಾರ್ಥಗಳಾಗುತ್ತವೆ. **ಮಮ ಯೋನಿರ್ಮಹದ್ಬ್ರಹ್ಮ** (೩) ಎಂಬಲ್ಲಿ ಬ್ರಹ್ಮಶಬ್ದಕ್ಕೆ ಪ್ರಕೃತಿ ಎಂಬ ಅರ್ಥವು ಗೀತೆಯಲ್ಲಿ ಹೇಳಲ್ಪಟ್ಟಿದೆ. ಆ ಪ್ರಕೃತಿಗೆ ನೆಲೆಯೂ, ಆಧಾರವೂ, ನಿಯಾಮಕನೂ ಆಗಿರುವವನು ಪರಮಾತ್ಮ. ಹಿಂದಿನ ಶ್ಲೋಕದಲ್ಲಿ **ಬ್ರಹ್ಮಭೂಯಾಯ ಕಲ್ಪತೇ**–ಎಂದು ಹೇಳಿರುವಂತೆ ಪರಮಭಾವವನ್ನು ಹೊಂದಿರುವ ಶುದ್ಧನಾದ ಜೀವನೂ ಬ್ರಹ್ಮ ಎನಿಸುತ್ತಾನೆ. ಅಮೃತನೂ, ಅವ್ಯಯನೂ ಆಗಿರುವ ಅಂತಹ ಬ್ರಹ್ಮ ಭಾವಸಂಪನ್ನನಾದ ಜೀವಕ್ಕೂ ಭಗವಂತನೇ ನೆಲೆಯಾಗಿದ್ದಾನೆ. ಅಭ್ಯುದಯ ಮತ್ತು ನಿಃಶ್ರೇಯಸ ಎರಡಕ್ಕೂ ಕಾರಣವಾಗಿ ಎಲ್ಲವನ್ನೂ ಧರಿಸಿರುವ ಯಾವ ಶಾಶ್ವತವಾದ ಧರ್ಮವುಂಟೋ ಅದಕ್ಕೂ ಭಗವಂತನೇ ನೆಲೆಯಾಗಿದ್ದಾನೆ. ಧರ್ಮದ ಫಲವಾಗಿ ಹೊಂದಲ್ಪಡುವ, ಐಕಾಂತಿಕವಾದ, ಅವ್ಯಭಿಚಾರಿಯಾದ, ಸ್ಥಿರವಾದ ಯಾವ ಸುಖವುಂಟೋ ಅದಕ್ಕೂ ಭಗವಂತನೇ ಆಧಾರ–ಎಂಬ ಸತ್ಯವನ್ನು ಭಗವಂತನು ಇಲ್ಲಿ ಉದ್ಘೋಷಿಸಿದ್ದಾನೆ. ಪ್ರಕೃತಿ, ಪುರುಷ, ಧರ್ಮ ಎಲ್ಲಕ್ಕೂ ನಿಯಾಮಕನಾಗಿ ಶಾಶ್ವತವಾದ ಆನಂದವನ್ನು ದಯಪಾಲಿಸುವವನೂ ಆ ಭಗವಂತನೇ.)

O O O

ಬ್ರಹ್ಮಕ್ಕೆ ಎಂದರೆ ಪರಮಾತ್ಮನಿಗೆ ನಾನೇ ಪ್ರತಿಷ್ಠೆಯಾಗಿದ್ದೇನೆ.

(ಅವಿನಾಶಿಯೂ) ಅವ್ಯಯವೂ, (ಅವಿಕಾರಿಯೂ) ಶಾಶ್ವತವೂ, (ನಿತ್ಯವೂ) ಧರ್ಮಸ್ವರೂಪವೂ, (ಜ್ಞಾನಯೋಗರೂಪವಾದ ಧರ್ಮದ ಮೂಲಕ ಹೊಂದಲ್ಪಡುವುದೂ) ಆನಂದರೂಪವೂ, ಐಕಾಂತಿಕವಾದ ಆನಂದ ಮಯವೂ ಆದ ಯಾವ ಪರಬ್ರಹ್ಮವುಂಟೋ ಅದಕ್ಕೆ ನಾನೇ ಪ್ರತಿಷ್ಠೆಯಾಗಿದ್ದೇನೆ. ಪ್ರತಿಷ್ಠೆ ಎಂದರೆ ಯಾವುದರಲ್ಲಿ ಮತ್ತೊಂದು ಪ್ರತಿಷ್ಠಿತವಾಗಿದೆಯೋ ಅದು. ಅಂತರಾತ್ಮನಿಗೆ ಪ್ರತಿಷ್ಠೆಯು ಅಂತರಾತ್ಮವೇ. ಏಕೆಂದರೆ : ಯಥಾರ್ಥ ಜ್ಞಾನದಿಂದ ಪರಮಾತ್ಮನೆಂದು ನಿಶ್ಚಯಿಸಲ್ಪಡುವುದು ಅದೇ. ಹಿಂದಿನ ಶ್ಲೋಕದಲ್ಲಿ ಅದನ್ನೇ ಹೇಳಿದೆ. ಅಂತಹ ಪ್ರತ್ಯಗಾತ್ಮನು ತಾನೇ ಎನ್ನುತ್ತಾನೆ ಶ್ರೀಕೃಷ್ಣ.

ಯಾವ ಈಶ್ವರೀಶಕ್ತಿಯಿಂದ ಭಕ್ತಾನುಗ್ರಹವೇ ಮುಂತಾದ ಪ್ರಯೋಜನಕ್ಕೋಸ್ಕರ ಬ್ರಹ್ಮವು ತೊಡಗುತ್ತದೆಯೋ ಆ ಶಕ್ತಿಯು ಬ್ರಹ್ಮವಾದ ನಾನೇ. ಏಕೆಂದರೆ : ಶಕ್ತಿ ಮತ್ತು ಶಕ್ತಿಮಾನ್ ಇವರಲ್ಲಿ ಭೇದವಿಲ್ಲ. ಅಥವಾ ಬ್ರಹ್ಮ ಎಂದರೆ ಬ್ರಹ್ಮಶಬ್ದವಾಚ್ಯವಾಗಿರುವ ಸವಿಕಲ್ಪಕಬ್ರಹ್ಮ. ಆ ಸವಿಕಲ್ಪಕಬ್ರಹ್ಮಕ್ಕೆ ನಿರ್ವಿಕಲ್ಪಕನಾದ ನಾನೇ ಪ್ರತಿಷ್ಠೆ (ಆಶ್ರಯ) ಯಾಗಿದ್ದೇನೆ. ಅದಕ್ಕೆ ಬೇರೆ ಯಾವ ಆಶ್ರಯವೂ ಇಲ್ಲ. ಮರಣವಿಲ್ಲದವನೂ, ವ್ಯಯ–(ವಿಕಾರ) ರಹಿತನೂ ಆದ ನಿರ್ವಿಕಲ್ಪಕಬ್ರಹ್ಮನಿಗೆ ನಾನೇ ಆಶ್ರಯವು. ನಿತ್ಯವಾದ ಜ್ಞಾನನಿಷ್ಠೆಯೆಂಬ ಯಾವ ಧರ್ಮವುಂಟೋ ಅದಕ್ಕೂ ಮತ್ತು ಅದರಿಂದ ಉಂಟಾಗುವ ನಿಯತವಾದ ಸುಖಕ್ಕೂ (ಆನಂದಕ್ಕೂ) ನಾನೇ ಆಶ್ರಯವಾಗಿದ್ದೇನೆ. (ಶಂ. ಭಾ.)

ಅವ್ಯಭಿಚಾರಿಯಾದ ಭಕ್ತಿಯೋಗದಿಂದ ಸೇವಿತನಾದ ನಾನು ಅಮೃತವೂ ಅವ್ಯಯವೂ ಆದ ಬ್ರಹ್ಮಕ್ಕೆ ಪ್ರತಿಷ್ಠೆ (ಆಶ್ರಯ)ಯಾಗಿದ್ದೇನೆ. ಶಾಶ್ವತವಾದ ಧರ್ಮಕ್ಕೂ, ಅತಿಶಯನಿತ್ಯೈಶ್ವರ್ಯಕ್ಕೂ, ಐಕಾಂತಿಕಸುಖಕ್ಕೂ, **ವಾಸುದೇವಃ ಸರ್ವಂ** (೭-೧೯) ಮುಂತಾದ ಕಡೆಗಳಲ್ಲಿ ನಿರ್ದಿಷ್ಟವಾಗಿರುವ ಜ್ಞಾನಿಯು ಹೊಂದುವ ಸುಖಕ್ಕೂ–ನಾನೇ ಆಶ್ರಯನು.

ಶಾಶ್ವತಧರ್ಮ–ಎಂಬ ಶಬ್ದವು ಸಾಮಾನ್ಯವಾಗಿ ಸುಖಪ್ರಾಪಕವಾದ ಧರ್ಮವನ್ನು ಹೇಳಿದರೂ ಕೂಡ ಅದರ ಹಿಂದು ಮುಂದಿನ ಪದಗಳು ಪ್ರಾಪ್ಯ ರೂಪವನ್ನು ಹೇಳುತ್ತವೆ. ಆದುದರಿಂದ ಅವುಗಳ ಜೊತೆಯಲ್ಲಿ ಬಂದಿರುವ

ಇಲ್ಲಿರುವ ಧರ್ಮಪದಕ್ಕೆ ಪ್ರಾಪ್ಯವಾದ ಧರ್ಮ ಎಂದೇ ಅರ್ಥವನ್ನು ಹೇಳಬೇಕು.

ಒಟ್ಟು ತಾತ್ಪರ್ಯವೇನೆಂದರೆ ; ಹಿಂದೆ **ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ । ಮಾಮೇವ ಯೇ ಪ್ರಪದ್ಯನ್ತೇ** (೭-೧೪) ಎಂದು ಆರಂಭಿಸಿ ಗುಣಾತೀತತ್ವಸ್ಥಿತಿಯನ್ನು ಹೊಂದುವುದಕ್ಕೂ, ತತ್ಪೂರ್ವಕವಾಗಿ ಅಕ್ಷರೈಶ್ವರ್ಯವನ್ನು ಹೊಂದುವುದಕ್ಕೂ ಮತ್ತು ಭಗವತ್ಪ್ರಾಪ್ತಿಗೂ ಭಗವತ್ಪ್ರಪತ್ತಿಯೊಂದೇ ಉಪಾಯವೆಂದು ಹೇಳಲ್ಪಟ್ಟಿದೆ. ಆದುದರಿಂದ ಗುಣಗಳಿಂದ ಅತೀತನಾಗುವುದಕ್ಕೂ ಮತ್ತು ತತ್ಪೂರ್ವಕವಾಗಿ ಬ್ರಹ್ಮಭಾವವನ್ನು ಹೊಂದುವುದಕ್ಕೂ ಏಕಮಾತ್ರವಾದ ಉಪಾಯವೆಂದರೆ ಐಕಾಂತಿಕವಾದ ಭಗವತ್ಪ್ರಪತ್ತಿಯೇ. (ರಾ. ಭಾ.)

ಈ ಶ್ಲೋಕದಲ್ಲಿರುವ ಬ್ರಹ್ಮಶಬ್ದಕ್ಕೆ ಪ್ರಕೃತಿ, ಮಹಾಲಕ್ಷ್ಮೀ ಎಂದು ಅರ್ಥ. **ಬ್ರಹ್ಮಣ ಇತಿ.... ಮಾಯಾ ಪ್ರಾಕೃತಾ ಮಹಾಲಕ್ಷ್ಮೀಃ**

ಅಮೃತಳೂ ಅವ್ಯಯಳೂ ಆದ ಮಹಾಲಕ್ಷ್ಮಿಗೂ, ಶಾಶ್ವತವಾದ ಧರ್ಮಕ್ಕೂ, ಐಕಾಂತಿಕವಾದ ಸುಖಕ್ಕೂ ನಾನೇ ಆಶ್ರಯವು. ಇಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಎಂದು ಅರ್ಥಮಾಡಬಾರದು. ಏಕೆಂದರೆ : ಬ್ರಹ್ಮಕ್ಕೆ ಪ್ರತಿಷ್ಠೆಯು (ಆಶ್ರಯವು) ತಾನು ಎಂದು ಭಗವಂತನು ಹೇಳಿದ್ದಾನೆ. ತನಗೆ ತಾನೇ ಆಶ್ರಯವಾಗುವಂತಿಲ್ಲ. (ಮ. ಭಾ.)

**ಇತಿ ಶ್ರೀ ಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ ಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಗುಣತ್ರಯ ವಿಭಾಗೋ ನಾಮ ಚತುರ್ದಶೋऽಧ್ಯಾಯಃ**

ಭಗವದ್ಗೀತೆಯಲ್ಲಿ ೧೪ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೩೮ನೆಯ ಅಧ್ಯಾಯವು ಮುಗಿಯಿತು.

**ಹದಿಮೂರನೆಯ ಸಂಪುಟವು ಮುಗಿಯಿತು.**

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು ; ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

